

# ಪಂಪ ಭಾರತ ದೀಪಿಕೆ

ಡಾ. ಡಿ. ಎಲ್. ನರಸಿಂಹಾಚಾರ್







ಕನ್ನಡ ಅಧ್ಯಯನ ಸಂಸ್ಥೆ : : ಮೈಸೂರು

ಕನ್ನಡ ಅಧ್ಯಯನ ಸಂಸ್ಥೆ

ಪಠ್ಯಪುಸ್ತಕಮಾಲೆ–೩೩



ಪ್ರಧಾನ ಸಂಪಾದಕ

**ಡಾ. ಹಾ. ಮಾ. ನಾಯಕ**

# ಪಂಪ ಭಾರತ ದೀಪಿಕೆ

ಗು
ಮುಂದಿನ

# ಪಂಪ ಭಾರತ ದೀಪಿಕೆ




ಡಾ. ಡಿ. ಎಲ್. ನರಸಿಂಹಾಚಾರ್, ಎಂ.ಎ., ಡಿ.ಲಿಟ್.



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
1976

Pampa Bhārata Dīpike (Commentary on Pampa Bhārata) by Dr. D. L. Narasimhachar; Published by the Institute of Kannada Studies, Manasa Gangotri, University of Mysore, Mysore-6. First Edition : 1971 ; Second Edition: 1976. Pp. xvi + 615.

Published under the centrally sponsored scheme of production of books and literature in regional languages at the University level of the government of India in the Ministry of Education & Social Welfare (Department of Culture), New Delhi.







ಬೆಲೆ: ರೂ. 20-00

ಾಟಗಾರರು: ಡೈರೆಕ್ಟರ್, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-570 012
ದ್ರಣ : ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು–570 012

# ಅರ್ಪಣೆ

ಪ್ರಿಯ ಸ್ನೇಹಿತ
ಶ್ರೀ ತೀ. ನಂ. ಶ್ರೀಕಂಠಯ್ಯನವರ
ನೆನಪಿಗಾಗಿ



# ವಿಷಯಸೂಚಿ

# ಮುನ್ನುಡಿ

ಕನ್ನಡ ಭಾಷೆ ಸಾಹಿತ್ಯಗಳ ಸರ್ವತೋಮುಖವಾದ ಬೆಳವಣಿಗೆಯನ್ನು ಸಾಧಿಸುವ ದೃಷ್ಟಿಯಿಂದ 1966ರ ಕೊನೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಪ್ರಾರಂಭ ವಾಯಿತು. ಈಗ್ಗೆ ಹತ್ತು ಹನ್ನೆರಡು ವರ್ಷಗಳಿಗೆ ಹಿಂದೆ ರಾಷ್ಟ್ರಕವಿ ಕುವೆಂಪು ಅವರ ಮಾರ್ಗದರ್ಶನದಲ್ಲಿ ರೂಪುಗೊಂಡಿದ್ದ ಯೋಜನೆಗಳೆಲ್ಲ ಡಾ. ಶ್ರೀಮಾಲಿಯವರ ನೇತೃತ್ವದಲ್ಲಿ ಸಾಕಾರಗೊಳ್ಳತೊಡಗಿದುದಕ್ಕೆ ಕನ್ನಡ ಅಧ್ಯಯನ ಸಂಸ್ಥೆ ಸಾಕ್ಷಿಯಾಗಿದೆ. ಈಗ ಪ್ರೊಫೆಸರ್ ಜವರೇಗೌಡರು ನಮ್ಮ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿರು ವುದರಿಂದ ಈ ಸಂಸ್ಥೆಯ ಚಟುವಟಿಕೆಗಳು ತೀವ್ರತರವಾಗಿ ಬೆಳೆಯುವುವೆಂದು ನಿರೀಕ್ಷಿಸಬಹುದಾಗಿದೆ. ಕನ್ನಡ ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನ ವಿಭಾಗ, ಸ್ನಾತಕೋತ್ತರ ಭಾಷಾಂತರ ಡಿಪ್ಲೊಮಾ ಶಿಕ್ಷಣ, ಕನ್ನಡೇತರರಿಗಾಗಿ ಕನ್ನಡ ಸರ್ಟಿಫಿಕೇಟ್ ಮತ್ತು ಡಿಪ್ಲೊಮಾ ಶಿಕ್ಷಣ. ಇವುಗಳ ಜೊತೆಗೆ ಇಂದು ಸಂಸ್ಥೆ ಯಲ್ಲಿ ಐದು ಪ್ರಮುಖ ವಿಭಾಗಗಳಿವೆ: (1) ಸಂಪಾದನ ವಿಭಾಗ, (2) ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, (3) ಜಾನಪದ ವಿಭಾಗ, (4) ಕನ್ನಡ ವಿಶ್ವಕೋಶ ವಿಭಾಗ ಮತ್ತು (5) ಹರಿದಾಸ ಸಾಹಿತ್ಯ ಸಂಪಾದನ ಮತ್ತು ಸಂಶೋಧನ ವಿಭಾಗ. ಸಂಸ್ಥೆಯ ಬಹುಮುಖವಾದ ಚಟುವಟಿಕೆಗಳ ಪ್ರತೀಕವಾಗಿವೆ ಈ ವಿಭಾಗಗಳು.

ವಿಶ್ವವಿದ್ಯಾನಿಲಯದ ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮ ವನ್ನಾಗಿ ಬಳಸಬೇಕೆಂಬ ನೀತಿಗನುಗುಣವಾಗಿ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗವನ್ನು ಸ್ಥಾಪಿಸಲಾಗಿದೆ. ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳಿಗೆ ಸಂಬಂಧಪಟ್ಟ ಪಠ್ಯಪುಸ್ತಕಗಳನ್ನು ಮತ್ತು ಸಂದರ್ಭಗ್ರಂಥಗಳನ್ನು ಹೊರತರುವುದೇ ಈ ವಿಭಾಗದ ಮುಖ್ಯ ಉದ್ದೇಶ. ಮೂರು ರೀತಿಯಲ್ಲಿ ಈ ಕಾರ್ಯವನ್ನು ನೆರವೇರಿಸಬೇಕೆಂದು ಯೋಚಿಸಲಾಗಿದೆ: (1) ಸಮರ್ಥ ಲೇಖಕರಿಂದ ಗ್ರಂಥ ಗಳನ್ನು ಬರೆಸುವುದು. (2) ಪ್ರಸಿದ್ಧ ಆಕರ, ಸಂದರ್ಭಗ್ರಂಥಗಳನ್ನು ತಜ್ಞರಿಂದ ಭಾಷಾಂತರಿಸುವುದು, ಮತ್ತು (3) ಸಂಸ್ಥೆಯ ಕಾರ್ಯಕರ್ತರೇ ಸಾಧ್ಯವಾದಷ್ಟು ಗ್ರಂಥಗಳನ್ನು ಭಾಷಾಂತರಿಸುವುದು ಈಗಾಗಲೇ ವಿವಿಧ ವಿಷಯಗಳಿಗೆ ಸಂಬಂಧಿಸಿದ 52 ಗ್ರಂಥಗಳು ಹೊರಬಂದಿವೆ. ಈ ವರ್ಷದ ಒಳಗಾಗಿ ಸುಮಾರು 25 ಗ್ರಂಥ ಗಳು ಹೊರಬರುವ ನಿರೀಕ್ಷೆಯಿದೆ. ವೈಜ್ಞಾನಿಕ ಗ್ರಂಥಗಳ ರಚನೆಯಲ್ಲಿ ಎದುರಿಸ ಬಹುದಾದ ಸಮಸ್ಯೆಗಳನ್ನು ಪರಿಹರಿಸುವತ್ತಲೂ ಗಮನ ಕೊಡಲಾಗಿದೆ. ತಜ್ಞ ವಿದ್ವಾಂಸರು ಒಂದುಗೂಡಿ 'ಪಾರಿಭಾಷಿಕ ಕೋಶ'ಗಳನ್ನು ತಯಾರಿಸುತ್ತಿದ್ದಾರೆ. ಈಗಾಗಲೇ 'ಮನೋವಿಜ್ಞಾನ ಕೋಶ' ಹೊರಬಂದಿದೆ. 'ಭಾಷಾ ವಿಜ್ಞಾನ ಕೋಶ' ಅಚ್ಚಿನ ಮನೆಗೆ ಹೋಗಲಿದೆ. ಇಂಥ ಇನ್ನೂ ಒಂಬತ್ತು ಕೋಶಗಳು ಸಿದ್ಧವಾಗು ತ್ತಿವೆ. ಈ ಎಲ್ಲ ಯೋಜನೆ, ನೆರವು ಮತ್ತು ಪ್ರೋತ್ಸಾಹಗಳಿಂದಾಗಿ ಮುಂದಿನ

ಮೂರು ನಾಲ್ಕು ವರ್ಷಗಳಲ್ಲಿ ಸುಮಾರು 250 ಗ್ರಂಥಗಳನ್ನು ಹೊರತರಬಹುದೆಂಬ ನಂಬಿಕೆಯಿದೆ. ಇವುಗಳ ಜೊತೆಗೆ ಸ್ನಾತಕಪೂರ್ವ, ಸ್ನಾತಕ ಮತ್ತು ಸ್ನಾತಕೋತ್ತರ ಹಂತಗಳಿಗೆ ಅಗತ್ಯವಾದ ಭಾಷಾ ಪಠ್ಯಪುಸ್ತಕಗಳನ್ನು ಹೊರತರಲಾಗುತ್ತಿದೆ. ಸಂಕಲಿತ, ಸಂಪಾದಿತ ಪಠ್ಯಗ್ರಂಥಗಳು ಈ ವರ್ಗಕ್ಕೆ ಸೇರುತ್ತವೆ. ಈ ಕಾರ್ಯದಲ್ಲಿ 'ಸಂಪಾದನ ವಿಭಾಗ' ನಮಗೆ ನೆರವಾಗುತ್ತಿದೆ.

ಸಂದರ್ಭ ಗ್ರಂಥಗಳು, ಆಕರ ಗ್ರಂಥಗಳು ಪಠ್ಯಪುಸ್ತಕಗಳಿಗೆ ಪೂರಕವಾಗಿ, ಪ್ರೇರಕವಾಗಿ, ಪೋಷಕವಾಗಿ, ಇರುವಂಥವು; ಬೆನ್ನೆಲುಬಾಗಿ ಇರುವಂಥವು. ಪಠ್ಯಪುಸ್ತಕಗಳ ವಿಷಯ ಸಂಪತ್ತಿಗೆ ನಿರೂಪಿತ ವಿಚಾರಗಳ ನಿರ್ದಿಷ್ಟತೆ, ನಿಖರತೆ ಮತ್ತು ಪ್ರಾಮಾಣಿಕತೆಗೆ ಅವು ಒರೆಗಲ್ಲಾಗಿರುತ್ತವೆ. ಶಾಖೋಪಶಾಖೆಗಳಾಗಿ ಒಡೆದು ನಿಲ್ಲುವ ಹೆಮ್ಮರಕ್ಕೆ ತಾಯಿಬೇರು ಹೇಗೋ ಜ್ಞಾನಕ್ಷೇತ್ರಕ್ಕೆ ಆಕರ ಗ್ರಂಥಗಳೂ, ಸಂದರ್ಭ ಗ್ರಂಥಗಳೂ ಹಾಗೆ. ಪಠ್ಯಪುಸ್ತಕಗಳು ಅಲ್ಪಾಯುಗಳು. ಹೊಸ ಹೊಸ ಸಂಶೋಧನೆಗಳ ಬೆಳಕಿನಲ್ಲಿ, ವಿಚಾರಗಳ ಮತ್ತು ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಆಗಿಂದಾಗ್ಗೆ ಅವುಗಳನ್ನು ಪರಿಷ್ಕರಿಸಬೇಕಾಗುತ್ತದೆ, ಪುನರ್‌ರಚಿಸಬೇಕಾಗುತ್ತದೆ, ಹೊಸ ಹೊಸ ಅಂಶಗಳನ್ನು ಸೇರಿಸಬೇಕಾಗುತ್ತದೆ, ತಿದ್ದುಪಡಿಗಳನ್ನು ಮಾಡಬೇಕಾಗುತ್ತದೆ. ಸಂದರ್ಭಗ್ರಂಥಗಳು ಮತ್ತು ಆಕರ ಗ್ರಂಥಗಳು ಈ ಎಲ್ಲ ಪ್ರಕ್ರಿಯೆಗಳಿಗೆ ಸಂಪೂರ್ಣವಾಗಿ ಹೊರತಲ್ಲವಾದರೂ ಅವುಗಳು ಸಾರುವ ಸತ್ಯಗಳು, ತತ್ವಗಳು, ಸೂತ್ರಗಳು ಬಹುಮಟ್ಟಿಗೆ ದೇಶಕಾಲಗಳ ಉಪಹತಿಯನ್ನು ಮೀರಿ ನಿಲ್ಲುತ್ತವೆ. ಹೀಗಾಗಿ ಅವು ಸಾರ್ವಕಾಲಿಕ, ಸಾರ್ವದೇಶಿಕವಾಗಿ ಪರಿಣಮಿಸುತ್ತವೆ ಅಥವಾ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಇತರ ದೇಶಕಾಲಗಳಿಗೆ ಅನ್ವಯವಾಗುವ ವೈಶಿಷ್ಟ್ಯವನ್ನು ಪಡೆದುಕೊಂಡಿರುತ್ತವೆ. ಆಕರ ಗ್ರಂಥಗಳು, ಸಂದರ್ಭ ಗ್ರಂಥಗಳು ಆಯಾ ಕ್ಷೇತ್ರದಲ್ಲಿನ ಪ್ರಾಜ್ಞ ವಿದ್ವಾಂಸರ ಆಲೋಚನಾ ಶಕ್ತಿ, ಜ್ಞಾನಾನ್ವೇಷಣೆ ಮತ್ತು ವಿಚಾರವಂತಿಕೆಗೆ ಸಾಕ್ಷಿಯಾಗಿರುತ್ತವೆ. ಆದ್ದರಿಂದ ಪಠ್ಯಪುಸ್ತಕಗಳ ಜೊತೆಗೆ ಅಮೂಲ್ಯವಾದ ಆಕರ ಗ್ರಂಥಗಳ, ಸಂದರ್ಭಗ್ರಂಥಗಳ ಸಂಪತ್ತನ್ನೂ ಹೆಚ್ಚಿಸಿಕೊಂಡು ಹೋಗಬೇಕಾದ್ದು ಅಗತ್ಯ, ಅನಿವಾರ್ಯ.

ಆಕರ ಗ್ರಂಥಗಳು, ಸಂದರ್ಭ ಗ್ರಂಥಗಳು ಭಾಷೆಯ ಶಕ್ತಿಗೂ ಒರೆಗಲ್ಲಾಗುತ್ತವೆ. ಸೀಮಿತವಾದಷ್ಟು ಅಥವಾ ಆವಶ್ಯಕವಾದಷ್ಟು ಪಾರಿಭಾಷಿಕ ಪದ ಸಂಗ್ರಹವನ್ನು ಬಳಸಿ ಪಠ್ಯಪುಸ್ತಕಗಳನ್ನು ರಚಿಸಬಹುದು; ಆವಶ್ಯಕವೆಂದು ಕಂಡುಬಂದಲ್ಲಿ ವಿವರಣೆಗಳನ್ನು ನೀಡಬಹುದು, ವಿಚಾರಗಳನ್ನು ಲಂಬಿಸಬಹುದು, ಉದಾಹರಣೆಗಳ ಮೂಲಕ ವಿಶದಪಡಿಸಬಹುದು. ಆದರೆ ವಿಚಾರ, ವಿವರಣೆ ಮತ್ತು ವಿಶದೀಕರಣಗಳ ದೃಷ್ಟಿಯಿಂದ ಹಿತಮಿತವಾಗಿ, ಸ್ಪಷ್ಟವಾಗಿ, ನಿರ್ದಿಷ್ಟವಾಗಿ ನಿಖರವಾಗಿ ವಿಚಾರಗಳನ್ನು ವ್ಯಕ್ತಪಡಿಸುವಾಗ ಭಾಷೆ ಪರೀಕ್ಷೆಗೊಳಗಾಗುತ್ತದೆ. ಅದರ ಸುಪ್ತ ಶಕ್ತಿಗಳು ಹೊರಹೊಮ್ಮುತ್ತವೆ, ಸಿಡಿದೇಳುತ್ತವೆ, ಕಿಡಿಗೆದರುತ್ತವೆ, ಭಾಷೆಯ

ಸಂಪತ್ತು ಸಮೃದ್ಧವಾಗುತ್ತದೆ. ಭಾಷೆ ಎಲ್ಲ ಬಗೆಯ ವಿಚಾರಾಭಿವ್ಯಕ್ತಿಗೂ ಸಮರ್ಥ ವಾಹಕವಾಗುತ್ತದೆ.

ಯಾವುದೇ ಭಾಷೆಯಲ್ಲಿನ ಮಾನವಿಕ ಅಥವಾ ವೈಜ್ಞಾನಿಕ ಸಾಹಿತ್ಯ ನಿರಂತರವಾಗಿ ಭಾಷಾಂತರಗಳನ್ನು ಅವಲಂಬಿಸಿಕೊಂಡಿರುವುದು ಸಾಧ್ಯವಿಲ್ಲ. ಗ್ರಂಥ ಅಚ್ಚಾಗಿ ಹೊರಬರುವ ಹೊತ್ತಿಗಾಗಲೇ ನೂತನ ವಿಚಾರಗಳು ಹೊರಬಂದು ಗ್ರಂಥ ಹಳೆಯದಾಗಿ ಬಿಡುವಂತಹ ಸಂದರ್ಭಗಳಿರುವಾಗ (ಇಂಗ್ಲಿಷಿನಂಥ ಭಾಷೆಯಲ್ಲೂ ಕೂಡ) ಅಂಥ ಗ್ರಂಥ ಭಾಷಾಂತರವಾಗಿ ಹೊರಬೀಳುವ ಹೊತ್ತಿಗೆ ಮತ್ತಷ್ಟು ಹಳೆಯದಾಗಿ ಬಿಟ್ಟಿರುತ್ತದೆ. ಹೀಗಾಗಿ ಹೊಸ ಹೊಸ ಮೌಲಿಕ ಅಥವಾ ಸ್ವತಂತ್ರ ಗ್ರಂಥಗಳನ್ನು ರಚಿಸಬೇಕಾಗುತ್ತದೆ. ಇಲ್ಲವಾದರೆ ಈ ಪ್ರಗತಿಪಥದಲ್ಲಿ ಹೆಗಲೆಣೆಯಾಗಿ ನಡೆಯಲಾರದೆ ಆ ಭಾಷೆ ಮತ್ತು ಆ ಭಾಷೆಯನ್ನಾಡುವ ಜನ ಹಿಂದೆ ಬೀಳುತ್ತಾರೆ. ಮೇಲಾಗಿ ಒಂದು ಭಾಷೆಯಲ್ಲಿ ರಚಿತವಾಗುವ ಸ್ವತಂತ್ರ ಗ್ರಂಥಗಳ ಸಂಖ್ಯೆ ಆಯಾ ಜನತೆಯ ಸಂಶೋಧನಾಸಕ್ತಿ, ವಿನೂತನ ವಿಚಾರಗ್ರಹಣ ಸಾಮರ್ಥ್ಯ, ಬುದ್ಧಿ ಪ್ರಖರತೆ ಮತ್ತು ಪ್ರತಿಭೆಯ ಸಂಕೇತವಾಗಿರುತ್ತದೆ. ಕಾಲದೊಡನೆ ಸರಿಜೋಡಿಯಾಗಿ ಸಾಗಬೇಕಾದ್ದು ಅಪೇಕ್ಷಣೀಯ, ಅನಿವಾರ್ಯ.

ಈ ದೃಷ್ಟಿಯಿಂದ ಸ್ವತಂತ್ರ ಗ್ರಂಥಗಳ ರಚನೆ ವಿಶೇಷ ಪ್ರೋತ್ಸಾಹಕ್ಕೆ ಅರ್ಹವಾಗಿದೆ. ಈ ಅಂಶವನ್ನು ಗಮನಿಸಿ ವಿಶ್ವವಿದ್ಯಾನಿಲಯ ಬಹುಮಾನ ಯೋಜನೆಯೊಂದನ್ನು ಜಾರಿಗೆ ತಂದಿತು. ಈ ಯೋಜನೆಯ ಅಂಗವಾಗಿ ಮೊದಲ ಹಂತದಲ್ಲಿ ಮಾನವಿಕಗಳಲ್ಲಿ ಮನೋವಿಜ್ಞಾನಕ್ಕೂ, ವಿಜ್ಞಾನಗಳಲ್ಲಿ ಭೌತವಿಜ್ಞಾನ ಮತ್ತು ರಸಾಯನ ವಿಜ್ಞಾನಗಳಿಗೂ ಬಹುಮಾನ ಯೋಜನೆಯನ್ನು ಜಾರಿಗೆ ಕೊಡಲಾಗಿತ್ತು. ಈ ವರ್ಷ ಸಸ್ಯವಿಜ್ಞಾನ, ಪ್ರಾಣಿವಿಜ್ಞಾನ, ಅರ್ಥವಿಜ್ಞಾನ ಮತ್ತು ಎಂಜಿನಿಯರಿಂಗ್ ವಿಭಾಗಗಳನ್ನು ಈ ಯೋಜನೆಗೆ ಒಳಪಡಿಸಲಾಗಿದೆ. ಮುಂಬರುವ ವರ್ಷಗಳಲ್ಲಿ ಈ ಯೋಜನೆಯನ್ನು ಇತರ ವಿಭಾಗಗಳಿಗೂ ವಿಸ್ತರಿಸಲಾಗುತ್ತದೆ.

ಪ್ರತಿಭೆಯಲ್ಲಿ ವಿದ್ವತ್ತಿನಲ್ಲಿ ಸಂಶೋಧನಾನುರಕ್ತಿಯಲ್ಲಿ ಆಧುನಿಕ ವಿಚಾರಶೀಲತೆಯಲ್ಲಿ ಯಾರಿಗೂ ಕಡಿಮೆ ಇಲ್ಲದ ನಮ್ಮ ಅಧ್ಯಾಪಕವರ್ಗ ವಿಷಯಸಂಪತ್ತನ್ನು ಸಮೃದ್ಧಗೊಳಿಸಿಕೊಂಡಿರುವುದರ ಜೊತೆಗೆ ಕನ್ನಡ ಭಾಷೆಯ ಜಾಯಮಾನಕ್ಕೆ ಅನುಗುಣವಾದ ನಿರೂಪಣಾ ಪದ್ಧತಿಯನ್ನೂ ಅಳವಡಿಸಿಕೊಳ್ಳಬೇಕಾಗಿದೆ. ವಿಚಾರ ಪರಿಪ್ಲುತವಾಗಿರುವ ಅನೇಕ ಗ್ರಂಥಗಳು ಭಾಷೆಯ ದೃಷ್ಟಿಯಿಂದ ಕುಂಟುತ್ತವೆಂಬುದು ಲೇಖಕರ ಮತ್ತು ಓದುಗರ ಅಭಿಪ್ರಾಯವಾಗಿದೆ. ಕನ್ನಡ ಭಾಷೆಯ ಬಳಕೆಯ ವಿಚಾರದಲ್ಲಿ 'ಬೇಸಿಗೆ ಶಿಬಿರ'ವೊಂದನ್ನು ಏರ್ಪಡಿಸಲಾಗಿತ್ತು. ಈ ಬಗೆಯ ಲೇಖನ ಕಾರ್ಯದಲ್ಲಿ ಎದುರಾಗುವ ಸಮಸ್ಯೆಗಳನ್ನು ಚರ್ಚಿಸುವುದು, ಕೆಲವಾದರೂ ಮಾರ್ಗದರ್ಶಿ ಸೂತ್ರಗಳನ್ನು ಕಂಡುಕೊಳ್ಳುವುದು ಈ ಯೋಜನೆಯ ಉದ್ದೇಶವಾಗಿತ್ತು. ಮೊದಲ ಶಿಬಿರದಲ್ಲಿ 17 ಮಂದಿ ವಿಜ್ಞಾನ ಪಠ್ಯಪುಸ್ತಕ ಬರಹಗಾರರು ಒಂದುಗೂಡಿ

ಕನ್ನಡದಲ್ಲಿ ವಿಜ್ಞಾನ ಪಠ್ಯಪುಸ್ತಕ ರಚನೆ ಮತ್ತು ಬೋಧನೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಚರ್ಚಿಸಿದರು. ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಕಂಡುಕೊಂಡರು. ಶಿಬಿರದ ಕಾರ್ಯಕಲಾಪಗಳನ್ನು ಇಷ್ಟರಲ್ಲಿಯೇ ಪುಸ್ತಕ ರೂಪದಲ್ಲಿ ಹೊರತರುವ ಯೋಜನೆ ಇದೆ. ಈ ಶಿಬಿರದಲ್ಲಿ ಗಳಿಸಿದ ಅನುಭವ ಮತ್ತು ಪ್ರತಿಫಲಗಳ ಆಧಾರದ ಮೇಲೆ ಆ ಯೋಜನೆಯನ್ನು ಮತ್ತಷ್ಟು ವಿಸ್ತರಿಸುವ ಯೋಜನೆ ಇದೆ. ಈ ಎಲ್ಲ ಪ್ರೇರಣೆ ಪ್ರೋತ್ಸಾಹಗಳ ಫಲವಾಗಿ ಕನ್ನಡದಲ್ಲಿ ಸ್ವತಂತ್ರ ಗ್ರಂಥಗಳ ಉತ್ತಮ ಫಸಲು ಮೂಡಿಬರುವುದೆಂದು ನಂಬಿದ್ದೇವೆ.

ಪ್ರೊ. ಡಿ. ಎಲ್. ನರಸಿಂಹಾಚಾರ್ ಅವರ "ಪಂಪ ಭಾರತ ದೀಪಿಕೆ" ಕನ್ನಡ ಅಧ್ಯಯನ ಸಂಸ್ಥೆಯ ಹೆಮ್ಮೆಯ ಪ್ರಕಟಣೆಗಳಲ್ಲಿ ಒಂದಾಗುತ್ತದೆ ಎಂದು ನಂಬಿದ್ದೇನೆ. ಅವರ ಅನೇಕ ವರ್ಷಗಳ ಅಧ್ಯಯನ, ಸಂಶೋಧನಗಳ ಪಾಂಡಿತ್ಯಪೂರ್ಣಫಲ ಈ ವ್ಯಾಖ್ಯಾನ ಗ್ರಂಥದ ರೂಪದಲ್ಲಿ ನಮಗೆ ಇಂದು ಲಭ್ಯವಾಗಿದೆ. ಇಂಥ ವಿದ್ವತ್ ಸಾಹಸ ವಿರಳವಾಗುತ್ತಿರುವ ಈ ದಿನಗಳಲ್ಲಿ ವ್ಯಾಖ್ಯಾನ ಗ್ರಂಥಗಳ ಪ್ರಾಚೀನ ಪರಂಪರೆಯನ್ನು ಸಮರ್ಥ ರೀತಿಯಲ್ಲಿ ಮುಂದುವರಿಸಿರುವ ಕೀರ್ತಿಯೂ ಅವರದಾಗಿದೆ. ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧನ ಪ್ರಾಧ್ಯಾಪಕರಾಗಿದ್ದ ಅವಧಿಯಲ್ಲಿ ಅವರು ರಚಿಸಿದ ಗ್ರಂಥ ಇದು. ಇದನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಕಟಿಸುವ ಅವಕಾಶ ಕೊಟ್ಟಿದ್ದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ. ಈ ಗ್ರಂಥವನ್ನು ಆದಷ್ಟು ಬೇಗ, ಹಾಗೂ ಸುಂದರವಾಗಿ ಅಚ್ಚಿಸಿಕೊಟ್ಟಿರುವ ವಿಶ್ವವಿದ್ಯಾನಿಲಯದ ಮುದ್ರಣಾಲಯದ ಡೆಪ್ಯುಟಿ ಡೈರೆಕ್ಟರ್ ಶ್ರೀ ಎಚ್. ನರಸಣ್ಣ ಅವರಿಗೂ ನನ್ನ ವಂದನೆಗಳು ಸಲ್ಲಬೇಕು.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು
೨೦-೪-೧೯೭೧

ಹಾ. ಮಾ. ನಾಯಕ
ನಿರ್ದೇಶಕ

## ಎರಡನೆಯ ಮುದ್ರಣಕ್ಕೆ ಮುನ್ನುಡಿ

ಮೊದಲ ಆವೃತ್ತಿಯ ಪ್ರತಿಗಳೆಲ್ಲ ಮುಗಿದು ಹೋದುದರಿಂದ ಈ ಆವೃತ್ತಿಯನ್ನು ಹೊರತರಲಾಗಿದೆ. ಇದಕ್ಕೆ ಅವಕಾಶ ಮಾಡಿಕೊಟ್ಟ ಶ್ರೀಮತಿ ಡಿ. ಎಲ್ ಮುತ್ತಮ್ಮ ನರಸಿಂಹಾಚಾರ್ ಅವರಿಗೂ, ಕರಡುಗಳ ಪರಿಶೀಲನೆಯಲ್ಲಿ ನೆರವಾದ ಶ್ರೀ ಜಿ. ಜಿ. ಮಂಜುನಾಥನ್ ಅವರಿಗೂ ನಮ್ಮ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ಅರಿಕೆ

'ಪಂಪಭಾರತ'ವೆಂದು ಪ್ರಸಿದ್ಧವಾಗಿರುವ 'ವಿಕ್ರಮಾರ್ಜುನ ವಿಜಯ'ವೆಂಬ ಮಹಾಕಾವ್ಯಕ್ಕೆ ವ್ಯಾಖ್ಯಾನವೊಂದನ್ನು ಬರೆಯಬೇಕೆಂಬ ಅಭಿಲಾಷೆ ನನಗೆ ಬಹು ಕಾಲದಿಂದ ಇತ್ತು. ಕೆಲವರು ಮಿತ್ರರೂ ಇಂಥ ಟೀಕೆಯೊಂದರ ಆವಶ್ಯಕತೆಯನ್ನು ತಿಳಿಸಿ ಅದನ್ನು ಬರೆಯಬೇಕೆಂದು ಒತ್ತಾಯಪಡಿಸುತ್ತಿದ್ದರು. ಬಿ.ಎ. (ಆನರ್ಸ್), ಎಂ.ಎ., ತರಗತಿಗಳ ಪ್ರೌಢ ಕನ್ನಡ ವಿದ್ಯಾರ್ಥಿಗಳಿಗೆ ಈ ಕಾವ್ಯವನ್ನು ಭಾಗಶಃ ಆಗಾಗ ಪಾಠವನ್ನು ಹೇಳಿ ಇಡೀ ಗ್ರಂಥವನ್ನು ಚೆನ್ನಾಗಿ ಅಧ್ಯಯನ ಮಾಡಬೇಕಾಯಿತು. ಇದಿರಾದ ತೊಡಕುಗಳನ್ನೂ ಸಮಸ್ಯೆಗಳನ್ನೂ ಯಥಾಮತಿಯಾಗಿ ಪರಿಹಾರ ಮಾಡಿಕೊಳ್ಳುವ ಪ್ರಯತ್ನ ಇಲ್ಲಿಯವರೆಗೂ ನಡೆದಿದೆಯಾದರೂ ವ್ಯಾಖ್ಯಾನವನ್ನು ಮಾತ್ರ ಬರೆಯುವುದಾಗಿರಲಿಲ್ಲ. ವಿಶ್ವವಿದ್ಯಾನಿಲಯಗಳ ಧನಸಹಾಯ ಆಯೋಗದವರು ೧೯೬೮–೬೯ನೆಯ ವರ್ಷದಲ್ಲಿ ನನಗೆ ನೀಡಿದ ನೆರವಿನಿಂದಲೂ ಪ್ರೋತ್ಸಾಹದಿಂದಲೂ ಈ ಟೀಕೆಯನ್ನು ಬರೆಯುವ ಕೆಲಸ ನೆರವೇರಿತು. ಇದಕ್ಕಾಗಿ ಆ ಆಯೋಗಕ್ಕೆ ನನ್ನ ತುಂಬು ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಈ ಸಹಾಯ ನನಗೆ ಬರಲು ಮುಖ್ಯ ಕಾರಣರಾದ, ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ. ಶ್ರೀಮಾಲಿ ಅವರಿಗೆ ನಾನು ತುಂಬ ಋಣಿಯಾಗಿದ್ದೇನೆ. ಅವರ ಉಪಕಾರವನ್ನು ನಾನು ಸ್ಮರಿಸಿಕೊಳ್ಳುತ್ತೇನೆ.

ವ್ಯಾಖ್ಯಾನವನ್ನು ಬರೆದಾದಮೇಲೆ ಅದನ್ನು ಮುದ್ರಿಸುವ ಸಮಸ್ಯೆ ತಲೆದೋರಿತು. ಆಗ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ ಶ್ರೀಮಾನ್ ಪ್ರೊ. ದೇ. ಜವರೇಗೌಡರು ಆ ಸಂಸ್ಥೆಯ ಪರವಾಗಿ ಈ ಟೀಕೆಯನ್ನು ಮುದ್ರಿಸಿ ಪ್ರಕಟಿಸುವ ಭರವಸೆಯನ್ನು ನೀಡಿ ಮುದ್ರಣದ ಕಾರ್ಯವನ್ನು ಆರಂಭಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಯ ಪದವಿಯನ್ನು ಅವರು ಅಂಗೀಕರಿಸಿದ ಅನಂತರವೂ ಈ ಟೀಕೆಯ ಮುದ್ರಣಕಾರ್ಯ ವಿಷಯದಲ್ಲಿ ಅವರು ಆಸಕ್ತಿಯನ್ನು ಬಿಡಲಿಲ್ಲ. ಈ ಪ್ರೋತ್ಸಾಹಕ್ಕಾಗಿ ಅವರಿಗೆ ನನ್ನ ಹಾರ್ದಿಕ ವಂದನೆಗಳನ್ನು ಅರ್ಪಿಸುತ್ತೇನೆ. ಅವರ ಅನಂತರ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಬಂದಿರುವ ಡಾ. ಹಾ. ಮಾ. ನಾಯಕ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

'ಪಂಪ ಭಾರತ ದೀಪಿಕೆ' ಎಂಬ ಈ ವ್ಯಾಖ್ಯಾನದ ವಿಷಯವಾಗಿ ನಾನು ಹೆಚ್ಚಾಗಿ ಹೇಳಬೇಕಾಗಿರುವುದು ಏನೂ ಇಲ್ಲ. ಬಲ್ಲವರಿಗೆ ಇಲ್ಲಿ ಬೇರೇನೂ ಇಲ್ಲ. ಈ ಕಾವ್ಯವನ್ನು ಅಭ್ಯಾಸಮಾಡುವ ಪ್ರೌಢವಿದ್ಯಾರ್ಥಿಗಳಿಗೂ ಇತರರಿಗೂ ಈ ಟೀಕೆಯಿಂದ ಸಾಕಷ್ಟು ಸಹಾಯವಾಗುವುದೆಂದು ನಾನು ನಂಬಿದ್ದೇನೆ. ಸಾಕಷ್ಟು ವಿಸ್ತಾರವಾಗಿ ಪ್ರತಿಪದಾರ್ಥ ಸಹಿತವಾಗಿ ಈ ಟೀಕೆ ರಚಿತವಾಗಿದೆ. ವ್ಯಾಕರಣ, ಛಂದಸ್ಸು, ಪೂರ್ವಕಥಾವೃತ್ತಾಂತ, ಶಬ್ದಾರ್ಥ ನಿರ್ಣಯ, ಆಕರ ಗ್ರಂಥಗಳು—

ಮುಂತಾದ ಅನೇಕ ವಿಷಯಗಳು ಈ ಟೀಕೆಯಲ್ಲಿ ನಿರೂಪಿತವಾಗಿವೆ. ಹಲವೆಡೆಗಳಲ್ಲಿ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದೆ; ನನ್ನದೇ ಸರಿಯೆಂಬ ಹಠವೇನೂ ಇಲ್ಲ. ಜಿಜ್ಞಾಸುವಿನ ದೃಷ್ಟಿಯಿಂದ ಕೆಲವಂಶಗಳನ್ನು ಚರ್ಚಿಸಿದೆ. ನನಗೆ ಸಂದೇಹವೆಂದು ತೋರಿದೆಡೆಗಳಲ್ಲಿ ಪ್ರಶ್ನೆ ಚಿಹ್ನೆಯನ್ನು ಧಾರಾಳವಾಗಿ ಬಳಸಿದ್ದೇನೆ. ತಿಳಿಯದ ಅಂಶಗಳಿಗೂ ಇದೇ ಚಿಹ್ನೆಯನ್ನು ಅಲ್ಲಲ್ಲಿ ಹಾಕಿದೆ. ಈ ಪ್ರಶ್ನೆ ಚಿಹ್ನೆಗಳನ್ನು ತೆಗೆದುಹಾಕುವ ಕೆಲಸ ಮುಂದಿನ ವಿದ್ವಾಂಸರಿಗೆ ಸೇರಿದುದಾಗಿದೆ; ಈ ಕ್ಷೇತ್ರದಲ್ಲಿ ಸಂಶೋಧನೆ ಮುಂದುವರಿದು ಹೊಸ ಆಧಾರಗಳು ತಲೆದೋರುವುದರಿಂದ ಸಮಸ್ಯೆಗಳ ಪರಿಹಾರ ಸಾಧ್ಯವಾಗಬಹುದು. ಇವನ್ನೆಲ್ಲ ಸಹಾನುಭೂತಿಯಿಂದ ನೋಡಬೇಕೆಂದು ನನ್ನ ನಮ್ರತೆಯ ವಿನಂತಿ.

ದಿವಂಗತ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಂದ ಸಂಪಾದಿತವಾಗಿ ಕರ್ನಾಟಕ ಸಾಹಿತ್ಯ ಪರಿಷತ್ತಿನಿಂದ ೧೯೩೧ ರಲ್ಲಿ ಪ್ರಕಟವಾದ 'ಪಂಪಭಾರತ'ದ ಪಾಠವನ್ನು ಇಲ್ಲಿ ಅನುಸರಿಸಿದೆ. ಈ ಗ್ರಂಥದ ಮೊದಲನೆಯ ಭಾಗವು (ಆಶ್ವಾಸ ೧–೮) ಬೆಳ್ಳಾವೆ ವೆಂಕಟನಾರಾಯಣಪ್ಪನವರಿಂದ ಮತ್ತೆ ಪರಿಷ್ಕೃತವಾಗಿ ೧೯೩೫ನೆಯ ಇಸವಿಯಲ್ಲಿ ಪರಿಷತ್ತಿನ ಮೂಲಕ ಪ್ರಕಟವಾಯಿತು. ಇಲ್ಲಿ ಅವಲಂಬಿಸಿರುವ ಪಾಠ, ಈ ಎಂಟು ಆಶ್ವಾಸಗಳಿಗೆ ಸೇರಿದ್ದು, ಈ ಪರಿಷ್ಕೃತ ಮುದ್ರಣದ್ದು. ನನಗೆ ಸರಿಯೆಂದು ತೋರಿಬಂದ ಎಡೆಗಳಲ್ಲಿ, ಅಡಿಟಿಪ್ಪಣಿಗಳಲ್ಲಿ ಕಾಣಿಸಿರುವ ಪಾಠಾಂತರಗಳನ್ನು ಪರಿಗ್ರಹಿಸಿದ್ದೇನೆ; ಸ್ವೀಕೃತ ಪಾಠಗಳನ್ನು ಬಿಟ್ಟಿದ್ದೇನೆ. ಕೆಲವೆಡೆ ನನ್ನಿಂದ ನಿಯೋಜಿತವಾಗಿರುವ ಪಾಠಗಳನ್ನು ಚೌಕಕಂಸ ಚಿಹ್ನೆಗಳಲ್ಲಿ ಅಳವಡಿಸಿದೆ. ಪಾಠಸಮಸ್ಯೆಗಳನ್ನು ಕೆಲವೆಡೆಗಳಲ್ಲಿ ಚರ್ಚೆಮಾಡಿದೆ. ಇವನ್ನೆಲ್ಲ ಸಾಮಾನ್ಯ ವಾಚಕರು ಗಮನಿಸಬೇಕಾಗಿಲ್ಲ.

ಈ ಟೀಕೆಯ ಜೊತೆಗೆ ಮೂಲಕಾವ್ಯ ಪಾಠವನ್ನೂ ಮುದ್ರಿಸಿದರೆ ಹೆಚ್ಚು ಅನುಕೂಲವಾಗುವುದೆಂದು ಕೆಲವರು ಸ್ನೇಹಿತರು ಹೇಳಿದರು. ಇದು ನಿಜವೇ ಆದರೂ ಮೂಲಕಾವ್ಯವನ್ನು ಇಲ್ಲಿ ಮುದ್ರಿಸುವುದರಿಂದ ಗ್ರಂಥದ ಬೆಲೆ ಇಮ್ಮಡಿ ಮೂವಡಿಯಾಗಿ ಹೆಚ್ಚಬೇಕಾಗುತ್ತದೆ; ಕೊಳ್ಳುವವರಿಗೆ ಕಷ್ಟವಾಗುತ್ತದೆ. ಬೆಳ್ಳಾವೆ ವೆಂಕಟನಾರಾಯಣಪ್ಪನವರಿಂದ ಸಂಪಾದಿತವಾದ 'ಪಂಪಭಾರತ'ದ ಪುನರ್ಮುದ್ರಣವನ್ನು ಎರಡು ಭಾಗಗಳಾಗಿ ಮೈಸೂರು ವಿಶ್ವವಿದ್ಯಾನಿಲಯವು ಮುದ್ರಿಸಿ ಪ್ರಕಟಿಸಿರುವುದರಿಂದ ಆ ಗ್ರಂಥದ ಪ್ರತಿಗಳು ಬೇಕಾದವರಿಗೆ ಸುಲಭವಾಗಿ ದೊರೆಯುವಂತಾಗಿದೆ. ಈ ಕಾರಣಗಳಿಂದ ಇಲ್ಲಿ ಮೂಲಗ್ರಂಥದ ಪಾಠವನ್ನು ಸೇರಿಸಿಲ್ಲ.

ಈ ಗ್ರಂಥದ ಮುದ್ರಣದ ಕಾರ್ಯವನ್ನು ಆದಷ್ಟು ಕ್ಷಿಪ್ರತೆಯಿಂದ ಮಾಡಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ಮುದ್ರಣಾಲಯಾಧಿಕಾರಿಗಳಾಗಿರುವ ಶ್ರೀಮಾನ್ ಎಚ್. ನರಸಣ್ಣ, ಎಂ.ಎ. ಅವರು. ನನ್ನ ತೊಡಕು ತಡೆಗಳನ್ನು ಸಹಿಸಿಕೊಂಡು ಅಚ್ಚಿನ ಕೆಲಸವನ್ನು ನೆರವೇರಿಸಿರುವ ಅವರಿಗೆ ನನ್ನ ಕೃತಜ್ಞತೆಗಳನ್ನು

ಸಲ್ಲಿಸುತ್ತೇನೆ. ಈ ಗ್ರಂಥ ಅಚ್ಚಾಗುತ್ತಿರುವಾಗ ಅದರ ಕರಡಚ್ಚುಗಳ ಪರಿಶೀಲನೆಯಲ್ಲಿ ನನಗಿಂತ ಹೆಚ್ಚಾಗಿ ದುಡಿದಿರುವವರು ನನ್ನ ಕಿರಿಯ ಸ್ನೇಹಿತರಾಗಿರುವ ಶ್ರೀಮಾನ್ ಎಚ್. ಎಸ್. ಹರಿಶಂಕರ್, ಎಂ.ಎ. ಅವರು; ಅವರಿಗೆ ಎಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಸಾಲದು. ಅವರ ಆಸಕ್ತಿ ಒತ್ತಾಯಗಳಿಂದ ಅಚ್ಚಿನ ಕೆಲಸ ವೇಗವಾಗಿ ನಡೆಯುವಂತಾಯಿತು. ಮುಖ್ಯವಾಗಿ ಅವರು ನನ್ನ ಶ್ರಮವನ್ನು ಬಲುಮಟ್ಟಿಗೆ ಕಡಿಮೆ ಮಾಡಿದ್ದಾರೆ. ಈ ಗ್ರಂಥಕ್ಕೆ ಒಂದು ಶಬ್ದಸೂಚಿಯನ್ನು ಸಿದ್ಧಪಡಿಸಿ ಕೊಟ್ಟವರು ನನ್ನ ತರುಣ ಮಿತ್ರರಾದ ಶ್ರೀಮಾನ್ ಜಿ. ಜಿ. ಮಂಜುನಾಥ, ಎಂ.ಎ. ಅವರು. ತಮಗೆ ಬಿಡುವಾಗಿದ್ದ ಸಮಯದಲ್ಲಿ ಶ್ರಮವಹಿಸಿ ಈ ಕೆಲಸವನ್ನು ಮಾಡಿಕೊಟ್ಟಿದ್ದಾರೆ. ಈ ಉಪಕಾರಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಅಚ್ಚಿನ ತಪ್ಪುಗಳೂ ಇತರ ಬಗೆಯ ಸ್ಖಾಲಿತ್ಯಗಳೂ ಈ ಗ್ರಂಥದಲ್ಲಿ ಸಾಕಷ್ಟು ಉಳಿದುಕೊಂಡಿರುವ ಸಂಭವವಿದೆ. ವಾಚಕರು ಇವನ್ನು ತಿದ್ದಿಕೊಂಡು ಉಪಕರಿಸುವರೆಂದು ನಂಬಿದ್ದೇನೆ.

ಮೈಸೂರು
29–3–1971

ಡಿ. ಎಲ್. ನರಸಿಂಹಾಚಾರ್



ಶ್ರೀ

# ಪಂಪ ಭಾರತ ದೀಪಿಕೆ

## ಪ್ರಥಮಾಶ್ವಾಸಂ

೧. ಶ್ರೀಯುಂ–ಜಯಲಕ್ಷ್ಮಿಯನ್ನು (ಲಕ್ಷ್ಮಿಯನ್ನು), ಅರಾತಿ–ಶತ್ರುಗಳ, ಸಾಧನ–ಸೈನ್ಯವೆಂಬ, ಪಯೋನಿಧಿಯೊಳ್–ಸಮುದ್ರದಲ್ಲಿ, ಪಡೆದುಂ–ಹೊಂದಿಯೂ, ಧರಿತ್ರಿಯುಂ–ಭೂಮಿಯನ್ನು, ಜೀಯೆನೆ–ಜೀಯ ಎಂದು, ಬೇಡಿಕೊಳ್ಳದೆ–ಯಾಚಿಸಿ ಕೊಳ್ಳದೆ, ಸ್ವೀಕರಿಸದೆ; ವಿರೋಧಿ ನರೇಂದ್ರರಂ–ಶತ್ರು ರಾಜರನ್ನು, ಒತ್ತಿ–ಅಮುಕಿ, ಕೊಂಡುಂ–ತೆಗೆದುಕೊಂಡೂ, ಆತ್ಮೀಯ–ತನ್ನ, ಸುಪುಷ್ಪ[ಪಟ್ಟ]ಮುಂ–ಒಳ್ಳೆಯದಾದ ಪುಷ್ಪಪಟ್ಟವೆಂಬ ಕಿರೀಟವನ್ನು, ಒಡಂಬಡೆ–ಒಪ್ಪುವಂತೆ, ತಾಳ್ದಿಯುಂ–ಧರಿಸಿಯೂ, ಇಂತು–ಹೀಗೆ, ಉದಾತ್ತ ನಾರಾಯಣನಾದ–ಉದಾತ್ತ ನಾರಾಯಣನೆಂಬ ಬಿರುದ ನ್ನುಳ್ಳ, ದೇವಂ–ಸ್ವಾಮಿಯಾದ, ಅರಿಕೇಸರಿ–ಅರಿಕೇಸರಿ ಎಂಬ ರಾಜನು, ಶತ್ರುಗಳಿಗೆ ಸಿಂಹವಾದವನು; ಎಮಗೆ–ನಮಗೆ, ಸೌಖ್ಯಕೋಟಿಯಂ–ಸುಖದ ಪರಾಕಾಷ್ಠೆಯನ್ನು, ಕೋಟ್ಯಂತರ ಸೌಖ್ಯಗಳನ್ನು, ಈಗೆ–ಕೊಡಲಿ. 'ಸುಪುಷ್ಪವೃಷ್ಟಿಯಂ' ಇಲ್ಲಿ ಪಾಠ ಕ್ಲೇಶವಿದೆ, ಇದು ಸುಪುಷ್ಪ[ಪಟ್ಟ]ಮುಂ ಎಂದಿರಬೇಕು.

ಈ ಪದ್ಯದಲ್ಲಿ ಕವಿ ತನ್ನ ಪೋಷಕನಾದ ಅರಿಕೇಸರಿರಾಜನನ್ನೂ ನಾರಾಯಣ ನನ್ನೂ ಒಟ್ಟಿಗೆ ಸ್ತುತಿಮಾಡಿ ತನ್ನ ದೊರೆ ದೇವನಾದ ನಾರಾಯಣನಿಗಿಂತ ಉತ್ತಮ ನೆಂದು ಹೇಳಿದ್ದಾನೆ. ಶತ್ರುಸೈನ್ಯಮಥನದಿಂದ ಅರಿಕೇಸರಿ ಜಯಲಕ್ಷ್ಮಿಯನ್ನು ಪಡೆದನು, ನಾರಾಯಣನಾದರೆ ದೇವದಾನವರು ಸೇರಿ ಸಮುದ್ರಮಥನ ಮಾಡಿದಾಗ ಹುಟ್ಟಿ ಬಂದ ಲಕ್ಷ್ಮಿಯನ್ನು ಏನೂ ಕಷ್ಟವಿಲ್ಲದೆ ಸ್ವೀಕರಿಸಿದನು; ಅರಿಕೇಸರಿ ವೈರಿಗಳನ್ನು ಮೆಟ್ಟಿ ಭೂಮಿಯನ್ನು ತೆಗೆದುಕೊಂಡನು, ನಾರಾಯಣನಾದರೆ ವಾಮನ ರೂಪದಲ್ಲಿ ಬಲಿಚಕ್ರವರ್ತಿಯಿಂದ ನೆಲವನ್ನು ಬೇಡಿ ಪಡೆದನು; ಅರಿಕೇಸರಿ ತನಗೇ ಮೀಸಲಾಗಿದ್ದ ಸುಪುಷ್ಪಪಟ್ಟವೆಂಬ ಕಿರೀಟವನ್ನು ಧರಿಸಿದ್ದರೆ ನಾರಾಯಣನು ಬರಿ ಪುಷ್ಪಪಟ್ಟವನ್ನು ತಾಳಿದನು. ಆದ್ದರಿಂದ ಅರಿಕೇಸರಿ ನಾರಾಯಣನಿಗಿಂತ ಉದಾತ್ತ ನಾದವನು.

ಇಲ್ಲಿ ಕಾಣುವ ಪುಷ್ಪಪಟ್ಟವೆಂಬ ಶಬ್ದ ಶಿಲ್ಪಶಾಸ್ತ್ರಕ್ಕೆ ಸೇರಿದ್ದು. ರಾಜರೂ ದೇವತೆಗಳೂ ಧರಿಸುವ ಶಿರೋವೇಷ್ಟನಗಳಲ್ಲಿ ಜಟಾ, ಮೌಳಿ, ಕಿರೀಟ, ಕರಂಡ, ಶಿರಸ್ತ್ರಕ, ಕುಂಡಲ, ಕೇಶಬಂಧ, ಧಮ್ಮಿಲ್ಲ, ಅಲಕ, ಚೂಡ, ಮುಕುಟ, ಪಟ್ಟ–ಎಂಬ ಹನ್ನೆರಡು ವಿಧಾನಗಳಿವೆ. ಇವುಗಳಲ್ಲಿ ಪಟ್ಟವೆಂಬುದು ಪತ್ರಪಟ್ಟ, ರತ್ನಪಟ್ಟ, ಪುಷ್ಪಪಟ್ಟ ಎಂದು ಮೂರು ಬಗೆಯಾಗಿದೆ. ಪಟ್ಟಭಾಜ್ ವರ್ಗದರಾಜನು ಈ ಕಿರೀಟ ಗಳನ್ನು ಧರಿಸುವ ಅಧಿಕಾರವನ್ನು ಹೊಂದಿದ್ದನು. ಅರಿಕೇಸರಿ ರಾಷ್ಟ್ರಕೂಟರ ಸಾಮಂತ

ರಾಜನಾಗಿದ್ದರೂ ಪುಷ್ಪಪಟ್ಟ ಧಾರಣೆಯನ್ನು ಮಾಡಿಕೊಂಡು ಪಟ್ಟಾಭಿಷಿಕ್ತನಾಗುವ ಅಂತಸ್ತಿಗೆ ಸೇರಿದ್ದನು. ಇತರರಂತೆ ಅವನು ಬರಿ ಸಾಮಂತನಾಗಿರಲಿಲ್ಲ ಎಂಬುದು ಸೂಚಿತವಾಗಿದೆ. ಅರಿಕೇಸರಿ ಎಂಬ ಶಬ್ದದಲ್ಲೂ ನರಸಿಂಹಾವತಾರದ ಸೂಚನೆಯಿದೆ. ದೇವತಾ ವಿಗ್ರಹಗಳಿಗೆ ಪುಷ್ಪಪಟ್ಟವೆಂಬ ಕಿರೀಟವನ್ನು ಶಿಲ್ಪಿಗಳು ಕೆತ್ತುತ್ತಿದ್ದರು.

೨. ಇಲ್ಲಿ ಈಶ್ವರನನ್ನೂ ಅರಿಕೇಸರಿಯನ್ನೂ ಒಟ್ಟಿಗೆ ಸ್ತೋತ್ರ ಮಾಡಿ ಅರಿಕೇಸರಿ ಉದಾರ ಮಹೇಶ್ವರನೆಂಬುದನ್ನು ಪ್ರತಿಪಾದಿಸಿದ್ದಾನೆ ಕವಿ. ಮುಳಿಸು–(ಅರಿಕೇಸರಿಯ) ಕೋಪ, ಲಲಾಟನೇತ್ರ ಶಿಖಿ–(ಶಿವನ) ಹಣೆಗಣ್ಣಿನ ಉರಿ; ಮೆಚ್ಚು–ಮೆಚ್ಚಿಕೆಯು, ವಿನೂತ ರಸಪ್ರಸಾದಂ–ಹೊಗಳಿಕೆಗೆ ಈಡಾದ ಆನಂದದ ಕೊಡುಗೆ; ಉಜ್ವಲ ಜಸಂ–ಕಾಂತಿಯುಕ್ತವಾದ ಕೀರ್ತಿ, ಅಂಗಸಂಗತ ಲಸದ್ಭಸಿತಂ–ದೇಹದಲ್ಲಿ ಸೇರಿಕೊಂಡಿರುವ ಪ್ರಕಾಶಮಾನವಾದ ಭಸ್ಮ; ಪ್ರಭುಶಕ್ತಿ–ರಾಜನ ಶಕ್ತಿತ್ರಯಗಳಲ್ಲಿ ಒಂದಾದ ಪ್ರಭುತ್ವ ಶಕ್ತಿ, ಶಕ್ತಿ–ಶಕ್ತಿ ದೇವತೆ; ನಿರ್ಮಳ ಮಣಿಭೂಷಣಂ–ಶುಭ್ರವಾದ ರತ್ನಾಭರಣ, ಫಣಿ ವಿಭೂಷಣಂ–ಸರ್ಪಾಭರಣವು, ಆಗೆ–ಆಗಿರಲು, ನೆಗೞ್ತೆಯಂ–ಕೀರ್ತಿಯನ್ನು, ಪುದುಂಗೊಳಿಸಿದಂ–ತನ್ನಲ್ಲಿ ಸೇರಿಸಿಕೊಂಡವನು, ಈಶ್ವರಂ–ಶಿವನು (ಮತ್ತು) ನೆಗೞ್ದ–ಪ್ರಸಿದ್ಧನಾದ, ಉದಾರ ಮಹೇಶ್ವರಂ–ಉದಾರ ಮಹೇಶ್ವರನೆಂಬ ಬಿರುದಿದ್ದ ಅರಿಕೇಸರಿ; (ಇಂಥ ಶಿವನೂ ಅರಿಕೇಸರಿಯೂ) ಭೋಗಮಂ–ಸುಖವನ್ನು, ಈಗೆ–ಕೊಡಲಿ.

ಇಲ್ಲಿ ವಿನೂತ ರಸಪ್ರಸಾದಕ್ಕೆ ಪ್ರತಿಯಾಗಿ ವಿನೂತ ವರಪ್ರಸಾದವೆಂದಿರುವ ಪಾಠ ಹೆಚ್ಚು ಉಚಿತ.

೩. ಸೂರ್ಯನನ್ನು ಸ್ತುತಿಸುವ ನೆವದಲ್ಲಿ ಅರಿಕೇಸರಿಗಿದ್ದ ಪ್ರಚಂಡ ಮಾರ್ತಂಡನೆಂಬ ಬಿರುದನ್ನು ಈ ಪದ್ಯ ವರ್ಣಿಸುತ್ತದೆ. ಚಂಡ–ತೀಕ್ಷ್ಣರಾದ, ವಿರೋಧಿ–ಶತ್ರುಗಳ, ಸಾಧನ–ಸೈನ್ಯವೆಂಬ, ತಮಸ್ತಮಂ–ದಟ್ಟವಾದ ಕತ್ತಲೆ, ಓಡೆ–ಓಡಿಹೋಗಲು, ವಿಶಿಷ್ಟ–ವಿಶೇಷ ಗುಣಗಳಿಂದ ಕೂಡಿದ, ಪದ್ಮಿನೀ ಷಂಡಂ–ತಾವರೆಗಳ ಸಮೂಹ ಅಥವಾ (ಅರಿಕೇಸರಿಯ ಪರವಾಗಿ) ಪದ್ಮಿನೀ ಜಾತಿಯ ಸ್ತ್ರೀಯರ ಸಮೂಹವು, ಅರಲ್ದು–ಅರಳಿ, ರಾಗದಿಂ–ಸಂತೋಷದಿಂದ, ಒಜ್ಜಲ್ದಿರೆ–ಪ್ರೀತಿಸಿ ಇರಲು; ಯಾಚಕ ಭೃಂಗಕೋಟಿ–ತಿರುಕರೆಂಬ ದುಂಬಿಗಳ ಸಮೂಹ, ಕೈಕೊಂಡು–ಒಪ್ಪಿ, ನಿರಂತರಂ–ಎಡೆಬಿಡದೆ, ತಗುಳ್ದು–ಹಿಂಬಾಲಿಸಿ, ಕೀರ್ತಿಸೆ–ಹೊಗಳಲು, ಮಿಕ್ಕು–ಮೀರಿ, ಎಸೆವ–ಪ್ರಕಾಶಿಸುವ, ಪ್ರಚಂಡ ಮಾರ್ತಾಂಡಂ–ಅತಿ ತೀಕ್ಷ್ಣನಾದ ಸೂರ್ಯನು, ಪ್ರಚಂಡ ಮಾರ್ತಾಂಡನೆಂಬ ಬಿರುದಿದ್ದ ಅರಿಕೇಸರಿ, ನಿಜವಾಙ್ಮರೀಚಿಯಿಂ–ತನ್ನ ಮಾತೆಂಬ ಕಿರಣದಿಂದ, ಎನ್ನ ಹೃದಯಾಂಬುಜಮಂ–ನನ್ನ ಹೃದಯ ಕಮಲವನ್ನು, ಅಲರ್ಚುಗೆ–ಅರಳಿಸಲಿ.

ಇಲ್ಲಿ 'ತಮಸ್ತಮ'ಕ್ಕೆ ಸೂಚಿತವಾದ ಪಾಠ 'ತಮಶ್ಛಾಯ' (ಪ) ಎಂದರೆ ಕತ್ತಲೆಯ ಮೊತ್ತ; ತಮಸ್ತತಿ ಎಂದೂ ಇರಬಹುದು. 'ಪರಿದರ್ಬಿಸಿ ಪರ್ಬಿದ ಮುಸ್ತ

ಮಸ್ತವೋನ್ಮದ ಕರಿಯೂಥಮಂ ಪೆಳಱಿ ಸೋಱೆ' ಎಂಬ ಪ್ರಯೋಗಾಂತರವೂ ಉಂಟು, ತಮಸ್ತಮಕ್ಕೆ (ಕಾವ್ಯಾವ. ೯೦೨),

೪. ಅರಿಕೇಸರಿಯನ್ನೂ ಮನ್ಮಥನನ್ನೂ ಈ ಪದ್ಯದಲ್ಲಿ ಒಟ್ಟಿಗೆ ಕೀರ್ತಿಸಿ ಅರಿಕೇಸರಿ ಕಾಮನನ್ನು ಮೀರಿಸಿದವನೆಂಬುದು ವರ್ಣಿತವಾಗಿದೆ. ಸಹಜದ-ಜೊತೆಯಲ್ಲೇ ಹುಟ್ಟಿಬಂದ, ಸ್ವಾಭಾವಿಕವಾದ; ಚೆಲ್ವಿನೊಳ್-ಚೆಲುವಿನಲ್ಲಿ; ರತಿಯ ಸೋಲದ ಕೇಳಿಕೆಯೊಳ್-ರತಿದೇವಿಯ ಅಥವಾ ಸಂಭೋಗದ ಒಲುಮೆಯ ಕ್ರೀಡೆಯಲ್ಲಿ; ಪೊದಳ್ದು-ವ್ಯಾಪಿಸಿ, ಸನ್ನಿಹಿತವೆನಿಪ್ಪ-ಚೆನ್ನಾಗಿ ಅಲಂಕೃತವೆನಿಸಿರುವ, ಅಪೂರ್ವ-ಅಪರೂಪವಾದ, ಅರಿದಾದ; ಶುಭಲಕ್ಷಣ ದೇಹದೊಳ್-ಮಂಗಳಕರವಾದ ಲಕ್ಷಣಗಳಿಂದ ಕೂಡಿದ ಮೈಯಲ್ಲಿ; ಒಳ್ಪನಾಳ್ದು-ಒಳ್ಳೆಯತನವನ್ನು ಎಂದರೆ ಸೊಗಸನ್ನು ಹೊಂದಿ; ಸಂದಹಿಕಟಕ ಪ್ರಸಾದದೆ-ಪ್ರಸಿದ್ಧನಾದ ಶಿವನ ಕರುಣೆಯಿಂದ, ಮನೋಜನುಮಂ-ಮನ್ಮಥನನ್ನು ಕೂಡ, ಗೆಲೆವಂದ-ಗೆಲ್ಲಲು ಬಂದವನಾದ, ಸೋಲಿಸಿದವನಾದ; ಸಹಜಮನೋಜನೋಜಂ-ಸ್ವಾಭಾವಿಕವಾದ ಮನ್ಮಥನಿಗೆ ಆಚಾರ್ಯನಾದ ಅರಿಕೇಸರಿ, ಆಗಳುಂ-ಯಾವಾಗಲೂ, ವಿಚಿತ್ರ ರತೋತ್ಸವಂಗಳಂ-ರಮಣೀಯವಾದ ಬಗೆ ಬಗೆಯಾದ ಸುರತೋತ್ಸವಗಳನ್ನು, ಎಮಗೆ-ನಮಗೆ, ಈಗೆ-ಕೊಡಲಿ. ಮನ್ಮಥ ಶರೀರರಹಿತ, ಅರಿಕೇಸರಿ ಶುಭ ಶರೀರವುಳ್ಳವನು; ಮನ್ಮಥ ಶಿವನ ಕೋಪಕ್ಕೆ ಪಾತ್ರನಾದ, ಅರಿಕೇಸರಿ ಅವನ ಪ್ರಸಾದಕ್ಕೆ ಪಾತ್ರನಾದ; ಚೆಲುವಿನಲ್ಲೂ ರತಿ ಕೇಳಿಯಲ್ಲೂ ಅರಿಕೇಸರಿ ಒಳ್ಪನ್ನು ಹೊಂದಿದ್ದಾನೆ. ಆದ್ದರಿಂದ ಅವನು ಮನ್ಮಥನಿಗೆ ಗುರು, ಆಚಾರ್ಯ, ಎಂದರೆ ಅವನನ್ನು ಮೀರಿಸಿದವನು, ಅವನಿಗೆ ಕಲಿಸಿಕೊಡುವವನು. "ಸೋಲ್-ಪರಾಜಯೇ" ಎಂಬ ಧಾತುವಿನ ಭಾವನಾಮ ಸೋಲ ಎಂದರೆ ಸೋತುಹೋಗುವುದು, ವಶವಾಗುವುದು, (ಒಲುಮೆಗೆ) ಸಿಕ್ಕುವುದು; ಕಣ್ಸೋಲ ಎಂದರೆ ಚಕ್ಷುಃಪ್ರೀತಿ, ಕಣ್ಬೇಟ; ಇಲ್ಲಿ ಸೋಲ ಶಬ್ದವನ್ನು ನೋಡಬಹುದು; "ಕಣ್ಸೋಲ್ತಸೆನಲೊಲ್ದಪಾಂಗು."; ಉಪಾಧ್ಯಾಯ > ಒವಜ್ಝ > ಒವಜ > ಓಜ.

೫. ಈ ಪದ್ಯದಲ್ಲಿ ಸರಸ್ವತಿ ಅರಿಕೇಸರಿಗೆ ಒಳ್ಳೆಯ ಬುದ್ಧಿಯನ್ನು ಕೊಡಲಿ ಎಂದು ಪ್ರಾರ್ಥಿಸಿದೆ, ವಾಙ್ಮಯದ ಸ್ವರೂಪವನ್ನು ತಿಳಿಸಿದೆ, ಅದಕ್ಕೆ ತಾಯಿಯಾದ ಸರಸ್ವತಿಯ ಸ್ಮರಣೆಯಿದೆ. ಕ್ಷಯಃಮಣಮಿಲ್ಲ-ವಾಙ್ಮಯಕ್ಕೆ ಸ್ವಲ್ಪವಾದರೂ ವಿನಾಶವಿಲ್ಲ; ಕೇಳ್ದು ಕಡೆಗಂಡವನಾವನುಮಿಲ್ಲೆನಲ್-ಕೇಳಿ ಅದರ ಕೊನೆಯನ್ನು ಎಂದರೆ ಪಾರವನ್ನು ತಿಳಿದವನು ಯಾವನೂ ಇಲ್ಲವೆನ್ನಲು; ತದಕ್ಷಯ ನಿಧಿತಾನೆ-ತನಗೆ ತಾನೇ ಅಕ್ಷಯವಾದ ನಿಧಿಯಾಗಿವೆ; ತನ್ನನೊಸೆದೋಲಗಿಸಂಗೆ-ತನ್ನನ್ನು ಪ್ರೀತಿಸಿ ಸೇವಿಸುವವನಿಗೆ, ಅರಿದಿಲ್ಲೆನಿಪ್ಪ-ಅಸಾಧ್ಯವಾದುದು ಯಾವುದೂ ಇಲ್ಲವೆನ್ನಿಸುವ, ವಾಙ್ಮಯಮನಿತರ್ಕಂ-ಎಲ್ಲ ಸಾಹಿತ್ಯಕ್ಕೂ, ಅಂಬಿಕೆ-ತಾಯಿಯಾದ ಸರಸ್ವತಿ, ಮನ್ಮುಖ ಪದ್ಮರಂಗದೇಳಿಗೆಯು ನೆಡೆಗೊಂಡು-ನನ್ನ ಕಮಲದಂತಿರುವ ಮುಖವೆಂಬ ರಂಗಸ್ಥಳದ ಏಳಿಗೆಯನ್ನು ಒಳಕೊಂಡು, ಅರಿಗಂಗೆ-ಅರಿಕೇಸರಿಗೆ, ವಿಶುದ್ಧ ಬುದ್ಧಿಯಂ-ನಿರ್ಮಲವಾದ ಬುದ್ಧಿಯನ್ನು

ಕೊಂಡುಕೊನೆದು–ಹರ್ಷಿಸಿ, ಸಂತೋಷವನ್ನು ಹೊಂದಿ, ಹೊಗಳಿ; ಈಗೆ–ಕೊಡಲಿ. ಎಲ್ಲ ಸಭಾಸದರೆದುರಿನಲ್ಲಿ ಕವಿ ತನ್ನ ಪೋಷಕನಾದ ರಾಜನಿಗೆ ಒಳ್ಳೆಯ ಬುದ್ಧಿ ಯುಂಟಾಗಲಿ ಎಂದು ಪ್ರಾರ್ಥಿಸುವುದನ್ನು ನೋಡಿದರೆ ಆತನಿಗೆ ತನ್ನ ದೊರೆಯಲ್ಲಿದ್ದ ಸ್ನೇಹ ವಿಶ್ವಾಸಗಳೂ ಸಲಿಗೆಯೂ ದಿಟ್ಟತನವೂ ತಿಳಿಯುತ್ತವೆ.

೬. ದುರ್ಗಾದೇವಿಯನ್ನು ಈ ಪದ್ಯದಲ್ಲಿ ಕವಿ ಸ್ತೋತ್ರಮಾಡಿದ್ದಾನೆ. ತಿಸುಳ ದೊಳುಚ್ಚಳಿಪ್ಪ–ತ್ರಿಶೂಲದಲ್ಲಿ ಮೇಲಕ್ಕೆ ಚಿಮ್ಮುವ, ಪೊಸನೆತ್ತರೆ–ಹೊಸದಾದ ರಕ್ತವೆ, ಕೆಂದಳಿರಾಗೆ–ಕೆಂಪು ಚಿಗುರಾಗಲು, ಕಣ್ಗೆ–ಕಣ್ಣುಗಳಿಗೆ, ಅಗುರ್ವಿಸುವಿನಂ–ಭಯ ವನ್ನುಂಟುಮಾಡುತ್ತಿರಲು, ಒಕ್ಕು–ಹೊರಕ್ಕೆಸುರಿದು, ನೇಲ್ವ–ನೇತಾಡುವ, ಕರುಳೋ ಳಿಯೆ–ಕರುಳುಗಳ ಸಾಲೆ, ಬಾಲಮೃಣಾಳಮಾಗೆ–ಎಳೆಯ ತಾವರೆದಂಟಾಗಲು, ಮಿಕ್ಕಸುರರ–ಹದ್ದುಮೀರಿದ ರಾಕ್ಷಸರ, ಮೆಯ್ಯೊಳಾದ–ದೇಹದಲ್ಲಿ ಉಂಟಾದ, ವಿರಹಾಗ್ನಿಯುಂ–ವಿರಹವೆಂಬ ಎಂದರೆ ಅಗಲಿಕೆಯೆಂಬ ಅಗ್ನಿಯನ್ನು, ಆಱಿಸುತೆ– ನಂದಿಸುತ್ತ, ಇಂತೆ–ಹೀಗೆಯೇ, ತನ್ನ ಕೂರಸಿಯೊಳ್–ತನ್ನ ಹರಿತವಾದ ಕತ್ತಿಯಲ್ಲಿ, ಅಡುರ್ತು–ಸಮೀಪಿಸಿ, ಮೇಲೆ ಬಿದ್ದು, ಕೊಂದಸಿಯಳ್–ಕೊಂದ ಕೃಶಾಂಗಿಯಾದ, ದುರ್ಗಿ, ಪಡೆಮೆಚ್ಚೆಗಂಡನಾ–ಪಡೆಮೆಚ್ಚೆಗಂಡ ಎಂಬ ಬಿರುದಿದ್ದ ಅರಿಕೇಸರಿಯ, ಅಸಿಯೊಳ್–ಕತ್ತಿಯಲ್ಲಿ, ಇರ್ಕೆ–ನೆಲಸಿ ಇರಲಿ.

ಕಾಮಸಂತಾಪವನ್ನು ಶಮನಗೊಳಿಸುವುದಕ್ಕಾಗಿ ಚಿಗುರನ್ನೂ ತಾವರೆಯ ದಂಟನ್ನೂ ವಿರಹಿಗಳು ಉಪಯೋಗಿಸುವುದು ಪದ್ಧತಿ. ಇಲ್ಲಿ ಆದಿಶಕ್ತಿಸ್ವರೂಪಳಾದ ಕಾಳಿಯನ್ನು, ತ್ರಿಪುರಸುಂದರಿಯನ್ನು ಮೋಹಿಸಿ ಬಂದ ಶುಂಭನಿಶುಂಭಾದಿ ಉದ್ಧತ ರಾಕ್ಷಸರ ವಿರಹಾಗ್ನಿಯನ್ನು ಆರಿಸಲು ಅವರ ಬಿಸಿನೆತ್ತರನ್ನೂ ಕರುಳಮಾಲೆಯನ್ನೂ ಬಳಸಿತೆಂದು ಹೇಳಿದೆ. ಕೊನೆಗೆ ಕಾಳಿ ಅವರನ್ನು ಸಂಹರಿಸಿದಳು. ಆ ದೇವತೆ ಅರಿಕೇಸರಿಯ ಕತ್ತಿಯಲ್ಲಿ ನೆಲಸಿರಲಿ ಎಂದು ಕವಿಯ ಆಶಯ. ಅಡುರ್ತು < ಧಾ. ಅಡುಱು = ಅಡ್ + ಉಱು—ಹತ್ತಿರ ಇರು ; ಸಮೀಪವಾಗಿರು ; ಪಡೆಮೆಚ್ಚೆಗಂಡ– ಸೈನ್ಯವು ಮೆಚ್ಚುವ ಶೂರ.

೭. ಇಲ್ಲಿ ವಿನಾಯಕನ ಸ್ತುತಿಯಿದೆ. ಅರಿಕೇಸರಿ ತನಗಿಂತಲೂ ಉತ್ತಮನೆಂದು ವಿನಾಯಕ ಅವನನ್ನು ಮೆಚ್ಚಿದನಂತೆ. ಎನ್ನದಾನಂ–ನನ್ನ ಮದದ ನೀರು, ಇದಾಗಳುಂ –ಇದು ಯಾವಾಗಲೂ, ಮಧುಪಾಶ್ರಯಂ–ದುಂಬಿಗಳಿಗೆ ಅವಲಂಬನವಾದದ್ದು, ಧರೆಗೆ–ಲೋಕಕ್ಕೆ, ಅವ್ಯವಚ್ಛಿನ್ನ–ಸಂತತವಾದ, ದಾನಂ–ಅರಿಕೇಸರಿ ಮಾಡುವ ದಾನಗಳು, ಇದಾಗಳುಂ–ಇದು ಯಾವಾಗಲೂ, ವಿಬುಧಾಶ್ರಯಂ–ಪಂಡಿತರಿಗೆ ಅವ ಲಂಬನವಾದದ್ದು, ಈ ಪತಿ–ಈ ರಾಜನಾದ ಅರಿಕೇಸರಿ, ಎನ್ನಂ–ನನ್ನನ್ನು, ನಿಜೋನ್ನತಿ ಯಿಂದಂ–ತನ್ನ ಹಿರಿಮೆಯಿಂದ, ಗೆಲಿವಂದಂ–ಗೆದ್ದನು ಎಂದು ಮೆಚ್ಚಿ, ವಿನಾಯಕಂ– ಗಜಾನನನು, ಗುಣಾರ್ಣವ ಭೂಪನಾ–ಗುಣಾರ್ಣವನೆಂಬ ಬಿರುದಿದ್ದ ಅರಿಕೇಸರಿ ರಾಜನ, ಕಬ್ಬಮಂ–ಅವನ ಪ್ರಶಂಸಾರೂಪವಾದ ಈ ಕಾವ್ಯವನ್ನು, ನಯದಿಂ ತಾಂ

ನಿಮಿರ್ಚುಗೆ-ತಾನು ನಯವಾಗಿ ನೇರವಾಗಿ ವಿಸ್ತರಿಸಲಿ. "ನಿಮಿರ್ಚು-ಪ್ರಸಾರಣೇ" ; ಗೆಲೆವರ್–ಗೆಲ್ಲಲು ಬಾ ಎಂದರೆ ಗೆಲ್ಲು.

೮. ಕಾವ್ಯ ಬಂಧವು ಹೇಗಿರಬೇಕೆಂಬುದನ್ನು ಕವಿ ಈ ಪದ್ಯದಲ್ಲಿ ಹೇಳುತ್ತಾನೆ. ಬಗೆ ಪೊಸತಪ್ಪುದು–ಆಲೋಚನೆ ಅಥವಾ ಚಿಂತನೆ ಹೊಸದಾಗಿರಬೇಕು ; ಆಗಿ–ಹಾಗೆ ಹೊಸದಾಗಿ, ಮೃದು ಬಂಧದೊಳೊಂದುವುದು–ಮೃದುವಾದ ಶಬ್ದಗಳ ಜೋಡಣೆಯಲ್ಲಿ ಸೇರುವುದು ; ಒಂದಿ–ಹಾಗೆ ಸೇರಿ, ದೇಸಿಯೊಳ್–ದೇಸಿ ಶೈಲಿಯಲ್ಲಿ ಎಂದರೆ ಅಚ್ಚ ಗನ್ನಡ ಶೈಲಿಯಲ್ಲಿ, ಪುಗುವುದು–ಪ್ರವೇಶಿಸಬೇಕು, ಪೊಕ್ಕು–ಹಾಗೆ ಪ್ರವೇಶಿಸಿ, ಮಾರ್ಗ ದೊಳ್–ಮಾರ್ಗೀಶೈಲಿಯಲ್ಲಿಯೆ ಎಂದರೆ ಸಂಸ್ಕೃತ ಶೈಲಿಯಲ್ಲಿಯೇ, ತಳ್ವುದು–ಸೇರಿ ಹೊಂದಿಕೊಳ್ಳಬೇಕು, ತಳ್ತೊಡೆ–ಹೀಗೆ ಸೇರಿದರೆ, ಕಾವ್ಯಬಂಧಂ–ಕಾವ್ಯರಚನೆ, ಸುಗ್ಗಿ ಯೊಳ್–ಸುಗ್ಗಿಯಕಾಲದಲ್ಲಿ, ವಸಂತ ಸಮಯದಲ್ಲಿ ; ಎಳಮಾವು-ಎಳೆಯ ಮಾವಿನ ಮರವು, ಕೆಂದಳಿರ ಪೂವಿನ ಬಿಣ್ಪೊಜಿಯಿಂ-ಕೆಂಪಾದ ಚಿಗುರಿನ ಹೂವಿನ ಬಲು ಭಾರ ದಿಂದ, ಬಟಿಲ್ದು–ಜೋತುಬಿದ್ದು, ತುಂಬಿಗಳಿನೆ ತುಂಬಿ–ದುಂಬಿಗಳಿಂದ ಆವೃತವಾಗಿ, ಕೋಗಿಲೆಯೆ ಬಗ್ಗಿಸೆ- ಕೋಗಿಲೆಯೇ ಕೂಗುತ್ತಿರಲು, ಒಪ್ಪುವಂತೆವೋಲ್-ಸೊಗಸಾಗಿ ಕಾಣುವಹಾಗೆ, ಒಪ್ಪುಗುಂ–ಶೋಭಿಸುತ್ತದೆ. ಕಾವ್ಯ ಬಂಧವು ದೇಶೀಮಾರ್ಗೀಶೈಲಿಗಳ ಹುದುವಾದ ಸಂಮಿಶ್ರಣವಾಗಿದ್ದರೆ ಚೆಲುವೆಂದು ಕವಿಯ ಆಶಯ. ಇಂಥ ಶೈಲಿಗೆ ಈ ಪದ್ಯವೇ ನಿದರ್ಶನ. ತಳ್ವುದು < ಧಾ. ತಳ್_ಧರಿಸು. ಹೊಂದು ; "ಶ್ರೀ ತಳ್ತುರ ದೊಳ್ ಕೌಸ್ತುಭ ಜಾತದ್ಯುತಿ ಬಳಸಿ ಕಾಂಡಪಟದಂತಿರೆ "–ಇದು ಅನ್ಯಪ್ರಯೋಗ (ಕವಿರಾ. ೧-೧).

೯. ತನ ಪೋಷಕನಿಗೆ ಎಂಥ ಕಾವ್ಯವನ್ನು ಅರ್ಪಿಸಬೇಕೆಂಬುದನ್ನು ಕವಿ ವರ್ಣಿಸುತ್ತಾನೆ. ಆ ಸಕಳಾರ್ಥಸಂಯುತಂ–ಪ್ರಸಿದ್ಧವಾದ ಎಲ್ಲಾ ಅರ್ಥಗಳಿಂದ ಕೂಡಿದ, ಅಳಂಕೃತಿಯುಕ್ತಂ–ಅಲಂಕಾರಗಳಿಂದ ಸೇರಿರುವ, ಉದಾತ್ತವೃತ್ತಿ ವಿನ್ಯಾಸಂ–ಉನ್ನತ ವಾದ ವೃತ್ತಿಗಳ ಇರವಿನಿಂದ ಕೂಡಿದ, ಅನೇಕ ಲಕ್ಷಣ ಗುಣ ಪ್ರಭವಂ–ಅನೇಕ ಕಾವ್ಯಲಕ್ಷಣ ಗುಣಗಳಿಗೆ ಜನ್ಮಸ್ಥಾನವಾಗಿ ಇರುವ, ಮೃದುಪಾದಮಾದ–ಮೃದು ವಾದ ಪದ್ಯ ಪಾದಗಳನ್ನುಳ್ಳ, ವಾಕ್ ಶ್ರೀ ಸುಭಗಂ-ವಾಕ್ಸಂಪತ್ತಿಯಿಂದ ಸುಂದರ ವಾದ, ಕಳಾಕಲಿತಮೆಂಬ–ಕಲಾನ್ವಿತವೆನಿಸಿಕೊಳ್ಳುವ, ಸೆಗಟಿಯನಾಳ್ದ-ಪ್ರಸಿದ್ಧಿ ಯನ್ನು ಪಡೆದಿರುವ, ಕಬ್ಬಮುಂ–ಕಾವ್ಯವನ್ನೂ, ಕೂಸುಮಂ–ಹೆಣ್ಣುಮಗುವನ್ನೂ, ಅರಿಕೇಸರಿಗೆ, ಈವುದು–ಅರ್ಪಿಸುವುದು, ಅಲ್ಲದ–ಅರಿಕೇಸರಿಯಲ್ಲದ, ವಸ್ತುಗೀವುದೆ– ವಸ್ತುವಿಗೆ ಎಂದರೆ ವ್ಯಕ್ತಿಗೆ, ಈವುದೇ-ಕೊಡುವುದೇ ? ಎಂದರೆ ಕೊಡಬಾರದು. ಅರಿಕೇ ಸರಿಯಂಥ ಉದಾತ್ತ ವ್ಯಕ್ತಿಗೆ ಉತ್ತಮ ಕಾವ್ಯವನ್ನೂ ಉತ್ತಮ ಕನ್ಯೆಯನ್ನೂ ಅರ್ಪಿಸ ಬೇಕು. ಇಲ್ಲಿ ಕಾವ್ಯವನ್ನು ಕನ್ನಿಕೆಗೆ ಹೋಲಿಸಿದೆ. ಇವೆರಡರದೃಷ್ಟಿಗಳಿಂದ ಈ ಪದ್ಯಕ್ಕೆ ಅರ್ಥವಿಸಬೇಕು. ಕನ್ನಿಕೆಯ ಪರವಾಗಿ : ಅರ್ಥ–ಐಶ್ವರ್ಯ ; ವೃತ್ತಿ–ನಡವಳಿಕೆ ; ಪಾದ ಕಾಲು, ಚರಣ ; ಉಳಿದ ವಿಶೇಷಣಗಳೂ ಹೀಗೆಯೆ. ವೃತ್ತಿ–ಕಾವ್ಯದ ದೃಷ್ಟಿಯಿಂದ

ಅಭಿಧಾ, ಲಕ್ಷಣಾ, ವ್ಯಂಜನಾ ಎಂಬ ಮೂರು ಶಬ್ದ ಶಕ್ತಿಗಳಾಗಬಹುದು ; ಅಥವಾ ಕೈಶಿಕೀ, ಭಾರತೀ, ಸಾತ್ವತೀ, ಆರಭಟೀ–ಎಂಬ ನಾಲ್ಕು ವೃತ್ತಿಗಳಾಗಬಹುದು. ಇವು ಬೇರೆ ಬೇರೆ ಶೈಲಿಗಳು : ಶೃಂಗಾರೇ ಕೈಶಿಕೀ ವೀರೇ ಸಾತ್ವತ್ಯಾರಭಟೀ ಪುನಃ | ರಸೇ ರೌದ್ರೇ ಚ ಬೀಭತ್ಸೇ ವೃತ್ತಿಃ ಸರ್ವತ್ರ ಭಾರತೀ ‖ ಚತಸ್ರೋ ವೃತ್ತಯೋಃ ಪ್ರೋಕ್ತಾಃ ಸರ್ವ ನಾಟ್ಯಸ್ಯ ಮಾತೃಕಾಃ | ಕಬ್ಬಮುಂ ಕೂಸುಮುಂ ಎಂಬಲ್ಲಿ ಉಂ ಎಂಬ ಸಮುಚ್ಚಯವನ್ನು ಮೊದಲಸದಕ್ಕೆ ಅಧ್ಯಾಹಾರಮಾಡಿಕೊಳ್ಳಬೇಕು ; ಕಬ್ಬಮುಮಂ ಕೂಸುಮುಂ ಎಂದಾಗುತ್ತದೆ. ಈ ಪದ್ಯ ಕನ್ನಿಕೆಯಂತೆ ರಮಣೀಯವಾಗಿದೆ.

೧೦. ಕವಿ ತನಗಿದ್ದ ಕವಿತಾಗುಣಾರ್ಣವ ಎಂಬ ಬಿರುದನ್ನೂ ತನ್ನ ಪೋಷಕನಿಗಿದ್ದ ಗುಣಾರ್ಣವ ಎಂಬ ಬಿರುದನ್ನೂ ಸಮರ್ಥಿಸಿಕೊಳ್ಳುತ್ತಾನೆ. ಕವಿಗಳ–ಹೆಸರಿಗೆ ಮಾತ್ರ ಕವಿ ಎನ್ನಿಸಿಕೊಂಡವರ, ನಾಮಧಾರಕ ನರಾಧಿಪರ–ರಾಜ ಎಂಬ ಬರಿ ಹೆಸರನ್ನು ಹೊತ್ತವರ, ಓಳಿಯೊಳ್–ಸಾಲಿನಲ್ಲಿ, ಈತನ್–ಇವನು, ಒಳ್ಳಿದಂ ಕವಿ–ಉತ್ಕೃಷ್ಟನಾದ ಕವಿ, ನೃಪನೀತಂ–ಈ ರಾಜ, ಒಳ್ಳಿದನೆನಲ್–ಉತ್ತಮನು ಎಂದು ಹೇಳುವುದು, ದೊರೆಯಲ್ತು–ಯೋಗ್ಯವಲ್ಲ ; ನೆಗಱ್ತೆವೆತ್ತ- ಪ್ರಸಿದ್ಧರಾದ, ಸತ್ಕವಿಗಳ–ಒಳ್ಳೆಯ ಕವಿಗಳ, ಮತ್ತು, ಷೋಡಶಾವನಿಪರ–ಕೀರ್ತಿಶಾಲಿಗಳಾದ ಮರುತ ಸುಹೋತ್ರ ಮುಂತಾದ ಹದಿನಾರು ಮಹಾರಾಜರ, ಓಳಿಯೊಳಂ–ಸಾಲಿನಲ್ಲಿಯೂ, ಕವಿತಾಗುಣಾರ್ಣವಂ–ಕಾವ್ಯಗುಣಗಳಿಗೆ ಕಡಲಾದ ಪಂಪನು, ಕವಿತೆಯೊಳಗ್ಗಳಂ–ಕಾವ್ಯರಚನೆಯಲ್ಲಿ ಶ್ರೇಷ್ಠನಾದವನು ; ಈ ಗುಣಾರ್ಣವಂ–ಗುಣಗಳಿಗೆ ಸಮುದ್ರನಾದ ಈ ಅರಿಕೇಸರಿ, ಗುಣದೊಳ್–ಸದ್ಗುಣಗಳಲ್ಲಿ, ಎಲ್ಲಿಯುಂ–ಯಾವೆಡೆಯಲ್ಲೂ, ಅಗ್ಗಳಂ–ಶ್ರೇಷ್ಠನಾದವನು. ಕವಿಗಳ ಪಟ್ಟಿಯಲ್ಲಿ ಇವನು ಒಳ್ಳೆಯ ಕವಿ ಎಂದರೆ ಏನು ಬಂತು ; ಹಾಗೆಯೇ ರಾಜರ ಪಟ್ಟಿಯಲ್ಲಿ ಇವನು ಒಳ್ಳೆಯವನು ಎನಿಸಿಕೊಂಡರೆ ಏನು ? ಸತ್ಕವಿಗಳ ಪರಂಪರೆಯಲ್ಲೂ ಇವನು ಉತ್ತಮ, ಷೋಡಶ ರಾಜರ ಶ್ರೇಣಿಯಲ್ಲೂ ಇವನು ಶ್ರೇಷ್ಠ ಎನ್ನಿಸಿಕೊಂಡರೆ ಅದಕ್ಕಿಂತ ಮಿಗಿಲಾದದ್ದು ಏನಿದೆ ! ಇದು ಕವಿಯ ಆಶಯ. ಇಲ್ಲಿ 'ನಾಮಧಾರಕ' ಎಂಬ ಶಬ್ದ 'ಕವಿಗಳ' ಮತ್ತು 'ನರಾಧಿಪರ' ನಡುವೆ ದೇಹಲೀ ದೀಪ ನ್ಯಾಯದಂತೆ ಬಂದಿದೆ ; ಎರಡಕ್ಕೂ ಅನ್ವಯಿಸುತ್ತದೆ,

೧೧. ತನ್ನ ಕಾವ್ಯರಚನೆಗೆ ಕಾರಣವನ್ನು ಕವಿ ಈ ಪದ್ಯದಲ್ಲಿ ನಿರೂಪಿಸುತ್ತಾನೆ. ಕತೆ ಪಿರಿದಾದೊಡಂ–ಕತೆಯು ಹಿರಿದಾಗಿದ್ದರೂ, ಕತೆಯ ಮೆಯ್ ಕಿಡಲೀಯದೆ-ಕತೆಯ ವಸ್ತುವಿನ್ಯಾಸವು ನಷ್ಟವಾಗದಂತೆ, ಮುಂ–ಮೊದಲು ಎಂದರೆ ಕಳೆದ ಕಾಲದಲ್ಲಿ, ಸಮಸ್ತ ಭಾರತಮಂ-ಸಮಗ್ರವಾದ ಭಾರತ ಕಥೆಯನ್ನು, ಅಪೂರ್ವಮಾಗೆ- ಹಿಂದಿಲ್ಲ ಮುಂದಿನ್ನಿಲ್ಲ ಎಂಬಂತೆ, ಸಲೆ–ಚೆನ್ನಾಗಿ; ಪೇೞ್ದ ಕವೀಶ್ವರರಿಲ್ಲ–ಹೇಳಿದ ಕವಿ ಶ್ರೇಷ್ಠರು ಯಾರೂ ಇಲ್ಲ ; ವರ್ಣಕಂ ಕತೆಯೊಳೊಡಂಬಡಂ ಪಡೆಯೆ–ವರ್ಣನೆಯ ಅಂಶಗಳು ಎಂದರೆ ಅಷ್ಟಾದಶವರ್ಣನೆಗಳು ಕಥಾಂಶಗಳೊಡನೆ ಹುದುವಾಗಿ ಬರುವಂತೆ, ಪೇೞ್ವೊಡೆ– ಹೇಳುವುದಾದರೆ, ಪಂಪನೆ ಪೇೞ್ಗುಂ–ಪಂಪನೇ ಹೇಳಲು ಶಕ್ತನು, ಎಂದು, ಪಂಡಿತರೆ,

ತಗುಳ್ದು–ಮೇಲಿಂದಮೇಲೆ, ಅನುಸ್ಯೂತವಾಗಿ ; ಬಿಚ್ಚಳಿಸೆ–ವಿಸ್ತರಿಸಲು ಎಂದರೆ ವಿಸ್ತಾರವಾಗಿ ಹೊಗಳಲು, ಈ ಪ್ರಬಂಧಮಂ–ಈ ಶ್ರೇಷ್ಠಕಾವ್ಯವನ್ನು, ಪೇೞಲೊಡರ್ಚಿದೆಂ ಹೇಳಲು ತೊಡಗಿದೆನು. ಮಹಾಭಾರತದ ಕಥೆಯು ವಿಸ್ತಾರವಾಗಿದ್ದರೂ ಯಾವ ಕಥಾಂಶವೂ ಬಿಟ್ಟುಹೋಗದಂತೆ ಅದನ್ನು ಸಂಕ್ಷೇಪಿಸಿ ಮಹಾಕಾವ್ಯಾಂಗಗಳಾದ ಅಷ್ಟಾದಶವರ್ಣನೆಗಳನ್ನು ಅದರಲ್ಲಿ ಒಂದುಗೂಡಿಸಿ ಕಾವ್ಯರಚನೆ ಮಾಡುತ್ತೇನೆಂದು ಕವಿಯ ಪ್ರತಿಜ್ಞೆ. ಇದಕ್ಕೆ ಪಂಡಿತರ ಪ್ರೋತ್ಸಾಹ ಆತನಿಗೆ ದೊರೆಯಿತು. 'ಸಮಸ್ತ ಭಾರತ' ಎಂಬ ಪದ ಚಿಂತನೀಯ. ಸಂಪೂರ್ಣವಾದ ಭಾರತ ಕಥೆ ಎಂದು ಇದರ ಸಾಮಾನ್ಯಾರ್ಥವಾಗಿದ್ದರೂ ಕೆಲವರು ವಿದ್ವಾಂಸರು ಕವಿ ತನ್ನ ಸಮಕಾಲಿಕ ಐತಿಹಾಸಿಕ ಸಂಗತಿಗಳನ್ನು ಪ್ರಾಚೀನ ಕಥೆಯೊಳಕ್ಕೆ ಸಮಾವೇಶಗೊಳಿಸಿರುವುದರಿಂದ ಇದನ್ನು 'ಸಮಸ್ತ ಭಾರತ'ವೆಂದು ಕರೆದಿದ್ದಾನೆಂದು ಅಭಿಪ್ರಾಯಪಡುತ್ತಾರೆ.

೧೨. ಲಲಿತಪದಂ–ಸುಂದರವಾದ ಶಬ್ದಗಳು, ಪ್ರಸನ್ನ ಕವಿತಾಗುಣಂ–ನಿರ್ಮಲವಾದ ಕಾವ್ಯಗುಣಗಳು, ಇಲ್ಲದೆ, ಪೂಣ್ದುಪೇೞ್ದ–ಪ್ರತಿಜ್ಞೆಮಾಡಿ ಹೇಳಿದ ಎಂದರೆ ಹಠತೊಟ್ಟು ರಚಿಸಿದ, ಜೆಳ್ಳಗಳ ಕೃತಿಬಂಧ [ಮೇಂ]–ಅಜ್ಞರ ಕಾವ್ಯರಚನೆಯೇನು ? ಅದು, ಬರೆಪಕಾಜರ–ಲಿಪಿಕಾರರ, ಕೈಗಳ ಕೇಡು–ಕೈಗಳಿಗೆ ಹಾನಿ, ನುಣ್ಣನಪ್ಪಳಕದ ಕೇಡು–ನಯವಾಗಿರುವ ಬರಿಯೋಲೆಗಳಿಗೆ ಹಾನಿ, ಪೇೞಿಸಿದೊಡೆ–ಹೇಳಿಸಿದರೆ, ಓದಿಸಿದರೆ, ಅರ್ಥದ ಕೇಡು–ಅರ್ಥಕ್ಕೆ ಹಾನಿ, ಎನೆ–ಎನ್ನಲು, ಪೇೞ್ದು–ಕಾವ್ಯವನ್ನು ಹೇಳಿ, ಬೀಗಿ–ಉಬ್ಬಿ, ಪೊಟ್ಟಳಿಸಿ–ಗರ್ವಿಸಿ, ನೆಗೞ್ತೆಗೆ–ಕೀರ್ತಿಗೆ, ಆಟಿಸುವ–ಬಯಸುವ, ದುಷ್ಕವಿಯುಂ–ಕ್ಷುದ್ರಕವಿಯೂ, ಕವಿಯೆಂಬ ಲೆಕ್ಕಮೇ–ಕವಿಯೆಂದು ಗಣನೀಯನೇ ? ಅಲ್ಲವೆಂದು ಅರ್ಥ. ಸಂಪ್ರದಾಯಾನುಸಾರವಾಗಿ ಕವಿ ಈ ಪದ್ಯದಲ್ಲಿ ದುಷ್ಕವಿಗಳನ್ನು ತೆಗಳಿದ್ದಾನೆ. ಅಳಕ < ಅಲೇಖ = ಬರೆಯದಿರುವ ಪತ್ರ, ಓಲೆಗರಿ ; ಪೊಟ್ಟಳಿಸು– "ಇದಿರ್ಚುವ ಬೀರರನಾಂಪೆವೆಂದು ಪೊಟ್ಟಳಿಸುವ ಬೀರರಂ ನೆಱೆಯೆ ಕಾಣೆವು." (ಆತಕೂರ್ ಶಾಸನ, ೧೬ನೆಯ ಸಾಲು) ; "ವನಿತಾನೀಕದ ಮುಂದೆ ಪೊಟ್ಟಳಿಸಿ" (ಚಿತ್ರದುರ್ಗ ೩೪)

೧೩. ಕವಿ ಸ್ವಾಹಂಕಾರ ಖಂಡನೆಯನ್ನು ಈ ಪದ್ಯದಲ್ಲಿ ಮಾಡಿಕೊಂಡಿದ್ದಾನೆ. ವ್ಯಾಸಮುನೀಂದ್ರರುಂದ್ರ ವಚನಾಮೃತವಾರ್ಧಿಯಂ–ವ್ಯಾಸಮಹರ್ಷಿಗಳ ವಿಸ್ತಾರವಾದ ಕಾವ್ಯವೆಂಬ ಅಮೃತಸಾಗರವನ್ನು, ಈಸುವೆನ್–ಈಜುತ್ತೇನೆ, ಆದರೆ, ಕವಿವ್ಯಾಸನೆನ್ ಎಂಬ–ನಾನು ಕವಿವ್ಯಾಸ ಎಂಬ, ಗರ್ವಮೆನಗಿಲ್ಲ–ಅಹಂಕಾರ ನನಗಿಲ್ಲ ; ಗುಣಾರ್ಣವನೊಳ್ಪು–ಅರಿಕೆಸರಿಯ ಒಳ್ಳೆಯತನ ಎಂದರೆ ಸಜ್ಜನತ್ವವು, ಮನ್ಮನೋವಾಸಮನೆಯ್ದೆ–ನನ್ನ ಮನೋಮಂದಿರವನ್ನು ಹೊಗಲು, ಪೇೞ್ವೆನ್–ಕಾವ್ಯವನ್ನು ಹೇಳುತ್ತೇನೆ, ಅದಲ್ಲದೆ–ಅದಲ್ಲದಿರಲು, ಗರ್ವಮೆ ದೋಷಂ–ಅಹಂಕಾರವೇ ಕಳಂಕವಾಗುತ್ತದೆ, ಅೞ್ತಿಗಂ–ಪ್ರೀತಿಗೂ, ದೋಷಮೆ–ದೋಷವುಂಟೆ, ಎಂದರೆ ಅರಿಕೇಸರಿಯ ಮೇಲಣ ನನ್ನ ಪ್ರೀತಿ ಕಾವ್ಯವನ್ನು ಹೇಳಿಸಿದೆ, ಇದು ದೋಷವಲ್ಲ ಎಂದು; ಕಾಣೆಂ ನಾನು ಕಾಣೆ,

ಎನ್ನ ಜಾಣ್ಮೆ? ವಿಮಾಟ್ಕಿಯೆ-ನನಗೆ ತಿಳಿದ ರೀತಿಯಿಂದ, ಪೇೞ್ವೆಂ-ಹೇಳುತ್ತೇನೆ, ಇದಾವ ದೋಷಮೋ-ಇದು ಯಾವ ದೋಷವೊ? ಎಂದರೆ ಇದು ಯಾವ ದೋಷವೂ ಆಗಿಲ್ಲ ಎಂದರ್ಥ. ಇಲ್ಲಿ 'ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ' ಎಂಬ ಮಾತು ಗಮನಾರ್ಹ. ಮೇಲಿನ ಅರ್ಥ ಅದರ ಸಹಜವಾದ ತಾತ್ಪರ್ಯ. ಆದರೆ ಪಂಪನಿಗಿಂತ ಹಿಂದೆ ಇದ್ದ ಕವಿಯೊಬ್ಬ ಒಂದು ಭಾರತವನ್ನು ಬರೆದು ತನ್ನನ್ನು ಕವಿವ್ಯಾಸನೆಂದೇ ಕರೆದು ಕೊಂಡಿದ್ದನೆಂದೂ ಅಂಥ ಗರ್ವ ನನಗಿಲ್ಲ ಎಂದು ಪಂಪನು ಹೇಳಿದ್ದಾನೆಂದೂ ರಾ. ನರಸಿಂಹಾಚಾರ್ಯರ ಅಭಿಪ್ರಾಯ. ಮಹಾಭಾರತ ಕಥೆಗೆ ಸಂಬಂಧಪಟ್ಟ ಅನೇಕ ಪದ್ಯಗಳು, ಪಂಪ ಭಾರತದಲ್ಲಿಲ್ಲದಿರುವುವು, ನಾಗವರ್ಮನ ಕಾವ್ಯಾವಲೋಕನದಲ್ಲಿ ಉದಾಹೃತವಾಗಿರುವುದು ಈ ಅಭಿಪ್ರಾಯಕ್ಕೆ ಪೋಷಕವೆಂದು ಹೇಳಬಹುದು.

೧೪. ಅರಿಕೇಸರಿಯನ್ನು ಅರ್ಜುನನೊಡನೆ ಹೋಲಿಸಿ ಅಥವಾ ಸಮೀಕರಿಸಿ ಆವನ ಪ್ರಶಸ್ತಿಯನ್ನು ವರ್ಣಿಸಬೇಕೆಂಬ ಪ್ರೀತಿ ತನಗುಂಟಾಯಿತೆಂದು ಕವಿ ಈ ಪದ್ಯದಲ್ಲಿ ತಿಳಿಸುತ್ತಾನೆ. ವಿಪುಲಯಶೋವಿತಾನ ಗುಣವಿಲ್ಲದನಂ–ವಿಸ್ತಾರವಾದ ಕೀರ್ತಿ ರಾಶಿಯೆಂಬ ಗುಣವಿಲ್ಲದವನನ್ನು, ಪ್ರಭು ಮಾಡಿ–ನಾಯಕನನ್ನಾಗಿ ಮಾಡಿ, ಪೂರ್ವ ಭೂಮಿಪರ ಪದಂಗಳಂ ಪುಗಿಸಿ–ಪ್ರಾಚೀನ ರಾಜರ ಪದವಿಗಳನ್ನು ಆರೋಪಿಸಿ, [ಪೋಲಿಪರ್]–ಹೋಲಿಸುತ್ತಾರೆ, (ಕೆಲವರು ಕವಿಗಳು); ಈತಂ–ಈ ಅರಿಕೇಸರಿ (ಹಾಗಲ್ಲ), ಉದಾತ್ತ ಪೂರ್ವಭೂಮಿಪರುಮಂ–ಉನ್ನತರಾದ ಹಿಂದಿನ ರಾಜರನ್ನು ಕೂಡ, ಒಳ್ಪಿನೊಳ್–ಒಳ್ಳೆಯತನದಲ್ಲಿ, ತಗುಳೆವಂದೊಡೆ–ಅಟ್ಟಿಸಿಕೊಂಡು ಹೋದರೆ, ಎಂದರೆ ಅವರನ್ನು ಸೋಲಿಸಿದರೆ, ಈ ಕಥೆಯೊಳ್ ತಗುಳ್ಚಿ– ಈ ಮಹಾಭಾರತ ಕಥೆಯಲ್ಲಿ ಆತನನ್ನು ಸೇರಿಸಿ, ಗುಣಾರ್ಣವ ಭೂಭುಜನಂ-ಗುಣಾರ್ಣವನಾದ ಅರಿಕೇಸರಿ ರಾಜ ನನ್ನು, ಕಿರೀಟಿಯೊಳ್–ಅರ್ಜುನನಲ್ಲಿ, ಪೋಲಿಪೊಡೆ–ಹೋಲಿಸುವ ಪಕ್ಷದಲ್ಲಿ, ಎನಗೆ– ನನಗೆ, ಆಟಿಸ್ತಿಯಾದುದು–ಇಷ್ಟವಾಯಿತು. ಇಲ್ಲಿ ಕವಿ ತನ್ನ ರಾಜ ಅರಿಕೇಸರಿಯಲ್ಲಿ ಹಿಂದಿನ ದೊರೆಗಳಲ್ಲಿಲ್ಲದಿದ್ದ ಗುಣಗಣಗಳನ್ನು ಕಂಡು ಅವನನ್ನು ಅರ್ಜುನನೊಡನೆ ಏಕೀಕರಿಸಿ ಭಾರತ ಕಥೆಯನ್ನು ನಿರೂಪಿಸಲು ಸ್ನೇಹಪ್ರೀತಿಗಳಿಂದ ತೊಡಗಿದ್ದಾನೆ. ಇಲ್ಲಿ ಪೋಲಿಪ್ಪೊಡೆ ಎಂಬುದಕ್ಕೆ ಸೂಚಿತ ಪಾಠ(ಪ) [ಪೋಲಿಪರ್] ಎಂಬುದನ್ನು ಸ್ವೀಕರಿಸಿದೆ.

೧೫. ಇಲ್ಲಿಂದ ಮುಂದಕ್ಕೆ ಕವಿ ತನಗೆ ಆಶ್ರಯದಾತನೂ ಸ್ನೇಹಿತನೂ ಆಗಿದ್ದ ಅರಿಕೇಸರಿಯ ವಂಶವೃತ್ತಾಂತವನ್ನು ವಿಸ್ತಾರವಾಗಿ ವರ್ಣಿಸುತ್ತಾನೆ. ಈ ಮನೆತನದ ರಾಜರನ್ನು ವೇಮುಲವಾಡದ ಚಾಲುಕ್ಯರೆಂದು ಇತಿಹಾಸಜ್ಞರು ಕರೆಯುತ್ತಾರೆ. ಈಗಿನ ಹೈದರಾಬಾದ್ ರಾಜ್ಯದ ಕರೀಂನಗರಜಿಲ್ಲೆಯಲ್ಲಿ ವೇ(ಲೇ)ಮುಲವಾಡ ಎಂಬ ಗ್ರಾಮವಿದೆ; ಇದಕ್ಕೆ ಸುತ್ತುಮುತ್ತಲ ಪ್ರದೇಶಕ್ಕೆ ಸಪಾದಲಕ್ಷ ಕ್ಷಿತಿ ಎಂಬ ಹೆಸರಿತ್ತು; ಬೋಧನ ಎಂಬ ನಗರ ಈ ವಂಶದ ರಾಜರಿಗೆ ಮುಖ್ಯಪಟ್ಟಣವಾಗಿತ್ತು. ಈ ವೇಮುಲ ವಾಡ ಚಾಲುಕ್ಯರಿಗೂ ಬಾದಾಮಿಯ ಪಶ್ಚಿಮ ಚಾಲುಕ್ಯ ಮನೆತನಕ್ಕೂ (ಕ್ರಿ. ಶ. ೫೫೦-೭೫೭) ಯಾವ ಸಂಬಂಧವಿತ್ತೋ ತಿಳಿಯದು. ಅರಿಕೇಸರಿಯ ಪೂರ್ವಜರೆಲ್ಲ

ರಾಷ್ಟ್ರಕೂಟವಂಶದ ರಾಜರ (ಕ್ರಿ. ಶ. ಸು. ೭೫೩--೯೭೩) ಸಾಮಂತರಾಜರಾಗಿದ್ದರು. ಇವರ ಮೊದಲಿಗ ಒಂದನೆಯ ಯುದ್ಧಮಲ್ಲ. ಶ್ರೀಮತ್ ಚಳುಕ್ಯವಂಶವ್ಯೋಮಾಮೃತ ಕಿರಣಂ-ಸಂಪದ್ಯುಕ್ತವಾದ ಚಾಲುಕ್ಯವೆಂಬ ಆಕಾಶಕ್ಕೆ ಚಂದ್ರನು, ಎನಿಪ-ಎನಿಸಿ ಕೊಳ್ಳುವ, ಕಾಂತಿಯನೊಳಕೊಂಡು-ತೇಜಸ್ಸನ್ನು ಹೊಂದಿ, ಆತ್ಮವಂಶ ಶಿಖಾಮಣಿ-ತನ್ನ ಕುಲಕ್ಕೆ ಚೂಡಾರತ್ನನಾದ, ಯುದ್ಧಮಲ್ಲಂ-ಯುದ್ಧಮಲ್ಲನೆಂಬವನು, ಈ ಮಹಿಯೊಳ್-ಈ ಲೋಕದಲ್ಲಿ, ಜಸಮೆಸೆಯೆ-ಕೀರ್ತಿ ಪ್ರಕಾಶಿಸುತ್ತಿರಲು, ನೆಗೞ್ದಂ-ಪ್ರಸಿದ್ಧನಾದನು.

೧೬. ಆತಂ-ಅವನು, ನಿಜ ಭುಜ ವಿಜಯ ಖ್ಯಾತಿಯನಾಳ್ದು-ತನ್ನ ಬಾಹುಗಳ ಜಯದ ಕೀರ್ತಿಯನ್ನು ಹೊಂದಿ, ಅಧಿಕ ಬಲಂ-ಅಧಿಕ ಶಕ್ತಿವಂತನೂ, ಅವನಿಪತಿವ್ರಾತ-ರಾಜರ ಸಮೂಹದ, ಮಣಿ ಮಕುಟ ಕಿರಣದ್ಯೋತಿತ ಪಾದಂ-ರತ್ನಖಚಿತವಾದ ಕಿರೀಟಗಳ ಕಾಂತಿಯಿಂದ ಬೆಳಗಿಸಲ್ಪಟ್ಟ ಪಾದವುಳ್ಳವನೂ ಆಗಿದ್ದು, ಸಪಾದಲಕ್ಷ ಕ್ಷಿತಿ-ಸಪಾದಲಕ್ಷವೆಂಬ ಭೂಪ್ರದೇಶವನ್ನು, ಆಳ್ದಂ-ಪರಿಪಾಲಿಸಿದನು.

೧೭. ಆ ನೃಪತಿ-ಆ ರಾಜನು, ನಿಚ್ಚಲುಂ ಪ್ರತಿದಿನವೂ, ದೀರ್ಘಿಕೆಗಳಂ-ಬಾವಿಗಳನ್ನು, ಎಣ್ಣೆಯೊಳೆ ತೀವಿ-ಎಣ್ಣೆಯಿಂದ ತುಂಬಿ, ಅಯ್ನೂಱಾನೆಯಂ-ಐದುನೂರು ಆನೆಗಳನ್ನು, ಪೋದನದೊಳ್-ಪೋದನವೆಂಬ ತನ್ನ ರಾಜಧಾನಿಯಲ್ಲಿ, ಅವಗಾಹವಿರಿಸುವಂ-ಮುಳುಗಿಸಿ ಮಜ್ಜನ ಮಾಡಿಸುತ್ತಾನೆ, ಆತನ, ಸಿರಿಯುಮ್ಮಾನಿಯಂ-ಐಶ್ವರ್ಯಾತಿಶಯವನ್ನು, ಏನಂ ಪೇೞ್ವುದೋ-ಏನೆಂದು ಹೊಗಳುವುದೋ ಎಂದರೆ ಹೊಗಳಲು ಅಸಾಧ್ಯವೆಂದು ತಾತ್ಪರ್ಯ. ೧೬ನೆಯ ಪದ್ಯವನ್ನೂ, ಈ ಪದ್ಯವನ್ನೂ ಕೆಳಗೆ ಕಾಣಿಸಿರುವ ವೇಮುಲವಾಡದ ಶಿಲಾ ಶಾಸನದ ಪದ್ಯಗಳೊಡನೆ ಹೋಲಿಸಬಹುದು: "ಯುದ್ಧಮಲ್ಲೋ ನಾಮಾ ರಾಜಾ ಬಭೂವ॥ ಸೋಯಂ ಕಿಳಾಶಾಸದನಸ್ಯ ಶಾಸ್ತ್ಯಾಂ ಸಪಾದಲಕ್ಷ ಕ್ಷಿತಿ ಮಕ್ಷತಾಜ್ಞಃ। ಸಮಸ್ತ ರಾಜೇಂದ್ರ ಕಿರೀಟ ಕೋಟಿ ಮಾಣಿಕ್ಯ ರಶ್ಮಿ ಪ್ರಕರಾರ್ಚಿತಾಂಘ್ರಿಃ॥ ಯಃ ಪೋದನೇ ಸೌಧಮಯೀ ಗಜಾನಾಂ ವಿಧಾಯ ವಾಪೀಮಪಿ ತೈಲ ಪೂರ್ಣೈಃ। ಸ ಸರ್ವಸೇಕಂ ಸತತಂ ವಿತೇನೇ ಚಾಸ್ತೈಃ ಕುಚಾನಾಮರಿ ಸುಂದರೀಣಾಂ॥

೧೮. ಈ ಪದ್ಯದಿಂದ ೨೧ರ ಪೂರ್ತಿ ಒಂದನೆಯ ಯುದ್ಧಮಲ್ಲನ ಮಗನಾದ ಒಂದನೆಯ ಅರಿಕೇಸರಿಯ ಪ್ರಶಸ್ತಿ ಇದೆ. ಶ್ರೀಪತಿಗೆ-ಐಶ್ವರ್ಯಕ್ಕೆ ಒಡೆಯನಾದ, ಯುದ್ಧಮಲ್ಲ ಮಹೀಪತಿಗೆ-ಯುದ್ಧಮಲ್ಲನೆಂಬ ರಾಜನಿಗೆ, ನೆಗೞ್ತೆ ಪುಟ್ಟೆ-ಕೀರ್ತಿ ಹುಟ್ಟಲು, ಅಖಿಲಕ್ಷ್ಮಾಪಾಲ ಮೌಳಿ ಮಣಿ ಕಿರಣಾಪಲಿತ ನಖಮಯೂಖ ರಂಜಿತ ಚರಣಂ-ಸಮಸ್ತ ರಾಜರ ಕಿರೀಟ ರತ್ನಗಳ ಕಾಂತಿಯಿಂದ ಪೋಷಿತವಾದ ಕಾಲುಗುರುಗಳ ಕಿರಣಗಳಿಂದ ಬೆಳಗುವ ಪಾದವುಳ್ಳವನು ಆದ,

೧೯. ಅರಿಕೇಸರಿಯೆಂಬ-ಅರಿಕೇಸರಿಯೆಂಬಾತನು, ಸುಂದರಾಂಗಂ-ಸೊಗಸಾದ ದೇಹವುಳ್ಳವನು, ಪುಟ್ಟಿದಂ-ಹುಟ್ಟಿದನು. ನೃಪತಿ-ಆ ಅರಿಕೇಸರಿ, ಪಡಿವಡೆಗೆ-ಎದುರಿಸಿದ ಸೈನ್ಯಕ್ಕೆ, ಉರ್ಚಿದ ಕರವಾಳನೆ ತೋಱೆ-ಒರೆಯಿಂದ ಕಿತ್ತ ಕತ್ತಿಯನ್ನೇ

ತೋರಿಸಿ, ಅತ್ಯಂತ ವಸ್ತುವಂ-ಅತಿಶಯವಾದ ಬೆಲೆ ಬಾಳುವ ವಸ್ತುಗಳನ್ನು, ಮದ ಕರಿಯಂ- ಸೊಕ್ಕಾನೆಗಳನ್ನು, ಹರಿಯಂ-ಕುದುರೆಗಳನ್ನು, ಗೆಲ್ಲಂಗೊಂಡಂ-ವಿಜಯದ ಲಾಭವಾಗಿ ಗಳಿಸಿದನು.

೨೦. ಅರಿಕೇಸರಿ, ನಿರುಪಮದೇವನ ರಾಜ್ಯದೊಳ್-ನಿರುಪಮನೆಂಬ ರಾಷ್ಟ್ರಕೂಟ ರಾಜನ ರಾಜ್ಯದಲ್ಲಿ ಎಂದರೆ ಆಳಿಕೆಯಲ್ಲಿ, ವೆಂಗಿ ವಿಷಯಮಂ-ವೆಂಗಿ ಮಂಡಲವೆಂಬ ದೇಶವನ್ನು, ತ್ರಿಕಳಿಂಗಂ ಬೆರಸು-ಮೂರು ಕಳಿಂಗ ದೇಶಗಳ ಸಮೇತವಾಗಿ, ಒತ್ತಿಕೊಂಡು-ಬಲದಿಂದ ಗೆದ್ದು, ಗರ್ವದೆ-ಠೀವಿಯಿಂದ, ಅಖಿಳ ದಿಗ್ಭಿತ್ತಿಗಳೊಳ್ -ಎಲ್ಲಾ ದಿಕ್ಪ್ರದೇಶಗಳಲ್ಲೂ, ಪೆಸರಂ ಬರೆಯಿಸಿದಂ-ತನ್ನ ಹೆಸರನ್ನು ಬರೆಸಿದನು. ಇಲ್ಲಿ ಹೇಳಿರುವ ನಿರುಪಮ ದೇವನು ಧ್ರುವಧಾರಾವರ್ಷನೆಂಬ ರಾಜ (ಕ್ರಿ. ಶ. ೭೮೦). ಇವನಿಗೆ ಶ್ರೀವಲ್ಲಭ ಮುಂತಾದ ಬಿರುದುಗಳಿದ್ದುವು. ಇವನಿಗಾಗಿ ಅರಿಕೇಸರಿ ಮಾಡಿದ ವಿಜಯಗಳನ್ನು ಇಲ್ಲಿ ಹೇಳಿದೆ ಈ ವಿಷಯ ಪರಭಣಿ ಶಾಸನದಲ್ಲೂ ಉಕ್ತವಾಗಿದೆ.

೨೧. ಕ್ಷತ್ರಂ-ಕ್ಷತ್ರಿಯಗುಣಗಳಾದ ಶೌರ್ಯಪ್ರತಾಪಾದಿಗಳು, ತೇಜೋಗುಣಂ-ತೇಜಸ್ಸೆಂಬ ಗುಣವು, ಆ ಕ್ಷತ್ರಿಯರೊಳ್ -ಆ ಕ್ಷತ್ರಿಯ ಕುಲದಲ್ಲಿ, ನೆಲಸಿ ನಿಂದುದು-ಸ್ಥಿರವಾಗಿ ನಿಂತಿರುವುದು, ಅರಿಕೇಸರಿಯಾ ಎಸಗಿದೆಸಕಂ-ಅರಿಕೇಸರಿ ಮಾಡಿದ ಕಾರ್ಯಗಳು, ಈ ತ್ರಿಜಗದೊಳ್- ಈ ಮೂರು ಲೋಕಗಳಲ್ಲಿ, ಆ ನೆಗಳ್ದಾದಿ ಕ್ಷತ್ರಿಯರೊಳಂ-ಆ ಪ್ರಸಿದ್ಧರಾದ ಪುರಾತನ ಕ್ಷತ್ರಿಯರಲ್ಲೂ, ಇಲ್ಲ, ಎಂದು, ಎನಿಸಿದುದು-ಎನ್ನಿಸಿತು.

೨೨. ಈ ಅರಿಕೇಸರಿಗೆ ಇಬ್ಬರು ಪುತ್ರರಾದರು. ಅರಿಕೇಸರಿಗೆ, ಆತ್ಮಜರ್-ಪುತ್ರರು. ಅರಿನರಪಶಿರೋದಳನ ಪರಿಣತೋಗ್ರಾಸಿಭಯಂಕರಕರರ್ -ಶತ್ರುರಾಜರ ತಲೆಯನ್ನು ಸೀಳುವುದರಲ್ಲಿ ಸಮರ್ಥವಾದ ತೀವ್ರವಾದ ಕತ್ತಿಯಿಂದ ಭಯಂಕರವಾದ ಬಾಹುಗಳುಳ್ಳವರು; ಆ ಯಿರ್ವರೊಳ್-ಆ ಇಬ್ಬರಲ್ಲಿ, ಆರ್ ದೊರೆಯೆನೆ-ಯಾರು ಸಮಾನರು ಎನ್ನಲು, ನರಸಿಂಹ ಭದ್ರದೇವರ್-ನರಸಿಂಹ ಭದ್ರದೇವರು, ನೆಗಳ್ದರ್-ಪ್ರಸಿದ್ಧರಾದರು.

೨೩. ಅವರೊಳ್-ಆ ಇಬ್ಬರಲ್ಲಿ, ನರಸಿಂಗಂಗೆ-ನರಸಿಂಹನಿಗೆ, ಅತಿ ಧವಳ ಯಶಂ-ತುಂಬ ನಿರ್ಮಳವಾದ ಕೀರ್ತಿಯನ್ನುಳ್ಳ, ಯುದ್ಧಮಲ್ಲಂ-ಇಮ್ಮಡಿ ಯುದ್ಧಮಲ್ಲನು, ಅಗ್ರಸುತಂ-ಹಿರಿಯ ಮಗ, ತದ್ಭುವನ ಪ್ರದೀಪನಾಗಿರ್ದ-ಆ ಲೋಕಕ್ಕೆಲ್ಲ ಜ್ಯೋತಿಯಾಗಿದ್ದ, ಅವಾರ್ಯ ವೀರ್ಯಂಗೆ-ಅಪ್ರತಿಮಪ್ರತಾಪಿ ಯುದ್ಧಮಲ್ಲನಿಗೆ, ಬದ್ದೆಗಂ-ಬದ್ದೆಗನು ಎಂದರೆ ಭದ್ರದೇವನು, ಪಿರಿಯಮಗಂ-ಹಿರಿಯ ಮಗನು.

೨೪. ಪುಟ್ಟಿದೊಡೆ-ಹುಟ್ಟಿದರೆ, ಆತನೊಳ್-ಅವನಲ್ಲಿ, ಅಱಿವು ಒಡವುಟ್ಟಿದುದು-ಜ್ಞಾನವು ಜೊತೆಯಲ್ಲಿ ಹುಟ್ಟಿತು, ಅಱಿವಿಂಗೆ-ಆ ಜ್ಞಾನಕ್ಕೆ, ಪೆಂಪು-ಹಿರಿಮೆ, ಪೆಂಪಿನೊಳ್-ಆ ಹಿರಿಮೆಯಲ್ಲಿ, ಆಯಂ-ಆಯವು ಎಂದರೆ ದ್ರವ್ಯಲಾಭಾದಿಗಳು ಹುಟ್ಟಿದುವು, ಕಟ್ಟಾಯದೊಳ್-ಆ ತೀವ್ರ ಲಾಭದಲ್ಲಿ, ಅಳವು-ಪರಾಕ್ರಮ, ಅಳವಿನೊಳ್-ಆ ಪರಾಕ್ರಮದಲ್ಲಿ, ಒಟ್ಟಜೆ-ಅತಿಶಯತ್ವವು, ಪುಟ್ಟಿದುದು-ಹುಟ್ಟಿತು,

ಬಪ್ಪೆಗನಂ–ಭದ್ರದೇವನನ್ನು, ಪೋಲ್ವರಾರ್–ಹೋಲುವವರು ಯಾರು? ಯಾರೂ ಇಲ್ಲ ಎಂದು ಭಾವ. ಇಲ್ಲಿ ಆಯ, ಒಟ್ಟಜೆ–ಎಂಬೆರಡು ಶಬ್ದಗಳಿಗೂ ಕೆಲವರು ಸಾಮರ್ಥ್ಯ, ಪರಾಕ್ರಮ ಎಂದು ಅರ್ಥೈಸುತ್ತಾರೆ.

**೨೫.** ಈತಂ–ಈ ಭದ್ರದೇವನು, ಬಲ್ಪರಿಕೆಯೊಳ್–ಬಲವಾದ ದಾಳಿಯಲ್ಲಿ, ಅರಿನೃಪರ–ಶತ್ರುರಾಜರು, ಪಡಲ್ವಡೆ–ಚೆದರಿ ಹೋಗುವಂತೆ, ತಳ್ತಿಱಿದು–ತಾಗಿ ಹೊಯ್ದಾಡಿ, ರಣದೊಳ್–ಯುದ್ಧದಲ್ಲಿ, ವಿಕ್ರಮಮಂ–ಶೌರ್ಯವನ್ನು, ಸೊಲ್ಸಿನಂ–ಎಲ್ಲರೂ ಮಾತಾಡಿಕೊಳ್ಳುತ್ತಿರಲು, ನಾಲ್ವತ್ತೆರಡಱಿಕೆಗಾಳೆಗಂಗಳೊಳ್–ನಲವತ್ತೆರಡು ಪ್ರಸಿದ್ಧವಾದ ಯುದ್ಧಗಳಲ್ಲಿ, ಆವರ್ಜಿಸಿದಂ–ಸಂಪಾದಿಸಿದನು. ಭದ್ರದೇವನು ನಲವತ್ತೆರಡು ಪ್ರಸಿದ್ಧ ಸಮರಗಳಲ್ಲಿ ತನ್ನ ಪ್ರತಾಪವನ್ನು ಮೆರೆದನು; ಎಲ್ಲೆಲ್ಲಿಯೂ ಆ ಮಾತೇ ಮಾತು. ಅರಿನೃಪರ ಎಂಬಲ್ಲಿ ಪ್ರಥಮಾರ್ಥದಲ್ಲಿ ಷಷ್ಠಿ ಬಂದಿದೆ. ಬಲ್ಪರಿಕೆ=ಬಲ್ಲಿತ್ತು+ಪರಿಕೆ; ಪರಿ ಎಂದರೆ ಸೈನ್ಯ ಸಮೇತವಾಗಿ ದಾಳಿಯಿಡು, ಪರಿಕೆ=ದಾಳಿ, "ಜವಂಗಿಡಿಸಲಾ ಜವನಂ ಪರಿಯಿಟ್ಟು ಮುತ್ತಿದಂ" (ಪಂಪರಾ ೧೦ ೧೬೨) ಎಂಬ ಪ್ರಯೋಗದಲ್ಲಿರುವ ಪರಿಯಿಡು ಎಂಬುದನ್ನು ನೋಡಿ; ಇದಕ್ಕೆ ಸೈನ್ಯ ಸಮೇತವಾಗಿ ದಾಳಿಯಿಡು ಎಂದರ್ಥ.

**೨೬.** ವನಧಿಪರೀತ ಭೂತಳದೊಳ್–ಸಮುದ್ರದಿಂದ ಸುತ್ತುವರಿದ ಈ ಭೂಪ್ರದೇಶದಲ್ಲಿ, ಈತನೆ–ಇವನೊಬ್ಬನೇ, ಸೋಲದ ಗಂಡನೆಂಬ–ಯಾರಿಗೂ ಸೋತು ಹೋಗದ ವೀರನೆಂಬ, ಪೆಂಪಿನ–ಹಿರಿದಾದ, ಪೆಸರಂ–ಖ್ಯಾತಿಯನ್ನು, ನಿಮಿರ್ಚಿದುದು ಮಲ್ಲದೆ–ವಿಸ್ತರಿಸಿದುದೂ ಅಲ್ಲದೆ, ವಿಕ್ರಮದಿಂದೆ ನಿಂದು–ಪರಾಕ್ರಮದಿಂದ ಎದುರಿಸಿ ನಿಂತು, ಅಗುರ್ವೆನಲ್–ಭಯವೆನ್ನುವ ಹಾಗೆ, ಅಂತರಂ–ಎದುರಾದವರನ್ನು, ಇಱಿದು–ಹೊಯ್ದಾಡಿ, ಭೀಮನಂ–ಭೀಮನೆಂಬ ರಾಜನನ್ನು, ನೀರೊಳೊತ್ತಿ–ನೀರಿನಲ್ಲಿ ಒತ್ತಿ, ಮೊಸಳೆಯಂ–ಮೊಸಳೆಯನ್ನು, ಪಿಡಿವಂತಿರೆ–ಹಿಡಿಯುವ ಹಾಗೆ, ಅತಿಗರ್ವದಿಂ–ಬಹು ದರ್ಪದಿಂದ, ಪಿಡಿಯೆ–ಹಿಡಿಯಲು, ಮೆಯ್ಗಲಿ–ಶೂರನಾದ, ಬಪ್ಪೆಗನನ್ನನ್–ಭದ್ರದೇವನಂಥವನು, ಆವನೋ–ಯಾವನೋ? ಅವನಂಥವನು ಯಾರೂ ಇಲ್ಲ ಎಂದರ್ಥ. ಇಲ್ಲಿ ಅಂತರಂ ಎಂದು ಇರುವುದನ್ನು ಅಂತ[ನಂ] ಎಂದು ತಿದ್ದಿಕೊಂಡರೆ ಅದು ಭೀಮನಿಗೆ ವಿಶೇಷಣವಾಗಿ ಅರ್ಥಸೌಲಭ್ಯವುಂಟಾಗುತ್ತದೆ. ಇಲ್ಲಿ ಹೇಳಿರುವ ಒಂದನೆಯ ಭೀಮ ವೆಂಗಿ ದೇಶದ ಚಾಲುಕ್ಯ ಮನೆತನಕ್ಕೆ ಸೇರಿದವನು; ಇವನು ಕ್ರಿ. ಶ. ೮೯೨ರಲ್ಲಿ ಪಟ್ಟಾಭಿಷಿಕ್ತನಾದನು.

**೨೭.** ಮುಗಿಲಂ ಮುಟ್ಟಿದ ಪೆಂಪು–ಮೋಡವನ್ನು ಮುಟ್ಟಿದ ಎಂದರೆ ಅತಿ ಉನ್ನತವಾದ ಹಿರಿಮೆ, ಪೆಂಪನೊಳಕೊಂಡುದ್ಯೋಗಂ–ಆ ಹಿರಿಮೆಯಲ್ಲಿ ಸೇರಿದ ಕಾರ್ಯಕಲಾಪ, ಉದ್ಯೋಗದೊಳ್ ತೊಡರ್ದಾಜ್ಞಾಫಲಂ–ಆ ರಾಜಕಾರ್ಯದಲ್ಲಿ ಸೇರಿಕೊಂಡ ತನ್ನ ಆಜ್ಞೆಯ ಪ್ರಯೋಜನ, ಆಜ್ಞೆಯೊಳ್ ತೊಡರ್ದಗುರ್ವು–ಆ ಆಜ್ಞೆಯಲ್ಲಿ ಮಿಶ್ರವಾದ ಒಂದು ಭಯ, ಒಂದೊಂದೊಂದಗುರ್ವಿಂದೆ–ಒಂದೊಂದು ರೀತಿಯ ಭಯ

ದಿಂದ, ಆಗುರ್ವುಗೊಳುತ್ತಿರ್ಪರಿ ಮಂಡಳಂ–ಭಯಪಡುತ್ತಿರುವ ಶತ್ರು ಸಮೂಹ, ಇವುಗಳಿಲ್ಲ, ಜಸಕ್ಕಡರ್ಪಪ್ಪನ್ನೆಗಂ–ಕೀರ್ತಿಗೆ ಆಶ್ರಯವಾಗುತ್ತಿರಲು, ಬದ್ದೆಗಂ–ಭದ್ರದೇವನು, ಈ ಜಗದೊಳ್–ಈ ಲೋಕದಲ್ಲಿ, ಸಂದನ್–ಪ್ರಸಿದ್ಧನಾದನು; ಅನ್ನನಾವನ್–ಅಂಥವನು ಯಾವನಿದ್ದಾನೆ? ಆತನು, ಭ್ರೂಕೋಟಿಯಿಂ–ಹುಬ್ಬಿನ ತುದಿಯಿಂದ ಎಂದರೆ ಹುಬ್ಬಿನ ಜರ್ಬಿನಿಂದ, ಕೋಟಿಯುಂ–ಕೋಟ್ಯಂತರ ಸೈನ್ಯವನ್ನು, ಇೞಿಕುಂ–ಇಳಿಸಿಬಿಡುತ್ತಾನೆ, ಅಥವಾ ಇಳಿಕುಂ–ತಿರಸ್ಕರಿಸುತ್ತಾನೆ.

೨೮. ಆತನ, ಭಂಡಾರದೊಳ್–ದ್ರವ್ಯಕೋಶದಲ್ಲಿ, ಮೇರುವಪೊನ್–ಮೇರು ಪರ್ವತದ ಚಿನ್ನ, ಕಲ್ಪಾಂಘ್ರಿಪದಾರವೆ–ಕಲ್ಪವೃಕ್ಷದ ತೋಟ, ರಸದೊಱವು–ಸಿದ್ಧರಸದ ಊಟೆ, ಪರುಸವೇದಿಯ ಕಣಿ–ಸೋಂಕಿದ್ದನ್ನೆಲ್ಲ ಚಿನ್ನವಾಗಿಸುವ ಸ್ಪರ್ಶ ಶಿಲೆಯ ಗಣಿ, ಇವು, ಉಂಟೆನೆ–ಇವೆ ಎನ್ನಲು, ಆತನು, ಕುಡುವನಿವಾರಿತದಾನಕ್ಕೆ–ಕೊಡುವ ನಿರಂತರ ದಾನಕ್ಕೆ, ಬದ್ದೆಗನಂ–ಭದ್ರದೇವನನ್ನು, ಪೋಲ್ವರಾರ್–ಹೋಲುವವರು ಯಾರು? ಯಾರೂ ಇಲ್ಲ.

೨೯. ಈ ಪದ್ಯದಲ್ಲಿಯೂ ಬದ್ದೆಗನ ದಾನದ ಹಿರಿಮೆಯನ್ನು ವರ್ಣಿಸಿದೆ; ಅದರಲ್ಲಿ ಅನೇಕ ಪಾಠಕ್ಲೇಶಗಳಿರುವುದರಿಂದ ಅದರ ಅರ್ಥ ಸರಿಯಾಗಿ ಆಗುವುದಿಲ್ಲ. ಕೊನೆಯ ಪಂಕ್ತಿ: ಅರಿಯವೆಂದಿವು–ಅಪೂರ್ವ ವಸ್ತುಗಳಾದ ಇವು, ಭದ್ರದೇವನ ಚಾಗದೊಳ್–ಭದ್ರದೇವನು ಮಾಡುವ ದಾನಗಳಲ್ಲಿ, ಪೊಱಗಾದುವೇ–ಹೊರಗಾದುವೇ. ಆದುವು ಎಂಬ ಭಾವ. ಈ ಅಪೂರ್ವ ವಸ್ತುಗಳು ಯಾವುವು? ಸುರಭಿ–ಕಾಮಧೇನು, ಬೇಡಿದವರಿಗೆ ಬೇಡಿದ್ದನ್ನೆಲ್ಲ ಕೊಡುತ್ತೇನೆಂದು ಹೇಳುವ ಆ ದೇವತೆಯು, ಗೋಸಣೆ–ಕೂಗು, ಸಾರಿ ಹೇಳುವುದು; ಮಾಣ್ದುದು–ನಿಂತುಹೋಯಿತು. ಎಂದರೆ ಬದ್ದೆಗನ ದಾನ ಕಾಮಧೇನುವನ್ನು ಕೂಡ ಮೀರಿಸಿತು, ಇಲ್ಲಿ 'ಗೋಸನೆ' ಎಂದಿರುವ ಪಾಠಾಂತರ ಸ್ವೀಕರಣಯೋಗ್ಯ; ಉಳಿದ ವಸ್ತುಗಳ ಸ್ವರೂಪ ಖಚಿತವಾಗಿ ತಿಳಿಯುವುದಿಲ್ಲ. ಖರಕರ–ಸೂರ್ಯ; ದೇವವಾರಣ–ಇಂದ್ರನ ಆನೆ, ಐರಾವತ, ಏೞೆಯುಂಟವು–ಅವು ಏಳೇ ಇವೆ. ಎಂದರೆ ಏನೋ? ಆ ಹರಿ–ಆ ಕುದುರೆಗಳು, ಎಂದರೆ ಸೂರ್ಯನ ಸಪ್ತಾಶ್ವಗಳು. ಪದ್ಯದ ತಾತ್ಪರ್ಯ ತಿಳಿಯುವಂತಿಲ್ಲ.

೩೦. ಆ ಬದ್ದೆಗನ ಮಗ ಮೂರನೆಯ ಯುದ್ಧಮಲ್ಲ; ಅವನ ಮಗ ನರಸಿಂಹ. ಆ ಬದ್ದೆಗಂಗೆ-ಆ ಭದ್ರದೇವನಿಗೆ, ವೈರಿತಮೋಬಲ ದಶಶತಕರಂ-ಶತ್ರುಗಳೆಂಬ ಕತ್ತಲೆಗೆ ಸೂರ್ಯನಾದ, ವಿರಾಜಿತ ವಿಜಯ ಶ್ರೀ ಬಾಹು–ಪ್ರಕಾಶಮಾನಳಾದ ಜಯಲಕ್ಷ್ಮಿಯಿಂದ ಕೂಡಿದ ತೋಳುಗಳುಳ್ಳವನು ಆದ, ಯುದ್ಧಮಲ್ಲಂ–ಯುದ್ಧ ಮಲ್ಲನು, ಇಳಾ ಬಹುವಿಧ ರಕ್ಷಣ ಪ್ರವೀಣ ಕೃಪಾಣಂ–ಲೋಕವನ್ನು ಹಲವು ವಿಧವಾಗಿ ಕಾಪಾಡುವುದರಲ್ಲಿ ಸಮರ್ಥವಾದ ಖಡ್ಗವುಳ್ಳವನು.

೩೧. ಆತ್ಮಭವಂ–ಮಗನು. ಆನರಾಧಿಪನಾತ್ಮಜಂ–ಆ ರಾಜ ಯುದ್ಧ ಮಲ್ಲನ ಮಗ, ಆ ನಹುಷ ಪೃಥು ಭಗೀರಥ ನಳಮಾಹಾತ್ಮರಂ–ಪ್ರಸಿದ್ಧರಾದ ನಹುಷ,

ಪೃಥು, ಭಗೀರಥ, ನಳ–ಎಂಬ ಮಹಾತ್ಮರನ್ನು, ಇಳಿಸಿ–ಕಡೆಗಣಿಸಿ, ನೆಗಟ್ದ–ಪ್ರಸಿದ್ಧ-ನಾದ, ಮಹಾತ್ಮ್ಯಂ-ಮಹಿಮೆಯುಳ್ಳವನೂ, ಅಱಿವಿನೊಳ್–ಜ್ಞಾನದಲ್ಲಿ, ಪರಮಾತ್ಮಂ-ಪರಬ್ರಹ್ಮನೂ ಆದ, ನರಸಿಂಹಂ–ನರಸಿಂಹನೆಂಬಾತನು. ಈ ಎರಡು ಪದ್ಯಗಳಿಗೆ ಯುಗ್ಮ ವೆಂದು ಹೆಸರು.

೩೨. ಪಾೞಿಯೆಡೆಗೆ– ಧರ್ಮ ಕ್ರಮಗಳ ಸಂದರ್ಭಕ್ಕೆ, ಗುರುವಚಾನಾಂ ಕುಶಮಂ–ಹಿರಿಯರ ಆಜ್ಞೆಯೆಂಬ ಅಂಕುಶವನ್ನು. ಭದ್ರಾಂಕುಶನಾ–ಭದ್ರ ಜಾತಿಯ ಆನೆಗೆ ಅಂಕುಶ ಸ್ವರೂಪನಾಗಿರುವ ನರಸಿಂಹನ, ಅಱಿವು–ತಿಳಿವು ಅಥವಾ ವಿವೇಕವು, ಮಾಂಕರಿಸದು–ಉಪೇಕ್ಷೆ ಮಾಡುವುದಿಲ್ಲ, ಪೊಣರ್ದರಿ ಬಲಮಂ–ಹೋರಾಡಿದ ಶತ್ರು ಸೈನ್ಯವನ್ನು, ಕಿಂಕೊೞಿ ಮಾೞ್ಪೆಡೆಗೆ–ಕಿಂಕೊಳೆ ಮಾಡುವ ಸಮಯಕ್ಕೆ, ಭದ್ರಾಂ ಕುಶನಾ–ನರಸಿಂಹನ, ಮುನಿಸು–ಕೋಪವು,ನಿರಂಕುಶಮೆನಿಸಿದುದು–ಅಡ್ಡಿ ತಡೆಯಿಲ್ಲದ್ದು ಅಥವಾ ಸ್ವತಂತ್ರವಾದದ್ದು ಎಂದೆನಿಸಿಕೊಂಡಿತು. ಗುರು ಜನರ ನ್ಯಾಯವಾದ ಮಾತು ಗಳನ್ನು ನರಸಿಂಹನ ವಿವೇಕವು ಉಲ್ಲಂಘಿಸುತ್ತಿರಲಿಲ್ಲ; ಅವನ ಕೋಪ ಶತ್ರುಸೈನ್ಯವನ್ನು ಧ್ವಂಸ ಮಾಡುವಾಗ ಯಾವ ಅಂಕೆಗೂ ಸಿಕ್ಕುತ್ತಿರಲಿಲ್ಲವೆಂದು ತಾತ್ಪರ್ಯ. ಇಲ್ಲಿ ಕಿಂಕೊೞಿ ಎಂಬ ಶಬ್ದದ ಅರ್ಥ ನಿಷ್ಪತ್ತಿಗಳು ಚಿಂತನೀಯ. ಇದು ಸಂಸ್ಕೃತದ ಕಿಂಕೃತಿ ಶಬ್ದದಿಂದ ಬಂದಿದೆಯೆಂದೂ ಅರ್ಥ ಹಿಂಸೆ, ತೊಂದರೆ, ಸಂಕಟ ಎಂದೂ ಹೇಳಿದೆ (ಪಂಪ ಭಾರತದ ನಿಘಂಟು). ಈ ಶಬ್ದದಲ್ಲಿ ೞಕಾರವಿರಬೇಕೋ, ಳಕಾರವಿರಬೇಕೋ? ಹಸ್ತಪ್ರತಿಗಳಲ್ಲಿ ೞಕಾರವಿರುವುದು ಸಂದೇಹಾಸ್ಪದ; ಅಲ್ಲಿ ಳಕಾರವನ್ನೇ ಬರೆದಿರಬೇಕು; ಕಿಂಕೊಳೆ, ಕಿಂಕೊೞಿ– ಇವೆರಡರಲ್ಲಿ ಯಾವುದು ಸರಿ? ಇದು ಒಂದೇ ಶಬ್ದವೊ, ಸಮಾಸವೊ? ಸಮಾಸವಾಗಿದ್ದರೆ ಕೀೞ್+ಕೊಳೆ ಎಂದಿರಬಹುದೆ? ಅದು ಕಿೞ್ಕೊಳೆ > ಕಿರ್ಕೊಳೆ > ಕಿಕ್ಕೊಳೆ > ಕಿಂಕೊಳೆ ಎಂದು ವಿಕಾಸಗೊಂಡು ಕಿಂಕೊಳೆ ಆಗಿರಬಹುದೆ? ಕೊಳೆ ಎಂಬುದು ಕೊಲೆ ಎನ್ನುವುದರ ಅಪಲಿಖಿತವೇ? ಕೀೞ್ ಕೊಲೆ–ಅತಿ ಹೇಯವಾದ ಕೊಲೆ ಎಂಬರ್ಥದ ಶಬ್ದ ಇಲ್ಲಿ ಇದ್ದಿರಬಹುದೆ? ವಿಷಯ ನಿರ್ಣಯ ಸುಲಭವಲ್ಲ.

೩೩ ನರಸಿಂಹನು ಮಾಡಿದ ಲಾಟದೇಶ ವಿಜಯವನ್ನು ಇಲ್ಲಿ ಹೇಳಿದೆ. ತಱಿಸಂದು–ನಿಶ್ಚಯಿಸಿ, ಪಟ್ಟುಹಿಡಿದು, ಲಾೞರೊಳ್–ಲಾಟದೇಶದವರಲ್ಲಿ (ದಕ್ಷಿಣ ಗುಜರಾತಿನಲ್ಲಿ), ತಳ್ತು–ತಾಗಿ, ಇಱಿದ–ಹೊಯ್ದು, ಏಱಿಂ ಪೇೞ್–ಯುದ್ಧದ ವಿಷಯವನ್ನು ಹೇಳಲು, ಕೇಳ್ದು-ಕೇಳಿ, ಮಂಡಲಮಿನ್ನುಂ–ಆ ಲಾಟದೇಶವಿನ್ನೂ ಕೂಡ, ತಿಱು ನೀರಿಕ್ಕುವುದು – ತರ್ಪಣೋದಕವನ್ನು ಕೊಡುತ್ತಿದೆ, ಎನಿಸಿದ–ಎನ್ನಿಸಿ ಕೊಂಡ, ತಱಿಸಲವಿನ–ಸ್ಥಿರ ಸಂಕಲ್ಪದ, ಚಲದ–ಹಠದ, ಬಲದ–ಶಕ್ತಿಯ, ಕಲಿ-ಶೂರನು, ನರಸಿಂಹಂ–ನರಸಿಂಹನು ಆಗಿದ್ದಾನೆ. ನರಸಿಂಹನು ಎಂದೋ ಮಾಡಿದ ಲಾಟ ವಿಜಯದ ಕಥೆಯನ್ನು ಹೇಳಿದಾಗ ಕೇಳಿದ ಆದೇಶದ ಜನ ಇನ್ನೂ ಕೂಡ ಆ ಯುದ್ಧದಲ್ಲಿ ಸತ್ತವರಿಗೆ ಎಳ್ಳು ನೀರನ್ನು ಬಿಡುತ್ತಿದ್ದಾರೆ ಎಂದರೆ ಆತನ ಪರಾಕ್ರಮವೆಂಥದಿರಬೇಕು; ಇಲ್ಲಿ ಏಱು=ಯುದ್ಧ ; ಮೂಱುಕೊಡೆ ಅಣ್ಣಿಯರ್ ಪಿಜ್ಜನೂರಾ ಏಱೀನುಳ್ಳಿಱಿದು

ಬಿಟ್ಟಾರ್, ನಾಗತರಾಸರಾ ಮನೆ ಮಗವು ಬಾಗೆ ಊರುಳ್ ಬಲ್ಲರ್ಹ ಏಳ್ಸುಳ್ಳಿ ಱಿದು ವಿಟ್ಟಿನ್, ಬಾಗೆವೂರೇಱುನುಳ್ಳಿ ಱಿದು ವಿಟ್ಟಾರ್–ಇವು ಪ್ರಯೋಗಾಂತರಗಳು (ತುಮಕೂರು ಆ೯೯೯ ನೆಯ ಶಾಸನಗಳು). ತಿಱುನೀರ್ = ತಿಱುವ + ನೀರ್ ಎಂದರೆ ತೆರುವ ನೀರು, ಸತ್ತವರಿಗಾಗಿ ತರ್ಪಣ ಕೊಡುವ ನೀರು.

೩೪. ನರಸಿಂಗಂ-ನರಸಿಂಹನು, ಸಿಂಗಂ ಮಸಗಿದವೊಲ್-ಸಿಂಹವು ಕೆರಳಿದಂತೆ, ತಳ್ತಿಱಿಯೆ–ತಾಗಿ ಯುದ್ಧಮಾಡಲು, ನೆಗೆದ ನೆತ್ತರ್–ಮೇಲಕ್ಕೆ ಚಿಮ್ಮಿದ ರಕ್ತವು, ನಭದೊಳ್–ಆಕಾಶದಲ್ಲಿ, ಕೆಂಗುಡಿ–ಕೆಂಪಾದ ಬಾವುಟಗಳು, ಕವಿದಂತೆ–ಮುಚ್ಚಿಕೊಂಡಂತೆ ಎಂದರೆ ಕಿಕ್ಕಿರಿದಂತೆ, ಆದುದು-ಆಯಿತು, ಸಕಲ ಲೋಕಾಶ್ರಯನಾ–ಎಲ್ಲ ಜನರಿಗೂ ಆಶ್ರಯಸ್ಥಾನನಾದ ನರಸಿಂಹನ, ಇದೇಂ ಗರ್ವದ ಪೆಂಪೊ–ಇದೇನು ಅವನ ಗಂಡಗರ್ವದ, ಪರಾಕ್ರಮದ ಹಿರಿಮೆಯೋ! ಇಲ್ಲಿ ನೆಗೆದ (ಪ) ಪಾಠವನ್ನು ಅಂಗೀಕರಿಸಿದೆ.

೩೫. ಏೞುಂ ಮಾಱಮುಮಂ-ಸಪ್ತಮಾಲವಗಳನ್ನು ಎಂದರೆ ಮಾಲವ ದೇಶದ ಏಳು ಭಾಗಗಳನ್ನು, ಪಾಱೆಲೆಬಿ–ಮೇಲಕ್ಕೆ ಹಾರಿಹೋಗುವಂತೆ, ತಗುಳ್ದು–ಬೆನ್ನಟ್ಟಿ, ನರಗಂ–ನರಸಿಂಹನು, ಉರಿಪಿಮೊಡೆ–ಸುಟ್ಟರೆ, ಕರಿಂಕೇಲಿಸಿದ–ಕರಿಕಾಗಿ, ಇದ್ದಿಲಾಗಿ ಮಾಡಿದ, ಆತನ, ತೇಜದ ಬೀಲಲಂ–ಅವನ ತೇಜಸ್ಸಿನ ಬಿಳಲುಗಳನ್ನು, ಒಗೆದುರಿವುರಿಗಳ್–ಉಂಟಾದ ಉರಿಯ ಜ್ವಾಲೆಗಳು, ಅನುಕರಿಪುವಾದುವು–ಹೋಲುವಂಥವಾದುವು. ನರಸಿಂಹನು ಮಾಲವವನ್ನು ಸುಟ್ಟ ಅಗ್ನಿಜ್ವಾಲೆ ಅವನ ತೇಜಸ್ಸಿನ ಬಿಳಲುಗಳಂತೆ ಕಾಣುತ್ತಿದ್ದುವು.

೩೬. ವಿಜಯಾರಂಭಪುರಸ್ಸರ ವಿಜಯಗಜಂಗಳನೆ ಪಿಡಿದು–ದಿಗ್ವಿಜಯದ ಕಾರ್ಯದಲ್ಲಿ ಸೈನ್ಯದ ಮುಂಗಡೆಯಲ್ಲಿರುವ ಜಯಸೂಚಕವಾದ ಆನೆಗಳನ್ನು ಅನುಸರಿಸಿ, ಘೂರ್ಜರರಾಜಧ್ವಜಿನಿಯಂ–ಗುಜ್ಜರ ದೇಶದ ರಾಜನ ಸೈನ್ಯವನ್ನು, ಇಱಿದೋಡಿಸಿ–ಹೊಡೆದೋಡಿಸಿ, ಭುಜ ವಿಜಯದೆ–ಬಾಹುಬಲದಿಂದಾದ ಗೆಲವಿನಿಂದ, ನರಸಿಂಹಂ, ವಿಜಯನುಮಂ–ಅರ್ಜುನನನ್ನು ಕೂಡ, ಇಳಿಸಿದಂ–ಅವಮಾನಿಸಿದನು ಎಂದರೆ ಮೀರಿಸಿದನು. ಇಲ್ಲಿ ಹೇಳಿರುವ ಗುಜ್ಜರ ರಾಜ ಕಾನ್ಯಕುಬ್ಜದ ಮಹೀಪಾಲನು.

೩೭. ಮಹಿಪಾಲಂ–ಮಹಿಪಾಲನೆಂಬ ರಾಜನು, ಸಿಡಿಲವೊಲೆಱಗುವ–ಸಿಡಿಲಿನಂತೆ ಮೇಲೆ ಬೀಳುವ, ನರಗನ–ನರಸಿಂಹನ, ಪಡೆಗೆ–ಸೈನ್ಯಕ್ಕೆ, ಅಗಿದು–ಹೆದರಿ, ಉಮ್ಮಳದಿಂ–ವ್ಯಾಕುಲತೆಯಿಂದ, ಉಂಡೆಡೆಯೊಳುಣ್ಣದೆಯುಂ–ಊಟಮಾಡಿದೆಡೆಯಲ್ಲಿ ತಿರುಗಿ ಊಟಮಾಡದೆಯೂ, ಕೆಡೆದೆಡೆಯೊಳ್ ಕೆಡೆಯದೆ–ಮಲಗಿದೆಡೆಯಲ್ಲಿ ತಿರುಗಿ ಮಲಗದೆಯೂ, ನಿಂದೆಡೆಯೊಳ್ ನಿಲ್ಲದೆಯುಂ–ನಿಂತೆಡೆಯಲ್ಲಿ ತಿರುಗಿ ನಿಲ್ಲದೆಯೂ, ಓಡಿದಂ–ಪಲಾಯನ ಮಾಡಿದನು. ಇದೇ ವಿಷಯವನ್ನು ವೇಮುಲವಾಡ ಶಾಸನ ಹೇಳುತ್ತದೆ: "ಪ್ರತ್ಯುದ್ಗತಾಂ ಗೂರ್ಜರರಾಜಸೇನಾಂ ನಿರ್ಜಿತ್ಯ ರಾಜಾ ಸ್ವಯಮೇಕ ಏವ", ನರಸಿಂಹನು ತನ್ನ ಅಧಿರಾಜನಾದ ರಾಷ್ಟ್ರಕೂಟ ಮುಮ್ಮಡಿ ಇಂದ್ರನ ನೇತೃತ್ವ

ದಲ್ಲಿ ಮಹೋದಯ ನಗರವನ್ನು ಎಂದರೆ ಕಾನ್ಯಕುಬ್ಜವನ್ನು ಮುತ್ತಿಗೆ ಹಾಕಿ ಅಲ್ಲಿನ ರಾಜ ಮಹಿಪಾಲನನ್ನು ಓಡಿಸಿದನೆಂದು ಚರಿತ್ರೆಕಾರರು ಹೇಳುತ್ತಾರೆ; ಇದು ಕ್ರಿ. ಶ. ೯೧೪ರಿಂದ ಈಚೆಗೆ ನಡೆದಿರುವಂತೆ ಹೇಳಬಹುದು.

**೩೮.** ಇಷ್ಟೇ ಅಲ್ಲದೆ ನರಸಿಂಹನು, ಗಂಗಾವಾರ್ಧಿಯೊಳ್–ಗಂಗಾನದಿಯಲ್ಲಿ, ಆತ್ಮತುರಂಗಮುಮಂ–ತನ್ನ ಕುದುರೆಯನ್ನು, ಮಿಸಿಸಿ–ಮಜ್ಜನಮಾಡಿಸಿ, ನೆಗಳ್ದ– ಪ್ರಸಿದ್ಧವಾದ, ಡಾಳಪ್ರಿಯನೊಳ್–ಡಾಳಪ್ರಿಯನಲ್ಲಿ?, ಸಂಗತಗುಣಂ–ಗುಣಯುಕ್ತ ನಾದ ಅವನು, ಅಸಿಲತೆಯನ್ನು–ತನ್ನ ಲತೆಯಂತಿರುವ ಖಡ್ಗವನ್ನು, ಭುಜವಿಜಯ ಗರ್ವದಿಂ-ತೋಳ್ಗಿಲವಿನ ಗರ್ವದಿಂದ, ಅಸುಂಗೊಳೆ-ಪ್ರಾಣಾಪಹರಣಮಾಡುವುದಕ್ಕಾಗಿ, ಸ್ಥಾಪಿಸಿದಂ–ನಿಲ್ಲಿಸಿದನು ಅಥವಾ ನಾಟಿದನು, ನೆಲದಲ್ಲಿ. ಇಲ್ಲಿ 'ಡಾಳಪ್ರಿಯನೊಳ್' ಅಪಪಾಠವೆಂದು ತೋರುತ್ತದೆ, ಡಾಳಪ್ರಿಯಂ–ಎಂದರೆ ಪ್ರಕಾಶದಲ್ಲಿ ಪ್ರೀತಿಯುಳ್ಳ ವನು ; ಇಲ್ಲಿ ಇದು ಅಸಂಗತವಾಗಿದೆ. ವೇಮುಲವಾಡದ ಶಾಸನದಲ್ಲಿ 'ಕಾಳಪ್ರಿಯೇ ರಾಜಕದಂಬಕಸ್ಯಸ್ತಂಭೇ ಸ್ವಶೌರ್ಯಂ ವಿಲಿಲೇಖ ಶೈಳೀ" ಎಂದಿದೆ. ನರಸಿಂಹನು ತನ್ನ ಪ್ರತಾಪವನ್ನು ಕಂಬದ ಮೇಲೆ ಕೊರೆಯಿಸಿ ಆ ಕಂಬವನ್ನು ಕಾಳಪ್ರಿಯದಲ್ಲಿ ಸ್ಥಾಪಿ ಸಿದನು ಎಂದು ಇದರ ಅಭಿಪ್ರಾಯ. ಉಜ್ಜಯನಿಯಲ್ಲಿರುವ ಮಹಾಕಾಲೇಶ್ವರನ ದೇವಾಲಯ ಈ ಕಾಳಪ್ರಿಯವೆಂದು ಡಾ|| ಭಂಡಾರಕರ್‌ರವರ ಅಭಿಪ್ರಾಯ. ಪ್ರಕೃತ ಪದ್ಯದಲ್ಲಿ ಡಾಳಪ್ರಿಯನೊಳ್ ಎಂಬುದಕ್ಕೆ ಪ್ರತಿಯಾಗಿ 'ಕಾಳಪ್ರಿಯದೊಳ್' ಎಂದಿರಬಹುದು. "ಅಸುಂಗೊಳ್ ಪ್ರಾಣಾಪಹರಣೇ".

**೩೯.** ಆ ನರಸಿಂಹ ಮಹೀಶ ಮನೋನಯನಪ್ರಿಯೆ–ಆ ನರಸಿಂಹ ಭೂಪಾಲನ ಮನಸ್ಸಿಗೂ ಕಣ್ಣಿಗೂ ಪ್ರಿಯಳಾದ, ವಿಳೋಳನೀಳಾಳಕೆ–ಚಂಚಲವಾದ ಕರಿಯ ಮುಂಗುರುಳುಳ್ಳವಳು, ಚಂದ್ರಾನನೆ–ಚಂದ್ರನಂತೆ ಮುಖವುಳ್ಳವಳು ಆದ, ಜಾಕವ್ವೆ ದಲ್–ಜಾಕವ್ವೆಯಲ್ಲವೆ, ಹೌದು, ನಿಜವಾಗಿಯೂ; ಕುಲದೊಳಂ–ಕುಲದಲ್ಲಿಯೂ, ಶೀಲ ದೊಳಂ–ನಡತೆಯಲ್ಲಿಯೂ, ಆ ಜಾನಕಿಗೆ–ಆ ಸೀತಾದೇವಿಗಿಂತ, ಅಗ್ಗಳೆಮ–ಅತಿಶಯ ಳಾದವಳೇ ಆಕೆ.

**೪೦.** ಆ ಜಾಕವ್ವೆಯ ಸೌಂದರ್ಯದ ವರ್ಣನೆ. ಪೊಸತಲರ್ದ–ಹೊಸದಾಗಿ ಅರಳಿದ, ಬಿಳಿಯ ತಾವರೆಯ, ಎಸಳ್ಗಳ–ಎಸಳುಗಳ, ನಡುವಿರ್ಪ–ನಡುವೆ ನೆಲಸಿರುವ, ಸಿರಿಯುಂ–ಲಕ್ಷ್ಮಿಯೂ ಕೂಡ, ಆಕೆಯ ಕೆಲದೊಳ್–ಆಕೆಯ ಮಗ್ಗುಲಲ್ಲಿ, ನಸು ಮಸುಳ್ದು–ಸ್ವಲ್ಪಕಾಂತಿಹೀನವಾಗಿ, ತೋರ್ಪಳೆನೆ–ತೋರುತ್ತಾಳೆ ಎನ್ನಲು, ಜಾಕವ್ವೆಗೆ, ಪೋಲಿಸುವೊಡೆ–ಹೋಲಿಸುವುದಾದರೆ, ಉಳಿದ ಪೆಂಡಿರ್–ಮಿಕ್ಕ ಸ್ತ್ರೀಯರು, ದೊರೆಯೇ–ಸಮಾನರೇ ? ಅಲ್ಲ.

**೪೧.** ಆ ಜಾಕವ್ವೆಗಂ–ಆ ಜಾಕವ್ವೆಗೂ, ವಸುಧಾಜಯ ಸದ್ವಲ್ಲಭಂಗಂ– ಭೂಮಿಯನ್ನೆಲ್ಲ ಗೆದ್ದಿರುವ ಆ ಒಳ್ಳೆಯ ರಾಜ ನರಸಿಂಹನಿಗೂ, ತೇಜೋಗ್ನಿಮಗ್ನರಿಪು ನೃಪಶಲಭಂ–ತನ್ನ ತೇಜಸ್ಸೆಂಬ ಅಗ್ನಿಯಲ್ಲಿ ಮುಳುಗಿದ ಶತ್ರುನೃಪರೆಂಬ ಪತಂಗಗಳ

ನ್ನುಳ್ಳ, ಅತಿವಿಶದಯಶೋರಾಜಿತಂ-ಅತಿ ನಿರ್ಮಲವಾದ ಕೀರ್ತಿಯಿಂದ ಬೆಳಗುತ್ತಿರುವವನೂ ಆದ, ಅರಿಕೇಸರಿ ರಾಜಂ-ಇಮ್ಮಡಿ ಅರಿಕೇಸರಿ ಎಂಬ ದೊರೆ.

೪೨. ಮಗನಾದಂ-ಮಗನಾಗಿ ಹುಟ್ಟಿದನು; ಆಗಿ-ಹಾಗೆ ಹುಟ್ಟಿ, ಚಾಗದ ನೆಗಟ್ತೆಯೊಳ್-ದಾನಮಾಡುವ ಕಾರ್ಯದಲ್ಲಿ, ಬೀರದೇಟ್ಗೆಯೊಳ್-ಪ್ರತಾಪೋನ್ನತಿಯಲ್ಲಿ, ನೆಗಟ್ತೆ-ಪ್ರಸಿದ್ಧನಾಗಲು, ಮಗಂ ಮಗನೆನೆ-ಮಗನೆಂದರೆ ಇವನೇ ಮಗನು ಎಂದೆಲ್ಲರೂ ಹೇಳುವ ಹಾಗೆ, ಪುಟ್ಟಲೊಡಂ-ಹುಟ್ಟಿದ ಕೂಡಲೆ, ಭುವನ ಭವನಂ-ಈ ಲೋಕವೆಂಬ ಮಂದಿರ, ಅರಿಕೇಸರಿಯೊಳ್-ಅರಿಕೇಸರಿ ಕಾರಣವಾಗಿ, ಕೋಟ್ಟೆಗಗೊಂಡುದು-ಕೊಂಬುಮೂಡಿದ ಮುಖವುಳ್ಳದ್ದಾಯಿತು, ಎಂದರೆ ಅದಕ್ಕೆ ಅಸಾಧಾರಣವಾದ ಪೆಂಪು ಉಂಟಾಯಿತು.

೪೩. ಅರಿಕೇಸರಿಗೆ ಗಜಪ್ರಿಯ ಎಂದರೆ ಆನೆಗಳಲ್ಲಿ ಆಸಕ್ತಿಯುಳ್ಳವನು, ಎಂಬ ಬಿರುದಿತ್ತು; ಅದು ಅವನು ತೊಟ್ಟಿಲ ಕೂಸಾಗಿದ್ದ ಕಾಲದಿಂದ ಅವನೊಡನೆ ಬೆಳೆದು ಬಂದಿತ್ತು. ಮದಪ ನೀರೊಳ್-ಆನೆಯ ಮದದನೀರಿನಲ್ಲಿಯೆ, ಲೋಕವಾರ್ತೆಗೆ-ಲೋಕದ ಪ್ರಯೋಜನಕ್ಕಾಗಿ, ಎಂದರೆ ಲೋಕರೂಢಿಯಂತೆ, ಬೆಚ್ಚನೀರ್ದಳಿದು-ಬೆಚ್ಚಗೆ ನೀರನ್ನು ಚಿಮುಕಿಸಿ, ಆಗಳಾ ಮದಗಜಾಂಕುಶದಿಂದೆ-ಆಗ ಆ ಮದ್ದಾನೆಯ ಅಂಕುಶದಿಂದ, ನಾಭಿಯಂ-ಹೊಕ್ಕುಳ ಬಳ್ಳಿಯನ್ನು, ಪೆರ್ಚಿಸಿ-ಕತ್ತರಿಸಿ, ವಿಸ್ತರಿಸಿ, ಮದದಂತಿ ದಂತದೊಳ್-ಸೊಕ್ಕಾನೆಯ ದಂತದಿಂದಲೇ, ಕಟ್ಟಿದ-ಮಾಡಿ ಕಟ್ಟಿದ, ತೊಟ್ಟಲಂ-ತೊಟ್ಟಿಲನ್ನು, ನಯದಿಂದಂ-ಮೃದುವಾಗಿ, ಏಱಿಸೆ-ಹತ್ತಿಸಲು, ಬಾಳ ಕಾಲದೊಳ್-ಕೂಸಾಗಿದ್ದ ಕಾಲದಲ್ಲೆ, ತೊಟ್ಟಲಿಗಂ-ತೊಟ್ಟಿಲಿನಲ್ಲಿದ್ದ ಅರಿಕೇಸರಿ ಬಾಲಕನು, ಗಜಪ್ರಿಯನಪ್ಪುದಂ-ಆನೆಗಳಲ್ಲಿ ಆಸಕ್ತಿಯುಳ್ಳವನೆಂಬುದನ್ನು, ಸಲೆ ತೋಱಿದಂ-ಚೆನ್ನಾಗಿ ತೋರಿಸಿದನು. ಮಗು ಹುಟ್ಟಿದ ಕೂಡಲೇ ಅದು ಅಳಲೆಂದು ಅದರ ಮೇಲೆ ತಣ್ಣೀರನ್ನು ಚಿಮುಕಿಸುವುದು ಲೋಕರೂಢಿ; ಅದಕ್ಕೆ ಬೆಚ್ಚನೀರೆಂದು ಹೆಸರು; ಇಲ್ಲಿ ಆನೆಯ ಮದೋದಕವೇ ಅರಿಕೇಸರಿ ಬಾಲಕನಿಗೆ ಬೆಚ್ಚನೀರಾಯಿತು; ನಾಭಿಯ ಬಳ್ಳಿಯನ್ನು ಆನೆಯ ಅಂಕುಶದಿಂದ ಕತ್ತರಿಸಲಾಯಿತು. ಆನೆಯ ದಂತದಿಂದ ಮಾಡಿದ ತೊಟ್ಟಿಲನ್ನು ಕಟ್ಟಲಾಯಿತು. ಹೀಗೆ ಅರಿಕೇಸರಿಗೆ ಆನೆಯ ಸಂಬಂಧ ಕೂಸುತನದಿಂದ ಉಂಟಾಗಿ ಅವನು ಗಜಪ್ರಿಯನಾಗಿ ಬೆಳೆದು ಬಂದನು.

೪೪. ರುಂದ್ರಾಂಬೋಧಿಪರೀತ ಮಹೀಂದ್ರರ್-ವಿಸ್ತಾರವಾದ ಕಡಲು ಬಳಸಿರುವ ಈ ಭೂಮಿಗೆ ರಾಜರು, ಇನ್ನರ್-ಇಂಥವರು, ಅರಿಕೇಸರಿಯಂಥವರು, ಆರ್ ಅದು ಯಾರಿದ್ದಾರೆ? ಯಾರೂ ಇಲ್ಲ. ಈ ನರೇಂದ್ರಂ-ಈ ದೊರೆ ಅರಿಕೇಸರಿ, ಸಾಕ್ಷಾದಿಂದ್ರಂ ತಾನೆನೆ- ಪ್ರತ್ಯಕ್ಷನಾದ ಇಂದ್ರನೇ ತಾನು ಎಂಬಂತೆ, ಸಲೆ ನೆಗೞ್ದು-ಚೆನ್ನಾಗಿ ಪ್ರಸಿದ್ಧನಾಗಿ, ಇಂದ್ರೇಂದ್ರನ-ಇಂದ್ರರಾಜನ, ತೋಳ್-ತೋಳುಗಳ್, ತೊಟ್ಟಿಲಾಗಿರೆ, ಬಳೆದಂ-ಬೆಳೆದನು, ವರ್ಧಿಸಿದನು. ರಾಷ್ಟ್ರಕೂಟರಾಜರಲ್ಲಿ ಇಂದ್ರರಾಜನೆಂಬವನೊಬ್ಬನು; ಅವನ ಆಳಿಕೆಯ ಕಾಲ ಕ್ರಿ. ಶ. ೯೧೨-೯೧೬; ಇವನನ್ನು

ಮುಮ್ಮಡಿ ಇಂದ್ರ ಎಂದು ಕರೆಯುತ್ತಾರೆ. ಇವನ ರಕ್ಷಣೆಯಲ್ಲಿ, ಪೋಷಣೆಯಲ್ಲಿ ಈ ಇಮ್ಮಡಿ ಅರಿಕೇಸರಿ ಬೆಳೆದು ದೊಡ್ಡವನಾದನು.

೪೫. ಅಮಿತಮತಿ ಗುಣದಿಂ–ತುಂಬ ಬುದ್ಧಿವಂತಿಕೆಯೆಂಬ ಗುಣದಿಂದ ಅರಿಕೇಸರಿ, ಅತಿ ವಿಕ್ರಮಗುಣದಿಂ–ಅತಿಪರಾಕ್ರಮಗುಣದಿಂದ, ಶಾಸ್ತ್ರಪಾರಮುಂ-ಶಾಸ್ತ್ರಗಳ ಆಚೆಯ ತೀರವೂ, ರಿಪುಬಳಪಾರಮುಂ–ಶತ್ರುಸೈನ್ಯದ ಆಚೆಯ ದಡವೂ, ಒಡನೆ-ಜೊತೆಯಾಗಿಯೇ, ಸಂದುವು – ಲಭ್ಯವಾದುವು, ಎನಿಸಿದಂ – ಎನಿಸಿಕೊಂಡನು, ಅಮೇಯ ಭುಜಶಾಲಿ – ಅಳತೆಗಸಾಧ್ಯವಾದ ಭುಜಬಲವುಳ್ಳ, ಮನುಜಮಾರ್ತಾಂಡನೃಪಂ–ಮನುಷ್ಯರಲ್ಲಿ ಸೂರ್ಯನಂತಿರುವ ಈ ರಾಜನು. ಎಂದರೆ ತನ್ನ ಬುದ್ಧಿಬಲದಿಂದಲೂ ಬಾಹುಬಲದಿಂದಲೂ ಶಾಸ್ತ್ರವನ್ನೂ ಶಸ್ತ್ರವಿದ್ಯೆಯನ್ನೂ ಒಟ್ಟಿಗೇ ಕಲಿತನು.

೪೬. ಉಡೆವಣಿ ಪಱಿಯದ ಮುನ್ನಮೆ – ಸೊಂಟಕ್ಕೆ ಕಟ್ಟಿರುವ ಅರಳೆಲೆ ಮುಂತಾದ ಒಡವೆಯನ್ನು ಕತ್ತರಿಸದ ಎಂದರೆ ತೆಗೆದು ಹಾಕುವುದಕ್ಕಿಂತ ಮುಂಚಿನಿಂದಲೂ, ತೊಡಗಿ–ಆರಂಭವಾಗಿ, ಚಲಂ–ಛಲವು, ನೆಗೞ್ತೆ – ಉಂಟಾಗಲು, ರಿಪುಬಲಂಗಳನೆ ಪಡಲ್ವಡಿಸಿ – ಶತ್ರುಸೈನ್ಯಗಳನ್ನೆ ಚಲ್ಲಾಪಿಲ್ಲಿ ಮಾಡಿ, ಪರಬಳದ ನೆತ್ತರ ಕಡಲೊಳಗಣ – ಶತ್ರುಸೈನ್ಯದ ರಕ್ತದ ಕಡಲಿನಲ್ಲಿರುವ, ಜಿಗುಳೆ – ಜಿಗಣೆಯು, ಬಳೆವ ತೆಱದೆ – ಬೆಳೆಯುವ ರೀತಿಯಿಂದ, ಬಳೆದಂ-ವೃದ್ಧಿಯಾದನು.

೪೭. ಮೇಲೆೞ್ವಬಲಂ ಮೇಲೆದಂಡೆತ್ತಿ ಬಂದ ಸೈನ್ಯ, ಕೋಟಿಗೆ ಮೇಲಪ್ಪೊಡಂ –ಒಂದು ಕೋಟಿಗೆ ಮೀರಿದ್ದಾದರೂ, ಅನ್ಯವನಿತೆ-ಪರಸ್ತ್ರೀಯು, ನೆಗೞ್ದೂರ್ವಶಿಗಂ–ಪ್ರಸಿದ್ಧ ರೂಪವತಿಯಾದ ಊರ್ವಶಿಗೂ, ಮೇಲಪ್ಪೊಡಂ – ಮೀರಿದವಳಾಗಿದ್ದರೂ, ಅಕ್ಕೆ – ಆಗಲಿ, ಆಗಿರಲಿ ; ಎಂದುಂ–ಯಾವಾಗಲೂ ; ಪರಬಲಾಬ್ಧಿಗಂ–ಪರಸೈನ್ಯಕ್ಕೂ, ಪರವಧುಗಂ–ಪರಸ್ತ್ರೀಗೂ, ಕಣ್-ಕಣ್ಣು, ಸೋಲದು–ಸೋತುಹೋಗದು, ಮೋಹಗೊಳ್ಳದು. ಸೋಲ್ – ಮೋಹಗೊಳ್ಳು ಎಂಬರ್ಥದಲ್ಲಿ ಪ್ರಯೋಗವಾಗಿದೆ : " ಸೋಲದೆ ಪರವನಿತೆಗೆ ಕಣ್ ಸೋಲದು ಮೊಲೆವಾಲನೂಡಿ ಸಡಪಿದತಾಯಿಂ ಮೇಲೆನೆ ಬಗೆಗುಂ ನೋಡಿರೆ ಸೋಲದು ಚಿತ್ತಂ ಪರಾಂಗನಾಪುತ್ರಕನಾ" (III ಕೃಷ್ಣನ ಜೂರ ಪ್ರಶಸ್ತಿ)

೪೮. ಪ್ರಿಯಗಳ್ಳಂ–ಪ್ರಿಯಗಳ್ಳ ಎಂಬ ಬಿರುದಿದ್ದ ಅರಿಕೇಸರಿ, ಘುರದೊಳ್–ಯುದ್ಧದಲ್ಲಿ, ಮೂಱುಂ ಲೋಕಂ–ಮೂರು ಲೋಕಗಳೂ, ನೆರೆದಿರೆಯುಂ–ಒಟ್ಟಾಗಿ ಸೇರಿದ್ದರೂ, ಬೀರದ–ಪರಾಕ್ರಮದ, ಅಂತರಕ್ಕೆ–ವ್ಯಾಪ್ತಿಗೆ, ಕಿಱಿದು ಎಂದು ಚಿಂತಿಪಂ–ಅಲ್ಪವೆಂದು ವ್ಯಾಕುಲಿತನಾಗುತ್ತಾನೆ ; ಹಾಗೆಯೇ, ಕುಡುವ ಪೊೞ್ತಿನೊಳ್–ದಾನ ಮಾಡುವ ಹೊತ್ತಿನಲ್ಲಿ, ಮೇರುವೆ ಮುಂದಿರೆಯುಂ – ಚಿನ್ನದ ಬೆಟ್ಟವಾದ ಮೇರು ಪರ್ವತವೆ ತನ್ನೆದುರಿಗಿದ್ದರೂ, ಬಿಯದ–ವ್ಯಯದ ಎಂದರೆ ಖರ್ಚುಮಾಡುವ, ಅಂತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಳಂ.

೪೯. ಪ್ರಶಸ್ತಿ ಕ್ರಮದೊಳ್-ಬಿರುದಾವಳಿಗಳನ್ನು ಹೇಳುವ ಕ್ರಮದಲ್ಲಿ, ಸ್ವಸ್ತಿ

ಸಮಧಿಗತ ಪಂಚಮಹಾ ಶಬ್ದ ಮಹಾ ಸಾಮಂತರ್–ಶುಭವಾಗಲಿ, ಸಂಪಾದಿಸಲ್ಪಟ್ಟ ಪಂಚಮಹಾ ಶಬ್ದಗಳನ್ನುಳ್ಳ ಮಹಾ ಸಾಮಂತರಾಜರು, ಸಮನೆನಿಸುವರ್–ಅರಿಕೇಸರಿ ಯೊಡನೆ ಸಮಾನರೆಂದೆನಿಸಿಕೊಳ್ಳುತಾರೆ ; ಗುಣದೊಳ್–ಗುಣದಲ್ಲಿ, ಸಾಮಂತರ್, ಸಮನೆನಿಪರೆ–ಸಮಾನರಾಗುತ್ತಾರೆಯೆ ? ಇಲ್ಲ. ಪಂಚಮಹಾಶಬ್ದ=ಶೃಂಗ, ತಮ್ಮಟೆ ಶಂಖ, ಭೇರಿ, ಜಯಘಂಟೆ.

೫೦. ಚಾಗದ ಕಂಬಮಂ ನಿಱಿಸಿ–ದಾನದ ಶಿಲಾಸ್ತಂಭವನ್ನು ಸ್ಥಾಪಿಸಿ, ಬೀರದ ಶಾಸನಮಂ ನೆಗಬ್ಚಿ–ಪ್ರತಾಪಸೂಚಕವಾದ ಶಾಸನಗಳನ್ನು ಮಾಡಿಸಿ, ಕೋಳ್ಪೋಗದ ಮಂಡಲಂಗಳನೆ ಕೊಂಡು–ವಶವಾಗದ ರಾಜ್ಯಗಳನ್ನು ವಶಪಡಿಸಿ ಕೊಂಡು, ಜಗತ್ರಿತಯಂಗಳೊಳ್–ಮೂಱು ಲೋಕಗಳಲ್ಲಿ, ಜಸಕ್ಕಾಗರಮಾದ–ಕೀರ್ತಿಗೆ ಮನೆಯಾದ, ಬದ್ದೆಗನಿಂ–ಭದ್ರದೇವನಿಗಿಂತಲೂ, ಆ ನರಸಿಂಹನಿಂ–ಆ ನರಸಿಂಹನಿ ಗಿಂತಲೂ, ಅತ್ತ–ಆಚೆಗೆ, ಪೊದಳ್ದ ಚಾಗದೊಳಂ–ವ್ಯಾಪಿಸಿದ ದಾನದಲ್ಲಿಯೂ, ಒಂದಿದ ಬೀರದೊಳಂ–ಕೂಡಿದ ಶೌರ್ಯದಲ್ಲೂ, ಗುಣಾರ್ಣವಂ–ಅರಿಕೇಸರಿಯು, ನಾಲ್ಬೆರಲ್ ಮೇಗು–ನಾಲ್ಕು ಬೆರಳುಗಳಷ್ಟು ಉನ್ನತನಾಗಿದ್ದಾನೆ. ಅರಿಕೇಸರಿ ತನ್ನ ದಾನಗುಣ ದಿಂದಲೂ ಪ್ರತಾಪದಿಂದಲೂ ಭದ್ರದೇವ ನರಸಿಂಹನನ್ನು ಮೀರಿಸಿದ್ದಾನೆ. ಕೊಳ್ ಎಂಬುದರ ಭಾವನಾಮ ಕೋಳ್.

೫೧. ಎನೆಸಂದುಂ-ಎನ್ನಲು ಪ್ರಸಿದ್ಧನಾಗಿ, ವೀರವೈರಿಕ್ಷಿತಿಪ ಗಜಘಟಾಟೋಪ ಕುಂಭಸ್ಥಲೀ ಭೇದನಂ–ಆ ಶತ್ರುರಾಜರ ಆನೆಗಳ ಸೈನ್ಯದ ಠೀವಿಯಿಂದ ಕೂಡಿದ ಕುಂಭಸ್ಥಳಗಳನ್ನು ಸೀಳುವವನಾದ, ಉಗ್ರೋದ್ಘಾಸಿ ಭಾಸ್ವದ್ಭುಜ ಪರಿಘನಂ– ಭಯಂಕರವೂ ಶ್ರೇಷ್ಠವೂ ಆದ ಕತ್ತಿಯಿಂದ ಪ್ರಕಾಶಮಾನವಾದ ತೋಳೆಂಬ ಪರಿಘಾಯುಧವುಳ್ಳ, ಆರೂಢ ಸರ್ವಜ್ಞನಂ–ಆರೂಢ ಸರ್ವಜ್ಞ ಎಂಬ ಬಿರುದುಳ್ಳ, ವೈರಿನರೇಂದ್ರೋದ್ದಾಮ ದರ್ಪೋದ್ದಳನನನೆ–ವೈರಿರಾಜರ ಅತಿಶಯವಾದ ಗರ್ವವನ್ನು ಭೇದಿಸುವವನಾಗಿರುವ ಅರಿಕೇಸರಿಯನ್ನೇ, ಕಥಾನಾಯಕಂ ಮಾಡಿ–ಕತೆಗೆ ನಾಯಕ ನನ್ನಾಗಿ ಮಾಡಿ, ಸಂದ–ಪ್ರಸಿದ್ಧನಾದ, ಅರ್ಜುನನೊಳ್ ಪೋಲ್ಪ–ಅರ್ಜುನನೊಡನೆ ಹೋಲುವ, ಈ ಕಥಾಭಿತ್ತಿಯಂ–ಈ ಕಥಾ ಚಿತ್ರವನ್ನು, ಪೇಳಲೆಂದು–ನಿರೂಪಿಸ ಬೇಕೆಂದು, ಎತ್ತಿಕೊಂಡೆಂ-ಪ್ರಾರಂಭಿಸಿದೆನು. ಪರಿಘ-ಕಬ್ಬಿಣದ ಒನಕೆ.

ಇದುವರೆಗೆ ಹೇಳಿರುವ ಅರಿಕೇಸರಿಯ ವಂಶವೃಕ್ಷವನ್ನು ಕೆಳಗೆ ಕಾಣಿಸಿದೆ:—




ಇಲ್ಲಿ ಕೊಟ್ಟಿರುವ ಆಳಿಕೆಯ ಕಾಲಗಳು ಸುಮಾರಾಗಿ ಊಹಿಸಲ್ಪಟ್ಟಿವೆ. ಖಚಿತವಾಗಿ ತಿಳಿದುಬರುವ ಕಾಲಗಳನ್ನು ಕೆಲವರಿಗೆ ಕಾಣಿಸಿದೆ. ಈ ವಂಶವೃಕ್ಷವನ್ನು ಕೊಟ್ಟಿರುವವರು ಇತಿಹಾಸಜ್ಞರಾದ ಶ್ರೀಮಾನ್ ಎನ್. ಲಕ್ಷ್ಮೀನಾರಾಯಣರಾಯರು, ಎಂ.ಎ. (QJMS, XLV, p. 212–228)

೫೧.(ಅ) ಅದೆಂತೆನೆ–ಅದು ಹೇಗೆನ್ನಲು, ಸಮುನ್ಮಿಷತ್–ಪ್ರಕಾಶಿಸುತ್ತಿರುವ, ವಿವಿಧ ರತ್ನಮಾಲಾ–ಬಗೆಬಗೆಯಾದ ರತ್ನಗಳ, ಪ್ರಭಾಭಿದ್–ಕಾಂತಿಯಿಂದ ಭೇದಿಸಲ್ಪಟ್ಟ, ಅರುಣಜಳ–ಕೆಂಪಾದ ನೀರಿನಿಂದ, ಆವಿಳ–ಕದಡಲ್ಪಟ್ಟ, ವಿಳೋಳ–ಏಳುತ್ತ ಬೀಳುತ್ತಿರುವ, ವೀಚೀರಯ ಪ್ರಸಾರಿತ–ಅಲೆಗಳ ವೇಗದಿಂದ ಸೀಳಲ್ಪಟ್ಟ, ಕುಳಾಚಳ–ಕುಲಪರ್ವತಗಳಿಂದ ಕೂಡಿದ, ಉದಧಿ–ಸಮುದ್ರದಿಂದ, ಪರೀತಮಾಗಿರ್ದ–ಬಳಸಲ್ಪಟ್ಟ; ಜಂಬುದೀವಿಯೊಳಗೆ–ಜಂಬೂದ್ವೀಪದಲ್ಲಿ, ಕುರುಜಾಂಗಣಂ ನಾಮದಿಂ–ಕುರುಜಾಂಗಣವೆಂಬ ಹೆಸರಿದ್ದ, ನಾಡು–ದೇಶ, ಉಂಟು. ಅಂತಾ ಕುರುಜಾಂಗಣ ವಿಷಯದೊಳ್–ಹಾಗೆ ಆ ಕುರುಜಾಂಗಣ ದೇಶದಲ್ಲಿ.

೫೨. ಇಲ್ಲಿಂದ ಮುಂದಕ್ಕೆ ೫೭ರ ಪದ್ಯ ಪೂರ್ತಿಯಾಗಿ ದೇಶವರ್ಣನೆ: ಜಲಜಲನೆ–ಜಲಜಲ ಎಂದು, ಒಳ್ಕುತಿರ್ಪ–ಪ್ರವಾಹವಾಗಿ ಹರಿಯುವ, ಪರಿಕಾಲ್–ಹರಿಯುವ ನೀರ ಕಾಲುವೆಗಳು ; ಪರಿಕಾಲೊಳ್–ಆ ಕಾಲುವೆಗಳಲ್ಲಿ, ಅಳುರ್ಕೆಗೊಂಡ–ವ್ಯಾಪಿಸಿರುವ, ತುಂಬಿರುವ, ನೆಯ್ದಿಲಪೊಸವೂ–ನೆಯ್ದಿಲೆಯ ಹೊಸದಾದ ಹೂವು ; ಪೊದಳ್ದ ಪೊಸ ನೆಯ್ದಿಲ–ಹರಡಿಕೊಂಡಿರುವ ಹೊಸದಾದ ನೈದಿಲೆ ಹೂವಿನ, ಕಂಪನೆ–ಸುಗಂಧವನ್ನೆ, ಬೀಱು–ಸೂಸಾಡಿ, ಕಾಯ್ತ–ಕಾಯಿಬಿಟ್ಟಿರುವ ಎಂದರೆ ಫಲಬಿಟ್ಟಿರುವ, ಕೆಂಗೊಲೆಯೊಳೆ–ಕೆಂಪು ಗೊಂಚಲಿನಲ್ಲಿಯೆ, ಜೋಲ್ವ–ಜೋತುಬಿದ್ದಿರುವ, ಶಾಲಿ–ಬತ್ತ ; ನವಶಾಲಿಗೆ–ಈ ಹೊಸದಾದ ನೆಲ್ಲಿಗೆ, ಪಾಯ್ವ–ನುಗ್ಗಿಬರುವ, ಶುಕಾಳಿ–ಗಿಣಿಗಳ ಸಾಲು ; ತೋಱಿ–ಕಾಣಲು, ಕೆಯ್ವೊಲಗಳಿನೊಪ್ಪಿ–ಗದ್ದೆಗಳಿಂದ ರಮಣೀಯವಾಗಿ, ತೋಱಿ–ಕಂಡು, ಸಿರಿ–ಲಕ್ಷ್ಮಿ, ಆ ವಿಷಯಾಂತರಾಳಮಂ–ಆ ದೇಶದ ಹರವನ್ನು, ನೋಡುಗುಂ–ನೋಡುತ್ತಾಳೆ. ಈ ಪದ್ಯದಲ್ಲಿ ಮುಕ್ತ ಪದಗ್ರಹಣವೆಂಬ ಅಲಂಕಾರವಿದೆ. ವರ್ಣನೆ ವಾಸ್ತವಿಕವಾಗಿ ಸೊಗಸಾಗಿದೆ ಇದು ಕುರುಜಾಂಗಣದ ವರ್ಣನೆ ಎಂದು ಹೇಳಿದ್ದರೂ ಇದು ಕವಿಯ ನಾಡಿನ, ಕನ್ನಡ ನಾಡಿನ, ರಮ್ಯವಾದ ಚಿತ್ರ.

೫೩. ಬೆಳೆದು ಒಱಗಿರ್ದ ಕೆಯ್ವೊಲನೆ–ಬೆಳೆದು ತೆನೆಯ ಭಾರದಿಂದ ಬಾಗಿರುವ ಗದ್ದೆಗಳೇ, ಕೆಯ್ವೊಲನಂ–ಗದ್ದೆಗಳನ್ನು, ಬಳಸಿರ್ದ–ಸುತ್ತುವರಿದಿದ್ದ, ಪೂತ ಪೂಗೊಳಗಳೆ–ಹೂಬಿಟ್ಟ ಕೊಳಗಳೇ, ಪೂತ ಪೂಗೊಳಂಗಳಂ ಬಳಸಿರ್ದ–ಹೂವು ಬಿಟ್ಟಿರುವ ಹೂವಿನ ಕೊಳಗಳನ್ನು ಬಳಸಿದ್ದ, ವಿಚಿತ್ರನಂದನಾವಳಿಗಳೆ–ಬಗೆಬಗೆಯಾದ ತೋಟದ ಸಾಲುಗಳೇ, ನಂದನಾವಳಿಗಳಂ ಬಳಸಿರ್ದ–ಈ ತೋಟಗಳನ್ನು ಬಳಸಿದ್ದ, ಮದಾಳಿಸಂಕುಲಂಗಳೆ–ಸೊಕ್ಕಿದ ದುಂಬಿಯ ಸಮೂಹಗಳೇ, ವಿಷಯಾಂಗನಾ–ದೇಶವೆಂಬ ಸ್ತ್ರೀಯ, ಲುಳಿತ–ಕೊಂಕಾದ, ಕುಂತಲದಂತೆವೊಲೊಪ್ಪಿ–ಮುಂಗುರುಳಿನ ಹಾಗೆ ಸೊಗಸಾಗಿ, ತೋಱುಗುಂ–ಕಾಣುತ್ತದೆ. ಹೂವು, ಹಣ್ಣು, ಬತ್ತ, ಗಿಳಿ, ತುಂಬಿ, ಕಂಪು, ತೋಟ, ಕೊಳ—ಇವುಗಳಿಂದ ತುಂಬಿದೆ ಕನ್ನಡ ನಾಡು.

೫೪. ಲಲಿತವಿಚಿತ್ರ ಪತ್ರಫಲಪುಷ್ಪಯುತಾಟವಿ–ಸುಂದರವಾದ ನಾನಾ ಬಗೆಯಾದ ಎಲೆ ಹಣ್ಣು ಹೂವುಗಳಿಂದ ಕೂಡಿದ ಕಾಡು, ಸೊರ್ಕಿದಾನೆಯಂ ಬೆಳೆವುದು–

ಮದದಾನೆಯನ್ನು ಬೆಳೆಸುತ್ತದೆ!, ದೇವಮಾತೃಕವೆನಿಪ್ಪ ಪೊಲಂ-ಮಳೆಯಿಂದಲೇ ಬೆಳೆಯುವ ಹೊಲ, ನವಗಂಧಶಾಲಿಯಂ ಬೆಳೆವುದು-ಹೊಸ ಸುಗಂಧದಿಂದ ಕೂಡಿ-ಬತ್ತವನ್ನು ಬೆಳೆಯುತ್ತದೆ! ರಮ್ಯ ನಂದನವನಾಳಿ-ರಮಣೀಯವಾದ ತೋಟಗಳ ಸಾಲು, ವಿಯೋಗಿ ಜನಕ್ಕೆ-ಪರಸ್ಪರ ಅಗಲಿರುವ ಪ್ರಣಯಿಗಳಿಗೆ, ಜೀಟಮುಂದ ಪ್ರೀತಿಯನ್ನು, ಬಳೆವುದು-ಬೆಳಸುತ್ತದೆ; ಆ ವಿಷಯಾಂತರಾಳದೊಳ್-ಆ ನಾಡಿನ ಒಳ ಭಾಗದಲ್ಲಿ, ನಾಡಕಾಡ ಬೆಳಸು-ನಾಡಿನಲ್ಲಿಯೂ ಕಾಡಿನಲ್ಲಿಯೂ ಬೆಳೆಯುವ ಬೆಳಸು, ಇಂಬೆಳಸು-ಇನಿದಾದ ಎಂದರೆ ಮಧುರವಾದ ಬೆಳಸು. ಇಲ್ಲಿ ಕವಿಯ ಆಶ್ಚರ್ಯ, ಸಂತೋಷ, ಸೌಂದರ್ಯ ದೃಷ್ಟಿಗಳು ಅಭಿವ್ಯಕ್ತವಾಗಿವೆ. ದೇವತೆಗಳು ಸುರಿಸುವ ಮಳೆಯಿಂದಲೇ ಬೆಳೆವ ಭೂಮಿ ದೇವಮಾತೃಕ; ನದೀ ನೀರಿನಿಂದ ಬೆಳೆಯುವ ಭೂಮಿ ನದೀಮಾತೃಕ.

೫೫. ಆವಲರುಂ ಪಣ್ಣು-ಯಾವ ಹೂವೂ ಹಣ್ಣು, ಬೀತು-ಮುಗಿದುಹೋಗಿ ಎಂದರೆ ಅದರ ಕಾಲದಲ್ಲಿ ಅದು ಇರುತ್ತದೆ, ಆಮೇಲೆ ಇಲ್ಲವಾಗುತ್ತದೆ, ಇಂಥವು, ಓವವು ಗಡ-ಜನರನ್ನು ಕಾಪಾಡಲಾರವಲ್ಲವೆ? ಅಲ್ಲಿ ಮಲ್ಲಿಗೆಗಳುಂ ಮಾವುಗಳುಂ-ಅಲ್ಲಿ ಮಲ್ಲಿಗೆ ಮಾವುಗಳು ಕೂಡ, ಬೀಯವು-ಮುಗಿದುಹೋಗವು, ಎಂದರೆ ಎಲ್ಲಾ ಕಾಲದಲ್ಲೂ ಇರುತ್ತವೆ; ಎಂದೊಡೆ-ಎಂದರೆ, ಇನ್ ಪೆಜತು-ಇನ್ನು ಬೇರೆಯಾದ, ಸಂಸಾರಸಾರಸರ್ವಸ್ವಫಲಂ-ಸಂಸಾರಸಾರಸರ್ವಸ್ವವಾಗಿರುವ ಹಣ್ಣು ಜೇರೇನಿದೆ. ಕವಿಗೆ ಮಾವಿನಲ್ಲಿ ಮಲ್ಲಿಗೆಯಲ್ಲಿ ಇರುವ ಪ್ರೀತಿ ಅತಿಶಯವಾದದ್ದು; ಅವೆರಡಿದ್ದರೆ ಬೇರೆ ಸಂಸಾರ ಭೋಗಗಳೇಕೆ?

೫೬. ಆ ನಾಡಿನ ಕಬ್ಬು ಹೂವು ಹಣ್ಣುಗಳ ಸೊಗಸನ್ನು ಏನೆಂದು ಹೇಳುವುದು. ತನಿಗರ್ವು-ಹೊಸದಾದ ಕಬ್ಬು, ಮಿಡಿದೊಡೆ-ಬೆರಳಿನಿಂದ ಹೊಡೆದರೆ, ರಸಂ ಬಿಡುವುವು-ರಸವನ್ನು ಸುರಿಸುತ್ತವೆ; ತುಂಬಿಗಳ್-ದುಂಬಿಗಳು, ಬಿರಿದೊಂದು ಮುಗುಳ ಕಂಪಿನೊಳೆ-ಅರಳಿದ ಒಂದು ಮೊಗ್ಗಿನ ಸುಗಂಧದಲ್ಲಿಯೇ, ಮೊಗಂಗಿಡುವುವು-ಮುಖ ಕೆಡಿಸಿಕೊಳ್ಳುವುವು, ಎಂದರೆ ಸಾಕು ಸಾಕು ಎಂದು ಅಸಹ್ಯ ಪಡುವುವು; ಗಿಳಿಗಳ್-ಗಿಣಿಗಳು, ಕುಡಿದೊಂದು ಪಣ್ಣರಸದೊಳೆ-ಕುಡಿದ ಒಂದು ಹಣ್ಣಿನ ರಸದಿಂದಲೇ, ಅಜ್ಕಿಮೆವಡುವುವು-ಅಜೀರ್ಣವನ್ನು ಪಡೆಯುತ್ತವೆ. ಕಬ್ಬು ಹೂ ಹಣ್ಣು ಎಷ್ಟು ರಸವತ್ತಾಗಿರಬೇಕು!

೫೭. ಸುತ್ತಲುಂ-ಎಲ್ಲೆಲ್ಲೂ, ಸುತ್ತಿಱಿದ-ಬಳಸಿರುವ, ರಸದ ತೊಱೆಗಳೆ-ಸಿದ್ಧರಸದ ನದಿಗಳೇ, ಮುತ್ತಿನ ಮಾಣಿಕದ ಪಲವುಮಾಗರಮೆ-ಮುತ್ತುರತ್ನಗಳಿಂದ ಮಾಡಿದ ಹಲವು ಮನೆಗಳೇ, ಮದೋನ್ಮತ್ತ ಮದಕರಿವನಂಗಳೆ-ಮದದಿಂದ ಸೊಕ್ಕಿದ ಆನೆಗಳನ್ನುಳ್ಳ ಕಾಡುಗಳೇ, ಆ ನೆಲದ ಸಿರಿಯನೇನಂ ಪೊಗಱ್ವೆಂ-ಆ ನೆಲದ ಸಂಪತ್ತನ್ನು ಏನೆಂದು ತಾನೆ ಹೊಗಳುವೆನು!

**ವಚನ**: ರಾಜಧ್ರಾಜಧಾನಿ–ಪ್ರಕಾಶಮಾನವಾದ ರಾಜಧಾನಿ; ಇಲ್ಲಿ ಬಾಣ ಭಟ್ಟನು ಮಾಡಿರುವ ವರ್ಣನೆಯಿಂದ ಪಂಪ ಪ್ರಭಾವಿತನಾಗಿದ್ದಾನೆ.

೫೮. ರಗಳೆ: ಪೊಱವೊೞಲ–ಪಟ್ಟಣದ ಹೊರಭಾಗದ; ಫಲಪ್ರಕೀರ್ಣ– ಹಣ್ಣುಗಳಿಂದ ಕಿಕ್ಕಿರಿದ; ನನೆ–ಹೂವು; ಕೊನೆ–ಕುಡಿ; ನಿಕುಂಜದಿಂ–ಬಳ್ಳಿ ಮಾಡದಿಂದ; ಪ್ರಸೂನ–ಹೂವಿನ; ಆಕಾಶವೇ ಕತ್ತರಿಸಿ ಕೆಳಗೆಬಿತ್ತೊ ಎಂಬಂತಿರುವ ಕೆರೆಗಳಿಂದ; ಕುಕಿಲ್ವ–ಶಬ್ದಮಾಡುವ; ಸುರಯಿಯುರಲ–ಸುರಗಿಯು ಹೂವಿನ; ಮೊಗಸಿದ–ಮುತ್ತಿಕೊಂಡ; ತೊದಲ್ವ–ತೊದಲು ಮಾತಾಡುವ; ತುರಂಗಮಂಗಳಿಂ– ಕುದುರೆಗಳಿಂದ; ಉದಗ್ರ–ಎತ್ತರವಾದ; ಕನಕಶಾಳದಿಂ–ಚಿನ್ನದ ಕೋಟೆ ಗೋಡೆಯಿಂದ; ದೇವಕುಲ–ದೇವಸ್ಥಾನ; ಮಿಳಿರ್ವ–ಅಲುಗಾಡುವ; ಸದಾನಿ ಕೇತನಂಗಳಿಂ– ದಾನಮಾಡುವವರ ಮನೆಗಳಿಂದ, ಧನದ–ಕುಬೇರ, ಬಜ್ಜರ–ವೈಶ್ಯರ; ಆಪಣಂಗಳಿಂ– ಅಂಗಡಿಗಳಿಂದ; ಕಾವಣಂಗಳಿಂ–ಚಪ್ಪರಗಳಿಂದ; ವಿಟಜನಕ್ಕೆ ತೊಡರ್ವ ಚಾರಿ– ವಿಟಜನರು ಸಿಕ್ಕಿಕೊಳ್ಳುವ ಸಂಕೋಲೆ; ವಿದಗ್ಧ–ಬಲ್ಲವ; ಗುಣಣೆ–ನೃತ್ಯಶಾಲೆ; ಬಳ್ಳವಳ್ಳಿ–ಆಧಿಕ್ಯ, ಅತಿಶಯ; ನೀಡದಿಂ–ಗೂಡಿನಿಂದ; ಹಾಸಿನೆಯಿಂದ.

ಇದೊಂದು ತೆರನಾದ ರಗಳೆ; ನಿಷ್ಕೃಷ್ಟವಾದ ಹೆಸರು ಏನೂ ಇಲ್ಲ; ಮೊದಲನೆಯ ಪಾದದಲ್ಲಿ ಮೂರು ಮಾತ್ರೆಗಳ ಏಳುಗಣಗಳೂ ಒಂದು ಗುರುವೂ, ಎರಡನೆಯ ಪಾದದಲ್ಲಿ ಒಂದು ಜಗಣವೂ (u–u), ಎರಡು ಮೂರು ಮಾತ್ರೆಗಳ ಗಣಗಳೂ ಮುಕ್ತಾಯಕ್ಕೆ ಒಂದು ಗುರುವೂ ಬರುತ್ತವೆ; ಇಂಥ ರಗಳೆಯೊಂದು ಕುಮುದೇಂದು ರಾಮಾಯಣದ ೪ನೆಯ ಸಂಧಿಯಲ್ಲಿ ದೊರೆಯುತ್ತದೆ; ಉತ್ಸಾಹ ರಗಳೆ ಎಂದು ಅದರ ಸಂಪಾದಕರು ಇದಕ್ಕೆ ಹೆಸರಿಸಿದ್ದಾರೆ.

**ವಚನ**: ವಿಧಾತ್ರಂ–ಬ್ರಹ್ಮನು; ತೆರಳ್ಚಿದಂತೆ–ರಾಶಿಮಾಡಿದಂತೆ; ಹಾರಮಾಗಿರ್ದ–ರಮಣೀಯವಾಗಿದ್ದ; ಅವಳಂಬನವಾಗೆ–ಆಶ್ರಯಸ್ಥಾನವಾಗಲು;

೫೯. ಜಳರುಹನಾಭನ–ವಿಷ್ಣುವಿನ, ನಾಭಿಯ ಜಳಬುದ್ಬುದದೊಳಗೆ– ಹೊಕ್ಕುಳ ನೀರಿನ ಗುಳ್ಳೆಯಲ್ಲಿ, ಸುರಭಿ ಪರಿಮಳಮಿಳಿತೋಲ್ಲುಳಿತಾಳಿಜಲಜಂ– ಸುಗಂಧದಿಂದ ಕೂಡಿದ, ದುಂಬಿಗಳಿಂದ ಚಲಿಸುತ್ತಿರುವ ಕಮಲವು, ಆಯ್ತು–ಆಯಿತು, ಹುಟ್ಟಿತು; ಆ ಜಲಜದೊಳ್, ಹಿರಣ್ಯಗರ್ಭಂ–ಬ್ರಹ್ಮಂ, ಒಗೆದಂ–ಹುಟ್ಟಿದನು.

೬೦. ಕಮಲೋದ್ಭವನ–ಬ್ರಹ್ಮನ, ಅಮಳಿನ ಹೃತ್ಕಮಲದೊಳ್–ನಿರ್ಮಲವಾದ ಹೃದಯವೆಂಬ ಕಮಲದಲ್ಲಿ, ಸುರೇಂದ್ರಧಾರಕರ್–ಶ್ರೇಷ್ಠವಾದ ನೀರಿನ ಕಮಂಡಲವನ್ನು ಹಿಡಿದುಕೊಂಡ, ವಾಗಮಳರ್–ನಿರ್ಮಲವಾಕ್ಕುಳ್ಳವರಾದ, ಪುಲಹ, ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ ಮತ್ತು ಕ್ರತು–ಎಂಬಿವರು, ಒಗೆದರ್–ಹುಟ್ಟಿದರು; ನೆಗೞ್ದಿರ್ದರ್–ಪ್ರಸಿದ್ಧರಾಗಿದ್ದರು. ಬ್ರಹ್ಮನ ಮಾನಸ ಪುತ್ರರು ಆರು ಜನ. ಈ ಪದ್ಯದಲ್ಲಿ ಪಾಠಕ್ಲೇಶವಿದೆ. ಇಲ್ಲಿ–ಸುರೇಂದ್ರಧಾರಕರ್ ಎಂಬುದಕ್ಕೆ ಕೊಟ್ಟಿರುವ ಅರ್ಥ ಸಂಶಯಾಸ್ಪದ.

**ವಚನ:** ಅವ್ಯವಚ್ಛಿನ್ನಮಾಗಿ–ಎಡೆಬಿಡದೆ, ನಿರಂತರವಾಗಿ, ನಡುವೆ ನಿಂತು ಹೋಗದೆ.

**೬೧.** ಭುವನತ್ರಯ ಸಂಗೀತ ಕೀರ್ತಿ–ಮೂರು ಲೋಕದಲ್ಲೂ ಹಾಡಲ್ಪಟ್ಟ ಕೀರ್ತಿಯುಳ್ಳವನು; ಸೋಮಂ–ಚಂದ್ರ; ಪ್ರೋದ್ದಾಮ–ಅತಿ ಅತಿಶಯವಾದ; ಲಲಾಮಂ–ಹಣೆಯ ಆಭರಣನಾದವನು, ಶ್ರೇಷ್ಠನಾದವನು.

**೬೨.** ಆ ಸೋಮವಂಶಜರ್ ಪಲರ್–ಆ ಚಂದ್ರವಂಶದಲ್ಲಿ ಹುಟ್ಟಿದ ಹಲವರು, ಆಸುಕರಂ ಬೆರಸು-ತೀವ್ರತ್ವದೊಡನೆ ಕೂಡಿ, ನೆಗಬ್ದ ಜಸದಿಂ-ಉಂಟಾದ ಕೀರ್ತಿಯಿಂದ, ಜಗಮಂ, ಬಾಸಣಿಸಿ-ಮುಚ್ಚಿ, ಪೋದೊಡೆ-ಮರಣವನ್ನು ಹೊಂದಿದರೆ; ದೌಷ್ಯಂತಿ–ದುಷ್ಯಂತನ ಮಗನಾದ. ಇಲ್ಲಿ ಆಸುಕರಂ ಎಂಬುದರ ಅರ್ಥ ಚಿಂತನೀಯ. ಇದಕ್ಕೆ ಅತಿಶಯ ಎಂದರ್ಥವನ್ನು ಕೊಟ್ಟಿದೆ (ಪಂಪಭಾ.ನಿ.) ಸಂಸ್ಕೃತದ ಆಶು=ಶೀಘ್ರ, ತ್ವರಿತ ಎಂಬುದು ಪ್ರಾಕೃತದಲ್ಲಿ ಆಸು ಆಗುತ್ತದೆ; ಆಸುಕಾರ ಎಂಬೊಂದು ಶಬ್ದ ಪ್ರಾಕೃತದಲ್ಲುಂಟು; ಅದಕ್ಕೆ ಹಿಂಸೆ, ಹೊಡೆಯುವುದು, ಮರಣ ಕಾರಣ ಎಂಬರ್ಥಗಳಿವೆ; ಇವು ಪ್ರಕೃತ ಸಂದರ್ಭಕ್ಕೆ ಹೊಂದುವುದಿಲ್ಲ. "ಕೇಸುರಿಸೂಸೆ ತನ್ನವೊಗದಿಂ ಕಿಡಿ ಬೀಱಿರೆತನ್ನ ಕಣ್ಗಳಿಂದಾಸುರಮಾಗೆ ದಾಡೆಗಳೊಡಲ್ ಬಳೆದಂಬರಮಂ ತಱುಂಬೆ ತನ್ನಾಸುಕರಂ ಕರಂ ದೆಸೆಗಮುರ್ವಿಸೆ" ಎಂಬ ನಾಗಚಂದ್ರನ ಪ್ರಯೋಗದಲ್ಲಿ (ಪಂಪರಾ. ೧೧–೧೦೭) ಆಸುಕರಂ ಎಂಬುದು ಭಯಂಕರ ಕಾರ್ಯ ನಿರ್ದೇಶಕವೆಂದು ತೋರುತ್ತದೆ; ತೀವ್ರತ್ವ, ರಭಸ, ಪ್ರತಾಪ ಇತ್ಯಾದಿ ಅರ್ಥವಾಗಬಹುದು.

**೬೩.** ಚಾರು ಚರಿತ್ರಂ-ಮನೋಹರವಾದ ನಡತೆಯುಳ್ಳವನು; ಅಮರ್ದೆಸೆಯೆ–ಸೇರಿ ಪ್ರಕಾಶಿಸಲು;

**೬೪.** ಅನೇಕಾಧ್ವರಭರನಿರತಂ–ಅನೇಕ ಯಜ್ಞಕಾರ್ಯಗಳಲ್ಲಿ ಆಸಕ್ತನಾದವನು; ಕಱಿಯೆ–ಸಾಯಲು; ಪಲರಾದರಿಸಿದ–ಹಲವರು ಪ್ರೀತಿಸಿದ.

**೬೫.** ಪ್ರತಿಮನಿಗೆ ಶಂತನು, ಬಾಹ್ಲಿಕ, ವಿನೂತ, ದೇವಾಪಿ–ಎಂದು ನಾಲ್ವರು ಮಕ್ಕಳು; ಇವರೆಲ್ಲ ಪರಬಳ ಪ್ರಭೇದನ ಶೌರ್ಯರ್–ಶತ್ರುರಾಜರನ್ನು ಮುರಿಯುವುದರಲ್ಲೂ ಶೂರರು.

**ವಚನ:** ಪ್ರತಾಪ ಪ್ರಸರ ಪ್ರಕಟಪಟುವಾಗಿ–ಪ್ರತಾಪದ ವಿಶಾಲತೆಯನ್ನು ಪ್ರಕಟಿಸುವುದರಲ್ಲಿ ಸಮರ್ಥನಾಗಿ.

**೬೬.** ಕಂತುಶರಭವನಂ–ಮನ್ಮಥನ ಬಾಣಕ್ಕೆ ಮನೆಯಾದ, ಎಂದರೆ ಬತ್ತಳಿಕೆಯಾದ ಅಪ್ರತಿಮನು, ಪ್ರಿಯಕಾಂತಾಭ್ರೂವಿಭ್ರಮಗ್ರಹಾಗ್ರಹವಶದಿಂ–ಪ್ರಿಯರಾದ ಸ್ತ್ರೀಯರ, ಹುಬ್ಬಿನ ವಿಲಾಸವೆಂಬ ಗ್ರಹಕ್ಕೆ ವಶವಾಗಿ, ಭ್ರಾಂತಿಸದೆ–ಸಂಸಾರದಲ್ಲಿ ಭ್ರಮೆಗೊಳ್ಳದೆ, ಉಪಶಾಂತಮನಂ–ಸಮಾಧಾನಚಿತ್ತನಾಗಿ, ಸಮಸ್ತ ರಾಜ್ಯಶ್ರೀಯುಂ, ಶಂತನುಗಿತ್ತಂ.

೬೭. ಶಂತನುವಿಗೂ ಗಂಗಾದೇವಿಗೂ ಎಂಟನೆಯ ವಸು ವಸಿಷ್ಠನ ಶಾಪದಿಂದ ಭೀಷ್ಮನಾಗಿ ಹುಟ್ಟಿದನು. ನಿರ್ಜಿತ ಕಂತುವೆನಲ್ಕೆ–ರೂಪಿನಲ್ಲಿ ಮನ್ಮಥನನ್ನು ಮೀರಿಸಿದ ವನೆನ್ನಲು.

ವಚನ: ಭುವನಭವನಕ್ಕೆಲ್ಲಂ–ಲೋಕವೆಂಬ ಮಂದಿರಕ್ಕೆಲ್ಲ; ಆಯುಮುಮಳವು ಮಣ್ಮುಂ–ಐಶ್ವರ್ಯವೂ ಶಕ್ತಿಯೂ ಪ್ರತಾಪವೂ; ನೆಱೆಯೆನೆಱೆಯೆ–ತುಂಬಿಕೊಳ್ಳು ತ್ತಿರಲು.

೬೮. ಸಾಲಪ್ರಾಂಶು–ಸಾಲವೃಕ್ಷದಂತೆ ಎತ್ತರವುಳ್ಳ, ವಿಶಾಲಲೋಲನಯನಂ–ಅಗಲವಾಗಿ ವಿಲಾಸದಿಂದಕೂಡಿರುವ ಕಣ್ಣುಳ್ಳ, ಪ್ರೋದ್ಯತ್ ವೃಷಸ್ಕಂಧಂ–ಎತ್ತರವಾದ ಗೂಳಿಯ ಹೆಗಲನ್ನುಳ್ಳ, ಉನ್ಮೀಲತ್ಪಂಕಜವಕ್ತ್ರಂ–ಅರಳುತ್ತಿರುವ ಕಮಲದಂತೆ ಮುಖ ವುಳ್ಳ, ಆಯತ ಸಮಗ್ರೋರಸ್ಥಳಂ–ವಿಸ್ತಾರವಾದ ತುಂಬಿದ ಎದೆಯ ಪ್ರದೇಶವುಳ್ಳ, ದೀರ್ಘ ಬಾಹಾಲಂಬಂ–ಉದ್ದವಾದ ತೋಳುಗಳಿಗೆ ಆಶ್ರಯನಾದ, ಭುಜವೀರ್ಯ ವಿಕ್ರಮ ಯುತಂ–ಬಾಹುಗಳ ಶೌರ್ಯ ಪ್ರತಾಪಗಳನ್ನುಳ್ಳ, ಗಂಗಾತ್ಮಜನ್ಮಂ–ಭೀಷ್ಮನು, ಜಯಲಕ್ಷ್ಮೀಲೋಲಂ–ವಿಜಯವೆಂಬ ಲಕ್ಷ್ಮಿಯಲ್ಲಿ ಆಸಕ್ತನಾಗಿರುವವನು, ಜಮದಗ್ನಿ ರಾಮಮುನಿಯೊಳ್–ಪರಶುರಾಮನಲ್ಲಿ, ಧನುರ್ವಿದ್ಯೆಯಂ–ಬಿಲ್ವಿದ್ಯೆಯನ್ನು, ಧನುರ್ವೇದ ವನ್ನು, ಕಲ್ತಂ–ಕಲಿತುಕೊಂಡನು. ಯೌವನದ ಆರಂಭದೆಸೆಯಲ್ಲಿ ಮೈದೋರುವ ಭವ್ಯ ಸುಂದರಮೂರ್ತಿಯ ವರ್ಣನೆ ಇಲ್ಲಿದೆ. ಇದಕ್ಕೆ ಮೂಲ ರಘುವಂಶದ "ವ್ಯೂಢೋ ರಸ್ಕೋ ವೃಷಸ್ಕಂಧಃ ಶಾಲಪ್ರಾಂಶುರ್ಮಹಾಭುಜಃ" (೧–೧೩) ಎಂಬ ಪದ್ಯಭಾಗವಾಗಿ ದ್ದರೂ ಪಂಪನು ತಾನು ಸ್ವೀಕರಿಸಿರುವುದನ್ನು ರಮಣೀಯತರವಾಗಿ ಬಳಸಿಕೊಂಡಿ ದ್ದಾನೆ.

ವಚನ: ಅಂತು ಕಲ್ತು–ಹಾಗೆ ಕಲಿತು; ಮುನ್ನಮೆ–ಮೊದಲೇ, ಚಾಪವಿದ್ಯೆ ಯೊಳ್–ಬಿಲ್ವಿದ್ಯೆಯಲ್ಲಿ, ಆರಿಂದಮೀತನೆ–ಎಲ್ಲರಿಗಿಂತಲೂ ಇವನೇ, ಭಾರ್ಗವನೆನಿಸಿದ–ಉತ್ತಮ ಬಿಲ್ಗಾರನೆನಿಸಿಕೊಂಡ, ಭಾರ್ಗವಂಗೆ–ಪರಶುರಾಮನಿಗೆ, ತಾನೆ–ತಾನೇ, ಭಾರ್ಗವನಾಗಿ–ಗುರುವಾಗಿ; ಯುವರಾಜ ಕಂಠಿಕಾ–ಯುವರಾಜ ಪದವಿಗೆ ಲಾಂಛನ ವಾದ ಕೊರಳ ಹಾರದಿಂದ, ಪರಿಕಲಿತ–ಸೇರಿದ, ಕಂಠಲುಂಠನುಮಾಗಿ–ಕೊರಳ ಆಲು ಗಾಟವನ್ನುಳ್ಳವನಾಗಿ; ಪ್ರಮಾಣ–ದೀರ್ಘವನ್ನೂ ಗಾತ್ರವನ್ನೂ ಉಳ್ಳ, ನಿಜಭುಜ ದಂಡಿತಾರಾತಿ ಮಂಡಲನುಮಾಗಿ–ತನ್ನ ಬಾಹುಗಳಿಂದ ಶಿಕ್ಷಿಸಲ್ಪಟ್ಟ ಶತ್ರು ಸಮೂಹ ವುಳ್ಳವನಾಗಿ; ಕಣ್ಬೇಟಂಗೊಂಡು–ಚಕ್ಷುಃಪ್ರೀತಿಯನ್ನು ಹೊಂದಿ, ನೋಡಿದ ಕೂಡಲೆ ಮೋಹವಶನಾಗಿ; ಬರಲ್ ಪಡೆಯದೆ–ಸಮೀಪಿಸಲು ಅವಕಾಶವನ್ನು ಹೊಂದದೆ; ಇಂದ್ರಿಯಕ್ಷರಣೆ–ರೇತಸ್ಸಿನ ಸ್ಖಲನೆ; ಕದಳೀಪತ್ರದೊಳ್–ಬಾಳೆಯ ಎಲೆಯಲ್ಲಿ; ಪುದಿದು–ಮುಚ್ಚಿ; ತನ್ನನಡಪಿದ–ತಾನು ಸಾಕಿದ; ಓಪಳಲ್ಲಿಗೆ-ಪ್ರಿಯಳಾದವಳಲ್ಲಿಗೆ; ಎಡೆಗೊಂಡು–ನಡುವೆ ಆಕ್ರಮಿಸಿ, ಮೇಲೆಬಿದ್ದು; ಜಗುನೆಯಂ ಪಾಯ್ವಾಗಳ್–ಯಮುನಾ ನದಿಯನ್ನು ದಾಟುವಾಗ; ಉಗಿಬಗಿಮಾಡಿದಾಗಳ್-ಉಗುರಿನಿಂದ ಪರಚಿ

ಗಾಯಗೊಳಿಸಿದಾಗ; ಬರ್ದುಂಕಿ-ಪಾರಿ, ತಪ್ಪಿಸಿಕೊಂಡು; ಬಾಳೆಮೀನ್-ಬಾಳೆ ಯೆಂಬ ಮೀನು, ಕನ್ಯೆಯಾಗಿರುವ ಮೀನು; ತಾಳ್ದಿದೊಡೆ-ತಾಳಿದರೆ, ಧರಿಸಿದರೆ; ಜಾಲಗಾಱಂ-ಬೆಸ್ತರವನು; ಜಾಲದೊಳ್-ಬಲೆಯಲ್ಲಿ; ಪಿಡಾರಿಸಿ-ಸೀಳಿ; ನೋಡ್ಪಿ ನ್ನೆಗಂ-ನೋಡುವಷ್ಟರಲ್ಲಿ; ಬಾಳೆಯ-ಮೀನಿನ; ಬಾಳೆಯಂ-ಹೆಣ್ಣುಮಗುವನ್ನು; ನಡಪಿ-ಸಾಕಿ ಸಲಹಿ; ತೊಱೆಯ ತಡಿಯೊಳ್-ನದಿಯ ತೀರದಲ್ಲಿ; ದಡಮಂ- ದೋಣಿಯನ್ನು; ಅನಿಬರ ಬಿಣ್ಪುಮಪ್ಪೆಂ-ಅಷ್ಟು ಜನರ ಭಾರವನ್ನುಳ್ಳವನಾಗುತ್ತೇನೆ; ಅಂತೆಗೆಯ್ವೆನೆಂದು-ಹಾಗೆಯೇ ಮಾಡುತ್ತೇನೆಂದು; ಅೞ್ಕಱ್ತು-ಪ್ರೀತಿಸಿ. ಇಲ್ಲಿ ಮೂರನೆಯ ಭಾರ್ಗವ ಶಬ್ದಕ್ಕೆ ಅಸುರಗುರು, ಶುಕ್ರ ಎಂಬರ್ಥವಿದೆ; ಅದನ್ನು ಗುರು ಎಂಬ ಸಾಮಾನ್ಯಾರ್ಥದಲ್ಲಿ ಸ್ವೀಕರಿಸಿದೆ.

೧೯. ಮುನೀಂದ್ರ-ಋಷಿಶ್ರೇಷ್ಠನು, ಮನದೊಳ್‌ಸೋಲ್ತು-ಮನಸ್ಸಿನಲ್ಲಿ ಸೋತು, ಮೋಹಿಸಿ, ಆಕೆಯೊಡಲ-ಅವಳ ಮೈಯ, ಈ ದುರ್ಗಂಧವೋಪಂತೆ-ಈ ದುರ್ನಾತವು ಹೋಗುವಹಾಗೆ, ಯೋಜನಗಂಧಿತ್ವಮನಿತ್ತು-ಸುತ್ತ ಒಂದು ಯೋಜನದ ವರೆಗೂ ವ್ಯಾಪಿಸುವ ಸುವಾಸನೆಯನ್ನು ಕೊಟ್ಟು, ಮಂಜಂ-ಮಂಜನ್ನು, ಕಾವಳವನ್ನು, ಕಾಂಡಪಟದಂತೆ ಇರ್ಪನ್ನೆಗಂ-ತೆರೆಯಹಾಗೆ ಇರುತ್ತಿರುವಂತೆ ಮಾಡಿ, ಉಲಂಪು- ಸಂತೋಷವು, ಅೞ್ಕಜನೀಯೆ-ಪ್ರೀತಿಯನ್ನುಂಟುಮಾಡಲು, ಕೂಡುವೆಡೆಯೊಳ್- ಬೆರಸುವ ಎಂದರೆ ಸಮಾಗಮದ ಸಮಯದಲ್ಲಿ. ಜ್ಞಾನಸ್ವರೂಪಂ-ಜ್ಞಾನದ ಆಕಾರವೇ ಆಗಿರುವ, ಮಹಾಮುನಿಪಂ-ಮಹಾಋಷಿಯು, ಪುಟ್ಟಿದಂ-ಹುಟ್ಟಿದನು, ಅಂತು-ಹಾಗೆ, ದಿವ್ಯಮುನಿಗಳ್ಗೆ-ಶ್ರೇಷ್ಠರಾದ ಋಷಿಗಳಿಗೆ, ಏಗೆಯ್ದೊಡಂ-ಏನುಮಾಡಿದರೂ, ತೀರದೇ- ಸಾಕಾಗುವುದಿಲ್ಲವೇ? ಎಂದರೆ ಏನು ಮಾಡಿದರೂ ತಡೆಯುತ್ತದೆ, ಪರವಾ ಇಲ್ಲ. ಅರ್ಥಾಂತರನ್ಯಾಸಾಲಂಕಾರ. ಇಲ್ಲಿ ಒಂದು ಆಖ್ಯಾನವನ್ನೇ ಒಂದು ಪದ್ಯದಲ್ಲಿ ಸಂಕ್ಷೇಪಿಸಿದೆ, ಶೈಲಿಯ ವೇಗವನ್ನು ಇಲ್ಲಿ ಕಾಣಬಹುದು.

**ವಚನ:** ನೀಲಾಂಬುದಶ್ಯಾಮನುಂ-ನೀಲಮೇಘದಂತೆ ಕರಿದಾದವನೂ; ಕನಕ ಪಿಂಗಳಜಟಾಬಂಧಕಳಾಪನುಂ-ಹಳದಿ ಕೆಂಪು ಮಿಶ್ರಬಣ್ಣದ ಜಟೆಯ ಸಮೂಹ ವುಳ್ಳವನೂ; ದಂಡ ಕಪಾಳ ಹಸ್ತನುಂ-ಕೈಯಲ್ಲಿ ಯೋಗದಂಡ ಭಿಕ್ಷಾಪಾತ್ರೆಯ ನ್ನುಳ್ಳವನೂ; ಕೃಷ್ಣಮೃಗತ್ವಕ್ಪರಿಧಾನನುಂ-ಕಪ್ಪು ಜಿಂಕೆಯ ಚರ್ಮದ ಹೊದಿಕೆ ಯುಳ್ಳವನೂ; ವ್ಯಾಸಭಟ್ಟಾರಕಂ-ಪೂಜ್ಯನಾದ ವ್ಯಾಸಋಷಿಯು; ಪುಟ್ಟುವುದುಂ- ಹುಟ್ಟುತ್ತಲು; ಆತನೊಡಗೊಂಡು-ಅವನನ್ನು ಜೊತೆಯಲ್ಲಿ ಕರೆದುಕೊಂಡು.

೨೦. ಒರ್ಮೆ-ಒಂದುಸಲ, ಶಂತನು, ಮೃಗಯಾವ್ಯಾಜದಿಂ-ಬೇಟೆಯ ನೆಪದಿಂದ, ತೊೞಲ್ತರ್ಪಂ-ಸುತ್ತಾಡಿಬರುತ್ತಿರುವವನು, ಮೃಗಶಾಬಾಕ್ಷಿಯ-ಮರಿ ಜಿಂಕೆಯ ಕಣ್ಣಿನಂತೆ ಕಣ್ಣುಳ್ಳ ಯೋಜನಗಂಧಿಯ, ಕಂಪುತಟ್ಟೆ-ಸುಗಂಧವು ಅಪ್ಪಳಿ ಸಲು, ಮಧುಪಂಬೋಲ್-ದುಂಬಿಯಹಾಗೆ, ಸೋಲ್ತು-ಸೋತುಹೋಗಿ, ಪ್ರೀತಿಸಿ; ಕಂಡು, ಒಲ್ದು-ರಾಗಿಸಿ, ನಲ್ಮೆಗೆ ದಿಬ್ಯಂ ಬಿಡಿವಂತೆವೋಲ್-ಪ್ರೀತಿಯನ್ನು ಪ್ರಮಾಣಿಸು

ವುದಕ್ಕಾಗಿ ದಿವ್ಯವನ್ನು ಹಿಡಿಯುವಂತೆ, ಪಿಡಿದು-ಅವಳ ಕೈಯನ್ನು ಹಿಡಿದುಕೊಂಡು, ನೀಂ ಬಾ ಪೋಪಂ-ನೀನು ಬಾ ಹೋಗೋಣ, ಎಂದಂಗೆ-ಎಂದು ಹೇಳಿದವನಿಗೆ, ಮೆಲ್ಲಗೆ-ಮೃದುವಾಗಿ, ತತ್ಕನ್ಯಕೆ-ಆಕನ್ಯೆ, ನಾಣ್ಚಿ-ನಾಚಿ, ನೀಂ ಬೇಡುವೊಡೆ-ನೀವು ನನ್ನನ್ನು ಬಯಸುವ ಪಕ್ಷದಲ್ಲಿ, ಎಮ್ಮಯ್ಯನಂ-ನಮ್ಮ ತಂದೆಯನ್ನು, ಬೇಡಿರೇ- ಕೇಳಿರಿ, ಪ್ರಾರ್ಥಿಸಿಕೊಳ್ಳಿರಿ, ಯಾಚಿಸಿರಿ. ದಿಬ್ಯ-ಪ್ರಮಾಣಗಳಲ್ಲಿ ಮಾನುಷಪ್ರಮಾಣ, ದಿವ್ಯಪ್ರಮಾಣ ಎಂದೆರಡು ವಿಧ; ಮಾನುಷಪ್ರಮಾಣವಿಲ್ಲದಿರುವಾಗ ದಿವ್ಯಪ್ರಮಾಣವು ಉಪಯೋಗವಾಗುತ್ತದೆ: ಇದು ತುಲಾ, ಅಗ್ನಿ, ಆಪ (ನೀರು), ವಿಷ, ಕೋಶ- ಎಂಬೈದು ವಿಧವೆಂದು ನಾರದ ಯಾಜ್ಞವಲ್ಕ್ಯರ ಮತ; ಘಟ, ಅಗ್ನಿ, ಉದಕ, ವಿಷ, ಕೋಶ, ತಂಡುಲ, ತಪ್ತಮಾಷಕ, ಫಾಲ, ಧರ್ಮಜ, ಎಂದು ಒಂಬತ್ತು ವಿಧಗಳೆಂದು ಬೃಹಸ್ಪತಿಯ ಮತ, ನನ್ನ ಪ್ರೇಮಕ್ಕೆ ಸಾಕ್ಷಿಯಾಗಿ, ಆದಕ್ಕೆ ಪ್ರಮಾಣವಾಗಿ ನಿನ್ನ ಕೈಯೆಂಬ ದಿವ್ಯವನ್ನು ಹಿಡಿಯುತ್ತೇನೆ ಎಂದು ಶಂತನುವಿನ ಮಾತು. ವೇಗವಾದಗತಿ, ಪಾತ್ರಗಳ ಮನೋಧರ್ಮ, ಪ್ರೇಮೋನ್ಮಾದ, ಲಜ್ಜೆ, ಒಲವು, ತಂದೆಯಲ್ಲಿ ವಿಧೇಯತೆ –ಇವೇ ಮುಂತಾದವುಗಳಿಂದ ಈ ಪದ್ಯ ಅತಿ ರಮಣೀಯವಾಗಿದೆ; ಎಷ್ಟು ಚರ್ವಣ ಮಾಡಿದರೂ ಇದರ ಸೊಗಸು ಮುಗಿಯುವಂತಿಲ್ಲ.

**ವಚನ:** ಪೊೞಲ್ಗೆ–ನಗರಕ್ಕೆ; ಮಗುೞ್ದುವಂದು–ಹಿಂದಿರುಗಿ ಬಂದು; ಕೂಸಂ ಬೇಡೆ-ಕನ್ಯೆಯನ್ನು ಮದುವೆ ಮಾಡಿಕೊಡಬೇಕೆಂದು ಪ್ರಾರ್ಥಿಸಲು; ಪೆರ್ಗಡೆಗಳಂ- ಹೆಗ್ಗಡೆಗಳನ್ನು, ಮುಖ್ಯಸ್ಥರನ್ನು; ಕ್ರಮ ಕ್ರಮಾರ್ಹನುಂ–ಕ್ರಮವಾಗಿ ಬರುವ ಹಕ್ಕು ದಾರಿಕೆಗೆ ತಕ್ಕವನೂ; ಕುಡೆವು–ಕೊಡೆವು; ಕುಡುವೆಂ–ಕೊಡುತ್ತೇವೆ.

೭೧. ಕ್ರಮಮುಂ–ಪರಂಪರಾಗತ ಪದವಿಯನ್ನು, ವಿಕ್ರಮದಿಂದೆ-ಪರಾಕ್ರಮ ದಿಂದ, ತಾಳ್ದುವ–ತಾಳುವ, ಮಗಂ ಗಾಂಗೇಯನಿರ್ದಂತೆ–ಮಗನಾದ ಭೀಷ್ಮನಿರುವಾಗ, ನೋಡ–ನೋಡೋ, ಮರುಳ್–ಮರುಳಾದ ಶಂತನು, ತನ್ನದೊಂದು ನವಿಗಂ ಸೋಲಕ್ಕಂ- ತನ್ನ ಒಂದು ರುಚಿಗೂ ಮೋಹಕ್ಕೂ ಒಳಗಾಗಿ, ನಿಜಕ್ರಮಮುಂ–ಸಹಜವಾದ ಕ್ರಮ ಪದವಿಯನ್ನು, ತನ್ನಯ ಬೇಟದಾಕೆಯ ಮಗಂಗೆ–ತಾನು ಕಾಮಿಸಿದವಳ ಮಗನಿಗೆ, ಇತ್ತಂ–ಕೊಟ್ಟನು, ಎಂಬೊಂದಪಖ್ಯಾತಿ–ಎಂಬ ಒಂದು ದುಷ್ಕೀರ್ತಿ, ಲೋಕಮನಾ ವರಿಸೆ–ಲೋಕವನ್ನು ಆವರಿಸಲು, ಬೞ್ದೊಡೆ–ಬಾಳಿದರೆ, ಎನ್ನ ಕುಲಮುಂ–ನನ್ನ ವಂಶದ ಯಶಸ್ಸೂ, ತಕ್ಕೂರ್ಮೆಯುಂ–ಅತಿಶಯವಾದ ಯೋಗ್ಯತೆಯೂ, ಮಾಸದೇ– ಮಾಸುವುದಿಲ್ಲವೆ? ಮಾಸುತ್ತದೆ ಎಂದು ತಾತ್ಪರ್ಯ. ಇಲ್ಲಿ ತಕ್ಕೂರ್ಮೆ ಎಂಬುದು ಸರಿಯಾದ ಪಾಠ; ತಕ್ಕೂರ್ಮೆ = ತಕ್ಕು + ಊರ್ಮೆ; ತಕ್ಕು = ಯೋಗ್ಯತೆ, ಊರ್ಮೆ– ಅತಿಶಯ, ಆಧಿಕ್ಯ; ಊಱು + ಮೆ (ತಮಿಳು ಊಱು = ಅಧಿಕವಾಗು); ಊರ್ಮೆ ಶಬ್ದವನ್ನು ಪಂಪನೇ 'ವಿಳಾಸದು (ದೂ)ರ್ಮೆಗಳೊಳು' (ಪಂಪಭಾ. ೧–೧೦೬) ಎಂಬಲ್ಲಿ ಬಳಸಿದ್ದಾನೆ; 'ಊರ್ಮೆ ಚೋಗಬ್ಬೆಯ ವಂಶದೊಳ್' ಎಂದು ತಳಂಗೆರೆ ಶಾಸನದಲ್ಲಿಯೂ, "ಊರ್ಮೆಯ ಕುಲವನಿತೆ ಮುಖ್ಯಮಾತೆಯೆ ಪೂಜ್ಯಂ" ಎಂದು

ಚಂದ್ರರಾಜನ ಮದನತಿಲಕದಲ್ಲಿಯೂ ಪ್ರಯೋಗವಾಗಿದೆ (೮-೫). ಈ ಪದ್ಯದಲ್ಲಿ ಶಂತನುವಿನ ಆಳವಾದ ಧರ್ಮಸಂಕಟದ ಚಿತ್ರಣ ಮನೋಜ್ಞವಾಗಿದೆ.

**ವಚನ :** ನಾಣ್ಗಾಪನೆ–ಲಜ್ಜೆ ಸಂಕೋಚಗಳನ್ನು ತೋರ್ಪಡಿಸಿಕೊಳ್ಳದೆ ಅವನ್ನು ರಕ್ಷಿಸಿಕೊಳ್ಳುವುದನ್ನೇ; ಬಗೆದು–ಯೋಚಿಸಿ; ಪರಿತಾಪಿತ ಶರೀರನುಮಾಗಿ–ಸಂತಾಪವೇರಿದ ಮೈಯುಳ್ಳವನಾಗಿ; ಕರಂಗಿ–ಕರಗಿ, ಎರ್ದೆಗಿಡೆ–ಚಿತ್ತಸ್ಥಿರತೆಯನ್ನು ಕಳೆದುಕೊಳ್ಳಲು, ಗಾಂಗೇಯನಱಿದು–ಭೀಷ್ಮನು ತಿಳಿದುಕೊಂಡು,

**೭೨.** ಎನ್ನಯದೆಸೆಯಿಂ–ನನ್ನ ಕಾರಣದಿಂದ, ನೃಪತಿ–ರಾಜಶಂತನು, ಬೇಡಿದುದಂ–ಯೋಜನಗಂಧಿಯ (ಸತ್ಯವತಿಯ) ತಂದೆ ದಾಶರಾಜನು ಬಯಸಿದ್ದನ್ನು, ಕೊಡಲೊಲ್ಲದೆ–ಕೊಡಲು ಇಷ್ಟವಿಲ್ಲದೆ, ಅಂಗಜೋತ್ಪನ್ನ ವಿಮೋಹದಿಂದೆ-ಮನ್ಮಥನಿಂದ ಉಂಟಾದ ವ್ಯಾಮೋಹದಿಂದ, ಅೞಿದಪಂ–ಸಾಯುತ್ತಿದ್ದಾನೆ, ಪತಿ ಸತ್ತೊಡೆ–ನನ್ನ ಒಡೆಯನು ಸತ್ತರೆ, ಸತ್ತಪಾಪಂ–ಅವನು ಸತ್ತುದಕ್ಕೆ ಕಾರಣವಾದ ನನ್ನ ಪಾಪ, ಎನ್ನಂ–ನನ್ನನ್ನು, ನರಕಂಗಳೊಳ್–ನರಕಗಳಲ್ಲಿ, ತಡೆಯದೆ–ತಡಮಾಡದೆ, ಅೞ್ದುಗುಂ–ಮುಳುಗಿಸುತ್ತದೆ, ಏವುದು ರಾಜ್ಯಲಕ್ಷ್ಮಿ–ಈ ರಾಜ್ಯಲಕ್ಷ್ಮಿ ಯಾವುದು, ಏನು ಪ್ರಯೋಜನ; ಪೋ–ಹೋಗು, ತನ್ನಯ ತಂದೆಯೆಂದುದನೆ ಕೊಟ್ಟು–ತನ್ನ ತಂದೆ ಹೇಳಿದ್ದನ್ನೇ ದಾಸರಾಜನಿಗೆ ಕೊಟ್ಟು, ಇಂದೆ–ಈ ಹೊತ್ತೇ, ವಿವಾಹಮಂ ಮಾಡುವೆಂ–ಮದುವೆಯನ್ನು ಮಾಡುತ್ತೇನೆ. ಇಲ್ಲಿ ಭೀಷ್ಮನ ಪಿತೃಭಕ್ತಿಯೂ ಸ್ವಂತ ವಿಷಯವಾಗಿ ವಿರಕ್ತಿಯೂ ಅಭಿವ್ಯಕ್ತವಾಗಿವೆ.

**ವಚನ :** ಆತನ ಮನದ ತೊಡರ್ಪಂ–ಅವನ (ದಾಶರಾಜನ) ಮನಸ್ಸಿನಲ್ಲಿರುವ ತೊಡಕನ್ನು, ಸಿಕ್ಕನ್ನು; ಪಿಂಗೆ–ಹಿಂಜರಿಯುವಹಾಗೆ, ಹೋಗುವಹಾಗೆ;

**೭೩.** ನೀಡಿರದೆ–ವಿಳಂಬವಿಲ್ಲದೆ, ತಡವಿಲ್ಲದೆ, ಈ ನಿಜ ತನೂಜೆಯಂ–ಈ ನಿನ್ನ ಮಗಳನ್ನು, ಈವುದು–ಶಂತನುಗೆ ಕೊಡುವುದು; ಈವಧುಗಾದಪುತ್ರರೊಳ್–ಈ ಕನ್ಯೆಗೆ ಹುಟ್ಟಿದ ಮಕ್ಕಳಲ್ಲಿ, ರಾಜ್ಯಲಕ್ಷ್ಮಿ–ರಾಜ್ಯವೆಂಬ ಲಕ್ಷ್ಮಿ. ಕೂಡುಗೆ-ಸೇರಲಿ; ಅದು–ಆ ರಾಜ್ಯಲಕ್ಷ್ಮಿ, ಅಂತು–ಹಾಗೆ, ಎನಗೆ–ನನಗೆ, ಪೊಱಸಿಯಲ್ತು–ಸಂಬಂಧವಲ್ಲ; ಪೆಂಡಿರೆಂಬರೊಳ್–ಹೆಂಗಸು ಎನ್ನಿಸಿಕೊಂಡವರಲ್ಲಿ, ಇಂದು ಮೊದಲಾಗಿರೆ–ಈ ದಿನದಿಂದ ಹಿಡಿದು, ಕೂಡುವನಲ್ಲೆಂ–ಸೇರುವವನಲ್ಲ; ನಿಕ್ಕುವಂ–ನಿಶ್ಚಯ, ಎಂದು–ಎಂದು ಪ್ರತಿಜ್ಞೆ ಮಾಡಿ, ರಾಗದಿಂ–ಸಂತೋಷದಿಂದ, ನದೀಸುತಂ–ಭೀಷ್ಮನು, ಸತ್ಯವತಿಯಂ ಸತಿಯಂ–ಸತ್ಯವತಿಯೆಂಬ ಸಾಧ್ವಿಯನ್ನು. ಉಯ್ದು–ಕರೆದುಕೊಂಡುಹೋಗಿ, ಪತಿಯೊಳ್–ತನ್ನ ತಂದೆಯೂ ರಾಜನೂ ಆದ ಶಂತನುವಿನಲ್ಲಿ, ಕೂಡಿದಂ–ವಿವಾಹಮಾಡಿದನು. "ಪೊಱಸಿಯೆಂಬುದು ಬಾಂಧವರೊಳ್" ಎಂದು ಶಾಸನ ಪ್ರಯೋಗವಿದೆ (ಸೊರಬ ೧೭೯). ಇಲ್ಲಿ ಭೀಷ್ಮನ ದೃಢನಿಶ್ಚಯವೂ ತಂದೆಯ ಮನಃಪ್ರೀಣನೋತ್ಸುಕತೆಯೂ ತ್ವರಿತ ಕಾರ್ಯಾಚರಣೆಯೂ ಸೊಗಸಾಗಿ ಬಂದಿವೆ; ದೇಸಿಯ ನುಡಿಗಟ್ಟು ಚೆಲುವಾಗಿದೆ.

**ವಚನ :** ಅನ್ಯೋನ್ಯಾಸಕ್ತಚಿತ್ತರಾಗಿ–ಪರಸ್ಪರ ಪ್ರೀತಿಯುಳ್ಳಮನದವರಾಗಿ;

ಜೇಟದ ಕಂದಲ್ಗಳಂತೆ-ಪ್ರೀತಿಯ ಮೊಳಕೆಗಳ ಅಥವಾ ಚಿಸಲುಗಳ ಹಾಗೆ; ಮುನ್ನೆ ತನ್ನ ನುಡಿದ ನುಡಿವಳಿಯೆಂಬ-ಮೊದಲೇ ತಾನು ಪ್ರತಿಜ್ಞೆಮಾಡಿದ ಭಾಷೆಯೆಂಬ; ಪ್ರಾಸಾದಕ್ಕಧಿಷ್ಠಾನಂಗಟ್ಟುವಂತೆ-ಅರಮನೆಗೆ ತಳಪಾಯಕಟ್ಟುವಂತೆ; ಪೊಣರ್ಚಿ-ಸೇರಿಸಿ, ಸಮುಕಟ್ಟಿ; ಕಳಂಬೇೞ್ದು-ಕಣವನ್ನಾಗಿಮಾಡಿ, ಯುದ್ಧರಂಗವನ್ನಾಗಿ ಗೊತ್ತುಮಾಡಿ; ಧರಾಭಾರಧುರಂಧರನಂಮಾಡಿ-ಭೂಭಾರವನ್ನು ಹೊರಲು ಸಮರ್ಥನನ್ನಾಗಿ ಮಾಡಿ.

೭೪. ಸಕಲ ಕ್ಷತ್ರಿಯಮೋಹದಿಂ-ಎಲ್ಲ ಕ್ಷತ್ರಿಯರಿಗೂ ಸಹಜವಾಗಿರುವ ಆಸೆಯಿಂದ, ನಿಜಭುಜ ಪ್ರಾರಂಭದಿಂ-ತನ್ನ ಬಾಹುಬಲವನ್ನು ಪ್ರದರ್ಶಿಸುವ ಕಾರ್ಯದಿಂದ, ನೋಗಿ-ದಂಡೆತ್ತಿಹೋಗಿ, ಕಾ[ಶಿ]ರಾಜಸುತರೊಳ್-ಕಾಶಿಯ ರಾಜನ ಮಕ್ಕಳಲ್ಲಿ, ಕೆಲರ್ ನೊಂದೊಡೆ-ಕೆಲವರು ನೋವು ತಿನ್ನುವಹಾಗೆ,ತನ್ನಂಕದೊಂದುಗ್ರಸಾಯಕದಿಂ-ತನ್ನ ಹೆಸರನ್ನುಳ್ಳ ಒಂದು ಭಯಂಕರ ಬಾಣದಿಂದ, ನಾಯಕರಂ-ಸೇನಾನಾಯಕರನ್ನು, ಪಡಲ್ವಡಿಸುತುಂ-ಚೆದರಿಸುತ್ತ, ತಾಂ-ತಾನು, ಅಂಬೆ ಅಂಬಿಕೆ ಅಂಬಾಲಿಕೆಯರೆಂಬ, ಬಾಲೆಯರಂ-ವಧುಗಳನ್ನು, ಅಂದು ತಂದು-ಅಂದು ಅಪಹರಿಸಿಕೊಂಡುಬಂದನು; ಏಂ ಭೀಷ್ಮಂ ಯಶೋಭಾಗಿಯೋ-ಭೀಷ್ಮನು ಏನು ಕೀರ್ತಿ ಭಾಜನನೋ! ಆಶ್ಚರ್ಯ ಮೆಚ್ಚಿಕೆಗಳ ಸೂಚಕ ಈ ಮಾತು. ಇಲ್ಲಿ 'ಕಾ[ಶಿ]ರಾಜ' ಎಂಬ ಪಾಠಾಂತರವನ್ನು ಗ್ರಹಿಸಿದೆ.

ವಚನ: ಪಾಣಿಗ್ರಹಣಂ ಗೆಯ್ವಾಗಳ್-ಕೈಹಿಡಿಸಿ ಮದುವೆಮಾಡುವಾಗ; ಎಲ್ಲರಿಂ ಪಿರಿಯಾಕೆ-ಎಲ್ಲರಿಗಿಂತ ಹಿರಿಯಳು; ಪೆಱರನ್-ಇತರರನ್ನು; ಒಲ್ಲೆನ್-ಒಪ್ಪೆನು; ಮತ್ತಿನಿರ್ವರುಮಂ-ಉಳಿದ ಇಬ್ಬರನ್ನೂ; ಅಂಬೆಯನಿಂತೆಂದಂ-ಅಂಬೆಯನ್ನು ಕುರಿತು ಹೀಗೆಂದನು.

೭೫. ಅತ್ತ-ಅತ್ತಕಡೆ, ಸುರೇಶ್ವರಾವಸಥಂ-ಇಂದ್ರನು ವಾಸಿಸುವ ಸ್ಥಾನವಾದ ಸ್ವರ್ಗಲೋಕ, ಇತ್ತ-ಇತ್ತ ಕಡೆ, ಮಹೀತಳಂ-ಭೂಲೋಕ, ಉತ್ತ-ಇವೆರಡರ ನಡುವೆ ಇರುವ, ಪನ್ನಗೋಪಾತ್ತ ಸಮಸ್ತ ಲೋಕಂ-ಪಾತಾಳವೇ ಮೊದಲಾದ ಎಲ್ಲ ಲೋಕಗಳೂ, ಅಱಿವಂತಿರೆ-ತಿಳಿಯುವ ಹಾಗೆ, ಪ್ರೂಣ್ದು-ಪ್ರತಿಜ್ಞೆಮಾಡಿದ. ಎನಗೆ-ನನಗೆ, ಅಂಗಜೋತ್ಪತ್ತಿ-ಕಾಮನಿಂದಾದ, ಸುಖಕ್ಕೆ, ಸೋಲಲ್-ಸೋಲುವುದಕ್ಕೆ, ಆಗದು; ಪುರುಷ ವ್ರತಂ-ಬ್ರಹ್ಮಚರ್ಯ ವ್ರತವು, ಅೞುಗುಂ-ನಷ್ಟವಾಗುತ್ತದೆ; ಈಗಳ್-ಈಗ, ಅಬ್ಬೆಯೆಂದು-ತಾಯಿಯೆಂದು ಕಳೆದು, ಆ ಮೇಲೆ, ಅತ್ತಿಗೆಯೆಂಬ ಮಾತಂ-ಪ್ರೀತಿಸಿದವಳು, ನಲ್ಲಳು ಎಂಬ ಮಾತನ್ನು, ಪಂಕಜಾನನೇ-ತಾವರೆ ಮೊಗದವಳೇ, ಎನಗೆ-ನನಗೆ, ಎನಲ್-ಹೇಳಲು, ಅಕ್ಕುಮೋ-ಆಗುತ್ತದೊ? ಆಗುವುದಿಲ್ಲ ಎಂದು ಭಾವ. ಅೞ್ತಿಗೆ> ಅರ್ತಿಗೆ>ಅತ್ತಿಗೆ=ಪ್ರೀತಿಗೆ ಪಾತ್ರಳಾದವಳು, ನಲ್ಲೆ.

ವಚನ: ಅವಸರಮುಂ-ಅವಕಾಶವನ್ನು, ಪಸರಮುಂ-ಸಲಿಗೆಯನ್ನು, ಪಡೆಯದೆ-ಹೊಂದದೆ; ಕಿಱಿಯಂದು-ಚಿಕ್ಕತನದಂದು; ಉಂಗುರವಿಟ್ಟ-ಮದುವೆಯಾಗುತ್ತೇ

ನೆಂದು ಉಂಗುರವನ್ನು ತೊಡಿಸಿದ; ಕೈಕೊಳಪೇಟ್ಕುಂ-ಮದುವೆಯಾಗಿ ಸ್ವೀಕರಿಸ ಬೇಕು. ಪಸರಕ್ಕೆ ಪ್ರಯೋಗ : ''ಇವಂದಿರ್ಗೆ ಪಸರಂಗೊಟ್ಟಿನಪ್ಪೊಡೆ ಮುನ್ನಿನಂ ತುರ್ಕಿ ಕಿಡುವರ್ (ವಡ್ಡಾರಾ, ಪು. ೩)

**೭೬.** ಬಂಡಣದೊಳ್-ಯುದ್ಧದಲ್ಲಿ, ಎನ್ನನ್- ನನ್ನನ್ನು, ಓಡಿಸಿ-ಓಡುವಂತೆ ಮಾಡಿ, ನಿನ್ನಂ-ನಿನ್ನನ್ನು, ಆ ಸರಿತ್ಸುತಂ-ಆ ಭೀಷ್ಮನು, ಕೊಂಡುಯ್ದಂ- ಅಪಹರಿಸಿ ಕೊಂಡು ಹೋದನು ; ಅದಱಿಂ-ಆ ಕಾರಣದಿಂದ, ಆನುಂ-ನಾನು ಕೂಡ, ಪೆಂಡತಿಯೆ ನಾದೆಂ-ಹೆಂಗಸಾಗಿದ್ದೇನೆ ; ಅಬಲೇ-ಎಲೇ ಹೆಣ್ಣೇ, ಪೆಂಡಿರ್ ಪೆಂಡಿರೊಳ್ ಅದೆಂತು ಬೆರಸುವರ್-ಹೆಂಗಸರು ಹೆಂಗಸರಲ್ಲಿ ಅದು ಹೇಗೆ ಕೂಡುವರು ? ಕೂಡುವುದಿಲ್ಲವೆಂದು ಅಭಿಪ್ರಾಯ. ಬಂಡಣ < ಭಂಡನ (ಸಂ), ಪ್ರಾ. ಭಂಡಣ—ಕಲಹ. ಈ ಪದ್ಯ ಧ್ವನಿಮಯವಾಗಿದೆ ; ಚಿಂತಿಸಿದಷ್ಟೂ ಅರ್ಥ ಒಸರುತ್ತದೆ. ಇಲ್ಲಿನ ಪ್ರಶ್ನೆಗೆ ಮಾರು ತ್ತರವನ್ನು ಹೇಳಲಾಗುವುದಿಲ್ಲ, ಮೌನವೊಂದೇ ಉತ್ತರ.

**ವಚನ :** ಪರಿಭವದೊಳ್-ಸೋಲಿನಲ್ಲಿ, ಅವಮಾನದಲ್ಲಿ ; ಸಿಗ್ಗಂ-ನಾಚಿಕೆ ಯನ್ನು ; ಸಾಲ್ವಿನಂ-ಸಾಕಾಗುವಷ್ಟು ; ಒಡಂಬಡಿಸಲಾಱದೆ-ಒಪ್ಪಿಸಲಸಮರ್ಥಳಾಗಿ ; ದೆವಸಮುಂ-ದಿವಸಗಳೂ ; ಜವ್ವನಮುಂ-ಯೌವನವೂ ; ಕಿಡಲೀಯದೆ-ಹಾಳಾಗು ವುದಕ್ಕೆ ಅವಕಾಶವನ್ನು ಕೊಡದೆ ; ಪಾಣಿಗ್ರಹಣಂ ಗೆಯ್ವಂತು-ವಿವಾಹವಾಗುವಂತೆ; ಮಾಡಲಾಱದೊಡೆ-ಮಾಡಲಶಕ್ಯವಾದ ಪಕ್ಷದಲ್ಲಿ ; ಕಿಚ್ಚಂದಯೆಗೆಯ್ವುದು-ಅಗ್ನಿ ಪ್ರವೇಶಕ್ಕೆ ಕಿಚ್ಚನ್ನು ಕರುಣಿಸುವುದು ; ಅಂಬೆ ಕಣ್ಣ ನೀರಂತುಂಬೆ : ಈ ಅನಿರೀಕ್ಷಿತ ಅನುಪ್ರಾಸ ಮನೋಜ್ಞ.

**೭೭.** ನಯಮಂ ನಂಬುವೊಡೆ-ನೀತಿಯನ್ನು ನಂಬುವುದಾದರೆ, ಎನ್ನಪೇೞ್ದ ಸತಿಯಂ-ನಾನು ಹೇಳಿದ ಹೆಣ್ಣನ್ನು, ಕೈಕೊಂಡಂ-ಮದುವೆಯಲ್ಲಿ ಸ್ವೀಕರಿಸಿದವನಾಗು ತ್ತಾನೆ ; ಅಂತಲ್ಲ-ಹಾಗಲ್ಲದೆ, ಮೇಣ್-ಅಥವಾ, ದುರ್ಣಯಮುಂ-ದುರ್ನೀತಿಯನ್ನು, ನಚ್ಚುವೊಡೆ-ನಂಬಿದ ಪಕ್ಷದಲ್ಲಿ, ಎನ್ನನುಗ್ರರಣದೊಳ್-ನನ್ನನ್ನು ಭಯಂಕರ ಯುದ್ಧ ದಲ್ಲಿ, ಮಿಱಿ-ಎಲ್ಲೆಮೀರಿ, ಮಾರ್ಕೊಂಡಂ-ಎದುರಿಸಿದವನಾಗುತ್ತಾನೆ ; ಆರಯೆ- ವಿಚಾರಮಾಡಿದರೆ, ಕಜ್ಜಂ-ಕಾರ್ಯ, ಪೆಱತು ಇಲ್ಲಂ-ಬೇರೆ ಇಲ್ಲ ; ಶಂತನು ಸುತಂಗೆ- ಭೀಷ್ಮನಿಗೆ ; ಎನ್ನಂ ಕರಂ ನಂಬಿದ-ನನ್ನನ್ನು ವಿಶೇಷವಾಗಿ ನಂಬಿದ, ಅಂಬೆಯೊಳ್- ಅಂಬೆಯಲ್ಲಿ, ಎನ್ನ ಅಂಬೆವಲಂ-ನನ್ನ ಬಾಣವೇ ನಿಶ್ಚಯವಾಗಿಯೂ; ವಿವಾಹ ವಿಧಿಯಂ- ಮದುವೆಯ ಕಾರ್ಯವನ್ನು, ಮಾೞ್ಪೆಂ-ಮಾಡುತ್ತೇನೆ ; ಪೆಱರ್ ಮಾೞ್ಪರೇ-ಇತರರು ಮಾಡುವರೇ ? ಇಲ್ಲ. ಇಲ್ಲಿ ಅಲ್ಲದೆ ಎಂಬುದಕ್ಕೆ ಅಲ್ಲ ಆದೇಶ ; ಅಂಬೆಗೆ ಮದುವೆ ಮಾಡಿಸುವ ವಿಷಯಕ್ಕೆ ನನ್ನ ಬಾಣವೇ ಸಾಕು, ಬೇರೇನೂ ಬೇಡ ಎಂದು ತಾತ್ಪರ್ಯ; ಭೀಷ್ಮನಿಗೆ ಬೇರೆ ಕೆಲಸವಿಲ್ಲ ; ಅಂಬೆಯನ್ನು ಮದುವೆ ಆಗಬೇಕು, ಇಲ್ಲದಿದ್ದರೆ ನನ್ನೊಡನೆ ಯುದ್ಧಮಾಡಬೇಕು.

**ವಚನ :** ಎಂದು-ಎಂದು ಹೇಳಿ, ನಾಗಪುರಕ್ಕೆವರ್ಪ-ಹಸ್ತಿನಾವತಿಗೆ ಬರುವ ;

ಬರವಂ–ಆಗಮನವನ್ನು ; ಇದಿರ್ವಂದು–ಎದುರಾಗಿ ಬಂದು, ಎದುರುಗೊಂಡು : ಕನಕ ರಜತ ಪಾತ್ರಂಗಳೊಳ್–ಚಿನ್ನದ ಬೆಳ್ಳಿಯ ಪಾತ್ರೆಗಳಲ್ಲಿ ; ಅರ್ಘ್ಯಮಂ–ಕೈತೊಳೆಯುವ ನೀರನ್ನು ; ಪೊಡೆಮಟ್ಟು–ನಮಸ್ಕರಿಸಿ : ಪೊಡೆ+ಮಡು = ಹೊಟ್ಟೆಯನ್ನು ನೆಲಕ್ಕೆ ಸೇರಿಸುವುದು, ಸಾಷ್ಟಾಂಗ ನಮಸ್ಕಾರಮಾಡು ; ಹೀಗೆಯೇ ತಲೆಮಡು ಮುಂತಾದ ಶಬ್ದಗಳಿವೆ.

೭೮. ಬೆಸನೇನ್–ಕೆಲಸವೇನು, ಅಪ್ಪಣೆಯೇನು; ಎಂದೊಡೆ–ಎಂದು ಕೇಳಿದರೆ, ಪೇೞ್ವೆನ್–ಆಜ್ಞಾಪಿಸುತ್ತೇನೆ, ಎನ್ನ ಬೆಸನಂ–ನನ್ನ ಅಪ್ಪಣೆಯನ್ನು, ಕೈಕೊಳ್–ಒಪ್ಪು ; ಈ ಕನ್ನೆಯಂ–ಈ ಮದುವಳಿಗೆಯನ್ನು, ಪಸುರ್ವಂದರ್–ಹಸುರುವಾಣಿಯ ಚಪ್ಪರ, ಪಸೆ–ಹಸೆಮಣೆ, ಎಂಬಿವಂ–ಎಂಬಿವುಗಳನ್ನು, ಸಮೆದು–ಮಾಡಿಸಿ, ನೀಂ ಕೈಕೊಳ್–ನೀನು ಪರಿಗ್ರಹಿಸು ; ಕೈಕೊಳಲ್ಕಾಗದು–ಪರಿಗ್ರಹಿಸಲಾಗುವುದಿಲ್ಲ, ಎಂಬ ಎಸಕಂ–ಎಂಬ ಕಾರ್ಯ, ನಿಶ್ಚಯ, ಚಿತ್ತದೊಳುಳ್ಳೊಡೆ–ಮನದಲ್ಲಿ ಇದ್ದ ಪಕ್ಷದಲ್ಲಿ, ಈಗಳ್–ಈಗ, ಇವರ್ ಎನ್ನಾಚಾರ್ಯರ್–ಇವರು ನನ್ನ ಗುರುಗಳು, ಎಂದು, ಓವದೆ–ಭಕ್ತಿಯನ್ನು ತೋರಿಸದೆ, ಏರ್ಬೆಸನಂ–ಯುದ್ಧೋದ್ಯೋಗವನ್ನು, ಮಾಣದೆ–ಬಿಡದೆ, ಕೈದುಗೊಳ್–ಶಸ್ತ್ರವನ್ನು ಹಿಡಿ ; ಮೆಚ್ಚಿತ್ತೆನ್–ನೀನು ಮೆಚ್ಚಿದ್ದನ್ನು ಕೊಟ್ಟಿದ್ದೇನೆ, ಏನೆಂದಪಯ್–ಏನು ಹೇಳುವೆ? ಈ ಪದ್ಯದಲ್ಲಿ ಪರಶುರಾಮನ ಅಧಿಕಾರವಾಣಿ, ಆವನದರ್ಪ, ಸ್ವಪ್ರತಾಪದಲ್ಲಿ ನಂಬಿಕೆ, ಶಿಷ್ಯನ ವಿಧೇಯತೆಯಲ್ಲಿ ವಿಶ್ವಾಸ, ಅಂಬೆಯ ವಿಷಯವಾಗಿ ಪರಿತಾಪ, ಮದುವೆ ಶೀಘ್ರವಾಗಿ ನಡೆಯಲೆಂಬ ಉತ್ಸುಕತೆ, ಶಿಷ್ಯನು ತನ್ನ ಮಾತನ್ನು ನಡೆಸುತ್ತಾನೋ ಇಲ್ಲವೋ ಎಂಬ ಸಂದೇಹ ಮುಂತಾದ ಭಾವ ತುಮುಲ ಒಟ್ಟಿಗೆ ಸೇರಿಕೊಂಡಿವೆ ; ಚಿಕ್ಕ ವಾಕ್ಯಗಳು ಕ್ರಿಯಾವೇಗವನ್ನು ಪ್ರತಿಬಿಂಬಿಸುತ್ತವೆ. ಎಸಗು–ಉದ್ಯೋಗಾರಂಭೀ ಎಂಬುದರ ಭಾವನಾಮ ಎಸಕ. ಪೇಸಿಸ್ಟೈಲಿಯ ಸೊಗಸು ಆನಂದದಾಯಕ.

**ವಚನ :** ವೀರಶ್ರೀಯುಂ ಕೀರ್ತಿಶ್ರೀಯುಮಲ್ಲದೆ–ಜಯಲಕ್ಷ್ಮಿಯೂ ಯಶೋಲಕ್ಷ್ಮಿಯೂ ಅಲ್ಲದೆ ; ಉೞಿದಪೆಂಡಿರ್–ಉಳಿದ ಸ್ತ್ರೀಯರು ; ಮೊೞಯಲ್ಲ–ಸಂಬಂಧವಲ್ಲ ; ಏಕೆ ಆಗ್ರಹಂಗೆಯ್ವಿರ್–ಏಕೆ ಒತ್ತಾಯಮಾಡುತ್ತೀರಿ? ಎಂತುಂ ಎಮ್ಮೊಳ್ ಕಾದಲ್ವೇೞ್ಪುದು–ಹೇಗೂ ನಮ್ಮಲ್ಲಿ ಯುದ್ಧಮಾಡುವುದು.

೭೯. ಇರ್ವರುಂ–ಇಬ್ಬರೂ, ಕೆಳರ್ದು–ಕೆರಳಿ, ಅಂದು–ಆಗ, ಉಗ್ರರಣಾಗ್ರಹಪ್ರಣಯದಿಂದ–ಭಯಂಕರವಾದ ಯುದ್ಧಾಪೇಕ್ಷೆಯ ಪ್ರೀತಿಯಿಂದ, ಕುರುಕ್ಷೇತ್ರಮಂ, ಕಳವೇೞ್ಪು–ಯುದ್ಧರಂಗವನ್ನಾಗಿ ಮಾಡಿಕೊಂಡು, ಐಂದ್ರವಾರುಣದೆ–ಇಂದ್ರಾಸ್ತ್ರ ವರುಣಾಸ್ತ್ರಗಳಿಂದ, ವಾಯವ್ಯಾದಿ ದಿವ್ಯಾಸ್ತ್ರ ಸಂಕುಳದಿಂದೆ–ವಾಯುವ್ಯಾಸ್ತ್ರವೇ ಮೊದಲಾದ ದಿವ್ಯಬಾಣಗಳ ಸಮೂಹದಿಂದ, ಒರ್ವರನೊರ್ವರೆಚ್ಚು–ಒಬ್ಬರನ್ನೊಬ್ಬರು ಬಾಣಪ್ರಯೋಗಮಾಡಿ ಘಾತಿಸಿ, ಬ್ರಹ್ಮಂ–ಬ್ರಹ್ಮನು, ನಿಜ ಪೀಠಾಂಭೋಜದಿಂ–ತನ್ನ ಪೀಠವಾದ ಕಮಲದಿಂದ, ಉಚ್ಚಳಿಪನ್ನಂ–ಮೇಲಕ್ಕೆ ಹಾರುತ್ತಿರಲು, ಈ ತ್ರೈಲೋಕ್ಯ

ದೊಳ್-ಈ ಮೂರು ಲೋಕಗಳಲ್ಲಿ, ಪಿರಿದೊಂದು ಸಂಕಟಮಂ-ಹಿರಿದಾದ ಸಂಕಷ್ಟವನ್ನು, ಮಾಡಿದರ್-ಉಂಟುಮಾಡಿದರು.

೪೦. ವಿಕ್ರಾಂತಂ-ಪರಾಕ್ರಮವು, ಅತರ್ಕ್ಯಂ-ಚರ್ಚೆಗೆ ಮೀರಿದ್ದು ಎಂದರೆ ನಿರ್ಣೀತವಾದದ್ದು ; ಭುಜಬಲಂ-ಬಾಹುಬಲವು ; ಅಸಾಮಾನ್ಯಂ-ಅಸಾಧಾರಣ ವಾದದ್ದು ; ಪ್ರತಾಪಂ-ಶೌರ್ಯವು, ಅಧಿಕಂ-ಅತಿಶಯವಾದದ್ದು ; ಪೋಗು-ಹೋಗೋ, ಈತಂಗೆಣೆಯೆ ದಿವಿಜರ್-ದೇವತೆಗಳು ಈತನಿಗೆ (ಭೀಷ್ಮನಿಗೆ) ಸಾಟಿಯೇ? ಅಲ್ಲ. ವಾಯುಪಥದೊಳ್-ಆಕಾಶದಲ್ಲಿ, ಶಿತಾಸ್ತ್ರಂಗಳ್-ಹರಿತವಾದ ಬಾಣಗಳು, ಪೊಂಕಂ ಗಿಡಿಸೆ-ಉಕ್ಕಾಟವನ್ನು ಕೆಡಿಸಲು, ಭಾರ್ಗವಂ ಪರಶುರಾಮನು. ಸುಗಿದಂ-ಹೆದರಿದನು. ಇದೇಂ-ಇದೇನು! ಪ್ರತಿಜ್ಞಾಗಾಂಗೇಯಂಗೆ-ಪ್ರತಿಜ್ಞಾಭೀಷ್ಮನಿಗೆ, ಅದಿರದೆ-ನಡುಗದೆ, ಹೆದರದೆ, ಇದಿರ್ ನಿಲ್ವನ್ನರ್ ಒಳರೇ-ಎದುರಾಗಿ ನಿಲ್ಲುವಂಥವರು ಉಂಟೇ? ಇಲ್ಲವೆಂಬ ಅಭಿಪ್ರಾಯ. ಪೊಂಗು-ಸ್ಫುಟನೇ ಎಂಬುದರ ಭಾವನಾಮ ಪೊಂಕ. ಪ್ರತಿಜ್ಞಾ ಗಾಂಗೇಯಂ ಎಂಬುದು ಅರಿಕೇಸರಿಯ ಬಿರುದು.

**ವಚನ :** ಬಸವಳಿದು-ಆಯಾಸಗೊಂಡು ; ಉಸಿರಲಪ್ಪೊಡಮಾಜದೆ-ಮಾತಾಡುವುದಕ್ಕೂ ಅಸಮರ್ಥನಾಗಿ ; ದಂಡುರುಂಬೆ-ತುಂಟೆಯು, ದಿಟ್ಟೆಯು ; ಯಥಾರ್ಥವಾಗಿ-ಸಾವಿಗೆ ಕಾರಣವಾಗಿ ; ಪುಟ್ಟುವೆನಕ್ಕೆ-ಹುಟ್ಟುವೆನು, ಆಗಲಿ ; ಅಗ್ನಿ ಶರೀರೆಯಾಗಿ-ಕಿಚ್ಚಿಗರ್ಪಿಸಿದ ದೇಹವುಳ್ಳವಳಾಗಿ, ಅಗ್ನಿಪ್ರವೇಶಮಾಡಿ ; ಅವಾರ್ಯ ವೀರ್ಯನುಮಾಗಿ-ತಡೆಯಲಾಗದ ಪ್ರತಾಪವುಳ್ಳವನಾಗಿ ; ರಾಜಯಕ್ಷ್ಮ-ಕ್ಷಯರೋಗ ; ಆತ್ಮಜವಿಗತಜೀವಿಯಾಗಿ-ಮಕ್ಕಳಿಲ್ಲದವನಾಗಿ ; ದಹ್ಯಮಾನ-ಸುಡಲ್ಪಟ್ಟ ; ಮಾನ ಸರ್ಕಳಾಗಿ-ಮನಸ್ಸುಳ್ಳವರಾಗಿ, ನಷ್ಟರಾಜಮಾದುದರ್ಕೆ-ರಾಜನೇ ಇಲ್ಲದಂತಾದುದಕ್ಕೆ ; ಮಮ್ಮಲಂಮಱುಗಿ-ಮಲಮಲ ವ್ಯಥೆಪಟ್ಟು ;

೪೧. ಧರಿತ್ರಿ-ಲೋಕವು, ಮಗನ್ ಎಂಬಂತು-ಮಗ ಎಂದರೆ ಇವನೇ ಮಗ ಎನ್ನುವ ಹಾಗೆ, ನಿನ್ನನುಜರಂ-ನಿನ್ನ ತಮ್ಮಂದಿರನ್ನು, ಕೈಕೊಂಡು-ಸ್ವೀಕರಿಸಿ, ಮುಂಪೂಣ್ದ ನನ್ನಿಗೆ-ಮೊದಲು ಪ್ರತಿಜ್ಞೆ ಮಾಡಿದ ಸತ್ಯಕ್ಕೆ, ಬನ್ನಂಬರಲೀಯದೆ-ಕೇಡು ಬಾರದಹಾಗೆ, ಆರ್ತು-ಸಮರ್ಥನಾಗಿ, ಎಸಗಿದ-ಕಾರ್ಯವನ್ನು ಮಾಡಿದ, ಈ ವಿಖ್ಯಾತಿಯುಂ ಕೀರ್ತಿಯುಂ-ಈ ನೆಗಳ್ತೆಯೂ ಯಶಸ್ಸೂ, ಮುಗಿಲಂ ಮುಟ್ಟದುದಲ್ತೆ-ಮೋಡವನ್ನು ಮುಟ್ಟಿತಲ್ಲವೆ, ಎಂದರೆ ಅತ್ಯುನ್ನತವಾಯಿತಲ್ಲವೆ? ನಮ್ಮ ಕುಲದೊಳ್-ನಮ್ಮ ವಂಶದಲ್ಲಿ, ಮಕ್ಕಳ್ ಪೆಱರ್-ಬೇರೆ ಮಕ್ಕಳೆ! ನೀನೆ ಜಟ್ಟಿಗನಯ್-ನೀನೇ ಶೂರನಾಗಿದ್ದೀಯ, ಮುನ್ನಿನ-ಮೊದಲಿನ, ಒರಂಟುಮೇಡ-ಒರಟುತನ ಬೇಡ. ಮಗನೇ, ಧರಾಭಾರಮಂ ಕೈಕೊಳ್-ರಾಜ್ಯಭಾರವನ್ನು ಒಪ್ಪಿಕೋ. ಮಕ್ಕಳಂ + ಪೆಱರ್= ಮಕ್ಕಳ್ಪೆಱರ್ ಎಂದು ಕ್ರಿಯಾಸಮಾಸವಾಗಬಹುದು. ಆದರೆ ಕಾಕುವಿನ ಸಹಾಯ ದಿಂದ ಬೇರೆ ಮಕ್ಕಳೇಕೆ! ಎಂಬರ್ಥವಾಗುತ್ತದೆ. ಇಲ್ಲಿ ಸತ್ಯವತಿಯ ಮಾತಿನಲ್ಲಿ ಮೂಡಿರುವ ದೀನತೆ ಮಾರ್ದವ ವಾತ್ಸಲ್ಯಗಳು ಮಿಗಿಲಾಗಿವೆ.

ವಚನ: ಇನಿತಂ-ಇಷ್ಟನ್ನು; ಕೈಯೊಡ್ಡಿ-ಕೈಚಾಚಿ; ಆಪುರಾಪಗಾನಂದನಂ-ಭೀಷ್ಮನು.

೮೨. ರಾಜ್ಯಂ ಕಿಡುಗುಮೆ-ರಾಜ್ಯವು ಕೆಟ್ಟೇಕೆಡುತ್ತದೆ ಎಂದರೆ ಅಶಾಶ್ವತ, ರಾಜ್ಯದ ತೊಡರ್ಪು-ರಾಜ್ಯದ ತೊಡಕು, ಬಂಧನ, ಕಟ್ಟು; ಏವಾೞ್ತೆ-ಏನು ಪ್ರಯೋಜನ, ಎಂದರೆ ಈ ನಶ್ವರವಾದ ರಾಜ್ಯದ ತೊಡರಿನಿಂದ ನನಗೇನು ಪ್ರಯೋಜನ; ಬಾೞ್ತೆ-ಬದುಕು, ನನ್ನಿಯ ನುಡಿಯಂ-ಸತ್ಯದ ಮಾತನ್ನು, ಪ್ರತಿಜ್ಞೆಯನ್ನು, ಕಿಡಿಸೆಗಳೆ-ಹಾಳಾಗುವಂತೆ ನಡೆದರೆ, ನಾನುಂ-ನಾನು ಕೂಡ, ಎರಡಂ ನುಡಿದೊಡೆ-ಎರಡು ಮಾತನ್ನಾಡಿದರೆ, ಎಂದರೆ ಸುಳ್ಳಾಡಿದರೆ, ಹರಿಹರ ಹಿರಣ್ಯಗರ್ಭರ್-ವಿಷ್ಣು ಶಿವ ಬ್ರಹ್ಮರು, ತ್ರಿಮೂರ್ತಿಗಳು, ನಗರೇ-ಪರಿಹಾಸಮಾಡುವುದಿಲ್ಲವೇ? ಮಾಡುತ್ತಾರೆ ಎಂಬರ್ಥ. "ಬಾೞ್ತೆಯೆಂದು ಪ್ರಯೋಜನಂ"; ಬಾೞ್+ತೆ=ಬಾೞ್ತೆ (ಭಾವನಾಮ), ಜೀವನ, ಬದುಕು.

೮೩. ಹಿಮಕರಂ-ಚಂದ್ರನು, ಆತ್ಮಶೀತ ರುಚಿಯಂ-ತನ್ನ ತಂಪಾದ ಕಾಂತಿಯನ್ನು; ದಿನನಾಯಕನುಷ್ಣದೀಧಿತಿ ಕ್ರಮಮಂ-ಸೂರ್ಯನು ತನ್ನ ಬಿಸಿಕಿರಣಗಳ ಶಕ್ತಿಯನ್ನು; ಅಗಾಧವಾರಿಧಿಯೆ-ಅಳೆಯಲಾಗದ ಆಳವುಳ್ಳ ಸಮುದ್ರವೇ, ಗುಣ್ಪಂ-ತನ್ನ ಆಳವನ್ನು; ಇಳಾವಧು-ಭೂಮಿಯೆಂಬ ಸ್ತ್ರೀಯು; ತನ್ನ ತಿಣ್ಪಂ-ತನ್ನ ಭಾರವನ್ನು; ಉತ್ತಮಕುಲಶೈಲಂ-ಶ್ರೇಷ್ಠವಾದ ಕುಲಪರ್ವತಗಳು, ಉನ್ನತಿಯಂ-ತಮ್ಮ ಎತ್ತರವನ್ನು, ಏಳಿಫವಾಗೆ-ತಿರಸ್ಕಾರಕ್ಕೆ ಗುರಿಯಾಗುವಂತೆ, ಬಿಸುಟಿಪ್ಪೊಡಂ-ಬಿಸಾಡುವ ಪಕ್ಷದಲ್ಲಿ, ಬಿಸುಟಿತ್ತುಮ-ಬಿಸುಡಲಿ; ಮದೀಯ ಪುರುಷವ್ರತಮೊಂದುಮಂ-ನನ್ನ ಬ್ರಹ್ಮಚರ್ಯವ್ರತವೊಂದನ್ನು, ಅಂಬಿಕೇ-ತಾಯೀ, ಈಗಳ್-ಈಗ, ಬಿಸುಡೆಂ-ನಾನು ಬಿಡುವುದಿಲ್ಲ, ತೊರೆಯುವುದಿಲ್ಲ.

ವಚನ: ಏಗೆಯ್ದುಂ ತಪ್ಪಿದನಿಲ್ಲ-ಏನು ಮಾಡಿದರೂ ತಪ್ಪಿದವನಾಗಲಿಲ್ಲ.

೮೪. ರಂಗತ್ತರಂಗ ವಾರ್ಧಿ ಚಯಂಗಳ್-ನರ್ತಿಸುವ ಅಲೆಗಳುಳ್ಳ ಕಡಲುಗಳ ಸಮೂಹ, ತಂತಮ್ಮ ಮೇರೆಯಂ ದಾಂಟುವೊಡಂ-ತಮ್ಮ ತಮ್ಮ ಎಲ್ಲೆಯನ್ನು ಮೀರುವುದಾದರೂ, ಗಾಂಗೇಯನುಂ-ಭೀಷ್ಮನೂ, ಪ್ರತಿಜ್ಞಾಗಾಂಗೇಯನುಂ-ಅರಿಕೇಸರಿಯೂ, ಒರ್ಮೆ ನುಡಿದುದಂ-ಒಂದು ಬಾರಿ ಮಾಡಿದ ಭಾಷೆಯನ್ನು, ತಪ್ಪುವರೇ-ತಪ್ಪುತ್ತಾರೆಯೇ? ಇಲ್ಲ.

ವಚನ: ಏಗೆಯ್ದುಂ ಒಡಂಬಡಿಸಲಾಱದೆ-ಏನು ಮಾಡಿಯೂ ಒಪ್ಪಿಸಲಸಮರ್ಥಳಾಗಿ; ಏಗೆಯ್ವುದೇನಂ ತೀರ್ಚುವುದು-ಏನು ಮಾಡುವುದು, ಏನನ್ನು ತೀರಿಸುವುದು; ತಗುಳ್ದು-ಆರಂಭವಾಗಿ; ಅವ್ಯವಚ್ಛಿನ್ನಮಾಗಿ-ನಡುವೆ ನಿಲ್ಲದೆ, ನಿರಂತರವಾಗಿ; ಎಡೆವಱಿದು-ನಡುವೆ ಹರಿದುಹೋಗಿ; ಕತ್ತರಿಸಿಹೋಗಿ; ಅಂತೆಗೆಯ್ವೆನೆಂದು-ಹಾಗೆಯೇ ಮಾಡುತ್ತೇನೆಂದು.

೮೫. ತ್ರಿದಶನರಾಸುರೋರಗಗಣ ಪ್ರಭು-ದೇವತೆಗಳು, ನರರು, ರಾಕ್ಷಸರು,

ಸರ್ಪಲೋಕದವರು, ಗಣಪ್ರಭು–ಈ ಗುಂಪುಗಳಿಗೆಲ್ಲಾ ಪ್ರಭುವಾದವನು, ನಿಶ್ಚಿತ ತತ್ವಂಯೋಗಿ–ನಿರ್ಣೀತವಾದ ತತ್ವವನ್ನು ತಿಳಿದ ಯೋಗಿಯು, ಯೋಗದ ಬಲಂ–ಯೋಗ ಶಕ್ತಿಯು, ಉಣ್ಮೆ ಪೊಣ್ಮೆನಿಲೆ–ಹುಟ್ಟಿ ಪ್ರಕಟವಾಗಿ ಸ್ಥಿರವಾಗಿ ನಿಲ್ಲಲು, ಪುತ್ರವರಾರ್ಥಿಗಳಾಗಿ–ಮಗನು ಬೇಕೆಂಬ ವರವನ್ನು ಬೇಡುವವರಾಗಿ, ತನ್ನ ಕಟ್ಟಿದಿರೊಳ್–ಹತ್ತಿರ ತನ್ನೆದುರಿನಲ್ಲೇ, ನಿಂದರಂ–ನಿಂತವರನ್ನು, ಸಯದೆ ನೋಡೆ–ಮೃದುವಾಗಿ ನೋಡಲು, ಆ ಮುನೀಂದ್ರನ ದಿವ್ಯದೃಷ್ಟಿ ಮಂತ್ರದೊಳ್–ಆ ಋಷಿಶ್ರೇಷ್ಠನ ದಿವ್ಯವಾದ ನೋಟವೆಂಬ ಮಂತ್ರದಿಂದಲೇ, ಆ ಸತಿಯರಿರ್ವರೊಳಂ–ಆ ಇಬ್ಬರು ಸ್ತ್ರೀಯರಲ್ಲೂ, ನವಗರ್ಭ ವಿಭ್ರಮಂ–ಹೊಸದಾದ ಬಸಿರಿನ ಚೆಲ್ವು, ಪೊದಳ್ದುದು–ವ್ಯಾಪಿಸಿತು. ಎಂದರೆ ಆ ಇಬ್ಬರೂ ಗರ್ಭಧಾರಣೆಮಾಡಿದರು.

**ವಚನ :** ಪೋಗಲಲಸಿ–ಹೋಗುವುದಕ್ಕೆ ಆಯಾಸಪಟ್ಟು; ಸೂಲಾಯ್ತಿಯುಂ–ಪರಿಚಾರಿಕೆಯನ್ನು ; ತನ್ನವೊಲೆ–ತನ್ನಂತೆಯೇ ; ಕೈಗೆಯ್ದು–ಸಿಂಗರಿಸಿ ; ಬರವಂ–ವರವನ್ನು ; ವರದನಾಗಿ–ವರವನ್ನು ಕೊಡುವವನಾಗಿ; ಜಾತ್ಯಂಧನಕ್ಕುಂ–ಹುಟ್ಟು ಕುರುಡನಾಗುತ್ತಾನೆ; ಮೊಗಮುಂ–ಮುಖವನ್ನು ; ಪಾಂಡುರಂಮಾಡಿದಳ್–ಬೆಳ್ಳಗಾಗಿಸಿಕೊಂಡಳು ; ಭದ್ರಲಕ್ಷಣ–ಮಂಗಳಕರವಾದ ಲಕ್ಷಣಗಳಿಂದ ; ದರಹಸಿತವದನಾರವಿಂದೆಯಾಗಿ–ಅರೆನಗುತ್ತಿರುವ ಮುಖಕಮಲವುಳ್ಳವಳಾಗಿ ; ಇಲ್ಲಿ ಸೂಲಾಯ್ತಿ ಎಂಬುದಕ್ಕೆ ಪಾಠಾಂತರ ' ಸೂಳೆ ' ಎಂದಿದೆ ; ಇದಕ್ಕೆ ದಾಸಿ ಎಂದರ್ಥ ; ಈ ಪಾಠ ಗ್ರಾಹ್ಯ ; ಇತರ ಪ್ರಯೋಗಗಳು : ಪರಮೇಶ್ವರ ಭಟಾರರಾ ಪ್ರಾಣವಲ್ಲಭೆ ವಿನಾ ಪೊಟಿಗಳೆನ್ಬೊರ್ ಸೂಳೆಯರ್ ; ಲೋಕ ಮಹಾದೇವಿಯರ ದೇಗುಲದ ಸೂಳೆ ಗೋಯಿನ್ದಪೊಡ್ತಿ ; ಅಂಬಿಕೆಗೆ ಧೃತರಾಷ್ಟ್ರನುಂ ಅಂಬಾಲಿಕೆಗೆ ಪಾಂಡುರಾಜನುಂ ಅವರ ಸೂಳೆಯುಪ್ಪಾಕೆಗೆ ವಿದುರನುಮೆಂಬ ಮೂವರ್ ತನೂಜರಾದರ್. (ಗದಾ. ೫. ೪೪ ೧)

**೪೬.** ಆ ಮೂವರುಂ–ಆ ಮೂವರು ಸ್ತ್ರೀಯರೂ, ವರಂಬಡೆದ ಸಂತಸಂ–ವರವನ್ನು ಪಡೆದ ಸಂತೋಷವು, ಮನದೊಳ್–ಮನಸ್ಸಿನಲ್ಲಿ, ಆಗಲ್–ಆಗಲು, ಒಂದುತ್ತರೋತ್ತರಂ–ಒಂದು ಸಂತತವಾದ ಅತಿಶಯವು, ಬೆಳೆವ ಮಾಳ್ಕೆಯಿಂ–ಬೆಳೆಯುವ ರೀತಿಯಿಂದ, ಬಳೆವ ಗರ್ಭಮುಂ–ಬೆಳೆಯುತ್ತಿರುವ ಗರ್ಭವನ್ನು, ತಾಳ್ದಿ–ಧರಿಸಿ, ಆದರಂ ಬೆರಸು–ಆದರದಿಂದ ಕೂಡಿದವರಾಗಿ, ಧೃತರಾಷ್ಟ್ರ ವಿಖ್ಯಾತ ಪಾಂಡುರಾಜ ವಿದುರರ್ಕಳಂ ಮೂವರಂ–ಧೃತರಾಷ್ಟ್ರ, ಕೀರ್ತಿವಂತನಾದ ಪಾಂಡುರಾಜ, ವಿದುರ ಎಂಬ ಈ ಮೂವರನ್ನು, ಕ್ರಮದೆ–ಕ್ರಮದಿಂದ, ಅಂದು ಪೆತ್ತರ್–ಅಂದು ಹೆತ್ತರು.

**೪೭.** ಆ ವಿವಿಧ ಲಕ್ಷಣಂಗಳೊಳ್–ಪ್ರಸಿದ್ಧವಾದ ಬಗೆಬಗೆಯ ರಾಜಲಕ್ಷಣಗಳಲ್ಲಿ, ಆವರಿಸಿದ–ವ್ಯಾಪಿಸಿದ, ಕುಲದ ಬಲದಚಲದಳವಿಗಳೊಳ್–ವಂಶದ ಶಕ್ತಿಯ ಛಲದ ಪ್ರಮಾಣಗಳಲ್ಲಿ, ಆ ಮೂವರುಮಂ–ಆ ಮೂರು ಮಕ್ಕಳನ್ನೂ, ಆದಿ ಪುರುಷರ್ ಮೂವರುಂ–ಬ್ರಹ್ಮ ವಿಷ್ಣು ರುದ್ರರೆಂಬ ಆದಿಪುರುಷರು ಮೂವರೂ, ತ್ರಿಮೂರ್ತಿಗಳೂ, ಎನಲಲ್ಲದೆ–ಎನ್ನುವುದಲ್ಲದೆ, ಅತ್ತ ಮತ್ತೇನೆಂಬರ್–ಅತ್ತ

ಬೇರೇನೆಂದು ಹೇಳುತ್ತಾರೆ. ಎಂದರೆ ಆ ಮೂರು ಮಕ್ಕಳು ಆದಿಪುರುಷರಂತೆ ಇದ್ದರು ಎಂದು ತಾತ್ಪರ್ಯ.

**ವಚನ:** ಜಾತಕರ್ಮ-ಹುಟ್ಟಿದಾಗಮಾಡುವ ಸಂಸ್ಕಾರ; ನಾಮಕರಣ-ಹೆಸರಿಡುವುದು; ಅನ್ನಪ್ರಾಶನ-ಅನ್ನವನ್ನು ಊಡುವುದು; ಚೌಲ-ಕೂದಲು ಬಿಡಿಸುವುದು; ಉಪನಯನ-ಮುಂಜಿ; ಇವೇ ಮೊದಲಾದ. ಷೋಡಶಕ್ರಿಯೆಗಳಂ-ಹದಿನಾರು ಕರ್ಮಗಳನ್ನು; ಮುಂತಿಟ್ಟು-ಪ್ರಧಾನವಾಗಿ ಇಟ್ಟುಮಾಡಿ; ಶಕುನಿಯೊಡವುಟ್ಟಿದಳಂ-ಶಕುನಿಯ ಸಹೋದರಿಯನ್ನು.

೮೮. ಮತ್ತೆ, ಇತ್ತ-ಇತ್ತಕಡೆ, ನೆಗೞ್ತೆಯ-ಪ್ರಸಿದ್ಧನಾದ, ಪುರುಷೋತ್ತಮನ-ಶ್ರೀಕೃಷ್ಣನ, ಪಿತಾಮಹಂಗೆ-ತಾತನಾದ, ಶೂರಂಗೆ-ಶೂರನೆಂಬ ಯದುವಂಶದ ರಾಜನಿಗೆ, ಮಗಳ್-ಮಗಳು, ಕುಂತಿ. ಮತ್ತಗಜಗಮನೆ-ಮದ್ದಾನೆಯಂತೆ ನಡಿಗೆಯುಳ್ಳವಳು, ಯದುವಂಶೋತ್ತಮೆ-ಯದುವಂಶದಲ್ಲಿ ಶ್ರೇಷ್ಠಳು, ಎನೆ-ಎನ್ನಲು, ಕುಂತಿ ಭೋಜನ ಮನೆಯೊಳ್-ಕುಂತಿ ಭೋಜನ ಮನೆಯಲ್ಲಿ,

೮೯. ಬಳೆಯುತ್ತಿರ್ಪನ್ನೆಗಂ-ಬೆಳೆಯುತ್ತಿರುವಷ್ಟರಲ್ಲಿ, ಆ ನಳಿನಾಸ್ಯೆಯ-ಕಮಲಮುಖಿಯಾದ ಆ ಕುಂತಿಯು, ಗೆಯ್ದುದೊಂದು-ಮಾಡಿದ ಅದೊಂದು, ಶುಶ್ರೂಷೆ-ಉಪಚಾರವು, ಮನಂಗೊಳೆ-ಮನವನ್ನು ಮೆಚ್ಚಿಸಲು, ದುರ್ವಾಸಂ-ದುರ್ವಾಸನೆಂಬ ಋಷಿ, ವಿಳಸಿತ ಮಂತ್ರಾಕ್ಷರಂಗಳಂ-ಪ್ರಕಾಶಮಾನವಾದ ಅಯ್ದು ಮಂತ್ರಾಕ್ಷರಗಳನ್ನು, ದಯೆಯಿಂದಂ-ಕರುಣೆಯಿಂದ, ಕೊಟ್ಟಂ-ಕೊಟ್ಟನು.

**ವಚನ:** ಅಂತುಕೊಟ್ಟು-ಹಾಗೆಕೊಟ್ಟು; ಆಹ್ವಾನಂಗೆಯ್ದು-ಉಚ್ಚರಿಸಿ ಕರೆದು, ನಿನ್ನ ಬಗೆಗೆ ಬಂದ-ನಿನ್ನ ಮನಸ್ಸಿಗೆ ಬಂದ; ಪೋಲ್ವೆಯ ಮಕ್ಕಳಂ-ಹೋಲಿಕೆಯ ಮಕ್ಕಳನ್ನು; ಬೆಸಸಿದೊಡೆ-ಹೇಳಿದರೆ.

೯೦. ಈ ಮುನಿಯ ವರದ ಮಹಿಮೆಯಂ-ಈ ಋಷಿಯ ವರದ ಮಹಿಮೆಯನ್ನು, ಎನ್ನಿಚ್ಚೆಯೊಳ್-ನನಗೆ ಇಷ್ಟವಾದ ರೀತಿಯಲ್ಲಿ, ಪುಚ್ಚವಣಂ ನೋಡುವೆಂ-ಪರೀಕ್ಷೆ ಮಾಡಿ ನೋಡುತ್ತೇನೆ, ಎನುತೆ-ಎನ್ನುತ್ತ, ಶಫರೋಚ್ಚಲಿತತರತ್ತರಂಗೆಗೆ-ಮೀನುಗಳಿಂದ ಚಿಮ್ಮಿಸಲ್ಪಟ್ಟು ಅಡ್ಡವಾಗಿ ಹಾಯುತ್ತಿರುವ ಅಲೆಗಳನ್ನುಳ್ಳ, ಗಂಗೆಗೆ-ಗಂಗಾನದಿಗೆ, ಅಂದು-ಆಗ, ಉಚ್ಚಸ್ತನಿ-ಉಚ್ಚವಾದ ಸ್ತನಗಳನ್ನುಳ್ಳವಳು, ಒರ್ವಳೆ-ಒಬ್ಬಳೇ, ಬಂದಳ್-ಬಂದಳು.

೯೧. ಬಂದು, ಸುರನದಿಯ ನೀರೊಳ್ ಮಿಂದು-ಗಂಗಾನದಿಯ ನೀರಿನಲ್ಲಿ ಸ್ನಾನಮಾಡಿ, ಇನನಂನೋಡಿ-ಸೂರ್ಯನನ್ನು ನೋಡಿ, ನಿನ್ನ ದೊರೆಯನೆ-ನಿನಗೆ ಸಾಟಿಯಾಗಿರುವವನೇ, ಮಗನಕ್ಕೆ-ಮಗನಾಗಲಿ, ಎಂದು, ಆಹ್ವಾನಂಗೆಯ್ಯಲೊಡಂ-ಆಹ್ವಾನ ಮಾಡಿದಕೂಡಲೇ, ದಲ್-ನಿಜವಾಗಿಯೂ, ದಶಶತಕಿರಣಂ-ಸಹಸ್ರಕಿರಣನಾದ ಸೂರ್ಯನು, ಅಂದು, ಧರೆಗಿೞಿದಂ-ಭೂಮಿಗೆ ಅವತರಿಸಿದನು.

**ವಚನ:** ನಭೋಭಾಗದಿಂ–ಆಕಾಶಪ್ರದೇಶದಿಂದ, ಅರವಿಂದ ಬಾಂಧವನಂ–ಸೂರ್ಯನನ್ನು.

೯೨. ಕೊಡಗೂಸುತನದ ಭಯದಿಂ–ತಾನಿನ್ನೂ ಕುಮಾರಿ, ಕನ್ಯೆ ಎಂಬ ಹೆದರಿಕೆಯಿಂದ, ನಡುಗುವ, ಕನ್ನಿಕೆಯ–ಹುಡುಗಿಯ, ಬೆಮರನೀರ್ಗಳ ಪೊನಲ್–ಬೆವರಿನ ನೀರಿನ ಪ್ರವಾಹ, ಒಬ್ಬುಡಿಯಲ್–ತುಂಬಿ ಹರಿದು; ಒಡಗೂಡೆ–ಕೂಡೆ ಸೇರಲು, ಗಂಗೆಯ ಮಡು–ಗಂಗಾನದಿಯ ಮಡು, ಕರೆಗಣ್ಮಿದುದು–ಎರಡು ದಡಗಳನ್ನೂ ತೀಡಿಕೊಂಡು ಹರಿಯಿತು; ನಾಣ ಪೆಂಪೇಂ ಪಿರಿದೋ–ನಾಚಿಕೆಯ ಆಧಿಕ್ಯ ಎಷ್ಟು ದೊಡ್ಡದೋ! ಬಹು ಗಾಢವಾದ ನಾಚಿಕೆಯಿಂದ ಆ ಕನ್ನಿಕೆ ಬೆವರಿದಳು; ಆ ಬೆವರಿನ ನೀರು ಗಂಗಾಪ್ರವಾಹವನ್ನು ಕೊಬ್ಬಿಸಿ ಅದರ ಮಡುವನ್ನು ತುಂಬುವಂತೆ ಆಯಿತು. ಕೊಡಗೂಸು=ಕೊಡ+ಕೂಸು, ಕೋಮಲವಾದ, ಎಳೆಯ ಪ್ರಾಯದ, ಹೆಣ್ಣು; ಕರೆಗಣ್ಮು=ಕರೆಯಂ–ತೀರವನ್ನು, ಪಾತ್ರದ ಅಂಚುಗಳನ್ನು+ಕಣ್ಮು<ಕಟ್ಮು–ತುಂಬು (ತಮಿಳು: ಕಟುಮು–ತುಂಬು, ಮೀರು).

**ವಚನ:** ಕಿಡೆನುಡಿದು–ಕೆಡುವಂತೆ, ಹೊರಟುಹೋಗುವ ಹಾಗೆ ಮಾತಾಡಿ.

೯೩. ತರುಣಿ–ಕನ್ನೆಯೇ, ಬರಿಸಿದ ಕಾರಣಂ–ನನ್ನನ್ನು ಬರಮಾಡಿಕೊಂಡ ಕಾರಣ, ಆವುದೋ–ಯಾವುದೊ? ಮುನೀಶ್ವರನ ಮಂತ್ರಂ–ಆ ಋಷಿಶ್ರೇಷ್ಠನು ಕೊಟ್ಟ ಮಂತ್ರ, ಏದೊರೆಯೆಂದು–ಎಂಥಾದ್ದು ಎಂಬುದನ್ನು ಪರೀಕ್ಷಿಸುವುದಕ್ಕಾಗಿ; ಆಂ ಮರುಳಿಯೆನ್–ನಾನು ತಿಳಿಯದವಳು, ಭ್ರಮೆಗೊಂಡವಳು ಆಗಿದ್ದೇನೆ, ಅಱಿದು ಮಱಿಯದೆ–ತಿಳಿದೂ ತಿಳಿಯದೆ, ಬರಿಸಿದೆನ್–ಬರಮಾಡಿಕೊಂಡೆನು; ಇನ್ನೇೞಿಂ–ಇನ್ನು ಏಳಿರಿ, ಎದ್ದು ಹೋಗಿರಿ, ಎಂದೊಡೆ–ಎಂದು ಹೇಳಿದರೆ, ಪೋಗಲ್–ಹೋಗುವುದಕ್ಕೆ,

೯೪. ಮುಂಬೇಡಿದವರಮಂ–ಮೊದಲು ಬೇಡಿದ ವರವನ್ನು, ಕುಡದೆ–ಕೊಡದೆ, ಅಂಬುಜಮುಖಿ–ಕಮಲಮುಖಿಯೇ, ಆಗದು–ಆಗುವುದಿಲ್ಲ; ಎನ್ನದೊರೆಯಂ–ನನಗೆ ಸಮಾನನಾದ, ಪುತ್ರಂ–ಮಗನು, ನಿನಗಕ್ಕೆ–ನಿನಗೆ ಆಗಲಿ, ಎಂಬುದುಂ–ಎನ್ನುತ್ತಲು, ಒದವಿದ ಗರ್ಭದೊಳ್–ಉಂಟಾದ ಗರ್ಭದಲ್ಲಿ, ಅಂಬುಜಮಿತ್ರನನೆ–ಸೂರ್ಯನನ್ನೇ, ಪೋಲ್ವಮಗಂ–ಹೋಲುವ ಮಗನು, ಒಗೆತಂದಂ–ಹುಟ್ಟಿಬಂದನು. ಈ ಎರಡು ಪದ್ಯಗಳನ್ನೂ ಒಟ್ಟಿಗೆ ಅರ್ಥೈಸಬೇಕು: ಪದ್ಯದಿಂದ ಪದ್ಯಕ್ಕೆ ಹರಿಯುತ್ತ ಗದ್ಯಕ್ಕೆ ನುಸುಳುತ್ತ ಪಂಪನ ಕಥಾನಿರೂಪಣೆಯ ರೀತಿ ವೇಗಗಾಮಿಯಾಗಿದೆ.

೯೫. ಒಡವುಟ್ಟಿದ ಮಣಿಕುಂಡಲಂ–ಜೊತೆಯಲ್ಲಿಯೇ ಹುಟ್ಟಿದ ರತ್ನಖಚಿತ ಕುಂಡಲವೂ, ಒಡವುಟ್ಟಿದ ಸಹಜ ಕವಚಂ–ಜೊತೆಯಲ್ಲೇ ಹುಟ್ಟಿಬಂದ ಸ್ವಾಭಾವಿಕವಾದ ಕವಚ(ಅಂಗಿ)ವೂ, ತನ್ನೊಳ್–ತನ್ನಲ್ಲಿ, ಅಮರ್ದಿರೆ–ಸೇರಿಕೊಂಡಿರಲು, ತೊಡರ್ದಿರೆಯುಂ–ತೊಡರಿಕೊಂಡಿರಲೂ, ಬಂದು–ಆ ಮಗನು ಹೊರಕ್ಕೆಬಂದು, ಆಕೆಯ–ಆ ಕುಂತಿಯ,

ನಡುಕಮಂ-ನಡುಗುವುದನ್ನು, ಒಡರಿಸಿದನು-ಉಂಟುಮಾಡಿದನು. ಆಗಳಾ ಬಾಲಿಕೆಯಾ [ಯುಂ]-ಆಗ ಆ ತರುಣಿಯೂ.

**ವಚನ:** ಅಂತು ನಡನಡ ನಡುಗಿ-ಹಾಗೆ ನಡನಡೆಂದು ನಡುಗಿ, ಜಲದೇವತೆಗಳ ಪ್ಪೊಡಂ-ನೀರಿನಲ್ಲಿ ನೆಲಸಿರುವ ದೇವತೆಗಳಾದರು ಕೂಡ, ಮನಂಗಾಣ್ಬರ್-ತನ್ನ ಮನಸ್ಸನ್ನು ತಿಳಿದುಕೊಳ್ಳುತ್ತಾರೆ; ನಿಧಾನಮನೀಡಾಡುವಂತೆ-ನಿಧಿಯನ್ನು ಬಿಸಾಡುವ ಹಾಗೆ; ಮುೞುಗಲೀಯದೆ-ಮುಳುಗುವುದಕ್ಕೆ ಬಿಡದೆ; ತನ್ನ ತೆರೆಗಳೆಂಬ-ತನ್ನ ಅಲೆಗಳೆಂಬ; ನಳಿತೋಳ್ಗಳಿಂ-ಕೋಮಲವಾದ ತೋಳುಗಳಿಂದ; ಒಯ್ಯನೆ-ಮೆಲ್ಲಗೆ, ತೞ್ಕೈಸಿತರೆ-ಅಪ್ಪಿಕೊಂಡು ತರಲು; ಸೂತನೆಂಬವಂ-ಬೆಸ್ತನೆನ್ನಿಸಿಕೊಳ್ಳುವವನು; ಕಂಡು-ಮಗುವನ್ನು ನೋಡಿ.

೯೭. ಬಾಳದಿನೇಶಬಿಂಬದ-ಎಳೆಯ ಸೂರ್ಯಮಂಡಲದ, ನೆೞಲ್-ಪ್ರತಿಬಿಂಬ, ಜಲದೊಳ್-ನೀರಿನಲ್ಲಿ, ನೆಲಸಿತ್ತೊ-ನೆಲಸಿತೋ; ಮೇಣ್-ಅಥವಾ, ಫಣೀಂದ್ರಾ ಲಯದಿಂದಂ-ನಾಗರಾಜನ ಮನೆಯಿಂದ ಎಂದರೆ ಪಾತಾಳಲೋಕದಿಂದ, ಉರ್ಚಿದ-ಭೇದಿಸಿಕೊಂಡುಬಂದ, ಫಣಾಮಣಿ-ಹೆಡೆಯಮಣಿಗಳ, ಮಂಗಳ ರಶ್ಮಿಯೋ-ಮಂಗಳ ಕರವಾದ ಕಿರಣವೋ; ಕರಂ-ವಿಶೇಷವಾಗಿ, ಎನ್ನೆರ್ದೆಯಂ-ನನ್ನ ಮನವನ್ನು, ಮೇಳಿಸಿದಪ್ಪುದು-ಪ್ರೀತಿಸುವುದಾಗಿದೆ, ಎಂದು, ನೀರೊಳ್-ಗಂಗೆಯ ನೀರಿನಲ್ಲಿ, ಬೊದಿಲ್ಲೆನೆ-ಬೊದಿಲ್ ಎಂದು ಶಬ್ದವಾಗುವಹಾಗೆ, ಪಾಯ್ದುಂ-ಹಾರಿಬಿದ್ದು, ಆದಂ ಆದರದೆ-ಅತಿಶಯ ಪ್ರೇಮದಿಂದ, ಆ ಬಾಳನಂ- ಆ ಬಾಲಕನನ್ನು, ಕಂಡು-ನೋಡಿ, ನಿಧಿಗಂಡನಂತೆ ವೋಲ್-ನಿಧಿಯನ್ನು ನೋಡಿದವನಂತೆ, ಒಸೆದಂ-ಸಂತೋಷಪಟ್ಟನು, ಇದ್ದಕ್ಕಿದ್ದಂತೆ ನಿಧಿಯನ್ನು ಕಂಡ ಮನುಷ್ಯನಲ್ಲಿ ಮೂಡುವ ಸಂತೋಷ ಸಂಭ್ರಮ ಆಶ್ಚರ್ಯಾದಿ ಭಾವಗಳು ಈ ಪದ್ಯದಲ್ಲಿ ರೂಪುಗೊಂಡಿವೆ.

**ವಚನ:** ಮನಂಗೊಂಡು-ಮನದಲ್ಲಿ ಮೆಚ್ಚಿ; ನಲ್ಲಳ ಸೋಂಕಿಲೊಳ್-ಮಡದಿಯ ಉಡಿಯಲ್ಲಿ; ರಾಗಿಸಿ-ಸಂತೋಷಿಸಿ; ಸುತನ ಸೂತಕಮಂ ಕೊಂಡಾಡೆ-ಮಗನು ಹುಟ್ಟಿದ್ದಕ್ಕಾಗಿ ಮೈಲಿಗೆಯನ್ನು ಆಚರಿಸಲು.

೯೭. ಅಗುೞ್ದಿರಲ್-ಅಗೆದಿರಲು, ತೋಡಿರಲು, ಆ ಕುೞಿಯೊಳ್-ಆ ಗುಣಿಯಲ್ಲಿ, ತೊಟ್ಟಗೆ-ಬೇಗನೆ, ನಿಧಿಗಂಡಂತೆ-ನಿಧಿಯನ್ನು ನೋಡಿದಹಾಗೆ, ಆ ಮಗನಂದಂ-ಆ ಮಗನ ಚೆಲ್ವು, ವಸುಧೆಗೆ-ಭೂಮಿಗೆ, ಅಸದಳಮಾಯ್ತು-ಅತಿಶಯ ವಾಯಿತು, ಎಂದು, ಲೋಗರ್-ಲೋಕದ ಜನ, ಬಗೆದಿರೆ-ಭಾವಿಸಿರಲು, ವಸುಷೇಣ ನೆಂಬ-ವಸುಷೇಣ ಎನ್ನುವ, ಪೆಸರ್-ಹೆಸರು, ಆಗಳ್ ಆಯ್ತು-ಆಗ ಉಂಟಾಯಿತು.

೯೮. ಅಂತು-ಹಾಗೆ, ವಸುಷೇಣಂ-ವಸುಷೇಣನು, ಆ ಲೋಕಾಂತಂಬರಂ-ಆ ಲೋಕದ ಕೊನೆಯ ಎಲ್ಲೆಯವರೆಗೂ; ಅಳವಿಬಳೆಯೆ-ಪರಾಕ್ರಮವು ಬೆಳೆಯುತ್ತಿರಲು, ಬಳೆದ ಎಸಕಂ-ಬೆಳೆದ ರೀತಿ, ಅದು ಓರಂತೆ-ಅದು ಕ್ರಮವಾಗಿ, ಜನಂಗಳ-ಜನಗಳ,

ಕರ್ಣೋಪಾಂತದೊಳ್–ಕಿವಿಗಳ ಸಮೀಪದಲ್ಲಿ, ಒಗೆದು-ಹುಟ್ಟಿ, ಎಸೆಯೆ–ಪ್ರಕಾಶಿಸಲು, ಕರ್ಣನೆಂಬನುಮಾದಂ–ಕರ್ಣ ಎಂಬ ಹೆಸರುಳ್ಳವನೂ ಆದನು.

**ವಚನ:** ಶಸ್ತ್ರಶಾಸ್ತ್ರ ವಿದ್ಯೆಯೊಳ್–ಶಸ್ತ್ರವಿದ್ಯೆಯಲ್ಲೂ ಶಾಸ್ತ್ರವಿದ್ಯೆಯಲ್ಲೂ; ಯೌವನಾರಂಭದೊಳ್–ಪ್ರಾಯದ ಮೊದಲ ಭಾಗದಲ್ಲಿ.

೯೯. ಬಿಲ್ಲಜೇವೊಡೆಯೆ–ಕರ್ಣನ ಬಿಲ್ಲಿನ ಟಂಕಾರವೇ, ವೈರಿನರೇಂದ್ರರಂ–ಶತ್ರುರಾಜರನ್ನು, ಪೊಡೆದುದು–ಹೊಡೆಯಿತು, ಅಪ್ಪಳಿಸಿತು; ನಿರಂತರಂ–ಎಡೆಬಿಡದೆ, ಕಡಿಕಡಿದಿತ್ತ–ಕತ್ತರಿಸಿ ಕತ್ತರಿಸಿ ದಾನಮಾಡಿದ, ಪೊ[ನ್ನೆ]-ಚಿನ್ನವೇ, ಬುಧಮಾಗಧ ವಂದಿಜನಕ್ಕೆ–ವಿದ್ವಾಂಸರಿಗೆ, ಕೀರ್ತಿಸುವವರಿಗೆ, ಹೊಗಳುಭಟ್ಟರಿಗೆ, ಕೊಟ್ಟ ಕೊಡೆ–ಕೊಟ್ಟ ದಾನವೇ, ಆದ ಎಡ[ಅಂ]–ಬಂದ ಬಡತನವನ್ನು, ಸಿಡಿಲ್ವೊಡೆದವೊಲ್–ಸಿಡಿಲುಹೊಡೆದ ಹಾಗೆ, ಅಟ್ಟಿಮುಟ್ಟಿ–ಅಟ್ಟಿಸಿಕೊಂಡುಹೋಗಿ ಸೋಕಿ; ಕಡಿದಿಕ್ಕಿದುದು –ಕಡಿದುಹಾಕಿತು; ಎಡಜಿದೆ–ವಕ್ರವಾಗದೆ, ಬೇಡಿಂ–ಯಾಚಿಸಿರಿ, ಓಡಿಂ–ಓಡಿರಿ, ಎಂಬುದು, ಕರ್ಣನಾ–ಕರ್ಣನ, ಚಾಗದ–ದಾನದ, ಬೀರದ–ಶೌರ್ಯದ, ಮಾತು–ಮಾತಾಗಿದೆ, ಇದು, ಎಡಜು–ವಕ್ರಭಾವೇ, ದಾರಿದ್ರ್ಯೇಚ–ವಕ್ರವಾಗುವಿಕೆ, ಬಡತನ; ಕೊಡು ಎಂಬುದರ ಭಾವನಾಮ ಕೋಡು.

**ವಚನ:** ಪೊಗೞ್ತೆಯಂ ನೆಗೞ್ತೆಯುಮಂ–ಕೊಂಡಾಟವನ್ನೂ ಕೀರ್ತಿಯನ್ನೂ; ಇಂತಲ್ಲದೆ–ಹೀಗಲ್ಲದೆ, ಈ ರೀತಿಯಿಂದಲ್ಲದೆ;

೧೦೦. ಬೇಡಿದೊಡೆ–ಯಾರಾದರೂ ಬಯಸಿ ಯಾಚಿಸಿದರೆ, ಕರ್ಣಂ–ಕರ್ಣನು, ಬಲದ ಬರಿಯುಮಂ–ಬಲಭಾಗದ ಪಕ್ಕೆಯನ್ನು ಕೂಡ, ಉಗಿದು–ಕತ್ತರಿಸಿ, ಈಡಾಡುಗುಂ-ದಾನವಾಗಿ ಎಸೆಯುತ್ತಾನೆ, ಎಂದು–ಎಂದುಭಾವಿಸಿ, ಆಗಳೆ–ಆಗಲೇ, ಕೈಗೂಡಿದ–ಕೈಗೆ ಕೂಡಿದ ಎಂದರೆ ಸಿದ್ಧವಾದ, ವಟುವಾಕೃತಿಯೊಳ್–ಬ್ರಹ್ಮಚಾರಿಯ ರೂಪಿನಲ್ಲಿಯೇ, ಆ ಸಹಜ ಕವಚಮಂ ಕುಂಡಳಮಂ–ಕರ್ಣನೊಡನೆಯೇ ಹುಟ್ಟಿಬಂದ ಕವಚವನ್ನೂ ಕುಂಡಲವನ್ನೂ, ಇಂದ್ರನು, ಬೇಡಿದಂ–ಎರೆದನು, ಯಾಚಿಸಿದನು.

೧೦೧. ಬೇಡಿದುದಂ–ಬೇಡಿದ್ದನ್ನು, ಅರಿದುಕೊಳ್–ಕತ್ತರಿಸಿಕೊ, ಎನೆ-ಎಂದು ಕರ್ಣ, ಹೇಳಲು, ಬೇಡಿದುದಂ–ಬೇಡಿದ್ದನ್ನು, ಎನಗೆ–ನನಗೆ, ಮುಟ್ಟಲಾಗದು–ಕೊಡುವುದಕ್ಕೆ ಮುಂಚೆಯೇ ಮುಟ್ಟಬಾರದು, ಎನೆ–ಎಂದು ಇಂದ್ರ ಹೇಳಲು, ಅಲ್ಲಾಡದೆ–ಸ್ವಲ್ಪವೂ ಅಲುಗಾಡದೆ ಎಂದರೆ ಮನಸ್ಸಿನ ಸ್ಥಿರತೆಯನ್ನು ನೀಗಿಕೊಳ್ಳದೆ, ನೆಗಟ್ಟು–ಕಾರ್ಯತಃ ಮಾಡಿ, ಕೊಳ್–ತೆಗೆದುಕೊ, ಎಂದು–ಎಂದು ಹೇಳಿ, ರಾಧೇಯಂ–ಕರ್ಣನು, ಕವಚಮಂ ಅರಿದು–ಕವಚವನ್ನು ಕತ್ತರಿಸಿ, ಇಂದ್ರಂಗೆ–ಇಂದ್ರನಿಗೆ, ಈಡಾಡಿದಂ–ದಾನವಾಗಿ ಎಸೆದನು ಎಂದರೆ ಕೊಟ್ಟನು. ಇಲ್ಲಿ ಕರ್ಣನ ದಾನಗುಣದ ಅತಿಶಯತೆ ವ್ಯಕ್ತವಾಗುತ್ತದೆ.

೧೦೨. ಎಂದುಂ–ಎಂದಾದರೂ, ಪೋಗು ಎಂದನೆ–ಮುಂದಕ್ಕೆ ಹೋಗು ಎಂದು ಹೇಳಿದನೆ? ಮಾಣೆಂದನೆ-ನಿಲ್ಲು ತಡೆ ಎಂದು ಹೇಳಿದನೆ? ಪೆಜತೊಂದನೀವೆನೆಂದನ–

ಬೇಡಿದ್ದನ್ನು ಬಿಟ್ಟು ಇನ್ನೊಂದನ್ನು ಕೊಡುತ್ತೇನೆ ಎಂದು ಹೇಳಿದನೆ? ನೊಂದು ಆಃ ಎಂದನೆ–ಕತ್ತರಿಸುವಾಗ ನೋವಾಗಿ ಆಃ ಎಂದು ಕೂಗಿಕೊಂಡನೆ? ಇಲ್ಲವೇ ಕೊಡ ಬೇಕಲ್ಲ ವಂದು ವ್ಯಥೆ ಪಟ್ಟುಕೊಂಡು ಆಃ ಎಂದು ಹೇಳಿದನೆ? ಸೆರಗಿಲ್ಲದೆ–ಭಯವಿಲ್ಲದೆ, ಪಿಡಿಯೆಂದಂ–ತೆಗೆದುಕೊ ಎಂದನು, ರವಿತನಯಂ–ಕರ್ಣನು, ಏಂ ಕಲಿಯೋ–ಏನು ಶೂರನೋ! ಏಂ ಚಾಗಿಯೋ–ಎಂಥ ದಾನಿಯೋ! ಕರ್ಣನ ತ್ಯಾಗದ ಪರಾಕಾಷ್ಠೆ ಯನ್ನು ಈ ಪದ್ಯ ಚಿತ್ರಿಸುತ್ತದೆ.

**ವಚನ:** ನೆತ್ತರ್ ಪನಪನ ಪರಿಯೆ–ರಕ್ತವು ಪನಪನ ಎಂದು ಹರಿಯಲು; ತಿದಿಯುಗಿವಂತುಗಿದು–ಚರ್ಮದ ಚೀಲವನ್ನು ಸೀಳುವಂತೆ ಸೀಳಿ; ಕಲಿತನಕ್ಕೆ–ಶೌರ್ಯಕ್ಕೆ.

**೧೦೩.** ಸುರ ದನುಜ ಭುಜಗ ವಿದ್ಯಾಧರ ನರರ, ಸಂಕುಲದೊಳ್–ಸಮೂಹ ದಲ್ಲಿ, ಆರನಾದೊಡಮೇನೋ–ಯಾರನ್ನಾದರೆ ತಾನೇ ಏನು, ಇದು–ಈ ಶಕ್ತಿ, ಘುರ ದೊಳ್–ಯುದ್ಧದಲ್ಲಿ, ವಿರೋಧಿಯಂ–ಹಗೆಯನ್ನು, ಗರಮುಟ್ಟೆ ಕೊಲ್ಗುಂ–ಗ್ರಹವು ತಾಗುವಹಾಗೆ ಕೊಲ್ಲುತ್ತದೆ, ಎಂದು, ಶಕ್ತಿಯನಿತ್ತಂ–ಶಕ್ತಿ ಆಯುಧವನ್ನು ಕೊಟ್ಟನು. ಇಲ್ಲಿ ಗರಮುಟ್ಟೆ ಶಬ್ದದ ಅರ್ಥ ವಿಚಾರಣೀಯ: ಗರ<ಗ್ರಹ; ಮುಟ್ಟೆ ಎಂಬುದು ಸೀಮಾವಾಚಕ ಶಬ್ದವೆಂದು ಪರಿಗಣಿಸಿದರೆ, ಗ್ರಹಗಳವರೆಗೂ ಎಂದಾಗಬಹುದು (ಶಮದ ೨೫೯–೩) ನೋಡಿ.

**ವಚನ:** ರೇಣುಕಾನಂದನನಲ್ಲಿಗೆ–ಪರಶುರಾಮನ ಬಳಿಗೆ.

**೧೦೪.** ಉಗ್ರ ಪರಶುಪಾಟಿತ ರಿಪುವಂಶಾರಾಮನಂ–ಭಯಂಕರವಾದ ಕೊಡಲಿ ಯಿಂದ ಸೀಳಲ್ಪಟ್ಟ ವೈರಿಗಳೆಂಬ ತೋಟವುಳ್ಳ, ಆ ರಾಮನಂ–ಆ ಪರಶುರಾಮನನ್ನು, ಗುರು ಶುಶ್ರೂಷೆಯೊಳ್–ಗುರುಸೇವೆಯಲ್ಲಿ, ಗುರುಸೇವೆ ಮಾಡುವುದರಿಂದ, ಕೂರಿಸೆ–ಆದರವುಂಟಾಗುವ ಹಾಗೆ ಮಾಡಲು, ವೈಕರ್ತನನಾ–ಕರ್ಣನ, ಬಲ್ಮೆ–ಪ್ರೌಢಿಮೆ, ಇಷುವಿದ್ಯಾ ಪಾರಗನೆನಿಸಿದುದು–ಧನುರ್ವೇದ ವಿದ್ಯೆಯಲ್ಲಿ ಪಾರಂಗತನಾದವನೆಂದೆ ನ್ನಿಸಿತು. ತನ್ನ ಕರ್ಣಕುಂಡಲಗಳನ್ನೂ ಕವಚವನ್ನೂ ಕತ್ತರಿಸಿಕೊಟ್ಟದ್ದರಿಂದ ಕರ್ಣನಿಗೆ ವೈಕರ್ತನ ಎಂಬ ಹೆಸರು ಬಂತಂತೆ: ಪ್ರಾಗ್ನಾಮ ತಸ್ಯ ಕಥಿತಂ ವಸುಷೇಣ ಇತಿಕ್ಷಿತೌ । ಕರ್ಣೋ ವೈಕರ್ತನಶ್ಚೈವ ಕರ್ಮಣಾ ತೇನ ಸೋಽಭವತ್ ॥ (ಮಹಾಭಾ. : ೧–೧೧೦–೩೧.)

**ವಚನ:** ಮಱಿದೊಱಗಿದ–ಮೈಮರೆತು ಮಲಗಿದ; ಆ ಪ್ರಸ್ತಾವದೊಳ್–ಆ ಸಮಯದಲ್ಲಿ; ವಜ್ರಕೀಟಂಗಳ್–ಅಲರ್ಕ ಎಂಬ ಹುಳು; ಕೊಡಂತಿಯೊಳ್–ಕೊಡತಿಯಲ್ಲಿ; ಬೆಟ್ಟಿದಂತೆ–ಹೊಡೆದಹಾಗೆ; ಅತ್ತಮಿತ್ತಮುರ್ಚಿಪೋಗೆಯುಂ–ಆಕಡೆ ಈಕಡೆ ಭೇದಿಸಿಕೊಂಡು ಹೋಗಲು; ನಿದ್ರಾಭಿಘಾತಂ–ನಿದ್ದೆಗೆ ಭಂಗ, ನಾಶ; ತಲೆಯ ನುಗುರಿಸುತ್ತುಮಿರೆ–ತನ್ನ ತಲೆಯನ್ನು ಉಗುರಿನಿಂದ ಕೆರೆದುಕೊಳ್ಳುತ್ತಿರಲು.

**೧೦೫.** ಅತಿ ವಿಶದ ವಿಶಾಲೋರುಕ್ಷತದಿಂದೆ–ಅತಿ ಸ್ಪಷ್ಟವಾದ ಅಗಲವಾದ ತೊಡೆಯ ಗಾಯದಿಂದ, ಒಱೆದು–ಜಿನುಗಿ, ಸುರಿದು, ಉತ್ಥಿತಂ–ಅಧಿಕವಾಗುತ್ತಿರುವ,

ಆ ವಂದಸ್ರಮಿಶ್ರಗಂಧಂ–ಆಗೋ ಬಂದ ರಕ್ತದಿಂದ ಮಿಶ್ರವಾದ ನಾತವು, ಅಸಿತು–ಅಷ್ಟು, ಜೆಡೆಯುಮಂ–ಜಟೆಯನ್ನೂ, ನಾಂದಿ-ಒದ್ದೆಮಾಡಿ, ಮುನಿಯಂ-ಋಷಿಯನ್ನು, ಮನಃಕ್ಷತದೊಡನೆ–ಮನದ ಗಾಯದೊಡನೆ, ಖಾತಿಯೊಡನೆ, ಎಚ್ಚರಿಸಿದುದು–ಎಚ್ಚರವಾಗುವಹಾಗೆ ಮಾಡಿತು. ಪರಶುರಾಮನು ರಕ್ತದಿಂದ ತೊಯ್ದು ಎಚ್ಚರಗೊಂಡನಲ್ಲದೆ ಅವನ ಕೋಪವೂ ಎಚ್ಚರವಾಯಿತೆಂದು ತಾತ್ಪರ್ಯ.

**ವಚನ** : ನೆತ್ತರಪೊನಲೊಳ್–ರಕ್ತಪ್ರವಾಹದಲ್ಲಿ ; ನಾಂದು ನನೆದ–ಚೆನ್ನಾಗಿ ಒದ್ದೆಯಾದ, ತಳ್ಪೊಯ್ದ–ತಟ್ಟುವ, ಜಡೆಯುಮಂ–ಜಟೆಯನ್ನೂ ; ಅವಸಾನಕಾಲದೊಳ್-ಸಾವಿನ ಸಮಯದಲ್ಲಿ ; ಬೆಸಕೆಯ್ಯದಿರ್ಕೆ–ಕೆಲಸವನ್ನು ಮಾಡದಿರಲಿ ; ಮಗುಳ್ದು ಬಂದು–ಹಿಂದಿರುಗಿ ಬಂದು, ಸೂತನ ಮನೆಯೊಳ್–ಸಾರಥಿಯ ಮನೆಯಲ್ಲಿ ; ಇರ್ಪನ್ನೆಗಂ–ಇರುತ್ತಿರಲು.

**೧೦೬.** ಸೊಗಯಿಪ–ಸೊಗಸಾಗಿರುವ, ತಮ್ಮ, ಜವ್ವನದ-ಪ್ರಾಯದ, ತಮ್ಮ, ವಿಭೂತಿಯ-ಐಶ್ವರ್ಯದ, ತಮ್ಮ ತಮ್ಮ ಚೆಲ್ವುಗಳ-ತಂತಮ್ಮ ಚೆಲುವಿಕೆಗಳ, ವಿಲಾಸದ-ಶೃಂಗಾರ ಚೇಷ್ಟೆಗಳ, [ಊ]ರ್ಮೆಗಳೊಳ್–ಅತಿಶಯತೆಯಲ್ಲಿ, ಆವು-ನಾವು, ಎವಗೆ–ನಮಗೆ, ಆಗಿಸೆವು–ಕುಂತಿಯನ್ನು ವಶಮಾಡಿಕೊಳ್ಳುತ್ತೇವೆ, ಎಂದು ಬಂದ–ಎಂಬುದಾಗಿ ಬಂದಿರುವ, ಚೆನ್ನಿಗರುಮಂ–ಸೊಗಸುಗಾರರನ್ನೂ, ಆಸೆಕಾಜರುಮಂ–ಕಾಮುಕರನ್ನೂ, ಒಲ್ಲದೆ–ಬಯಸದೆ, ಒಪ್ಪದೆ, ಕುಂತಿ–ಕುಂತಿದೇವಿಯು, ಚೆಲ್ವಿಡಿದಿರ್ದರೂಪು–ಸೊಗಸು ತುಂಬಿಕೊಂಡಿದ್ದ ರೂಪ (ಪಾಂಡುವಿನ), ದೃಷ್ಟಿಗೆ ವರೆ–ತನ್ನ ಕಣ್ಣಿಗೆ ಸಮ್ಮತವಾಗಲು, ಮನಂಬುಗೆ–ಮನವನ್ನು ಹೊಗಲು, ಪಾಂಡುರಾಜನನೆ–ಪಾಂಡುರಾಜನಿಗೇ, ಮಾಲೆ ಸೂಡಿದಳ್–ಮಾಲೆಯನ್ನು ಮುಡಿಸಿದಳು, ಎಂದರೆ ಸ್ವಯಂವರದಲ್ಲಿ ವರಣಮಾಲೆಯನ್ನು ಹಾಕಿದಳು. ಕುಂತಿಯ ಸ್ವಯಂವರದ ಒಂದು ಉಪಾಖ್ಯಾನವನ್ನೇ ಈ ಒಂದು ಪದ್ಯದಲ್ಲಿ ಭಟ್ಟ ಇಳಿಸಿದಂತೆ ಇದೆ ; ಚಪ್ಪರಿಸಿದಷ್ಟೂ ರುಚಿಯಾಗಿ ಧ್ವನಿಮಯವಾಗಿದೆ.

**ವಚನ :** ಅಪ್ಪುಕೆಯ್ದು ಕುಂತಿಯೊಡನೆ–ಪಾಂಡುರಾಜನನ್ನು ಆರಿಸಿಕೊಂಡ, ಒಪ್ಪಿಕೊಂಡ, ಕುಂತಿಯ ಜೊತೆಯಲ್ಲಿ ; ಶಲ್ಯನೊಡವುಟ್ಟಿದ–ಶಲ್ಯರಾಜನ ಸಹೋದರಿಯಾದ ; ಒಂದೆ ಪಸೆಯಮೇಲೆ–ಒಂದೇ ಹಸೆಮಣೆಯ ಮೇಲೆ ; ವಿಧಾತ್ರಂ ಮುಂಡಾಡುವಂತೆ–ಬ್ರಹ್ಮನು ಮುದ್ದಾಡುವಂತೆ ;

**೧೦೭.** ತಳಿರ್ಗಳಸಂ–ಮಾವಿನ ಚಿಗುರನ್ನು ಇಟ್ಟ ಕಲಶ, ಮುಕುಂದರವಂ–ಒಂದು ಬಗೆಯ ತಮಟೆಯ ಧ್ವನಿ, ಎತ್ತಿದ ಮುತ್ತಿನ ಮಂಟಪಂ–ಎತ್ತರವಾಗಿ ಕಟ್ಟಿದ ಮುತ್ತಿನಿಂದ ಮಾಡಿದ ಮಂಟಪ, ಮನಂಗೊಳಿಪ ವಿತಾನ ಪಂಕ್ತಿ–ಮನವನ್ನು ಸೆಳೆಯುವ ಮೇಲ್ಕಟ್ಟುಗಳ ಸಾಲು, ಪಸುರ್ವಂದಲೊಳ್–ಹಸುರುಚಪ್ಪರದಲ್ಲಿ, ಒಲ್ದು ಎಡೆಯಾಡುವ–ಪ್ರೀತಿಯಿಂದ ನಡುವೆ ಓಡಾಡುವ, ಅಯ್ದೆಯರ್–ಸುಮಂಗಲಿಗಳ, ಬಳಸಿದ ವೇದಪಾರಗರ–ಸುತ್ತುಗಟ್ಟಿದ ವೇದವಿದರಾದವರ, ಸಂದಣಿ–ಸಮೂಹಗಳು, ಎಂಬಿವಱಿಂ–ಎಂಬ ಇವುಗಳಿಂದ, ಪಾಂಡುರಾಜನಾ–ಪಾಂಡುವಿನ, ಕುಂತಿಮಾದ್ರಿ

ಗಳೊಳ್–ಕುಂತಿಮಾದ್ರಿಯರಲ್ಲಿ, ಆದ, ವಿವಾಹಮಂಗಳಮದು–ಆ ಮದುವೆಯ ಮಂಗಳ ಕಾರ್ಯವು, ಅಚ್ಚರಿಯಾದುದು–ಆಶ್ಚರ್ಯಕರವಾಯಿತು. ಪಸುರ್ವಂದಲ್ = ಪಸುರ್ + ಪಂದಲ್ (ಪಂದರ್, ಹಂದರ).

೧೦೮. ಈ ಪದ್ಯಕ್ಕೆ ಅರ್ಥ ಹೇಳುವ ಮೊದಲು ಅಲ್ಲಿರುವ ಒಂದು ಪಾಠ ಕ್ಲೇಶವನ್ನು ಗಮನಿಸಬೇಕು. ಇದರ ಮೂರನೆಯ ಪಾದದಲ್ಲಿ 'ನಕ್ಕರ ವದ್ದಿ' ಎಂಬ ಪಾಠ ಸ್ವೀಕೃತವಾಗಿದೆ, ಪಾಠಾಂತರಗಳು; ನಕ್ಕರೆವದ್ದಿ (ಖ), ನೆಕ್ಕೊರ್ರೆವೊದ್ದಿ (ಘ) ಪಂಪನನ್ನು ಅನುಕರಿಸಿರುವ ಶಾಂತಿನಾಥಕವಿ ತನ್ನ 'ಸುಕುಮಾರ ಚರಿತೆ'ಯಲ್ಲಿ ನಾಗಶ್ರೀಯ ಸೌಂದರ್ಯವನ್ನು ವರ್ಣಿಸುವಾಗ

ಪರಡು ನಿಗೂಢಂ ಲಲಿತ ಲತಾಂಗಿಯ
ವರಜಂಘಾಯುಗಳಂಗಳ ಭಂಗಿಯ
ನಱಿಯಂ ಪೊಗೞಲ್ ನೆಕ್ಕೊರವಟ್ಟೆಯ
ತೆಱನೆನಲಲ್ಲದೆ ಬಣ್ಣಿಪ ಬಟ್ಟೆಯ

ಎಂದು ಬರೆದಿದ್ದಾನೆ (೫-೫೧). ಇಲ್ಲಿ 'ನೆಕ್ಕೊರವಟ್ಟೆ' ಎಂಬ ಶಬ್ದವಿದೆ. ಇದಕ್ಕೆ ಆ ಗ್ರಂಥದಲ್ಲಿ ಪಾಠಾಂತರಗಳೇನೂ ಇಲ್ಲ. (ಘ) ದ ಪಾಠ ಇದಕ್ಕೆ ತುಂಬ ಸಮೀಪ ವರ್ತಿಯಾಗಿದೆ; ಸರಿಯಾದ ಪಾಠ 'ನೆಕ್ಕೊರವಟ್ಟೆ' ಎಂದಿರಬೇಕು. ಇದಕ್ಕೆ ಪೋಷಕವಾಗಿದೆ ಈ ಕೆಳಗಿನ ಪದ್ಯ (ಕರ್ಣಾಟಕ ಶಬ್ದಸಾರಂ, ಪುಟ ೨೯, ಅಡಿ ಟಿಪ್ಪಣಿ)

ಉಕ್ಕೆವಮಾಕೆಯ ಕಿಱುದೊಡೆ
ಗಕ್ಕುಮಿದೆಂದಜ್ಜುಮಾಗಿ ನಣ್ಪಂ ಬಿಣ್ಪಂ
ಮೊಕ್ಕಳಮೇವುದು ಮರಲೊಳ್
ನೆಕ್ಕೊರೆಗಳಪೊಟ್ಟೆ ಪೊಟ್ಟೆಯಾದಸುವಿನ್ನಂ॥

ಇದರ ಸಹಾಯದಿಂದ 'ನೆಕ್ಕೊರೆ ವಟ್ಟೆ'ಯನ್ನು ನೆಕ್ಕೊರೆ+ಪಟ್ಟೆ ಎಂದು ಬಿಡಿಸ ಬಹುದೆಂದು ತೋರುತ್ತದೆ. ಇದರ ಅರ್ಥವೇನೋ? ಅನ್ವೇಷಣಾರ್ಹ.

ತುಱುಗೆಮೆ-ದಟ್ಟವಾದ ಕೂದಲುಳ್ಳ ಕಣ್ಣುರೆಪ್ಪೆ, ನೀಳ್ದ ಪುರ್ವು-ಉದ್ದವಾಗಿರುವ ಹುಬ್ಬು, ನಿಡುಗಣ್–ದೀರ್ಘವಾಗಿರುವ ಕಣ್ಣು, ಪೊಱೆಯಲ್ಲದೆ–ಭಾರವಿಲ್ಲದೆ ಇರುವ, ಹಗುರವಾದ, ಬಟ್ಟಿತಪ್ಪ–ದುಂಡಾದ, ಬಾಯ್ದೆಱೆ-ತುಟಿ, ತನುರೇಖೆಗೊಂಡ ಕೊರಲ್-ಸೂಕ್ಷ್ಮವಾದ ಗೆರೆಗಳಿರುವ ಕೊರಳು, ಒಡ್ಡಿದ ಪೆರ್ಮೊಲೆ-ಚಾಚಿಕೊಂಡಿರುವದಪ್ಪಮೊಲೆ, ತೆಳ್ಪಸಿಱ್–ತೆಳುವಾದ ಬಸಿರು, ಕರಂ ನೆಱೆದನಿತಂಬಂ–ವಿಶೇಷವಾಗಿ ತುಂಬಿಕೊಂಡಿರುವ ಪಿರ್ರೆ, ಇಂಬುವಡೆದೊಳ್ತೊಡೆ–ಹೊಂದಿಕೊಂಡಿರುವ ಒಳತೊಡೆ, ಕಿಱುದೊಡೆ–ಚಿಕ್ಕ ತೊಡೆ, ನೆಕ್ಕೊರೆವಟ್ಟೆ–?, ತಾನೆ ಪೋ–ತಾನೇ ಹೋಗು, ಎಂದು ಧಾತ್ರಿ–ಲೋಕವು,

ಪೊಗೞ್ಗುಂ—ಹೊಗಳುತ್ತದೆ; ಕುಂತಿಮಾದ್ರಿಗಳ್ ಪೊಗೞ್ವನ್ನರೆ—ಕುಂತಿಮಾದ್ರಿಗಳು ಹೊಗಳಿಕೆಗೆ ಯೋಗ್ಯರಾದಂಥವರೇ ಸರಿ.

**ವಚನ :** ಆಕೆಗಳಿರ್ವರುಂ—ಅವರಿಬ್ಬರೂ, ಎರಡುಂಕೆಲದೊಳಿರೆ—ಎರಡು ಪಕ್ಕಗಳಲ್ಲೂ ಇರಲು; ಕಲ್ಪಲತೆಗಳೆರಡಱ ನಡುವಣ—ಕಲ್ಪವಲ್ಲಿಯ ಎರಡರ ನಡುವೆ, ಕಲ್ಪವೃಕ್ಷದಂತಿರ್ದ—ಕಲ್ಪತರುವಿನ ಹಾಗೆ ಇದ್ದ; ಅಂಗಹೀನನೆಂದು—ಊನಾಂಗನೆಂದು, ಕಣ್ಣಿಲ್ಲದವನೆಂದು; ಪಟ್ಟಬಂಧದೊಸಗೆಯುಂ—ಪಟ್ಟಾಭಿಷೇಕೋತ್ಸವವನ್ನು; ನೆಲನನಾಳಿಸೆ—ರಾಜ್ಯವನ್ನು ಆಳುವಂತೆಮಾಡಲು.

**೧೦೯.** ಈ ಪದ್ಯದಲ್ಲಿ ಪಾಂಡುರಾಜನ ರಾಜತೇಜಸ್ಸಿನ ದಳ್ಳುರಿಯ ವರ್ಣನೆ ಇದೆ. ಮೀಱುವೆವು—ಮೀರುತ್ತೇವೆ, ಎಂಬ—ಎನ್ನುವ, ಮಾಂಡಳಿಕರ್—ಸಾಮಂತ ರಾಜರು, ಈಯದರ್ ಎಂಬ ಅದಟರ್—ಕಪ್ಪಕಾಣಿಕೆಗಳನ್ನು ಕೊಡದವರು ಎಂಬ ಶೂರರು, ವಯಲ್ಗೆ—ಕಾಳಗದ ಬಯಲಿಗೆ, ಮೆಯ್ದೋಱುವೆವು—ಮೆಯ್ಯನ್ನೇ ತೋಱುಸುತ್ತೇವೆ ಎಂದರೆ ಅಲ್ಲಿ ನಿನ್ನನ್ನು ಎದುರಿಸುತ್ತೇವೆ ಎಂಬ, ಪೂಣಿಗರ್—ಪರಾಕ್ರಮಿಗಳು, ಇವರೆಲ್ಲ, ಕುನುಂಗಿ—ಕುಗ್ಗಿ, ಸಿಡಿಲ್ದು—ಸಿಡಿದು, ಜೋಲ್ದು—ಕೆಳಕ್ಕೆ ಜೋತುಬಿದ್ದು, ಕಾಯ್ಪಾಱೆ—ಕೋಪವು ಆರಿಹೋಗಲು, ಪಾಂಡುರಾಜನಾ—ಪಾಂಡುವಿನ, ತೇಜದ ದಳ್ಳುರಿ—ತೇಜಸ್ಸೆಂಬ ಪ್ರಜ್ವಲಿಸುವ ಅಗ್ನಿ, ನಭಕ್ಕೆ ಪಾಱಿದುದು—ಆಕಾಶಕ್ಕೆ ಚಿಮ್ಮಿತು, ಗಂಡರ—ಶೂರರ, ನೆತ್ತಿಯೊಳೊತ್ತಿ—ಹಣೆಯಲ್ಲಿ ಅಮುಕಿ, ತಾಗಿ, ಬಾಳನಿನ್ನೂಱುಗುಮೆಂದೊಡೆ—ಕತ್ತಿಯನ್ನು ಇನ್ನು ನಾಟುತ್ತದೆ ಎಂದರೆ, ಏಂ ಪಿರಿದೋ—ಏನು ಹಿರಿದೋ ಏನು ಮಹತ್ವವುಳ್ಳುದೋ! ಈ ಪದ್ಯದೊಡನೆ ಕೆಳಗಿನ ಶಾಸನ ಪದ್ಯವನ್ನು ಹೋಲಿಸಿರಿ (ದಾವಣಗೆರೆ ೩೨)

ಮೀಱುವೆವೆಂಬ ಮಂಡಳಿಕರಿಲ್ಲದಟಿಂದೆ ಬಯಲ್ಗೆ ವಂದು ಮೆ
ಯ್ದೋಱುವೆವೆಂಬ ವಿಕ್ರಮಿಗಳಿಲ್ಲ ಕುಸುಂಗಿ ಕಟಿಲ್ದುಟಿಲ್ದು ಕಾ
ಯ್ಪಾಱೆ ಪೊಡರ್ಪುಗೆಟ್ಟು ಬೆಸಕೆಯ್ವವರಲ್ಲದೆ ಮಿಕ್ಕ ತನ್ನ ಕಾ
ಯ್ಪೇಱಿದ ತೇಜದಿಂ ವಿಜಯ ಪಾಂಡ್ಯ ಮಹೀಪನಿದೇಂ ಪ್ರತಾಪಿಯೋ ॥

**೧೧೦.** ಸಮುದ್ರಮುದ್ರಿತಧರಾಚಕ್ರಂ—ಕಡಲಿಂದ ಸುತ್ತುಗಟ್ಟಲ್ಪಟ್ಟ ಭೂಮಂಡಲವು, ಸಮಂತು—ಚೆನ್ನಾಗಿ, ಬೆಸಕೆಯ್ದತ್ತು—ಸೇವಾಕಾರ್ಯವನ್ನು ಮಾಡಿತು, ಆಜ್ಞೆಯನ್ನು ಪಾಲಿಸಿತು; ಪ್ರತಾಪಕ್ಕೆ ಅಗುರ್ವಿಸಿ—ವೀರತನಕ್ಕೆ ಹೆದರಿ, ದಿಶಾಚಕ್ರಂ—ದಿಙ್ಮಂಡಲವು, ಎಂದರೆ ದಿಕ್ಕು ದಿಕ್ಕುಗಳಲ್ಲಿರುವ ರಾಜರು, ಸಮಂತು—ಚೆನ್ನಾಗಿ, ಗೋಟುಂಡೆ ಗೊಳುತ್ತುಮಿರ್ದುದು—ಆಳುವೆಂಬ ಉಂಡೆಯನ್ನು ನುಂಗುತ್ತಿತ್ತು ಎಂದರೆ ಹೆದರಿ ಚೆನ್ನಾಗಿ ಗೋಳಿಡುತ್ತಿದ್ದರು; ಪೊದಳ್ದ ಆಜ್ಞೆಗಂ ಪೆಸರ್ಗಂ—ವ್ಯಾಪಿಸಿದ ಅವನ ಅಪ್ಪಣೆಗೂ ಕೀರ್ತಿಗೂ, ವಿಯಚ್ಚಕ್ರಂ—ಆಕಾಶ ಮಂಡಲ, ಸಮಂತು—ಚೆನ್ನಾಗಿ ಮುನ್ನಮೆ—ಮೊದಲೇ, ಗೂಡುಗೊಂಡುದು—ಗೂಡಾಗಿ ಪರಿಣಮಿಸಿತು, ಎಂಬಿನಂ—

ಎನ್ನುತ್ತಿರಲು, ಜಸಂ-ಪಾಂಡುವಿನ ಕೀರ್ತಿ, ಆ ಪಾಂಡುರಮಾದುದು-ಮೇಲಿಂದ ಕೆಳಕ್ಕೆ ಪೂರ್ಣವಾಗಿ ಬೆಳ್ಳಗಾಯಿತು, ಎಂದರೆ ಸಮಸ್ತ ಲೋಕಗಳಲ್ಲೂ ಅವನ ಧವಳ ಕೀರ್ತಿ ಹರಡಿತು. ನೃಪರೊಳ್-ರಾಜರಲ್ಲಿ, ಆ ಪಾಂಡುರಾಜಂಬರಂ-ಆ ರಾಜನಾದ ಪಾಂಡುವಿನ ವರೆಗೂ ಬರುವವರು, ಆರ್-ಯಾರು? ಎಂದರೆ ಪಾಂಡುವಿನ ಸಮಾನ ಬೇರೆ ರಾಜರಿಲ್ಲ.

**ವಚನ**: ಅವನತ ವೈರಿ ಭೂ ಭೃತ್ಸಮಾಜನುಂ-ನಮಸ್ಕರಿಸಿದ ಶತ್ರು ರಾಜರ ಸಮೂಹವುಳ್ಳವನೂ; ನೆಗಳುತ್ತಿರ್ದು-ಮಾಡುತ್ತಿದ್ದು! ತೋಪಿನ ಬೇಂಟೆಯು ನಾಡಲ್-ತೋಹಿನ ಬೇಟೆಯೆಂಬ ಬೇಟೆಯನ್ನು ಆಡಲು; ಅೞ್ತಿಯಿಂ-ಆಸಕ್ತಿಯಿಂದ.

**೧೧೧.** ಕಿಂದಮನೆಂಬ ಋಷಿ ತಾನು ಜಿಂಕೆಯಾಗಿ ತನ್ನ ಹೆಂಡತಿಯನ್ನೂ ಜಿಂಕೆಯಾಗಿಸಿ ಅವಳೊಡನೆ ಕ್ರೀಡಿಸುತ್ತ ಇದ್ದನು; ಇವನ ವರ್ಣನೆ ಮತ್ತು ಇವನಿಂದ ಪಾಂಡುಗೆ ಬಂದ ಶಾಪದ ವಿಷಯ ಈ ಪದ್ಯದಲ್ಲಿದೆ: ಇನಿಯಳಂ-ತನ್ನ ನಲ್ಲಳನ್ನು, ಅೞ್ತಿಯಿಂದೆ-ಪ್ರೀತಿಯಿಂದ, ಮೃಗಿಮಾಡಿ-ಹೆಣ್ಣು ಜಿಂಕೆಯನ್ನಾಗಿಮಾಡಿ, ಮನೋಜ ಸುಖಕ್ಕೆ ಸೋಲ್ತು-ಕಾಮ ಸುಖಕ್ಕಾಗಿ ಮೋಹಿಸಿ, ಅಲಂಪಿನೆ-ಸಂತೋಷದಿಂದಲೇ, ನೆರೆಯಲ್ಕೆ-ಕೂಡಲು, ದಿವ್ಯಮುನಿಯುಂ-ಶ್ರೇಷ್ಠಮುನಿಯಾದ ಕಿಂದಮನೂ, ಮೃಗ ಮಾಗಿ-ಗಂಡು ಜಿಂಕೆಯಾಗಿ, ಮರಲ್ದು-ಅರಳಿ, ಉಬ್ಬಿ, ಕೂಡೆ-ಸಂಯೋಗಮಾಡಲು, (ಪಾಂಡು) ಮೆಲ್ಲನೆ ಮೃಗಮೆಂದು ಸಾರ್ದು-ಸದ್ದಿಲ್ಲದೆ ಜಿಂಕೆಯೆಂದು ಹತ್ತಿರ ಬಂದು, ನೆಱನಂ ಸಡೆನೋಡಿ-ಮರ್ಮಸ್ಥಾನವನ್ನು ಗುರಿಯಿಟ್ಟು ನೋಡಿ, ನರೇಂದ್ರಂ-ಪಾಂಡು ರಾಜನು, ಭೋಂಕನೆ-ಬೇಗನೆ, ಮೃಗಚಾರಿಯಂ-ಜಿಂಕೆಯಾಗಿ ಸಂಚರಿಸುತ್ತಿದ್ದ ಋಷಿಯನ್ನು, ಎಚ್ಚು-ಬಾಣ ಪ್ರಯೋಗಮಾಡಿ, ತನಗೆ, ಅದೊಂದು ಮಾರಿಯಂ-ಅದೊಂದು ಮೃತ್ಯುವನ್ನು, ತಂದಂ-ತಂದುಕೊಂಡನು. ಈ ಪದ್ಯ ಒಂದು ಇಡಿ ಉಪಾಖ್ಯಾನದ ರಸವತ್ತಾದ ಸಂಕ್ಷೇಪವಾಗಿದೆ; ಇದನ್ನು ಪರಿಭಾವಿಸಿದಾಗ ಆ ಇಡಿಯ ಕಥೆ ತನ್ನ ವಿಸ್ತಾರ ವೈವಿಧ್ಯಗಳಲ್ಲಿ ಹೇಗಿದ್ದಿರಬಹುದೆಂದು ಚಿಂತನಾಶಕ್ತಿಗೆ ಅಳವಡುವು ದಾಗಿದೆ: ಆನಂದದಾಯಕವಾಗಿದೆ.

**ವಚನ**: ಪ್ರಳಯದುಳ್ಕಮುಳ್ಕುವಂತೆ-ಪ್ರಳಯಕಾಲದ ಉಲ್ಕೆ ಪ್ರಕಾಶಿಸುವ ಹಾಗೆ; ತನ್ನೆಚ್ಚಂಬು-ತಾನು ಹೊಡೆದ ಬಾಣ; ಉಳ್ಕೆ-ಹೊಳೆಯಲು; ಪೇೞಿಂ ಎನ್ನನಾವನೆಚ್ಚಂ-ಹೇಳಿರಿ, ನನ್ನನ್ನು ಹೊಡೆದವನಾವನು; ಮುನಿದ ಸರಮುಂ-ಕೋಪ ಗೊಂಡ ಧ್ವನಿಯನ್ನು; ಬಿಲ್ಲುಮಂಬುಮನ್ ಈಡಾಡಿ-ಬಿಲ್ಲನ್ನೂ ಬಾಣವನ್ನೂ ಎಸೆದು;

**೧೧೨.** ರತಕ್ಕೆ-ಸಂಭೋಗಕ್ಕೆ, ಸನ್ನತದಿಂ-ಬಾಗುವಿಕೆಯಿಂದ, ವಶದಿಂದ, ಎಳಸಿ-ಬಯಸಿ, ನಲ್ಲಳೊಳ್-ನಲ್ಲಳಲ್ಲಿ, ಓತೊಡಗೂಡಿದೆನ್ನಂ-ಪ್ರೀತಿಸಿ ನೆರೆದ ನನ್ನನ್ನು, ಇಂತು-ಹೀಗೆ, ಅನ್ನೆಯಂ ಎಚ್ಚುದರ್ಕೆ-ಅನ್ಯಾಯದಿಂದ ಹೊಡೆದುದಕ್ಕೆ, ಪೆಱತು-ಬೇರೆ, ದಂಡಂ-ದಂಡವು, ಶಿಕ್ಷೆಯು, ಪರಿಹಾರವು, ಇಲ್ಲ; ಏಕೆಂದರೆ, ನೀನ್- ನೀನು, ನಲ್ಲಳೊಳ್-ನಲ್ಲೆಯಲ್ಲಿ, ಒಲ್ದು-ಪ್ರೀತಿಸಿ, ನಡೆ ನೋಡಿಯುಂ-ಚೆನ್ನಾಗಿ ನೋಡಿಯೂ, ಬಯಸಿ ಕೂಡಿಯುಂ-ಇಷ್ಟಪಟ್ಟು ನೆರೆದೂ, ಅಗಡೆ-ಅಗಲೆ, ಸಾವೆಯಾಗಿ-

ಸಾಯುವೆಯಾಗಿ; ಇನ್ ಪೋಗು ಎನೆ—ಇನ್ನು ಹೋಗು ಎನ್ನಲು, ಆ ಮಹೇಶ್ವರಂ—ಆ ಪಾಂಡುರಾಜನು, ರೌದ್ರಶಾಪ ಪರಿತಾಪ ವಿಳಾಪದೊಳ್—ಭಯಂಕರವಾದ ಶಾಪದಿಂದಾದ ಸಂಕಟದ ರೋದನದಿಂದ.

**ವಚನ:** ಎನ್ನಗೆಯ್ದ—ನಾನು ಮಾಡಿದ, ಕಾಮಾಕ್ರಾಂತಕ್ಕೆ—ಪ್ರೇಮಕ್ರೀಡಾವಿಘ್ನಕ್ಕೆ, ಕಾಮಕೃತಂ—ಸ್ವೇಚ್ಛಾಚಾರದಿಂದಾದದ್ದು, ಏಂ ಪಿರಿದಲ್ತು—ಏನೂ ದೊಡ್ಡದಲ್ಲ.

೧೧೩. ಎತ್ತ ವನಂ—ಎಲ್ಲಿ ಕಾಡು, ಎತ್ತ ಮೃಗಯಾವೃತ್ತಕ—ಎಲ್ಲಿ ಈ ಬೇಟೆಯ ಕಾರ್ಯ, ಈ ತಪಸಿಯೆತ್ತ—ಈ ಋಷಿ ಎಲ್ಲಿ, ಎತ್ತ ಮೃಗಂ—ಎಲ್ಲಿ ಜಿಂಕೆ, ಎಂದು—ಎಂಬುದಾಗಿ, ಎಂತು—ಹೇಗೆ, ಆನೆತ್ತೆಚ್ಚೆನ್—ನಾನು ಎಲ್ಲಿ ಬಾಣಪ್ರಯೋಗ ಮಾಡಿದೆನು, ಆತ್ಮಕರ್ಮಾಯತ್ತಂ—ಇದೆಲ್ಲ ಸ್ವಕೀಯ ಕರ್ಮಕ್ಕೆ ಅಧೀನವಾದದ್ದು, ಪೆಱತಲ್ತು—ಬೇರೆಯಲ್ಲ, ಎಲ್ಲಂ ಅಘಟಿತ ಘಟಿತಂ—ಎಲ್ಲವೂ ಒಂದಕ್ಕೊಂದಕ್ಕೆ ಸಂಬಂಧವಿಲ್ಲದ ಸೇರುವೆ. ಎಲ್ಲಿಯ ಕಾಡು, ಎಲ್ಲಿಯ ಬೇಟೆ, ಎಲ್ಲಿಯ ಋಷಿ, ಎಲ್ಲಿಯ ಜಿಂಕೆ, ಹೇಗೆ ಎಲ್ಲಿ ನನ್ನ ಬಾಣಪ್ರಯೋಗ; ಒಂದೊಂದಕ್ಕೂ ಸಂಬಂಧವಿಲ್ಲವಲ್ಲ; ಇದೆಲ್ಲ ಪ್ರಾಚೀನ ಕರ್ಮವಲ್ಲವೆ? ಹೌದು, ಬೇರೇನೂ ಇರಲಾರದು—ಎಂದು ತಾತ್ಪರ್ಯಾರ್ಥ.

**ವಚನ:** ಪೊೞಲ್ಗೆ ಮಗುೞ್ದು—ಪಟ್ಟಣಕ್ಕೆ ಹಿಂದಿರುಗಿ; ದೀನಾನಾಥ ಜನಂಗಳ್ಗೆ—ದೀನರೂ ಅನಾಥರೂ ಆದ ಜನರಿಗೆ;

೧೧೪. ಸಂಸಾರಂ—ಸಂಸಾರವು ಎಂದರೆ ಲೋಕಜೀವನವು, ಅನಂಗಜಂಗಮಲತಾಲಲಿತಾಂಗಿಯರಿಂದಂ—ಮನ್ಮಥನ ನಡೆದಾಡುವ ಬಳ್ಳಿಗಳಂತೆ ಇರುವ ಸುಂದರಾಂಗಿಯರಿಂದ, ಸಾರಂ ಅಲ್ತೆ—ರಸವತ್ತಾದುದಲ್ಲವೆ? ಹೌದು; ತನ್ಮುನಿಶಾಪದಿಂದಂ—ಆ ಋಷಿಯ ಶಾಪದಿಂದ, ಅದಿನ್ನೆನಗೆ—ಅದು ಇನ್ನು ನನಗೆ, ತಪ್ಪುದು—ನಾಶವಾಯಿತು, ವನವಾಸದೊಳಿರ್ಪೆಂ—ಅರಣ್ಯವಾಸದಲ್ಲಿರುತ್ತೇನೆ; ಇದರ್ಕೆ—ಇದಕ್ಕೆ, ಆರು—ಯಾರೂ, ವಕ್ರಿಸದಿರಿಂ—ಅಡ್ಡಿ ಮಾಡಬೇಡಿರಿ, ಎಂದು—ಹೇಳಿ, ದುರ್ವಾರ ಪರಾಕ್ರಮಂ—ನಿವಾರಿಸಲಶಕ್ಯವಾದ ಪ್ರತಾಪವುಳ್ಳ ಪಾಂಡುರಾಜನು, ತಳರೆ—ಹೊರಡಲು, ಕುಂತಿಮಾದ್ರಿಯರ್, ಬಾರಿಸಿ ವಾರಿಸಿ—ಬೇಡ ಬೇಡವೆಂದು ತಡೆದು ತಡೆದು.

**ವಚನ:** ಬೆನ್ನ ಬೆನ್ನನೆ ವರೆ—ಬೆನ್ನು ಹಿಂದೆಯೇ ಬರಲು, ಬಿನ್ನಬಿನ್ನನೆ ಪೋಗಿ—ಮಾತನಾಡದೆ ಮೌನದಿಂದ ಹೋಗಿ.

೧೧೫. ತುಂಗ....ಭಂಗಮುಂ: ತುಂಗ—ಎತ್ತರವಾದ, ವನ್ಯಮತಂಗಜ—ಕಾಡಾನೆಯ, ದಂತಾಘಾತ—ದಂತದ ಏಟಿನಿಂದ, ನಿಪಾತಿತ—ಉರುಳಿಸಲ್ಪಟ್ಟ, ಸಲ್ಲಕೀಭಂಗಮುಂ—ಮುರಿದ ಆನೆಬೇಲದ ಮರಗಳನ್ನುಳ್ಳ; ಮಣಿ....ತುಂಗಮುಂ: ಮಣಿ—ರತ್ನಗಳ, ಮೌಕ್ತಿಕ—ಮುತ್ತುಗಳ, ನೀಳ—ನೀಲವಾದ, ಸ್ಥೂಲ—ತೋರವಾದ, ಶಿಲಾ—ಬಂಡೆಗಳಿಂದ, ಪ್ರವಿಭಾಸಿತ—ಪ್ರಕಾಶಮಾನವಾದ, ಉತ್ತುಂಗಮುಂ—ಎತ್ತರವನ್ನುಳ್ಳ; ಮುನಿ....ತಾಂಗಮುಂ: ಮುನಿಮುಖ್ಯ—ಋಷಿಶ್ರೇಷ್ಠರ, ಮುಖಾಂಭೋಜೋದ್ಗ—ಕಮಲ

ದಂತಿರುವ ಮುಖಗಳ ಒಳಗಿನಿಂದ, ನಿರ್ಗತ–ಹೊರಹೊರಟ, ಮಂತ್ರ–ಮಂತ್ರಗಳಿಂದ, ಪೂತ–ಪವಿತ್ರವಾದ, ಅಂಗಮಂ–ದೇಹವನ್ನುಳ್ಳ, ವ್ಯೆಯಸ್ನುಳ್ಳ, ಉದ್ಯಚ್ಛೃಂಗಮಂ–ಎತ್ತರವಾದ ಕೋಡುಗಳನ್ನುಳ್ಳ, ಶತಶೃಂಗಮಂ–ಶತಶೃಂಗವೆಂಬ ಪರ್ವತವನ್ನು, ನೃಪಂ–ರಾಜ, ಎಯ್ದಿದಂ–ಸೇರಿದನು. ಪಾಂಡುರಾಜ ಶತಶೃಂಗ ಪರ್ವತಕ್ಕೆ ಬಂದನು.

**ವಚನ:** ಉಪಕಂಠಂಗಳೊಳ್–ತಪ್ಪಲು ಪ್ರದೇಶಗಳಲ್ಲಿ; ತಾಪಸ ಕನ್ನೆಯರ್–ಋಷಿಕುಮಾರಿಯರು; ನಡಪಿದ–ಸಾಕಿ ಬೆಳಸಿದ; ತುಱುಗಿ–ಗುಂಪಾಗಿ, ಪಣ್ತೆಱಗಿದ–ಹಣ್ಣು ಬಿಟ್ಟು ಬಾಗಿದ; ಪುಗಿಲ್ ಪುಗಿಲ್ ಎಂದು–ಪ್ರವೇಶ, ಪ್ರವೇಶ ಎಂದು; ಬಗ್ಗಿಸುವ–ಕೂಗುವ; ಪದುಮರಾಗದ ಬಣ್ಣದ–ಪದ್ಮರಾಗವೆಂಬ ರತ್ನದ ಬಣ್ಣವನ್ನುಳ್ಳ; ತೊರೆದ–ಸ್ರವಿಸಿದ; ಕೂಂಕಿ–ನೆಗೆದು; ಕಿಶೋರಕೇಸರಿಗಳಂ–ಮರಿಸಿಂಹಗಳನ್ನು; ಕರಿಕಳಭಂಗಳುಮಂ–ಆನೆಮರಿಗಳನ್ನೂ; ಪಳುವಂಗಳಿಂದೆ–ಕಾಡುಗಳಿಂದ (ಇಲ್ಲಿ ಪೞುಗಳಿಂದೆ ಎಂಬ ಪಾಠವಿರಬಹುದು); ತರುಣ ಹರಿಣಂಗಳುಮಂ–ಎಳೆಯ ಜಿಂಕೆಗಳನ್ನೂ; ಮುತ್ತ–ಮುದಿಯಾದ; ಎಱಕೆಯ–ರೆಕ್ಕೆಯ; ನಂದಲೀಯದೆ–ಆರಿಹೋಗಲು ಬಿಡದೆ; ದಾಳಿವೂಗೊಯ್ವೊಡನೆ ವರ್ಪ–ದಾಳಿಹೂವನ್ನು ಕೊಯ್ಯುವ, ಒಡನೆ ಬರುವ; ಗೋಳಾಂಗೂಳಂಗಳುಮಂ–ಕಪಿಗಳನ್ನೂ; ತಪಃಪ್ರಭಾವಕ್ಕೆ–ತಪಸ್ಸಿನ ಶಕ್ತಿಗೆ; ಚೋದ್ಯಂಬಟ್ಟು–ಆಶ್ಚರ್ಯವನ್ನು ಹೊಂದಿ.

೧೧೬. ಅಲ್ಲಿನ ಮರಗಳು ಕೂಡ ಆ ಋಷಿಗಳಿಂದ ವಿನಯವನ್ನು ಕಲಿತುಕೊಂಡುವು. ಮಱಿದುಂಬಿಗಳು–ದುಂಬಿಯ ಮರಿಗಳು, ವಿನಯದಿಂ–ನಯದಿಂದ, ವಿಶ್ವಾಸದಿಂದ, ಇತ್ತ ಬನ್ನಿಂ ಇರಿಂ–ಇತ್ತಕಡೆ ಬನ್ನಿರಿ, ಇಲ್ಲಿಯೇ ಇರಿ, ಎಂಬವೋಲ್–ಎನ್ನುವಹಾಗೆ, ಇಂಚರದಿಂದಂ–ಇಂಪಾದ ಧ್ವನಿಯಿಂದ, ಒಯ್ಯನೊಯ್ಯನೆ–ಮೃದುವಾಗಿ, ಮೆಲ್ಲ ಮೆಲ್ಲಗೆ, ಮೊರೆವುವು–ಮೊರೆಯುತ್ತವೆ; ಮರಂ–ಮರಗಳು, ತಳ್ತ ಪೂವಿನ ಪೊಸಗೊಂಚಲಿಂ–ಧರಿಸಿದ ಹೂವಿನ ಹೊಸಗೊಂಚಲುಗಳ ಭಾರದಿಂದ, ಅಲ್ಕಿಱಿತೊಳಳೊಲ್ದೆಱಪಂತೆ–ಪ್ರೀತಿಯಿಂದ ಒಲಿದು ಬಾಗುವಹಾಗೆ, ಏನ್ ಎಸೆದಿರ್ದುವೋ–ಏನು ಸೊಗಸಾದುವೋ! ಈ ನಗೇಂದ್ರದ–ಈ ಶ್ರೇಷ್ಠವಾದ ಬೆಟ್ಟದ, ಶಾಖಿಗಳುಂ–ಮರಗಳು ಕೂಡ, ಈ ತಪೋಧನರ–ಈ ತಪಸ್ವಿಗಳ, ಕೈಯೊಳೆ–ಕೈಯಿಂದಲೇ, ವಿನಯಮಂ–ನಮ್ರತೆಯನ್ನು, ಕಲ್ತುವಾಗದೇ–ಕಲಿತುವಾಗಲಿಲ್ಲವೇ? ಕಲಿತುವು ಎಂದರ್ಥ.

**ವಚನ:** ಪಾವನಂ–ಪವಿತ್ರ, ಪೆರ್ಚಿಸಿ–ಹೆಚ್ಚಿಸಿ, ಬೆರ್ಚಿಸಿ–ಹೆದರಿಸಿ, ಪುತ್ರಾರ್ಥಿನಿಯಾಗಲ್–ಮಕ್ಕಳನ್ನು ಬಯಸುವವಳಾಗಿ.

೧೧೭. ಎನ್ನಯ ನಿಷ್ಫಲ ಪುಷ್ಪದರ್ಶನಂ–ನನ್ನ ಪ್ರಯೋಜನವಿಲ್ಲದ ಮುಟ್ಟು, ರಜಸ್ವಲೆತನ; ವಿಸಸನದೊಳ್–ಯುದ್ಧದಲ್ಲಿ, ವಿರೋಧಿನೃಪರಂ–ಶತ್ರುರಾಜರಂ, ತಱಿದೊಟ್ಟಲುಂ–ಕತ್ತರಿಸಿ ರಾಶಿಮಾಡಲೂ, ಅರ್ಥಿಗೆ–ಬೇಡುವವನಿಗೆ, ಅರ್ಥಮಂ–ಐಶ್ವರ್ಯವನ್ನು, ಕಸವಿನ–ಕಸದ, ಲೆಕ್ಕಮೆಂದು–ಲೆಕ್ಕವೆಂದು, ಸಮಾನವೆಂದು, ಕುಡಲುಂ–ದಾನ

ಮಾಡಲೂ, ವಿಪುಳಾಯತಿಯಂ–ಅತಿಶಯವಾದ ಶಕ್ತಿಯನ್ನು, ದಿಗಂತದೊಳ್– ದಿಕ್ಕುಗಳ ಕೊನೆಗೆಲ್ಲ, ಪಸರಿಸಲುಂ–ಹರಡಿಸಲೂ, ಕರಂ–ವಿಶೇಷವಾಗಿ, ನೆಱೆವ– ಸಮರ್ಥರಾದ, ಮಕ್ಕಳಂ, ಈಯದೆ–ಕೊಡದೆ, ನೋಡೆ–ನೋಡಲು, ನಾಡೆ–ವಿಶೇಷ ವಾಗಿ, ಇಕ್ಷುಪುಷ್ಪದವೊಲ್–ಕಬ್ಬಿನ ಹೂವಂತೆ, ಸೂನಂಗಿಯಂತೆ, ನೋಯಿಸಿ ದಪ್ಪುದು–ನೋಯಿಸುತ್ತದೆ. ಕುಂತಿ ತಿಂಗಳು ತಿಂಗಳಿಗೆ ರಜಸ್ವಲೆಯಾಗುತ್ತಿದ್ದುದರಿಂದ ಅವಳಿಗೆ ಮಕ್ಕಳಾಗದೆ ವ್ಯಥೆಯನ್ನುಂಟುಮಾಡಿತು; ಅವಳು ಪುಷ್ಪವತಿಯಾಗಿದ್ದರೂ ಫಲವತಿಯಾಗಲಿಲ್ಲ, ಕಬ್ಬಿನಹೂವು ಹೇಗೆ ಕಾಯಾಗುವುದಿಲ್ಲವೋ ಹಾಗೆ. ಇಲ್ಲಿರುವ 'ಇಕ್ಷುಪುಷ್ಪದವೊಲ್' ಎಂಬ ಉಪಮೆ, ಬಾಣನ "ತಥಾ ಸಂಭುಜ್ಯಮಾನಮಪಿ ನಿಷ್ಫಲ ಪುಷ್ಪದರ್ಶನಂ ಶರವಣಮಿವಾಂತಃಪುರಮಭವತ್" (ಕಾದಂಬರೀ) ಎಂಬುದನ್ನು ನೆನಪಿಗೆ ತರುತ್ತದೆ. ಇಲ್ಲಿ ಜೊಂಡಾದರೆ ಪಂಪನಲ್ಲಿ ಕಬ್ಬು.

**ವಚನ:** ಚಿಂತಾಕ್ರಾಂತೆಯಾಗಿರ್ದ–ದುಃಖಕ್ಕೆ ವಶವಾಗಿದ್ದ; ಏಕಾಂತದೊಳ್– ರಹಸ್ಯದಲ್ಲಿ.

**೧೧೮.** ಚಿಂತೆಯಿದೇನೊ–ಇದೇನು ಚಿಂತೆ ಕುಂತಿ!, ಸಂತತಿಗೆ–ಕುಲಕ್ಕೆ, ವಂಶಕ್ಕೆ, ನೆಟ್ಟನೆ–ನೇರಾಗಿ, ಮಕ್ಕಳೆ ಬಾರ್ತೆಯಪ್ಪೊಡೆ–ಮಕ್ಕಳೇ ಪ್ರಯೋಜನ ವಾದರೆ, ಇನ್ನಿಂತಿರ ವೇಡ–ಇನ್ನು ಹೀಗೆ ಇರಬೇಡ, ನೀಂ, ನಿಜಾತ್ಯಂತ ಪತಿವ್ರತಾ ಗುಣದಿಂ–ನಿನ್ನ ಅತಿಶಯವಾದ ಪಾತಿವ್ರತ್ಯಗುಣದಿಂದ, ದಿವ್ಯಮುನಿ ಪುಂಗವರಂ–ಅತಿ ಶ್ರೇಷ್ಠರಾದ ಋಷಿಗಳನ್ನು, ಬಗೆದೀರ್ಪಿನಂ–ಮನಸ್ಸು ತೃಪ್ತಿಯಾಗುತ್ತಿರಲು, ಅರ್ಚಿಸಿ– ಪೂಜೆಮಾಡಿ, ಮೆಚ್ಚಿಸು–ಮೆಚ್ಚುವಂತೆ ಮಾಡು, ದಿಗಂತ ವಿಶ್ರಾಂತ ಯಶರ್ಕಳಂ– ದಿಗಂತದವರೆಗೂ ಹಬ್ಬಿದ ಕೀರ್ತಿಯುಳ್ಳ ಮಕ್ಕಳನ್ನು, ತಳೋದರೀ ನೀಂ ಪಡೆ– ಕುಂತಿಯೇ ನೀನು ಹೊಂದು.

**ವಚನ:** ಕನ್ನಿಕೆಯಾ ಕಾಲದೊಳ್–ಕನ್ನಿಕೆಯಾಗಿದ್ದ ಕಾಲದಲ್ಲಿ; ಇಲ್ಲಿ ಷಷ್ಠಿ ದೀರ್ಘ ಬಂದಿದೆ, ಅಥವಾ ಪೂರ್ವದ ಹಳಗನ್ನಡದ ಷಷ್ಠಿ ವಿಭಕ್ತಿ–ಆ ಇಲ್ಲಿದೆ; ನಿಚ್ಚಕ್ಕಂ– ಪ್ರತಿದಿನವೂ; ಬೆಸಕೆಯ್ಯುವುದರ್ಕಂ–ಸೇವೆಮಾಡುವುದಕ್ಕೂ; ದೊರಕೊಂಡುದು–ಲಭ್ಯ ವಾಯಿತು, ದೊರೆಯಿತು; ಅಮೋಘವಾಕ್ಯಂ–ವ್ಯರ್ಥವಲ್ಲದ ಮಾತು; ದಳಿಂಬಮನುಟ್ಟು– ದಣಿಬವನ್ನುಟ್ಟು, ಶುಭ್ರವಸ್ತ್ರಧಾರಿಯಾಗಿ; ತೊಡಿಗೆಗಳಂ–ಆಭರಣಗಳನ್ನು.

**೧೧೯.** ಜ್ಞಾನದಿಂ ಇರ್ದು–ಜ್ಞಾನದಿಂದಿದ್ದು, ನಿಟ್ಟಿಪೊಡೆ–ನೋಡಿದರೆ, ದಿವ್ಯ ಮುನೀಂದ್ರನ ಕೊಟ್ಟ ಮಂತ್ರಸಂತಾನಮಂ–ಆ ಶ್ರೇಷ್ಠ ಮುನೀಶ್ವರನು ಕೊಟ್ಟ ಮಂತ್ರ ಸಮೂಹವನ್ನು, ಓದಿಯೋದಿ–ಹೇಳಿಹೇಳಿ, ಪಠಿಸಿ, ಅದ್ಭುತ ತೇಜನಂ–ಅದ್ಭುತವಾದ ತೇಜಸ್ಸನುಳ್ಳ, ಯಮರಾಜನಂ, ಜಾನದಿಂ–ಧ್ಯಾನದಿಂದ, ಸರೋಜಾನನೆ–ಕುಂತಿಯು, ಬರಿಸೆ–ಬರುವಂತೆ ಮಾಡಲು, ಯಮಂಬಂದು, ಬೆಸನಾವುದು–ಏನುಕಾರ್ಯ, ಆತ್ಮಾನು ಗತಾರ್ಥಮಾವುದು–ನಿನ್ನ ಮನದಲ್ಲಿರುವ ಅಭಿಲಾಷೆ ಯಾವುದು, ಎಂದೊಡೆ–ಎಂದು ಹೇಳಿದರೆ, ನಿನ್ನನೆ, ಪೋಲ್ಪ ಪುತ್ರನಂ. ಎನಗೆ, ಈವುದು

**ವಚನ :** ಎಂಬುದುಂ–ಎನ್ನುತ್ತಲು ; ತಥಾಸ್ತುವೆಂದು–ಹಾಗೆಯೇ ಆಗಲಿ ಎಂದು; ತನ್ನ, ಅಂಶಮುಂ–ಭಾಗವನ್ನು, ಅವತರಿಸಿ–ಇಳಿಸಿಟ್ಟು; ಅಂತರ್ಧಾನಕ್ಕೆ ಸಂದಂ–ಮಾಯವಾದನು, ಮರೆಯಾದನು ; ಅನ್ನೆಗಂ ಆ ಕಾಂತೆಗೆ–ಅಪ್ಸರಲ್ಲಿ ಆ ಕುಂತಿಗೆ,

**೧೨೦.** ಮುಖೇಂದುವ ಬೆಳ್ಪು–ಚಂದ್ರನಂತಿರುವ ಮುಖದ ಬಿಳಿ ಬಣ್ಣ, ಹಿಮಧವಳಾತಪತ್ರಮನೆ–ಹಿಮದಂತೆ ಬೆಳ್ಳಗಿರುವ ಕೊಡೆಯನ್ನೆ, ಪೋಲೆ–ಹೋಲಲು ; ಕುಚಂಗಳ ತೋರ್ಪು–ಕುಚಗಳ ಗಾತ್ರವು, ಪೂರ್ಣ ಕುಂಭಮನೆ–ಪೂರ್ಣ ಕುಂಭವನ್ನೆ, ನಿರಂತರಂ ಗೆಲೆ–ನಿರವಕಾಶದಿಂದ ಗೆಲ್ಲಲು ; ಪುರ್ವಿನ ಪೊಡರ್ಪು–ಹುಬ್ಬಿನ ಅಲುಗಾಟವು, ಪತಾಕೆಯ–ಬಾವುಟದ, ಒಂದು ವಿಭ್ರಮಮನೆ–ಒಂದು ವಿಲಾಸವನ್ನೆ, ಪೋಲೆ–ಹೋಲಲು, ಗರ್ಭ ಚಿಹ್ನಮೆ–ಗರ್ಭದ ಲಕ್ಷಣಗಳೇ, ಗರ್ಭದ–ಬಸಿರಿನ, ಅರ್ಭಕನ–ಮಗುವಿನ, ಮುಂದಣ ರಾಜ್ಯಚಿಹ್ನಮುಂ–ಮುಂದಾಗುವ ರಾಜ್ಯಲಕ್ಷಣಗಳನ್ನು, ಅವಳ್ಗೆ–ಅವಳಿಗೆ, ಒಳಕೊಂಡುದು–ಒಳಕೊಂಡಿದ್ದಾದುದು. ಧವಳಾತಪತ್ರ, ಪೂರ್ಣ ಕುಂಭ, ಪತಾಕೆ–ಇವು ರಾಜ್ಯಚಿಹ್ನೆಗಳು ; ಇವು ಗರ್ಭವತಿಯ ಚಿಹ್ನೆಗಳೂ ಆಗಿದ್ದುವು ಎಂದು ಪದ್ಯ ಹೇಳುತ್ತದೆ. ತೋರ್ಪು=ತೋರ+ಪು ; ತೋರ<ಥೋರ (ಪ್ರಾ)<ಸ್ಥೂಲ (ಸಂ) ; ಪೊಡರ್ಪು=ಪೊಡರ್ ಸ್ಫುರಣೇ+ಪು.

**ವಚನ :** ಗರ್ಭಭಾರಮುಂ–ಗರ್ಭದ ತೂಕವೂ, ಅನುರಾಗಮುಂ–ಸಂತೋಷವೂ ; ಮನೋರಥಂಗಳುಂ–ಅಭಿಲಾಷೆಗಳೂ ; ನೆಱಿಯೆ–ತುಂಬಲು.

**೧೨೧.** ವನನಿಧಿಯಿಂ–ಸಮುದ್ರದಿಂದ, ಚಂದ್ರಂ–ಚಂದ್ರನು, ವಿನತೋದರದಿಂ–ವಿನತೆಯ ಗರ್ಭದಿಂದ, ಗರುತ್ಮಂ–ಗರುಡನು, ಉದಯಾಚಳದಿಂ–ಉದಯ ಪರ್ವತದಿಂದ, ದಿನಪಂ–ಸೂರ್ಯನು, ಒಗೆವಂತೆ–ಹುಟ್ಟುವ ಹಾಗೆ, ಅನಿವಾರ್ಯ ಸುತೇಜನೆನಿಪಂ–ತಡೆಯಲಸಾಧ್ಯವಾದ ತೇಜಸ್ಸುಳ್ಳವನು ಎನ್ನಿಸಿಕೊಂಡ, ಇನಜನ–ಯಮನ, ತನಯಂ–ಮಗ, ಪುಟ್ಟಿದಂ–ಹುಟ್ಟಿದನು. ವಿನತೆ–ದಕ್ಷನ ಹೆಣ್ಣುಮಕ್ಕಳಲ್ಲಿ ಒಬ್ಬಳು ; ಕಶ್ಯಪನ ಹೆಂಡತಿ ; ಅರುಣ, ಗರುಡ ಎಂಬ ಮಕ್ಕಳನ್ನು ಪಡೆದಳು. ಇನಜ–ಸೂರ್ಯನ ಮಗ, ಯಮ.

**೧೨೨.** ಪುಟ್ಟುವುದುಂ–ಆ ಮಗನು ಹುಟ್ಟುತ್ತಲೂ, ಈತನೊಳೆ–ಇವನಲ್ಲೇ, ಧರ್ಮಮುಂ–ಧರ್ಮವೂ, ಒಡವುಟ್ಟಿದುದು–ಜೊತೆಯಲ್ಲಿಯೇ ಹುಟ್ಟಿತು ; ಧರ್ಮನಂಶದೊಳ್–ಯಮನ ಅಂಶದಲ್ಲಿ, ಈತಂ–ಇವನು, ಪುಟ್ಟಿದನೆಂದು–ಹುಟ್ಟಿದನು ಎಂದು, ಆ ಶಿಶುಗೆ–ಮಗುವಿಗೆ, ಮುನಿಸಮಿತಿ–ಋಷಿಗಳ ಸಮಾಜ, ಪೆಸರಂ–ಹೆಸರನ್ನು, ಧರ್ಮಸುತನೆನೆ–ಧರ್ಮಸುತನೆಂದೇ, ಇಟ್ಟುದು–ಇಟ್ಟಿತು.

**ವಚನ :** ಪರಕೆಯುಂಕೊಟ್ಟು–ಆಶೀರ್ವಾದಮಾಡಿ.

**೧೨೩.** ಸಂತಸದಿನಿರ್ದು–ಸಂತೋಷದಿಂದಿದ್ದು, ಈ ದೊರೆಯರ್–ಇವರಿಗೆ ಸಮಾನರಾದವರು, ಇಂಥವರು, ಇನ್ನು ಆಗದೊಡೆ–ಇನ್ನೂ ಹುಟ್ಟದೆ ಇದ್ದರೆ, ಎಂತುಂ–ಹೇಗೂ, ಸಂತಸಮೆನಗಿಲ್ಲೆಂದು–ಸಂತೋಷವು ನನಗಿಲ್ಲವೆಂದು, ಸುತಭ್ರಾಂತೆ–

ಮಕ್ಕಳ ಭ್ರಮೆಯುಳ್ಳ, ಆ ಕಾಂತೆ–ಆ ಕುಂತಿಯು, ಮುನ್ನಿನಂತೆ ಪೋಲ್ ಇರ್ದಳ್–ಮೊದಲಿನ ಹಾಗೆಯೇ ಇದ್ದಳು. ಎಂದರೆ ಇನ್ನೂ ಮಕ್ಕಳಾಗಬೇಕೆಂಬ ಬಯಕೆಯಲ್ಲಿದ್ದಳು.

೧೨೪. ಮಂತ್ರಾಕ್ಷರನಿಯಮದಿಂ–ಮಂತ್ರಾಕ್ಷರ ಜಪದ ವ್ರತದಿಂದ, ಅಭಿಮಂತ್ರಿಸಿ–ಆಹ್ವಾನಮಾಡಿ, ಬರಿಸಿದೊಡೆ–ಬರಮಾಡಿಕೊಂಡರೆ, ವಾಯುದೇವಂ–ವಾಯುದೇವತೆಯು, ಬಂದು, ಏಂ ಮಂತ್ರಂ ಪೇೞಿಸೆ–ಏನು ಆಲೋಚನೆ, ಹೇಳು, ಎನ್ನಲು; ರಿಪುತಂತ್ರಕ್ಷಯಕರನೆನಿಪ–ವೈರಿ ಸೈನ್ಯವನ್ನು ನಾಶಮಾಡುವವನು ಎನ್ನಿಸಿಕೊಳ್ಳುವ, ಹಿತನಂ–ಹಿತನಾದ, ಸುತನಂ–ಮಗನನ್ನು, ಕುಡು–ಕೊಡು.

**ವಚನ**: ಅದೇವಿರಿದು–ಅದೇನು ದೊಡ್ಡದು; ವಿಯತ್ತಳಕ್ಕೊಗೆದೊಡೆ–ಆಕಾಶಕ್ಕೆ ನೆಗೆದರೆ; ಗರ್ಭಸರೋವರದೊಳಗೆ–ಗರ್ಭವೆಂಬ ಸರೋವರದಲ್ಲಿ.

೧೨೫. ತ್ರಿವಳಿಗಳುಂ–ಹೊಟ್ಟೆಯ ಮೇಲಣ ಮೂರು ಮಡಿಕೆಗಳೂ, ವಿರೋಧಿನೃಪರುತ್ಸವಮುಂ–ವಿರೋಧಿರಾಜರ ವೈಭವವೂ, ಕಿಡೆವಂದುವು–ಕೆಡಲುಬಂದುವು, ನಾಶವಾದುವು; ಆನನೇಂದುವ–ಕುಂತಿಯ ಮುಖಚಂದ್ರನ, ಕಡುವೆಳ್ಪು–ಅತಿಯಾದ ಬಿಳುಪು, ಕೂಸಿನ–ಗರ್ಭಸ್ಥವಾದ ಮಗುವಿನ, ನೆಗೞ್ತೆಯ–ಕೀರ್ತಿಯ, ಬೆಳ್ಪುವೋಲ್–ಬಿಳಿಯ ಬಣ್ಣದಂತೆ, ಆಯ್ತು–ಆಯಿತು; ಮುನ್ನೆ ಬಳ್ಕುವ ನಡು–ಮೊದಲೇ ತೆಳ್ಳಗಿದ್ದು ಬಳುಕುತ್ತಿದ್ದ ನಡುವು, ತೋರ್ಪ–ಸ್ಥೂಲವಾದ, ಮೆಯ್ಯಂ–ಮೈಯನ್ನು, ಒಳಕೊಂಡುದು–ಪಡೆಯಿತು; ಆಕೆಯಾ–ಆವಳ, ಚೂಚುಕಂ–ಮೊಲೆಯ ತೊಟ್ಟು, ಪೊಂಗೊಡನಂ–ಚಿನ್ನದ ಕಲಶವನ್ನು, ತಮಾಲಪಲ್ಲವದೊಳೆ–ಹೊಂಗೆಯ ಚಿಗುರಿನಲ್ಲಿಯೇ, ಮುಚ್ಚಿದಂದದೊಳೆ–ಮುಚ್ಚಿದಂತೆಯೆ, ಕರ್ಪಂ–ಕಪ್ಪು ಬಣ್ಣವನ್ನು, ಅಂತುದು–ತಾಳಿತು. ಕುಂತಿಯ ಗರ್ಭಚಿಹ್ನೆಗಳ ವರ್ಣನೆ ಈ ಪದ್ಯ. ಇಲ್ಲಿರುವ "ಪೊಂಗೊಡನಂ ತಮಾಲಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪನಾಕೆಯಾ" ಎಂಬ ಮಾತು "ತಮಾಲ ಪಲ್ಲವ ಲಾಂಛಿತ ಮುಖಯೋರಿವ ಕನಕ ಕಲಶಯೋಃ ಸಕೃದಿವಾಲಿಖಿತ ಕೃಷ್ಣಾಗರು ಪಂಕ ಪತ್ರಲತಯೋಃ ಶ್ಯಾಮಾಯಮಾನಚೂಚುಕಯೋಃ" ಎಂಬ ಬಾಣಭಟ್ಟನ ವರ್ಣನೆಯನ್ನು ನೆನಪಿಗೆ ತರುತ್ತವೆ.

೧೨೬. ಆ ಸುದತಿಯ–ಆ ಚೆಲುವಾದ ದಂತ ಪಂಕ್ತಿಯನ್ನುಳ್ಳ ಕುಂತಿಯ, ಮೃದುಪದ ವಿನ್ಯಾಸಮುಮಂ–ಮೃದುವಾಗಿ ಹೆಜ್ಜೆಯಿಡುವುದನ್ನು ಕೂಡ, ಶೇಷಂ ಆನಲಾಱದೆ–ಆದಿಶೇಷನು ತಾಳಿಕೊಳ್ಳಲಾರದೆ, ಬೇಸಱಿಂ–ಬೇಜಾರಿನಿಂದ, ಸುಯ್ದಂ–ನಿಟ್ಟುಸಿರಿಟ್ಟನು, ಎಂದೊಡೆ–ಎಂದರೆ, ಗರ್ಭದ ಕೂಸಿನ–ಗರ್ಭದಲ್ಲಿರುವ ಮಗುವು, ಬಳೆದ, ಅಳವಿಯ ಅಳವಂ–ಬೆಳೆದ ಅಳತೆಯ ಪ್ರಮಾಣವನ್ನು, ಅಳೆವರುಂ–ಅಳೆಯುವವರೂ, ಒಳರೇ–ಇದ್ದಾರೆಯೆ? ಇಲ್ಲ.

**ವಚನ**: ಅರಾತಿಗಳ್ಗೆ–ಶತ್ರುಗಳಿಗೆ, ಅಂತಕಾಲಂ–ಕೊನೆಗಾಲವು, ದೊರೆಕೊಳ್ವಂತೆ–ಉಂಟಾಗುವಹಾಗೆ, ಪ್ರಸೂತಿಕಾಲಂ–ಹೆರಿಗೆಯ ಸಮಯವು.

೧೨೭. ಗಣಕಂ–ಲೆಕ್ಕಿಗನು, ಜೋಯಿಸನು, ಶುಭತಿಥಿ, ಶುಭನಕ್ಷತ್ರ, ಶುಭ ವಾರ, ಶುಭಮುಹೂರ್ತ ಎಂದು, ಎನೆ–ಹೇಳಲು, ಇಳಾಪ್ರಭು–ಲೋಕಕ್ಕೆ ರಾಜನಾದ, ದಳಿತ ಶತ್ರುಗೋತ್ರಂ ಪುತ್ರಂ–ಸೀಳಲ್ಪಟ್ಟ ಶತ್ರುಕುಲವನ್ನುಳ್ಳ ಮಗನು, ಉದಿತ ಕಾಯಪ್ರಭೆಯೊಗೆದಿರೆ–ಹುಟ್ಟಿದ ದೇಹಕಾಂತಿಯು ಹರಡಿರಲು, ಒಗೆದಂ–ಹುಟ್ಟಿದನು.

೧೨೮. ಈ ಕೂಸಿನಂದಂ–ಈ ಮಗುವಿನ ರೀತಿ, ಭೀಮಂ ಭಯಂಕರಂ–ಭಯಂಕರ, ಭಯಂಕರ; ಪೆಱತೇ ಮಾತು–ಬೇರೆ ಮಾತೇನು, ಮುನಿಜನಂ–ಋಷಿಗಳು, ಈತನ ಪೆಸರುಂ–ಇವನ ಹೆಸರು ಕೂಡ, ಭೀಮನೆ ಪೋಗೆನೆ–ಭೀಮನೇ ಹೋಗು ಎನ್ನಲು, ಈ ಮಾಟಕ್ಕಿಯಿಂ–ಈ ರೀತಿಯಿಂದ, ಶಿಶುಗೆ–ಮಗುವಿಗೆ, ಅನ್ವರ್ಥಂ ಪೆಸರ್–ಅರ್ಥಾನುಸಾರಿಯಾದ ಹೆಸರು, ಆಯ್ತು–ಆಯಿತು.

**ವಚನ**: ಸಂತಸದಂತಮನೆಯ್ದಿ–ಸಂತೋಷದ ತುತ್ತ ತುದಿಯನ್ನು ಹೊಂದಿ; ತಡೆದುದರ್ಕೆ–ತಡವಾದುದಕ್ಕೆ, ಕಿನಿಸಿ-ಕೋಪಗೊಂಡು, ಕಿರಿಕಿರಿವೋಗಿ-ಕಿರಿಕಿರಿಯಾಗಿ,

೧೨೯. ಸಂತತಿಗೆ–ವಂಶಕ್ಕೆ, ಪಿರಿಯ ಮಕ್ಕಳಂ–ಹಿರಿಯರಾದ ಮಕ್ಕಳನ್ನು, ಜ್ಯೇಷ್ಠಪುತ್ರರನ್ನು, ಆಂ–ನಾನು, ತಡೆಯದೆ–ತಡಮಾಡದೆ, ಬೇಗನೆ, ಪಡೆವೆನೆಂ ದೊಡೆ–ಪಡೆಯುತ್ತೇನೆಂದರೆ, ಎನ್ನಿಂ ಮುನ್ನಂ–ನನಗಿಂತ ಮುಂಚಿತವಾಗಿ, ಕುಂತಿಯೆ ಪಡೆದಳ್–ಕುಂತಿಯೇ ಹಡೆದಳು, ಗರ್ಭದ ಚಿಂತೆಯದು ಇನ್ನೇವುದು–ಇನ್ನಾವುದು ಈ ಗರ್ಭದ ಚಿಂತೆ, ಎಂದು, ಬಸಿಱಂ–ಹೊಟ್ಟೆಯನ್ನು, ಪೊಸೆದಳ್–ಹೊಸೆದು ಕಿವುಚಿದಳು. ಇಲ್ಲಿ ಗಾಂಧಾರಿಯ ಹುರುಡಿನ ಭಾವ ಪ್ರಕಟವಾಗಿದೆ; ಅವಳಿಗಾಗುವ ಮಕ್ಕಳೂ ಅಂಥವರೇ ಎಂಬ ಸೂಚನೆ ಬರುತ್ತದೆ.

೧೩೦. ಪೊಸೆದೊಡೆ–ಹೊಸೆದರೆ, ಪಾಲ್ಗಡಲಂ–ಹಾಲಿನ ಕಡಲನ್ನು, ಕ್ಷೀರ ಸಮುದ್ರವನ್ನು, ಮಗುೞ್ದು–ನಲಿದು, ಸಂತೋಷಿಸಿ, ಅಸುರರ್–ರಾಕ್ಷಸರು, ಪೊಸೆದಲ್ಲಿ–ಕಡೆದ ಸಮಯದಲ್ಲಿ, ಕಾಳಕೂಟಾಂಕುರಂ–ಕಾಳಕೂಟವೆಂಬ ವಿಷದ ಮೊಳಕೆ, ಅಂದು–ಆಗ, ಅಸದಳಂ–ಅತಿಶಯವಾಗಿ, ಒಗೆವಂತೆ–ಹುಟ್ಟುವಹಾಗೆ, ಬಸಿಱಿಂ–ಗರ್ಭದಿಂದ, ನೂಱೊಂದು ಪಿಂಡಂ–ನೂರ ಒಂದು ಭ್ರೂಣಗಳು, ಅರುಣಾಕೀರ್ಣಂ–ರಕ್ತದಿಂದ ತುಂಬಿದುವು, ಒಗೆದುವು–ಹುಟ್ಟಿದುವು. ಈ ಹುಟ್ಟಿದ ನೂರೊಂದು ಪಿಂಡಗಳು ಕಾಳ ಕೂಟದ ಅಂಕುರಗಳು ಎಂದಿರುವುದು ಧ್ವನಿಪೂರ್ಣ.

**ವಚನ**: ಕಿನಿಸಿ ಕಿಚ್ಚೆೞ್ದು–ಕೋಪಗೊಂಡು ಬೆಂಕಿಯಾಗಿ, ಪೊಱಗೆ–ಹೊರಗೆ, ಬಗ್ಗಿಸಿ–ಗದರಿಸಿ,

೧೩೧. ನಿನ್ನ ಸಂತತಿಗೆ–ನಿನ್ನ ಕುಲಕ್ಕೆ, ಒಂದೆ ಗರ್ಭದೊಳ್–ಒಂದೇ ಬಸಿರಿನಲ್ಲಿ, ನೂರ್ವರ್-ನೂರುಜನ, ಉದಗ್ರ-ಶ್ರೇಷ್ಠರಾದ, ಸುತರ್ಕಳ್-ಗಂಡುಮಕ್ಕಳು, ಒದವುಗೆ-ಉಂಟಾಗಲಿ, ಎನೆ–ಎನ್ನಲು, ಕೆಮ್ಮನೆ–ವ್ಯರ್ಥವಾಗಿ, ಇಂತು, ಪೊಸೆದಿಕ್ಕಿದೆ–ಹೊಸೆದು ಹಾಳುಮಾಡಿದೆ, ಪೊಲ್ಲದುಗೆಯ್ದೆ–ಕೇಡನ್ನು ಮಾಡಿದೆ, ಎಂದು, ಮಾಣದೆ–ಬಿಡದೆ, ಮುನಿ–ಋಷಿ, ನೂಱು ಪಿಂಡಮುಮಂ–ನೂರು ಭ್ರೂಣಗಳನ್ನೂ, ಆಗಳೆ–ಆಗಲೇ,

ತೀವಿದ–ತುಂಬಿದ, ಕಮ್ಮನಪ್ಪ–ಮಗಮಗಿಸುವ, ತುಪ್ಪದ ಕೊಡದೊಳ್–ತುಪ್ಪದ ಕೊಡದಲ್ಲಿ, ಮಡಗಿಟ್ಟೊಡೆ–ಸುರಕ್ಷಿತವಾಗಿ ಇಟ್ಟರೆ, ಸೃಷ್ಟಿಗೆ ಚೋದ್ಯಮಪ್ಪಿನಂ–ಸಮಸ್ತ ಲೋಕಕ್ಕೂ ಆಶ್ಚರ್ಯವುಂಟಾಗುತ್ತಿರಲು.

**ವಚನ** : ಅಂತು, ನೂರ್ವರೊಳ್–ನೂರುಜನರಲ್ಲಿ, ಒರ್ವ–ಒಬ್ಬ, ಅಗುರ್ಬು–ಭಯವು, ಪರ್ಬಿ–ಹಬ್ಬಿ, ಪರಕಲಿಸೆ–ಹರಡಲು, ಸಂಪೂರ್ಣ ವಯಸ್ಕನಾಗಿ–ತುಂಬಿದ ಪ್ರಾಯವುಳ್ಳವನಾಗಿ, ಘೃತಘಟವಿಘಟನುಮಾಗಿ–ತುಪ್ಪದಕೊಡವನ್ನು ಭೇದಿಸಿದವನಾಗಿ, ಪುಟ್ಟುವುದುಂ–ಹುಟ್ಟುತ್ತಲು.

೧೩೨. ಈ ಪದ್ಯದಲ್ಲಿ ದುರ್ಯೋಧನನ ಜನನ ಸಮಯದಲ್ಲಿ ಆದ ಅಪಶಕುನಗಳ ವರ್ಣನೆ ಇದೆ. ಪ್ರತಿಮೆಗಳ್–ಅರಮನೆಯಲ್ಲಿ ಸ್ಥಾಪಿಸಿದ ವಿಗ್ರಹಗಳು, ಅೞ್ತುವು–ಅತ್ತುವು, ಧಾತ್ರಿ–ಭೂಮಿ, ಅತಿರಭಸದೆ–ಬಹು ತೀವ್ರವಾಗಿ, ಮೊೞಗಿದುದು–ಗುಡುಗಿತು, ದೆಸೆಗಳ್–ದಿಕ್ಕುಗಳು, ಉರಿದುವು–ಉರಿಹತ್ತಿಕೊಂಡುವು, ಭೂತ ಪ್ರತತಿಗಳ್–ಪಿಶಾಚಿಗಳ ಸಮೂಹ, ಆಡಿದುವು–ಕುಣಿದುವು, ಅತಿ ರಮ್ಯ ಸ್ಥಾನದೊಳ್–ಅತಿ ರಮಣೀಯವಾದ ಎಡೆಗಳಲ್ಲಿ, ಶಿವಾನಿವಹಂಗಳ್–ನರಿಗಳ ಸಮೂಹ, ಒಳಱಿದುವು–ಕೂಗಿಕೊಂಡುವು.

**ವಚನ** : ಅಂತೊಗೆದ–ಹಾಗೆ ಉತ್ಪನ್ನವಾದ, ಅನೇಕೋತ್ಪಾತಂಗಳಂ–ಅನೇಕ ದುರ್ನಿಮಿತ್ತಗಳನ್ನು, ಮುಂದಱಿವ–ಮುಂದಾಗುವುದನ್ನು ತಿಳಿವ, ಭವಿಷ್ಯಜ್ಞಾನಿಯಾದ, ಚದುರ ವಿದುರಂ–ನಿಪುಣನಾದ ವಿದುರನು.

೧೩೩. ಈತನೆ–ಇವನೇ, ನಮ್ಮ ಕುಲಕ್ಕಂ ಕೇತು–ನಮ್ಮ ವಂಶವನ್ನು ಹಾಳುಮಾಡುವ ಕೇತುಗ್ರಹ, ದಲ್–ನಿಜವಾಗಿಯೂ; ಅನಱಿವೆನ್–ನಾನು ಬಲ್ಲೆನು, ಅಲ್ಲದಂದು–ಅಲ್ಲದಾಗ, ಇನಿತು ಉತ್ಪಾತಂ–ಇಷ್ಟು ದುರ್ನಿಮಿತ್ತಗಳು, ಏಕೆ ತೋರ್ಪುವು–ಏಕೆ ತೋರುವುವು, ಬಿಸುಡುವುದು–ಇವನನ್ನು ಆಚೆಗೆ ಎಸೆಯುವುದು, ಈತನ ಪೆಱಗುಬೞದ ಸುತರೆ–ಇವನ ಆನಂತರ ಉಳಿದುಕೊಂಡ ಮಕ್ಕಳೆ, ಸಂತತಿಗೆ ಆಪ್ಪರ್–ಕುಲಕ್ಕೆ ಆಗುವರು, ಎಂದರೆ ವಂಶವಿಸ್ತಾರಕರಾಗುವರು.

**ವಚನ** : ಎಂದೊಡಂ–ಎಂದು ಹೇಳಿದರೂ; ಏಗೆಯ್ದುಂ–ಏನುಮಾಡಿಯೂ; ಒಡಂಬಡದಿರ್ದೊಡೆ–ಒಪ್ಪದಿದ್ದರೆ; ಉತ್ಪಾತ ಶಾಂತಿಕ ಪೌಷ್ಟಿಕಕ್ರಿಯೆಗಳಂ–ಉತ್ಪಾತ ಶಾಂತಿಗಾಗಿಯೂ ಮಂಗಳವರ್ಧನಕ್ಕಾಗಿಯೂ ಮಾಡುವ ಕರ್ಮಗಳನ್ನು; ಬದ್ದವಣಮಂ ಬಾಜಿಸಿ–ಮಂಗಳವಾದ್ಯಗಳನ್ನು ಮೊಳಗಿಸಿ; ಪರಕೆಯಂ–ಆಶೀರ್ವಾದವನ್ನು; ಬದ್ದವಣ>ವರ್ಧಮಾನ (ಸಂ).

೧೩೪. ಇತ್ತಕಡೆ ಅರ್ಜುನನನ್ನು ಪಡೆದ ವೃತ್ತಾಂತದ ವರ್ಣನೆ ಆರಂಭವಾಗುತ್ತದೆ. ಅರ್ಜುನ (=ಅರಿಕೇಸರಿ) ಕಥಾನಾಯಕನಾಗಿರುವುದರಿಂದ ಅವನ ಜನ್ಮಕ್ಕೆ ಪ್ರಧಾನತೆ ಸಂದಿದೆ. ಸುಕಮಿರ್ಪನ್ನೆಗಂ–ಧೃತರಾಷ್ಟ್ರಾದಿಗಳು ಸುಖವಾಗಿ ಇರುತ್ತಿರಲು, ಇತ್ತ–ಈ ಕಡೆ ಶತಶೃಂಗ ಪರ್ವತದಲ್ಲಿ, ಇನ್ನೊರ್ವನಂ–ಇನ್ನೊಬ್ಬ

ನನ್ನು, ದಿವ್ಯಬಾಲಕನಂ–ಶ್ರೇಷ್ಠನಾದ ಹುಡುಗನನ್ನು, ಉಗ್ರ....ಬಾಣನಂ ; ಉಗ್ರ–ಭಯಂಕರವಾದ, ವೈರಿ ಮದವನ್ಮಾತಂಗ–ಶತ್ರುಗಳೆಂಬ ಸೊಕ್ಕಾನೆಗಳ, ಕುಂಭ–ಕುಂಭಸ್ಥಳದ, ಆರ್ದ್ರ–ರಕ್ತದಿಂದ ಒದ್ದೆಯಾದ, ಮೌಕ್ತಿಕ–ಮುತ್ತುಗಳು, ಲಗ್ನ–ಅಂಟಿಕೊಂಡಿರುವ, ಉಜ್ವಲ–ಪ್ರಕಾಶಮಾನವಾದ, ಬಾಣನಂ–ಬಾಣವನ್ನುಳ್ಳವನನ್ನು. ಪ್ರವಿಲ..........ವೀಣನಂ : ಪ್ರವಿಲಸತ್–ಪ್ರಕಾಶಮಾನರಾದ, ಗೀರ್ವಾಣ–ದೇವತೆಗಳಿಂದ, ದಾತವ್ಯ–ಕೊಡಲ್ಪಡುವ, ಸಾಯಕ–ಬಾಣಗಳ, ಸಂಪೂರ್ಣ–ಪೂರ್ಣವಾದ, ಕಳಾ–ವಿದ್ಯೆಯಲ್ಲಿ, ಪ್ರವೀಣನಂ–ನಿಸ್ಸೀಮನಾದವನನ್ನು, ಇಳಾ....ಣನಂ ; ಇಳಾಭಾರಾ–ಭೂಭಾರವನ್ನು ಎಂದರೆ ರಾಜ್ಯಭಾರವನ್ನು ಹೊರಲು, ಕ್ಷಮ–ಸಾಮರ್ಥ್ಯದ, ಅಕ್ಷೂಣನಂ–ಕೊರತೆಯಿಲ್ಲದವನನ್ನು, ಎಂದರೆ ಶಕ್ತಿಯ ಆಧಿಕ್ಯವುಳ್ಳವನನ್ನು.

**ವಚನ** : ಅಮೋಘಂ–ವ್ಯರ್ಥವಿಲ್ಲದೆ ; ಉದ್ಯೋಗಮಂ–ಕಾರ್ಯವನ್ನು ; ಎತ್ತಿಕೊಂಡು–ಆರಂಭಿಸಿ.

**೧೩೫.** ಒರ್ಮೆ–ಒಂದುಸಲ, ದಿವ್ಯಮುನಿಗೆ–ಶ್ರೇಷ್ಠ ಋಷಿಗಳಿಗೆ, ಎಱಗಿಯುಂ–ನಮಸ್ಕರಿಸಿಯೂ, ಒರ್ಮೆ–ಒಮ್ಮೆ, ಆರ್ತುಂ–ಸಮರ್ಥರಾಗಿ, ಉಪವಾಸಮಿರ್ದುಂ–ಉಪವಾಸ ಮಾಡಿಯೂ, ಒರ್ಮೆ–ಒಂದುಬಾರಿ, ಅಱಕೆಯ ಪೂಗಳಂ–ಹೆಸರಾಂತ, ಉತ್ತಮವಾದ ಹೂಗಳನ್ನು, ಕೊಯ್ದು–ಬಿಡಿಸಿ, ಶಿವನನರ್ಚಿಸಿಯುಂ–ಶಿವನನ್ನು ಪೂಜಿಸಿಯೂ, ಓದಱಿವರ–ಶಾಸ್ತ್ರವನ್ನು ಬಲ್ಲವರು, ಪೇೞ್ದ–ಹೇಳಿದ, ನೋಂಪಿಗಳಂ–ವ್ರತಗಳನ್ನು, ಬಿಡದೆ ನೋಂತು–ನಡುವೆ ಬಿಡದೆ ವ್ರತವನ್ನು ಮಾಡಿಯೂ, ಒರ್ಮೆ ಪಲರ್ಮೆಯುಂ–ಒಂದುಸಲ ಹಲವುಸಲವೂ, ಇಂತು–ಹೀಗೆ, ತಮ್ಮ ಮೆಯ್ಮಱೆವಿನಂ–ತಮ್ಮ ಮೈ ಮರೆಯುವಹಾಗೆ, ಇರ್ವರುಂ–ಇಬ್ಬರೂ, ನವೆದರ್–ನವೆದುಹೋದರು ; ಏನ್ ಅವರ್ಗೆ ಆದುದೊ ಪುತ್ರದೋಹಳಂ–ಏನು ಅವರಿಗೆ ಆಯಿತೋ ಮಕ್ಕಳ ಬಯಕೆ !

**೧೩೬.** ಅಲಸದೆ–ಆಯಾಸಗೊಳ್ಳದೆ, ಮಾಡಿ–ಆಚರಿಸಿ, ಬೇಸಱದೆ–ಬೇಜಾರು ಪಡದೆ, ಸಾಲ್ಗುಮೆನ್ನದೆ–ಇದು ಸಾಕು ಎಂದು ಹೇಳದೆ, ಮೆಯ್ಸೊಗಕ್ಕೆ ಪಂಬಲಿಸದೆ–ದೇಹದ ಸುಖಕ್ಕಾಗಿ ಬಾಯ್ಬಿಡದೆ, ನಿದ್ರೆಗೆಟ್ಟು–ನಿದ್ದೆ ಕೆಟ್ಟು, ನಿಡುಜಾಗರದೊಳ್–ದೀರ್ಘ ಜಾಗರಣೆಯಲ್ಲಿ, ತೊಡರ್ದು–ಸೇರಿಕೊಂಡು, ಏಕಪಾದದೊಳ್ ಬಲಿದು–ಒಂದೇಕಾಲಮೇಲೆ ನಿಂತುಕೊಂಡು, ಉಪವಾಸದೊಳ್ ನವೆದು–ಉಪವಾಸದಲ್ಲಿ ನವೆದುಹೋಗಿ, ನೋಂಪಿಗಳೊಳ್–ವ್ರತಗಳಲ್ಲಿ, ನಿಯಮಕ್ರಮಂಗಳಂ–ನಿಯಮಗಳನ್ನೂ ಕ್ರಮಗಳನ್ನೂ, ಸಲಿಸಿದರ್–ಸಲ್ಲಿಸಿದರು, ಎಂದರೆ ತಪ್ಪದೆ ಪಾಲಿಸಿದರು ; ಇಂತು–ಹೀಗೆ, ನೋನದೆ–ವ್ರತಮಾಡದೆ, ಗುಣಾರ್ಣವನಂ–ಗುಣಸಮುದ್ರನಾದ ಅರ್ಜುನನನ್ನು (=ಅರಿಕೇಸರಿಯನ್ನು), ಪಡೆಯಲ್ಕೆ–ಪಡೆಯುವುದಕ್ಕೆ, ತೀರ್ಗುಮೇ–ಶಕ್ಯವಾಗುತ್ತದೆಯೇ ? ಇಲ್ಲ.

**ವಚನ**: ಅಗಣ್ಯ ಪುಣ್ಯ ತೀರ್ಥಂಗಳಂ ಮಿಂದು–ಲೆಕ್ಕವಿಲ್ಲದಷ್ಟು ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡಿ. ದಳಿಂಬಮನುಟ್ಟು–ಮಡಿವಸ್ತ್ರವನ್ನುಟ್ಟುಕೊಂಡು, ದರ್ಭಶಯನದೊಳಿರ್ದು–ದರ್ಭೆಯ ಹಾಸಿನ ಮೇಲೆ ಇದ್ದು.

೧೩೭. ಕುಂತಿ ಶ್ವೇತವಸನಧಾರಿಣಿಯಾದ ವರ್ಣನೆ; ಸುಲಿಪಲ್–ಉಜ್ಜಿದ ಹಲ್ಲು, ಮಿಂಚಿನಗೊಂಚಲ್–ಮಿಂಚಿನಗೊಂಚಲು; ಉಟ್ಟದುಗುಲಂ–ಉಟ್ಟ ರೇಷ್ಮೆಯ ವಸ್ತ್ರ, ಗಂಗಾನದೀ ಫೇನಂ–ಗಂಗಾನದಿಯ ಬೆಳ್ನೊರೆ; ಶರತ್ತಾರಳ ತಾರೋದಾರ ಭಾ ಭಾರಂ–ಅಲುಗಾಡುತ್ತಿರುವ ಮುತ್ತಿನ ಹಾರದ ವಿಶಾಲವಾದ ಕಾಂತಿಯ ಪ್ರಸರವು; ಅಂಗಲತಾಲಾಲಿತ ಸಾಂದ್ರ ಚಂದನರಸಂ–ಲತೆಯಂತಿರುವ ಅಂಗಗಳಲ್ಲಿ ಬಳಿದ ಮಂದವಾದ ಶ್ರೀಗಂಧದ ರಸ, ಇನೆಲ್ಲ, ಜಿಲ್ದಿಂಗಳೆಂಬ–ಬೆಳುದಿಂಗಳು ಎನ್ನುವ, ಪಂಬಲ ಬಂಬಲ್ಗೆಡೆಯಾಗೆ–ಹಂಬಲಿಕೆಯ ಮಾತುಗಳ ಸಮುದಾಯಕ್ಕೆ ಅವಕಾಶವಾಗಲು, ಆ ಕಾಂತೆಯಾ–ಆ ಕುಂತಿಯ, ಬೆಳ್ವಸವನಂ–ಬಿಳಿ ಬಣ್ಣದ ಅಲಂಕಾರವು, ಕಣ್ಗೊಪ್ಪಿತು–ಕಣ್ಣಿಗೆ ಸೊಗಸಾಯಿತು.

**ವಚನ**: ಕೀರ್ತಿ ಶ್ರೀಯುಂ ವಾಕ್ ಶ್ರೀಯುಮಂ–ಕೀರ್ತಿ ಎಂಬ ಲಕ್ಷ್ಮಿಯನ್ನೂ ವಾಕ್ಕಿನ ಲಕ್ಷ್ಮಿಯನ್ನೂ, ಅನುಕರಿಸಿ–ಅನುಕರಣಮಾಡಿ, ಹೋಲಿ; ಕೀರ್ತಿಯು ಬೆಳ್ಳಗಿರುತ್ತದೆ; ಸರಸ್ವತಿಯೂ ಬಿಳುಪೇ. "ಸರ್ವಶುಕ್ಲಾ ಸರಸ್ವತೀ"

೧೩೮. ಕುಂತಿ ಇಂದ್ರನನ್ನು ಆಹ್ವಾನಿಸಿದ್ದು: ನೆನೆದ ಮನಂ ಪೆಱಗು ಱಿದತ್ತೆನೆ–ಇಂದ್ರನನ್ನು ಧ್ಯಾನಿಸಿದ ಮನಸ್ಸು ಹಿಂದುಳಿಯಿತು ಎನ್ನಲು, ಎಂದರೆ ಕುಂತಿಯ ಧ್ಯಾನ ಮುಗಿಯುವುದಕ್ಕಿಂತ ಮುಂಚಿತವಾಗಿಯೇ, ಮನೋವೇಗವನ್ನು ಮೀರಿ, ಬೆಳಗುವ–ಹೊಳೆಯುವ, ರತ್ನದೀಪ್ತಿ–ರತ್ನಗಳ ಪ್ರಕಾಶ, ಸುರಧನು–ಇಂದ್ರನಬಿಲ್ಲು, ಕಾಮನಬಿಲ್ಲು, ನೆಗೆದತ್ತು ಎನೆ–ನೆಗೆಯಿತು ಎನ್ನಲು, ಕಣ್ಗಳ ಬಳಗಂ–ಕಣ್ಣುಗಳ ಸಮೂಹ, ಸಾವಿರಕಣ್ಣುಗಳು, ನೆಯ್ದಿಲ್ಗೊಳಂ ಅಲರ್ದತ್ತೆನೆ–ನೆಯ್ದಿಲೆಯ ಕೊಳ ಅರಳಿತು ಎನ್ನಲು, ಆಗಳ್–ಆಗ, ಇಂದ್ರಂ, ಬಂದಂ. ಸಾವಿರ ಕಣ್ಣುಗಳನ್ನೂ ಅರಳಿಸಿಕೊಂಡು ಮನೋವೇಗವನ್ನು ಮೀರಿ ಇಂದ್ರನು ಬಂದ; ಅವನ ಕಿರೀಟರತ್ನಗಳ ಕಾಂತಿ ಕಾಮನಬಿಲ್ಲನ್ನು ರಚಿಸಿತು.

೧೩೯. ಬೆಸನೇನ್–ಏನುಕಾರ್ಯ, ಏಗೆಯ್ವುದೊ–ಏನುಮಾಡುವುದೋ, ನಿನಗೆ, ಒಸೆದು–ಪ್ರೀತಿಸಿ, ಏನಂ ಕುಡುವುದು–ಏನನ್ನು ಕೊಡಬೇಕು, ಎಂದೊಡೆ ಎಂದಳ್–ಎಂದರೆ ಹೇಳಿದಳು, ಮಘವಾ–ಇಂದ್ರನೇ. ಮಕ್ಕಳ್ ಒಸಗೆಯಂ–ಮಕ್ಕಳ ಒಂದು ನಲಿವನ್ನು, ನಿನ್ನೆಸಕದ–ನಿನ್ನ ಪ್ರತಾಪದ, ಮಸಕಮನೆ–ಆಧಿಕ್ಯವನ್ನೇ, ಪೋಲ್ವ–ಹೋಲುವ, ಮಗನಂ–ಮಗನನ್ನು, ಈವುದು–ಕೊಡುವುದು. ಈ ಪದ್ಯದ ಎರಡನೆಯ ಪಾದಾಂತ್ಯದಲ್ಲಿ ಬರುವ 'ಮಕ್ಕಳ್' ಎಂಬುದು ಗಮನಾರ್ಹ; ಇದನ್ನು ಷಷ್ಠ್ಯರ್ಥದಲ್ಲಿ ಪ್ರಥಮಾ ಪ್ರಯೋಗವೆಂದು ಭಾವಿಸಬಹುದು, ಆದರೂ ಛಂದಸ್ಸಿನ ದೃಷ್ಟಿಯಿಂದ ಒಂದು ಮಾತ್ರೆ ಕಡಮೆಯಾಗುತ್ತದೆ; ಷಷ್ಠೀದೀರ್ಘವನ್ನಿಟ್ಟು ಮಕ್ಕಳಾ ಎಂದರೆ ಒಂದು ಮಾತ್ರೆ ಆಧಿಕವಾಗುತ್ತದೆ;

'ಮಕ್ಕಳ್ಗೊಸಗೆಯಂ' ಎಂದು ತಿದ್ದಿದರೆ ಛಂದಸ್ಸು ಸರಿಯಾಗುತ್ತದೆ; ಆದರೆ ವ್ಯಾಕರಣ ಸರಿಯಾಗುವುದಿಲ್ಲ (ಶಮದ ಸೂ ೭೯). ಮಕ್ಕಳ್ ಎಂಬುದು ಅನೇಕಾಕ್ಷರ ಯುಕ್ತವಾಗಿರುವುದರಿಂದ ಅದಕ್ಕೆ ಸ್ವರ ಪರವಾದಾಗ ಳಕಾರಕ್ಕೆ ದ್ವಿರ್ಭಾವವಿಲ್ಲ. ಇದೊಂದು ಸಣ್ಣ ಸಮಸ್ಯೆ. ಆದರೆ ಪದ್ಯದ ದ್ರುತಗತಿಯಲ್ಲಿ ಇದು ಕ್ಷಂತವ್ಯವಾಗುತ್ತದೆ.

**ವಚನ:** ಬಗೆದ ಬಗೆಯೊಳೊಡಂಬಡುವಂತೆ–ಚಿಂತಿಸಿದ ರೀತಿಯಲ್ಲಿ ಒಪ್ಪುವ ಹಾಗೆ; ಬಿಣ್ಪುಮಂ–ಭಾರವನ್ನೂ; ತಿಣ್ಪುಮಂ–ತೂಕವನ್ನೂ, ಅಗುಂತಿಯುಮಂ–ಅತಿಶಯತೆಯನ್ನೂ; ಬಲ್ಲಾಳ್ತನ–ಶೌರ್ಯ, ಪರಾಕ್ರಮ; ಶುಕ್ತಿಕಾಪುಟೋದರದೊಳ್–ಮುತ್ತಿನ ಚಿಪ್ಪಿನ ಒಳಗಡೆ; ಮುಕ್ತಾಫಲೋದಬಿಂದು–ಮುತ್ತು ಎಂಬ ನೀರಿನಹನಿ; ಸಂಕ್ರಮಿಸಿ–ಬೆರಸಿ;

೧೪೦. ಕುಂತಿ ಕಂಡ ಕನಸುಗಳ ವರ್ಣನೆ: ಏೞುಮಂಬುಧಿಯುಮಂ–ಸಪ್ತ ಸಮುದ್ರಗಳನ್ನೂ, ಕುಡಿವುದಂ–ಕುಡಿಯುವುದನ್ನು, ಕುಲಶೈಲ ಕುಳಂಗಳಂ–ಏಳು ಕುಲಪರ್ವತಗಳನ್ನು, ತಗುಳ್ದು–ಅನುಸರಿಸಿ, ಅಡರ್ವುದಂ–ಹತ್ತುವುದನ್ನು, ಒಂದು ಬಾಳರವಿ–ಒಂದು ಎಳೆಯಸೂರ್ಯ, ತನ್ನಯ ಸೋಗಿಲಮೇಗೆ–ತನ್ನ ಮಡಿಲ ಮೇಲೆ, ರಾಗದಿಂ–ಸಂತೋಷದಿಂದ, ಪೊಡರ್ವುದಂ–ಅಲುಗಾಡುವುದನ್ನು ಎಂದರೆ ಹೊರಳುವುದನ್ನು, ಅಂತೆ–ಹಾಗೆಯೇ, ದಿಕ್ಕರಿಗಳ್–ದಿಗ್ದಂತಿಗಳು, ಅಂಬುಜ ಪತ್ರಪುಟಾಂಬುವಿಂ–ತಾವರೆಯ ಎಸಳಿಂದ ಮಾಡಿದ ದೊನ್ನೆಯ ನೀರಿನಿಂದ, ಬೆಡಂಗಡಸಿರೆ–ಸೊಗಸು ತುಂಬಿರಲು, ಮಜ್ಜನಂಬುಗಿಪುದಂ–ಸ್ನಾನಮಾಡಿಸುವುದನ್ನು, ನಿಶಾಂತದೊಳ್–ರಾತ್ರಿ ಕಡೆಗಾಣುವ ಸಮಯದಲ್ಲಿ, ಸತಿ–ಕುಂತಿ, ಕಂಡು ಒಸೆದಳ್–ನೋಡಿ ನಲಿದಳು.

**ವಚನ:** ಓದುವ–ಹೇಳುವ, ಪಠಿಸುವ; ವೇದನಿನಾದದಿಂ–ವೇದಘೋಷದಿಂದ; ವಿಗತ–ಹೊರಟುಹೋದ: ಅಱಿಪಿದೊಡೆ–ಕನಸುಗಳನ್ನು ತಿಳಿಸಿದರೆ:

೧೪೧. ಕನಸಿನ ಫಲಗಳನ್ನು ಈ ಪದ್ಯ ನಿರೂಪಿಸುತ್ತದೆ: ಏೞುಮಬ್ಧಿಗಳಂ–ಏಳು ಸಮುದ್ರಗಳನ್ನು, ಕುಡಿವುದಱಿಂದಂ–ಕುಡಿಯುವುದರಿಂದ, ಅಬ್ಧಿಪರೀತಮಹೀಶನಂ–ಸಮುದ್ರವು ಬಳಸಿದ ಭೂಮಿಗೆ ಒಡೆಯನನ್ನು, ತಗುಳ್ದು–ಅನುಸರಿಸಿ, ಅಡರ್ವುದಱಿಂ–ಹತ್ತುವುದರಿಂದ, ಎಂದರೆ ಕುಲಪರ್ವತಗಳನ್ನು ಹತ್ತುವುದರಿಂದ, ಕುಲಾದ್ರಿಪರಿವೇಷ್ಟಿತನಂ – ಕುಲಪರ್ವತಗಳಿಂದ ಸುತ್ತುವರಿಯಲ್ಪಟ್ಟವನನ್ನು, ತರುಣಾರ್ಕಂ–ಬಾಲಸೂರ್ಯನು, ಅಱ್ಕಱಿಂ–ಪ್ರೀತಿಯಿಂದ, ಪೊಡರ್ವುದಱಿಂದಂ–ಹೊರಳಾಡುವುದರಿಂದ, ಎಂದುಂ ಉದಿತೋದಿತನಂ–ಯಾವಾಗಲೂ ಉಚ್ಛ್ರಾಯ ಸ್ಥಿತಿಯುಳ್ಳವನನ್ನು, ದಿಗಿಭಂಗಳೆಂಟುಂ–ಎಂಟುದಿಗ್ದಂತಿಗಳೂ, ಒಳ್ಪೊಡರಿಸಿ–ಮಂಗಳವನ್ನುಂಟುಮಾಡಿ, ಮಜ್ಜನಂಬುಗಿಸೆ–ಸ್ನಾನಮಾಡಿಸಲು, ಕಂಡುದಱಿಂ–ಕಂಡದ್ದರಿಂದ, ಕಮಲಾಭಿರಾಮನಂ–ಕಮಲದಂತೆ ಸುಂದರನಾದವನನ್ನು.

**ವಚನ :** ಕುಚಚೂಚುಕಂ–ಮೊಲೆಯ ತೊಟ್ಟು ; ಕಂದಿದುವು–ಕಪ್ಪಾದುವು ; ಬಾಸೆಗಳುಂ–ಹೊಕ್ಕುಳಿಂದ ಎದೆಯವರೆಗೆ ನೇರಾಗಿರುವ ಕೂದಲಿನ ಸಾಲುಗಳೂ ; ಬಾಬ್ಬಾಸೆಗಳುಂ–ಬಾಳುವ ಆಸೆಗಳೂ, ಅಸಿಯವಾದವು–ಕೃಶವಾದುವು ; ಕ್ಷಯಿಸಿದುವು ; ಅಲಸಿಕೆಯುಂ–ಆಲಸ್ಯವನ್ನು ;

೧೪೨. ಕುಂತಿಯ ಬಯಕೆಗಳನ್ನು ಈ ಪದ್ಯ ಹೇಳುತ್ತದೆ : ಉರ್ಚಿದ ಬಾಳೊಳ್–ಒರೆಯಿಂದ ಹೊರಗೆಳೆದ ಕತ್ತಿಯಲ್ಲಿ, ಆತ್ಮ ಮುಖಬಿಂಬಮಂ–ತನ್ನ ಮುಖಮಂಡಲವನ್ನು, ಅಟ್ತಿಯಿ ನೋಡಲುಂ–ಪ್ರೀತಿಯಿಂದ ನೋಡುವುದಕ್ಕೂ, ಮನಂ ಪೆರ್ಚಿ–ಮನಸ್ಸು ಉಬ್ಬಿ, ಧನುರ್ಲತಾಗುಣನಿನಾದಮಂ-ಬಿಲ್ಲಿನ ಲತೆಯಂತಿರುವ ಹಗ್ಗದ ಟಂಕಾರವನ್ನು, ಆಲಿಸಿ ಕೇಳಲುಂ–ಮನವಿಟ್ಟು ಕೇಳುವುದಕ್ಕೂ, ಮನಂ ಬೆರ್ಚದೆ–ಮನದಲ್ಲಿ ಹೆದರದೆ, ಸಿಂಹಪೋತಕಮಂ–ಸಿಂಹದ ಮರಿಯನ್ನು, ಓವಲುಂ–ಸಾಕಿ ಸಲಹಲೂ, ಆಕೆಯದೋಹಳಂ–ಅವಳ ಬಸಿರಿಬಯಕೆ, ಆ ಗುಣಾರ್ಣವನ–ಆ ಅರ್ಜುನನ (=ಅರಿಕೇಸರಿಯ), ಮುಂದಣ ಬೀರಮಂ–ಮುಂದುಂಟಾಗುವ ಪ್ರತಾಪವನ್ನು, ಅಂದೆ–ಆಗಲೇ, ತೋರ್ಪವೋಲ್–ತೋರಿಸುವಹಾಗೆ, ಕರಂ ಪೆರ್ಚಿದುದು–ವಿಶೇಷವಾಗಿ ಅಧಿಕವಾಯಿತು.

**ವಚನ :** ಮತ್ತಂ–ಮತ್ತೂ ; ಮಿಾಯಲುಂ–ಸ್ನಾನಮಾಡಲೂ ; ವೇಳಾವನ–ಸಮುದ್ರದ ಅಂಚಿನಲ್ಲಿರುವ ಕಾಡು ; ಲತಾಗೃಹೋದರ–ಲತಾಗೃಹದ ಒಳಭಾಗದ ; ಪುಳಿನಸ್ಥಳ ಪರಿಸರ ಪ್ರದೇಶದೊಳ್–ಮರಳಿರುವ ಠಾವಿನ ಸುತ್ತಣ ಪ್ರದೇಶದಲ್ಲಿ ; ತೊಟಲಲುಂ–ತಿರುಗಾಡಲೂ, ಅಟ್ತಿಯಾಗೆ–ಆಶೆಯಾಗಲು.

೧೪೩. ಬಳೆದ ನಿತಂಬದೆ–ಬೆಳೆದ ಸೊಂಟದಡಿಯ ಹಿಂಭಾಗದಲ್ಲಿ, ಕಾಂಚೀಕಳಾಪಮಂ–ಒಡ್ಯಾಣವೆಂಬ ಆಭರಣವನ್ನು, ಕಟ್ಟಲ್–ಕಟ್ಟಲು, ಅಣಮ–ಸ್ವಲ್ಪವಾದರೂ, ನೆಱೆಯದು–ಶಕ್ಯವಾಗದು. ಇದು, ಎಂದು, ಅಗ್ಗಳಿಸಿ–ಅಧಿಕವಾಗಿ, ಕುಳಿಕೆಗಳಿನೇಂ–ನೂಲಿನ ಕುಣಿಕೆಗಳಿಂದ ಏನು, ಕಣ್ಗೊಳಿಸಿತೋ–ಕಣ್ಣಿಗೆ ಸೊಗಸಾಯಿತೋ, ಸುಭಗೆಯಾದ ಸುದತಿಯ ಗರ್ಭಂ–ಸೌಭಾಗ್ಯ ಶಾಲಿನಿಯಾದ ಆ ಸ್ತ್ರೀಯ ಬಸಿರು ; ಕುಂತಿಯ ಗರ್ಭ ಬೆಳೆಯುತ್ತ ಬೆಳೆಯುತ್ತ ಒಡ್ಯಾಣ ಮುಂತಾದ ಒಡವೆಗಳನ್ನು ತೊಡಿಸಲು ಅಶಕ್ಯವಾಗುವಷ್ಟು ಹಿರಿದಾಗಿ ಪರಿಣಮಿಸಿತು.

**ವಚನ** : ತೆಕ್ಕನೆ ತೀವಿದ ಮೆಯ್ಯೊಳ್–ಪೂರ್ಣವಾಗಿ ತುಂಬಿಕೊಂಡ ಮೆಯ್ಯಲ್ಲಿ ; ಅಲರ್ದ ಸಂಪಗೆಯಲರಂತೆ–ಅರಳಿದ ಸಂಪಿಗೆಯ ಹೂವಿನಂತೆ ; ಬೆಳರ್ತ–ಬೆಳ್ಳಗಾದ ; ಸೊಗಯಿಸಿ–ಶೋಭಿಸಿ.

೧೪೪. ತುಡುಗೆಗಳೊಳ್–ಒಡವೆಗಳಲ್ಲಿ, ಸರಿಗೆಯುಮಂ–ತೆಳ್ಳಗಿರುವ ತಂತಿಯನ್ನು ಕೂಡ (ಒಂದೆಳೆ ಸರ), ಕಡುವಿಣ್ಣಿತ್ತೆನಿಸಿ–ಅಧಿಕ ಭಾರವುಳ್ಳದ್ದು ಎನ್ನಿಸಿ, ನಡೆದುಂ–ಓಡಾಡಿಯೂ, ಓರಡಿಯಂ–ಒಂದು ಹೆಜ್ಜೆಯನ್ನಾದರೂ, ಅಣಂ–ಕೊಂಚವೂ, ನಡೆಯಲುಂ ಆಱದೆ–ನಡೆಯಲಸಮರ್ಥಳಾಗಿ, ಕೆಮ್ಮನೆ–ಸುಮ್ಮನೆ,

ಬಿಡದೆ ಆರಯ್ಪನಿತುವಾಗೆ-ಮರಳಿನೋಡುವ ಹಾಗಾಗಲು, ಗರ್ಭಂ, ಬಳೆದುದು-ಬೆಳೆಯಿತು.

**ವಚನ:** ಷಡ್ವರ್ಗ ಸಿದ್ಧಿಯನ್ನುಂಟುಮಾಡೆ-ಲಗ್ನ, ಹೋರೆ, ದ್ರೇಕ್ಕಾಣ, ನವಾಂಶ, ದ್ವಾದಶಾಶಂ, ತ್ರಿಂಶಾಂಶ-ಇವು ಷಡ್ವರ್ಗಗಳು; ಇವುಗಳ ಸಿದ್ಧಿ ಪ್ರಾಪ್ತಿಸಲು;

**೧೪೫.** ಭರತಕುಲ ಗಗನ ದಿನಕರಂ-ಭರತ ವಂಶವೆಂಬ ಆಕಾಶಕ್ಕೆ ಸೂರ್ಯನಾಗಿರುವ, ಅರಾತಿ ಕುಳಕಮಳ ಹಿಮಕರಂ-ಶತ್ರುಗಳ ವಂಶವೆಂಬ ತಾವರೆಗೆ ಶೀತಕಿರಣನಾಗಿರುವ, ಶಿಶು-ಮಗುವು, ತೇಜೋವಿಶಚನೆಯುಂ-ತೇಜಸ್ಸಿನ ರಚನೆಯೂ, ಕಾಂತಿಯುಂ-ಪ್ರಕಾಶವೂ, ಆವರಿಸಿರೆ-ವ್ಯಾಪಿಸಿರಲು, ಗರ್ಭೋದಯಾದ್ರಿಯಿಂದುದಯಿಸಿದಂ-ಗರ್ಭವೆಂಬ ಉದಯ ಪರ್ವತದಲ್ಲಿ ಹುಟ್ಟಿದನು. ಬಾಲಸೂರ್ಯನಂತೆ ಪ್ರಭಾಮಯನಾಗಿ ಅರ್ಜುನ ಹುಟ್ಟಿದನು.

**೧೪೬.** ಉದಯಿಸುವುದುಂ-ಹುಟ್ಟುತ್ತಲು, ಅಮೃತಾಂಶುವಿನ-ಚಂದ್ರನ, ಉದಯದೊಳ್-ಹುಟ್ಟಿನಲ್ಲಿ, ಅಂಭೋಧಿವೇಲೆ-ಸಮುದ್ರದಕರೆ, ಭೋರ್ಗರೆವವೊಲ್-ಭೋರೆಂದು ಶಬ್ದ ಮಾಡುವಹಾಗೆ, ಘನಪಥದೊಳ್-ಮೋಡಗಳ ಮಾರ್ಗದಲ್ಲಿ, ಆಕಾಶದಲ್ಲಿ, ತ್ರಿದಶ ಕರಾಹತಿಯಿಂ-ದೇವತೆಗಳ ಕೈ ಹೊಡೆತದಿಂದ, ಸುರದುಂದುಭಿಗಳ್-ದೇವಲೋಕದ ಭೇರಿಗಳು, ಒಡನೆ-ಕೂಡಲೇ, ಒರ್ವೊದಲ್-ಒಟ್ಟಿಗೇ, ಎಸೆದುವು-ಶಬ್ದ ಮಾಡಿದವು. ಎಸೆ=ಇಶೈ (ತಮಿಳು) ಶಬ್ದಮಾಡು; ಒರ್ವೊದಲ್-ಒಟ್ಟಿಗೇ, ಜೊತೆಜೊತೆಯಾಗಿ (Simultaneously).

**ವಚನ:** ಪರಸುವ-ಹರಸುವ, ಧ್ವನಿಗಳುಂಬೆರಸು-ಧ್ವನಿಗಳ ಸಮೇತವಾಗಿ; ಬೆರಸು ಎಂಬುದರ ಹಿಂದೆ ಪ್ರಥಮಾವಿಭಕ್ತಿ ಯಾವಾಗಲೂ ಬರುತ್ತದೆ; ಮುಸುಂಕಿಕೊಂಡು-ಮುತ್ತಿಕೊಂಡು.

**೧೪೭.** ದೇವರ ಪಱೆಗಳ ರವದೊಳ್-ದೇವತೆಗಳ ಹರೆಗಳ (ಭೇರಿಗಳ) ಶಬ್ದದಲ್ಲಿ, ದೇವರ ಸುರಿವರಲ-ದೇವತೆಗಳು ಸುರಿಸುವ ಪುಷ್ಪಗಳ, ಸರಿಯ ಬೆಳ್ಸರಿಯೊಳ್-ಮಳೆಯ ಬಿಳಿಯಧಾರೆಯಲ್ಲಿ, ದೇವವಿಮಾನಾವಳಿಯೊಳ್-ದೇವತೆಗಳ ವಿಮಾನಗಳ ಪಂಕ್ತಿಗಳಲ್ಲಿ, ಒರ್ವೊದಲೆ-ಒಟ್ಟಿಗೇ, ಗಗನಮುಂ-ಆಕಾಶವೂ, ಧರಿಮಧ್ಯಂ-ಭೂಮಿಯ ಮಧ್ಯಭಾಗವೂ, ತೀವಿದುವು-ತುಂಬಿದುವು. ನೆಲಬಾನುಗಳು ವಾದ್ಯರವಗಳಿಂದಲೂ ಪುಷ್ಪವೃಷ್ಟಿಯಿಂದಲೂ ವಿಮಾನಪಂಕ್ತಿಗಳಿಂದಲೂ ತುಂಬಿಹೋದುವು, ಇದನ್ನು ದುರ್ಯೋಧನನ ಜನನವಾದಾಗ ಉಂಟಾದ ಉತ್ಪಾತಗಳಿಗೆ ಹೋಲಿಸಿ ನೋಡಬಹುದು.

**ವಚನ:** ಮೂಪತ್ತು ಮೂವೇವರುಂ-ಮೂವತ್ತುಮೂವರು ದೇವತೆಗಳೂ, ವೈಮಾನಿಕದೇವರುಂ-ವೈಮಾನಿಕರೆಂಬ ದೇವತೆಗಳೂ (ಇಲ್ಲಿ ಜೈನ ಪರಿ ಭಾಷೆ ಇದೆ.

ಭವನವಾಸಿನಃ, ವ್ಯಂತರಾಃ, ಜ್ಯೋತಿಷ್ಕಾಃ, ವೈಮಾನಿಕಾಃ–ಎಂದು ದೇವತೆಗಳಲ್ಲಿ ನಾಲ್ಕುವರ್ಗ); ಜನ್ಮೋತ್ಸವಂ ಮಾಡಿ–ಜನ್ಮದ ಉತ್ಸವವನ್ನು ಮಾಡಿ, (ತೀರ್ಥಂಕರನಿಗೆ ಆಗುವ ಜನ್ಮೋತ್ಸವದ ನೆನಪು ಇಲ್ಲಿದೆ).

೧೪೮. ಆ ಬ್ರಹ್ಮಂ–ಸೃಷ್ಟಿಕರ್ತನಾದ ಬ್ರಹ್ಮನು, ನೋಡುವಂ–ಕೂಸನ್ನು ನೋಡುತ್ತಾನೆ (ಎಷ್ಟು ನೋಡಿದರೂ ತೃಪ್ತಿಯಾಗದು); ಅಮರೇಂದ್ರಂ–ಇಂದ್ರನು, ಮುಂಡಾಡುವಂ–ಮುದ್ದಾಡುತ್ತಾನೆ (ಅರ್ಜುನನು ತನ್ನ ಮಗನಲ್ಲವೆ?) ಇಂದ್ರನ, ಅಚ್ಚರಸೆಯರ್–ಅಪ್ಸರಸ್ತ್ರೀಯರು, ಎಱ್ದಾಡುವರ್–ಎದ್ದು ನರ್ತನ ಮಾಡುತ್ತಾರೆ. ಎಂದೊಡೆ–ಎಂದು ಹೇಳಿದರೆ, ಗುಣಾರ್ಣವನ–ಅರಿಕೇಸರಿಯ (=ಅರ್ಜುನನ), ಜನ್ಮದಿನದ ಬೆಡಂಗಂ–ಹುಟ್ಟಿದ ದಿನದ ಸೊಗಸನ್ನು, ಪೊಗೞಲ್ವೇಡ–ಹೊಗಳಬೇಡವೊ? ಹೊಗಳಲೇಬೇಕು.

**ವಚನ**: ಪಿರಿದುಮೊಸಗೆಯಂ ಮಾಡಿ–ಹಿರಿದಾದ ಉತ್ಸವವನ್ನು ಮಾಡಿ; ನಿಮಿತ್ತಂಗಳಪ್ಪ–ಕಾರಣಗಳಾದ; ನಾಮಂಗಳೊಳ್–ಹೆಸರುಗಳಲ್ಲಿ; ಕದನತ್ರಿಣೇತ್ರಂ–ಯುದ್ಧದಲ್ಲಿ ಮುಕ್ಕಣ್ಣನಂತಿರುವವನು; ರುದ್ರನಂತಿರುವವನು; ಮನುಜಮಾಂಧಾತಂ–ಮನುಷ್ಯರಲ್ಲಿ ಮಾಂಧಾತರಾಜನಂತೆ ಇರುವವನು; ಶೌಚಾಂಜನೇಯಂ–ಶುಚಿತ್ವದಲ್ಲಿ ಹನುಮಂತನಂತಿರುವವನು; ಪ್ರತ್ಯಕ್ಷ ಜೀಮೂತವಾಹನಂ–ಕಣ್ಣಿಗೆ ಗೋಚರನಾದ ದಾನಶೀಲನಾದ ವಿದ್ಯಾಧರಚಕ್ರವರ್ತಿ ಜೀಮೂತ ವಾಹನನಂತಿರುವವನು; ವಿದ್ವಿಷ್ಟ ವಿದ್ರಾವಣಂ–ಶತ್ರುಗಳು ಪಲಾಯನ ಮಾಡುವಂತೆ ಮಾಡುವವನು, ಮನು ನಿದಾನಂ–ಮನುವಿನಂತೆ ಆದಿಕಾರಣನಾದವನು; ಗಜಗಮರಾಜಪುತ್ರಂ ಅಥವಾ ಗಜಗಮನ ರಾಜಪುತ್ರಂ (ಇಲ್ಲಿ ಪಾಠ ಕೆಟ್ಟಿದೆ)–ಗ[ಜಾ]ಗಮರಾಜಪುತ್ರಂ–ಹಸ್ತಿ ಶಾಸ್ತ್ರದಲ್ಲಿ ರಾಜಪುತ್ರನಂತಿರುವವನು (ರಾಜಪುತ್ರನೆಂಬೊಬ್ಬ ಹಸ್ತಿ ಶಾಸ್ತ್ರಕಾರ ನಿದ್ದಿರಬಹುದು), ಇಲ್ಲವೇ [ಅಂ]ಗ[ಜಾ]ಗಮ ರಾಜಪುತ್ರಂ–ಕಾಮಶಾಸ್ತ್ರವನ್ನು ಬರೆದ ರಾಜಪುತ್ರನೆಂಬ ಕವಿಯಂಥವನು; ಇರುವಹಾಗೆ ಅರ್ಥಮಾಡುವುದು ಕಷ್ಟ. ಆರೂಢ ಸರ್ವಜ್ಞಂ–ಅಶ್ವಾರೋಹಣ ವಿದ್ಯೆಯಲ್ಲಿ ಎಲ್ಲವನ್ನೂ ತಿಳಿದವನು; ಪಲ್ಲವಂ–ಚಿಗುರು; ಕರ್ಣಪೂರಂ–ಕಿವಿಯ ಒಡವೆ; ಲಾಟೀಲಲಾಮಂ–ಲಾಟದೇಶ ಸ್ತ್ರೀಯರ ಹಣೆಯ ಆಭರಣ; ಮಜ್ಜುವಕ್ಕ ದಲ್ಲಟಿಂ–ಶತ್ರುಸೈನ್ಯವನ್ನು ಭಯಪಡಿಸುವವನು; ನೋಡುತ್ತೆಗೆಲ್ವಂ–ನೋಡುತ್ತಲೇ ಗೆಲ್ಲುವವನು; ಪಾಣ್ಬರಂಕುಸಂ–ಜಾರರಿಗೆ ಅಂಕುಶ ಪ್ರಾಯನಾದವನು; ಅಮ್ಮನ ಗಂಧವಾರಣಂ–ತಂದೆಯ ಮದ್ದಾನೆ; ಪಡೆಮೆಚ್ಚೆ ಗಂಡಂ–ಸೈನ್ಯ ಮೆಚ್ಚುವ ಹಾಗೆ ಶೂರನಾದವನು; ಪ್ರಿಯಗಳ್ಳಂ–ಪ್ರಿಯಳನ್ನು ಅಪಹರಿಸಿದವನು, ಅರ್ಜುನ ಸುಭದ್ರೆಯನ್ನು ಅಪಹರಿಸಿದಂತೆ. ಇಲ್ಲಿ ಹೇಳಿರುವುವೆಲ್ಲ ಅರಿಕೇಸರಿಯ ಬಿರುದುಗಳು; ಅವು ಅರ್ಜುನನಿಗೂ ಅನ್ವಯವಾಗುತ್ತವೆ. ಈ ಬಿರುದುಗಳಲ್ಲಿ ಹಲವು ವೇಮುಲವಾಡ II ಅರಿಕೇಸರಿಯ ಶಿಲಾಶಾಸನದಲ್ಲಿ ದೊರೆಯುತ್ತವೆ. ಅಷ್ಟೋತ್ತರ ಶತನಾಮಂಗಳನಿಟ್ಟು–೧೦೮ ಹೆಸರುಗಳನ್ನಿಟ್ಟು.

೧೪೯. ಅರಿಕೇಸರಿ–ಅರಿಕೇಸರಿಯೇ (ಅರ್ಜುನನೇ), ಸಪ್ತ....ತಳಮಂ; ಏಳು–ಕಡಲುಗಳಿಂದ ಅಂಕಿತವಮಾಡಲ್ಪಟ್ಟ ಭೂಮಂಡಲವನ್ನು, ಜಿಸಕೆಯ್ಸು–ಆಜ್ಞಾಧೀನವನ್ನಾಗಿಮಾಡು; ಮಿಾಱಿದ–ಉಲ್ಲಂಘಿಸಿದ, ಉದ್ವೃತ್ತ–ಗರ್ವಿಷ್ಠರಾದ, ವಿರೋಧಿ ಸಾಧನಮಂ–ವೈರಿಗಳ ಸೈನ್ಯವನ್ನು, ಆಹವದೊಳ್–ಯುದ್ಧದಲ್ಲಿ, ತಱಿದೊಟ್ಟು–ಕತ್ತರಿಸಿ ರಾಶಿಮಾಡು; ವಿಶ್ವದಿಗ್ವ್ಯಾಪ್ತಯಶೋವಿಲಾಸಿನಿಗೆ–ಸಮಸ್ತ ದಿಕ್ಕುಗಳಲ್ಲೂ ಆವರಿಸಿಕೊಂಡಿರುವ ಕೀರ್ತಿಯೆಂಬ ಸ್ತ್ರೀಗೆ, ವಲ್ಲಭನಾಗು–ಪತಿಯಾಗು; ಸುಖವ್ಯಾಪ್ತಿಗೆ–ಭೋಗೋಪಭೋಗಗಳ ವಿಸ್ತಾರಕ್ಕೆ, ನಿರಂತರಂ–ಎಡೆಬಿಡದೆ, ಲೋಕಮುಳ್ಳಿನಂ–ಲೋಕವಿರುವವರೆಗೂ, ನೀನೆ–ನೀನೇ, ಮೊತ್ತ ಮೊದಲಾಗು–ಮುಖ್ಯ ಆಕರವಾಗು, ಕವಿ ಅರಿಕೇಸರಿಯನ್ನು ಹರಸುತ್ತಿದ್ದಾನೆ. ಅರ್ಜುನ ವ್ಯಾಜದಿಂದ ಅರಿಕೇಸರಿಯ ಪ್ರಶಸ್ತಿ ಪದ್ಯದಿಂದ ಈ ಆಶ್ವಾಸ ಮುಗಿಯುತ್ತದೆ.

ಕವಿ ಪ್ರಶಸ್ತಿ; ಇದು ವಿವಿಧ ವಿಬುಧ ಜನವಿನುತ–ಅನೇಕ ದೇವತೆಗಳಿಂದ ಸ್ತುತಿಮಾಡಲ್ಪಟ್ಟ, ಜಿನ ಪದಾಂಭೋಜ–ಜಿನನ ಪಾದಕಮಲಗಳ, ವರಪ್ರಸಾದೋತ್ಪನ್ನ–ವರಪ್ರಸಾದದಿಂದ ಹುಟ್ಟಿದ, ಪ್ರಸನ್ನ ಗಂಭೀರ ವಚನ ರಚನ–ತಿಳಿಯಾದುದೂ ಗಂಭೀರವಾದುದೂ ಆದ ಮಾತುಗಳ ರಚನೆಯಲ್ಲಿ, ಚತುರ–ಚಾತುರ್ಯವನ್ನುಳ್ಳ, ಕವಿತಾ ಗುಣಾರ್ಣವ ವಿರಚಿತಮಪ್ಪ–ಕಾವ್ಯಗುಣಕ್ಕೆ ಸಮುದ್ರದಂತಿರುವ ಪಂಪನಿಂದ ರಚಿತವಾದ, ವಿಕ್ರಮಾರ್ಜುನ ವಿಜಯದೊಳ್–ವಿಕ್ರಮಾರ್ಜುನ ವಿಜಯವೆಂಬ ಕಾವ್ಯದಲ್ಲಿ, ಪ್ರಥಮಾಶ್ವಾಸಂ–ಒಂದನೆಯ ಆಶ್ವಾಸವು.

ಶ್ರೀ ಮತ್ಕರಿಗಿರಿವಾಸ ಪ್ರಹ್ಲಾದ ಪರಿಪಾಲಕ
ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಗಳ ಚರಣದಾಸನಪ್ಪ ದೊಡ್ಡಬೆಲೆ ಲಕ್ಷ್ಮೀನರಸಿಂಹಾ
ಚಾರ್ಯನಿಂ ರಚಿತವಾದ
ಪಂಪಭಾರತ ದೀಪಿಕಾಖ್ಯ ವ್ಯಾಖ್ಯೆಯೊಳ್ ಪ್ರಥಮಾಶ್ವಾಸಂ.

## ದ್ವಿತೀಯಾಶ್ವಾಸಂ

೧. ಶ್ರೀಗೆ ಅಗಲುರಮುಂ–ಲಕ್ಷ್ಮಿಗೆ ಅಗಲವಾದ ಎದೆಯನ್ನೂ, ಕೀರ್ತಿ ಶ್ರೀಗೆ ದಿಗಂತಮುಮಂ–ಕೀರ್ತಿಲಕ್ಷ್ಮಿಗೆ ದಿಕ್ಕುಗಳ ಕೊನೆಯನ್ನೂ, ಅಹಿತರಂ–ವೈರಿಗಳನ್ನು, ಗೆಲ್ವ–ಗೆಲ್ಲುವ, ಜಯಶ್ರೀಗೆ–ಜಯಲಕ್ಷ್ಮಿಗೆ, ಭುಜಶಿಖರಮಂ–ಭುಜದ ಅಗ್ರಭಾಗವನ್ನೂ, ನೆಲೆಯಾಗಿಸಿ–ನಿಲ್ಲುವ ನೆಲೆಯಾಗಿ ಮಾಡಿ, ನೀಂ ಅರಿಗಾ–ನೀನು ಅರಿಕೇಸರಿಯೇ, ಪಾರ್ಥನೇ, ನೇಸಱುಳ್ಳಿನಂ–ಸೂರ್ಯನಿರುವ ವರೆಗೂ, ನೆಲಸು–ಶಾಶ್ವತವಾಗಿರು. ಅರಿಕೇಸರಿ–ಅರ್ಜುನ, ಪ್ರಶಸ್ತಿಯಿಂದ ಪ್ರತಿ ಆಶ್ವಾಸ ಆರಂಭವಾಗುತ್ತದೆ. ಅಗಲ್ದುರಮಂ ಎಂಬ ಪಾಠಚಿಂತ್ಯ. ಇಲ್ಲಿ ಶಿಥಿಲ ದ್ವಿತ್ವವಿದೆ; ಇಂಥ ಪ್ರಯೋಗವು ಬೇರೆ ಕಾವ್ಯಗಳಲ್ಲೂ ದೊರೆಯುತ್ತದೆ: ''ಪೊಯ್ದಂ ಕಾಲ್ಗಳಂ ತೋಳ್ಗಳನಗಲ್ದುರಮಂ ಕೆನ್ನೆಯಂ ನೆತ್ತಿಯಂ ಕೋಪದಿಂ'' (ಗದಾ. ೮–೧೯);

೨. ಎಂಬ ಪರಕೆಗಳ–ಎಂಬ ಆಶೀರ್ವಾದಗಳ, ರವದೊಳ್–ಶಬ್ದದಲ್ಲಿ, ನಭೋ ವಿವರಂ ತುಂಬೆ–ಆಕಾಶದ ರಂಧ್ರವನ್ನು ತುಂಬಲು, ಅಮರ ಮುನಿಜನಂ–ದೇವತೆಗಳೂ ತಪಸ್ವಿಗಳೂ, ಅಮರೇಂದ್ರಂ ಬೆರಸು–ಇಂದ್ರನೊಡನೆ, ತಳರ್ದುದು–ಚಲಿಸಿತು, ಹೊರಟುಹೋಯಿತು; ಕುಂತಿಗಂ ತತ್ಪತಿಗಂ–ಕುಂತಿಗೂ ಅವಳ ಪತಿಯಾದ ಪಾಂಡು ರಾಜನಿಗೂ, ಮನದೊಸಗೆ–ಮನದ ಸಂತೋಷವು, ಅಳುಂಬಂ–ಅತಿಯಾಗಿ, ಆದುದು–ಆಯ್ತು.

**ವಚನ:** ಪುಟ್ಟಿದೊಸಗೆಯೊಳ್–ಜನ್ಮದ ಉತ್ಸವದಲ್ಲಿ; ಒಸಗೆ ಮರುಳ್ಗೊಂಡು–ಉತ್ಸವದಿಂದಾದ ಸಂಭ್ರಮಕ್ಕೊಳಗಾಗಿ; ಪೊಸೆದು ಬಿಸುಟ ರಕ್ತಾಶೋಕ ಪಲ್ಲವದಂತೆ–ಹೊಸೆದು ಬಿಸಾಟ ಅಶೋಕದ ಕೆಂಪುಚಿಗುರಿನಂತೆ; ಬಿನ್ನನಾದ–ಮೌನವನ್ನು ತಾಳಿದ, ಬಿಮ್ಮೆನ್ನುವ; ತದುಕ್ತಕ್ರಿಯೆಯೊಳಂ–ಆ ಮಂತ್ರಕ್ಕಾಗಿ ವಿಧಿಸಿದ ಕಾರ್ಯಗಳಲ್ಲಿ; ನಿಯಮನಿಯಮಿತೆಯಾಗಿ–ನೇಮದಿಂದ ಕೂಡಿದವಳಾಗಿ.

೩. ಆ ವನಜದಳಾಕ್ಷಿ–ಆ ಕಮಲನೇತ್ರೆಯಾದ ಮಾದ್ರಿ, ಅಶ್ವಿನಿ ದೇವರಂ–ಅಶ್ವಿನಿದೇವತೆಗಳನ್ನು, ಆಹ್ವಾನಂ ಗೆಯ್ದು–ಕೂಗಿ ಕರೆದು, ಅವರಿತ್ತ ವರದೊಳ್–ಅವರು ಕೊಟ್ಟ ವರಗಳಲ್ಲಿ, ಅವರಂಶಮೆ–ಅವರ ಭಾಗವೆ, ಗರ್ಭದೊಳ್–ಬಸಿರಿನಲ್ಲಿ, ಸಂಭಾವಿಸೆ–ಉಂಟಾಗಲು, ಅಮಳರಂ ಪಡೆದು–ಅವಳಿಮಕ್ಕಳನ್ನು ಹೆತ್ತು, ಸಂತತಿವೆತ್ತಳ್–ಸಂತಾನವನ್ನು ಪಡೆದಳು.

**ವಚನ:** ಅಮಳ್ವೆಸರನಿಟ್ಟು–ಜೋಡಿ ಹೆಸರುಗಳನ್ನಿಟ್ಟು; ಏಱುಗಿವಾಡಿವದ–ಏಳಿಗೆಯನ್ನು ಹೊಂದುತ್ತಿರುವ ಪಾಡ್ಯದ ಎಂದರೆ ಶುಕ್ಲಪಕ್ಷದ ಪಾಡ್ಯದ; ಚಂದ್ರನಂತೆ–ಚಂದ್ರನಹಾಗೆ; ಉತ್ತರಾಭಿವೃದ್ಧಿಯೊಳ್–ದಿನದಿನಕ್ಕೂ ಹೆಚ್ಚುತ್ತಿರುವ

ಬೆಳವಣಿಗೆಯಲ್ಲಿ; ಯಶೋಂಕುರಂಗಳುಂ–ಕೀರ್ತಿಯ ಮೊಳಕೆಗಳೂ; ಅರಾತಿ ಜನಕ್ಕೆ–ಶತ್ರುಜನಕ್ಕೆ; ಪಂಚಾಂಗ ಮಂತ್ರಂ–ಸ್ತುತಿ, ನೈವೇದ್ಯ, ಅಭಿಷೇಕ, ತರ್ಪಣ, ಸಮಾರಾಧನೆ ಎಂಬೀ ವೇದಕ್ಕೆ ಸಂಬಂಧಿಸಿದ ಮಂತ್ರಗಳು; ಮೂರ್ತಿಮಂತಂಗಳಾದಂತೆ–ರೂಪವನ್ನು ಪಡೆದಂತೆ, ಸಾಕಾರವಾದಂತೆ.

೪. ಧರ್ಮಾತ್ಮಜನಾ ಬಾಳಕೇಳಿ–ಧರ್ಮರಾಜನ ಬಾಲಕ್ರೀಡೆಯು, ತೊಡರ್ದಮರ್ದ–ಚೆನ್ನಾಗಿ ಸೇರಿಕೊಂಡ, ಬಾಳವಣ್ಣದ–ಕತ್ತಿಯಬಣ್ಣದ, ಎಂದರೆ ನೀಲಿಬಣ್ಣದ, ತುಡುಗೆ–ಉಡುಪು, ಪಳಂಚಲಿವ ಪಂಚಜಡೆ–ಬೆನ್ನಿಗೆ ಅಪ್ಪಳಿಸಿ ಅಲ್ಲಾಡುತ್ತಿರುವ ಅಯ್ದು ಜಡೆಗಳು; ನೊಸಲೊಳ್–ಹಣೆಯಲ್ಲಿ, ಒಡಂಬಡುವ–ಒಪ್ಪಿರುವ, ಅರಳೆಲೆ–ಅರಳೆಲೆ ಆಕಾರದ ಪದಕ, ಇವಱಿಂ–ಇವುಗಳಿಂದ, ಚೆಲ್ವಿಡಿದಿರ್ದುದು–ಚೆಲುವಿಕೆಯು ಪೂರ್ಣವಾಗಿತ್ತು. ಬಾಳಬಣ್ಣ: "ಪುಳಿಯೊಳ್ ಕರ್ಚಿದ ಬಾಳಬಣ್ಣಮನೆ ಪೋಲ್ವಾಕಾಶಂ" ಎಂಬ ಪ್ರಯೋಗ (ಪಂಪ. ಭಾ. ೭–೭೧)ವುಂಟು. ಅರಳೆಲೆ ಒಂದು ಮಕ್ಕಳ ಆಭರಣ. "ಪಳಂಚು–ಸಂಘಟ್ಟನೇ."

೫. ಭೀಮನು ಬೆಳೆದದ್ದನ್ನು ಇಲ್ಲಿ ವರ್ಣಿಸಿದೆ: ನಡೆವ, ತಳರ್ನಡೆಯೊಳ್–ಚಂಚಲವಾದ ನಡಗೆಯಲ್ಲಿ, ಶಿಲೆಗಳ್–ಕಲ್ಲುಗಳು, ಒಡೆದು, ಪುಡಿಪುಡಿಯಾದುವು; ಭೀಮಂ–ಭೀಮಸೇನನು, ಪಿಡಿದು–ಹಿಡಿದು, ಅಡರ್ದೊಡೆ–ಹತ್ತಿಕೊಂಡರೆ, ಕರಿಗಳ್–ಆನೆಗಳು, ಬಾಯ್ಬಿಟ್ಟು–ಬಾಯನ್ನು ಬಿಟ್ಟು, ಎಲ್ವಡಗಾದುವು–ಎಲುಬು ಮಾಂಸಗಳಾದುವು, ಎಂದರೆ ಜಜ್ಜಿ ಹೋದವು. ಮುದ್ದು–ಮುದ್ದಾಗಿರುವ ಸ್ಥಿತಿ, ಅಂತು–ಹಾಗೆ, ಸೊಗಯಿಸವೇಡಾ–ಸೊಗಸಾಗಬೇಡವೇ? ಆಗಬೇಕು.

೬. ಮುಂ–ಮೊದಲು ಎಂದರೆ ಭೀಮನು ಹುಟ್ಟುವ ಮುಂಚೆ. ಮುನಿಯರ–ಋಷಿಗಳ, ಸೋಂಕಿಲೊಳೆ–ನುಡಿಲಿನಲ್ಲಿಯೇ, ಬಳೆದ–ಬೆಳೆದ, ಸಿಂಗಂಗಳ್–ಸಿಂಹಗಳು, ಮುನಿವನಮನೆ–ಋಷಿಗಳ ಕಾಡನ್ನೇ, ಮರುದಾತ್ಮಜನಾ–ಭೀಮನ, ಮುದ್ದಿನೊಳ್–ಮುದ್ದಾಟಕ್ಕಾಗಿ, ಅಡರ್ವ–ಏರುವ, ಪಿಡಿವ–ಹಿಡಿಯುವ, ಗುರ್ದುವ–ಕೈಯಿಂದ ಗುದ್ದುವ, ಮನೆಗೆೞೆಪ–ಮನೆಗೆ ಎಳೆದುಕೊಂಡು ಬರುವ, ಅನಿತರ್ಕಂ–ಅಷ್ಟು ಹಿಂಸೆಗಳಿಗೂ, ಅಲಸಿ–ಆಯಾಸಗೊಂಡು, ಬಿಸುಟುವು–ತೊರೆದುವು.

೭. ಅರ್ಜುನನ ಬಾಲಕೇಳೀ ವರ್ಣನೆಗೆ ಹೆಚ್ಚು ಪದ್ಯಗಳು ಸಂದಿವೆ: ಬೇಡಿಪುದಂ ಬೇಡುವ–ಬಯಸಿದ್ದನ್ನೇ ಬಯಸುವ, ಕೇಳಿದ್ದನ್ನೇ ಕೇಳುವ, ಪುಡಿಯಾಡುವ–ಧೂಳಾಟವಾಡುವ, ತೊದಳೊದವೆ ನುಡಿವ–ತೊದಲು ಮಾತುಗಳನ್ನಾಡುವ, ನಗಿಸುವ–ನಗುವನ್ನುಂಟುಮಾಡುವ, ಅರಿಕೇಸರಿಯಾ–ಅರಿಕೇಸರಿಯ, ಬಾಲಕ್ರೀಡೆ–ಮಕ್ಕಳಾಟಗಳು, ಮುರಾರಿಯ ಬಾಲಕ್ರೀಡೆಯುಂ–ಶ್ರೀಕೃಷ್ಣನ ಬಾಲಲೀಲೆಗಳನ್ನು, ಅನುಕರಿಪುವಾದುದು–ಹೋಲುವುದಾಯಿತು.

೮. ಪರೆದು ಅಡರ್ದ ದೂಳಿ–ಕೆದರಿ ಮೆಯ್ಗಂಟಿಕೊಂಡ ದೂಳು, ಕಿಱುನಗೆ ವೆರಸಿದ–ಮಂದಸ್ಮಿತದಿಂದ ಕೂಡಿದ, ತೊದಳೊದವೆ–ತೊದಲು ಉಂಟಾಗಲು, ನುಡಿವ–

ಮಾತಾಡುವ, ನುಡಿ–ಮಾತು, ನಗೆಮೊಗದೊಳ್–ನಗೆಯಿಂದ ಕೂಡಿದ ಮುಖದಲ್ಲಿ, ಪರಕಲಿಸಿದ–ಹರಡಿದ, ಕಾಡಿಗೆವೆರಸು–ಕಾಡಿಗೆಯ ಸಮೇತವಾಗಿ, ಅರಿಕೇಸರಿ, ತಾಯ ಮನಮಂ–ತಾಯಿಯಾದ ಕುಂತಿಯ ಮನಸ್ಸನ್ನು, ಇಟ್ಟುಕೊಳಿಗೊಂಡಂ–ಎಳೆದುಕೊಂಡನು, ಆಕರ್ಷಿಸಿದನು.

೯. ಒಗೆತರ್ಪ–ಹುಟ್ಟುತ್ತಿರುವ, ಪಲ್ಗಳ್–ಹಲ್ಲುಗಳು, ಆ ನಗೆಮೊಗದ–ಆ ನಗುಮುಖದ, ಸರಸ್ವತಿಯುಂ–ವಾಗ್ದೇವತೆಯನ್ನು, ಅನಗಳರ್ಚಿಸಿದ–ಆಗ ಪೂಜೆ ಮಾಡಿದ, ಪೊದಳ್ದ–ಹರವಿದ, ಅಗಲದ–ಆಗಲವಾಗಿರುವ, ಮೊಲ್ಲೆಯ ಮುಗು ಳ್ಗಳಂ–ಮೊಲ್ಲೆಯ ಮೊಗ್ಗುಗಳನ್ನು, ಇಳಿಸಿರೆ–ತಿರಸ್ಕರಿಸಲು, ಗುಣಾರ್ಣವಂ–ಅರ್ಜುನನು, ಸೊಗಯಿಸಿದಂ–ಚೆಲುವಾದನು.

೧೦. ಕರಿಕಳಭಂಗಳ–ಆನೆಯ ಮರಿಗಳ. ಶಿಶುಕೇಸರಿಗಳ–ಮರಿಸಿಂಹಗಳ, ಬಱಿಯಂ–ಹಿಂದುಗಡೆ, ತಗುಳ್ದು–ಅಟ್ಟಿಸಿಕೊಂಡು ಹೋಗಿ, ಬಡವುಗಳಸವಂ–ಆ ಬಡಪ್ರಾಣಿಗಳನ್ನು, ತಿರಿಪಿ ಪಿಡಿಯುತ್ತಂ–ತಿರುಗಿಸಿ ಹಿಡಿಯುತ್ತ, ಅರಿಗಂ–ಅರಿಕೇಸರಿ, ಪರಿಪಾಡುವ–ಓಡಿಯಾಡುವ, ಸಮವಯಸ್ಕರೊಳ್–ಸಮಾನ ವಯಸ್ಕರಾದ ಹುಡುಗ ರೊಡನೆ, ಸೊಗಯಿಸಿದಂ–ಸೊಗಸಾದನು.

೧೧. ದೆಯ್ವಬಲಂ–ದೈವಶಕ್ತಿಯೂ, ಸೊಗಸಿಕೆ-ಸೊಗಸೂ, ಮುಂಗೆಯ್ವಬಲಂ –ಮುಂದಿನ ಕಾಲಗಳಲ್ಲಿ ಮಾಡುವ ಸಾಮರ್ಥ್ಯವೂ, ಬಾಳಕಾಲದೊಳ್‌ತೊಡರ್ದ–ಶಿಶುತನದಲ್ಲಿಯೇ ಸೇರಿದ, ಪೊಡರ್ದ–ಸ್ಫುರಿಸುತ್ತಿರುವ, ಬಾಲಕ್ರಿಯೆಯುಂ–ಬಾಲ ಕ್ರೀಡೆಯೂ, ತಾಯುಮಂ ತಂದೆಯುಮಂ–ತಾಯನ್ನೂ ತಂದೆಯನ್ನೂ, ಮುಯ್ವಂ ನೋಡಿಸಿತು–ತಮ್ಮ ಹೆಗಲುಗಳನ್ನು ತಾವು ನೋಡಿಕೊಳ್ಳುವ ಹಾಗೆ ಮಾಡಿತು. ಎಂದರೆ ಇಂಥ ಮಕ್ಕಳು ಇದ್ದಾರಲ್ಲಾ ಎಂದು ಸಂತೋಷಿಸುವ ಹಾಗೆ ಮಾಡಿತು.

ವಚನ: ಇಟ್ಟುಕೊಳಿಗೊಳಿಸಿಯುಂ–ಆಕರ್ಷಿಸಿಯೂ; ಅರಾತಿ ಜನಂಗಳ–ಶತ್ರು ಗಳ; ಅಸುಂಗೊಳಿಸಿಯುಂ–ಪ್ರಾಣಾಪಹಾರವನ್ನು ಮಾಡಿಯೂ; ಇಲ್ಲಿ ಅಸುಂ ಗೊಳಿಸು ಎಂಬ ಶಬ್ದದ ಅರ್ಥ ವಿಚಾರಣೀಯ, ಅಸುಂಗೊಳ್–ಪ್ರಾಣಾಪಹರಣೇ ಎನ್ನುತ್ತಾನೆ ಕೇಶಿರಾಜ. ಮನಮಂ ಅಸುಂಗೊಳಿ–ಮನಸ್ಸನ್ನು ಪ್ರಾಣಾಪಹರಣ ಮಾಡಲು ಎಂದರೆ ಅರ್ಥಸ್ಪಷ್ಟತೆ ಇಲ್ಲ; ಆದ್ದರಿಂದ ಇಲ್ಲಿ ಅಸುಂಗೊಳ್ ಎಂಬುದಕ್ಕೆ ಬೇರೆ ಅರ್ಥವಿರಲು ಸಾಧ್ಯ. ಮನಂಗೊಳ್–ಮನವನ್ನಾಕ್ರಮಿಸು, ಮೋಹಕವಾಗು ಎಂಬುದರಂತೆ, ಅಸುಂಗೊಳ್–ಅಸುವಂಕೊಳ್, ಚೇತನಕ್ಕೆ ಆಕರ್ಷಕವಾಗಲು, ಸಚೇತನವನ್ನಾಗಿ ಮಾಡು ಎಂಬರ್ಥವಿರಬಹುದು; ಅಥವಾ ಅಸುವಿಂ (=ಆಶುವಿಂ –ವೇಗದಿಂದ) ಕೊಳ್–ಆಕ್ರಮಿಸು ಎಂದೂ ಆಗಬಹುದು; ಮನವನ್ನು ವೇಗದಿಂದ ಆಕ್ರಮಿಸಿ ಎಂದರ್ಥವಾಗಬಹುದು.

೧೨. ಇಲ್ಲಿಂದ ಮುಂದಕ್ಕೆ ಪದ್ಯ ೧೫ ಪೂರ್ತಿ ವಸಂತಕಾಲದ ವರ್ಣನೆ: ಅಲರ್ದ ದಿಮುರ್ತತ್ತೆ–ಅರಳಿದ ಅದಿಮುರ್ತತ್ತೆಯೆಂಬ ಹೂವು; ಪೂತ ಪೊಸಮಲ್ಲಿಗೆ-

ಹೂಬಿಟ್ಟ ಹೊಸಮಲ್ಲಿಗೆ, ಕಂಪಂ ಆವುಂಕುತಿರ್ಪ–ಹೂಗಳಿಂದ ಕಂಪನ್ನು ಅಮುಕಿ ತೆಗೆಯುತ್ತಿರುವ, ತೆಂಬೆಲರ್–ತೆಂಕಣಗಾಳಿಯು; ಇದಂ ಗೆಲಲ್‌ಬಗೆವ ತುಂಬಿ–ಈ ಗಾಳಿಯನ್ನು ಗೆಲ್ಲಲು ಯೋಚಿಸುತ್ತಿರುವ ದುಂಬಿ; ಗಳಧ್ವನಿಯಿಂ–ಕೊರಳಿನ ನಾದದಿಂದ, ಕುಕಿಲ್ವ–ಕುಕಿಲ್ ಎಂದು ಶಬ್ದಮಾಡುವ, ಕೋಗಿಲೆ; ಸಸೆದೋಱ–ಹೂವನ್ನು ಪ್ರದರ್ಶಿಸಿ, ನುಣ್ಪೆಸೆವ ಮಾಮರಂ–ನಯವಾಗಿ ಸೊಗಸಾಗಿರುವ ಮಾವಿನ ಮರ; ಒರ್ಮೊದಲಲ್ಲದೆ–ಒಂದೇ ಸಲಕ್ಕಲ್ಲದೆ, ಬಾರಿಬಾರಿಗೆ, ಉಣ್ಮುವ–ಚಿಮ್ಮುವ, ಉಯ್ಯಲ–ಉಯ್ಯಾಲೆಯ, ಪೊಸಗಾವರಂ–ಹೊಸದಾದ ನಾದವು, ಬಸಂತಮಾಸದೊಳ್ ಪುಗಿಲೊಳ್–ವಸಂತಋತುವಿನ ಪ್ರವೇಶದಲ್ಲಿ, ಏನೆಸೆದತ್ತೋ–ಏನು ಸೊಗಸಾಯಿತೊ! ಅದಿರ್ಮುತ್ತೆ ಎಂಬ ಹೂ ವಸಂತಾರಂಭದಲ್ಲಿ ಅರಳುತ್ತದೆ; ಇದಕ್ಕೆ ವಸಂತದೂತಿ ಎಂದು ಮತ್ತೊಂದು ಹೆಸರು. ಏಕೆಂದರೆ ಇದು ವಸಂತಾಗಮನವನ್ನು ಸೂಚಿಸುತ್ತದೆ. "ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂಚೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿಕೊಟ್ಟೆಯೆಂದು" ಎಂದು ಅಗ್ಗಳನ ಪ್ರಯೋಗ.

**ವಚನ:** ಬರವಿಂಗೆ–ಬರುವಿಕೆಗಾಗಿ, ಆಗಮನಕ್ಕಾಗಿ; ಗುಡಿಗಟ್ಟಿದಂತೆ–ಬಾವುಟಗಳನ್ನು ಕಟ್ಟಿದಹಾಗೆ; ಬಳ್ವಳಬಳೆದ–ಕೋಮಲವಾಗಿ ಬೆಳೆದ; ಮಿಳಿರ್ವ–ಅಲುಗಾಡುವ; ತಳಿರ್ಗಳುಂ–ಚಿಗುರುಗಳೂ; ತೋರಣಂಗಟ್ಟಿದಂತೆ–ತೋರಣವನ್ನು ಕಟ್ಟಿದಹಾಗೆ, ಬಂದ ಮಾಮರಂಗಳ–ಹಣ್ಣುಕಾಯಿ ಬಿಟ್ಟ ಮಾವಿನ ಮರಗಳನ್ನು, "ಬಂದ ಮಾವೆಂದು ಫಲಿತರಸಾಲಂ", ಅಡರ್ದು ತೊಡರ್ದು–ಹತ್ತಿ ತೊಡಕಾಗಿ: ಎಳಗೊಂಬುಗಳ್ವಿಡಿದು–ಎಳೆಯ ಕೊಂಬುಗಳನ್ನು ಹಿಡಿದು; ದಾಂಗುಡಿವಿಡುವ–ದಾಟುವ ಕುಡಿಯನ್ನು ಚಾಚುವ; ದಾಮ+ಕುಡಿ–ಹಗ್ಗದಂತೆ ಉದ್ದವಾಗಿರುವ ಕುಡಿಯನ್ನು ಚಾಚುವ, ನೆಱೆಯೆ–ಪೂರ್ಣವಾಗಿ; ಕೆಯ್ಗೆಯ್ದ–ಸಿಂಗರಿಸಿಕೊಂಡ; ತುಱುಗಲೊಳ್–ಗುಂಪಿನಲ್ಲಿ; ತುಱುಗಿದ–ಗುಂಪಾದ; ಬದ್ದವಣಂ ಬಾಜಿಪಂತೆ–ಮಂಗಳವಾದ್ಯವನ್ನು ಬಾರಿಸುವಹಾಗೆ; ಕೆಱೆವೂಗಳುಂ–ಕಳಿತ ಹೂವುಗಳೂ, ನಿಱಿನಿಱಿಗೊಂಡು–ನಿರಿಗೆನಿರಿಗೆಯಾಗಿ, ನಿಜಗನ–ಸಿಹಿಮಾವಿನ; ನಿಱಿದಳಿರ–ನಿರಿಗೆಯಾದ ಚಿಗುರಿನ: ಮೇಲ್ವಾಯೆ–ಮೇಲೆ ನುಗ್ಗಲು; ಕಳಿಕಾಂಕುರಂಗಳುಂ–ಚಿಗುರು ರೆಂಬೆಗಳ ಟಿಸಲುಗಳ ಮೊಳಕೆಗಳು; ಉಗುವಂತೆ–ಸುರಿಯುವಹಾಗೆ; ಸೊನೆಯು–ಮರದ ರಸ, ಹಾಲು; ತೊಟ್ಟುವೆಸಂಗೆಯ್ಸಿದುವು–ತೊತ್ತಿನ ಕೆಲಸವನ್ನು ಮಾಡಿಸಿದವು.

೧೩. ಬಿರಯಿಯ–ವಿಯೋಗಿಗಳ ಎಂದರೆ ಪರಸ್ಪರ ಅಗಲಿದ ಪ್ರೇಮಿಗಳ, ಮಿಟ್ಟುವೆಂ–ಮೃತ್ಯುವಾಗಿದ್ದೇನೆ. ಮಿದಿದೊಡಲ್ಲದೆ–ಕುಟ್ಟಿದಹೊರತು ಎಂದರೆ ವಿರಹಿಗಳನ್ನು ಚಚ್ಚಿದಹೊರತು, ಮುಳಿಸು–ನನ್ನ ಕೋಪವು, ಆಱದು–ಶಾಂತವಾಗದು, ಎಂದು, ಮನ್ಮಥಂ–ಕಾಮನು, ಇಲ್ಲಿ–ಈ ನಂದನದಲ್ಲಿ, ಪಲ್ಮೊರೆದಪಂ–ಹಲ್ಲನ್ನು

ಮಸೆದು ಶಬ್ದಮಾಡುತ್ತಾನೆ; ಬೇಟಿಕಾಜಿರಂ–ಪ್ರಣಯಿಗಳನ್ನು, ಇದಂ-ಈ ಉದ್ಯಾನವನ್ನು, ಪುಗಲಿಂ ಗಡಿಮೆಂದು–ಪ್ರವೇಶಿಸಬೇಡಿರಿ, ದಿಟವಾಗಿಯೂ ಎಂದು, ಇರದೆ–ಬಿಡದೆ, ಊಜಿಸಾಜಿ–ಬಲಾತ್ಕಾರವಾಗಿ ಕೂಗಿಹೇಳಿ, ಜಡಿವಂತೆ–ಗದರಿಕೊಳ್ಳುವ, ಹಾಗೆ, ಸಹಕಾರಕೋಮಳಾಂಕುರ ಪರಿಪುಷ್ಟತುಷ್ಟ ಪರಪುಷ್ಟಗಳಧ್ವನಿ–ಮಾವಿನ ಮರದ ಎಳೆಯದಾದ ಚಿಗುರುಗಳನ್ನು ತಿನ್ನುವುದರಿಂದ ಕೊಬ್ಬಿ ತೃಪ್ತಿಪಟ್ಟ ಕೋಗಿಲೆಗಳ ಕೊರಳ ನಾದ, ನಂದನಂಗಳೊಳ್–ತೋಟಗಳಲ್ಲಿ, ಎಸೆಗುಂ–ಪ್ರಕಾಶಿಸುತ್ತದೆ.

೧೪. ಕವಿವ–ಮುತ್ತಿಕೊಳ್ಳುವ, ಮದಾಳಿಯಿಂ–ಸೊಕ್ಕಿದ ದುಂಬಿಗಳಿಂದ, ಮಸುಳನಾಗಿ–ಮಾಸಿದವನಾಗಿ, ಪಯೋಜ ರಜಂಗಳೊಳ್–ತಾವರೆಯ ಪರಾಗದಲ್ಲಿ, ಕವಿಲ್ ಕವಿಲನುಮಾಗಿ–ಮಾಸಲುಗೆಂಪು ಬಣ್ಣವುಳ್ಳವನಾಗಿ, ಬಂದ ಮಲಯಾನಿಲಂ–ತಲೆದೋರಿದ ಮಲಯ ಮಾರುತವು, ಊದೆ–ಬೀಸಲು, ತೆರಳ್ದ–ಅಲ್ಲಾಡುವ, ಚೂತಪಲ್ಲವದ ತೆರಳ್ಕೆ–ಮಾವಿನ ಚಿಗುರಿನ ಅಲುಗಾಟ, ತದ್ವನ–ಆ ವನವೆಂಬು ವಿಲಾಸಿನಿಯುಟ್ಟ–ಸ್ತ್ರೀಯು ಉಟ್ಟುಕೊಂಡ, ದುಕೂಲದೊಂದು-ಒಂದು ರೇಷ್ಮೆಸೀರೆಯ, ಪಲ್ಲವದ–ಸೆರಗಿನ, ತೆರಳ್ಕೆಯಂತೆಸೆಯೆ–ಅಲುಗಾಟದಂತೆ ಪ್ರಕಾಶಿಸಲು, ನಂದನಾಳಿಗಳ್–ಉದ್ಯಾನವನಗಳ ಸಾಲು, ಕಣ್ಗೆಸೆದಿರ್ದುವು–ಕಣ್ಣಿಗೆ ಸೊಗಸಾದುವು. (ಸಂ) ಕಪಿಲಾ < ಕವಿಲ್ ; "ಕವಿವ ಕುಬೇರಧೂಪದ ಕವಿಲ್ಪೊಗೆಯಂ ನವಮೇಘ ಮಾಲಿಕಾ ನಿವಹಮೆಗೆತ್ತು" ಎಂದು ಪ್ರಯೋಗವುಂಟು.

೧೫. ಪೋಗದೆ–ಹೋಗದೆ, ತೊಲಗದೆ, ಪಾಡುತಿರ್ಪ–ಹಾಡುತ್ತಿರುವ, ಅಳಿಯೆ–ದುಂಬಿಯೆ, ಬೃಂಹಿತಮಾಗಿರೆ–ಆನೆಯ ಘೀಂಕಾರವಾಗಿರಲು; ಚಂದ್ರಕಾಂತಿ–ಚಂದ್ರನ ಕಾಂತಿ, ಕಾಯ್ಪಾಗಿರೆ–ಕೋಪವಾಗಿರಲು, ಬೀಸುವೊಂದೆಲರೆ–ಬೀಸುವ ಒಂದು ಗಾಳಿಯೇ, ಬೀಸುವುದಾಗಿರೆ–ಬೀಸುವುದು ಎಂದರೆ ಬೀಸಣಿಗೆಯಾಗಿರಲು, ಕಾಯ್ಗಳಿಂದಂ–ಕಾಯಿಗಳಿಂದ, ಇಂಬಾಗಿರೆ–ಸೊಗಸಾಗಿರುವಂತೆ, ಸೋರ್ವಸೋನೆ–ಸುರಿಯುವ ಸೋನೆಯು, ಮದಮಾಗಿರೆ–ಮದದ ನೀರಾಗಿರಲು, ಮಾವಿನ, ಬಂದಕೋಡೆ–ಹುಟ್ಟಿದ ಕೊಂಬೆಯೇ, ಕೋಡಾಗಿರೆ–ದಂತವಾಗಿರಲು, ವಸಂತಗಜಂ–ವಸಂತಕಾಲವೆಂಬ ಆನೆ, ವಿಯೋಗಿಯಂ–ಅಗಲಿದವರನ್ನು, ಕೋಡುಗೊಂಡು–ದಂತದಿಂದ ತಿವಿದು, ಪರಿದತ್ತು–ಓಡಿತು.

**ವಚನ :** ಗರ್ವವ್ಯಾಲೆಯುಂ–ಗರ್ವದಿಂದ ತೊಂಡಾದವಳೂ; ಕ್ರೀಡಾನುಶೀಲೆಯುಂ–ಕ್ರೀಡೆಯಲ್ಲಿ ಆಸಕ್ತಿಯುಳ್ಳವಳೂ, ವನಕ್ರೀಡಾನಿಮಿತ್ತಂ–ಕಾಡಿನಲ್ಲಿ ವಿಹರಿಸುವ ಕಾರಣವಾಗಿ,

೧೬. ವನಕುಸುಮಂಗಳಂ–ಕಾಡುಹೂಗಳನ್ನು, ಬಗೆಗೆವಂದುವಂ–ಮನಸ್ಸಿಗೆ ಬಂದವುಗಳನ್ನು, ಅಟ್ಟಿಯೊಳ್–ಪ್ರೀತಿಯಲ್ಲಿ, ಆಯ್ದು–ಆರಿಸಿಕೊಂಡು, ಕೊಯ್ದು–ಬಿಡಿಸಿ, ಮೆಲ್ಲನೆ–ಮೃದುವಾಗಿ, ವಕುಳಾಳವಾಳತಳದೊಳ್–ಬಕುಳ ವೃಕ್ಷದ ಪಾತಿಯ ಪ್ರದೇಶದಲ್ಲಿ, ಸುರಿದು, ಅಂಬುಜಸೂತ್ರದಿಂದೆ–ತಾವರೆಯದಂಟಿನ ನೂಲಿನಿಂದ,

ಮತ್ತನಿತಜಸೊಳಂ–ಮತ್ತೆ ಅಷ್ಟು ಹೂಗಳಲ್ಲೂ, ಮುಗುಳ್ಸರಿಗೆ–ಮೊಗ್ಗಿನ ಸರಿಗೆ, ತೋಳ್ವಳೆ–ತೋಳಿನ ಬಳೆ, ಕಂಕಣಂ–ಬಳೆಗಳು, ಆರಂ–ಹಾರಗಳು, ಎಂದು–ಎಂಬುದಾಗಿ, ಬೇೞ್ಪನಿತನೆ–ಬೇಕಾಗುವಷ್ಟನ್ನು, ಮಾಡಿತೊಟ್ಟು–ಮಾಡಿ ಅಲಂಕರಿಸಿಕೊಂಡು, ಆಕೆ, ಬಸಂತಕಾಂತೆವೊಲ್–ವಸಂತರಾಜನ ರಮಣಿಯಂತೆ, ಕರಂ–ವಿಶೇಷವಾಗಿ, ಒಪ್ಪಿದಳ್–ಶೋಭಿಸಿದಳು.

ವಚನ. ಪೂದುಡುಗೆ–ಹೂವಿನಿಂದ ಮಾಡಿದ ಆಭರಣಗಳು; ಮದನನ ತೊಟ್ಟ–ಮನ್ಮಥನು ಸಂಧಾನಮಾಡಿದ; ಪೂಗಣೆಗೆ–ಹೂವಿನ ಬಾಣಕ್ಕೆ, ಎಣೆಯಾಗೆ–ಸಮಾನವಾಗಲು.

೧೭. ಮಿಳಿರ್ವ–ಅಲುಗಾಡುತ್ತಿರುವ, ಕುರುಳ್ಗಳೊಳ್–ಕೂದಲುಗಳಲ್ಲಿ, ತೊಡರ್ದು–ಸಿಕ್ಕಿಕೊಂಡು, ದೇಸಿಯಂ–ಚೆಲುವನ್ನು, ಅವಗಂ–ಪೂರ್ಣವಾಗಿ, ಈವ–ಕೊಡುವ, ಚೆನ್ನ ಪೂಗಳಸವಂ–ಚೆಲುವಾದ ಆ ಹೂವುಗಳನ್ನು; ಒಯ್ಯನೆ–ಮೆಲ್ಲನೆ, ಓಸರಿಸುತ್ತುಂ–ಒಂದು ಪಕ್ಕಕ್ಕೆ ತಳ್ಳುತ್ತ, ವದನಾಬ್ಜದ–ಮುಖಕಮಲದ, ಕಂಪಂ–ಸುಗಂಧವನ್ನು, ಅಳ್ಕಿ ಉಣಲ್–ಪಡೆದುಣ್ಣುವುದಕ್ಕೆ, ಬಳಸುವ–ಮುತ್ತಿಕೊಳ್ಳುವ, ತುಂಬಿಯಂ-ದುಂಬಿಯಂ, ಪಿಡಿದ ಸೆಯ್ದಿಲೊಳ್–ಹಿಡಿದುಕೊಂಡ ಸೆಯ್ದಿಲೆ ಹೂವಿನಿಂದ, ಒಯ್ಯನೆ ಸೋವುತುಂ–ಮೆಲ್ಲಗೆ ಅಟ್ಟಿಬಿಡುತ್ತ, ಬೆಡಂಗೊಳಕೊಳೆ–ಸೊಗಸನ್ನು ಪಡೆದಿರಲು, ಸೊರ್ಕಿದ–ಸೊಕ್ಕಿದ, ಅಂಗಜ ಮತಂಗಜದಂತಿರೆ–ಮನ್ಮಥನ ಮದ್ದಾನೆಯ ಹಾಗೆ, ಬರ್ಪ–ಬರುವ, ಮಾದ್ರಿಯಂ–ಮಾದ್ರಿಯನ್ನು.

ವಚನ: ಪೊಱಮಟ್ಟು–ಹೊರಕ್ಕೆ ಬಂದು; ತೊೞಲ್ವ–ಸುತ್ತಾಡುವ;

೧೮. ತೊಟ್ಟ ಪೂದುಡುಗೆ–ತಾಳಿದ ಹೂವಿನಲಂಕಾರ, ಸೊಗಯಿಸೆ–ಸುಂದರವಾಗಲು, ಮೆಲ್ಲಿರ್ದೆಯೊಳ್–ಕೋಮಲವಾದ ಎದೆಯಲ್ಲಿ, ಗಾಡಿ–ಸೌಂದರ್ಯವು, ತಡಮಾಡೆ–ಮೆಲ್ಲಗೆ ಆಡುತ್ತಿರಲು, ದಿಟ್ಟಿಗಳೊಳ್–ಕಣ್ಣುಗಳಲ್ಲಿ, ಅನಂಗರಾಗರಸಂ–ಕಾಮಪ್ರೇಮದ ರಸವು, ಉಣ್ಮುವಿನಂ–ಚಿಮ್ಮುತ್ತಿರಲು, ನಡೆನೋಡಿ ನೋಡಿ–ಕಣ್ಣು ನಾಟಿ ನೋಡಿ, ತೊಟ್ಟಗೆ–ಬೇಗನೆ, ಕೊಳೆ–ಹಿಡಿಯಲು, ಮೇಲೆ ಪಾಯ್ದುವಳಂ–ಮೇಲೆ ನುಗ್ಗಿದ ಅವಳನ್ನು, ಆವಿಭು–ಆ ಪಾಂಡುರಾಜ, ತನ್ನ ಶಾಪಮುಂ ಬಗೆಯದೆ–ತನಗೆ ಬಂದ ಶಾಪವನ್ನು ಲೆಕ್ಕಿಸದೆ, ಮೃತ್ಯುದೇವತೆಯಂ–ಮೃತ್ಯುದೇವತೆಯನ್ನು, ಅಬ್ಕಿಱಳುರ್ಕೆಯಿಂ–ಪ್ರೀತಿಯ ಅತಿಶಯದಿಂದ, ಅಪ್ಪುವಂತೆವೋಲ್–ಅಪ್ಪಿಕೊಳ್ಳುವ ಹಾಗೆ, ಅಪ್ಪಿದಂ–ತಬ್ಬಿಕೊಂಡನು. ಇಲ್ಲಿ ಮಾದ್ರಿಯ ವಿಲಾಸ, ಪಾಂಡುವಿನ ಮನಸ್ಸು ಆಕೃಷ್ಟವಾಗಿ ಅವನ ಸಂಯಮದ ಏರಿ ಬಿರಿದದ್ದು, ಪ್ರೇಮ ಹೊನಲಾಗಿ ಹರಿದದ್ದು, ಅದರ ಪರಿಣಾಮ–ಇವೆಲ್ಲ ಧ್ವನಿಮಯವಾಗಿ ಚಿತ್ರಿತವಾಗಿವೆ, ಅಯ್ಯೋ ಪಾಂಡು ಏಕೆ ಹೀಗೆ ಮಾಡಿದನೋ ಎಂಬ ಸಂತಾಪವುಂಟಾಗುತ್ತದೆ. ತಡಮಾಡೆ–ತಡಂ (ಸಾವಕಾಶವಾಗಿ, ನಿಧಾನವಾಗಿ) + ಆಡೆ, ಅಳುರ್ಕೆ > ಅಳುರ್ + ಕೆ, ವ್ಯಾಪ್ತಿ, ಅತಿಶಯ.

**ವಚನ:** ವಿಷಮ ವಿಷವಲ್ಲಿಯನಪ್ಪಿದಂತೆ–ಕೇಡುಂಟುಮಾಡುವ ವಿಷದ ಬಳ್ಳಿಯನ್ನು ತಬ್ಬಿಕೊಂಡಂತೆ; ತಳ್ತ–ಸೇರಿದ; ನಲ್ಲಳ–ಪ್ರಿಯಳ; ಮೃದುಮೃಣಾಳ ಕೋಮಳಬಾಹು ಪಾಶಂಗಳೆ–ಮೃದುವಾದ ತಾವರೆ ದಂಟಿನಂತೆ ಲಲಿತವಾಗಿರುವ ತೋಳುಗಳೆಂಬ ಹಗ್ಗಗಳೇ, ಯಮಪಾಶಂಗಳಾಗೆ–ಯಮನಪಾಶವಾಗಲು.

೧೯. ಬಿಗಿದಪುರ್ದಿರ್ದ–ಬಿಗಿಯಾಗಿ ಸೇರಿಕೊಂಡಿದ್ದ, ತೋಳ್–ತೋಳು, ಸಡಿಲೆ–ಸಡಿಲವಾಗಲು, ಮೊಗಂ–ಮುಖವು, ಜೋಲೆ–ಜೋತು ಬೀಳಲು, ಮೊಗದಿಂದಂ–ಮುಖದಿಂದ, ಒಯ್ಯಗೊಯ್ಯಗೆ–ಮೆಲ್ಲಮೆಲ್ಲನೆ, ನಗೆಗಣ್ಗಳ್–ನಗುತ್ತಿದ್ದ ಕಣ್ಣುಗಳು, ಆಲಿಮುಗುಳ್ದಿಂತಿರೆ–ಕಣ್ಣ ಪಾಪೆಗಳು ಹಿಂಜರಿದಿರಲು, ಮುಚ್ಚಿರೆ–ಮುಚ್ಚಿಕೊಂಡಿರಲು, ಸುಯ್ಯಡಂಗೆ–ಉಸಿರಾಟ ನಿಂತುಹೋಗಲು, ಮೆಲ್ಲಗೆ–ನಿಧಾನವಾಗಿ, ಮೆಱಸೊಂದಿದಂದದೊಳ್–ಮೈಮರವನ್ನು ಹೊಂದಿದ ಹಾಗೆ, ಪ್ರಜ್ಞೆ ತಪ್ಪಿದಂತೆ, ಜೋಲ್ದ–ಜೋತು ಬಿದ್ದ, ನಿಜೇಶನನಾ ಲತಾಂಗಿ–ತನ್ನ ಪತಿಯನ್ನು ಆ ಮಾದ್ರಿ, ತೊಟ್ಟಗೆ ಕೊಳೆನೋಡಿ–ಬೇಗನೆ ಕಣ್ಣಲ್ಲಿಯೇ ಕುಡಿಯುವಂತೆ ನೋಡಿ, ಕೆಟ್ಟೆಂ–ನಾನು ಕೆಟ್ಟುಹೋದೆನು, ಇನಿಯಂ–ಪತಿಯು, ಮೆಱಸೊಂದಿದನೋ–ಮೂರ್ಛೆ ಹೊಂದಿದನೋ, ಬಱಲ್ದನೋ–ಸುಸ್ತಾದನೋ;

**ವಚನ:** ಎಂದು–ಎಂದು ಭಾವಿಸಿ, ಪಱಪಟ್ಟ ಸುಯ್ಯುಮಂ–ಕತ್ತರಿಸಿಹೋದ, ನಿಂತುಹೋದ ಉಸಿರನ್ನೂ, ಕೋಡುವ–ತಣ್ಣಗಾಗುವ, ಮೈಯುಮಂ–ಮೈಯನ್ನೂ, ಪರಲೋಕ ಪ್ರಾಪ್ತನಾದುದನಱತು–ಸತ್ತನೆಂದು ತಿಳಿದು. ಮೇಲಿನ ಪದ್ಯದಲ್ಲಿನ ಪಾಂಡುವಿನ ಮರಣದ ವರ್ಣನೆ ತುಂಬ ಸಹಜವಾಗಿದೆ; ಆ ಚಿತ್ರವನ್ನು ಎಷ್ಟು ಪರಿಭಾವಿಸಿದರೂ ಸಾಲದು.

೨೦. ಓವನೆ–ಪ್ರಿಯನಾದ ಪಾಂಡುವೆ, ತಾಪಸನ ಶಾಪಮೆಂಬುದು–ಋಷಿ ಶಾಪವೆನ್ನುವುದು; ಪಾಪದ ರೂಪು–ಪಾಪದ ಆಕಾರವು, ಎಂದರೆ ಪಾಪವೇ ಮೂರ್ತಿಮತ್ತಾಗಿರುವುದು; ಅಱತುಮಱಿಯದಂತೆ–ತಿಳಿದೂ ತಿಳಿಯದ ಹಾಗೆ, ಮನಂಗಾಪಱದು–ಮನಸ್ಸಿನ ರಕ್ಷೆಯನ್ನು ಹೋಗಲಾಡಿಸಿಕೊಂಡವನಾಗಿ, ಎಂದರೆ ಮನದ ಸಂಯಮವನ್ನು ಮೀರಿ, ಪಾಪಕರ್ಮಿಯ–ಪಾಪಿಷ್ಠಳಾದ, ಎನ್ನ–ನನ್ನ, ಮೈಯುಂ–ಮೈಯನ್ನು ಬಂದು, ಏಕೆ ಮುಟ್ಟಿದೆ–ಏಕೆ ಸೋಕಿದೆ, ಅಯ್ಯೋ! ಮನದ+ಕಾಪು=ಮನಂಗಾಪು; ಓ–ಸ್ನೇಹೇ ಎಂಬುದರಿಂದ ಓವ ಶಬ್ದ ಬರುತ್ತದೆ.

೨೧. ನೀಂ–ನಿನ್ನ, ಸಾವಂ–ಮರಣವನ್ನು, ಎನಸುಂ ನೆನೆಯದೆ–ಎಷ್ಟೂ ನೆನಪುಕೊಳ್ಳದೆ, ನೆರೆವೆನ್–ಒಡಗೂಡುತ್ತೇನೆ, ಎಂಬ ಬಗೆಯೊಳ್–ಎಂಬ ಮನಸ್ಸಿನಿಂದ, ಬಂದೈ–ಬಂದಿದ್ದೀಯೆ, ನಿನ್ನೊಡನೆ–ನಿನ್ನ ಜೊತೆಯಲ್ಲಿ, ಪಂದು–ಬಂದು ದಿವದೊಳ್–ಸ್ವರ್ಗದಲ್ಲಿ, ನಿನ್ನ, ಮನೋರಥಮಂ–ಅಭಿಲಾಷೆಯನ್ನು, ಅರಸ–ದೊರೆಯೇ, ನೆಱಪದೆ–ಪೂರ್ಣಮಾಡದೆ, ಮಾಣೆಂ–ಬಿಡೆನು.

೨೨. ಬಿದಿಯೆ–ವಿಧಿಯೇ, ದೈವವೇ, ಉನ್ನತಧವಳಚ್ಛತ್ರಚ್ಛನ್ನವಿಯತ್ತಳನಂ

–ಎತ್ತರವಾದ, ಬಿಳಿದಾದ, ಛತ್ರಿಯಿಂದ ಮುಚ್ಚಿದ ಆಕಾಶವುಳ್ಳವನನ್ನು ಎಂದರೆ ರಾಜಚಿಹ್ನಸೂಚಕಶ್ವೇತಚ್ಛತ್ರಿಯನ್ನುಳ್ಳವನನ್ನು, ಇಂದುಕುಳತಿಳಕನಂ – ಚಂದ್ರ ವಂಶಕ್ಕೆ ಶ್ರೇಷ್ಠನಾದವನನ್ನು, ಇಂತು–ಹೀಗೆ, ಈ ಪೞುವಿನೊಳ್–ಈ ಕಾಡಿನಲ್ಲಿ, ಎನ್ನ, ಅರಸನಂ–ದೊರೆಯನ್ನು, ತಂದಿಕ್ಕುವುದೇ–ತಂದು ಎಸೆಯುವುದೇ, ಹಾಕುವುದೇ ?

**ವಚನ:** ಪಳಯಿಸುವ–ಪ್ರಲಾಪಿಸುವ, ಅಳುವ, ಸರಮಂ–ಸದ್ದನ್ನು ; ಭೋಂಕನೆ–ಇದ್ದಕ್ಕಿದ್ದಂತೆ, ಜೇಗನೆ, ಎರ್ದೆಡೆಱೆದು–ಎದೆಬಿರಿದು.

**೨೩.** ಕುಂತಿಯು ಚಿಂತೆಯನ್ನು ಈ ಪದ್ಯದಲ್ಲಿ ನಿರೂಪಿಸಿದೆ. ಆ ದೆಸೆಯೊಳ್ ಭೂಭುಜನೋ–ಆ ದಿಕ್ಕಿನಲ್ಲಿ ರಾಜನು ಹೋದನೋ, ಆ ದೆಸೆಯೊಳ್–ಆ ದಿಕ್ಕಿನಲ್ಲಿ, ಮಾದ್ರಿ–ಮಾದ್ರಿಯು ; ನೆಗೆವ ಕರುಣಾರವಂ–ಹಾರಿ ಬರುತ್ತಿರುವ ದುಃಖದ ಧ್ವನಿ, ಆ ದೆಸೆಯೊಳ್–ಆ ದಿಕ್ಕಿನಲ್ಲಿ, ಭೂಪತಿಗೆ–ರಾಜನಿಗೆ, ಬಿದಿಯೆ–ವಿಧಿಯೇ, ಏನಾದುದೋ–ಏನಾಯಿತೋ, ಪೇೞಿರ್-ಹೇಳು, ಕೆಟ್ಟೆಂ, ಅೞಿದೆಂ–ನಾಶವಾದೆ, ಎನುತ್ತುಂ–ಎಂದು ಹೇಳುತ್ತ, ಯಾವದೆಸೆಯಲ್ಲಿ ರಾಜನು ಹೋದನೋ ಆ ದಿಕ್ಕಿನಲ್ಲೇ ಮಾದ್ರಿಯೂ, ಹೋದಳು ; ಆ ದಿಕ್ಕಿನಿಂದಲೇ ಅಳುವ ಧ್ವನಿ ಕೇಳಬಂತು ; ನನ್ನ ದೊರೆಗೆ ಏನಾಗಿದೆಯೋ, ಹಾ, ದೈವವೇ ಎಂದು ದುಃಖಿಸಿದಳು ಕುಂತಿ. ಈ ಪದ್ಯದಲ್ಲಿ ಆ ದೆಸೆಯೊಳ್ ಎಂಬುದಕ್ಕೆ ಮೂರೆಡೆಗಳಲ್ಲಿಯೂ ಆ ದೆಸೆಯದೆ ಎಂದು ಪಾಠಾಂತರವಿದೆ ; ಇದು ಗ್ರಾಹ್ಯವಾಗಬಹುದು.

**೨೪.** ಕುಂತಿ ಪಾಂಡುವಿನ ಸಮೀಪಕ್ಕೆ ಧಾವಿಸಿ ಬರುತ್ತಾಳೆ ; ಮಕ್ಕಳ್, ಬೞಿಯನೆ–ಹಿಂದುಹಿಂದೆಯೇ, ಭೋರ್ಗರೆದು ಅೞುತುಂ–ಭೋರೆಂದು ಶಬ್ದ ಮಾಡಿ ಅಳುತ್ತ, ಪೆಱಪೆಱಗನೆ ಅಂತೆ ಪರಿತರೆ--ಹಾಗೆಯೇ ಬೆನ್ನ ಹಿಂದೆಯೇ ಓಡಿ ಬರಲು, ಮುಡಿ ಬಿಟ್ಟಲೆ–ತುರುಬು ಬಿಚ್ಚಿ ಹೋಗಿ ಕೆಳಕ್ಕೆ ಬಾಗಿರಲು, ನಡುನಡುಗೆ–ಸೊಂಟ ನಡುಗುತ್ತಿರಲು, ಕಣ್ಣೀರ್, ಗೞಗೞನೆ–ಗಳಗಳವೆಂದು, ಒರ್ಮೊದಲೆ-ಒಟ್ಟಿಗೇ, ಸುರಿಯೆ–ಸುರಿಯುತ್ತಿರಲು, ಪರಿತಂದಾಗಳ್-ಓಡಿಬಂದಾಗ.

**ವಚನ:** ಅಂತು, ತನ್ನ, ನಲ್ಲನ–ಇನಿಯನ, ಕಳೇವರಮಂ–ಮೈಯನ್ನು, ಹೆಣವನ್ನು, ತೞ್ಕೈಸಿಕೊಂಡು–ತಬ್ಬಿಕೊಂಡು, ತನ್ನ ಸಾವಂ ಪರಿಚ್ಛೇದಿಸಿ–ತಾನು ಸಾಯುವುದನ್ನು ನಿಶ್ಚಯಿಸಿಕೊಂಡು, ಪಲ್ಲಂಸುಲಿಯುತ್ತಮಿರ್ದ–ಹಲ್ಲನ್ನು ಉಜ್ಜಿ ತೊಳೆದುಕೊಳ್ಳುತ್ತಿದ್ದ, ನಾಡಾಡಿಯಲ್ಲದೆ–ಅಸಾಮಾನ್ಯವಾಗಿ, ವಿಶೇಷವಾಗ, ಪಳಯಿಸಿ–ಅತ್ತು.

**೨೫.** ಎನ್ನುಮಂ–ನನ್ನನ್ನೂ, ಎನ್ನೀ ನಡಪಿದ ಶಿಶುಗಳುಮಂ–ನಾನು ಸಾಕಿದ ಈ ಮಕ್ಕಳನ್ನೂ, ಅಡವಿಯೊಳ್ ಇರಿಸಿ–ಕಾಡಿನಲ್ಲಿ ಬಿಟ್ಟು, ನೀಂ, ಪೇೞದೆ–ಹೇಳದೆ, ಪೋದೊಡಮೇನೊ–ಹೋದರೆ ತಾನೇ ಏನು ; ನಿನ್ನ ಬೞಿಯನೆ–ನಿನ್ನ ಹಿಂದು

ಗಡೆಯೇ; ನಡೆತರ್ಪೆಂ–ಬರುತ್ತೇನೆ. ನಿನ್ನಂ, ಅರಸ, ಬಿಸುಟು–ಬಿಟ್ಟು, ಎಂತಿರ್ಪೆಂ–ಹೇಗಿರುತ್ತೇನೆ? ಇರಲು ಸಾಧ್ಯವಿಲ್ಲವೆಂಬ ಭಾವ.

**ವಚನ:** ಕೈಕೊಂಡು–ಸ್ವೀಕರಿಸಿ, ನಡಪು–ಸಾಕು, ಆನ್ ಆತಂ ಆದುದ ನಪ್ಪೆ–ಆತನಾದುದನ್ನು ನಾನು ಆಗುತ್ತೇನೆ; ಎಂದರೆ ನಾನು ಅವನಂತೆಯೇ ಸಾಯುತ್ತೇನೆ.

**೨೬.** ಮಾದ್ರಿಯ ಮಾತು; ಇಂದಿನ–ಈ ದಿನದ, ಒಂದು, ಸೂೞುಮಂ–ಒಂದು ಸರದಿಯನ್ನು, ಎನಗೆ–ನನಗೆ, ಇನಿಯಂ-ವಲ್ಲಭನು, ದಯೆಗೆಯ್ದಂ–ಕರುಣಿಸಿ ಕೊಟ್ಟನು, ಎನ್ನ ಸೂೞಿಂ–ನನ್ನ ಸರದಿಯನ್ನು, ನಿನಗಾಂ-ನಿನಗೆ ನಾನು, ಎನಿತಾದೊಡಂ ಈವೆನೆ–ಎಷ್ಟಾದರೂ, ಏನಾದರೂ ಕೊಡುತ್ತೇನೆಯೆ? ಇಲ್ಲ. ಮತ್ತ ನಯರ್–ನನ್ನ ಮಕ್ಕಳು, ಕೈಯೆಡೆ–ನಿನಗೆ ನ್ಯಾಸ, ಅವರನ್ನು ನಿನಗೆ ಒಪ್ಪಿಸಿದ್ದೇನೆ. ಪೆಱಪೆಱವಂ-ಬೇರೆಬೇರೆರೀತಿಯಾಗಿ, ಪಲುಂಬದಿರ್–ಹಲುಬದಿರು, ಹಂಬಲಿಸದೆ ಇರು.

**ವಚನ:** ತನ್ನ ಅಣ್ಮಂ ಪೊಗೞೆ-ತನ್ನ ಸಾಹಸವನ್ನು ಹೊಗಳಲು; ದಾಹೋತ್ತರದಂತೆ–?; ಕಂದುಂ ಕುಂದುಂ–ದೋಷವೂ ನ್ಯೂನತೆಯೂ; ತನ್ನೊರೆಗಂ ದೊರೆಗಂ–ತನ್ನಸರಿಸಮಾನಕ್ಕೆ; ತಪೋ ವೃದ್ಧರ್–ಮುದಿ ತಪಸ್ವಿಗಳು;

**೨೭.** ಅೞ್ತೊಡೆ–ಅತ್ತರೆ, ಅವರ್–ಸತ್ತವರು, ಏೞ್ವೊಡಂ–ಏಳುವ ಪಕ್ಷದಲ್ಲಿ, ಕೞಿದವರ್ಗೆ–ಸತ್ತವರಿಗೆ, ಅೞ್ವುದು–ಅಳುವುದು; ಅಂಥವರಿಂ ಬೞಿಕ್ಕೆ–ಹಾಗೆ ಅವರ ಅನಂತರ, ತಾಂ–ತಾವು, ಉೞಿವೊಡಂ–ಉಳಿದುಕೊಳ್ಳುವ ಪಕ್ಷದಲ್ಲಿ, ಅೞ್ವುದು–ಅಳುವುದು ಎಂದು ಅಧ್ಯಾಹಾರ; ಅಂತು–ಹಾಗೆ, ಅವರ್–ಸತ್ತವರು, ಏೞರ್–ಏಳುವುದಿಲ್ಲ, ಅಣಂ–ವಿಶೇಷವಾಗಿ, ತಮಗಂ–ತಮಗೂ, ಬರ್ದುಕಿಲ್ಲ–ಬಾಳುವೆಯಿಲ್ಲ, ಧರ್ಮಮಂ–ಧರ್ಮವನ್ನು, ಗೞಿಯಿಸಿಕೊಳ್ವುದು–ಸೇರುವ ಹಾಗೆ ಮಾಡಿಕೊಳ್ಳುವುದು, ಒಂದೆ–ಒಂದೇ, ಚದುರ್–ಜಾಣತನ; ಇಂತುಟು–ಇಷ್ಟು, ಹೀಗೆ ಉಂಟು, ಸಂಸೃತಿ ಧರ್ಮಂ–ಸಂಸಾರದ ಧರ್ಮ, ಹುಟ್ಟು ಸಾವುಗಳಿಗೆ ಸಂಬಂಧಿಸಿದ ಧರ್ಮವು, ಏಕೆ–ಏತಕ್ಕೆ, ಬಾಯಱಿವುದು–ಪ್ರಲಾಪಿಸುವುದು, ಇದೇಕೆ ಚಿಂತಿಸುವುದು–ಇದು ಏತಕ್ಕೆ ಚಿಂತನೆಮಾಡುವುದು, ಏಕೆ ಪಲುಂಬುವುದು–ಏತಕ್ಕೆ ಹಲುಬುವುದು, ಗೋಳಾಡುವುದು, ಏಕೆ ನೋವುದೋ–ಏತಕ್ಕೆ ವ್ಯಥೆಪಡುವುದೋ! ದೇಶೀ ಶೈಲಿಯ ಸೊಗಸನ್ನು ಇಲ್ಲಿ ಕಾಣಬಹುದು; ಸಣ್ಣ ವಾಕ್ಯಗಳು ಹಲವು ಸೇರಿ ಈ ಪದ್ಯವಾಗಿದೆ. ಇದರಲ್ಲಿ ಸಾರ್ವಕಾಲಿಕವಾದ ಸತ್ಯಾನುಭವ ರೂಪುಗೊಂಡಿದೆ. ಇದು ಪಂಪನಿಗೆ ತುಂಬ ಪ್ರಿಯವಾದ ಪದ್ಯ: ಅವನ 'ಆದಿಪುರಾಣ'ದಲ್ಲೂ ಇದು ಬರುತ್ತದೆ.

**೨೮.** ಬಿಡದೆ–ನಡುವೆ ನಿಲ್ಲಿಸದೆ, ಅೞಲ್ವ–ದುಃಖಪಡುವ, ಬಂಧು ಜನದ–ಬಾಂಧವರ, ಒೞ್ಕುಡಿಯುದ–ಪ್ರವಾಹವು ವಿಚ್ಛಿನ್ನವಾಗದ ಎಂದರೆ ಸಂತತವಾದ, ಕಣ್ಣೀರ ಪೂರಂ–ಕಣ್ಣೀರಿನ ಪ್ರವಾಹ, ಪ್ರೇತಮಂ–ಮೃತವಾದುದನ್ನು, ಓಗಡಿಸದೆ–

ಅಸಹ್ಯ ಪಟ್ಟುಕೊಳ್ಳದೆ, ಸುಡುವುದು-ಸುಡುತ್ತದೆ. ಗಡಂ-ಅಲ್ಲವೆ. ಎಂದರೆ ಬಾಂಧವರ ದುರ್ಭಾಗ್ಯಿಯೇ ಪ್ರೇತವನ್ನು ಸುಡುತ್ತದೆ ಎಂದು ಭಾವ. ಇದನ್ನು ರಘುವಂಶದ (೮-೮೬) "ಸ್ವಜನಾಶ್ರು ಕಿಲಾತಿ ಸಂತತಂ ದಹತಿ ಪ್ರೇತಮಿತಿ ಪ್ರಚಕ್ಷತೇ" ಎಂಬುದರೊಡನೆ ಹೋಲಿಸಬಹುದು. ಸರೋಜದಳಾಕ್ಷೀ-ಕಮಲನೇತ್ರೆಯಾದ ಕುಂತಿಯೇ, ಶೋಕಮಂ-ದುಃಖವನ್ನು, ಇನ್ನು, ಉಡುಗುವುದು-ಕಡಮೆ ಮಾಡಿಕೊಳ್ಳುವುದು.

**ವಚನ:** ಶೋಕಾಕ್ರಾಂತೆಯಾಗಿ-ಶೋಕಪೀಡಿತಳಾಗಿ; ವಿಪ್ರಳಾಪಂಗೆಯ್ದಿಯುಪ್ಪೊಡೆ-ವಿಶೇಷವಾಗಿ ಗೋಳಿಟ್ಟ ಪಕ್ಷದಲ್ಲಿ; ಈ ಕೂಸುಗಳ್-ಈ ಮಕ್ಕಳು; ಮನಮಿಕ್ಕಿಯುಂ-ಮನಸ್ಸು ಕುಗ್ಗಿಯೂ, ಎರ್ದೆಯಿಕ್ಕಿಯುಂ-ಧೈರ್ಯವು ಕಡಿಮೆಯಾಗಿಯೂ, ಕಿಡುವರ್-ಕೆಟ್ಟುಹೋಗುವರು; ಉಪಶಾಂತ ವಚನಂಗಳಿಂದಂ-ಉಪಶಮನ ಮಾಡುವ ಮಾತುಗಳಿಂದ; ಉಬ್ಬೆಗಮಂ-ಉದ್ವೇಗ(ವ್ಯಸನ)ವನ್ನು; ಮುಂದಿಟ್ಟು-ಮುಂದೆ ಇಟ್ಟುಕೊಂಡು, ಒಡಗೊಂಡು-ಜೊತೆಯಲ್ಲಿ ಕರೆದುಕೊಂಡು, ನಾಗಪುರಕ್ಕೆ-ಹಸ್ತಿನಾವತಿಗೆ, ವಂದು-ಬಂದು.

೨೯. ತುಱುಗಿದ-ದಟ್ಟವಾಗಿರುವ, ಹಿಮ ಬಿಂದುಗಳಿಂದೆ-ಮಂಜಿನ ಹನಿಗಳಿಂದ, ಎಱಗಿದ-ಬಗ್ಗಿದ, ನವವನಜ ವನದ ವೋಲ್-ಹೊಸ ತಾವರೆಯ ವನದಂತೆ, ಬಂಧುಮುಖವನಜವನಂ-ಬಂಧುಗಳ ಮುಖಕಮಲವೆಂಬ ವನವು, ಶೋಕದಿಂಸಂದೊಱೆವ-ದುಃಖದಿಂದ ಅಂದು ಸುರಿಯುವ, ನಯನೋದಬಿಂದುವಿಂ-ಕಣ್ಣೀರ ಹನಿಗಳಿಂದ, ಒರ್ವೊದಲೆ-ಒಟ್ಟಿಗೇ, ಎಱಗಿದುದು-ಬಗ್ಗಿತು.

**ವಚನ:** ಪುತ್ರಸ್ನೇಹದಿಂದೆ-ಮಗನ ಮೇಲಣ ಪ್ರೀತಿಯಿಂದ; ಮಱುಕಣಿಸೆ-ತಿರುಗಿಕಾಣಿಸಿಕೊಳ್ಳಲು, ಬಾಯಟಿದು-ಬಾಯಿಸೋತು; ಪಳಯಿಸುವ-ಅಳುವ; ಜಳದಾನಾದಿಕ್ರಿಯೆಗಳಂ-ತರ್ಪಣಕೊಡುವುದೇ ಮುಂತಾದ ಕರ್ಮಗಳನ್ನು; ನಿರ್ವರ್ತಿಸಿ-ಮಾಡಿ ಮುಗಿಸಿ; ನಿರ್ವೇಗವಾಗೆ-ವಿರಕ್ತಿಗೆ ಕಾರಣವಾಗಲು; ಸಂಸಾರವಿಶೀರ್ಣೆಯರಾಗಿ-ಸಂಸಾರವನ್ನು ಭಂಗಿಸಿದವರಾಗಿ, ನಡಪುತ್ತುಮಿರೆ-ಸಾಕಿಸಲಹುತ್ತಿರಲು; ಸಹಪಾಂಸುಕ್ರೀಡಿತರಾಗಿ-ದೂಳಾಟವನ್ನು ಒಟ್ಟಿಗೆ ಆಡುವವರಾಗಿ; ಮಱು+ಕಣಿಸು=ಮಱುಕಣಿಸು; ಅಪ್ಪುಕಣಿಸು-ನೀರನ್ನು ತೋರು, ಸುರಿ-ಎಂಬುದರೊಡನೆ ಹೋಲಿಸಬಹುದು.

೩೦. ಒಡನಾಡಿಯುಂ-ಒಡನೆ ಆಡಿಯೂ, ಒಡನೋದಿಯುಂ-ಜೊತೆಯಲ್ಲೇ ಓದಿಯೂ, ಒಡವಳೆದುಂ-ಕೂಡಿಯೇ ಬೆಳೆದೂ, ಗುಳ್ಳೆಗೊಟ್ಟೆ-ಗುಳ್ಳೆಗೋಷ್ಠಿ, ಬಟ್ಟು-ಬಿಲ್ಲೆಯಾಟ, ಉಳಿಸೆಂಡುಂ-ಬಚ್ಚಿಟ್ಟ ಚೆಂಡಿನ ಆಟ, ಪೊಡೆಸೆಂಡು-ಹೊಡೆಯುವ ಚೆಂಡು, ಎಂಬ ಇವಂ-ಎಂಬ ಈ ಆಟಗಳನ್ನು, ಆಡುತ್ತೆ-ಆಡುತ್ತ, ತಂಮೊಳ್-ತಮ್ಮಲ್ಲಿ, ತಂತಂಗೆಡೆಗಳ್-ತಮ್ಮ ತಮ್ಮ ಸ್ನೇಹಗಳು, ಎಳಸೆ-ವ್ಯಾಪಿಸಲು, ಒಡವಳೆದರ್-ಜೊತೆ ಜೊತೆಯಾಗಿ ಬೆಳೆದರು. ಬಾಲಕರ ಆಟಗಳನ್ನು ಆಡುತ್ತ ಕೌರವ ಪಾಂಡವರು ಜೊತೆಯಲ್ಲಿಯೇ ಸ್ನೇಹ ಬೆಳೆಯುತ್ತಿರಲು ಬೆಳೆದರು. ಎಳಸು-ವ್ಯಾಪಿಸು

ಎಂಬರ್ಥಕ್ಕೆ 'ಎಳಸೆ ತದಾಸ್ಥಾನಮಂ ದಿವ್ಯಗಂಧಂ' ಎಂಬ ನಾಗಚಂದ್ರನ ಪ್ರಯೋಗವನ್ನು ನೋಡಬಹುದು.

**ವಚನ:** ಮರಗೆರಸಿಯಾಡಲೆಂದು–ಮರಗೆರಸಿ ಎಂಬಾಟವನ್ನು ಆಡಬೇಕೆಂದು, ಪರ್ವುವಂತೆ–ಹಬ್ಬುವ ಹಾಗೆ ; ಪನ್ನಿರ್ಮತ್ತರ್–ಹನ್ನೆರಡು ಮತ್ತರುಗಳಷ್ಟು (ಮತ್ತರ್=ಎಕರೆ ಎಂಬ ಭೂಮಿಯ ಅಳತೆಯ ಹಾಗೆ ಒಂದು ಅಳತೆ), ಪರ್ವಿದ-ಹಬ್ಬಿದ; ಮೊದಲ್ಗೆ–ಬುಡಕ್ಕೆ; ಮಱಿಮಾಡಿ–ಕಾಣದ ಹಾಗೆ ಇರಿಸಿ; ಕೋಲ ನೀಡಾಡಿ–ಕೊಲನ್ನು ಎಸೆದು; ಪಲವು ಸೂಟ್–ಹಲವು ಬಾರಿ, ಕಾಡಿ–ಕಾಡಿಸಿ. ಇದು ಈಗಿನ ಮರಕೋತಿ ಆಟದಂತಿದ್ದಿರಬಹುದು.

೩೧. ಅನಿಬರುಂ–ಅಷ್ಟು ಬಾಲಕರೂ, ಪರಿದು–ಓಡಿ, ಮರನನಡರ್ದಿರೆ–ಮರವನ್ನು ಹತ್ತಿರಲು, ಮರನಂ–ಮರವನ್ನು, ಮುಟ್ಟಲ್ಕೆ ಪಡೆಯದೆ–ಮುಟ್ಟಲಾಗದೆ, ಅನಿಬರ್ಗಂ–ಅಷ್ಟು ಬಾಲಕರ ಮೇಲೆಯೂ, ಕಿಂಕಿರಿವೋಗಿ–ಕಿರಿಕಿರಿಯಾಗಿ, ಕೋಪಿಸಿಕೊಂಡು, ಭೀಮಸೇನಂ, ಮರನಂ ಪಿಡಿದು–ಮರವನ್ನು ಹಿಡಿದು, ಅಲ್ಗೆ-ಅಲುಗಾಡಿಸಲು, ಅನಿಬರುಂ–ಅಷ್ಟು ಹುಡುಗರೂ, ಪಣ್ವೊಲ್–ಹಣ್ಣಿನ ಹಾಗೆ, ಉದಿರ್ದರ್–ಕೆಳಕ್ಕೆ ಉದುರಿದರು.

**ವಚನ:** ಬಿೞ್ದು–ಬಿದ್ದು ; ಸುಲಿದ ಮೊೞಕಾಲ್ಗಳುಂ–ಚರ್ಮಸುಲಿದು ಹೋದ ಮೊಳಕಾಲುಗಳೂ; ಕೞಲ್ದ–ಸಡಿಲವಾದ, ಪಲ್ಗಳುಂ–ಹಲ್ಲುಗಳೂ; ಎಲ್ವಡಗಾದ-ಎಲುಬು ಮಾಂಸವಾದ ಎಂದರೆ ಜಜ್ಜಿ ಹೋದ ; ಉಡಿದ–ಮುರಿದ ; ಕಾರಣಂ ಬೆಸಗೊಳ್ಳೆ–ಕಾರಣವನ್ನು ಹೇಳಿದರೆ; ಮುದುಗಣ್ಗಳ್–ಮುದುಕರು, ವೃದ್ಧರು, ಬಾರಿಸೆ–ತಡೆಯಲು; ಸಿಗ್ಗಂಗೆ–ನಾಚಿಕೆಗೆ; ಮಱಸೊಂದಿದ–ಮೈ ಮರೆದು ನಿದ್ದೆ ಮಾಡಿದ; ಆಡಸಿಪಿಡಿದು–ಮೇಲೆ ಬಿದ್ದು ಹಿಡಿದು ; ನೂರ್ವರುಂ–ನೂರು ಜನ ಕೌರವರೂ, ಗಂಟಲಂಮೆಟ್ಟಿ–ಕೊರಳನ್ನು ತುಳಿದು ; ಮಱಸೊಂದು–ಮಱಿ+ಸುಂದು "ಸುಂದು—ಶಯನೇ"

೩೨. ಪಾವುಗಳಂ–ಹಾವುಗಳನ್ನು, ಕೊಳಿಸಿ–ಕಚ್ಚಿಸಿ, ಮಹಾಗ್ರಾವಮಂ–ದೊಡ್ಡ ಕಲ್ಲನ್ನು, ಉಱದೆ–ಬಿಡದೆ, ಕೊರಲೊಳ್–ಕೊರಳಲ್ಲಿ, ಅಡಸಿ ಕಟ್ಟಿ-ಬಿಗಿಯಾಗಿ ಕಟ್ಟಿ, ತಮ್ಮ ಕುಲವನಡಿಗಟ್ಟುವವೊಲ್–ತಮ್ಮ ವಂಶವನ್ನು ತಳಕ್ಕೆ ಅದ್ದುವ ಹಾಗೆ, ಗಂಗಾದೇವಿಯ ಮಡುವಿನೊಳ್–ಗಂಗಾ ನದಿಯ ಮಡವಿನಲ್ಲಿ, ಆವರಿಸದೆ–ವಿಚಾರ ಮಾಡದೆ, ಅರವರಿಸದೆ, ಅೞ್ದಿದರ್–ಮುಳುಗಿಸಿದರು. ಕೊಳ್–ಗ್ರಹಣೇ ಎಂಬ ಧಾತುವಿನ ಹಿಂದೆ ಯಾವ ಕರ್ತೃಪದವಿದೆಯೋ ಆದರ ಸ್ವಭಾವಕ್ಕೆ ಅನುಗುಣವಾಗಿ ಕೊಳ್ ಎಂಬುದಕ್ಕೆ ಅರ್ಥವಾಗುತ್ತದೆ. "ಉರಿಕೊಳೆ ಕೋೞ್ಮಗಂ ಕೊಳೆ ವಿಶಾಹಿಕುಳಂ ಕೊಳೆ" ಎಂಬ ರನ್ನನ ಪ್ರಯೋಗವನ್ನು ನೋಡಬಹುದು; ಇಲ್ಲಿ ಸುಡು, ತಿವಿ, ಕಚ್ಚು ಎಂದು ಕ್ರಮವಾಗಿ ಅರ್ಥವಾಗುತ್ತದೆ: "ನಂಜಿನ ಮಳೆ ಕೊಂಡು ಬಿಟ್ಟ ತೆಱನಾಯ್ತಾಗಳ್" ಎಂಬ ಕನ್ನಡ ಕಾದಂಬರೀ ಪ್ರಯೋಗವನ್ನೂ "ಕೊಳ್ಳವೆ ಪುಷ್ಪ

ವೃಷ್ಟಿಗಳ್'' ಎಂಬ ರನ್ನನ ಪ್ರಯೋಗವನ್ನೂ ನೋಡಿದರೆ ಇಲ್ಲಿ ಸುರಿ ಎಂಬರ್ಥ ಬರುತ್ತದೆ; ಇದು ಕನ್ನಡದ ನುಡಿಗಟ್ಟು. ಆವರಿಸು=ವ್ಯಾಪಿಸು ಎಂದರ್ಥ; ಆದರೆ ಇಲ್ಲಿ ಅದು ಹೊಂದುವುದಿಲ್ಲ. ಅರವರಿಸು–ವಿಚಾರಮಾಡು ಎಂಬ ಶಬ್ದವೊಂದಿದೆ; ಅದರ ಇನ್ನೊಂದು ರೂಪ ಆವರಿಸದೆ ಎಂದಿರಬಹುದು.

**ವಚನ:** ವಿಷಮ ವಿಷಧರಂಗಳ್–ಭಯಂಕರವಾದ ಹಾವುಗಳು; ಪಱಿದೀಡಾಡಿ–ಕಟ್ಟುಗಳನ್ನು ಕತ್ತರಿಸಿ ಎಸೆದು; ತೋಳ್ಗೊಳ್ ತುಳುಂಕೆ–ತೋಳಿನ ಹೊಡೆತದಿಂದ ಕಲಕಲು; ಮಗುಬ್ದಿ–ಹಿಂದಿರುಗಿ; ಲಡ್ಡುಗೆಯುಂ–ಲಾಡುವನ್ನು; ಉಪದ್ರವಂಗಳೊಳ್–ಕೇಡುಗಳಲ್ಲಿ, ಕಷ್ಟಗಳಲ್ಲಿ; ತೊಡರಿಕ್ಕಿಯುಂ–ತೊಡಕಿಸಿ ಇಟ್ಟೂ; ಮನ ಮಿಕ್ಕಿಯುಂ, ಎರ್ದೆಯಿಕ್ಕಿಯುಂ–ಮನಸ್ಸು ಕುಸಿದೂ, ಧೈರ್ಯ ಕುಗ್ಗಿಯೂ; ಬಿಲ್ಲುಮಂಬುಂವೆರಸು–ಬಿಲ್ಲು ಬಾಣಗಳೊಡನೆ, ಅಚ್ಚರಸೆ–ಅಪ್ಸರಸ್ತ್ರೀ;

**೩೩.** ಒಗೆದ–ಹುಟ್ಟಿದ, ಶರಸ್ತಂಬದೊಳ್–ಜೊಂಡು ಹುಲ್ಲಿನಲ್ಲಿ, ಮನೋಜರಾಗರಸಂ–ಕಾಮ ಕ್ರೀಡೆಯರಸ, ರೇತಸ್ಸು, ಇರ್ಬಗಿಯಾಗಿ–ಎರಡು ಭಾಗವಾಗಿ, ಉಗುತರೆ–ಸುರಿಯಲು, ಶರದ್ವತನು, ತೊಟ್ಟನೆ ಬಿಲ್ಲನಂಬುಮಂ ಬಿಸುಟು–ಕೂಡಲೇ ಬಿಲ್ಲು ಬಾಣಗಳನ್ನು ಬೀಸಾಡಿ, ಉದಿತ ಲಜ್ಜಾವಶದಿಂ–ಹುಟ್ಟಿದ ನಾಚಿಕೆಗೆ ಅಧೀನನಾಗಿ, ಆಶ್ರಮದಿಂ–ಋಷ್ಯಾಶ್ರಮದಿಂದ, ಅಗಲ್ದಂ–ಅಗಲಿದನು, ಬಿಟ್ಟು ಹೋದನು.

**ವಚನ:** ಅನ್ನೆಗಂ–ಅಷ್ಟರಲ್ಲಿ; ಪರಕಲಿಸಿರ್ದ–ಚೆದರಿದ್ದ; ಆವಜ–ಆ ಕೂಸುಗಳ; ದಿವ್ಯಶರಾಸನಶರಂಗಳುಮಂ–ದಿವ್ಯವಾದ ಬಿಲ್ಲು ಬಾಣಗಳನ್ನು; ನಿಜಗಜಪುರಕ್ಕುಯ್ದು–ತನ್ನ ಹಸ್ತಿನಾವತಿಗೆ ತೆಗೆದುಕೊಂಡು ಹೋಗಿ; ಕಿಱಿಯಾತಂಗೆ–ಕಿರಿಯವನಿಗೆ; ಚೌಲೋಪನಯನಾದಿ ಕ್ರಿಯೆಗಳಂ–ಕ್ಷೌರಮುಂಜಿ ಮೊದಲಾದ ಕರ್ಮಗಳನ್ನು; ಧನುರ್ವಿದ್ಯೋಪದೇಶಂಗೆಯ್ಯೆ–ಬಿಲ್ವಿದ್ಯೆಯನ್ನು ಹೇಳಿಕೊಡಲು; ಈ ಕೃಪಾಚಾರ್ಯನ ಹತ್ತಿರ ಪಾಂಡವರೂ ಕೌರವರೂ ವಿದ್ಯಾಭ್ಯಾಸ ಮಾಡುತ್ತಾರೆ.

**೩೪.** ಈ ಪದ್ಯದಲ್ಲೂ ಮುಂದಿನ ಗದ್ಯದಲ್ಲೂ ಈ ಮಕ್ಕಳ ವಿದ್ಯಾಭ್ಯಾಸದ ವರ್ಣನೆ ಇದೆ: ಗುಣಾರ್ಣವನಂತು–ಅರ್ಜುನನ (ಅರಿಕೇಸರಿಯ) ಹಾಗೆ, ಕುಶಾಗ್ರಬುದ್ಧಿಗಳ್–ಸೂಕ್ಷ್ಮ ಬುದ್ಧಿಯವರು, ಆರ್ಗಳ–ಯಾರು ನಿಜವಾಗಿಯೂ? ಎಂದರೆ ಯಾರೂ ಇಲ್ಲ. ಏಕೆಂದರೆ: ಬರೆಯದೆ–ತಿದ್ದದೆ, ಬಂದ, ಸುದ್ದಗೆಯ ಸೂತ್ರಮಂ–ಶುದ್ಧವರ್ಣಗಳನ್ನು ಹೇಳುವ ಸೂತ್ರವನ್ನು, ಒಂದೆ ಮುಹೂರ್ತ ಮಾತ್ರದಿಂ–ಒಂದೇ ಮುಹೂರ್ತ ಮಾತ್ರದೊಳಗಾಗಿ, ಬರಿಸಿದುದು–ಬರುವಂತೆ ಮಾಡಿತು; ಯಾವುದು? ಅರ್ಜುನನ ಕುಶಾಗ್ರ ಬುದ್ಧಿ. ಅಂತು ಸೂತ್ರಿಸಿದ–ಹಾಗೆ ಸೂತ್ರಪ್ರಾಯವಾಗಿ ಹೇಳಿದ, ಸೂತ್ರದವೃತ್ತಿ–ಸೂತ್ರದ ವಿವರಣೆ, ನಿಜಾತ್ಮವೃತ್ತಿವೋಲ್–ತನ್ನ ಆತ್ಮದ ಸ್ವಭಾವದಂತೆ, ಪರಿಣಮಿಸಿತ್ತು–ಫಲಿಸಿತು; ಮತ್ತುಱಿದ ವಿದ್ಯಗಳ್–ಮತ್ತೆ ಉಳಿದ ಅನೇಕ ವಿದ್ಯೆಗಳು, ಓಜರೆ–ಉಪಾಧ್ಯಾಯರೇ, ಚಟ್ಟರೆಂಬಿನಂ–ಶಿಷ್ಯರೆನ್ನುವ ಹಾಗೆ

ತನ್ನೊಳ್-ತನ್ನಲ್ಲಿ, ನೆರೆದುವು-ಸೇರಿಕೊಂಡುವು. ಶುದ್ಧಕಾ (ಸಂ) > ಸುದ್ದಗೆ; ಉಪಾಧ್ಯಾಯಂ (ಸಂ) > ಓಜ; ಛಾತ್ರ (ಸಂ) > ಚಟ್ಟ.

**ವಚನ:** ಪಂಚಾಂಗ ವ್ಯಾಕರಣದ-ಐದು ಅಂಗಗಳುಳ್ಳ ವ್ಯಾಕರಣದ; ವೃತ್ತಿ ಬೇಧಮಪ್ಪ-ವೃತ್ತಿ ಬೇಧವಾಗಿರುವ; ಛಂದೋವಿಚಿತಿಯೊಳಂ-ಛಂದಸ್ಸಿನಲ್ಲಿಯೂ (ಈ ಭಾಗಕ್ಕೆ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ); ನಾಂದೀ-ದೇವತಾದಿಗಳ ಸ್ತುತಿ; ಪ್ರರೋಚನಾ-ಸಾಮಾಜಿಕರ ಮನಸ್ಸನ್ನು ನಾಟಕದ ಕಡೆಗೆ ತಿರುಗಿಸುವುದು; ಪ್ರಸ್ತಾವನಾ-ಪ್ರಸ್ತುತವಾದ ವಿಷಯವನ್ನು ಸೂಚಿಸುವುದು, ಆಮುಖ; ಇತಿವೃತ್ತ-ವಸ್ತುವಿನ ಸೂಚನೆ; ಸಂಧಿ ಪ್ರವೇಶ ವಿಷ್ಕಂಭ-ಇವೆಲ್ಲ ನಾಟಕದ ವಸ್ತುರಚನೆಯ ಅಂಶಗಳು; ಕಪೋತಿಕಾ-ಒಂದು ತೆರನಾದ ಹಸ್ತಯುಗ್ಮವಿನ್ಯಾಸ; ವ್ಯಾಳಿಕಾದಿ-ವ್ಯಾಳಿಕೆಯೇ ಮುಂತಾದ; ಆಱಂಗದೊಳಂ-ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಎಂಬ ವೇದಾಂಗಗಳು ಆರರಲ್ಲಿಯೂ, ಆಱುಂ ದರ್ಶನದೊಳಂ-ಚಾರ್ವಾಕ, ಜೈನ, ಬೌದ್ಧ ಮುಂತಾದ ಆರು ತತ್ವಶಾಸ್ತ್ರಗಳಲ್ಲಿಯೂ, ಗಾಂಧರ್ವವಿದ್ಯಾ-ಸಂಗೀತವಿದ್ಯೆ; ಗಜಾಗಮಜ್ಞ-ಹಸ್ತಿಶಾಸ್ತ್ರವನ್ನು ತಿಳಿದವರಾದ ರಾಜಪುತ್ರ, ಗೌತಮ, ವಾದ್ವಾಕಿ, ಪಾಳಕಾಪ್ಯ (ಪಾಳಕಶ್ಯಪ ಎಂದು ತಪ್ಪಾಗಿ ಬಂದಿದೆ), ಸುಪತಿ, ಶ್ರೀಹರ್ಷರೇ ಮೊದಲಾದವರು; ಮಾತಂಗ-ಇಭಚಾರಿನ್, ಯಾಜ್ಞವಲ್ಕ್ಯ, ವಾದ್ಧಲಿ (ವಾಹಲಿ), ನಳ, ನಾರದ, ರಾಜಪುತ್ರ, ಗೌತಮ, ಬಾಷ್ಕಲ (ವಾಗ್ಬಲ, ವಾಕ್ಪತಿ)-ಇವರು ಪ್ರಾಚೀನ ಹಸ್ತಿಶಾಸ್ತ್ರಕರ್ತರೆಂದು ಸೋಮದೇವನ 'ಯಶಸ್ತಿಲಕ' ಚಂಪುವಿನಲ್ಲಿ ಉಕ್ತವಾಗಿದೆ. ಚಿತ್ರಕರ್ಮ-ಚಿತ್ರಕಲೆ, ಪತ್ರಚ್ಛೇದ್ಯ-೬೪ ಕಲೆಗಳಲ್ಲಿ ಒಂದು, ಎಲೆಗಳ ಆಕಾರದಲ್ಲಿ ಕತ್ತರಿಸುವುದು ಇತ್ಯಾದಿ; ದಾರುಕರ್ಮ-ಮರಗೆಲಸ; ವಾಸ್ತು ವಿದ್ಯಾ-ಮನೆ ಮುಂತಾದುವುಗಳನ್ನು ಕಟ್ಟುವ ಶಿಲ್ಪವಿದ್ಯೆ; ಸ್ವರಭೇದ-ಶಕುನಶಾಸ್ತ್ರ, ಇಂದ್ರಜಾಲ-ಮಾಯೆಮೋಡಿ ಮೊದಲಾದುವನ್ನು ತಿಳಿಸುವ ವಿದ್ಯೆ; ಅನೇಕಾಕ್ಷರ ಸ್ವರೂಪ-ಅನೇಕ ಲಿಪಿಗಳ ಸ್ವರೂಪಜ್ಞಾನ; ಪರಶು-ಕೊಡಲಿ; ಕೃಪಾಣ-ಕತ್ತಿ, ತೋಮರ-ಒಂದು ಆಯುಧ; ಮುಸಲ-ಒನಕೆ; ಮುಸುಂಡಿ ಭಿಂಡಿವಾಳ ಮುದ್ಗರ-ಇವು ಬೇರೆಬೇರೆ ಆಯುಧಗಳ ಹೆಸರುಗಳು; ಆರೂಢ ಸರ್ವಜ್ಞನುಂ-ಆರೋಹಿಸಲ್ಪಟ್ಟ ಸರ್ವಜ್ಞತ್ವವುಳ್ಳವನು; ಮಹೇಂದ್ರಜಾಣನುಮಾಗಿ (?)-ಮಹೇಂದ್ರನಂತೆ ಜಾಣನಾಗಿ; ಇಲ್ಲವೆ ಮಹೇಂದ್ರಜಾಲದಲ್ಲಿ ಸಿದ್ಧನಾಗಿ; "ಮೊಡ್ಡಾಮರ ಮಹೇನ್ದ್ರಜಾಲ ಹರಮೇಖಲಾದಿ ಪ್ರಪಂಚವಿದ್ಯಾಸಿದ್ಧಂ" ಎಂಬುದನ್ನು ನೋಡಿ (ಜಗಳೂರು ೩೦-ಕ್ರಿ.ಶ. ೧೨೬೯). ಪಂಪನ ಕಾಲದಲ್ಲಿ ಪ್ರಚಲಿತವಾಗಿದ್ದ ವಿದ್ಯೆಗಳೆಲ್ಲ ಇಲ್ಲಿ ಕಾಣುತ್ತವೆ. ಇವುಗಳಲ್ಲಿ ಅರಿಕೇಸರಿ ಪರಿಣತನಾಗಿದ್ದಿರಬಹುದು.

**೩೫.** ಉಳ್ಳೊದುಗಳೊಳಗೆ-ಇರುವ ವಿದ್ಯೆಗಳಲ್ಲಿ, ಎನಿತಱಿವುಳ್ಳರ್ಗಂ-ಎಷ್ಟು ಜ್ಞಾನವಿದ್ದವರಿಗೂ, ತಿಳಿಪಲ್-ತಿಳಿಸುವುದಕ್ಕೆ, ಅರಿಯದು-ಅಶಕ್ಯವಾದದ್ದು, ಎಂಬ ಎಡೆಗಳುಮಂ-ಸ್ಥಳಗಳನ್ನೂ, ತೆಳ್ಳಗಿರೆ-ಸ್ಪಷ್ಟವಾಗುವಂತೆ, ತಿಳಿಪುಗುಂ-ಅರ್ಜುನ

(=ಅರಿಕೇಸರಿ) ತಿಳಿಸಿಕೊಡುತ್ತಾನೆ. ಗುಣಾರ್ಣವನ–ಅರ್ಜುನನ, ಲೆಕ್ಕಮುಂ ಪೊಕ್ಕಮುಮುಂ–ಲೆಕ್ಕಪಕ್ಕಗಳನ್ನು, ಬೆಸಗೊಳ್ಳ–ಕೇಳೋ!

**ವಚನ** : ನೆಗಟ್ದ–ಉಂಟಾದ, ಪೊಗಟ್ತೆಗಂ–ಹೊಗಳಿಕೆಗೂ, ನೆಗಟ್ತೆಗಂ–ಕೀರ್ತಿಗೂ.

**೩೬**. ಮಾನಸದೊಳ್–ಮಾನಸ ಸರೋವರದಲ್ಲಿ, ಹಂಸೆಯಪೋಲ್–ಹಂಸ ಪಕ್ಷಿಯಹಾಗೆ, ಮಾನಸವಾಗ್ವನಿತೆ–ಮನಸ್ಸಿನಲ್ಲಿ ಉದ್ಭವಿಸಿದ ವಾಗ್ದೇವಿಯು, ತನ್ನ ಮಾನಸದೊಳ್–ಅರಿಕೇಸರಿಯ ಮನಸ್ಸಿನಲ್ಲಿ, ಇವಂ–ಇವನು, ಮಾನಸನೆಂದಗಲದೆ–ಮಾನಸಪುತ್ರನು ಎಂದು ಅಗಲಲಾಗದೆ, ನಿಲೆ–ಸ್ಥಾಯಿಯಾಗಿ ನಿಲ್ಲಲು, ಸರಸ್ವತೀಕಲಹಂಸಂ–ಸರಸ್ವತಿಗೆ ವಾಹನವಾದ ಹಂಸದಹಾಗೆ ಇರುವ ಅರ್ಜುನ (=ಅರಿಕೇಸರಿ), ಮಾನಸನಾದಂ–ಮನುಷ್ಯನಾದನು.

**ವಚನ** : ಆರಿಂದಮಗ್ಗಳಂ–ಯಾರಿಗಿಂತಲೂ ಶ್ರೇಷ್ಠ, ಎಲ್ಲರಿಗೂ ಮೇಲಾದವನು, ಆರಿಂದಂ ಪಿರಿಯಂ–ಈ ಎರಡರಲ್ಲಿ ತರತಮ ಭಾವಸೂಚನೆಗಾಗಿ ತೃತೀಯಾ ವಿಭಕ್ತಿಯ ಪ್ರಯೋಗವಿದೆ.

**೩೭**. ಧರ್ಮರಾಜನಿಗೆ ಯೌವನ ಬಂದದ್ದು : ತೋಳ್ಗಳ್–ತೋಳುಗಳು, ಎಕ್ಕೆಯಿಂ–ಒಟ್ಟಿಗೆ, ಅಮಳ್ ಬಳೆವಂತಿರೆ–ಅವಳಿಮಕ್ಕಳು ಬೆಳೆದಹಾಗೆ, ಬಳೆದುವು–ಪುಷ್ಟವಾದುವು; ಮುಯ್ವುಗಳ್–ಹೆಗಲುಗಳು, ಭುಜಶಿರಸ್ಸುಗಳು, ಕುಳಾಚಳ ಶಿಖರಂಗಳಂ–ಕುಲಪರ್ವತಗಳ ಶಿಖರಗಳನ್ನು, ಮಸುಳೆವಂದುವು–ಮಾಸಿಹೋಗುವ ಹಾಗೆ, ಕುಂದವ ಹಾಗೆ ಮಾಡಿದುವು; ಪರ್ವಿದವಕ್ಷ–ಅಗಲವಾದ ಎದೆ, ಈ ಕ್ಷಮಾತುಳ ಕುಳ ಲಕ್ಷ್ಮಿಗೆ–ಈ ಭೂಮಿಯೆಂಬ ಎಣೆಯಿಲ್ಲದ ಶ್ರೀಗೆ, ಕುಳಮಂದಿರಂ–ವಂಶ ಪಾರಂಪರ್ಯದಿಂದ ಬಂದ ಮನೆ, ಆಯ್ತು–ಆಯಿತು ; ಎಂದು–ಎಂಬುದಾಗಿ, ಈ ಮಹೀತಳಂ–ಈ ಭೂಮಂಡಲವು, ಮನಂಗೊಳೆ–ಭಾವಿಸಲು, ಧರ್ಮಪುತ್ರನಾ–ಧರ್ಮರಾಜನ, ಉದಾತ್ತ ನವ ಯೌವನಂ–ಶ್ರೇಷ್ಠವಾದ ಹೊಸ ಪ್ರಾಯವು, ನೆಱೆದತ್ತು–ತುಂಬಿತು.

**ವಚನ** : ಪೊನ್ನಬಣ್ಣದಂತಪ್ಪ–ಚಿನ್ನದಬಣ್ಣದಂಥ; ಅಳವಲ್ಲದೆ–ಅಳತೆಯಿಲ್ಲದೆ, ಅತಿಶಯವಾಗಿ.

**೩೮**. ಭೀಮಸೇನನ ಯೌವನ : ಸರೋಜನಿಲಯಂ–ಬ್ರಹ್ಮನು, ಕುಳಗಿರಿಯಂ–ಕುಲಪರ್ವತವನ್ನು, ಮನುಜಾಕೃತಿಯಾಗಿ–ಮನುಷ್ಯನ ಆಕಾರವುಳ್ಳದ್ದಾಗಿ, ಮಾಡಿದಂತೆ–ಮಾಡಿದಹಾಗೆ, ಒಳನ್–ಇದ್ದಾನೆ, ಎನಿಪ-ಎನಿಸುವ, ಅಂತುಟಪ್ಪ–ಹಾಗೆ ಆಗಿರುವ; ಪೊಸಬಣ್ಣದೊಳೊಂದಿದ–ಹೊಸದಾದ ಬಣ್ಣದಲ್ಲಿ ಬೆರಸಿದ, ಪಾರಿಜಾತಂ–ಪಾರಿಜಾತಮರ, ತಳಿರಿಂ ಮುಗುಳಿಂ–ಚಿಗುರಿನಿಂದಲೂ ಮೊಗ್ಗುಗಳಿಂದಲೂ, ಅಗ್ಗಳಂ–ವಿಶೇಷವಾಗಿ, ಎಸೆದು–ಪ್ರಕಾಶಿಸಿ, ಒಪ್ಪುವಂತೆ–ಶೋಭಿಸುವಹಾಗೆ, ದಶಸಹಸ್ರ ಮದೇಭ ಬಳಂ–ಹತ್ತುಸಾವಿರ ಆನೆಗಳ ಶಕ್ತಿಯನ್ನುಳ್ಳ, ವೃಕೋದರಂ–ಭೀಮನು,

ನವಯೌವನಂ–ನೂತನ ಯೌವನವು, ಮನಂಗೊಳೆ–ಮನೋಹರವಾಗಿರಲು, ಕರ ಮೊಪ್ಪಿದಂ–ವಿಶೇಷವಾಗಿ ಶೋಭಿಸಿದನು.

ವಚನ: ಗಂಡಗಾಡಿಯೊಳ್–ವೀರಸೌಂದರ್ಯದಲ್ಲಿ; ಇಂದ್ರನೀಲದಂತಪ್ಪ–ಇಂದ್ರ ನೀಲವೆಂಬ ಮಣಿಯಂತೆ ಇರುವ, ಬಣ್ಣಂ, ಕಣ್ಗೆವರೆ–ಕಣ್ಣಿಗೆ ಸೊಗಸಾಗಲು.

೩೯. ಅರ್ಜುನನ ಯೌವನೋದಯ ವರ್ಣನೆ, ಇದಕ್ಕೆ ಕವಿಯುಗಮನ ಅಧಿಕತರ: ವಿಮಳ ಚಂದ್ರಿಕೆ–ಶುಭ್ರವಾದ ಬೆಳುದಿಂಗಳು, ಶರದದ ಚಂದ್ರನಂ–ಶರತ್ಕಾಲದ ಚಂದ್ರನನ್ನು; ತಮೋಹರಕಿರಣಂ–ಕತ್ತಲನ್ನು ಹೋಗಲಾಡಿಸುವ ಕಿರಣಗಳು, ಬಾಳದಿನೇಶ ಬಿಂಬಮಂ–ಬಾಲಸೂರ್ಯನ ಮಂಡಲವನ್ನು; ನವಕೇಸರ ರಾಜಿ–ಹೊಸವಾದ ಕೊರಲುಗೂದಲುಗಳ ಸಾಲು, ಕಿಶೋರ ಹರಿಯಂ–ಸಿಂಹದ ಮರಿಯನ್ನು; ಮಿಕ್ಕ ದಿಕ್ಕರಿಯಂ–ಮೀರಿದ ದಿಗ್ದಂತಿಯನ್ನು, ಅನೂನ–ಕುಂದಿಲ್ಲದ, ದಾನ–ಮದೋದಕದ, ಪರಿಶೋಭೆ–ಸೊಗಸು, ಮನಂಗೊಳೆ–ಮನೋಹರವಾಗಿ ಪೊರ್ದುವಂತೆ–ಸೇರುವ ಹಾಗೆ, ಸುಂದರ ನವಯೌವನಂ–ಸುಂದರವಾದ ಹೊಸ ಜವ್ವನವು, ನೆಱೆಯೆ–ಪೂರ್ಣವಾಗಿ, ಪೊರ್ದೆ–ಸೇರಲು, ಗುಣಾರ್ಣವಂ–ಅರ್ಜುನ, ಒಪ್ಪಿತೋಱಿದಂ–ಸೊಗಸಾಗಿ ಕಂಡನು.

ವಚನ: ಈ ಗದ್ಯದಲ್ಲಿ ಅರ್ಜುನನ ಸೌಂದರ್ಯ ವರ್ಣನೆ ತಲೆಯಿಂದ ಹಿಡಿದು ಕಾಲವರೆಗೆ ಕ್ರಮವಾಗಿ ಬಂದಿದೆ. ನೆಱೆಯೆನೆಱೆಯೆ–ತುಂಬಲು ತುಂಬಲು; ನಿಱಿ ನಿಱಿಗೊಂಡ–ಗುಂಗುರುಗುಂಗುರಾದ; ತಲೆನವಿರ್ಗಳ್–ತಲೆಯಕೂದಲುಗಳು, ಲಾವಣ್ಯ ರಸಮಂ–ಸೌಂದರ್ಯರಸವನ್ನು, ಇಡಿದಿಡಿದು–ತಟ್ಟಿತಟ್ಟಿ, ತೀವಿದ–ತುಂಬಿದ; ಕಮಲಾ ಸನನ–ಬ್ರಹ್ಮನ, ಬೆರಲಚ್ಚುಗಳನ್ನವು–ಬೆರಳಿನ ಅಚ್ಚುಗಳಂಥವು, ಆದುವು–ಆದುವು, ಮೂಱು ಪಟ್ಟಮಂ–ಮೂರು ರಾಜ್ಯಚಿಹ್ನಗಳಾದ ಪಟ್ಟವನ್ನು, ಆಳಲ್ಕೆ-ಧರಿಸುವುದಕ್ಕೆ; ಲಲಾಟಂ–ಹಣೆ; ಪಟ್ಟಂಗಟ್ಟಿದ ನೊಸಲ್ಗೆ–ರಾಜಪಟ್ಟವನ್ನು ಕಟ್ಟಿದ ಹಣೆಗೆ; ಲಕ್ಷಣ ಮನಱಸಲ್ವೇಡ–ಲಕ್ಷಣವನ್ನು ಹುಡುಕಬೇಡ, ಎನ್ನುವಂತೆ; ಆದುದು–ಆಯಿತು; ಕೊಂಕಿನಂತೆ ಕೊಂಕಿಯುಂ–ಡೊಂಕಿನಂತೆ ವಕ್ರವಾಗಿಯೂ; ಕೊಂಕಿಲ್ಲದೆ–ಡೊಂಕಿಲ್ಲದೆ ಕಪಟವಿಲ್ಲದೆ; ಪುರ್ವುಗಳ್–ಹುಬ್ಬುಗಳು; ವಿಜಯ ವೈಜಯಂತಿಗಳಂತೆ–ವಿಜಯ ಸೂಚಕವಾದ ಬಾವುಟಗಳಂತೆ, ಪತಾಕೆಗಳಂತೆ; ನೀಳ್ಪಂ–ನೀಳವನ್ನೂ, ಬೆಳ್ಪುಮಂ–ಬಿಳಿಬಣ್ಣವನ್ನೂ; ಕಿಸುಗಣ್ಚಿದಂತೆ–ಕೆಂಪೇರಿದ ಕಣ್ಣಿಂದ ನೋಡಿದಂತೆ, ಕೋಪಿಸಿ ಕೊಂಡಂತೆ; ಕಿಸುಸೆರೆವರಿದು-ಕೆಂಪಾದ ರಕ್ತನಾಳಗಳು ಪಸರಿಸಿ; ಗಣಿಕಾ ಜನಂಗಳ–ವೇಶ್ಯಾಸ್ತ್ರೀಯರ; ಕೆಂಕಮಾದಂತೆ-ಕೆಂಪಾದಂತೆ; ಮೂಗಿಱುವಂತೆ-ಮೂಗು ಮುರಿಯು ವಂತೆ, ಜುಗುಪ್ಸೆಪಡುವಂತೆ; ಸುಯ್ಯ–ಉಸಿರಿನ ಗಾಳಿಯ; ಮುಂಬಣ್ಣ–ಮೊದಲು ತೋರುವ ಬಣ್ಣ; ಕತ್ತುರಿಯಲ್–ಕಸ್ತೂರಿಯಲ್ಲಿ; ಧೂಮ ಲೇಖೆ–ಹೊಗೆಯರೇಖೆ; ಪುಳಿಯೊಳಲೆದ–ಹುಳಿಯಲ್ಲಿ ತೊಳೆದ; ಬಿಂಬಾಧರಂ–ತೊಂಡೆ ಹಣ್ಣಿನ ಬಣ್ಣದ ತುಟಿ; ಉರುಳಿಯಂತೆ–ಉಂಡೆಯ ಹಾಗೆ; ದಾಡಿಮದ–ದಾಳಿಂಬದ; ಮುಕ್ಕುಳಿಸಿದಂತಪ್ಪ–

ತಿರಸ್ಕರಿಸಿದಂಥ ; ಇಳಿಸುವಂತಾದವು-ಕಡೆಗಣಿಸುವಂತಾಯಿತು ; ಕಾವಂ-ಕಾವನ್ನು, ದಂಟನ್ನು ; ಪೊಳಪಂ-ಹೊಳಪನ್ನು, ನಸುನೇಲ್ವ-ಸ್ವಲ್ಪ ನೇತಾಡುತ್ತಿರುವ, ಪಾಲೆಗಳುಂ-ಕಿವಿಯ ಹಾಲೆಗಳೂ; ಆಂದೋಳದಂತೆ-ಉಯ್ಯಾಲೆಯ ಹಾಗೆ ; ಎಳಗೌಂಗಿನಂತೆ-ಎಳೆಯ ಅಡಕೆ ಮರದಂತೆ; ರೇಖೆಗೊಂಡ-ಗೆರೆಯನ್ನು ಹೊಂದಿದ; ಪರಿಣದ್ಧ ಕಂಧರಂ-ವಿಶಾಲವಾದ ಕೊರಳು ; ನೋಂತು-ವ್ರತ ಮಾಡಿ; ಮೈಮೆಯೊಳ್‌-ಮಹಿಮೆಯಲ್ಲಿ; ವ್ಯಾಳಗಜಂಗಳುಮಂ-ದುಷ್ಟವಾದ ಆನೆಗಳನ್ನೂ ; ಅಂಕದ ಬರ್ದೆಯರುಮಂ-ಪ್ರಸಿದ್ಧರಾದ ಪ್ರೌಢ ಸ್ತ್ರೀಯರನ್ನೂ ; ಉಗಿಬಗಿಮಾಡಿದ-ಹೆದರಿಸಿದ ; ನಿಡುದೋಳ್ಗಳ್‌-ಉದ್ದವಾದ ತೋಳುಗಳು ; ಆಂಧ್ರೀ-ಆಂಧ್ರದೇಶದ ಸ್ತ್ರೀಯರ ; ಆಸ್ಫಾಳನ ಕರ್ಕಶಂಗಳಾದುವು-ಅಪ್ಪಳಿಸುವುದರಿಂದ ಒರಟಾದುವು, 'ಸುರದ್ವಿಪಾಸ್ಫಾಲನಕರ್ಕಶಾಂಗುಲೌ' ಎಂಬ ಕಾಳಿದಾಸನ ವಚನವನ್ನು ನೆನೆಯಬಹುದು ; ಪೊಡರ್ಪ ಪಗೆವರಂ-ಉಬ್ಬುವ ಹಗೆಗಳನ್ನು ; ಕೊಂಡ-ಸೆರೆಹಿಡಿದುಕೊಂಡ ; ಕೇರಳೀ ಕೇಳಿ ಕಂದರ್ಪನ-ಕೇರಳದೇಶದ ಸ್ತ್ರೀಯರೊಡನೆ ಕ್ರೀಡಿಸುವುದರಲ್ಲಿ ಮನ್ಮಥನಾಗಿರುವವನ ; ಕರಮಸಿದಾದ-ವಿಶೇಷವಾಗಿ ಕೃಶವಾದ ; ಆಳ್ದಂ ಮಾಡಿ-ಸ್ವಾಮಿಯನ್ನಾಗಿ ಮಾಡಿ; ಬರ್ದೆಯರ-ಪ್ರೌಢೆಯರ ; ಆವರ್ತನ ಸಿದ್ಧಿಯೊಳಂ-ಸುಳಿಸುಳಿಯಾಗುವ ಸಿದ್ಧಿಯಲ್ಲಿ ; ನಿಮ್ನ ನಾಭಿ-ಆಳವಾದ ಹೊಕ್ಕುಳು, ನಾಭಿಯಾದುದು-ಕೇಂದ್ರವಾಯಿತು ; ಒಜಲ್ದು ನೋಡುವ-ಪ್ರೀತಿಸಿ ನೋಡುವ ; ಗಾಡಿಕಾರ್ತಿಯರ-ಸುಂದರಿಯರ ; ಅಡ್ಡಣದಂತೆ-ಗುರಾಣಿಯ ಹಾಗೆ ; ಉದ್ವೃತ್ತ ವೃತ್ತತೆ-ಅತಿಶಯವಾದ ವರ್ತುಲತ್ವ ; ಆಲಾನಸ್ತಂಭಂಗಳಾದುವು-ಆನೆಯನ್ನು ಕಟ್ಟುವ ಕಂಭಗಳಾದುವು ; ಉಡುವಡರ್ದನ್ನಂ-ಉಡ ಹತ್ತಿಕೊಂಡಂಥವು ; ದೊಡ್ಡ ಮಾರ್ಗಂಗಳ್‌-ಆನೆ ಕುದುರೆಗಳ ಸವಾರಿಯಿಂದ ಕಿರುದೊಡೆಯಲ್ಲಿ ಕಟ್ಟುವ ಕಿಣಗಳು, ಜಡ್ಡು ; ಎಳವಾಟಿಯದಿಂಡಿನೊಳ್‌-ಎಳೆಬಾಳೆಯ ದಿಂಡಿನಲ್ಲಿ, ಸಾಣೆಗಟ್ಟಿದಂತೆ-ಸಾಣೆಕಲ್ಲನ್ನು ಕಟ್ಟಿದಹಾಗೆ; ಗೂಢ ಗುಲ್ಫಪಾರ್ಷ್ಣಿಗಳಂ-ಗೂಢವಾದ ಕಾಲಿನ ಹರಡನ್ನೂ ಹಿಮ್ಮಡಿಯನ್ನೂ ; ಪೊಱಅಡಿಗಳ್‌-ಅಡಿಗಳ ಹೊರ ಭಾಗವು ; ಕೂರ್ಮೋನ್ನತಂಗಳಾದುವು-ಆಮೆಯ ಬೆನ್ನು ಎಂದರೆ ಚಿಪ್ಪು ಅಂಚಿನ ಭಾಗಗಳಲ್ಲಿ ತಗ್ಗಾಗಿದ್ದು ನಡುವೆ ಎತ್ತರವಾಗಿರುವಂತೆ ಆದುವು ; ಸುಟ್ಟಿತೋರ್ಪನ್ನವಪ್ಪ-ಬೆರಳಿಟ್ಟು ತೋರಿಸುವಂಥವುಗಳಾದ ; ಗಂಡರ ಪೆಂಡಿರ್‌-ಶೂರರಾದವರ ಸ್ತ್ರೀಯರ ; ಅಳ್ಕಿದ-ಹೆದರಿದ ; ಕನ್ನಡಿಗಳನ್ನವಾದುವು-ಕನ್ನಡಿಗಳಂಥವಾದುವು ; ಇಟ್ಟುಳಿಗೊಂಡು-ಸೆಳೆದುಕೊಂಡು ; ಬಾಲಾತಪಂಗಳಂ ಅಲೆದು-ಎಳೆಯ ಬಿಸಿಲನ್ನು ಪೀಡಿಸಿ ; ಕೆಂಕಮಾದಂತೆ-ಕೆಂಪಾದಂತೆ; ಪೊಸವೆಸಱಗೆಯ-ಹೆಸರುಕಾಳಿದ ಹೊಸದಾದ ಮೊಳಕೆಯ ; ವಿಧಾತ್ರನೆಂಬ-ಬ್ರಹ್ಮನೆಂಬ ; ಚಿತ್ರಾರಿಯ-ಚಿತ್ರಗಾರನ ; ವರ್ಣಕ್ರಮಂಗೆಯ್ದ-ಬಣ್ಣಗಳನ್ನು ಹಾಕಿದ ; ಕದಳೀಗರ್ಭಶ್ಯಾಮಮೆಂಬ-ಕದಳೀಗರ್ಭದಂತೆ, ಎಂದರೆ ಬಾಳೆಯ ಹೂವಿನ ಮೋತೆಯಂತೆ ಕೆಂಪು ಕಪ್ಪು ಮಿಶ್ರವಾದ.

ಇಲ್ಲಿ ಪಂಪನು ತನ್ನ ಮೈಬಣ್ಣವನ್ನು ವರ್ಣಿಸಿಕೊಳ್ಳುವಾಗ ಹೇಳಿರುವ 'ಕದಳೀ

ಗರ್ಭಶ್ಯಾಮಂ' ಎಂಬ ಮಾತುಗಳನ್ನು ನೆನೆಯಬಹುದು. 'ಕದಳೀಗರ್ಭ' ಎಂದರೆ ಏನು? ಇದರಲ್ಲಿ ಭಿನ್ನಾಭಿಪ್ರಾಯಗಳಿವೆ; ಕದಲೀಗರ್ಭ = ರಂಭಾಗರ್ಭ ಎಂಬ ಮಾತು ಹರ್ಷ ಚರಿತೆಯಲ್ಲಿ ಬರುತ್ತದೆ; ಇದಕ್ಕೆ ಕೋವೆಲ್ (Cowell) ಮತ್ತು ಟಾನಿ (Tawney) ಎಂಬ ವಿದ್ವಾಂಸರು 'ಬಾಳೆಯ ಕಾಯಿನ ತಿರುಳಿ'ನಂತೆ (The unripe plantain fruit) ಎಂದು ವಿವರಣೆ ಹೇಳಿದ್ದಾರೆ; ಇದು ಸರಿಯಲ್ಲವೆಂದೂ ರಂಭಾ ಎಂದರೆ ಬಾಳೆಯ ಮರವಲ್ಲದೆ, ಅದರ ಕಾಯಿಯೆಂದು ಅರ್ಥವಲ್ಲವೆಂದೂ ಬಾಳೆಯ ಕಂಬದೊಳಗಿನ ದಿಂಡು ಎಂದು ಅರ್ಥವೆಂದೂ ಪಿ. ವಿ. ಕಾಣೆಯವರು ಹೇಳುತ್ತಾರೆ. (ಹರ್ಷ ಚರಿತ ಟಿಪ್ಪಣಿ ಪುಟ ೫೫). ರವಿಷೇಣನ ಜೈನರಾಮಾಯಣದಲ್ಲಿ 'ಕದಲೀ ಗರ್ಭ ಪಾಂಡುರಾ' ಎಂಬ ಮಾತು ದೊರೆಯುತ್ತದೆ; ಇದಕ್ಕೆ ಪಿ. ವಿ. ಕಾಣೆಯವರ ಅರ್ಥ ಸರಿಹೋಗುತ್ತದೆ. ಕದಳೀ ಎಂದರೆ ಬಾಳೆ ಕಾಯಿ; ಇದರಗರ್ಭ ಶ್ಯಾಮಲ ವರ್ಣವುಳ್ಳ ವೋತೆ ಎಂದು ಇಲ್ಲಿ ಅರ್ಥ ಮಾಡಿದೆ; ಎಣ್ಣೆ ಗೆಂಪಿನ ಬಣ್ಣ ಎಂದು ತಿಳಿಯಬಹುದು. ಕದಳೀ ಎಂದರೆ ಬಾಳೆಯ ಕಾಯಿ, ಹಣ್ಣೂ ಆಗಬಹುದು.

೪೦. ಮನದೊಳ್–ಮನದಲ್ಲಿ; ಒಱಲ್ದು–ಪ್ರೀತಿಸಿ, ಜೋಲ್ದು–ನೇತುಬಿದ್ದು; ಅಳಿಪಿ–ಆಶೆಪಟ್ಟು, ನೋಡಲೊಡಂ–ನೋಡಿದ ಕೂಡಲೆ, ಅಂಗಜನ್ಮಂ-ಮನ್ಮಥನು, ಕಣ್ಣುಮಂ ಮನಮುಮಂ-ಕಣ್ಣನ್ನೂ ಮನವನ್ನೂ, ಸೆಱೆಗೆಯ್ದು-ಸೆರೆಹಿಡಿದು, ಅಲರಂಬು ಗಳಿಂದೆ-ಹೂವಿನ ಬಾಣಗಳಿಂದ, ಮರುಳ್ಚಿ-ಮೋಹವನ್ನುಂಟು ಮಾಡಿ, ಬಂದ ಮಾವಿನ ಬನದೊಳ್–ಫಲಿತವಾದ ಮಾವಿನ ತೋಟದಲ್ಲಿ, ತೆರಳ್ಚಿ–ಸೇರುವಂತೆ ಮಾಡಿ, ಪೊಳೆವ, ಇಂದು ಮರೀಚಿಗಳಿಂದೆ–ಚಂದ್ರನ ಕಿರಣಗಳಿಂದ, ಉರುಳ್ಚಿ–ಉರುಳಿಸಿ, ಪೂವಿನ ಪಸೆ ಯೊಳ್–ಹೂವಿನ ಹಾಸಿಗೆಯಲ್ಲಿ, ಅಳುರ್ಕೆಯ ಬರ್ದೆಯರಂ-ಧೀರರಾದ ಪ್ರೌಢಸ್ತ್ರೀಯ ರನ್ನು, ಪೊರಳ್ಚಿದಂ-ಹೊರಳಾಡುವಂತೆ ಮಾಡಿದನು. ಗುಣಾರ್ಣವನ ಸೌಂದರ್ಯವನ್ನು ಕಂಡ ಪ್ರೌಢವನಿತೆಯರೂ ವಿರಹತಾಪಕ್ಕೆ ಸಿಕ್ಕಿ ಕಾಮನ ವಶವಾಗುತ್ತಿದ್ದರು ಎಂದು ಭಾವ.

**ವಚನ:** ನಕುಲ ಸಹದೇವರ ಯೌವನ ವರ್ಣನೆಗೆ ಕವಿ ಯಾವ ಪದ್ಯವನ್ನೂ ಬರೆಯಲಿಲ್ಲ; ಅವನ ಹಾಗೆಯೇ ಇವರು ಎಂದು ತಿಳಿಯಬೇಕೇನೋ! ಇತ್ತ, ಭರದ್ವಾಜನೆಂಬ, ಬ್ರಹ್ಮಋಷಿ.

೪೧. ಆ ನಿಯಮ ನಿಧಾನಂ ಮುನಿ–ಯತಿ ನಿಯಮಗಳಿಗೆ ಆಕರನಾದ ಆ ಋಷಿ, ಸ್ನಾನಾರ್ಥಂ–ಸ್ನಾನಕ್ಕಾಗಿ, ಒಂದು ಕಳಶಮಂ–ಒಂದು ಕೊಡವನ್ನು, ಎೞಲೆ– ಜೋತುಬೀಳುವಹಾಗೆ; ಪಿಡಿದು–ಹಿಡಿದು, ಅಮಳಿನ ಗಂಗಾನದಿಗೆ ವಂದು-ನಿರ್ಮಲ ವಾದ ಗಂಗೆಗೆ ಬಂದು, ಸುರತ ನಿಧಾನಿಯಂ–ರತಿಸುಖಕ್ಕೆ ನಿಧಿಯಾದವಳನ್ನು, ಅಮರೇಂದ್ರ ಗಣಿಕೆಯಂ–ಅಪ್ಸರಸ್ತ್ರೀಯನ್ನು, ಕಂಡಂ.

**ವಚನ:** ಅಂತುಕಾಣ್ಬುದುಂ–ಹಾಗೆಕಾಣುತ್ತಲು; ಅಮೃತಾಬ್ಧಿಯೆಂಬ– ಅಮೃತಾಬ್ಧಿ ಎಂಬ ಹೆಸರಿನ; ಕನಕ ಕಾಂಚೀ ಕಲಾಪದೊಳ್–ಚಿನ್ನದ ಒಡ್ಯಾಣದ ಪಟ್ಟಿಯಲ್ಲಿ; ತೊಡರ್ದ–ಸಿಕ್ಕಿಕೊಂಡ; ದೇವಾಂಗ ವಸ್ತ್ರದುಳ್ಳುಡೆಯೊಳ್-ರೇಷ್ಮೆವಸ್ತ್ರದ

ಒಳ ಉಡುಪಿನಲ್ಲಿ, ಉಲಿವ–ಸದ್ದು ಮಾಡುವ, ಸೂಸಕದ–ಗೆಜ್ಜೆಯ ಕುಚ್ಚಿನ, ನೂಲ ತೊಂಗಲ್ವೆರಸು–ನೂಲಿನ ಗೊಂಚಲಿನ ಸಮೇತವಾಗಿ, ಎಱಿಲ್ವ–ಇಳಿಬಿದ್ದಿರುವ, ಸೋಗೆ–ಗರಿಯು, ಕಾರ್ಗಾಲದ–ಮಳೆಗಾಲದ, ಸೋಗೆಯಂತೆ–ನವಿಲಿನಹಾಗೆ, ಸೊಗಯಿಸೆ–ಸುಂದರವಾಗಲು.

**೪೨.** ಆದ–ಉಂಟಾದ, ಎಲರ–ಗಾಳಿಯ, ಸೋಂಕಿನೊಳ್–ಸ್ಪರ್ಶದಿಂದ, ತೆಱಪಾಪೊಡೆ–ವಸ್ತ್ರ ಓಸರಿಸಿ ಅವಕಾಶವಾದರೆ, ಬೆಳ್ಪೆಸೆಯೆ–ಬೆಳ್ಪು ಪ್ರಕಾಶಿಸಲು, ಮಸೆದ, ಮದನನ–ಕಾಮನ, ಬಾಳಂತೆ–ಕತ್ತಿಯ ಹಾಗೆ, ಪೊಳೆವ–ಹೊಳೆಯುವ, ಒಳ್ದೊಡೆ–ತೊಡೆಯ ಒಳಭಾಗವು, ಆದುವು–ಆದುವು ; ತೆಱಪಾದ–ತೆರೆದಿರುವ, ಎರ್ದೆ[ಯುಂ]–ಎದೆಯೂ, ತನ್ಮುನಿಪತಿಯುಂ–ಆ ಋಷಿಯನ್ನು, ಅಂದು, ನಟ್ಟುವು–ನಾಟಿದುವು. ಗಾಳಿ ಬೀಸಿದ್ದರಿಂದ ದುಕೂಲ ಒಂದು ಕಡೆಗೆ ಸರಿದು ಅವಳ ತೊಡೆಗಳೂ, ಸೆರಗು ಸರಿದ ಎದೆಯೂ ಋಷಿಗೆ ಗೋಚರವಾಗಿ ಅವನು ಮೋಹಿತನಾದನೆಂದು ಭಾವ.

**ವಚನ**: ಧೈರ್ಯಕ್ಷರಣೆ–ಮನದಸ್ಥಿರತೆಯು ಸೋರಿಹೋಗುವುದು, ಮನ ಚಂಚಲವಾಗುವುದು.

**೪೩.** ಮಾಣದೆ–ನಿಲ್ಲದೆ, ಸೋವ–ಸೋರುವ, ಇಂದ್ರಿಯಮಂ–ಶುಕ್ಲವನ್ನು; ಆ ಋಷಿ, ದ್ರೋಣದೊಳ್–ದೊನ್ನೆಯಲ್ಲಿ, ಆಂತು–ಹಿಡಿದು, ಅಲ್ಲಿಯೊಗೆದ ಶಿಶುವಂ–ಅಲ್ಲಿ ಹುಟ್ಟಿದ ಮಗುವನ್ನು, ಕಂಡು–ನೋಡಿ, ಈ ದ್ರೋಣದೊಳೆ ಪುಟ್ಟಿದೀತಂ–ಈ ದೊನ್ನೆಯಲ್ಲಿಯೇ ಹುಟ್ಟಿದ ಇವನು, ದ್ರೋಣನೆ ಪೋಗು–ದ್ರೋಣ ಎಂಬ ಹೆಸರಿನವನೇ ಸರಿ, ಎಂದು, ಪೆಸರನಿಟ್ಟಂ ಮುನಿಪಂ–ಆ ಋಷಿ ಹೆಸರನ್ನಿಟ್ಟನು.

**ವಚನ**: ಆತ್ಮ ತನೂಜಂಗೆ–ತನ್ನ ಮಗನಿಗೆ ; ಬಿಲ್ವಿದ್ದೆಯಂ–ಧನುರ್ವಿದ್ಯೆಯನ್ನು, ಕಲಲ್ಪೇೞ್ದೊಡೆ–ಕಲಿಯಲು ನಿಯಮಿಸಿದರೆ: ತ್ರಿಣೇತ್ರನಂಶದೊಳ್–ಈಶ್ವರನ ಅಂಶದಲ್ಲಿ ; ಒರ್ವಮಗಂ ಪುಟ್ಟಿ–ಒಬ್ಬಮಗನು ಹುಟ್ಟಲು.

**೪೪.** ದಿವಿಜ–ದೇವತೆಗಳ ಅಥವಾ ಸ್ವರ್ಗದಲ್ಲಿ ಹುಟ್ಟಿದ, ಅಶ್ವ–ಕುದುರೆಯ, ಉಚ್ಚೈಃಶ್ರವದ, ತ್ಥಾಮ(=ಸ್ಥಾಮ)ದೊಳ್–ಶಕ್ತಿಯಲ್ಲಿ(ಕೆನೆತದಲ್ಲಿ) ಈ ಭುವನಂಗಳ್–ಈ ಲೋಕಗಳು, ನಡುಗೆ–ಹೆದರಲು, ಶಿಶು–ಮಗುವು, ಸರಂಗೆಯ್ದೊಡೆ–ಶಬ್ದ ಮಾಡಿದರೆ, ಕೂಗಿಕೊಂಡರೆ, ಕುಂಭಸಂಭವಂ–ದ್ರೋಣನು, ನಕ್ಕು, ಅವಯವದೆ–ಶ್ರಮವಿಲ್ಲದೆ, ಇವಂ–ಇವನು, ಅಶ್ವತ್ಥಾಮನೆಂದು, ಪೆಸರಿಡೆ–ಹೆಸರನ್ನಿಡಲು, ನೆಗೞ್ದಂ–ಅವನು ಪ್ರಸಿದ್ಧನಾದನು. "ಅಶ್ವಸ್ಯೇವಾಸ್ಯ ಯತ್ಸ್ಥಾಮನದತಃ ಪ್ರದಿಶೋಗತಮ್। ಅಶ್ವತ್ಥಾಮೇವ ಬಾಲೋಽಯಂ ತಸ್ಮಾನ್ನಾಮ್ನಾ ಭವಿಷ್ಯತಿ" ಎಂಬ ಮಹಾಭಾರತದ ಶ್ಲೋಕವನ್ನು ನೋಡಬಹುದು.

**ವಚನ**: ಅಂತು ನೆಗೞ್ದು–ಹಾಗೆ ಪ್ರಸಿದ್ಧನಾಗಿ; ಧನುರ್ಧರಾಗ್ರಗಣ್ಯನುಮಾಗಿ–ಬಿಲ್ಗಾರರಲ್ಲಿ ಶ್ರೇಷ್ಠನಾಗಿ; ಸಂದಂ–ಪ್ರಸಿದ್ಧನಾದನು.

**೪೫.** ದ್ರೋಣನು ಮಗನ ಸಮೇತವಾಗಿ ಪರಶುರಾಮನ ಬಳಿಗೆ ಬಂದನು.

ಕ್ಷಿತಿಯೊಳಗುಳ್ಳ–ಭೂಮಿಯಲ್ಲಿರುವ, ಭೂಭುಜರ–ರಾಜರ, ಕ್ಷತ್ರಿಯರ, ಬಿತ್ತು–ಬೀಜ ; ಮೊದಲ್ಗಿಡೆ–ಬೇರುಸಹಿತ ಹಾಳಾಗುವಂತೆ, ಮುನ್ನಂ–ಮೊದಲು, ಏಕವಿಂಶತಿ ಪರಿಸಂಖ್ಯೆಯಿಂ–ಇಪ್ಪತ್ತೊಂದು ಸಾರಿ, ತವಿಸಿ–ಕ್ಷಯಿಸುವಂತೆ ಮಾಡಿ, ಸರ್ವನಿವೇದಕಂ, ಎಂಬ, ಯಜ್ಞದೊಳ್–ಯಜ್ಞದಲ್ಲಿ; ಕ್ಷಿತಿಪೊಗಳ್ವಿನ್ನಂ–ಲೋಕವು ಹೊಗಳುತ್ತಿರಲು, ಕಶ್ಯಪ ಪ್ರಜಾಪತಿಗೆ–ಕಶ್ಯಪನೆಂಬ ಬ್ರಹ್ಮಋಷಿಗೆ, ಗುರುದಕ್ಷಿಣೆಯಾಗಿರೆ–ಗುರುವಿಗೆ ಕೊಡುವ ದಕ್ಷಿಣೆಯಾಗಿರಲು, ಸಮುದ್ರಮುದ್ರಿತಧರಿತ್ರಿಯಂ–ಕಡಲಿನಿಂದ ಬಳಸಿದ ಭೂಮಿಯನ್ನು, ಒಂದಟ್ಟಿಯೂರನೀವವೋಲ್–ಒಂದು ಕುಗ್ರಾಮವನ್ನು ಕೊಡುವಂತೆ, ಇತ್ತು–ಕೊಟ್ಟು, ದಾನಮಾಡಿ.

**ವಚನ :** ವಲ್ಕಲಾವೃತಕಟಿತಟನುಂ–ನಾರುಮಡಿಯಿಂದ ಸುತ್ತಿದಸೊಂಟವುಳ್ಳವನೂ; ಜಟಾಕಲಾಪನುಂ–ಜಡೆಯ ಸಮೂಹವುಳ್ಳವನೂ; ಭಾರ್ಗವಂ–ಪರಶುರಾಮನು, ದ್ರವ್ಯಾರ್ಥಿಯಾಗಿಬಂದ–ದ್ರವ್ಯವನ್ನು ಬೇಡುವವನಾಗಿ ಬಂದ; ಕನಕಪಾತ್ರಕ್ಕುಪಾಯಮಿಲ್ಲದೆ–ಚಿನ್ನದ ಪಾತ್ರೆಗಳಿಗೆ ಅಭಾವವನ್ನು ನೋಡಿ, ಮೃತ್ಪಾತ್ರದೊಳ್–ಮಣ್ಣಿನ ಪಾತ್ರೆಯಲ್ಲಿ, ಅರ್ಘ್ಯಮೆತ್ತಿ ಪೂಜಿಸೆ–ಅರ್ಘ್ಯವನ್ನು ಕೊಟ್ಟು ಪೂಜಿಸಲು.

**೪೬.** ಒಡಮೆಯಂ–ಆಸ್ತಿಯನ್ನು, ಅರ್ಥಿಗೆ ಇತ್ತೆಂ–ಬೇಡುವವನಿಗೆ ಕೊಟ್ಟೆನು, ಅವನೀತಳಮಂ–ಭೂಮಂಡಲವನ್ನು, ಗುರುಗಿತ್ತೆಂ–ಗುರುವಿಗೆ ಕೊಟ್ಟೆನು ; ಈಗಳ್–ಈಗ, ಕೈಯೊಳ್–ನನ್ನ ಕೈಯಲ್ಲಿ, ಒಂದು ಅಡಕೆಯುಂ ಇಲ್ಲ–ಒಂದು ಅಡಕೆ ಕೂಡ ಇಲ್ಲ, ಎರೆದಂ–ಬೇಡಿದವನು, ಶ್ರುತಪಾರಗಂ–ಶಾಸ್ತ್ರದಲ್ಲಿ ಪಾರಂಗತನು ; ಎಂತು–ಹೇಗೆ, ಸಂತಸಂಬಡಿಸುವೆನ್–ಇವನಿಗೆ ಸಂತೋಷವುಂಟುಮಾಡುತ್ತೇನೆ; ಕುಂಭಸಂಭವಾ–ದ್ರೋಣನೇ, ಇನ್ನು, ಇದೊಂದು ಧನುವಿರ್ದುದು–ಇದೊಂದು ಬಿಲ್ಲು ಇದೆ, ದಿವ್ಯಶರಾಳಿ ಇರ್ದುದು–ಶ್ರೇಷ್ಠವಾದ ಮಂತ್ರಾಸ್ತ್ರಗಳ ಸಮೂಹವಿದೆ, ಒಡಮೆ ಇಲ್ಲ–ಬೇರೇನು ಆಸ್ತಿ ಇಲ್ಲ, ಇವಱೊಳ್–ಈ ಎರಡರಲ್ಲಿ, ಆವುದಂ–ಯಾವುದನ್ನು, ಈವುದೋ–ಕೊಡುವುದೋ, ಸಮಂತು–ಚೆನ್ನಾಗಿ, ಪೇೞ್–ಹೇಳು. ಈ ಪದ್ಯದಲ್ಲಿ ಹತ್ತು ಸಣ್ಣ ವಾಕ್ಯಗಳು ಸೇರಿಕೊಂಡು ಸಂಭಾಷಣ ಶೈಲಿಗೆ ತಕ್ಕವಾಗಿವೆ ; ಇಲ್ಲಿನ ದೇಸಿ ಮಿಗಿಲು. ಕೈಯೊಳೊಂದಡಕೆಯುಂ ಇಲ್ಲ ಎಂಬ ನುಡಿಗಟ್ಟನ್ನು ನೋಡಬಹುದು, ಒಡಮೆ ಎಂಬುದರ ಮೂಲಾರ್ಥವನ್ನು ಇಲ್ಲಿ ಕಾಣುತ್ತೇವೆ ; = ಉಡೈಮೈ (ತಮಿಳು), ಆಸ್ತಿ, ಪರಶುರಾಮನ ಪರಿತಾಪ ಹೃದಯಸ್ಪರ್ಶಿಯಾಗಿದೆ.

**ವಚನ :** ಪೌರಂದರಾದಿ–ಇಂದ್ರಾಸ್ತ್ರವೇ ಮುಂತಾದ ; ಪಡಿಯಱಸಂ–ದ್ವಾರಪಾಲಕನನ್ನು, ರಾಜ್ಯಮದಿರಾಮದೋನ್ಮತ್ತಂ–ರಾಜ್ಯವೆಂಬ ಸುರೆಯಪಾನದಿಂದ ಸೊಕ್ಕೇರಿದವನಾಗಿ, ಗರ್ವಗ್ರಹವ್ಯಗ್ರ ಚಿತ್ತನುಂ–ಗರ್ವವೆಂಬ ಗ್ರಹದಿಂದ ಪೀಡಿತವಾದ ಮನವುಳ್ಳವನೂ ; ಮೇಗಿಲ್ಲದೆ–ಉತ್ತಮುತನವಿಲ್ಲದೆ,

**೪೭.** ಅಂತೆಂಬನಾರ್ಗೆ–ಹಾಗೆ ಎಂದು ಹೇಳಿಕೊಳ್ಳುವವನು ಎಂದರೆ ದ್ರೋಣ

ನೆನ್ನುವನು ಯಾರು? ಪಿರಿದುಂ ಭ್ರಾಂತು ದಲೇಂ–ಹಿರಿದಾದ ಭ್ರಮೆಯಲ್ಲವೇ ಇದು? ದ್ರೋಣನೆಂಬನೇಂ–ದ್ರೋಣನೆಂಬುವನೇನು? ಪಾರ್ವನೆ–ಬ್ರಾಹ್ಮಣನೇ? ಎಂತು ಎನಗೆ ಕೆಳೆಯನೇ–ಹೇಗೆ ನನಗೆ ಸ್ನೇಹಿತನೇ? ಅಂತಪ್ಪನಂ–ಅಂಥವನನ್ನು, ಅಱಿಯೆಂ–ತಿಳಿಯೆನು, ನೂಕು–ಆಚೆಗೆ ತಳ್ಳು, ಎಂದು, ದ್ರುಪದ, ಸಭೆಯೊಳ್–ಸಭಾಮಧ್ಯದಲ್ಲಿ, ನುಡಿದಂ–ಕೆಟ್ಟ ಮಾತಾಡಿದನು. ಈ ಪದ್ಯದ ಪ್ರಶ್ನೆಗಳಲ್ಲಿ ಕಾಣುವ ತಿರಸ್ಕಾರ, ಔದಾಸೀನ್ಯ, ಗರ್ವ, ದರ್ಪ, ಸ್ನೇಹಿತನಲ್ಲಿ ಅನಾದರ ಭಾವ, ಅಸಹನೆ, ಸ್ವಪ್ರತಿಷ್ಠೆ ಮುಂತಾದುವು ಅನುಭವೈಕ ವೇದ್ಯವಾದುವು, ಎಷ್ಟು ಸವಿದರೂ ಈ ಗರ್ವರಸ ಬತ್ತುವುದಿಲ್ಲ. ಇಲ್ಲಿ ಕಾಕುವಿನ ಪ್ರಯೋಗ ರಮಣೀಯವಾಗಿದೆ. ಆರ್ಗೆ ಎಂಬುದಕ್ಕೆ ಯಾರಿಗೆ ಸಂಬಂಧಪಟ್ಟವನು ಎಂಬರ್ಥವನ್ನು ಹೇಳುತ್ತಾರೆ. "ನೀನಾರ್ಗಾನಾರ್ಗೆ ತಾನಾರ್ಗೆನಗಿದನುಸಿರಲ್ವೇಡ" ಎಂಬ ಪ್ರಯೋಗವಿದೆ (ಶಮದ ಸೂ ೧೫೭)

**ವಚನ:** ಒತ್ತಂಬದಿಂದೊಳಗಂ ಪೊಕ್ಕು–ಬಲಾತ್ಕಾರದಿಂದ ಸಭೆಯ ಒಳಕ್ಕೆ ಪ್ರವೇಶಿಸಿ.

**೪೮.** ಅಣ್ಣ–ಅಣ್ಣನೇ, ನೀನುಮಾನುಮೊಡನೋದಿದೆವೆಂಬುದಂ– ನೀನೂ ನಾನೂ ಜೊತೆಯಲ್ಲಿ ಕಲಿತೆವು ಎಂಬುದನ್ನು, ಅಱಿಯಿರೆ–ತಿಳಿಯಿರೇ, ತಿಳಿಯಲಿಲ್ಲವೇ, ನಿನ್ನಂ ಆನ್ ಅಱಿಯೆನ್–ನಿನ್ನನ್ನು ನಾನು ತಿಳಿಯೆನು, ಅದೆಲ್ಲಿ ಕಂಡೆಯೋ-ನನ್ನನ್ನು ಅದೆಲ್ಲಿ ನೋಡಿದೆಯೋ? ಮಹೀಪತಿಗಂ–ರಾಜನಿಗೂ, ದ್ವಿಜವಂಶಜಂಗಂ–ಹಾರುವನಿಗೂ, ಏತಱ ಕೆಳೆ–ಯಾತರ ಸ್ನೇಹವೊ? ಇಂತು–ಹೀಗೆ, ಮಾನಸರ್–ಮನುಷ್ಯರು, ನಾಣಿಲಿಗರಪ್ಪರೆ–ನಾಚಿಕೆಯಿಲ್ಲದವರಾಗುತ್ತಾರೆಯೆ? ಎಂಬ ಮಾತುಗಳ್–ಎಂಬ ಮಾತುಗಳು, ನೆಱಗೊಳೆ–ಮರ್ಮವನ್ನು ಭೇದಿಸಲು, ಆ ದ್ರುಪದಂ–ಆ ದ್ರುಪದನು, ಕುಂಭಸಂಭವನಂ–ದ್ರೋಣನನ್ನು, ಕಡು ಸಿಗ್ಗುಮಾಡಿದಂ–ತೀವ್ರವಾದ ನಾಚಿಕೆಗೆ ಈಡು ಮಾಡಿದನು, ಹೀಯಾಳಿಸಿದನು. ಅಱಿಯಿರೆ–ತಿರಸ್ಕಾರಾರ್ಥದಲ್ಲಿ ಬಹುವಚನ ಪ್ರಯೋಗ; ನಾಣಿಲಿಗ=ನಾಣಿಲಿ<(ನಾಣ್+ಇಲ್ಲ)+ಗ; ನೆಱಗೊಳೆ<ನೆಱನಂ +ಕೊಳೆ; ತಮಿಳು, ನಿಱಂ–ಪ್ರಾಣಸ್ಥಾನ.

**ವಚನ:** ಈ ನಾಣಿಲಿ ಪಾರ್ವನಂ–ಈ ನಾಚಿಕೆಗೇಡಿ ಬ್ರಾಹ್ಮಣನನ್ನು, ಎೞೆದು ಕಳೆಯಿಂ–ಎಳೆದು ಹಾಕಿರಿ.

**೪೯.** ನುಡಿ ತಡವಪ್ಪುದು ಒಂದು–ಮಾತುಗಳು ತೊದಲುವುದು ಒಂದು; ಮೊಗದೊಳ್ ಮಱುಕಂದೊರೆಕೊಳ್ವುದೊಂದು–ಮುಖದಲ್ಲಿ ವಕ್ರಚೇಷ್ಟೆಯುಂಟಾಗುವುದು ಒಂದು; ನಾಣ್ಗೆಡೆಗುಡದಿರ್ಪುದೊಂದು–ನಾಚಿಕೆಗೆ ಏನೂ ಅವಕಾಶ ಕೊಡದಿರುವುದು ಒಂದು, ನುಡಿಗಳ್–ಮಾತುಗಳು, ನೊಱೆಯಂ ಮಱೆಯಿಪ್ಪುದು ಒಂದು–ಬಾಂಧವ್ಯವನ್ನು ಮರೆಯುವಂತೆ ಮಾಡುವುದು ಒಂದು, ಇಂತು–ಹೀಗೆ, ಕಳ್ಗುಡಿದವರಂದಂ–ಹೆಂಡ ಕುಡಿದವರ ರೀತಿ; ಇದು, ಸಿರಿ–ಐಶ್ವರ್ಯವು, ಸಾರ್ತರೆ–ಬರಲು, ಸಾರ್ವುದು–ಬರುತ್ತದೆ, ಅದರ್ಕೆ–ಅದಕ್ಕೆ, ಸಂದೆಯಂಬಡದೆ–ಸಂದೇಹ ಪಡದೆ, ಸಿರಿ–

ಲಕ್ಷ್ಮಿ, ಕಳ್ಳೊಡವುಟ್ಟಿತು–ಮದ್ಯದೊಡನೆ ಹುಟ್ಟಿತು, ಎಂಬುದಂ–ಎಂಬುದನ್ನು; ಈಗಳ್–ಈಗ, ಜಲಕ್ಕನೆ–ವಿಶದವಾಗಿ, ಅಱಿದೆಂ–ತಿಳಿದೆನು.

೫೦. ಖಳ–ದುಷ್ಟನೇ ನೀಚನೇ, ನೊಳವಿಂಗೆ–ನೊಣಕ್ಕೆ, ಕುಪ್ಪೆ–ಕಸದಕುಪ್ಪೆ, ತಿಪ್ಪೆ, ವರಂ–ಶ್ರೇಷ್ಠ, ಎಂಬವೋಲ್–ಎನ್ನುವಂತೆ, ನಿನ್ನದೊಂದು ಅಳವು–ನಿನ್ನ ಒಂದು ಸಾಮರ್ಥ್ಯ, ಆಂಬರಂ–ನನ್ನವರೆಗೂ, ಉಂಟೇ–ಇದೆಯೇ? ಇಲ್ಲವೆಂದು ಭಾವ, ಒಡನೆ, ಓದಿದ, ಒಂದು ಬೆರಗಿಂಗೆ–ಒಂದು ಉತ್ಸಾಹಕ್ಕಾಗಿ, ಎನಗೆ–ನನಗೆ, ಕೊಲಲ್ಕೆ–ನಿನ್ನನ್ನು ಕೊಲ್ಲುವುದಕ್ಕೆ, ಆಗದು, ಈ ಸಭಾವಳಯದೊಳ್–ಈ ಸಭೆಯ ಆವರಣದಲ್ಲಿ, ಎನ್ನಂ–ನನ್ನನ್ನು, ಏಳಿಸಿದ–ತಿರಸ್ಕರಿಸಿದ, ನಿನ್ನಂ–ನಿನ್ನನ್ನು, ಅನಾಕುಲಂ–ಏನೂ ತೊಂದರೆ ಇಲ್ಲದೆ, ಎನ್ನ–ನನ್ನ, ಚಟ್ಟರಿಂ–ಶಿಷ್ಯರಿಂದ, ತಳವೆಳಗಾಗೆ–ನಿನಗೆ ಗಾಬರಿಯಾಗಲು, ಕಟ್ಟಿಸದೆ–ಬಂಧಿಸದೆ, ಮಾಣ್ದೊಡೆ–ಬಿಟ್ಟ ಪಕ್ಷದಲ್ಲಿ, ಕೆಮ್ಮನೆ–ಸುಮ್ಮನೆ, ವ್ಯರ್ಥವಾಗಿ, ಮಿಸೆ ವೊತ್ತೆನೇ–ಮೀಸೆ ಹೊತ್ತವನಾಗುವುದಿಲ್ಲವೇ? ಆಗುತ್ತೇನೆ. ಇದು ದ್ರೋಣನ ಪ್ರತಿಜ್ಞೆ, ನೊಳವಿಂಗೆ ಕುಪ್ಪೆವರಂ–ಇದು ಗಾದೆಯಂತೆ ತೋರುತ್ತದೆ; 'ನೊಳವಿಂಗೆ ಕುಪ್ಪೆವರವೆಂಬಂತಕ್ಕುಂ' ಎಂದು ಪೊನ್ನನ ಪ್ರಯೋಗವಿದೆ. ಬೆರಗು = ತ. ವಿರಗು–ಉತ್ಸಾಹ, ಉಪಾಯ ಇತ್ಯಾದಿ ಅರ್ಥಗಳಿವೆ. ದ್ರೋಣನ ಮಾತುಗಾರಿಕೆ ಗಂಭೀರ ವಾಗಿದೆ; ದ್ರುಪದನದು ಅನಾಗರಿಕ.

**ವಚನ:** ಆರೂಢ ಪ್ರತಿಜ್ಞನಾಗಿ–ಏರಿಸಿಕೊಂಡ ಪ್ರತಿಜ್ಞೆಯುಳ್ಳವನಾಗಿ; ಅಪಗತಪರಿಶ್ರಮನಾಗಿ–ಆಯಾಸವನ್ನು ನೀಗಿದವನಾಗಿ

೫೧. ದ್ರೋಣನಿಗೆ ಕೌರವ ಪಾಂಡವರ ಪರಿಚಯವಾಗುವ ಸಂದರ್ಭ: ನೆರೆದು–ಕೌರವ ಪಾಂಡವರು ಒಟ್ಟಿಗೆ ಸೇರಿ, ತೋಲ್ಪುಲ್ಲೆಯಂ–ಚಕ್ಕಳದ ಜಿಂಕೆಯನ್ನು, ಇಸುತಿರೆ–ಬಾಣಗಳಿಂದ ಪ್ರಯೋಗ ಮಾಡುತ್ತಿರಲು, ಅದು, ಇರದೆ, ಪುರಾಣ ಕೂಪ ದೊಳ್ ಬಿೞ್ದೊಡೆ–ಹಳೆಯ ಬಾವಿಯಲ್ಲಿ ಬಿದ್ದರೆ, ಅದಂ ತೆಗೆವಂದಂ ಅರಿದು–ಅದನ್ನು ಹೊರಕ್ಕೆ ತೆಗೆಯುವ ರೀತಿ ಅಶಕ್ಯ, ಎಂದು ಅವರಿರೆ–ಎಂದು ಅವರು ಇರಲು, ಬಳಸಿಯು ಮಲ್ಲಿ–ಅಲ್ಲಿ ಸುತ್ತಾಡುತ್ತ, ದ್ರೋಣಂ, ಕಂಡು, ನಕ್ಕಂ. ಬಾಣ ಪ್ರಯೋಗದ ಅಭ್ಯಾಸ ಕ್ಕಾಗಿ ತೊಗಲಿನ ಜಿಂಕೆಯನ್ನು ಗುರಿಯನ್ನಾಗಿ ಮಾಡಿಕೊಂಡಿದ್ದರು.

೫೨. ಭರತಕುಳ ತಿಳಕರಿರ್–ಭರತ ವಂಶಕ್ಕೆ ನೀವು ತಿಲಕಪ್ರಾಯರಾಗಿದ್ದೀರಿ, ವರ ಶರಾಸನವ್ಯಗ್ರಹಸ್ತರಿರ್–ಶ್ರೇಷ್ಠವಾದ ಬಿಲ್ಲಿನಲ್ಲಿ ಆಸಕ್ತವಾದ ಕೈಗಳುಳ್ಳವರಾಗಿ ದ್ದೀರಿ, ಬಳಯುತರಿರ್–ನೀವು ಶಕ್ತಿಯುತರಾಗಿದ್ದೀರಿ, ಇನಿಬರುಂ ನೆರೆದು–ಇಷ್ಟು ಜನರೂ ಒಟ್ಟಾಗಿ, ಈ ಲಕ್ಷ್ಯಮಂ–ಈ ಗುರಿಯನ್ನು, ಸರದೆ–ಬಾಣದಿಂದ, ತೆಗೆಯ ಲಾರ್ತಿರು ಮಿಲ್ಲಾ–ತೆಗೆಯಲು ಸಮರ್ಥರಾಗಲಿಲ್ಲವೇ! ದ್ರೋಣನು ನಕ್ಕುದಕ್ಕೆ ಕಾರಣ ಈ ಪದ್ಯದಲ್ಲಿ ದೊರೆಯುತ್ತದೆ.

**ವಚನ:** ನೈಷ್ಠಿಕವೆಂಬ ಮುಷ್ಟಿಯೊಳಂ–ನೈಷ್ಠಿಕ ಎಂಬ ಹೆಸರಿನ ಮುಷ್ಟಿ ಯಲ್ಲೂ; ಪುಂಖಾನುಪುಂಖವೆಂಬ–ಬಾಣದ ಗರಿ ಇನ್ನೊಂದು ಬಾಣದ ಗರಿಯನ್ನು

ಅನುಸರಿಸಿಕೊಂಡು ಹೋಗುವುದು ಎಂಬ, ಅವಯುವದೊಳ್-ಶ್ರಮವಿಲ್ಲದೆ ; ಚೋದ್ಯಂ ಬಟ್ಟು-ಅಚ್ಚರಿಗೊಂಡು ; ಬಱಿಯನಟ್ಟಿ-ದೂತನನ್ನು ಕಳುಹಿಸಿ ; ಮಧುಪರ್ಕ-ಜೇನು ಮುಂತಾದ್ದನ್ನು ಸ್ವಾಗತದ ಚಿಹ್ನೆಯಾಗಿ ಕೊಡುವುದು, ವೇತ್ರಾಸನ-ಬೆತ್ತದ ಚಾಪೆ, ಪೀಠ, ತದೀಯ-ಆತನ.

೫೩. ಮದಮಂ-ಮದೋದಕವನ್ನು, ಮುಕ್ಕುಳಿಸಿರ್ದ-ಉಗುಳುತ್ತಿರುವ, ಇಭಂಗಳಂ-ಆನೆಗಳನ್ನು ; ಉದಗ್ರ-ಶ್ರೇಷ್ಠವಾದ, ಅಶ್ವಂಗಳಂ-ಕುದುರೆಗಳನ್ನು, ತಕ್ಕಿನ-ಯೋಗ್ಯತೆಯುಳ್ಳ, ಅಗ್ಗದ-ಶ್ರೇಷ್ಠವಾದ, ಬಾಡಂಗಳಂ-ಗ್ರಾಮಗಳನ್ನು, ತಣಿದೆಂ-ತೃಪ್ತನಾದೆನು, ಪೋ ಸಾಲ್ಗುಂ-ಹೋಸಾಕು, ಎಂಬನ್ನಂ-ಎನ್ನುವವರೆಗೂ, ಆಯ್ಸು-ಆರಿಸಿ, ಕೊಟ್ಟು-ದಾನ ಮಾಡಿ, ಅಂದು-ಆಗ, ನೂಱಱುವರ್ ಕುಮಾರ ರುಮಂ-ನೂರು ಆರುಜನ ಕುಮಾರರನ್ನು, ಇದಿರೊಳ್-ಅವನೆದುರಿಗೆ, ಇಟ್ಟು-ಒಪ್ಪಿಸಿ, ಈ ಕೂಸುಗಳ್, ಯೋಗ್ಯರಪ್ಪುದಂ-ಯೋಗ್ಯರಾಗುವುದನ್ನು, ಇನ್ನು, ಒಲ್ವಡೆ-ಇನ್ನು ನೀನು ಇಷ್ಟಪಡುವುದಾದರೆ, ಶಸ್ತ್ರ ವಿದ್ಯೆಗೆ-ಆಯುಧ ವಿದ್ಯೆಗೆ, ಒವಜಂ-ಉಪಾಧ್ಯಾಯನು, ಕುಂಭೋದ್ಭವಾ-ದ್ರೋಣನೇ, ನೀಂ, ಆಗು.

ವಚನ : ಅಂತೆಗೆಯ್ವೆನೆಂದು-ಹಾಗೆಯೇ ಮಾಡುತ್ತೇನೆಂದು ; ಕಲಶಜಂ-ದ್ರೋಣನು.

೫೪. ಈ ನೆರೆದ ಇನಿಬರುಂ-ಇಗೋ ಇಲ್ಲಿ ಸೇರಿರುವ ಇಷ್ಟು ಜನರೂ, ಎಂದುದಂ-ನಾನು ಹೇಳಿದ್ದನ್ನು, ಈವಿರೆ ಏನ್-ಕೊಡುವಿರೇನು, ಪೇೞಿಂ-ಹೇಳಿರಿ, ಎಂದೊಡೆ-ಎಂದರೆ, ಅನಿಬರುಂ-ಅಷ್ಟು ಕುಮಾರರೂ, ಮೌನವ್ರತದೆ-ಮಾತಾಡದ ವ್ರತದಿಂದ, ಇರ್ದರ್-ಇದ್ದರು ; ಗುಣಾರ್ಣವಂ-ಅರ್ಜುನನು, ಆನೀವೆಂ-ನಾನು ಕೊಡುತ್ತೇನೆ, ನಿಮ್ಮ ಬಯಸಿ ಬೇಡ್ಪುದಂ-ನೀವು ಬಯಸಿ ಬೇಡಿದ್ದನ್ನು ; ಎಂದಂ-ಎಂದನು.

ವಚನ : ಜಗದೇಕ ಮಲ್ಲನಂ-ಲೋಕಕ್ಕೆ ಒಬ್ಬನೇ ಜಟ್ಟಿ ಎಂಬ ಬಿರುದುಳ್ಳ ; ತೊಡೆಯನೇಱಿಸಿಕೊಂಡು-ತೊಡೆಯ ಮೇಲೆ, ಪ್ರೀತಿ ಸೂಚನೆಗಾಗಿ, ಹತ್ತಿಸಿಕೊಂಡು

೫೫. ಇನಿಬರೊಳಗೆ-ಇಷ್ಟು ಕುಮಾರರಲ್ಲಿ, ಈತನೊರ್ವನೆ-ಇವನೊಬ್ಬನೇ, ಧನುರಾಗಮದೆಡೆಗೆ-ಬಿಲ್ವಿದ್ಯೆಯಲ್ಲಿ, ಕುಶಲನಕ್ಕುಂ-ಪ್ರವೀಣನಾಗುತ್ತಾನೆ ; ಅದರ್ಕೇಂ ಕಿನಿಸದಿರಿಂ-ಅದಕ್ಕೇನು, ಕೋಪ ಮಾಡಬೇಡಿರಿ, ಮುನ್ನಱಿಪಿದೆಂ ಎನೆ-ಮೊದಲೇ ಹೇಳಿದ್ದೇನೆ ಎನ್ನಲು, ಭೀಷ್ಮಂ, ಅಲಂಪುಮಿಗೆ-ಸಂತೋಷವು ಹೆಚ್ಚಾಗುತ್ತಿರಲು, ಮುಗುಳ್ನಗೆ ನಕ್ಕಂ-ಮುಗುಳು ನಗೆಯನ್ನು ನಕ್ಕನು. ದ್ರೋಣನ ಮಾತಿನಲ್ಲಿ ಅಪ್ರಿಯ ವಾದುದು ಏನಾದರೂ ಇದ್ದಿದ್ದರೆ ಅದು ಭೀಷ್ಮನ ನಗುವಿನಲ್ಲಿ ತೇಲಿಹೋಗುತ್ತದೆ.

ವಚನ : ಚತುರಂಗ ಧನುರ್ವೇದಮುಮಂ-ನಾಲ್ಕು ಭಾಗಗಳನ್ನುಳ್ಳ ಧನುರ್ವಿದ್ಯೆಯನ್ನೂ ; ಉಪದೇಶಂ ಗೆಯ್ಯುತ್ತುಂ ಇರೆ ಇರೆ-ಉಪದೇಶ ಮಾಡುತ್ತ, ಇರುತ್ತಿರಲು

೫೬. ಯಾದವ ವಂಶಜರುಂ–ಯದುವಂಶದಲ್ಲಿ ಹುಟ್ಟಿದವರೂ, ನಾನಾ ದೇಶದ ನರೇಂದ್ರರುಂ–ನಾನಾ ದೇಶಗಳ ರಾಜರೂ, ಘಟೋದ್ಭವನ–ದ್ರೋಣನ, ಧನುರ್ವೇದ ಮನೆ ಕಲಲ್–ಧನುರ್ವಿದ್ಯೆಯನ್ನೇ ಕಲಿಯುವುದಕ್ಕಾಗಿ, ಬಂದು, ಆಳಾದರ್–ಸೇವಕ ರಾದರು ; ವಿದ್ಯಾ ಪ್ರಭಾವಂ–ವಿದ್ಯೆಯ ಶಕ್ತಿ, ಆ ದೊರೆತ ವಲಂ–ಆ ಯೋಗ್ಯತೆಯು ಳ್ಳದ್ದೇ, ನಿಜವಾಗಿಯೂ ; ಇಲ್ಲಿ ಅರ್ಥಾಂತರ ನ್ಯಾಸವೆಂಬ ಅಲಂಕಾರವಿದೆ. ಇಲ್ಲಿ ಪಂಪನು ತನ್ನ ವಿದ್ಯಾ ಪ್ರಭಾವವನ್ನೂ ನೆನೆದುಕೊಂಡಿರಬೇಕು ; ಇಲ್ಲದಿದ್ದರೆ ಅವನಿಗೆ ಅಷ್ಟು ಗೌರವ ಅರಿಕೇಸರಿಯ ಆಸ್ಥಾನದಲ್ಲಿ ದೊರೆಯುತ್ತಿತ್ತೆ ?

೫೭. ದ್ರೋಣನ ಬಳಿಗೆ ಕರ್ಣನು ಬಂದದ್ದು : ದ್ರೋಣಂ ಗಡಂ–ದ್ರೋಣ ನಲ್ಲವೆ, ಇಸುವಿದ್ಯೆಗೆ–ಬಾಣವಿದ್ಯೆಯಲ್ಲಿ, ಜಾಣಂ ಗಡಂ–ಜಾಣನಲ್ಲವೆ, ಎಂದು ಕೇಳ್ದು–ಎಂಬ ಪ್ರಶಂಸೆಯನ್ನು ಕೇಳಿ, ಕೌರವರ್ಗೆಲ್ಲಂ–ಕೌರವರಿಗೆಲ್ಲ, ಪ್ರಾಣಂ ಬರ್ಪ– ಜೀವ ಬರುವ, ಆಕೃತಿಯೊಳ್–ರೂಪದಲ್ಲಿಯೇ, ಬಾಣಾಸನ ಬಾಣಪಾಣಿ–ಬಿಲ್ಲು ಬಾಣಗಳನ್ನು ಕೈಯಲ್ಲಿ ಉಳ್ಳ, ಕರ್ಣಂ, ಬಂದಂ. ಈ ಪದ್ಯವು ಅತಿಶಯ ರಮಣೀಯ ವಾಗಿದೆ. ದ್ರೋಣನೇನು, ಜಾಣನೆ ಏನು–ಎಂಬ ಪ್ರಸಿದ್ಧಿ ಉಂಟಾಗಿರುತ್ತದೆ. ಆ ಖ್ಯಾತಿಯನ್ನು ಕೇಳಿ ಕರ್ಣ ಅಲ್ಲಿಗೆ ಬರುವುದು, ಕೌರವರಿಗೆ ಜೀವ ಬಂದಹಾಗಾಯಿತು ಎಂಬಲ್ಲಿ ಮುಂದಾಗುವ ಕರ್ಣ ಕೌರವರ ಸ್ನೇಹದ ಪೂರ್ಣ ಧ್ವನಿ ಇದೆ ; ಬಿಲ್ಲು ಬಾಣ ಗಳನ್ನು ಕೈಯಲ್ಲಿ ತೂಗುತ್ತ ಬರುವ ಕರ್ಣನ ಚಿತ್ರ ಕಣ್ಣಿಗೆ ಕಟ್ಟಿದಂತಾಗುತ್ತದೆ ; ಅಲ್ಲದೆ ಅವನ ವಿಷಯದಲ್ಲಿ ಮೆಚ್ಚುಗೆ, ಅನುಕಂಪೆ, ಖೇದ ಮುಂತಾದ ಭಾವಗಳು ಉದ್ಬುದ್ಧವಾಗುತ್ತವೆ.

**ವಚನ :** ವೈರಿಗಜ ಘಟಾ ವಿಘಟನನೊಳ್–ಶತ್ರುಗಳ ಆನೆ ಗುಂಪನ್ನು ಭೇದಿಸುವವನಾದ, ಅರ್ಜುನನಲ್ಲಿ ; ವಿಘಟಿಸಿ–ಪ್ರತಿಭಟಿಸಿ, ಸ್ಪರ್ಧಿಸಿ ; ಬಿಲ್ಗಲ್ತು– ಬಿಲ್ವಿದ್ಯೆಯನ್ನು ಕಲಿತು.

೫೮. ತನಗೆ–ಕರ್ಣನಾದ ತನಗೆ, ದುರ್ಯೋಧನನೊಳ್–ದುರ್ಯೋಧನನಲ್ಲಿ, ಕೆಳೆಯುಂ–ಸ್ನೇಹವೂ, ಗುಱಿಯುಂ–ಉದ್ದೇಶವೂ, ಗೊಟ್ಟಿಯುಂ–ಗೋಷ್ಠಿಯೂ ಎಂದರೆ ಕೂಟವೂ, ಅಳವಿಗೆ ಪಿರಿದಾಗೆ–ಅಳತೆಗೆ ಹಿರಿದಾಗಲು, ಎಂದರೆ ಅಧಿಕ ಪ್ರಮಾಣದ್ದಾಗಲು ; ಅರಾತಿ ಕಾಲಾನಳನೊಳ್–ಅರ್ಜುನನಲ್ಲಿ, ಮುಳಿಸುಂ– ಕೋಪವೂ, ನೋವುಂ–ವ್ಯಥೆಯೂ, ಕಲುಷಮುಂ–ಮನಸ್ಸು ಕದಡುವಿಕೆಯೂ, ಅಳುಂಬಮೆನೆ–ಅಧಿಕವೆನ್ನಲು

**ವಚನ :** ಸೆಣಸಿ–ಮತ್ಸರಿಸಿ, ಪಗೆಯನಭ್ಯಾಸಂಗೆಯ್ವಂತೆ–ಹಗೆತನವನ್ನು ಕಲಿಯುವಂತೆ, ವಿದ್ಯಾಭ್ಯಾಸಂಗೆಯ್ಯೆ–ವಿದ್ಯೆಯನ್ನು ಕಲಿಯಲು

೫೯. ದುರ್ಯೋಧನನುಂ–ದುರ್ಯೋಧನನು ಕೂಡ, ಮನದೊಳೊಗೆದ–ಮನಸ್ಸಿ ನಲ್ಲಿ ಮೂಡಿದ, ಅನ್ಯಜನ್ಮದ–ಜನ್ಮಾಂತರದ, ಮುಳಿಸು ಅದು–ಆ ಕೋಪವು, ಕಣ್ಣಿಂ ತುಳುಂಕೆ–ಕಣ್ಣಿನಿಂದ ಸೂಸಾಡಲು, ಅವನ–ಭೀಮನ, ಉರ್ವಿನ–ಅಧಿಕವಾದ, ಕಲಿ

ತನಕ್ಕೆ–ಪರಾಕ್ರಮಕ್ಕೆ, ಸೈರಿಸದೆ–ಸಹಸೆಯಿಲ್ಲದೆ, ಭೀಮನೊಳ್–ಭೀಮನಲ್ಲಿಯೇ, ಸೆಣಸಿ–ಮತ್ಸರಿಸಿ, ಗದೆಯಂ–ಗದಾಯುದ್ಧ ವಿದ್ಯೆಯನ್ನು, ಕಲ್ತಂ–ಕಲಿತುಕೊಂಡನು.

**ವಚನ :** ಆಗಾಮಿಕ ಸಂಗ್ರಾಮರಂಗಕ್ಕೆ–ಮುಂದೆ ಬರಲಿರುವ ಯುದ್ಧರಂಗಕ್ಕಾಗಿ; ಪಾತ್ರಂಗಳಂ–ನಟರನ್ನು; ಸಮೆಯಿಸುವ–ಮಾಡುವ, ಸಿದ್ಧಪಡಿಸುವ; ಸೂತ್ರಧಾರನಂತೆ–ನಾಟಕದ ಯಜಮಾನನ ಹಾಗೆ, ತಾರಾಗಣಂಗಳ ನಡುವಣ–ನಕ್ಷತ್ರ ಸಮೂಹದ ನಡುವೆ ಇರುವ; ಸಕಳಕಳಾಧರನಂತೆ–ಚಂದ್ರನಂತೆ; ಅಸ್ತ್ರಕಳಾಧರನಾಗಿ–ಅಸ್ತ್ರ ವಿದ್ಯೆಯನ್ನು ಹೊತ್ತವನಾಗಿ, ತನ್ನುಮಂ ಗೆಲೆವಂದ–ತನ್ನನ್ನೂ ಸೋಲಿಸಿದ, ಮೀರಿಸಿದ; ಶರಪರಿಣತಿಯಂ–ಬಾಣ ಪ್ರೌಢಿಮೆಯನ್ನು, ಆರಯಲ್–ಪರೀಕ್ಷಿಸಬೇಕೆಂದು.

೬೦. ಛಾಯಾಲಕ್ಷ್ಯಮಂ–ಪ್ರತಿಬಿಂಬದ ಗುರಿಯನ್ನು, ಒಡ್ಡಿಯುಂ–ಸೂಡಿಸಿಯೂ, ಆಯದ ನೀರೊಳಗೆ–ವಿಸ್ತಾರವಾದ,–ತಕ್ಕ ಪ್ರಮಾಣದ ನೀರಿನಲ್ಲಿ, ತನ್ನಂ–ತನ್ನನ್ನು (ದ್ರೋಣನನ್ನು), ಅಡಸಿದ–ಹಿಡಿದುಕೊಂಡ, ನೆಗಱಂ–ಮೊಸಳೆಯನ್ನೂ, ಬಾಯಱಿವಿನಂ–ಮೊಸಳೆಯ ಬಾಯಿ ನಾಶವಾಗುತ್ತಿರಲು, ಇಸಿಸಿಯುಂ–ಬಾಣ ಪ್ರಯೋಗ ಮಾಡಿಸಿಯೂ, ಅರೆ, ಹೋ, ಅಜ, ಬಾಪ್ಪು ಎನೆ–ಆಶ್ಚರ್ಯ ಮೆಚ್ಚಿಕೆಗಳನ್ನು ಸೂಚಿಸುವ ಧ್ವನಿಗಳೊಡನೆ, ಹರಿಗನಂ-ಅರ್ಜುನನನ್ನು, ಗುರು, ಪೊಗೞ್ದಂ–ಹೊಗಳಿದನು.

**ವಚನ** : ತನ್ನ ಪಗೆವನಪ್ಪ–ತನ್ನ ವೈರಿಯಾದ, ಅಮೋಘಂಗೆಲಲ್–ಅಮೋಘವಾಗಿ ಗೆಲ್ಲಲ್ಲು; ನೆಱೆಗುಂ–ಸಮರ್ಥನಾಗುತ್ತಾನೆ.

೬೧. ಅಣುಗಿನೊಳ್–ಶಿಷ್ಯಪ್ರೇಮದಲ್ಲಿ, ಎನ್ನ ಚಟ್ಟರೊಳಗೆ–ನನ್ನ ಶಿಷ್ಯರಲ್ಲಿ, ಈತನೆ ಜಟ್ಟಿಗನೆಂದು–ಇವನೇ ಶೂರನೆಂದು ಭಾವಿಸಿ, ವಿದ್ಯೆಯಂ, ಗುಣಕಜುಗೊಂಡು–ಒಲಿದು, ಪ್ರೀತಿಸಿ; ಕೊಟ್ಟ, ಎನಗೆ–ಎನಗೆ, ಸಂತಸಮಪ್ಪಿನಂ–ಸಂತೋಷವಾಗುತ್ತಿರಲು, ಈವ–ಕೊಡುವ, ದಕ್ಷಿಣೆ ಅದು–ಆ ಗುರುದಕ್ಷಿಣೆ, ಬೇಗಂ–ಬೇಗನೆ, ಆ ದ್ರುಪದನಂ–ಆ ದ್ರುಪದ ರಾಜನನ್ನು, ಕೋಡಗಗಟ್ಟು ಗಟ್ಟಿ–ಕಪಿಯನ್ನು ಕಟ್ಟುವ ಹಾಗೆ ಕಟ್ಟಿ, ತಂದು, ಅಣಿಯರಂ–ಅತಿಶಯವಾಗಲು, ಒಪ್ಪಿಸು–ನನಗೆ ಕೊಡು, ಪರಸೈನ್ಯ ಭೈರವಾ–ವೈರಿ ಸೈನ್ಯಕ್ಕೆ ಭಯಂಕರನಾದ ಅರ್ಜುನನೇ, ಆಂ–ನಾನು, ಇಂತು–ಹೀಗೆ, ಇದನೆ–ಇದನ್ನೇ, ಬೇಡಿದೆಂ ಗಡಾ–ಬಯಸಿದೆನಲ್ಲವೇ !

**ವಚನ** : ಬೆಸನದಾವುದು ಗಹನಂ–ಕೆಲಸ ಏನು ಮಹಾ ದೊಡ್ಡದು, ಪೂಣ್ದು ಪೋಗಿ–ಪ್ರತಿಜ್ಞೆ ಮಾಡಿ ಹೋಗಿ.

೬೨. ಒಡವಂದ–ಜೊತೆಯಲ್ಲಿ ಬಂದ, ಅಂಕದ ಕೌರವರ್–ಹೆಸರುವಾಸಿಯಾದ ಕೌರವರು, ದ್ರುಪದನ, ಅಂಬೇಱಿಂಗೆ–ಬಾಣಯುದ್ಧಕ್ಕೆ, ಮೆಯ್ಯೊಡ್ಡದೆ–ಮೈಯನ್ನು ಚಾಚದೆ ಎಂದರೆ ಮೈದೋರಿಸದೆ, ಒಡ್ಡೊಡೆದು–ಸೈನ್ಯವು ಒಡೆದುಹೋಗಿ, ಬೀೞ್ವ ತಲೆಗಳ್ ಸೂಸೆ–ಬೀಳುವ ತಲೆಗಳು ಇಟ್ಟಾಡುತ್ತಿರಲು, ಸೂೞ್ಪಟ್ಟಂ–ತನ್ನ ಸರದಿಯನ್ನು ಪಡೆದವನಾದ ಅರ್ಜುನನು, ಜವಂ ಪಿಡಿದೀಡಾಡುವ ಮಾೞ್ಕೆಯಂತೆ–

ಯಮನು ಹಿಡಿದುಕೊಂಡು ಬಿಸಾಡುವ ರೀತಿಯಲ್ಲಿ, ಪಲರಂ–ಹಲವರನ್ನು, ಕೊಂದಿಕ್ಕಿ-ಕೊಂದು ಹಾಕಿ, ಮೆಯ್ಮುಟ್ಟಿವಂದು–ದ್ರುಪದನ ಮೈಯನ್ನು ಸೋಕುವಂತೆ ಹತ್ತಿರಕ್ಕೆ ಬಂದು, ಮಾಣದೆ–ಬಿಡದೆ, ಕಟ್ಟಿ–ಬಂಧಿಸಿ, ರಿಪುವಂ–ವೈರಿ ದ್ರುಪದನನ್ನು, ದ್ರೋಣನಾ–ದ್ರೋಣನ, ಮುಂದೆ ಇಕ್ಕಿದಂ–ಮುಂದೆ ತಂದುಹಾಕಿದನು.

**ವಚನ**: ಪರಾಕ್ರಮಧವಳನ–ಶೌರ್ಯದಲ್ಲಿ ಗೂಳಿಯಂತಿರುವ ಅರ್ಜುನನ; ಕದಂಪಂ ಕರ್ಚಿ–ಕೆನ್ನೆಯನ್ನು ಕಚ್ಚಿ ಎಂದರೆ ಮುತ್ತಿಟ್ಟು; ಅವಷ್ಟಂಭದಿಂ–ಗರ್ವದಿಂದ; ನೀಡಿ–ಚಾಚಿ. ಧವಳಕ್ಕೆ ಪ್ರಯೋಗ: ಕೌರವ ಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ (ರನ್ನ).

೬೩. ಸಿರಿಮೆಯ್ಯೊಳಗೆ–ಶ್ರೀಮಂತಿಕೆಯಲ್ಲಿ (?), ಅಂದು–ಆ ದಿವಸ, ಅಱಿವಿರೆ ನನ್ನನ್ನು ಗುರುತಿಸುತ್ತೀರೇ? ನೆರವಿಯೊಳ್–ಗುಂಪಿನಲ್ಲಿ, ಆರ್ ಅಱಿವರ್–ಯಾರು ತಿಳಿಯುತ್ತಾರೆ? ಒರ್ಮೆಕಂಡರಂ–ಒಂದುಸಲ ನೋಡಿದವರನ್ನು, ಅಱಿಯಲ್ಕೆ ಅರಿದು-ತಿಳಿಯುವುದು ಅಶಕ್ಯ; ಎಮ್ಮಂ–ನಮ್ಮನ್ನು, ಬಡಪಾರ್ವರಂ–ಬಡಹಾರುವರನ್ನು, ಅರಸರೆ–ರಾಜರೇ, ನೀಂ ಈಗಳ್–ನೀವು ಈಗ, ಅಱಿವಿರ್–ತಿಳಿಯುತ್ತೀರಿ, ಅಱಿಯಿರೋ–ತಿಳಿಯುವುದಿಲ್ಲವೋ, ಪೇೞಿಂ–ಹೇಳಿರಿ. ಇಲ್ಲಿ ದ್ರೋಣನು ದ್ರುಪದನನ್ನು ಮೂದಲಿಸಿ ವ್ಯಂಗ್ಯವಾಗಿ ಅವನ ಆತ್ಮಗೌರವವನ್ನು ಮುರಿಯಲು ಹವಣಿಸುತ್ತಾನೆ; ಅವನ ಮಾತುಗಳು ಮುಳ್ಳುಚುಚ್ಚಿದಂತೆ ಇವೆ. ಈ ಪದ್ಯದಲ್ಲಿ ಅಚ್ಚಕನ್ನಡ ಶಬ್ದಗಳೇ ಇದ್ದು ದೇಶೀಶೈಲಿಯ ಶಕ್ತಿವ್ಯಕ್ತವಾಗಿದೆ. ಮಾತಿಗೆ ಮಾತು ಮಸೆಯುವ ಸಂಭಾಷಣೆಯ ಕಿಡಿಗಳು ಇಲ್ಲಿವೆ. 'ಗೆಲಲುಂ ಸಾಯಲುಮಾಱದೆ ತೊಲಗಿದೊಡೆ ನೆಗೞ್ತೆ ತೋಱುಗುಮೆ ಸಿರಿಮೆಯ್ಯಂ' ಎಂಬ ರನ್ನನ ಪ್ರಯೋಗವನ್ನು ನೋಡಿ.

**ವಚನ**: ಸಾಯೆ ಸರಸಂ ನುಡಿದು–ಸಾಯುವಂತೆ ಸರಸವಾಗಿ ತೆಗಳಿ;

೬೪. ಆದಿಕ್ಷತ್ರಿಯರೆ ನೀಂ–ನೀವು ಆದಿ ಕ್ಷತ್ರಿಯರಲ್ಲವೇ? ಆದಿತ್ಯನನಿಳಿಪ ತೇಜರಿರ್–ಸೂರ್ಯನನ್ನು ತಿರಸ್ಕರಿಸುವ ತೇಜಸ್ಸುಳ್ಳವರಾಗಿದ್ದೀರಿ? ಪಾರ್ವನ ಕಾಲ್–ಹಾರುವಯ್ಯನ ಕಾಲು, ಪೋದೆ–ಒದೆಯಲು, ನಡುತಲೆಯೊಳಿರ್ಪುದುಂ–ನಡುನೆತ್ತಿಯಲ್ಲಿರುವುದೂ, ಆದುದು–ಆಯಿತು; ಎಂದು, ನುಡಿದು–ಅನಿಷ್ಟವಾಗಿ ಮಾತಾಡಿ, ಕಾಯ್ಪಿನೊಳ್–ಕೋಪದಲ್ಲಿ, ಒದೆದಂ–ಒದ್ದನು.

**ವಚನ**: ಪರಿಭವಂ ಬಡಿಸಿದುದು–ತಿರಸ್ಕಾರಕ್ಕೆ ಒಳಪಡಿಸಿದುದು, ಸಾಲ್ಗುಂ–ಸಾಕು, ಮೇಲಪ್ಪ ಪಗೆಗಂಜಿ–ಉತ್ತಮನಾದ ವೈರಿಗೆ ಹೆದರಿ, ಪರಿಭವಾನಳಂ–ಅವಮಾನವೆಂಬ ಅಗ್ನಿ, ಆಳವಲ್ಲದೆ ಆಳುರೆ–ಅಳತೆಯಿಲ್ಲದೆ ಸುಡಲು, ಕೊಲ್ವನ್ನಂ–ಕೊಲ್ಲುವಂಥವನು, ಅನ್ನಳ್–ಅಂಥವಳು, ಸಂಕ್ರಮಿಸಿದ–ಸೇರುವಹಾಗೆ ಮಾಡಿದ; ಮೆಱೆಯಲ್ಕೆ–ಮೆರೆಯುವುದಕ್ಕೆ, ಪ್ರಕಟಿಸುವುದಕ್ಕೆ.

೬೫. ಧನುರ್ವಿದ್ಯೆಯ ಕಣ್ದೆಱೆವಿನೆಗಂ–ಬಿಲ್ವಿದ್ಯೆಯ ಕಣ್ಣು ತೆರೆಯುತ್ತಿರಲು ಎಂದರೆ ಬಿಲ್ವಿದ್ಯೆಗೆ ಜೀವಬರುತ್ತಿರಲು, ನೆಱೆಯೆ ಕಲ್ತ–ಪೂರ್ಣವಾಗಿ ಕಲಿತುಕೊಂಡ,

ನಿಮ್ಮ ಮಕ್ಕಳ ಮೆಯ್ಯೊಳ್–ನಿಮ್ಮ ಮಕ್ಕಳ ಮೈಯಲ್ಲಿ, ಎಂದರೆ ಮೂಲಕ, ಎನ್ನ ವಿದ್ಯೆಯಂ–ನನ್ನ ವಿದ್ಯೆಯನ್ನು, ಮೆಱೆದಪ್ಪೆಂ–ಪ್ರಕಟಿಸುತ್ತೇನೆ, ಒಯ್ಯನೆ–ನೇರಾಗಿ, ಅಱಿದು–ತಿಳಿದುಕೊಂಡು, ಅನಿಬರುಂ–ಎಲ್ಲರೂ, ಈಗಳ್–ಈಗ, ನೋಡುವುದು–ನೋಡಬೇಕು.

**ವಚನ:** ಸಮಚತುರಸ್ರಮಾಗೆ–ಸಮನಾದ ಚೌಕವಾಗಲು, ಕಲ್ಲಂ ಪುಲ್ಲುಮಂ ಸೋದಿಸಿ–ಕಲ್ಲನ್ನೂ ಹುಲ್ಲನ್ನೂ ಆರಿಸಿ ತೆಗೆದು

೬೬. ಸಿಂದುರದೊಳ್–ಚಂದ್ರ ಅಥವಾ ಕಾವಿಯಲ್ಲಿ, ಗಟ್ಟಿಸಿ–ದಮ್ಮಸುಮಾಡಿ, ನೆಲಗಟ್ಟಿಸಿ–ನೆಲಗಟ್ಟನ್ನುಕಟ್ಟಿ, ಚೆಂಬೊನ್ನ–ತುಸು ಕೆಂಪಾಗಿರುವ ಚಿನ್ನದ, ನೆಲೆಯು–ಮಾಡಗಳನ್ನುಳ್ಳ, ಚೌಪಳಿಗೆಗಳೊಳ್–ತೊಟ್ಟಿಗಳಲ್ಲಿ, ಹಜಾರಗಳಲ್ಲಿ, ಪಱಿಯಿಗೆಗಳಂ–ಬಾವುಟಗಳನ್ನು, ಕಟ್ಟಿಸಿ–ಏರಿಸಿ, ಬಿಯಂ-ವೆಚ್ಚವು, ಅಲ್ಲಿ, ಅಳವಟ್ಟಿರೆ–ಸೊಗಸಾಗಿರಲು ಎಂದರೆ ಸಾಕಷ್ಟಿರಲು, ಪಲವುಂ ಪಱೆಗಳ್–ಹಲವು ವಾದ್ಯಗಳು, ಮೊೞಗೆ–ಮೊಳಗುತ್ತಿರಲು,

**ವಚನ:** ಅಂತು, ಸಮೆದ–ಮಾಡಿದ; ವ್ಯಾಯಾಮ ರಂಗಕ್ಕೆ–ಅಂಗಶಿಕ್ಷೆಯ ಕಣಕ್ಕೆ;

೬೭. ಅರಸಿಯರಂ–ರಾಣಿಯರನ್ನೂ, ಅಣುಗರಂ–ಮಕ್ಕಳನ್ನೂ, ಬೇೞ್ಪರುಮಂ–ಬೇಕಾದವರನ್ನೂ, ಪೊಸೆಗಾಱರಂ–ಯುದ್ಧದಲ್ಲಿ ಪ್ರವೀಣರನ್ನೂ, ಪ್ರಗೀತರಂ–ಪ್ರಸಿದ್ಧರಾದವರನ್ನೂ, ಪುರಜನಸಹಿತಂ–ಪಟ್ಟಣಿಗರ ಸಮೇತವಾಗಿ, ಎಸೆಯೆ–ಪ್ರಕಾಶಿಸಲು, ಶೋಭಿಸಲು, ಒಡನೆ–ಜೊತೆಯಲ್ಲಿ, ಚೌಪಳಿಗೆಗಳೊಳ್–ಹಜಾರದ ಮೇಲು ಮಾಡಗಳಲ್ಲಿ, ಇಂಬಾಗಿರೆ–ವಿಸ್ತಾರವಾಗಿ, ಕುಳ್ಳಿರಿಸಿದರ್–ಕುಳಿತುಕೊಳ್ಳುವಂತೆ ಮಾಡಿದರು.

೬೮. ಆಗ ದ್ರೋಣನು ಬಂದದ್ದು : ಪೊಸಮುತ್ತಿನ ತುಡುಗೆ–ಹೊಸಮುತ್ತಿನ ಒಡವೆಗಳು, ಪೊದಳ್ದು-ವ್ಯಾಪಿಸಿ, ಎಸೆಯೆ-ಶೋಭಿಸಲು, ದುಕೂಲಾಂಬರಂ-ರೇಷ್ಮೆಯ ವಸ್ತ್ರವು, ನಿಜಾಂಗದೊಳಂ–ತನ್ನ ಮೈಮೇಲೆಯೂ, ಸಂದು–ಸೇರಿ, ಎಸೆದಿರೆ–ಸೊಗಸಾಗಿರಲು, ಬೆಳ್ಮುಗಿಲಿಂದಂ–ಬಿಳಿಮೋಡದಿಂದ, ಮುಸುಕಿದ–ಮುಚ್ಚಿದ, ನೀಲಾದ್ರಿ–ನೀಲಪರ್ವತವು, ಬರ್ಪ–ಬರುವ, ತೆಱದೊಳ್–ರೀತಿಯಲ್ಲಿ, ಬಂದಂ–ಬಂದನು. ಇಲ್ಲಿ ದ್ರೋಣನ ಚಿತ್ರ ಬಿಳಿ ಮುಗಿಲ ಹೊದಿಕೆಯನ್ನುಳ್ಳ ಗಿರಿಯಂತೆ ಗಂಭೀರವಾಗಿದೆ.

೬೯. ಪುಣ್ಯಾಹಸ್ವರಂ–ಪುಣ್ಯಾಹಮಾಡುವಾಗ ಹೇಳುವ ಮಂತ್ರಗಳ ನಾದವು, ನೆಗೆೞ್ದಿರೆ–ಉಂಟಾಗಿರಲು, ಪಟುಪಟಹ ಕಾಹಳಾರವಂ–ಸಮರ್ಥವಾದ ಭೇರಿಗಳ ಕಹಳೆಗಳ ನಾದ, ಆಗಳ್–ಆಗ, ಒಗೆದಿರೆ–ಹುಟ್ಟಿರಲು, ವಿವಿಧಾಸ್ತ್ರ ಪ್ರಗಲ್ಭರಂ–ನಾನಾ ಬಗೆಯಾದ ಆಯುಧಗಳಲ್ಲಿ ಪ್ರವೀಣರಾದವರನ್ನು, ತನ್ನ ಚಟ್ಟರಂ–ತನ್ನ ಶಿಷ್ಯರನ್ನು, ಕಳಶಭವಂ–ದ್ರೋಣನು, ಪುಗವೇೞ್ದಿಂ–ಪ್ರವೇಶಿಸುವಂತೆ ನಿಯಮನ ಮಾಡಿದನು.

೭೦. ಅಂತು ಪುಗವೇೞ್ವುದುಂ–ಹಾಗೆ ಹೋಗುವಂತೆ ಹೇಳಿದಕೂಡಲೇ,

ದಿಗ್ದಂತಿಗಳುಂ–ದಿಕ್ಕಿನ ಆನೆಗಳೂ, ಕುಲನಗಂಗಳುಂ–ಕುಲಪರ್ವತಗಳೂ, ಗಡಣಂಗೊಂಡು–ಗುಂಪು ಗುಂಪಾಗಿ, ಎಂತು–ಹೇಗೆ, ಕವಿತರ್ಕುಮಂತೆ–ಒಗ್ಗಾಗಿ ಹೇಗೆ ಬರುತ್ತದೋ ಹಾಗೆ, ನೆಲಂ–ನೆಲವು, ತಳರ್ವಿನೆಗಂ–ಚಲಿಸುತ್ತಿರಲು, ಪ್ರಚಂಡಕೋದಂಡಧರರ್–ಶೂರರಾದ ಬಿಲ್ಗಾರರು

ವಚನ: ಧರ್ಮಪುತ್ರನಂ ಮುಂತಿಟ್ಟು–ಧರ್ಮರಾಜನನ್ನು ಮುಂದಿರಿಸಿಕೊಂಡು, ಎಂದರೆ ಅವನನ್ನು ಹಿಂಬಾಲಿಸಿ, ನೂರ್ವರುಂ ಬಂದು–ನೂರು ಜನ ಕೌರವರೂ ಬಂದು,

೨೧ ಗದೆಯೊಳ್, ಬಿಲ್ಲೊಳ್, ಗಜದೊಳ್–ಗದೆಯಲ್ಲಿ, ಬಿಲ್ಲಿನಲ್ಲಿ, ಆನೆಯಲ್ಲಿ, ಕುದುರೆಯೊಳಂ–ಕುದುರೆಯಲ್ಲೂ; ರಥದೊಳ್–ರಥದಲ್ಲೂ, ಕೌಶಲದೆ–ಚಮತ್ಕಾರದಿಂದ, ಬೆಡಂಗೊದವಿರೆ–ಸೊಗಸು ಉಂಟಾಗುತ್ತಿರಲು, ಒರ್ಮೊದಲೆ–ಒಟ್ಟಿಗೇ, ಜನಂ ಪೊಗೞೆ-ಜನರು ಹೊಗಳಲು, ಜಳನಿಧಿ ನಿನದಂ ನೆಗೞೆ-ಸಮುದ್ರಘೋಷವುಂಟಾಗಲು, ತೋಱಿದರ್–ಪ್ರದರ್ಶಿಸಿದರು.

ವಚನ: ಅವರಿಂಬೞಿಯುಂ–ಅವರ ಅನಂತರ

೨೨. ಆದ ಮುಳಿಸಿಂದಂ–ಹುಟ್ಟಿದ ಕೋಪದಿಂದ, ಆಗಳ್–ಆಗ, ಮೋದುವ ಬಗೆ ಬಳೆಯೆ–ಹೊಡೆಯುವ ಮನಸ್ಸು ಬರಲು, ಪಿಡಿದ ಗದೆಗಳಿಂ–ಹಿಡಿದ ಗದೆಗಳಿಂದ, ಸುಯೋಧನೋಗ್ರ ವೃಕೋದರರ್–ದುರ್ಯೋಧನನೂ ಭಯಂಕರನಾದ ಭೀಮನೂ, ಒರ್ಮೊದಲೆ–ಕೂಡಲೇ, ಶಿಖರಮುಳ್ಳೆರಡಗಮುಂ–ಶಿಖರವುಳ್ಳ ಎರಡು ಬೆಟ್ಟಗಳನ್ನು, ಇಳಿಪಂತಾದುದು–ತಿರಸ್ಕರಿಸುವಂತೆ ಆಯಿತು. ಇಲ್ಲಿ ಎತ್ತಿದ ಗದೆಗಳನ್ನು ಪರ್ವತ ಶಿಖರಗಳಿಗೆ ಹೋಲಿಸಿರುವುದು ರಮ್ಯವಾಗಿದೆ.

ವಚನ: ಸೆಣಸಿ–ಮತ್ಸರಿಸಿ, ಬಹು ಪ್ರಯೋಗ–ಅನೇಕ ರೀತಿಯ ಸಂಚಾರಗಳನ್ನುಳ್ಳ,

೨೩. ಗೆಡೆವೆಚ್ಚೆರ್ವರ್–ಜೋಡಿ ಮಿಗಿಲಾಗಲು ಇಬ್ಬರು, ಮನಗೊಂಡು–ಪ್ರೇಕ್ಷಕರ ಮನಸ್ಸನ್ನು ಆಕರ್ಷಿಸಿ, ಒಡನೊಡನೆ – ಜೊತೆಜೊತೆಯಾಗಿ, ತಗುಳ್ದು–ಅಟ್ಟಿಕೊಂಡು ಹೋಗಿ, ಝೇಂಕರಿಸಿದೊಡೆ–ಶಬ್ದ ಮಾಡಿದರೆ, ಎಲ್ವಡಗಾಗೆ–ಎಲುಬು ಮಾಂಸಗಳಾಗಲು ಎಂದರೆ ಜಜ್ಜಿಹೋಗಲು, ಮೋದಲೆಂದಿರ್ದ–ಹೊಡೆಯಬೇಕೆಂದಿದ್ದ, ಎಡೆಯೊಳ್–ಸಮಯದಲ್ಲಿ, ಗುರು–ದ್ರೋಣ, ತನ್ನ ಮಗನಂ–ಅಶ್ವತ್ಥಾಮನನ್ನು, ಎಡೆವುಗವೇೞ್ದಂ–ನಡುವೆ ಪ್ರವೇಶಿಸುವಂತೆ ಹೇಳಿದನು. ಇಬ್ಬರನ್ನೂ ಬೇರ್ಪಡಿಸುವುದಕ್ಕಾಗಿ ಅಶ್ವತಾಮನು ನಡುವೆ ಬಂದನೆಂದು ತಾತ್ಪರ್ಯ. ಇಲ್ಲಿ ಗೆಡೆವಚ್ಚೆರ್ವರ್–ಎಂಬ ಪಾಠ ಸ್ವೀಕೃತವಾಗಿ ಗೆಡೆವಚ್ಚು ಎಂಬುದಕ್ಕೆ ಸ್ನೇಹವನ್ನು ಬಿಡು ಎಂದು ಅರ್ಥೈಸಿದೆ. ಇಲ್ಲಿ ಪಾಠ ಕ್ಲೇಶವಿದೆ.

ವಚನ: ಇರ್ವರುಂ–ಇಬ್ಬರೂ, ಎರಡುಂ ದೆಸೆಗೆ–ಎರಡೂ ಕಡೆಗೆ, ತೊಲಗಿ–ಹೋಗಿ, ನಿಂದಾಗಳ್–ನಿಂತಾಗ.

೨೪. ಅರ್ಜುನ ರಂಗಸ್ಥಲವನ್ನು ಪ್ರವೇಶಿಸುವುದು; ಆ ದೂರ್ವಾಂಕುರ ವರ್ಣ

ದೊಳ್–ಮೆಯ್ಯಿನ ಆ ಎಳಗರಿಕೆಯ ಬಣ್ಣದಲ್ಲಿ, ಆದಂ–ಮಿಗಿಲಾಗಿ, ಒಡಂಬಟ್ಟ–ಒಪ್ಪಿದ, ಕನಕಕವಚಂ–ಚಿನ್ನದ ಬಣ್ಣದ ಕವಚವನ್ನುಳ್ಳ, ಹರಿಗಂ–ಅರ್ಜುನ, ಅರಿಕೇಸರಿ, ರಾಜತ್ಕೋದಂಡಂ–ಪ್ರಕಾಶಮಾನವಾದ ಬಿಲ್ಲು, ಅಮರ್ದ–ಬೆನ್ನಿಗೆ ಆತುಕೊಂಡ, ದೊಣೆ–ಬತ್ತಳಿಕೆ, ಕಣ್ಗಾದಮೆ ಬರೆ–ಕಣ್ಣಿಗೆ ವಿಶೇಷವಾಗಿ ಸೊಗಸಾಗಲು, ಮುಂದೆ, ಬಂದು, ನಿಂದಂ–ನಿಂತನು.

**ವಚನ:** ಉಲಿವಜನದಕಳಕಳರವಮುಮಂ–ಕೂಗಾಡುವ ಜನರ ಗದ್ದಲವನ್ನೂ, ಮೊಳಗುವ ಪಱೆಗಳುಮಂ–ಮೊಳಗುತ್ತಿರುವ ವಾದ್ಯಗಳನ್ನೂ, ಬಾರಿಸಿ–ನಿಲ್ಲಿಸಿ, ತಡೆದು,

೭೫. ಈತಂ–ಇವನು, ಗುಣಾರ್ಣವಂ–ಗುಣಸಮುದ್ರನಾದ ಅರ್ಜುನ (=ಅರಿಕೇಸರಿ), ವಿಖ್ಯಾತಯಶಂ–ಪ್ರಸಿದ್ಧವಾದ ಕೀರ್ತಿಯುಳ್ಳವನು, ವೈರಿಗಜ ಘಟಾ ವಿಘಟನಂ–ಶತ್ರುಗಳ ಆನೆಪಡೆಯನ್ನು ಭೇದಿಸುವವನು, ಇಂತು–ಹೀಗೆ, ಈತನ ಸಾಹಸಂ–ಇವನ ಪರಾಕ್ರಮ, ಉಪಮಾತೀತಂ–ಹೋಲಿಕೆಗೆ ಮೀರಿದ್ದು, ಇದಂ ನೋಡಿಂ–ಇದನ್ನು ನೋಡಿರಿ; ಎಂದು, ನೆರವಿಗೆ–ಜನ ಸಂದಣಿಗೆ, ನುಡಿದಂ–ಹೇಳಿದನು. ಪಂಪ ಈ ಪದ್ಯವನ್ನು ಅರಿಕೇಸರಿಯ ಎದುರಿಗೆ ಅವನ ಸಭೆಯಲ್ಲಿ ಓದುತ್ತಿದ್ದಾಗ ಅರಿಕೇಸರಿಗೆ ಹರ್ಷವಾಗಿರಬೇಕು, ಪಂಪನಿಗೆ ತೃಪ್ತಿಯಾಗಿರಬೇಕು.

**ವಚನ:** ಆ ಪ್ರಸ್ತಾವದೊಳ್–ಆ ಸಮಯದಲ್ಲಿ. ಅರ್ಜುನ ಟಂಕಾರವನ್ನು ಮಾಡಿ ಬಾಣವನ್ನು ಹೂಡಿದ್ದು.

೭೬. ಇನ್ನಿನಿಸು ಜೇವೊಡೆದಾಗಳೆ–ಒಂದಿಷ್ಟು ಬಿಲ್ಲಿನ ಹೆದೆಯನ್ನು ಮೀಟಿ ಟಂಕಾರಮಾಡಿದಾಗಲೇ, ಒಡೆಗುಂ ಅಜಾಂಡಂ–ಬ್ರಹ್ಮಾಂಡವು ಒಡೆಯುತ್ತದೆ, ಬೊಮ್ಮನುಂ–ಬ್ರಹ್ಮನು ಕೂಡ, ಮನಂ ಗಿಡುಗುಂ-ಅಧೀರನಾಗುತ್ತಾನೆ, ಅದೇವುದು–ಅದು ಯಾವುದು ಎಂದು, ಒಯ್ಯನೆ ಮಿಡಿದು–ಮೃದುವಾಗಿ ಮೀಟಿ, ಜೇವೊಡೆದಾಗಳ್–ಟಂಕಾರಮಾಡಿ, ಆಗ, ಅಂಬಂ-ಬಾಣವನ್ನು, ಅಂಬು–ಬಾಣ, ಈಂಬುವುವು-ಈನುತ್ತವೆ, ಹೆರುತ್ತವೆ, ಎಂಬನಿತು–ಎಂಬಷ್ಟು, ಸಂದೆಯುಂ–ಸಂದೇಹವು, ಅಪ್ಪಿನಂ-ಆಗುತ್ತಿರಲು, ಅಸ್ತ್ರಜಾಲದಿಂ-ಬಾಣಗಳ ಸಮೂಹದಿಂದ, ವಿಯತ್ತಳದೊಳ್–ಆಕಾಶ ಪ್ರದೇಶದಲ್ಲಿ, ಅಂದು, ಗುಣಾರ್ಣವಂ, ತಡೆಯದೆ, ಪಂಜರಂ ಬಡೆದಂ–ಪಂಜರವನ್ನು ಕಟ್ಟಿದನು. ಆಕಾಶಕ್ಕೆ ಬಾಣಗಳ ಮೇಲ್ಕಟ್ಟನ್ನು ನಿರ್ಮಿಸಿದನು ಎಂದು ತಾತ್ಪರ್ಯ.

**ವಚನ:** ಪಾರ್ವತಾದಿ ಬಾಣಂಗಳಂ ತುಡೆ–ಪರ್ವತಾಸ್ತ್ರವೇ ಮುಂತಾದ ಬಾಣಗಳನ್ನು ಹೂಡಲು.

೭೭. ಗುಣಾರ್ಣವನ ಬಾಣ ಕೌಶಲವು ಇಲ್ಲಿ ವರ್ಣಿತವಾಗಿದೆ : ಕಾಳನೀಳ ಜಳದಾವಳಿ-ಪ್ರಳಯ ಕಾಲದ ಕಪ್ಪಾದ ಮೋಡಗಳು, ಕವಿದುವು–ಮುಚ್ಚಿಕೊಂಡುವು; ವಾರಿಧಿಗಳ್ ಧರಿತ್ರಿಯುಂ ಕವಿದುವು–ಸಮುದ್ರಗಳು ಭೂಮಿಯನ್ನು ಮುಚ್ಚಿಕೊಂಡುವು; ಗಾಳಿಗಳ್–ಬಿರುಗಾಳಿಗಳು, ಪ್ರಳಯ ಕಾಲಮನಾಗಿಸಲೆಂದೆ-ಪ್ರಲಯ ಕಾಲವನ್ನುಂಟು ಮಾಡಬೇಕೆಂದೇ, ಲೋಕಮಂ–ಭೂಲೋಕವನ್ನು, ಕವಿದುವು–ಆವರಿಸಿಕೊಂಡುವು;

ಉಗ್ರಲಯಾಗ್ನಿಗಳ್-ಭಯಂಕರವಾದ ಪ್ರಲಯಕಾಲದ ಕಿಚ್ಚುಗಳು, ಪೊಕ್ಕಳಂ-ವಿಶೇಷವಾಗಿ, ಕವಿದುವು-ಮುತ್ತಿಕೊಂಡುವು; ಅಂತೆ-ಹಾಗೆಯೇ, ಬೆಟ್ಟುಗಳ್-ಬೆಟ್ಟಗಳು, ಕವಿದುವು-ಮುಸುಕಿಕೊಂಡವು; ಎಂಬನಿತ್ತು-ಎಂಬಷ್ಟು, ಗುಣಾರ್ಣವ ನಸ್ತ್ರಕೌಶಲಂ-ಅರ್ಜುನನ ಬಾಣ ವಿದ್ಯಾ ಪರಿಣತಿ, ಭಯಂಕರಮಾಯ್ತು-ಭಯ ಪ್ರದವಾಯಿತು.

**ವಚನ :** ದುರ್ಯೋಧನನ ಮೊಗಂ ತಲೆನವಿರ ಗಂಟಿಂ ಕಿಱಿದಾಗೆ-ದುರ್ಯೋಧನನ ಮುಖವು ಅವನ ತಲೆಯ ಕೂದಲಿನ ಗಂಟಿಗಿಂತ ಚಿಕ್ಕದಾಗಲು; ದ್ರೋಣ ಭೀಷ್ಮಾದಿಗಳ ಮುಖಂ, ಅರಲ್ದ ತಾವರೆಯಿಂ ಪಿರಿದಾಗೆ-ಅರಳಿದ ತಾವರೆಗಿಂತಲೂ ಹಿರಿದಾಗಲು-ಇಲ್ಲಿನ ದೃಷ್ಟಾಂತಗಳು ಸ್ವಾರಸ್ಯವಾಗಿವೆ.

೭೮. ಈ ಸಮಯದಲ್ಲಿ ಕರ್ಣನು ಪ್ರವೇಶಿಸುತ್ತಾನೆ; ತೊಳಗುವ ತೇಜಂ-ಹೊಳೆಯುವ ತೇಜಸ್ಸು, ತೊಳತೊಳತೊಳಗುವ-ಹೊಳೆ ಹೊಳೆಯುತ್ತಿರುವ, ದಿವ್ಯಾಸ್ತ್ರಂ-ದಿವ್ಯವಾದ ಬಾಣಗಳು, ಅಮರ್ದ ಕೋದಂಡಂ-ಧರಿಸಿದ ಬಿಲ್ಲು, ಇವೆಲ್ಲ, ಸಭಾಸದರಂ-ಸಭಿಕರನ್ನು, ಅಸುಂಗೊಳಿಸೆ-ಚೇತನಗೊಳಿಸಲು, ಮನಂಗೊಳಿಸೆ-ಮನವನ್ನಾಕರ್ಷಿಸಲು, ಭಯಂಗೊಳಿಸೆ-ಭಯ ಪಡಿಸುತ್ತಿರಲು, ಕರ್ಣಂ, ಬಂದಂ. ಕರ್ಣನ ಬರವನ್ನು ಕಂಡ ಸಭಾಸದರಿಗೆ ಲವಲವಿಕೆಯುಂಟಾಯಿತು, ಮನಸ್ಸು ಸೆಳೆಯಿತು, ಭಯವೂ ಉಂಟಾಯಿತು. ಇಲ್ಲಿ ಅಸುಂಗೊಳ್-ಪ್ರಾಣಾಪಹರಣೇ ಎಂಬರ್ಥ ಹೊಂದುವುದಿಲ್ಲ: ಅಸುವಿಂ ಕೊಳ್-ಪ್ರಾಣದಿಂದ ತುಂಬಿಕೊಳ್ಳು ಎಂದು ಸಮಾಸವಿಚ್ಛೇದ ಮಾಡಲಾಗಿದೆ.

**ವಚನ :** ಪೊಡೆಮಟ್ಟು-ನಮಸ್ಕಾರ ಮಾಡಿ; ಶರಧಿಯಿಂ-ಬತ್ತಳಿಕೆಯಿಂದ, ಉರ್ಚಿಕೊಂಡು-ಸೆಳೆದುಕೊಂಡು,

೭೯. ಅರಿಗನ ಬಿಲ್ಬಲ್ಮೆಯೊಳ್-ಅರ್ಜುನನ ಬಿಲ್ಲ ಪ್ರೌಢಿಮೆಯಲ್ಲಿ, ಒಂದು, ಎರಡಿಲ್ಲದೆ-ಎರಡನೆಯದಲ್ಲದೆ, ಸಮಾನವಾಗಿ, ಬಗೆದ-ಆಲೋಚಿಸಿದ, ಮುಳಿಸುಂ-ಕೋಪವೂ, ಏವಮುಂ-ಅಸಮಾಧಾನವೂ, ಎರ್ದೆಯೊಳ್-ಎದೆಯಲ್ಲಿ, ಬರೆದಿರೆ-ಬರೆದಿರಲು, ಆಯತಕರ ಪರಿಘಂ-ಪರಿಘವೆಂಬಆಯುಧದಂತೆ ದೀರ್ಘವಾದ ಬಾಹುಗಳುಳ್ಳ, ಕರ್ಣಂ-ಕರ್ಣನು, ಆತ್ಮಕರ ಪರಿಣತಿಯಂ-ತನ್ನ ಕೈಚಮತ್ಕಾರವನ್ನು, ತೋಱಿದಂ-ತೋರಿಸಿದನು.

**ವಚನ :** ಎರ್ದೆಯ ಮುಳಿಸು ನಾಲಗೆಗೆ ವರೆ-ಎದೆಯಲ್ಲಿನ ಕೋಪ ನಾಲಗೆಗೆ ಬರಲು, ಎಂದರೆ ಮಾತಿನಮೂಲಕ ಹೊರಹೊಮ್ಮುವಂತೆ ಆಗಲು; ವಿದ್ವಿಷ್ಟ ವಿದ್ರಾವಣನಂ-ಶತ್ರುಗಳನ್ನು ಪಲಾಯನವಾಗುವಂತೆ ಮಾಡುವವನನ್ನು, ಅರ್ಜುನನನ್ನು.

೮೦. ಸಂಗತದಿಂ-ಎಲ್ಲರೂ ಒಟ್ಟಿಗೆ ಇಲ್ಲಿ ಸೇರಿರುವುದರಿಂದ, ಈ ರಂಗಮೆ-ಈ ವ್ಯಾಯಾಮಶಾಲೆಯೇ, ರಣರಂಗಮಾಗೆ-ಯುದ್ಧರಂಗವಾಗಲು, ಈಗಳ್-ಈಗಲೆ,

ಇಂತು–ಹೀಗೆ, ಕಾದುವಂ–ಯುದ್ಧಮಾಡೋಣ, ಅಳಪಂ-ಪ್ರತಾಪವನ್ನು, ಪೊಂಗದಿರ್-ಉಕ್ಕಿಸಬೇಡ, ಎಂದರೆ ಕೊಚ್ಚಿಕೊಳ್ಳಬೇಡ; ಇದಿರ್ಚು–ಎದುರಿಸು; ಅದೇಂಗಳ–ಅದೇನು, ಮಹಾ! ಗಂಡರ್–ಶೂರರು, ರಂಗಂಬೊಕ್ಕಾಡುವಂತೆ–ಯುದ್ಧರಂಗಕ್ಕೆ ಪ್ರವೇಶಮಾಡಿ, ನಾಟ್ಯರಂಗಕ್ಕೆ ಪ್ರವೇಶಮಾಡಿ ಕುಣಿಯುವಂತೆ, ಪೆಂಡಿರೆ–ಹೆಂಗಸರೇ? ಅಲ್ಲವೆಂದು ಅಭಿಪ್ರಾಯ.

**ವಚನ** : ಅಧಿರಥಮಥನಂ–ಅಧಿರಥರನ್ನು ಧ್ವಂಸಮಾಡುವವನು, ಅರ್ಜುನ.

೮೧. ಕರ್ಣ–ಕರ್ಣನೇ, ಈ ನೆರೆದ–ಇಲ್ಲಿ ಸೇರಿದ, ಗುರುಜನಂಗಳ–ಹಿರಿಯರ, ಮಾನಿನಿಯರ–ಸ್ತ್ರೀಯರ, ಮುಂದೆ, ಪೊಲ್ಲದು ನುಡಿದೈ–ಕೆಟ್ಟಮಾತುಗಳನ್ನು ಆಡಿದೆ; ಎನ್ನೀ ನಿಡುದೋಳ್ಗಳ ತೀನಂ–ನನ್ನ ಈ ದೀರ್ಘ ಬಾಹುಗಳ ತೀಟೆಯನ್ನು, ನೀಂ–ನೀನು, ಮಱುಗಿಸುವೆಯಪ್ಪೊಡೆ–ಹೊಗಲಾಡಿಸುವ ಪಕ್ಷದಲ್ಲಿ, ಆಂ–ನಾನು, ಒಲ್ಲದನೇ–ಒಲ್ಲದಿರುವವನೇ, ಒಪ್ಪದಿರುವವನೇ? ಒಪ್ಪುತ್ತೇನೆ ಎಂದರ್ಥ. ತಿನ್ ಎಂಬುದರ ಭಾವನಾಮ ತೀನ್=ತಿನ್ನುವುದು ತೀಟೆಯಾಗುವುದು, ನವೆಯಾಗುವುದು; ಮಱುಗ= ತ. ಮಱುಕ್ಕು–ಕಂದು, ಕಡಮೆಯಾಗು, ಕುಗ್ಗು, ಇತ್ಯಾದಿ.

**ವಚನ** : ಎಡೆಗೆ ವಂದು–ಇಬ್ಬರ ನಡುವೆ ಬಂದು.

೮೨. ಏವದ–ಅಸಮಾಧಾನದ, ಮುಳಿಸಿನ–ಕೋಪದ, ಕಾರಣಮಾವುದೋ–ಕಾರಣವೇನೋ? ಕರ್ಣ–ಕರ್ಣನೇ, ನೀಂ–ನೀನು, ನಿನ್ನತಾಯ ತಂದೆಯುದೆಸೆಯಂ–ನಿನ್ನ ತಾಯಿ ತಂದೆಗಳ ದಿಕ್ಕನ್ನು, ಸ್ಥಿತಿಯನ್ನು, ಭಾವಿಸದೆ–ಎಣಿಸದೆ, ನುಡಿವಂತು–ಹೇಳುವ ಹಾಗೆ, ನಿನಗಮರಿಕೇಸರಿಗಂ–ನಿನಗೂ ಅರ್ಜುನನಿಗೂ, ಸಮಕಟ್ಟು-ಸಮಾನತೆ, ಆವುದು–ಯಾವುದು ? ಏನೂ ಇಲ್ಲ.

**ವಚನ** : ಆ ಮಾತಿಂಗೆ–ಆ ಮಾತಿಗೆ, ಮಱುವಾತುಗುಡಲಱಿಯದೆ–ಉತ್ತರ ಹೇಳಲು ತಿಳಿಯದೆ, ಪಂದೆಯಂ ಪಾವಡರ್ದಂತೆ–ಹೇಡಿಯ ಮೇಲೆ ಹಾವು ಹತ್ತಿದ ಹಾಗೆ, ಉಮ್ಮನೆ–ಬಿಸಿಯಾಗಿ, ಬೆವರುತ್ತಮಿರ್ದ–ಬೆವರುತ್ತ ಇದ್ದ ;

೮೩. ಬೀರಮೆ–ಶೌರ್ಯವೇ, ಕುಲಮಲ್ಲದೆ–ಕುಲವಲ್ಲದೆ, ಕುಲಮೆಂಬುದು–ಕುಲವೆನ್ನಿಸಿಕೊಳ್ಳುವುದು, ಉಂಟೆ–ಇದೆಯೇ? ಕುಲಮುಸಿಂತು ಪಿಕ್ಕದಿರಿಂ–ಹೀಗೆ ಕರ್ಣನ ಕುಲವನ್ನು ಹಿಕ್ಕಬೇಡಿರಿ, ಬಿಡಿಸಿ ನೋಡಬೇಡಿರಿ ; ನೀ–ನೀವು, ಒಲಿದು–ಪ್ರೀತಿಸಿ, ಎಲ್ಲಿ ಪುಟ್ಟಬಳೆದಿರೋ–ಎಲ್ಲಿ ಹುಟ್ಟಿಬೆಳೆದಿರೋ? ಕೊಡದೊಳಂ–ಕಲಶದಲ್ಲೂ, ಶರಸ್ತಂಬದೊಳಂ–ಜೊಂಡು ಹುಲ್ಲಿನಲ್ಲಿಯೂ, ಕುಲಂ ಇರ್ದುದೆ–ಕುಲವಿತ್ತೆ ? ದ್ರೋಣ ಕೃಪರು ಸತಿಪತಿಗಳ ಸಹಜಪ್ರೇಮದ ಫಲಗಳಲ್ಲ ; ಒಬ್ಬನು ಹುಟ್ಟಿದ್ದು ಕಲಶದಲ್ಲಿ, ದೊನ್ನೆಯಲ್ಲಿ; ಇನ್ನೊಬ್ಬನು ಜೊಂಡುಹುಲ್ಲಿನಲ್ಲಿ ; ಅಲ್ಲಿ ಯಾತರ ಕುಲ? ಇವರೇ ಕುಲದ ಮಾತನಾಡುವವರು ?

**ವಚನ** : ಕನಕ ಪೀಠದ ಮೇಲೆ–ಚಿನ್ನದ ಪೀಠದ ಮೇಲೆ ; ಅಭಿಷೇಕಂಗೆಯ್ಸಿ–ಪಟ್ಟಾಭಿಷೇಕವನ್ನು ಮಾಡಿಸಿ ;

೮೪. ಮಂಗಳವಱೆಗಳ್–ಮಂಗಳ ವಾದ್ಯಗಳು, ಶುಭ ವಚನಂಗಳ್–ಸ್ವಸ್ತಿ ವಾಚನಗಳು, ಚಮರೀರುಹಂಗಳ್–ಚಾಮರಗಳು, ಆ ಶ್ವೇತಚ್ಛತ್ರಂಗಳ್–ಆ ಬಿಳಿಯ ಕೊಡೆಗಳು, ಅಮರ್ದು–ಸೇರಿ, ಎಸೆಯೆ–ಪ್ರಕಾಶಿಸಲು, ಅಂಗಮಹೀತಳ ವಿಭೂತಿಯಂ–ಅಂಗದೇಶದ ರಾಜ್ಯವೈಭವವನ್ನು, ಕರ್ಣಂಗೆ–ಕರ್ಣನಿಗೆ, ನೆಱೆಯಿತ್ತಂ–ಪೂರ್ಣವಾಗಿ ಕೊಟ್ಟನು. ಕರ್ಣನಿಗೆ ಅಂಗರಾಜ ಪದವಿ ಬಂತು, ದುರ್ಯೋಧನನ ಕೃಪೆಯಿಂದ.

**ವಚನ:** ನಿತ್ಯದಾನಕ್ಕೆ–ಪ್ರತಿದಿನದ ದಾನಕ್ಕಾಗಿ; ದೇವಸಬಳದ ದೇವತೆಗಳಲ್ಲಿರುವ ಒಂದು ತೂಕ, ಅಥವಾ ಅಳತೆ (?). ಸಬಳ ಗದ್ಯಾಣಂ ಎಂಬೊಂದು ನಾಣ್ಯವಿದೆ (ಶಮದ ಸೂ ೩೧೩)

೮೫. ದುರ್ಯೋಧನ ಕರ್ಣನನ್ನು ಗೆಳೆಯನನ್ನಾಗಿ ಸ್ವೀಕರಿಸಿದ್ದು : ಪೊಡೆಮಡುವರ್–ನಮಸ್ಕಾರಮಾಡುತ್ತಾರೆ, ಜೀಯೆಂಬರ್–ಜೀಯಾ ಎಂದು ಹೇಳುತ್ತಾರೆ, ಕುಡು–ಕೊಡು, ದಯೆಗೈ–ದಯೆತೋರಿಸು, ಏಂಪ್ರಸಾದಂ–ಏನು ಪ್ರಸಾದ, ಅನುಗ್ರಹ, ಎಂಬ, ಇವು, ಪೆಱರೊಳ್–ಇತರರಲ್ಲಿ, ನಡೆಗೆ–ನಡೆಯಲಿ; ಎನ್ನ ನಿನ್ನ ಎಡೆಯೊಳ್–ನನ್ನ ನಿನ್ನ ನಡುವೆ, ನಡೆಯಲ್ವೇಡ–ನಡೆಯಬೇಡ, ರಾಧೇಯಾ–ಕರ್ಣನೇ, ಎನಗೆ ಕೆಳೆಯನಯ್–ನನಗೆ ಸ್ನೇಹಿತನಾಗಿದ್ದೀಯ. ಇಲ್ಲಿ ದುರ್ಯೋಧನನ ಮಾತು ಅಂತಃಕರಣಪೂರ್ವಕವಾಗಿ ಇದೆ. ಪಂಪನು ಇಂಥ ಸ್ನೇಹದ ಮಾತುಗಳನ್ನು ಅರಿಕೇಸರಿಯಿಂದ ಕೇಳಿದ್ದನೇನೊ!

**ವಚನ:** ಬೇಡಿಕೊಂಡು–ಕರ್ಣನನ್ನು ಪ್ರಾರ್ಥಿಸಿಕೊಂಡು; ಪೊಡೆಮಡಿಸಿದಾಗಳ್–ನಮಸ್ಕಾರಮಾಡಿಸಿದಾಗ.

೮೬. ಇತ್ತ ಕಡೆ ಸೂರ್ಯನು ಮುಳುಗಿದನು : ಅವನು ಕರ್ಣನಿಗೆ ಬುದ್ಧಿ ಹೇಳುವಂತೆ ಕವಿ ಉತ್ಪ್ರೇಕ್ಷಿಸಿದ್ದಾನೆ. ಇಂತು–ಹೀಗೆ, ಸುಯೋಧನಂ–ದುರ್ಯೋಧನನು, ನಿನಗೆ ಮಾಡಿದ ರಾಜ್ಯವಿಭೂತಿಗೆ–ನಿನಗೆ ಮಾಡಿಕೊಟ್ಟ ರಾಜ್ಯವೈಭವಕ್ಕಾಗಿ, ಮುಯ್ವಾಂತು–ಹೆಗಲನ್ನು ಧರಿಸಿ ಎಂದರೆ ಉಬ್ಬಿ, ಉಂತೆ–ಸುಮ್ಮನೆ, ಇರದಿರ್–ಇರಬೇಡ, ಗುಣಾರ್ಣವನಿಂ–ಅರ್ಜುನನಿಂದ, ಅಸ್ತಮಯಕ್ಕೆ–ಮುಳುಗಿ ಹೋಗುವುದಕ್ಕೆ, ಇದೆ–ಇದೇ, ಸಾಲ್ಗುಂ–ಸಾಕು, ಈಗಳ್–ಈಗ, ಎಂಬಂತೆ ಪೊಲ್–ಎನ್ನುವ ಹಾಗೆ, ಅಂದು–ಆ ದಿನ, ಮುಂದಱದು–ಮುಂದಾಗುವುದನ್ನು, ಭವಿಷ್ಯವನ್ನು ತಿಳಿದು, ಬುದ್ಧಿವೇೞ್ವಂತೆಪೊಲ್–ಬುದ್ಧಿಮಾತುಗಳನ್ನು ಹೇಳುವಂತೆ, ಸೂರ್ಯ ಮಂಡಲಂ–ರವಿ ಬಿಂಬವು, ಅತ್ತಲ್–ಆತ್ತ ಕಡೆ, ಅಸ್ತಗಿರಿಯಂ–ಅಸ್ತ ಪರ್ವತವನ್ನು, ಮಱೆಗೊಂಡುದು–ಮರೆಯನ್ನಾಗಿ ಸ್ವೀಕರಿಸಿತು, ಎಂದರೆ ಸೂರ್ಯ ಅಸ್ತಂಗತನಾದನು. ಪಂಪನು ಮಾಡಿರುವ ಸೂರ್ಯೋದಯ ಸೂರ್ಯಾಸ್ತಗಳ ವರ್ಣನೆ ಈ ಕಾವ್ಯದಲ್ಲಿ ಈ ಬಗೆಯ ಉತ್ಪ್ರೇಕ್ಷೆಗಳಾಗಿ ರಮಣೀಯವಾಗಿವೆ.

**ವಚನ:** ನೆಲಂ ಮೂರಿವಿಟ್ಟಂತೆ–ನೆಲವು ಬಾಯಿ ಬಿಟ್ಟಹಾಗೆ, ಬಿರಿದಹಾಗೆ; ತಳರ್ದು–ಹೊರಹೊರಟು; ಓರೊರ್ವರನೆ–ಒಬ್ಬೊಬ್ಬರನ್ನೇ; ಪಿಡಿಯಲ್ಕಟ್ಟು ವಿಡಿದು ನುಡಿಯೆ–ಹಿಡಿದುಕೊಂಡಿದ್ದ ಲಾಂಛನಗಳಿಗೆ ಅನುಸಾರವಾಗಿ ಮಾತನಾಡಲು; ಅನಾಗತಮನಱಿವ–ಬರಲಿರುವುದನ್ನು ಎಂದರೆ ಭವಿಷ್ಯವನ್ನು ತಿಳಿಯುವ; ಬುದ್ಧಿಯೊ

ಯರ್-ಬುದ್ಧಿಯುಳ್ಳವರು. ಇಲ್ಲಿ ಮೂರಿ ಶಬ್ದಕ್ಕೆ ಬಾಯಿ ಎಂಬರ್ಥದಲ್ಲಿ ನೇಮಿ ಚಂದ್ರನ ಪ್ರಯೋಗ: ತಾರಗೆಯೆಸೆ ತೆಗೆದೊಟ್ಟಿದ ಮೂರಿಯ ರೋಮಂಥ ಫೇನ ಮಂಜರಿನಿಕರಂ''; ಜನ್ನನ ಪ್ರಯೋಗ: ಭೈರವನ ಜವನ ಮಾರಿಯ ಮೂರಿಯವೊಲ್ ನಿಂದ ಮಾರಿದತ್ತಂ, "ಇಲ್ಲಿ ಭೈರವನ ಮೂರಿ, ಜವನ ಮೂರಿ, ಮಾರಿಯ ಮೂರಿ ಎಂದು ಅನ್ವಯ. ಸಮೂಹಾರ್ಥದಲ್ಲಿಯೂ ಮೂರಿ ಶಬ್ದವಿದೆ; ಮಾರಿಯ ಮೂರಿ ಯಂತೆ, ಮೃತ್ಯುವಿನ ಕೊತ್ತಳಿಯಂತೆ, ಅಂತಕನ ಸಂತತಿಯಂತೆ, ಭೈರವನ ಬಳಗದಂತೆ (ಗಿರಿಜಾ ಕಲ್ಯಾಣ); ಪಿಡಿಯುಚ್ಚು = ಪಡಿಯುಚ್ಚು (ಪಂಭಾ. ಕೋ).

೮೭. ಅವರಿವರಿನ್ನರನ್ನರೆನವೇಡ-ಅವರು ಇವರು ಅಂಥವರು ಇಂಥವರು ಎಂದು ಹೇಳಬೇಡ; ಅರಿಕೇಸರಿಗಾಂಪರಿಲ್ಲ-ಅರ್ಜುನನನ್ನು ಎದುರಿಸುವವರು ಇಲ್ಲ; ಮಿಾಱುವ ತಲೆದೋರ್ಪ ಗಂಡರ್-ಅರ್ಜುನನ ಆಜ್ಞೆಯನ್ನು ಮಿಾರುವ ಅವನಿಗೆ ತಲೆದೋರಿಸುವ ಎಂದರೆ ಎದುರಾಗಿ ನಿಲ್ಲುವ ಶೂರರು, ಅಣಂ ಇಲ್ಲ-ಸ್ವಲ್ಪವೂ ಇಲ್ಲ; ಎಡೆಯೊಳ್- ನಡುವೆ, ಗೆಡೆವಚ್ಚುಗೊಂಡು-ಜೋಡಿ ಮುರಿದು ಹೋಗಿ, ಪಾಂಡವರನಕಾರಣಂ ಕೆಣಕಿದ-ನಿಷ್ಕಾರಣವಾಗಿ ಪಾಂಡವರನ್ನು ಕೆಣಕಿದ, ಈ ಪೊಸ ಪೊೞ್ತುಱೊಳ್- ಈ ಹೊಸ ಹೊತ್ತಿನಲ್ಲಿ, ಆದ ಕಿರ್ಚು-ಉಂಟಾದ ಅಗ್ನಿ, ಕೌರವರ್ಗೆ ಅದು-ಕೌರವರಿಗೆ ಆ ಕಿಚ್ಚು, ನಾಡೆಯುಂ-ವಿಶೇಷವಾಗಿ, ತಿಣುಕಂ-ಕಷ್ಟವನ್ನು, ತಿಣುಕಾಟವನ್ನು, ಆಗಿಸದೆ-ಆಗುಮಾಡದೆ, ಸೈತು ಪೊಕುಮೇ-ನೇರವಾಗಿ ಹೋಗುತ್ತದೆಯೇ? ಏಂ ಗಳ-ಏನು, ಅಲ್ಲವೆ. ಗೆಡೆವಚ್ಚು-(ಪಂಪಭಾ ೨-೭೭) ಪದ್ಯವನ್ನು ನೋಡಿ.

**ವಚನ**: ಕಟ್ತಲೆಯಂ-ಕತ್ತಲೆಯನ್ನು; ಕ ಱ್ತಲೆ > ಕರ್ತಲೆ > ಕತ್ತಲೆ; ತೇಜೋಂಕುರಂಗಳ್-ತೇಜಸ್ಸಿನ ಮೊಳಕೆಗಳು, ನಿವಾಸಕ್ಕೆ-ಮನಗೆ.

೮೮. ಎಸೆವ ನಿಜವಂಶಮಂ-ಪ್ರಕಾಶಿಸುವ ತನ್ನ ವಂಶವನ್ನು, ಪೆರ್ಚಿಸುವ ಗುಣಾರ್ಣವನೊಳ್-ಹೆಚ್ಚಿಸುವ, ವೃದ್ಧಿಮಾಡುವ ಅರ್ಜುನನಲ್ಲಿ, ಉಂತೆ-ಸುಮ್ಮನೆ, ಸೆಣಸಲ್ಕೆಂದಿರ್ಪ-ಮತ್ಸರಿಸಬೇಕೆಂದು ಇರುವ, ಸುಯೋಧನಂಗೆ-ದುರ್ಯೋಧನನಿಗೆ, ಮುಳಿಸಿಂ ಕಿಸುಗಣ್ಚಿದ ತೆಱದಿಂ-ಕೋಪದಿಂದ ಕಣ್ಣನ್ನು ಕೆಂಪಾಗಿಸಿಕೊಂಡಂತೆ, ಅಮೃತಕರಂ-ಚಂದ್ರನು, ಉದಯಿಸಿದಂ-ಹುಟ್ಟಿದನು. ಕಿಸುಗಾಣ್ಚು > ಕಿಸುಗಣ್ಚು = ಕಿಸುವಂ (ಕೆಂಪನ್ನು) + ಕಾಣ್ಚು = ತೋರಿಸು.

**ವಚನ**: ಬಲ್ಲಾಳ್ತನದಳವುಮಂ-ಅತಿಶೂರತನದ ಪ್ರಮಾಣವನ್ನು, ಅಳತೆ ಯನ್ನು; ಕಿರ್ಚಳುರ್ವಂತೆ-ಉರಿ ಸುಡುವ ಹಾಗೆ, ಒಳಗೊಳಗಳುರೆ-ಒಳಗೊಳಗೆ ಸುಡಲು, ವ್ಯಾಪಿಸಲು, "ಅಳುರ್-ಆವರಣೇ", ಕಟ್ಟೇಕಾಂತದೊಳ್-ಅತಿರಹಸ್ಯದಲ್ಲಿ.

೮೯. ಪಿರಿಯರ್-ಜ್ಯೇಷ್ಠರಾದ, ನೀಮಿರೆ-ನೀವಿರಲು, ಮುಂ ಪಟ್ಟಮಂ ಕಟ್ಟಿ- ಮೊದಲು ರಾಜ್ಯಪಟ್ಟವನ್ನು ಕಟ್ಟಲು, ಪಾಂಡುರಾಜನೆ-ಪಾಂಡುವೇ, ಭೂಭರಮಂ- ಭೂಮಿಯ ಪಾಲನೆಯಂ, ತಾಳ್ದಿದಂ ವಲಂ-ತಾಳಿದನಲ್ಲವೇ? ಈಗಳ್-ಈಗ, ಆತನ ಸುತರ್-ಅವನಪುತ್ರರು, ತಾಮಾಗಳೇ-ತಾವಾಗಲೇ, ಪಟ್ಟಕ್ಕೆ-ರಾಜ್ಯಪಟ್ಟಕ್ಕೆ, ಯೋಗ್ಯ

ರಾಗರೆ–ತಕ್ಕವರಾಗುವುದಿಲ್ಲವೇ ? ಆಗಿದ್ದಾರೆ, ತಗುಳ್ಚು–ಬೆನ್ನಟ್ಟಿಹೋಗಿ, ಪಾವಿಂಗೆ–ಹಾವಿಗೆ, ಪಾಲನೆಱೆವಿರ್–ಹಾಲನ್ನು ಎರೆಯುತ್ತೀರಿ, ದಾಯಾದ್ಯರಂ–ದಾಯಾದಿಗಳನ್ನು, ಪಿರಿಯರ್ ಮಾಡಿದಿರ್–ದೊಡ್ಡವರನ್ನಾಗಿ ಮಾಡಿದಿರಿ; ಎಮ್ಮ ಸಾವು ಮುಱಿವುಂ–ನಮ್ಮ ಸಾವುಬದುಕುಗಳೂ, ದೈವೇಚ್ಛೆಯಾಯ್ತು–ವಿಧಿಯ ಇಷ್ಟದಂತೆ, ಆಯಿತು; ಆಗದೇ–ಆಗದೇ ಇರುತ್ತದೆಯೆ ?

೯೦. ಅರ್ಜುನನ ಪರಾಕ್ರಮವನ್ನೂ ಆತನಿಂದ ಮುಂದೆ ತಮಗೆ ಆಗಲಿರುವ ಕೇಡನ್ನೂ ಧೃತರಾಷ್ಟ್ರನಿಗೆ ದುರ್ಯೋಧನಾದಿಗಳು ತಿಳಿಸುತ್ತಾರೆ; ಮಲೆ–ಬೆಟ್ಟವು ಎಂದರೆ ಗಡಿ ಪ್ರದೇಶಗಳ ಪರ್ವತ ವಾಸಿಗಳು, ತಲೆಪೋಱದೆ–ಯುದ್ಧದಲ್ಲಿ ಕಾಣಿಸದೆ; ಎಂದುದನೆ–ಹೇಳಿದ್ದನ್ನೆ, ಕೊಟ್ಟುದು–ಕೊಟ್ಟಿತು, ಕೊಟ್ಟರು. ಡಂಗಂ–ರಾಜ್ಯದ ಸೀಮಾ ಪ್ರದೇಶಗಳ ಪರ್ವತಮಾರ್ಗಗಳಲ್ಲಿರುವ ಸುಂಕದ ಕಟ್ಟೆಗಳು, ಅಥವಾ ಡಂಗಪಾಲಕರು, ಅಡಂಗಿ ಬಂ[ದುದು]–ವಶವಾದುವು, ಅಧೀನರಾದರು; ಕುಱುಂಬು–ಸಣ್ಣ ಪಾಳೆಯ ಪಟ್ಟುಗಳು, ಒಕ್ಕಲಿಗವೆಸರ್ಗೆ–ಬೇಸಾಯ ಮಾಡುವವರ ಹೆಸರಿಗೆ, ಪೂಣ್ಬುದು–ಪ್ರತಿಜ್ಞೆ ಮಾಡಿತು, ಎಂದರೆ ಪಾಳೆಯಗಾರರೆಲ್ಲ ಬೇಸಾಯತನಕ್ಕೆ ಒಪ್ಪಿದರು: ಅಥವಾ ಕೋಟೆಗಳೆಲ್ಲ ಒಕ್ಕಲುತನಕ್ಕೆ ಒಪ್ಪಿದುವು? ಮಿಕ್ಕ ಶತ್ರುಮಂಡಳಿಕರೆ–ಉಳಿದ ವೈರಿ ಸಾಮಂತರೇ, ತಱುಂಬದೆ–ಅಡ್ಡಗಟ್ಟದೆ, ಮಿತ್ರಮಂಡಳಿಕರಾದರ್–ಸ್ನೇಹಿತರಾದ ಸಾಮಂತರಾದರು; ಮಾರ್ಮಲೆದರನಿಕ್ಕಿ–ಪ್ರತಿಭಟಿಸಿದವರನ್ನು ಧ್ವಂಸಮಾಡಿ, ಇಂದು ನಾಳೆ–ಇವತ್ತೋ ನಾಳೆಯೋ, ಈ ನೆಲೆಯಿಂ–ಈ ಸ್ಥಳದಿಂದ, ಅನಾಕುಳಂ–ತೊಂದರೆ ಯಿಲ್ಲದೆ, ಕಷ್ಟವಿಲ್ಲದೆ, ನಮ್ಮಂ–ನಮ್ಮನ್ನು, ಗುಣಾರ್ಣವಂ–ಅರ್ಜುನನು, ಎೞೆದಿಕ್ಕುಗುಂ–ಎಳೆದುಹಾಕುತ್ತಾನೆ. ಡಂಗ < ಶೃಂಗ (ಸಂ), 'ಡಂಗ ಎಂದರೇನು' ಎಂಬ ಲೇಖನವನ್ನು ನೋಡಿ (ಶಬ್ದ ವಿಹಾರ); ಕುಱುಂಬು (ತ) = ಚಿಕ್ಕಪಾಳೆಯಗಾರ, ಹಗೆ, ಕೋಟೆ ಇತ್ಯಾದಿ ಅರ್ಥಗಳಿವೆ.

**ವಚನ**: ಅಂಪುದು–ಎದುರಿಸುವುದು, ಅರಿದು–ಅಸಾಧ್ಯ, ಉಪಾಂಶುವಧದೆ–ರಹಸ್ಯವಾದ ಕೊಲೆಯಿಂದ, ಕೆಯ್ಗೆಮಾಡುವುದು–ವಶಪಡಿಸಿಕೊಳ್ಳುವುದು.

**ಶ್ಲೋಕ**: ಸ್ವಾಮ್ಯಾರ್ಥಂ–ಸ್ವಾಮಿತ್ವವನ್ನು ಬಯಸುವವನು, ಸ್ವಾಮ್ಯವಿಕ್ರಾಂತಂ–ಆಸ್ತಿಯನ್ನು ಅಪಹರಿಸುವವನು, ಮರ್ಮಜ್ಞಂ–ರಹಸ್ಯಗಳನ್ನು ಬಲ್ಲವನು, ವ್ಯವಸಾಯಿನಂ-ಕಾರ್ಯಶೀಲನಾದವನು, ಅರ್ಧರಾಜ್ಯಹರಂ-ಅರ್ಧರಾಜ್ಯವನ್ನು ಅಪಹಾರ ಮಾಡುವವನು, ಇಂಥ, ಭೃತ್ಯಂ–ಭೃತ್ಯನನ್ನು, ಸೇವಕನನ್ನು, ಯಃನಹನ್ಯಾತ್-ಯಾರು ಕೊಲ್ಲುವುದಿಲ್ಲವೋ, ಸಃ–ಅವನು, ಹನ್ಯತೇ–ಕೊಲ್ಲಲ್ಪಡುವನು.

೯೧. ಮೇಣ್–ಮತ್ತು, ಕುಲಮಿಲ್ಲೆಯೋ–ಕುಲವಿಲ್ಲವೋ ಪಾಂಡವರಿಗೆ? ಸಮಗೆ ದಾಯಿಗರಲ್ಲರೋ- ಅವರು ಸಮಗೆ ದಾಯಾದಿಗಳಲ್ಲವೊ? ಶಸ್ತ್ರವಿದ್ಯೆಯೊಳ್–ಆಯುಧ ವಿದ್ಯೆಯಲ್ಲಿ, ಧನುರ್ವಿದ್ಯೆಯಲ್ಲಿ, ಪೂಣ್ಕೆಗಳಿಲ್ಲೆಯೋ–ಪ್ರತಿಜ್ಞೆಗಳಿಲ್ಲವೋ? ಧರೆಗೆ–ರಾಜ್ಯಕ್ಕೆ, ಅವರಯ್ಯನೆ-ಅವರ ತಂದೆಯೇ, ಮುಖ್ಯನಲ್ಲನೋ-ಮುಖ್ಯನಾದವನಲ್ಲವೋ?

ಅಯ್ಯ–ತಂದೆಯೇ, ನಿಮಗೆ, ಮನದಲ್–ಮನದಲ್ಲಿ, ಜಾಣ್-ಜಾಣತನವು, ಬುದ್ಧಿಯು, ಕಿಱಿದಾಗವೇಡ–ಅಲ್ಪವಾಗಬೇಕಾದುದಿಲ್ಲ; ವಿಧಾತೃಯೋಗದಿಂ–ವಿಧಿಯ ಯೋಗ ದಿಂದ, ದೈವಕಾರಣದಿಂದ, ಕಣ್ಕುರುಡಾದೊಡೇನೋ–ಕಣ್ಣು ಕುರುಡಾದರೆ ಏನು; ನಿಮ್ಮ ಬುದ್ಧಿಯುಂ–ಬುದ್ಧಿಯುಕೂಡ, ಕುರುಡಾಗಲೆವೇೞ್ಕುಮೆ–ಕುರುಡಾಗಲೇ ಬೇಕೇನು; ಇಲ್ಲ ಎಂದು ತಾತ್ಪರ್ಯ. ಪೂಣ್ಕೆ ಶಬ್ದಕ್ಕೆ, ಶಕ್ತಿ, ಸಾಮರ್ಥ್ಯ ಎಂದೂ ಅರ್ಥವಾಗ ಬಹುದು; (ತ) ಪೂಣ್ಕೈ<ಪೂಣ್=ವಲಿಮೈ, ಬಲ್ಮೆ, ಶಕ್ತಿ; ಪೂಣಿಗ=ಶೂರ ಎಂಬ ಕನ್ನಡ ಪದಕ್ಕೂ ಇದೇ ಮೂಲವಿರಬಹುದು.

**ವಚನ**: ಮನದೊಳೊಡಂಬಡೆ–ಮನಸ್ಸಿನಲ್ಲಿ ಒಪ್ಪುವಹಾಗೆ; ಮನದೆಗೊಂಡು –ಮನಸಾರ ಒಪ್ಪಿ.

೯೨. ತನ್ನ ಮಕ್ಕಳ ಸಂಚಿನಲ್ಲಿ ಧೃತರಾಷ್ಟ್ರನು ಸೇರುತ್ತಾನೆ. ಏನೆರ್ದೆಗೊಂಡ ಕಜ್ಜಮನೆ ಪೇೞ್ದಿಯೋ-ನನ್ನಎದೆಯನ್ನೇ ತುಂಬಿಕೊಂಡಿರುವ ಕಾರ್ಯವನ್ನೇ ನೀನು ಏನು ಹೇಳಿದೆಯೋ! ಕಂದ, ಅವರ್ಗಳ್–ಪಾಂಡವರು, ನಿನಗೆ, ಏನಾನುಂ–ಏನಾದರೂ, ಅಪಾಯಮಂ–ಕೇಡನ್ನು, ಬಗೆವರೆಂದೆ–ಬಗೆಯುತ್ತಾರೆಂದೇ, ಆನುಂ–ನಾನುಕೂಡ, ಚಿಂತಿಸುತಿರ್ಪೆಂ–ಚಿಂತೆಮಾಡುತ್ತಾ ಇದ್ದೇನೆ; ಪೇೞ್–ಹೇಳು, ನೀನಿರೆ–ನೀನು ಇರು ವಾಗ, ವೈರಿಗಳ್ಗೆ–ಹಗೆಗಳಾದ ಪಾಂಡವರಿಗೆ, ಪಟ್ಟಮುಂ ನೆಲನುಂ–ರಾಜ್ಯಪಟ್ಟವೂ ರಾಜ್ಯವೂ, ಅಪ್ಪುದಂ–ಆಗುವುದನ್ನು, ಒಲ್ವೆನೆ–ಒಪ್ಪುತ್ತೇನೆಯೆ? ನೀನೇನುಮದರ್ಕೆ ಚಿಂತಿಸದಿರ್–ಅದಕ್ಕೆ ನೀನೇನೂ ಯೋಚನೆಮಾಡಬೇಡ; ಪಾಂಡುಪುತ್ರರಂ–ಪಾಂಡವರನ್ನು, ಇಲ್ಲಿ, ಇರಲೀವೆನೆ–ಇರಲು ಅವಕಾಶ ಕೊಡುತ್ತೇನೆಯೆ?

**ವಚನ**: ಬೀಡಿಂಗೆ–ಮನೆಗೆ; ಪೊಲ್ಲಮಾನಸಂ–ದುರ್ಬುದ್ಧಿಯುಳ್ಳವನು; ಕಿಸುಱುಂ ಕಲಹಮುಂ–ಅಸಹನೆಯೂ ಜಗಳವೂ; ಅವರ ಪೋಗನಱಿದು–ಅವರು ಹೋಗುವುದನ್ನು ತಿಳಿದು; ಮನದನ್ನನಪ್ಪ – ತನ್ನಂತೆ ಮನಸ್ಸುಳ್ಳವನಾದ; ಪೆರ್ಗಡೆಯೊಳ್–ಹೆಗ್ಗಡೆಯಲ್ಲಿ; ಎಯ್ದುವಂತಾಗೆ–ಸೇರುವ ಹಾಗೆ; ಸಮಕಟ್ಟಿ–ಏರ್ಪಡಿಸಿ; ನೆರಂಬೇೞ್ದು–ಸಹಾಯಕ್ಕಾಗಿ ನಿಯಮಿಸಿ, ಕಳಿಪಿದಂ–ಕಳುಹಿಸಿಕೊಟ್ಟನು.

೯೩. ನೀಂ–ನೀನು, ಉದಿತೋದಿತನಯ್–ಪ್ರಸಿದ್ಧನಾದವನಾಗಿದ್ದೀಯೆ, ಶಾಸ್ತ್ರ ವನ್ನು ಬಲ್ಲವನಾಗಿದ್ದೀಯೆ, ನಿನಗೆ, ಉದಯದ ಮೇಲುದಯಮೆಂದು–ಶ್ರೇಯಸ್ಸಿನ ಮೇಲೆ ಶ್ರೇಯಸ್ಸು ಎನ್ನುತ್ತ, ನೆಗೞ್ದರಿಗಂಗೆ–ಕೀರ್ತಿಶಾಲಿಯಾದ ಅರ್ಜುನನಿಗೆ (ಅರಿಕೇಸರಿಗೆ), ಅಭ್ಯುದಯಮನಱಪುವ–ಏಳಿಗೆಯನ್ನು ತಿಳಿಸುವ, ತೆಱದಿಂದೆ–ರೀತಿ ಯಿಂದ, ಉದಯಾಚಲ ಚುಂಬಿ ಬಿಂಬಂ–ಉದಯ ಪರ್ವತವನ್ನು ಮುತ್ತಿಡುತ್ತಿರುವ ಮಂಡಲವುಳ್ಳ, ಇನಂ–ಸೂರ್ಯ, ಉದಯಿಸಿದಂ–ಹುಟ್ಟಿದನು.

**ವಚನ**: ಮಂಗಳ ಪಾಠಕರ–ಮಂಗಳವನ್ನು ಹೇಳುವವರ; ವೃತ್ತೋಚ್ಚಾರಣೆ ಗಳಿಂದಂ–ಪದ್ಯ ಪಠನದಿಂದ; ಉನ್ಮೀಲಿತನಯನರಾಗಿ–ಅರಳಿದ ಕಣ್ಣುಳ್ಳವರಾಗಿ, ಎಚ್ಚರಗೊಂಡವರಾಗಿ; ನಿರ್ವರ್ತಿಸಿ-ಮುಗಿಸಿ; ಮಂಗಳವಸದನಂಗೊಂಡು-ಮಂಗಳವಾದ

ಅಲಂಕಾರಗಳನ್ನು ಧರಿಸಿ ; ಸೇಸೆಗಳುಮಂ-ಮಂತ್ರಾಕ್ಷತೆಗಳನ್ನು ; ಅಂತುಕೊಳುತ್ತುಂ-ತಾಳಿಕೊಳ್ಳುತ್ತ ; ಪಟಹಂಗಳ್–ತಮಟೆಗಳು ; ಆ ಜಾನೇಯ ಕಾಂಭೋಜ ವಾಜಿಗಳ್-ಒಳ್ಳೆಯ ತಳಿಯ ಮತ್ತು ಕಾಂಭೋಜ ದೇಶದ ಕುದುರೆಗಳು ; ಅವರ ಪೋಗಿಂಗೆ–ಅವರ ನಿರ್ಗಮನಕ್ಕೆ, ಹೋಗುವುದಕ್ಕೆ ; ಅಟಿಲ್ದು–ವ್ಯಥೆಪಟ್ಟು,

೯೪. ಮನದೊಳ್–ಮನದಲ್ಲಿ,ಅಲಂಪು–ಸಂತೋಷವು, ಪೊಣ್ಮೆ–ಹೊಮ್ಮುತ್ತಿರಲು, ನುಡಿದುಂ-ಮಾತನಾಡಿಯೂ, ನಡೆನೋಡಿಯುಂ–ಚೆನ್ನಾಗಿ ನೋಡಿಯೂ, ಆಟಪಾಟಮುಂ ಬಿನದಮುಂ–ಆಟಪಾಟವೂ ವಿನೋದವೂ, ಆರುಮಂ–ಯಾರನ್ನೂ, ಮಱಯಿಸುತ್ತಿರೆ–ಮೈಮರೆಯುವ ಹಾಗೆ ಮಾಡುತ್ತಿರಲು, ಬೀದಿಗಳೊಳ್–ಪಟ್ಟಣದ ಬೀದಿಗಳಲ್ಲಿ, ವಿಳಾಸದ–ಸೊಗಸಿನ, ಒಡ್ಡು–ಸಮೂಹ, ಎನಿಸಿ ಎನಿಸಿಕೊಂಡು, ತೊಟಲ್ವ–ತಿರುಗಾಡುವ, ಪಾಂಡವರ, ಪೋಗಿನೊಳ್–ಹೋಗಿನಲ್ಲಿ, ಉಂತೆ–ಸುಮ್ಮನೆ, ಬೆಡಂಗುಗೆಟ್ಟು–ಬೆಡಗನ್ನು ನೀಗಿಕೊಂಡು, ಇಂದು–ಈಗ, ಹಸ್ತಿನ ಪುರಂ–ಹಸ್ತಿನಾವತಿಯು, ರಕ್ಕಸನ ತಿಂದ–ರಾಕ್ಷಸನು ತಿಂದ, ಪೊಟಲ್ಗೆ–ಪಟ್ಟಣಕ್ಕೆ, ಎಣೆಯಾಗದಿರ್ಕುಮೇ–ಸಮಾನವಾಗದಿರುತ್ತದೆಯೇ? ಪಾಂಡವರ ನಿರ್ಗಮನದಿಂದ ಹಸ್ತಿನಾವತಿ ಶೂನ್ಯವಾಯಿತು ಎಂದು ತಾತ್ಪರ್ಯ; ಅವರು ಇದ್ದಾಗ ಬೀದಿಗಳಲ್ಲೆಲ್ಲ ಅವರ ಆಟವೇ ವಿನೋದವೇ ಎಲ್ಲಿ ನೋಡಿದರೂ.

**ವಚನ :** ಕಣ್ಣನೀರಂ ನೆಗಪೆ–ಎಂದು ಕಣ್ಣೀರನ್ನು ಉಕ್ಕಿಸುತ್ತಿರಲು.

೯೫. ಪಾಂಡವರಿಗೆ ಶುಭವನ್ನು ಕೋರುವಂತೆ ಗಾಳಿ ಅನುಕೂಲವಾಗಿ ಬೀಸಿತು ; ಪರಸುವ–ಹರಸುವ, ಪೌರ ವೃದ್ಧರ–ಪಟ್ಟಣಿಗರಲ್ಲಿ ಹಿರಿಯರಾದವರ, ಕುಲಾಂಗನೆಯರ್ಕಳ–ಕುಲಸ್ತ್ರೀಯರ, ಸಾಧುವಾದದೊಳ್–ಒಳ್ಳೆಯದಾಯಿತು, ಒಳ್ಳೆಯದಾಯಿತು ಎಂಬ ಶಬ್ದದಲ್ಲಿ, ಬೆರಸಿ–ಸೇರಿಕೊಂಡು, ಸಮಂತು–ಚೆನ್ನಾಗಿ, ಸೂಸುವ–ಮೇಲೆ ಎರಚುವ, ಜಲಾರ್ದ್ರ–ನೀರಿನಿಂದ ತೊಯಿಸಿದ, ಲಸತ್–ಪ್ರಕಾಶಮಾನವಾದ, ಧವಲಾಕ್ಷತಂಗಳೊಳ್–ಬಿಳಿಯ ಅಕ್ಷತೆಗಳಲ್ಲಿ, ಬೆರಸಿದ–ಕೂಡಿದ, ತಣ್ಪನೆತ್ತಿ–ತಂಪನ್ನು ಎತ್ತಿಕೊಂಡು, ಕವಿದು ಎತ್ತಿದ–ದಟ್ಟವಾಗಿ ಎತ್ತಿದ, ಬಾಸಿಗದ–ಹೂವಿನ ಹಾರಗಳ, ಒಂದು ಕಂಪಿನೊಳ್–ಒಂದು ಸುಗಂಧದಲ್ಲಿ, ಪೊರೆದು–ವ್ಯಾಪಿಸಿ, ಲಿಪ್ತವಾಗಿ, ಮದಾಳಿಗಳ್ವೆರಸು–ಸೊಕ್ಕಿದ ದುಂಬಿಗಳ ಸಮೇತವಾಗಿ, ಅದೊಂದನುಕೂಲ ಮಾರುತಂ–ಒಂದು ಅನುಕೂಲವಾಗಿ ಬೀಸುವಗಾಳಿ, ಬಂದುದು–ಬಂತು.

**ವಚನ :** ಪೊಱಮಡೆ–ಹೊರಗೆ ಹೊರಡಲು ; ಬೞಯನೆ–ಹಿಂದೆಯೇ ; ತಗುಳ್ದು ಬರ್ಪ–ಅನುಸರಿಸಿ ಬರುವ ; ಮೇಳದ–ಜೊತೆಯ ; ಸಬ್ಬವದ–ವಿನೋದದ, ನಗೆಯ–ಹಾಸ್ಯದ ; ತೆಗೞ್ನವರಂ–ನಿಂದೆ ಮಾಡುವವರನ್ನು ; ಬೞಯಟ್ಟಿದಂದು–ದೂತನೊಡನೆ ಹೇಳಿ ಕಳುಹಿಸಿದಾಗ ; ಮೊದಲೊಳ್–ಅಂಚಿನಲ್ಲಿ, ಆರಂಭದಲ್ಲಿ ; ಮಗುೞ್ಚಿಂ ಎನೆ–ಹಿಂದಿರುಗಿರಿ ಎನ್ನಲು.

೯೬. ನಡಪಿಯುಂ–ಸಾಕಿ ಸಲಹಿಯೂ, ಓದಿಸಿಯುಂ–ವಿದ್ಯೆಯನ್ನು ಕಲಿಸಿಯೂ

ಬಿಲ್ವಿಡಿಯಿಸಿಯುಂ-ಬಿಲ್ಲನ್ನು ಹಿಡಿಯುವಂತೆ ಮಾಡಿಯೂ ಎಂದರೆ ಧನುರ್ಧಾರಿಗಳನ್ನಾಗಿ ಮಾಡಿಯೂ, ಕೆಚ್ಚು ವಿರ್ದ–ಚೆನ್ನಾಗಿ ಅಂಟಿಕೊಂಡಿದ್ದ, ಗಾಢವಾದ, ಕೂರ್ಮೆಗಳ್– ಪ್ರೀತಿಗಳು, ಎರ್ದೆಯಂ ನಾಟೆ–ಮನವನ್ನು ನಾಟಲು, ಪಾಂಡುಸುತರ, ಅಗಲ್ಕೆಗೆ– ವಿಯೋಗಕ್ಕೆ, ದ್ರೋಣ ಭೀಷ್ಮಕೃಪ ವಿದುರರ್ಕಳ್, ನಿಡುಸುಯ್ದರ್–ದುಃಖದಿಂದ ನಿಟ್ಟುಸಿರನ್ನು ಬಿಟ್ಟರು.

**ವಚನ:** ಕೆಲನ ಱಿಯದಂತು–ಪಕ್ಕದವರು ತಿಳಿಯದ ಹಾಗೆ ; ಬಟ್ಟೆಯ ಸಂಜೆಸ ಕಿರ್ಚಿನ ದೆಸೆಗೆ–ಮಾರ್ಗದ, ವಿಷದ, ಉರಿಯ ವಿಷಯಕ್ಕೆ ; ಕರಂ ಪ್ರಯತ್ನಪರರಾಗಿಂ– ವಿಶೇಷವಾಗಿ ಕಾರ್ಯ ಶೀಲರಾಗಿರಿ, ಪಯಣಂ ಜೋಗಿ–ಪ್ರಯಾಣ ಮಾಡಿ.

೯೭. ಪೊಳಪಿನ–ಪ್ರಕಾಶದ, ಕಿರಣದ–ರಶ್ಮಿಗಳ, ಗಾಳಿಯ ಪೊಳಪನೆ–ಗಾಳಿಯ ಹೊರಳಾಟವನ್ನೇ ಎಂದರೆ ಬೀಸುವುದನ್ನೇ, ಸೈರಿಸದ–ತಾಳಲಾರದ, ಕುಸುಮ ದಳ ಸುಕುಮಾರರ್–ಹೂವಿನೆಸಳಂತೆ ಕೋಮಲರಾದ ಮಕ್ಕಳು, ನೆಲೆಯಿಂದಂ ತಳರ್ದು– ವಸತಿಯಿಂದ ಹೊರಟು, ಆಗಳ್–ಆಗ, ಕೊಳದಿಂ–ಸರೋವರದಿಂದ, ಪೊಱಮಟ್ಟ– ಹೊರಕ್ಕೆ ಬಂದ, ಹಂಸೆಗಳ್ಗೆ–ಹಂಸಗಳಿಗೆ, ಎಣೆಯಾದರ್–ಸಮಾನರಾದರು. ಪೊಳಪು < ಪೊಳೆ–ಉತನೇ, ಪೊಳೆ + ಪು.

**ವಚನ:** ಆದಿ ಗರ್ಭೇಶ್ವರರ್–ಆಗರ್ಭ ಶ್ರೀಮಂತರು ; ತಳರ್ದು–ನಡೆದು ; ಎಡೆ ಎಡೆಯ–ನಡು ನಡುವೆ ಇರುವ ; ಬಾಡಂಗಳ–ಗ್ರಾಮಗಳ ; ಜನ್ನವಿರಂಗಳುಮಂ– ಜನಿವಾರಗಳನ್ನೂ ; ಕಾಪಂ–ರಕ್ಷಣೆಯನ್ನು ; ಕಾಲೂರ್ಗಳ–ಸಣ್ಣ ಗ್ರಾಮಗಳ ; ಗಾಂಪಿಂಗೆ–ದಡ್ಡ ತನಕ್ಕೆ; ಅೞಿದ ಆಯತನ–ಹಾಳಾದ ದೇವಾಲಯ; ಜೀರ್ಣೋದ್ಧಾರಂ ಗಳಂ–ಬಿದ್ದು ಹೋದುದನ್ನು ಮರಳಿ ಕಟ್ಟಿಸುವುದನ್ನು, ಪಡಿಸಲಿಸುವುದನ್ನು ; ಬೀಡು ದಾಣಂಗಳೊಳ್–ಬೀಡು ಬಿಡುವ ಎಡೆಗಳಲ್ಲಿ ; ಇಕ್ಕಿದ–ಹಾಕಿದ ; ಬಳ್ಳಿ ಗಾವಣಂಗ ಳೊಳ್–ಬಳ್ಳಿಯ ಚಪ್ಪರಗಳಲ್ಲಿ, ನನೆಯ ಜೊಂಪಂಗಳೊಳಂ–ಹೂವಿನ ಗೊಂಚಲು ಗಳಲ್ಲಿ ; ಪಂಪನ ಕಾಲದಲ್ಲಿ ದೇಶಾಟನೆಗೆ ಹೊರಟ ರಾಜರೂ ಅವನ ಸಾಮಂತ ಮಾಂಡಳಿಕರೂ ಇತರ ಅಧಿಕಾರಿಗಳೂ ಸಾಮಾನ್ಯವಾಗಿ ಮಾಡುತ್ತಿದ್ದ ಜನೋಪಕಾರಕ ಕಾರ್ಯಗಳನ್ನೇ ಇಲ್ಲಿ ಹೇಳಿದೆ.

೯೮. ಎಡಱುಱಿದೀವ–ಬಡತನವನ್ನು ತಿಳಿದು ದಾನ ಮಾಡುವ, ಕಲ್ಪತರು ವೆಂದು-ಕಲ್ಪವೃಕ್ಷವೆಂದು, ವನೀಪಕ ಕೋಟಿ–ಅಸಂಖ್ಯಾತ ಯಾಚಕರು, ಸಂತಸಂಬಡೆ- ಸಂತೋಷ ಪಡಲು ; ಪೊಡೆವ–ಹೊಡೆವ, ಒಂದು, ಅಕಾಲವಿಲಯಾಶನಿಯೆಂದು– ಕಾಲವಲ್ಲದ ಕಾಲದಲ್ಲಿ ಬರುವ ಪ್ರಲಯಕಾರಕ ಸಿಡಿಲೆಂದು, ವಿರೋಧಿಗಳ್–ಹಗೆಗಳು, ಮನಂಗಿಡೆ-ಮನಸ್ಸು ಕೆಡಲು ; ಬಿಯಮುಂ–ವ್ಯಯವೂ, ಪರಾಕ್ರಮಮುಂ-ಪೌರುಷವೂ, ಒಪ್ಪಿರೆ–ಸೊಗಸಾಗಿರಲು, ತನ್ನೊಡವುಟ್ಟಿದರ್–ತನ್ನ ಸಹೋದರರು, ಸಮಂತು– ಚೆನ್ನಾಗಿ ; ಒಡವರೆ–ಜೊತೆಯಲ್ಲಿ ಬರಲು, ಅಮ್ಮನ ಗಂಧವಾರಣಂ–ಅರ್ಜುನನು, ವಾರಣಾವತಮನೆಯ್ದಿದಂ–ವಾರಣಾವತಕ್ಕೆ ಬಂದು ಮುಟ್ಟಿದನು.

ದ್ವಿತೀಯಾಶ್ವಾಸಂ ಸಂಪೂರ್ಣಂ

# ತೃತೀಯಾಶ್ವಾಸಂ

೧. ಅರ್ಜುನನ ಪ್ರಶಸ್ತಿಯಿಂದ ಆಶ್ವಾಸಾರಂಭ: ಅರಾತಿಬಳಾಸೃಕ್ತೋಯಧಿಯೊಳ್–ಶತ್ರು ಸೈನ್ಯದ ರಕ್ತಸಮುದ್ರದಲ್ಲಿ, ಶ್ರೀಯಂ–ಜಯಲಕ್ಷ್ಮಿಯನ್ನು, ಪಡೆದ ವೀರಂ–ಪಡೆದಂಥ ಶೂರನು; ಉಱದ–ಸೇರದ, ಹೊಂದಿಕೊಳ್ಳದ, ಅರಿಗಳಂ–ಹಗೆಗಳನ್ನು, ಆತ್ಮೀಯ–ತನ್ನ, ಪದಸ್ಫುರಿತ–ಕಾಲಿನಲ್ಲಿ ಹೊಳೆಯುತ್ತಿರುವ, ನಖಚ್ಛಾಯೆಗಳೊಳ್–ಉಗುರುಗಳ ಕಾಂತಿಯಲ್ಲಿ, ನಿಱಿಸಿ–ಸ್ಥಾಪಿಸಿ, ನಿಂದ, ಗಂಡಂ–ವೀರನು, ಹರಿಗಂ–ಅರಿಕೇಸರಿಯು (=ಅರ್ಜುನನು). ಅರ್ಜುನನು ಶತ್ರುಗಳ ಸೈನ್ಯವನ್ನು ಧ್ವಂಸಮಾಡಿ ಜಯವನ್ನು ಗಳಿಸಿದನು; ಅವನ ಪಾದಗಳಲ್ಲಿ ಹಗೆಗಳೆಲ್ಲ ಶರಣಾದರು ಎಂದು ಭಾವ.

**ವಚನ:** ಪೊಱವೊೞಲಂ–ಪಟ್ಟಣದ ಹೊರ ಭಾಗವನ್ನು; ಎಯ್ದೆವರ್ಪಾಗಳ್–ಸಮೀಪಿಸುವಾಗ.

೨. ಅವನನ್ನು ಅಲಂಕೃತವಾದ ನಗರ ಎದುರುಗೊಂಡಿತು; ಕತ್ತುರಿಯ ಸಗಣನೀರ್–ಕಸ್ತೂರಿಯನ್ನು ಕದಡಿ ಮಾಡಿದ ಸೆಗಣಿಯ ನೀರು, ಬಿಡು ಮುತ್ತಿನ–ಬಿಡಿಯಾದ ಮುತ್ತುಗಳ, ರಂಗವಲಿ–ರಂಗೋಲಿ; ಮಿಳಿರ್ವ ದುಗುಲದ ಗುಡಿ–ಅಲ್ಲಾಡುವ ರೇಷ್ಮೆ ಧ್ವಜಗಳು; ಸಂಪತ್ತಿನ–ಐಶ್ವರ್ಯದ, ಬಿತ್ತರದೆ–ವಿಸ್ತಾರದಲ್ಲಿ, ಅಧಿಕತೆಯಲ್ಲಿ, ಎತ್ತಿದ ಮುತ್ತಿನ ಮಂಡವಿಗೆ–ಏರಿಸಿದ, ಹಾಕಿದ ಮುತ್ತಿನ ಮಂಟಪಗಳು; ಪೊೞಲ–ನಗರದ, ಮನೆಗಳೊಳ್ ಎಲ್ಲಂ–ಎಲ್ಲ ಮನೆಗಳಲ್ಲಿಯೂ ಇದ್ದುವು.

**ವಚನ:** ಉತ್ತರಂ ಬಳೆಯೆ–ಅತಿಶಯತೆ ಬೆಳೆಯುತ್ತಿರಲು, ಅಷ್ಟಶೋಭೆಯಂ–ಕಲಶ, ಕನ್ನಡಿ, ಬಾವುಟ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆ–ಎಂಬ ಎಂಟು ಬಗೆಯ ಅಲಂಕಾರಗಳನ್ನು, ಸಂಕೇತದೊಳ್–ಸೂಚನೆಯಲ್ಲಿ; ಸಮೆದಿರ್ದ–ನಿರ್ಮಿಸಿದ; ಗೋರೋಚನಾ–ಗೋರೋಜನ ಎಂಬ ಪದಾರ್ಥ; ಸಿದ್ಧಾರ್ಥ–ಅಕ್ಷತೆ; ದೂರ್ವಾಂಕುರ–ಎಳೆಯ ಗರಿಕೆ ಹುಲ್ಲು; ಮಾತುಳುಂಗ–ಮಾದಲದ ಹಣ್ಣು; ದರ್ಪಣ–ಕನ್ನಡಿ; ಕಳವೂ–ಬತ್ತ; ಪುರಂಧ್ರಿಯರುಂ–ಸ್ತ್ರೀಯರೂ; ಬದ್ಧವಣದ–ವರ್ಧಮಾನವೆಂಬ ವಾದ್ಯದ; ಮೆಯ್ಯಿಕ್ಕಿ ಪೊಡೆಮಟ್ಟು–ಸಾಷ್ಟಾಂಗವಾಗಿ ನಮಸ್ಕರಿಸಿ; ಬೆಸದಲ್–ಅಪ್ಪಣೆಯಲ್ಲಿ; ಮಾಡಮುಂ–ಮನೆಯನ್ನು;

೩. ಅರಗು ಮೊದಲಾಗೆ–ಅರಗು ಮುಂತಾಗಿ, ಘೃತಂ–ತುಪ್ಪ, ಸಜ್ಜರಸಂ–ರಾಳ ಎಂಬುದರ ರಸ; ಬೆಲ್ಲಂ, ಸಣಂಬೆಂಬವಱಿಂ–ಸಣಬು ಮೊದಲಾದ ಪದಾರ್ಥಗಳಿಂದ, ವಿಸ್ತರಿಸಿ–ವಿಸ್ತಾರವಾಗಿಸಿ, ಸಮೆದ–ಮಾಡಲ್ಪಟ್ಟ; ಇಂದ್ರ ಭವನಮೆ–ಇಂದ್ರನ ಅರಮನೆಯೇ, ಧರೆಗೆ–ಭೂಮಿಗೆ, ಅವತರಿಸಿರ್ದುದು–ಅವತರಿಸಿ, ಇಳಿದು ಬಂದಿತು, ಎನಿಸುವರಗಿನ ಮನೆಯಂ–ಎನ್ನಿಸುವ ಅರಗಿನ ಮನೆಯನ್ನು.

**ವಚನ:** ಕಿಱಿದಾನುಂ ಬೇಗಂ–ಸ್ವಲ್ಪವಾದರೂ ಹೊತ್ತು, ಇರ್ದು–ಇದ್ದು.

೪. ಇದು ಮನೆಯಂದಮಲ್ತು–ಇದು ಮನೆಯರೀತಿ ಅಲ್ಲ, ಇದು ಮನೆಯ

ಹಾಗೆ ಕಾಣುವುದಿಲ್ಲ, ಉರಿವ ದಳ್ಳುರಿಯ ಉಗ್ಗಡದಂದಮಾಗಿ–ಉರಿಯುವ ಜ್ವಾಲೆಗಳ ಆಧಿಕ್ಯದ ರೀತಿಯಾಗಿ, ಕಣ್ಗೆ–ಕಣ್ಣಿಗೆ, ತೋಱುಂದಪ್ಪುದು–ತೋರುತ್ತಿದೆ; ಸಜ್ಜರಸದ, ಎಣ್ಣೆಯ, ತುಪ್ಪದ, ಕಂಪಿದೆಲ್ಲಂ–ಎಲ್ಲ ವಾಸನೆಗಳೂ, ಎಂಬುದು–ಎನ್ನುಪ್ಪುದೇ, ಬಗೆದಿಲ್ಲಿ ನೋಡುವೊಡಂ–ಪರೀಕ್ಷಿಸಿ ಎಲ್ಲಿ ನೋಡಿದರೂ ಇವೆ; ಇಟ್ಟಿಗೆ–ಇಟ್ಟಿಗೆ, ಕಲ್–ಕಲ್ಲು, ಮರಂ–ಮರ, ಎಂಬುದಿಲ್ಲ–ಎಂಬುವು ಇಲ್ಲ. ಕೂರದಂ–ಪ್ರೀತಿಸದವನು, ಪಗೆಗೆ–ಹಗೆತನಕ್ಕಾಗಿ, ಇದಂ–ಇದನ್ನು, ಒಡ್ಡಿದಂ–ನಮಗಾಗಿ ಇರಿಸಿಪ್ಪಾನೆ; ಸಂತಸಮಾಗಿರೆ–ಶತ್ರುವಿಗೆ ಸಂತೋಷವಾಗಿರಲು, ಮಾರಿ–ಮಾರಿದೇವತೆ, ಸುಯ್ಯುಮೇ–ನಿಟ್ಟುಸಿರು ಬಿಡುತ್ತದೆಯೇ ಎಂದರೆ ಮಾರಿಗೆ ದುಃಖವೇ? ಇಲ್ಲ. ಎಂದರೆ ವೈರಿಗಳ ಸಂಹಾರ ಸಂತೋಷಗೊಂಡ ಮಾರಿಗೆ ಪ್ರಿಯವಾದ ಔತಣವಾಗುತ್ತದೆ.

ವಚನ: ಅತ್ಯಾದರಃ–ಅತಿಯಾದ ಆದರಣೆಯು, ಸಂಭ್ರಮಂ–ಭಯವನ್ನು, ಉತ್ಪಾದಯತಿ–ಹುಟ್ಟಿಸುತ್ತದೆ; ಬೂತು–ಭೂತ; ನಮ್ಮಂ ಮೆಚ್ಚಿಡಿಸಲೆಂದೆ–ನಮ್ಮನ್ನು ಮೋಸಪಡಿಸಬೇಕೆಂದೆ; ಬಟ್ಟೆಗಳಂ ಸೋದಿಸುವಂ–ಮಾರ್ಗಗಳು ಏನಾದರೂ ಇವೆಯೇ ಎಂದು ಹುಡುಕೋಣ; ನಿಚ್ಚಂ–ದಿನವೂ; ಪೆಱಗಣ ಕಾಪಂ–ಹಿಂದಿನಿಂದಲೇ ನೋಡುತ್ತಿರುವುದು, ಹಿಂದಿನ ಕಾವಲುಗಾರಿಕೆಯನ್ನು; ಕಣ್ಗಾಪಿನಲೆ–ಕಣ್ಣಿನ ಕಾವಲಿನಲ್ಲಿಯೇ, ಕಣ್ಣಿಗೆ ತಪ್ಪಿಸಿಕೊಂಡು ಹೋಗದ ಹಾಗೆ, ಕಾದಿರ್ಪನ್ನೆಗಂ–ಕಾಯುತ್ತಿರುವಾಗ; ವಿಶ್ವಾಸದಾಸಂ–ನಂಬಿಕೆಯ ಸೇವಕ; ಅವಿನ್ನಾಣಂಗಳಂ–ಗುರುತುಗಳನ್ನು (ಸಂ. ಅಭಿಜ್ಞಾನ); ನೀವೆಂತುಂ ಬಲ್ಲಿರ್–ನೀವು ಹೇಗೂ ಈ ಅರಗಿನ ಮನೆಯ ವಿಷಯವನ್ನು ತಿಳಿದವರಾಗಿದ್ದೀರಿ; ಪೊಱಮಟ್ಟು–ಹೊರಕ್ಕೆ ಬಂದು; ಜತುಗೃಹ ಕವಾಟ ಪುಟ ಸಂಧಿಗಳೊಳ್–ಅರಗಿನ ಮನೆಯ ಬಾಗಿಲುಗಳ ಸಂದುಗಳಲ್ಲಿ; ಸುರಂಗಮಂ–ಸುರಂಗವನ್ನು, ಕಡಂಗಗಳನ್ನು; ಗಂಗೆಯೊಳ್ ಮೂಡುವಂತಾಗೆ–ಗಂಗಾನದಿಯ ಕೆಳಗೆ ಹೋಗಿ ಆಚೆ ದಡದ ಮೇಲೆ ಬರುವಹಾಗೆ; ಛಿದ್ರಿಸುವನೆನಲುಂ–ವಂಚಿಸುತ್ತಾನೆ ಎನ್ನಲು; ಪಾರ್ವರ ನೂಡುವ ನೆವದೊಳ್–ಬ್ರಾಹ್ಮಣರಿಗೆ ಭೋಜನ ಮಾಡಿಸುವ ನೆಪದಿಂದ; ಬೆಂಡು ಮರಲ್ದು–ಭೋಜನ ಭಾರದಿಂದ ಬೆಂಡಾಗಿಬಿಟ್ಟು; ಮಱಸುಂದಿದರ್–ಮೈಮರೆದು ನಿದ್ರಿಸಿದರು; ಓವರಿಯೊಳ್–ಕೊಟಡಿಯಲ್ಲಿ (ಸಂ. ಅಪವರಕ); ಮಱಕೆಂದಿದಂ–ಮರೆದು ನಿದ್ದೆಮಾಡಿದನು; ಮಱಕೆಂದಿದೋವರಿಯೊಳ್–ಮೈಮರೆದುಮಲಗಿದ ಕೊಠಡಿಯಲ್ಲಿ; ಕೊಳಿಸಲೊಡಂ–ಹೊತ್ತಿಸಿದ ಕೂಡಲೇ. ಮೆಚ್ಚಿಡಿಸು < ಮೆಚ್ಚಿಡು + ಇಸು; ಪಂಪಭಾ ೯–೫೮ ನೋಡಿ, (ಮೇಕು–ಇದರ ಅರ್ಥ ಮತ್ತು ನಿಷ್ಪತ್ತಿ ಎಂಬ ಲೇಖನ ನೋಡಿ; ಪ್ರ.ಕ. ೪೫–೧); ಸುರಂಗ–ಇದು ಗ್ರೀಕ್ ಭಾಷೆಯ Syrinks ಎಂಬ ಶಬ್ದದಿಂದ ಬಂದದ್ದೆಂದು ಹೇಳುತ್ತಾರೆ; "ಸುಂದು–ಶಯನೇ"; ಕೆಂದು–ಮಲಗು; ಕೆಂದಿದ ಮೀನಂ ತಳ್ತಾಡದಿರ್ದ ಮಡುವಂ ಪೋಲ್ತಂ"–ಸುಪ್ತಮೀನಮಿವಹ್ರದಃ; ಸುಂದು ಎಂಬುದಕ್ಕೆ ಇರುವ ಪಾಠಾಂತರ ಲುಂದು ಎಂಬುದಕ್ಕೆ ಮಲಗು ಎಂದರ್ಥ; ಸುಂದು, ಕೆಂದು, ಲುಂದು–ಇವು ಮೂರೂ ಸಮಾನಾರ್ಥಕ.

೫. ಅಡಿಯೊತ್ತದೆ–ತಳಭಾಗ ಹೊತ್ತಿಕೊಳ್ಳದೆ, ಕಿಱುಕಿಱಿದನೆ ಸುಡದೆ-ಸ್ವಲ್ಪ ಸ್ವಲ್ಪವಾಗಿ ಸುಡದೆ, ಇನಿಸು–ಸ್ವಲ್ಪ, ಅರೆಪೊರೆಕನಾಗದೆಯೆ–ಅರ್ಧವ್ಯಾಪಿಸಿದ್ದಾಗದೆ, ಸಸಿದು–ಬಿಡಿಸಿ, ಎಕ್ಕಿ, ಒಂದಡೆಯೊಳಗೆ–ಒಂದು ಸ್ಥಳದಲ್ಲಿ, ಒಟ್ಟಿರ್ದ–ರಾಶಿಹಾಕಿದ, ಅರಳೆಯನ್-ಹತ್ತಿಯನ್ನು, ಒಡನೆ–ಒಟ್ಟಿಗೇ, ಅಳುರ್ವಂತೆ-ವ್ಯಾಪಿಸುವಹಾಗೆ, ಅನಲಂ-ಅಗ್ನಿ, ಅರಗಿನಮನೆಯುಂ-ಅರಗಿನಮನೆಯನ್ನು, ಅಳುರ್ದಂ–ವ್ಯಾಪಿಸಿದನು, ಸುಟ್ಟನು.

೬. ಮೇಲಾದ–ಉತ್ತಮರಾದ, ಪಾಂಡುಸುತರಂ–ಪಾಂಡವರನ್ನು, ಉಪಾಲಂಭಂಗೆಯ್ಯುತಿರ್ಪ–ನಿಂದಿಸುತ್ತಿರುವ, ದುರ್ಯೋಧನನಂ, ಲೀಲೆಯಿ–ಲೀಲೆಯಿಂದ, ನುಂಗುವ, ಮೃತ್ಯುವ–ಮೃತ್ಯುದೇವತೆಯ, ನಾಲಗೆ, ಎನೆ, ಉರಿಯನಾಲಗೆ–ಉರಿಯ ಜ್ವಾಲೆಗಳು, ಪಲವುಂ–ಹಲವು, ನೆಗೆದವು–ಮೇಲಕ್ಕೆ ಚಿಮ್ಮಿದುವು.

ವಚನ : ಬಂಬಲ್ಗಳಂ–(ಜ್ವಾಲೆಗಳ) ಗುಂಪುಗಳನ್ನು ; ಬಿದಿರ್ದು ಕಳೆದು–ಕೊಡವಿ ಕಳೆದು ; ಸುರಂಗದೊಳಗಣಿಂದವೆ–ಸುರಂಗದ ಒಳಗಿನಿಂದಲೇ.

೭. ಅರಗಿನ ಮನೆಯೊಳ್, ಪಾಂಡವರ್, ಉರಿದು, ಅೞಿಗಿದರ್–ನಾಶವಾದರು ; ಅಕ್ಕಟ, ಅಯ್ಯೋ ! ದುರ್ಯೋಧನನೆಂಬ–ದುರ್ಯೋಧನನು ಎನ್ನುವ, ಎರಲೆಯಿಂ–ಜಿಂಕೆಯಿಂದ (?) ; ಎಂದೞುತುಂ–ಎಂದು ಅಳುತ್ತ, ತತ್ಪುರಜನಂ–ಆ ಪಟ್ಟಣದ ಜನರು. ಅೞಲೊದವೆ–ದುಃಖವುಂಟಾಗಿರಲು, ಪರಿದು–ಓಡಿಬಂದು, ಆಗಳ್, ನೋಡಿತ್ತು–ನೋಡಿತು. ಇಲ್ಲಿ ಎರಲೆ ಶಬ್ದಕ್ಕೆ ಅರ್ಥ ಚಿಂತನೀಯ, ನಂಜಿನೆರಳು ಎಂದು ರಾಘವಾಂಕನ ಪ್ರಯೋಗವಿದೆ (ಸಿದ್ಧರಾ ೩-೭) ; ಎರಳ್ಪುಳುಗಳು ಎಂದು ಪಾಲ್ಕುರಿಕೆಸೋಮೇಶ್ವರ ಪುರಾಣದಲ್ಲಿದೆ (೫–೨೮) ; ಎರಳು ಎಂದರೆ ಒಂದು ಬಗೆಯಾದ ವಿಷದ ಹುಳು ಎಂದಾಗುತ್ತದೆ. ಬಹುಶಃ ಈ ಶಬ್ದವೇ ಈ ಪದ್ಯದಲ್ಲಿ ಇದ್ದಿರಬಹುದು.

ವಚನ : ರೂಪಱಿಯಲಾಗದಂತು–ರೂಪವೇ ತಿಳಿಯಲು ಆಗದ ಹಾಗೆ ; ಕರಿಮುರಿಕನಾಗಿರ್ದ–ಕರುಕು ಮುರುಕಾಗಿದ್ದ, ಸೀದುಹೋದ ;

೮. ಮನದೊಳ್–ಮನಸ್ಸಿನಲ್ಲಿ, ತ್ರೈಭುವನಮಂ–ಮೂರುಲೋಕಗಳನ್ನು, ಆಳ್ದನಿತುವರಂ–ಆಳುವಷ್ಟರಮಟ್ಟಿಗೆ, ಸಂತಸಂ–ಸಂತೋಷವು, ತನಗೆ, ಪೆರ್ಚಿಯುಂ–ಹೆಚ್ಚಾದರೂ, ಅಂದು–ಆದಿನ, ಅಂಧನೃಪಂ–ಧೃತರಾಷ್ಟ್ರನು, ತನ್ನಯ ಜನದೊಳ್–ತನ್ನ ಜನರಲ್ಲಿ, ಕೆಲನಱಿಯೆ–ನೆರೆಹೊರೆಯವರು ತಿಳಿಯುವಂತೆ, ಇನಿಸು–ಒಂದಿಷ್ಟು, ಕೃತಕ ಶೋಕಂಗೆಯ್ದಂ–ಕಪಟ ಶೋಕವನ್ನು ಮಾಡಿದನು.

ವಚನ : ಅವಿರಳಬಾಷ್ಪವಾರಿದುರ್ದಿನ ದೀನಾನನರಾಗಿರೆ–ದಟ್ಟವಾಗಿ ಸುರಿಯುವ ಕಣ್ಣೀರೆಂಬ ದುರ್ದಿನದಿಂದ ದೀನವಾದ ಮುಖವುಳ್ಳವರಾಗಿರಲು, ದುರ್ದಿನಂ–ಮೋಡ ಮುಚ್ಚಿಕೊಂಡು ಸೂರ್ಯ ಕಾಣದಂತಿರುವ ದಿವಸ, ಬೆಸದೊಳ್–ಅಪ್ಪಣೆಯಲ್ಲಿ ಅರ್ಧದಗ್ಧಕಳೇವರಂಗಳಂ–ಅರ್ಧ ಸುಟ್ಟ ದೇಹಗಳನ್ನು, ತಾರಾಗಣಂಗಳ್–ನಕ್ಷತ್ರ ರಾಶಿಗಳು, ತೆಂಕವೊಗದೆ–ದಕ್ಷಿಣ ದಿಕ್ಕಿನಲ್ಲಿ

೯. ಭೀಮನು ಉಳಿದ ಪಾಂಡವರೊಡನೆ ಹಿಡಿಂಬವನಕ್ಕೆ ಬರುವುದು.

ಕಡಕುಂ–ಚೂರು ಕಲ್ಲುಗಳೂ, ಪೆಟ್ಟಿಯುಂ–ಹೆಂಟೆಗಳೂ, ಮೆಲ್ಲಡಿಗಳಂ–ಮೃದುವಾದ ಪಾದಗಳನ್ನು, ಒತ್ತೆ–ಅಮುಕಲು, ಬಳ್ಕುತ್ತುಂ–ಬಳುಕುತ್ತ, ಅಳ್ಕುತ್ತುಂ–ಹೆದರುತ್ತ, ಓಂದಡಿಗೆ–ಒಂದು ಹೆಜ್ಜೆಗೆ, ಒರ್ಮೊರ್ಮೆ–ಒಂದೊಂದು ಸಲ, ಕುಳುತ್ತಂ–ಕುಳಿತು ಕೊಳ್ಳುತ್ತ, ಏೞುತಿರೆ–ಏಳುತ್ತಿರಲು, ಕಂಡು–(ಭೀಮನು) ನೋಡಿ, ಇಂತಾಗದು–ಹೀಗೆ ಆಗುವುದಿಲ್ಲ, ಏೞಿಮೆಂದು–ಏಳಿರಿ ಎಂದು, ಒಡನೆ ಅಂದು ಅಯ್ವರುಮಂ–ಕೂಡಲೇ ಆಗ ಐವರನ್ನೂ, ನಿಜಾಂಸಯುಗದೊಳ್–ತನ್ನ ಎರಡು ಭುಜಗಳ ಮೇಲೆ; ಪೊತ್ತೆತ್ತಿ ಹೊತ್ತು ಎತ್ತಿಕೊಂಡು, ತಳ್ತೊಳ್ಪ–ಸೇರಿ ಒಟ್ಟಿಗೆ ಶಬ್ದಮಾಡುವ, ಸೀೞುಡುವಿಂಡೆ–ಜೀರುಂಡೆಗಳಿಂದ, ಅದ್ಭುತದಾ–ಆಶ್ಚರ್ಯಭಯಂಕರವಾದ, ಹಿಡಿಂಬವನಮುಂ–ಹಿಡಿಂಬ ನೆಂಬ ರಾಕ್ಷಸನು ಇದ್ದ ಕಾಡನ್ನು, ಮರುನ್ನಂದನಂ–ಭೀಮಸೇನನು, ಪೊಕ್ಕಂ–ಹೊಕ್ಕನು. ಅಳ್ಕು–ಭಯೇ ಅಶಕ್ತೌ ಚ ಎಂಬುದರಿಂದ ಅಳ್ಕುತ್ತಂ ಎನ್ನುವುದಕ್ಕೆ ಶಕ್ತಿಗುಂದುತ್ತ ಎಂದು ಅರ್ಥಮಾಡಬಹುದು. ತಡಕುಂ, ಪಿಟ್ಟೆ–ಎಂಬಿವು ಕಡಕುಂ, ಪೆಟ್ಟಿ ಎಂಬಿವಕ್ಕೆ ಅಪಪಾಠಗಳು; ಕಡಕುಂ ಪರಲ್ಗಳುಂ ಮೆಲ್ಲಡಿಗಳನೊತ್ತೆ (ಸುಕುಮಾರ ಚರಿತ್ರೆ (೧೨–೧೮), 'ಮರಾಠಿ'-ಖಡ, ಖಡಕ=ಕಲ್ಲು, ಸಣ್ಣಹರಳು; ಸೀೞುಡು–ಕರೆದುವು ಸೀೞುಡುಗಳ್ (ಪಂಪರಾ ೭–೮೬)

೧೦. ಅದು–ಆ ವನವು, ಮದ......ಹಾಸ್ಪದಂ; ಮದದಂತಿ–ಮದ್ದಾನೆಗಳ, ದಂತ–ದಂತವೆಂಬ, ಮುಸಲ–ಒನಕೆಯಿಂದ, ಪ್ರವಿಭಗ್ನ–ಮುರಿದುಹೋದ, ಮಹಾ ಮಹೀರುಹ-ದೊಡ್ಡಮರಗಳಿಗೆ, ಆಸ್ಪದಂ-ಆಶ್ರಯ; ಅಡು-ಆ ಕಾಡು, ಸಿಂಹ....ಪ್ರದಂ; ಸಿಂಹನಾದ–ಸಿಂಹದ ಗರ್ಜನೆಯಿಂದ, ಜನಿತ–ಹುಟ್ಟಿದ, ಪ್ರತಿಶಬ್ದ–ಪ್ರತಿಧ್ವನಿಯಿಂದ, ಮಹಾ ಭಯಾನಕಪ್ರದಂ–ಅತಿಶಯವಾದ ಭಯವನ್ನು ಉಂಟುಮಾಡತಕ್ಕದ್ದು; ಅದು, ನಿರ್ಝರ........ನಾಳಕಂ; ನಿರ್ಝರ–ಬೆಟ್ಟದ ಝರಿಗಳಿಂದ, ಉಚ್ಚಲಿತ–ಮೇಲಕ್ಕೆದ್ದ, ಶೀಕರ–ತುಂತುರುಗಳಿಂದ, ಶೀತಲ–ತಂಪಾದ, ವಾತ–ಗಾಳಿಯಿಂದ, ನರ್ತಿತ–ಅಲುಗಾಡಿಸಲ್ಪಟ್ಟ, ಕುಣಿಸಲ್ಪಟ್ಟ, ಉನ್ಮದ–ಸೊಕ್ಕಿದ, ಶಬರೀಜನ–ಬೇಡ ಸ್ತ್ರೀಯರ, ಅಳಕಂ–ಮುಂಗುರುಳುಗಳನ್ನುಳ್ಳದ್ದು; ಅದು, ಆಯತ....ನಕಂ; ಆಯತ–ವಿಸ್ತಾರವಾದ, ವೇತ್ರಲತಾ–ಬೆತ್ತದ ಬಳ್ಳಿಗಳ, ವಿತಾನಕಂ–ಮೇಲ್ಕಟ್ಟನುಳ್ಳದ್ದು. ಈ ಪದ್ಯದ ರಚನೆ ಅತ್ಯಂತ ಹೃದ್ಯವಾಗಿದೆ. ಅದು ಎಂಬುದು ಬಂದಿರುವೆಡೆಗಳಲ್ಲಿ ನಿಂತು ಕೊಳ್ಳಲು ಸ್ವಲ್ಪ ಸ್ಥಾನ ಸಿಕ್ಕಿದಂತಾಗುತ್ತದೆ, ಅಲ್ಲಿಂದ ಮುಂದೆ ಒಂದೊಂದು ನೆಗೆತವನ್ನು ನೆಗೆದು ಪದ್ಯ ವಿಶ್ರಮಸ್ಥಾನವನ್ನು ಮುಟ್ಟುತ್ತದೆ.

**ವಚನ**: ವನಾಂತರಾಳ–ಕಾಡಿನ ಒಳಗಡೆ; ವಟವಿಟಪಿ–ಆಲದಮರ; ಅಧ್ವಾನ–ಮಾರ್ಗ, ದಾರಿ; ಪರಿಶ್ರಮಶ್ರಾಂತರ್–ಆಯಾಸದಿಂದ ಬಳಲಿದವರು; ಜಾವಮಿರ್ದು–ಕಾವಲಾಗಿದ್ದು; ಪ್ರವಾಸಾಯಾಸಂಗಳ್ಗಂ–ನೆಲೆತಪ್ಪಿ ಬಂದುದಕ್ಕೂ ಆಯಾಸಕ್ಕೂ, ದೆಸೆಗಂ–ಸ್ಥಿತಿಗೂ; ಮನ್ಯು–ದುಃಖವು, ಮಿಕ್ಕು–ಮೀರಿ, ಬರೆ.

೧೧. ಭರತನ ವಂಶದೊಳ್–ಪ್ರಸಿದ್ಧನಾದ ಭರತರಾಜನ ವಂಶದಲ್ಲಿ, ನೆಗಟ್ಟಿ

ಪಾಂಡುಗೆ–ಪ್ರಸಿದ್ಧನಾದ ಪಾಂಡುರಾಜನಿಗೆ, ಪುಟ್ಟಿಯುಂ–ಹುಟ್ಟಿದರೂ, ಈ ಸಮಸ್ತ ಸಾಗರ ಪರಿವೇಷ್ಟಿತಾವನಿಗೆ–ಈ ಎಲ್ಲ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟ ಭೂಮಿಗೆ, ವಲ್ಲಭ[ರಾ]ಗಿಯುಂ–ಒಡೆಯರಾಗಿಯೂ, ಈಮ....ಟವಿಯೊಳ್: ಈ ಮಹೋಗ್ರ–ಈ ಮಹಾ ಭಯಂಕರವಾದ; ಕೇಸರಿ–ಸಿಂಹ, ಕರಿ–ಆನೆಗಳ, ಕಂಠಗರ್ಜಿತ–ಕಂಠದ ಗರ್ಜನೆಯುಳ್ಳ, ಮಹಾಟವಿಯೊಳ್–ಮಹಾ ಅರಣ್ಯದಲ್ಲಿ, ಮಱಕೆಂದಿ–ಮೈಮರೆತು ಮಲಗಿ, ನೀಮುಂ–ನೀವು ಕೂಡ, ಈ ಮರದ, ಅಡಿಯೊಳ್–ಕೆಳಗಡೆ, ಶಿವಾಶಿವರ ವಂಗಳಿಂ–ನರಿಗಳ ಅಶುಭವಾದ ಧ್ವನಿಗಳಿಂದ, ಎಚ್ಚಱುವಂತುಟು–ಎಚ್ಚರಗೊಳ್ಳುವ ಹಾಗೆ, ಆದುದೇ–ಆಯಿತೇ?

**ವಚನ:** ಎಂದು, ನುಡಿಯುತ್ತಿರ್ಪನ್ನೆಗಂ – ಹೇಳಿಕೊಳ್ಳುತ್ತಿರುವಷ್ಟರಲ್ಲಿ, ಕೋಕನದ ಬಾಂಧವಂ–ತಾವರೆಗಳ ಬಂಧು, ಸೂರ್ಯ: ಉದಯಾಚಳ ಶಿಖರ ಶೇಖರ ನಾದಂ–ಉದಯಪರ್ವತದ ತಲೆಗೆ ಬಂದವನಾದನು, ಎಂದರೆ ಸೂರ್ಯೋದಯವಾಯಿತು: ಬರವನಱಿದು–ಬಂದದ್ದನ್ನು ತಿಳಿದು.

**೧೨.** ನಿಡಿಯರ್–ನೀಳವಾಗಿರುವವರು, ಬಲ್ಲಾಯದ–ಅಧಿಕ ವಿಸ್ತೀರ್ಣದ, ಬಲ್ಪಡಿಗರ್–ದೊಡ್ಡ ಧಾಂಡಿಗರು, ಅಯ್ವರ್–ಐದುಜನರು. ವಂದು–ಬಂದು, ಆಲದ ಕೆೞಗೆ–ಆಲದ ಮರದ ಕೆಳಗೆ, ಇರ್ದರ್–ಇದ್ದಾರೆ, ನಮ್ಮಯ ಭಕ್ಷದೊಳ್–ನಮ್ಮ ಆಹಾರದಲ್ಲಿ, ಇಂ ತೊಡರ್ದರ್–ಇನ್ನು ಸಿಕ್ಕಿಕೊಂಡರು, ಎಂದರೆ ನಮ್ಮ ಆಹಾರಕ್ಕಾಗಿ ಸಿಕ್ಕಿಬಿದ್ದರು; ಅಡು–ಬೇಯಿಸು, ಪಣ್ಣಿಡು–ಸಿದ್ಧಮಾಡಿಡು, ಪೋಗು–ಹೋಗು, ನೀನುಂ ಆನುಂ ತಿಂಬಂ–ನೀನೂ ನಾನೂ ತಿನ್ನೋಣ.

**೧೩.** ಆಗಸದೊಳಗೊಂದು – ಆಕಾಶದಲ್ಲಿ ಒಂದು, ಮಹೀಭಾಗದೊಳ್ ಇನ್ನೊಂದು – ಭೂಮಿಭಾಗದಲ್ಲಿ ಇನ್ನೊಂದು, ದಾಡೆಯಾಗಿರೆ – ದವಡೆಯಾಗಿರಲು ಎಂದರೆ ಅತಿ ಅಗಲವಾಗಿ ಬಾಯಿ ತೆರೆದುಕೊಂಡು, ಮನದಿಂ – ಮನಸ್ಸಿಗಿಂತ, ಬೇಗಂ ಬರ್ಪಳ – ವೇಗವಾಗಿ ಬರುವವಳ, ದಿಟ್ಟಿಗಳ್ – ಕಣ್ಣುಗಳು, ಆಗಳೆ – ಆಗಲೇ, ಗೆಂಟಱೊಳ್–ದೂರದಲ್ಲಿ, ಮಾರುತಿಯಂ–ಭೀಮನನ್ನು, ಪತ್ತಿದುವು–ಅಂಟಿಕೊಂಡವು. ಹಿಡಿಂಬೆ ದೂರದಿಂದಲೇ ಭೀಮನನ್ನು ನೋಡಿ ಅವನಲ್ಲಿ ಮನಸ್ಸುಳ್ಳವಳಾದಳು.

**ವಚನ:** ಒಂದು ಅಂಬು ವಿೞಿಸಿಡೆಯೊಳ್ – ಒಂದು ಬಾಣ ಹೋಗುವಷ್ಟು ದೂರದ ಸ್ಥಳದಲ್ಲಿ; ಅಂಬುವೀಡಿಂಗೆ–ಬಾಣ ಪ್ರಯೋಗಕ್ಕೆ: ಕಾಮರೂಪೆ–ಇಷ್ಟಬಂದ ರೂಪವನ್ನು ಧರಿಸುವವಳು, ತನ್ನತ್ತಮೊಗದೆ–ತನ್ನ ಅಭಿಮುಖವಾಗಿಯೇ, ಬರ್ಪಳಂ ಬರುವವಳನ್ನು

**೧೪.** ಖೇಚರಿಯೋ – ಆಕಾಶದಲ್ಲಿ ಸಂಚರಿಸುವ ವಿದ್ಯಾಧರ ಸ್ತ್ರೀಯೋ, ಭೂಚರಿಯೋ – ಭೂಮಿಯ ಸ್ತ್ರೀಯೋ, ನಿಶಾಚರಿಯೋ – ರಾಕ್ಷಸಿಯೋ, ರೂಪು–ಸೌಂದರ್ಯವು, ಬಣ್ಣಿಸಲ್ಕೆ – ವರ್ಣನೆ ಮಾಡುವುದಕ್ಕೆ, ಆರ್ಗಂ – ಯಾರಿಗೂ, ಅಪಾ

ಗ್ಗೋಚರಂ–ಮಾತುಗಳಿಗೆ ನಿಲುಕದಂಥದು ; ಈ ಕಾನನಮುಂ–ಈ ಅಡವಿಯೂ, ಅಗೋಚರಂ-ವರ್ಣಿಸಲಾಗದ್ದು, ಇವಳ್, ಇಲ್ಲಿಗೆ, ಏಕೆ ಬಂದಳೋ, ಪೇೞಿಂ–ಹೇಳಿರಿ.

**ವಚನ** : ಎಂಬನ್ನೆಗಂ–ಎಂದು ಹೇಳಿಕೊಳ್ಳುತ್ತಿರುವಷ್ಟರಲ್ಲಿ, ಮದನನ ಕೆಯ್ಯಿಂ ಬರ್ದುಂಕಿದ – ಮನ್ಮಥನ ಕೈಯಿಂದ ತಪ್ಪಿಸಿಕೊಂಡ ; ಅರಲಂಬು – ಹೂವಿನ ಬಾಣ, ನೀನಾರ್ಗೆ–ನೀನು ಯಾರು, ಏನೆಂಬೆ–ಏನೆಂದು ಕರೆದುಕೊಳ್ಳುತ್ತೀ ಎಂದರೆ ಹೆಸರೇನು? ಎರಡಱಯದೊಲ್ದು–ಕಪಟವಿಲ್ಲದೆ ಪ್ರೀತಿಸಿ, ಎರಡಂ ನುಡಿಯಲಾಗದು–ಎರಡು ಮಾತನ್ನು, ಸುಳ್ಳನ್ನು ಆಡುವುದಾಗದು, ಅಸುರಂ–ರಾಕ್ಷಸನು ; ಬೆಸದಿಂ–ಅಪ್ಪಣೆಯಿಂದ, ನಿಮ್ಮನಿಬರುಮಂ–ನೀವಿಷ್ಟು ಜನರನ್ನೂ,

**೧೫.** ಪಿಡಿದು–ಹಿಡಿದು, ಅದಸಿ ತಿನಲ್–ಬಾಯೊಳಗೆ ತುರುಕಿಕೊಂಡು ತಿನ್ನಲು, ಬಂದಿರ್ದೆಡೆಯೊಳ್–ನಾನು ಬಂದಸಮಯದಲ್ಲಿ, ನಿನಗಾಗಿ–ನಿನ್ನ ಮೇಲಣ ಪ್ರೀತಿಗಾಗಿ, ಎನ್ನನೆ–ನನ್ನನ್ನೇ, ಮದನಂ–ಮನ್ಮಥನು, ತಿನೆ-ತಿನ್ನಲು, ಕೇಳ್-ಕೇಳು, ಪಡೆನೋಡಲ್ ಬಂದವರಂ-ಫೌಜನ್ನು ನೋಡಲು ಬಂದವರನ್ನು, ಎಂದರೆಬಂದವರ ಕೈಯಲ್ಲಿ, ಗುಡಿವೊಱಸಿದರ್–ಬಾವುಟವನ್ನು ಹೊರಿಸಿದರು, ಎಂಬುದು–ಎನ್ನುವುದು, ನಿನ್ನೆನ್ನೆಡೆಯೊಳ್–ನಿನ್ನ ನನ್ನ ಸಂಬಂಧಲ್ಲಿ, ಆಯ್ತು-ಆಯಿತು. ಇಲ್ಲಿಯ ದೇಸಿ ಶೈಲಿ ಚೆಲುವಾಗಿದೆ 'ಪಡೆನೋಡಲ್ ಬಂದವರಂ ಗುಡಿವೊಱಸಿದರ್' ಎಂಬ ಗಾದೆಯಂತಿರುವ ಮಾತು ಪಂಪನ ಕಾಲದಲ್ಲಿ ಬಳಕೆಯಲ್ಲಿದ್ದಿರಬೇಕು. ಸೈನ್ಯ ಹೋಗುವಾಗ ಅದನ್ನು ನೋಡುವುದಕ್ಕೆ ಬಂದವರ ಕೈಗೆ ಬಾವುಟಹೊರಿಸಿ ನಡೆಯಿರಿ ಸೈನ್ಯದೊಡನೆ ಎಂದು ಹೇಳಿದ ಹಾಗಾಯಿತು.

**ವಚನ** : ಈ ಮಱಲುಂದಿದರ್–ಈ ನೈರೆತು ಮಲಗಿರುವವರು : ಆರ್ಗೆ–ಯಾರು ; ಪೆಗಲನೇಱು-ಹೆಗಲನ್ನು ಹತ್ತು ;

**೧೬.** ಅೞಿಪಿದೆ - ಹಾಳುಮಾಡಿದೆ(?) : ಅಂತುಮಲ್ಲದೆ–ಹಾಗೂ ಅಲ್ಲದೆ ; ನಿಶಾಚರಿಯಯ್–ರಾಕ್ಷಸಿಯಾಗಿದ್ದೀಯೆ; ಈ ಅೞನುಡಿ-ಈ ಕೆಟ್ಟ ಮಾತು, ನಿನಗೆ, ಅಪ್ಪುದು ಅಪ್ಪುದು–ಆಗುತ್ತದೆ, ಆಗುತ್ತದೆ, ಎಂದರೆ ತಕ್ಕದ್ದು, ಸರಿಯಾದದ್ದು ; ನಿಮ್ಮ ಪಿರಿಯಣ್ಣನೆ ಬರ್ಕೆ–ನಿಮ್ಮ ಹಿರಿಯ ಅಣ್ಣನೇ ಬರಲಿ ; ಪಣ್ಣನೆ–ಸ್ವಲ್ಪಮಟ್ಟಿಗೆ, ಮೆಲ್ಲನೆ, ಆತನ, ಒಡ್ಡೞಿಯದ – ಕೆದರಿಹೋಗದ, ಗಂಡವಾತಂ–ಪೌರುಷದ ಮಾತನ್ನು, ನೋಟ್ಪಂ–ನೋಡೋಣ ; ಎನುತೆ ಅಂತೆ ಇರೆ–ಎನ್ನುತ್ತ ಹಾಗೆಯೇ ಇರಲು ; ತಂಗೆಯು-ತಂಗಿಯು, ಮಾಣ್ಬುದರ್ಕೆ–ತಡಮಾಡಿದುದಕ್ಕೆ, ಅವಂ-ಅವನು, ಮೊೞಗಿ–ಗರ್ಜನೆಮಾಡಿ, ಸಿಡಿಲ್ದು–ಸಿಡಿದು, ಅದೊಂದು, ಸಿಡಿಲೇೞ್ಗೆಯಿನೆಯ್ತರೆವಂದು-ಸಿಡಿಲಿನ ಒಂದು ಆಧಿಕ್ಯದಿಂದ ಹತ್ತಿರಕ್ಕೆ ಬಂದು ; ಅೞಿಪಿದೆ–ಇಲ್ಲಿ ಸ್ವಲ್ಪ ಸಂದೇಹವಿದೆ ; ಕೊಟ್ಟಿರುವ ಅರ್ಥವನ್ನು ಇಟ್ಟುಕೊಂಡರೆ ಏನನ್ನು ಅೞಿಪಿದೆ ಎಂಬ ಪ್ರಶ್ನೆ ಬಂದು ಉತ್ತರ ದೊರೆಯುವಂತಿಲ್ಲ ; ಆಳಿಪಿದೆ–ಆಸೆಪಟ್ಟೆ, ಒಲಿದೆ ಎಂಬ ಅರ್ಥ ಒಪ್ಪುವಾದರೂ ಕುಳ ೞಕಾರಗಳ ಪ್ರಾಸವುಂಟಾಗುತ್ತದೆ, ಪಂಪನು ಕ್ವಚಿತ್ತಾಗಿ ಕುಳ ಕ್ಷಳ ೞಕಾರಗಳನ್ನು

ಪ್ರಾಸದಲ್ಲಿ ಬೆರಸುತ್ತಾನೆ ಎಂದು ಹೇಳಿ (ಪಂಪಭಾ. ೧೧-೩೬, ೯-೧೫; ಆದಿಪು. ೧-೮೪, ೧೩-೬೫) ಸಮಾಧಾನ ಪಡಬಹುದು, ಅಱ ಎಂಬ ಧಾತುಗೆ ತಮಿಳಿನಲ್ಲಿ ಉಳ್ಳದ್ದೈ ಮಾಜ್ರುದಲ್ ಎಂದರೆ ಆಕಾರ ಬದಲಾಯಿಸು ಎಂಬರ್ಥವಿದೆ; ಇದು ಇಲ್ಲಿಗೆ ಹೊಂದುತ್ತದೆ; ಪಣ್ಣನೆ<ಪಣ್ಣಂ=ಮೆಲ್ಲನೆ ಅಥವಾ ಅರಮೆ, ಕೆಲವು; "ಬೆಟ್ಟವೇಸ ಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ" ಎಂದು ನಾಗಚಂದ್ರನ ಪ್ರಯೋಗ.

**ವಚನ:** ತಂಡಂಗಳುಂ–ಗುಂಪುಗಳೂ, ರಾಶಿಗಳೂ; ನೀನೊರ್ವಯ್–ನೀನು ಒಬ್ಬನಾಗಿದ್ದೀಯ, ಎಂದರೆ ಒಂಟಿಯಾಗಿದ್ದೀಯ: ಈ ಮಱಲುಂದಿದರನ್–ಈ ಮಲಗಿ ದವರನ್ನು, ಒರ್ಮೆಯೆ-ಒಂದೇಸಲಕ್ಕೆ, ಪೊಸೆದು ಮುಕ್ಕುವೆನ್-ಹೊಸೆದುನುಂಗುತ್ತೇನೆ, ಮಲ್ಲಂತಿಗೆಯನಪ್ಪೊಡಂ–ಮಲ್ಲವಸ್ತ್ರವನ್ನಾದರೂ, ಅವಯವದೆ–ಸುಲಭವಾಗಿ, ಶ್ರಮ ವಿಲ್ಲದೆ, ಮಲ್ಲಂತಿಗೆ<ಮಲ್ಲವಸ್ತ್ರಿಕಾ=ಕಾಚ, ನಡುಕಟ್ಟು ಎಂದು ಅರ್ಥೈಸಿದೆ (ಪಂಪಭಾ. ಕೋಶ)

೧೭. ಏಂ ಗಾವಿಲನಯೋ–ಏನು ನೀನು ದಡ್ಡನೋ, ನಿನ್ನಂ ನುಂಗುವುದಕೇಂ–ನಿನ್ನನ್ನು ನುಂಗುವುದಕ್ಕೆ, ಇವರಂ ಎತ್ತವೇೞ್ಪುದೆ–ಇವರನ್ನು ಎಚ್ಚರಿಸಬೇಕೆ? ನೆರಮುಂ–ಸಹಾಯವನ್ನು, ಸಂಗಳಿಸಲ್ವೇೞ್ಪುದೆ–ಒದಗಿಸಿಕೊಳ್ಳಬೇಕೆ? ಮಾತಂಗ ವಿರೋಧಿಗೆ–ಆನೆಯ ಶತ್ರುವಿಗೆ ಎಂದರೆ ಸಿಂಹಕ್ಕೆ, ಧರೆಯೊಳ್–ಲೋಕದಲ್ಲಿ, ಕುರಂಗ ಸಂಗರ–ಜಿಂಕೆಯೊಡನೆ ಯುದ್ಧವೇ? ಇಲ್ಲಿ ಕುರಂಗ ಸಂಗರ ಎಂಬಲ್ಲಿ ಪ್ರಕೃತಿಪ್ರಯೋಗ ವಿದೆ: ಅದು ಪ್ರಥಮಾಂತ್ಯವಾಗಿ ಕುರಂಗ ಸಂಗರಂ ಎಂದಿರಬೇಕು; ಕಾಕುವಿನಿಂದ ಪ್ರಶ್ನಾರ್ಥದ್ಯೋತಕವಾಗುತ್ತದೆ,

**ವಚನ:** ಆಡಂಬರಂಗೆಯ್ದು–ಅಬ್ಬರಿಸಿ; ತುಂಬುರುಕೊಳ್ಳಿಯಂತೆ–ತೂಬರೆ ಮರದ ಸೌದೆಯ ಕೊಳ್ಳಿಯಂತೆ, ಅಂಬರಂಬರಂ-ಆಕಾಶದವರೆಗೂ; "ತುಂಬುರಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದು" ಎಂದು ನಾಗಚಂದ್ರನ ಪ್ರಯೋಗ (ಪಂಪರಾ.೪–೩೯)

೧೮. ಪಾಸಱೆಯುಂ–ಹಾಸುಬಂಡೆಯನ್ನು, ಪೊತ್ತು–ಹೊತ್ತುಕೊಂಡು, ಎತ್ತಿ ಕೊಂಡು, ಕಡುಪಿನೆ-ತೀವ್ರತೆಯಿಂದ, ಎಯ್ತರೆ-ಹತ್ತಿರಕ್ಕೆ ಬರಲು, ಭೀಮನುಂ-ಭೀಮನು ಕೂಡ, ಮಹೀಜವೊಂದಂ–ಒಂದು ಮರವನ್ನು, ಬೇರೊಡನೆ–ಬೇರುಸಹಿತ, ಒತ್ತಿ ಕಿೞ್ತು –ಬಲವಂತವಾಗಿ ಕಿತ್ತು, ಇಡೆಯುಂ–ಬೀಸುತ್ತಲೂ, ಬಿಡೆ ಪೊಯ್ಯೆಯುಂ–ನಿರ್ದಾಕ್ಷಿಣ್ಯ ವಾಗಿ ಹೊಡೆಯುತ್ತಲೂ, ಆಬನಂ–ಆ ವನವು, ಪಡಲ್ಪಡುತಿರೆ–ಚೆಲ್ಲಾಪಿಲ್ಲಿಯಾಗಿ ಬೀಳುತ್ತಿರಲು, ಕಲ್ಲೊಳಂ–ಕಲ್ಲಿನಿಂದಲೂ, ಮರದೊಳಂ–ಮರದಿಂದಲೂ, ಬಡಿದು–ಚಚ್ಚಿ, ಒಯ್ಯನೆ–ಮೆಲ್ಲಗೆ, ಜೋಲ್ದು–ಸೋತು ಜೋತುಬಿದ್ದ, ದೈತ್ಯನಂ ಪಿಡಿದು–ರಾಕ್ಷಸನನ್ನು ಹಿಡಿದು, ಮೃಣಾಳನಾಳಮನೆ ಸೀೞ್ವವೊಲ್–ತಾವರೆಯ ದಂಟನ್ನು ಸೀಳುವ ಹಾಗೆ, ಒರ್ಮೆಯೆ–ಒಂದೇ ಸಲಕ್ಕೆ; ಸೀೞ್ದು–ಸೀಳಿ, ಬೀಸಿದಂ–ಎಸೆದನು. ಯಾವುದಾದರು ಉಪಾಖ್ಯಾನದ ಸಾರವೇನೆಂಬುವನ್ನು ಪಂಪನು ಮನಗಂಡು,

ಅಷ್ಟನ್ನು ಮಾತ್ರ, ವಿವರಗಳನ್ನು ಬಿಟ್ಟು ನಿರೂಪಿಸುತ್ತಾನೆ: ಆ ಕಥೆಯನ್ನೆಲ್ಲ ತಿಳಿದಿರುವವರು ವಿವರಗಳನ್ನೆಲ್ಲ ನೆನೆದುಕೊಂಡು ಇವನ ಸಂಗ್ರಹವನ್ನು ಸವಿಯಬೇಕಾಗಿದೆ. ಸಂಗ್ರಹಕಾರನ ಕೌಶಲ್ಯಮಿತಿಯಲ್ಲಿ ಅಮಿತವಾದ ಅರ್ಥಸಂಪತ್ತಿಯನ್ನು ತುಂಬುವುದು. ಹಾಗೆ ಮಾಡುವುದರಲ್ಲಿ ಪಂಪನು ಅದ್ವಿತೀಯ. ಹಿಡಿಂಬ ವಧೆಯನ್ನು ಈ ಒಂದೇ ಪದ್ಯದಲ್ಲಿ ನಿರೂಪಿಸಿರುವುದಾದರೂ ಅಲ್ಲಿ ಪಾಠಕರ ಪ್ರತಿಭಾವಿಹಾರಕ್ಕೆ ವಿಶೇಷವಾದ ಅವಕಾಶವಿದೆ. ಅದನ್ನು ಚಿಂತಿಸಿದಷ್ಟೂ ಅದರ ಸೊಗಸು ಹೆಚ್ಚುತ್ತಾ ಹೋಗುತ್ತದೆ.

**ವಚನ:** ಕಳಕಳಕ್ಕೆ–ಗದ್ದಲಕ್ಕೆ: ಮಜಲುಂದಿದ–ಮರೆದು ನಿದ್ದೆಮಾಡುತ್ತಿದ್ದ: ಡಂಬಮಿಲ್ಲದೆ–ಕಾಪಟ್ಯವಿಲ್ಲದೆ; ಒಡಂಬಡಂ–ಒಪ್ಪಿಗೆಯನ್ನು, ಒಪ್ಪಂದವನ್ನು, ಕೆಯ್ಕೊಳ್ವುದೆ–ಸ್ವೀಕರಿಸುವುದೇ ; ಕಜ್ಜಂ–ಕಾರ್ಯ ; ಕಜಂಗಿ–ಕಪ್ಪಾಗಿ ; ಕತ್ತಲಿಸಿದ–ಕತ್ತಲೆಯಾದ, ನೆರಳಾದ; ಮರದುಱುಗಲ–ಮರದ ಗುಂಪಿನ, ತೋಪಿನ: ಸುಧಾಧವಳಿತೋತ್ತುಂಗ ರಮ್ಯಹರ್ಮ್ಯಂಗಳಂ–ಸುಣ್ಣದಿಂದ ಬೆಳ್ಳಗಾಗಿರುವ ಎತ್ತರವಾದ ಸೊಗಸಾದ ಅರಮನೆಗಳನ್ನು: ಕಾಣ್ಬರಪ್ಪೊಡೆ–ಕಾಣುವಿರಾದ ಪಕ್ಷದಲ್ಲಿ; ಮಹಾವಿಭೂತಿಯಿಂ–ಮಹಾವೈಭವದಿಂದ; ಲೇಪನಂಗಳಿಂ–ಬಳಿಯುವ ಗಂಧಗಳಿಂದ; ಪಥಪರಿಶ್ರಮಮೆಲ್ಲಮಂ–ಮಾರ್ಗಾಯಾಸವೆಲ್ಲವನ್ನೂ,

**೧೯.** ಎಲ್ಲಿ ಕೊಳಂ–ಎಲ್ಲಿ ಸರೋವರವೋ, ಎಲ್ಲಿ ತಣ್ಬುಱಲ್–ಎಲ್ಲಿ ತಂಪಾದ ತೋಪುಗಳೋ, ಎಲ್ಲಿ ಲತಾಭವನಂ–ಬಳ್ಳಿಮಾಡಗಳು ಎಲ್ಲಿಯೋ, ಎಲ್ಲಿ ಧಾರಾಗೃಹಂ–ಎಲ್ಲಿ ನೀರಧಾರೆ ಸುರಿವ ಮನೆಗಳೋ, ಅಂತು–ಹಾಗೆ, ಅಲ್ಲಿಯೆ–ಆ ಎಡೆಗಳಲ್ಲಿಯೇ, ತೊಡರ್ದು–ಒಟ್ಟಾಗಿ ಸೇರಿ, ಅಲ್ಲಿಯೆ ನಿಂದು–ಅಲ್ಲಿಯೆ ತಂಗಿ, ಅಲ್ಲಿಯೆ–ಅಲ್ಲಿಯೇ; ಆಕೆ–ಆ ಹಿಡಿಂಬೆ, ಮರುದಾತ್ಮಜನೊಳ್–ಭೀಮಸೇನನೊಡನೆ, ರಮಿಯಿಸಿದಳ್–ಕ್ರೀಡಿಸಿದಳು. ಇಲ್ಲಿ ಮಹಾಭಾರತದಲ್ಲಿ ವಿಸ್ತಾರವಾದ ವರ್ಣನೆ ಇದೆ: ಶೈಲಶೃಂಗೇಷು ರಮ್ಯೇಷು ದೇವತಾಯತನೇಷು ಚ। ಮೃಗಪಕ್ಷಿ ವಿಘುಷ್ಟೇಷು ರಮಣೀಯೇಷು ಸರ್ವದಾ॥ ಸರ್ವರ್ತುಫಲರಮ್ಯೇಷು ಮಾನಸೇಷು ಸರಸ್ಸು ಚ। ಬಿಭ್ರತೀ ಪರಮಂ ರೂಪಂ ರಮಯಾಮಾಸ ಪಾಂಡವಂ॥ ಎಂಬೆರಡು ಶ್ಲೋಕಗಳನ್ನು ಮಾದರಿಗಾಗಿ ನೋಡಬಹುದು. ಪಂಪನ ಒಂದು ಕಂದಪದ್ಯ ೯ ಶ್ಲೋಕಗಳ ರಮಣೀಯ ಸಂಗ್ರಹವಾಗಿದೆ.

ಪುೞಲ್ =(ತ) ಪೊೞಲ್–ಉದ್ಯಾನವನ, ವನ : ಇದಕ್ಕೂ (ಸಂ) ಪುಲಿನ > ಪುಳಿನ = ಮರಳು ಎಂಬುದಕ್ಕೂ ಸಂಬಂಧವಿಲ್ಲ.

**ವಚನ:** ಪೊೞಲ್ಗೆ ಮಗುೞ್ದು ಬಂದೊಡೆ–ನಗರಕ್ಕೆ ಹಿಂತಿರುಗಿ ಬಂದರೆ

**೨೦.** ಕಾರಿರುಳ–ಮಳೆಗಾಲದ ರಾತ್ರಿಯ, ತಿರುಳ–ತಿರುಳಿನ, ಬಣ್ಣಂ–ಬಣ್ಣವು, ಕೊರಿದುಪೆನೆ–ಪರಿತವಾದುವು ಎನ್ನಲು, ತೊಳಪ–ಹೊಳೆವ, ದಾಡೆ–ಕೋರೆಹಲ್ಲುಗಳು, ಮಿಳಿರ್ವುರಿಗೇಸಂ–ಅಲುಗಾಡುವ ಉರಿಯಂತಿರುವ ಕೂದಲು; ಪೇರೊಡಲ್–ದೊಡ್ಡದೇಹವು, ಇವೆಲ್ಲಾ, ಎಸೆದಿರೆ–ಪ್ರಕಾಶಿಸುತ್ತಿರಲು, ಘಟೋತ್ಕಚನೆಂಬಂ ಮಗಂ–

ಘಟೋತ್ಕಚನೆಂಬ ಮಗನು, ಆರುಂ–ಯಾರೂ, ಅಗುರ್ವಿಸೆ–ಭಯಪಡುವಂತೆ, ಪುಟ್ಟಿದಂ–ಹುಟ್ಟಿದನು. ಇಲ್ಲಿ ಕಾರಿರುಳ್ ಶಬ್ದವನ್ನು ಕಾರ್+ಇರುಳ್ ಎಂದು ಬಿಡಿಸಿದೆ, ಇದು ಕರಿದು+ಇರುಳ್ ಎಂದೂ ಆಗಬಹುದು; ಕರಿದು, ಕಿರಿದು ಮುಂತಾದ ಕೆಲವು ಗುಣವಚನಗಳಿಗೆ ಸ್ವರಾದಿ ಶಬ್ದ ಪರವಾಗಿ ಸಮಾಸವಾದಾಗ ಅವುಗಳ ಆದಿಗೆ ದೀರ್ಘ ಬರುತ್ತದೆ, ಕಾರೊಸಡು, ಪೇರೊಡಲ್ ಎಂಬಂತೆ; ಆದ್ದರಿಂದ ಕಾರಿರುಳ–ಕಪ್ಪನೆಯ ರಾತ್ರಿ ಎಂದು ಅರ್ಥವಾಗುತ್ತದೆ; ಕರಿದು+ಇರುಳ್.

**ವಚನ :** ಈಶ್ವರ ಕಲ್ಪಿತದಿಂ–ದೇವರ ಸೃಷ್ಟಿಯಿಂದ, ಕಲ್ಪನೆಯಿಂದ; ಸದ್ಯಃ ಪ್ರಸೂತಿ–ಕೂಡಲೇ ಹೆರುವುದು;

**೨೧.** ಪಾಂಡವರು ಏಕಚಕ್ರ ನಗರಕ್ಕೆ ಪ್ರಯಾಣಮಾಡಿದ್ದು :–ಹಿಡಿಂಬೆಯುಂ ಬರಿಸಿ–ಹಿಡಿಂಬೆಯನ್ನು ಬರಮಾಡಿಕೊಂಡು, ಘಟೋತ್ಕಚನಂ–ಘಟೋತ್ಕಚನನ್ನು, ಸಾರೆ–ಹತ್ತಿರಕ್ಕೆ, ಕರೆದು, ಇನ್ನೆವರಂ–ಇಲ್ಲಿಯವರೆಗೆ, ಮನೋಮುದಂಬೆರಸು–ಮನಸ್ಸಿನ ಸಂತೋಷದೊಡನೆ ಕೂಡಿ, ಒಸೆದು–ಪ್ರೀತಿಸಿ, ಇರ್ದೆವು–ಇದ್ದೆವು, ಇನ್ ಇರಲಾಗದು–ಇನ್ನು ಮುಂದೆ ಇರುವುದಾಗದು, ಪೋಪೆಂ–ಹೋಗುತ್ತೇವೆ, ಎಂದೊಡೆ–ಎಂದು ಹೇಳಿದರೆ, ಆದರದೊಳ್–ಆದರದಲ್ಲಿ, ಕೊಟ್ಟ ವಸ್ತುಗಳುಮಂ–ಕೊಟ್ಟ ಪದಾರ್ಥ ಗಳನ್ನು, ಒಂದುಮಂ–ಒಂದನ್ನೂ, ಒಲ್ಲದೆ–ಒಪ್ಪಿಕೊಳ್ಳದೆ, ಕೂರ್ತು–ಪ್ರೀತಿಸಿ, ಬುದ್ಧಿ ವೇೞ್ದಿರಿಸಿ–ಬುದ್ಧಿಯ ಮಾತುಗಳನ್ನು ಹೇಳಿ ವಸ್ತುಗಳನ್ನು ಅಲ್ಲಿಯೇ ಇರಿಸಿ, ಸುಖಪ್ರಯಾಣದೊಳ್–ಸುಖಕರವಾದ ಪ್ರಯಾಣದಲ್ಲಿಯೇ, ಪಾಂಡವರ್, ಏಕ ಚಕ್ರಮಂ, ಎಯ್ದಿದರ್–ಸೇರಿದರು.

**೨೨.** ರಗಳೆ: ಕೃತಕಗಿರಿಗಳಿಂ–ಮಾಟದ ಬೆಟ್ಟಗಳಿಂದ; ಬಿರಯಿಯಿಂ–ವಿರಹಿಯಿಂದ; ಕಣ್ಮಲೆಯೆ–ಮನಸ್ಸಿಗೆ ವೇದ್ಯವಾಗಲು, ಪೂತ–ಹೂಬಿಟ್ಟ, ಸುರಯಿಯಿಂ–ಸುರಗಿಯಿಂದ; ಜರಿವೊಸಲ್ಗಳಿಂ–ಝುರಿಯ ಪ್ರವಾಹಗಳಿಂದ; ಗಂಧ ಶಾಲಿ–ಸುವಾಸನೆಯ ಬತ್ತ; ಓಳಿಯಿಂ–ಗುಂಪಿನಿಂದ; ಕುಂಟುಜಳಧಿ–ಕುಡಿಯುವ ನೀರಿಗೆ ಆಕರವಾದ ಸಮುದ್ರ; ಅಗಬಿನೀಳ್ಪಿನಂ–ಅಗಳಿನ ಉದ್ದದಿಂದ; ದೇವಗೃಹ–ದೇವಾಲಯ; ಮಱುಗಿ–ಕುದಿದು, ವ್ಯಾಕುಲಗೊಂಡು; ಬಟ್ಟೆಯರ–ದಾರಿಹೋಕರು; ಪಂಚರತುನ ದೊಳ್–ಐದು ಬಗೆಯ ರತ್ನಗಳಲ್ಲಿಯೇ, ನೆಱೆದ ಪಸರದಿಂ–ತುಂಬಿದ ಅಂಗಡಿಗಳಿಂದ; ತಿಸರದಿಂ–ಮೂರು ಎಳೆಯ ಹಾರಗಳಿಂದ; ಧನದರನ್ನರ್–ಕುಬೇರನಂಥವರು; ಪರದರಿಂ–ವ್ಯಾಪಾರಿಗಳಿಂದ, ಶೆಟ್ಟಿಗಳಿಂದ; ಬಿರುದರಿಂ–ಬಿರುದುಗಳನ್ನುಳ್ಳವರಿಂದ; ಪಂಚರತ್ನ= ಐದು ರತ್ನಗಳು; ಇವು ಯಾವುವು ಎಂಬ ವಿಚಾರದಲ್ಲಿ ಬೇರೆ ಬೇರೆ ಅಭಿಪ್ರಾಯಗಳಿವೆ: (೧) ನೀಲ, ವಜ್ರ, ಪದ್ಮರಾಗ, ಮುತ್ತು, ಹವಳ (೨) ಚಿನ್ನ, ಬೆಳ್ಳಿ, ಮುತ್ತು, ರಾಜಾವರ್ತ, ಹವಳ (೩) ಕನಕ, ಹೀರಕ, ನೀಲ, ಪದ್ಮರಾಗ, ಮುತ್ತು. ಇಲ್ಲಿನ ರಗಳೆಯ ಪ್ರತಿಪಾದದಲ್ಲೂ ಮೂರು ಮಾತ್ರೆಯ ೧ ಗಣ, ಐದು ಮಾತ್ರೆಯ ೧ ಗಣ, ತಿರುಗಿ ತ್ರಿಮಾತ್ರಾಗಣ ೧ ಮತ್ತು ಪಂಚಮಾತ್ರಾಗಣ ೧–ಹೀಗೆ ಗಣ

ವಿನ್ಯಾಸವಿದೆ; ಎರಡೆರಡು ಪಾದಗಳಿಗೆ ಅಂತ್ಯಪ್ರಾಸವಿದೆ. ಇದು ಪ್ರತಿ ಪಾದದಲ್ಲೂ ನಾಲ್ಕು-ಚತುಷ್ಕಲಗಳನ್ನುಳ್ಳ ಮಂದಾನಿಲರಗಳೆಯ ಇನ್ನೊಂದು ರೂಪ; ೪+೪ ಎಂಬುದನ್ನು ೩+೫ ಎಂದು ಮಾತ್ರಾ ವಿಭಾಗವಿದೆ. ಈ ರಗಳೆಗೆ ಹೆಸರೇನೆಂದು ಎಲ್ಲಿಯೂ ಹೇಳಿಲ್ಲ

**ವಚನ:** ತಮ್ಮುತಯ್ವರುಂ – ತಾವೈವರೂ; ಇನ್ನವು ಪೊೞಲ್ಗಳ್ - ಇಂಥ ನಗರಗಳು; ಈ ಪಟ್ಟಣಕ್ಕೆ ವಸುಮತಿ, ಪದ್ಮನಗರ, ಏಕಚಕ್ರ, ಬಹುಧಾನ್ಯ-ಎಂದು ಒಂದೊಂದು ಯುಗದಲ್ಲಿ ಒಂದೊಂದು ಹೆಸರು; ಜೋದನ ನಗರವೇ (೧-೧೭) ಬಹುಧಾನ್ಯವೆಂದು ಒಂದು ಅಭಿಪ್ರಾಯವಿದೆ; ಚತುಶ್ಶಾಲೆಯೊಳ್ – ಅಂಗಳದಲ್ಲಿ, ತೊಟ್ಟಿಯಲ್ಲಿ; ಬೀಡಂಬಿಟ್ಟು-ತಂಗಿ, ನೆಲಸಿ; ಧರಾಮರವೇಷದಿಂ-ಬ್ರಾಹ್ಮಣರ ವೇಷದಿಂದ.

೨೩. ಸೂರ್ಯ ಮುಳುಗಿ ಸಂಜೆಯಾಯಿತು. ತುಂಬಿದ-ತುಂಬಿರುವ, ರಕ್ತತೆಯಿಂ –ಕೆಂಪು ಬಣ್ಣದಿಂದ (ಪ್ರೀತಿಯಿಂದ), ನಿಜ ಬಿಂಬವು-ತನ್ನ ಬಿಂಬವು, ವಾರುಣಿಯಂ- ವರುಣ ದಿಕ್ಕನ್ನು, ಪಶ್ಚಿಮ ದಿಕ್ಕನ್ನು (ಮದ್ಯವನ್ನು), ಒಸೆದು-ಪ್ರೀತಿಸಿ, ಸೇವಿಸೆ- ಸೇವೆಮಾಡಲು (ಕುಡಿಯಲು), ನಾಣ್ಗೆಟ್ಟಂಪೋಲ್-ನಾಚಿಕೆ ತೊರೆದವನಂತೆ, ತೇಜಂ- ಕಾಂತಿ, ಮಸುಳ್ವಿನಂ-ಕಂದುತ್ತಿರಲು, ಅಂಬರಮಂ-ಆಕಾಶವನ್ನು (ಬಟ್ಟೆಗಳನ್ನು), ಅಂಬುಜಮಿತ್ರಂ- ಸೂರ್ಯನು, ಬಿಸುಟಂ-ಬಿಸಾಡಿದನು. ಪಂಪನು ಬಹು ಅಪೂರ್ವವಾಗಿ ಶ್ಲೇಷಾಲಂಕಾರವನ್ನು ಬಳಸುತ್ತಾನೆ; "ಚಂಚಚ್ಚಂದ್ರಕರಸ್ಪರ್ಶ ಹರ್ಷೋನ್ಮೀಲಿತ ತಾರಕಾ। ಅಹೋ ರಾಗವತೀ ಸಂಧ್ಯಾ ಜಹಾತಿ ಸ್ವಯಮಂಬರಂ" ಎಂಬ ವಾಲ್ಮೀಕಿ ರಾಮಾಯಣ ಶ್ಲೋಕವನ್ನು (೩-೩೦-೪೫) ಈ ಪದ್ಯದೊಡನೆ ಹೋಲಿಸಿ ನೋಡ ಬಹುದು.

**ವಚನ:** ಬೀಡಿನೊಳಿರ್ದ-ತಂಗಿದ ಮನೆಯಲ್ಲಿದ್ದ; ಕರ್ಣೋಪಾಂತದೊಳ್- ಕಿವಿಯ ಸಮೀಪದಲ್ಲಿ.

೨೪. ಸಾರೆಯೊಳ್-ಹತ್ತಿರದಲ್ಲಿ, ಅೞ್ವ-ಅಳುವ, ಮಹಾದ್ವಿಜನಾರಿಯ- ಮಹಾಬ್ರಾಹ್ಮಣನ ಹೆಂಡತಿಯ, ಮಮತಾವಿಪೂರಿತೋರ್ಜಿತರವದಿಂ-ಮಮತೆಯಿಂದ ತುಂಬಿದ ಗಟ್ಟಿಯಾದ ಶಬ್ದದಿಂದ (ಕೂಡಿದ), ಕಾರುಣ್ಯಾಕ್ರಂದನಂ-ಕರುಣೆಯಿಂದ ಕೂಡಿದ ಅಳುವಿನ ಸದ್ದು, ಅನಿವಾರಿತಂ-ಸ್ವಲ್ಪವೂ ತಡೆಯಿಲ್ಲದುದಾಗಿ, ಒರ್ಮೊದಲೆ- ಕೂಡಲೇ, ಬಂದು, ಆಗಳ್-ಆಗ, ತೀಡಿತು-ಮುಟ್ಟಿತು, ಸೋಂಕಿತು.

**ವಚನ:** ಏನಾನುಮೊಂದು-ಏನಾದರೂ ಒಂದು; ಆಗಲೆವೇೞ್ಕುಂ-ಆಗಲೇ ಬೇಕು; ಈ ಪುಯ್ಯಲಂ-ಈ ಬೊಬ್ಬೆಯನ್ನು, ಕೂಗನ್ನು; ಆರಯ್ದು-ವಿಚಾರಮಾಡಿ;

೨೫. ಬ್ರಾಹ್ಮಣನ ಮನೆಯಲ್ಲಿನ ದೃಶ್ಯ: ಕುಡಲಾದ ಕೂಸು-ಕನ್ಯಾದಾನ ಮಾಡಿಕೊಳ್ಳುವುದಕ್ಕೆ ತಕ್ಕ ವಯಸ್ಸಾದ ಮಗಳು, ಅೞ್ತೆ-ಅಳುತ್ತಿರಲು; ಧರ್ಮ ಪತ್ನಿ-ಹೆಂಡತಿ, ನೆಲದೊಳ್-ನೆಲದ ಮೇಲೆ, ಪೊರಳುತ್ತಿರೆ-ಹೊರಳಾಡುತ್ತಿರಲು;

ಬಾಯ ಬಿದು–ಅತ್ತು, ಕೊರಲ್ಗೆಪಾಯ್ದು–ಕೊರಳನ್ನು ತಬ್ಬಿಕೊಂಡು, ಪರಿಪಾಡುವ–ಓಡಾಡುವ, ಬಾಲಕಂ–ಹುಡುಗನು, ಆದಶೋಕದಿಂ–ಉಂಟಾದ ದುಃಖದಿಂದ, ಗಳಗಳ ಕಣ್ಣನೀರ್ ಸುರಿಯೆ–ಗಳಗಳ ಎಂದು ಕಣ್ಣಿನ ನೀರನ್ನು ಸುರಿಯುತ್ತಿರಲು ; ಚಿಂತಿಪ–ಚಿಂತಿಸುತ್ತಿರುವ, ಪಾರ್ವನ-ಬ್ರಾಹ್ಮಣನ, ಶೋಕದ-ದುಃಖದ, ಒಂದು ಪೊಂಪುಳಿಯನೆ–ಒಂದು ಆಧಿಕ್ಯವನ್ನೇ, ನೋಡಿ–ನೋಡಿ, ನಾಡೆ–ಹೆಚ್ಚಾಗಿ, ಕರುಣಂ ತನಗಾಗಿರೆ-ದಯೆಯುಂಟಾಗಿರಲು, ಕೊಂತಿ–ಕುಂತಿಯು, ಚಿಂತೆಯಿಂ–ದುಃಖದಿಂದ ;

ಈ ಪದ್ಯದಲ್ಲಿರುವ 'ಕುಡಲಾದ ಕೂಸು' ಎಂಬುದು 'ಕೊಡಗೂಸು' ಎಂಬುದರ ವಿಗ್ರಹವಾಕ್ಯದಂತೆ ಕಾಣುತ್ತದೆ ; ಹಾಗಿದ್ದರೆ 'ಕುಡಗೂಸು' ಎಂಬ ರೂಪವಿರಬೇಕು, ವಾಸ್ತವಿಕವಾಗಿ ಇಲ್ಲಿನ ಕೊಡ ಎಂಬುದು ಕೋಮಲವಾದ, ಎಳೆಯ ಎಂಬರ್ಥವುಳ್ಳ ಶಬ್ದ ; ತಮಿಳಿನ ಕುಟಿ, ಕೊಟಿಂಪ್ಪೈ ; ತೆಲುಗಿನ ಕೊಡುಕು, ಕೊಡಮು ; ಕನ್ನಡದ ಕೊಣಸು–ಇವೆಲ್ಲ ಒಂದೇ ಮೂಲದಿಂದ ಬಂದಿರುವ ಶಬ್ದಗಳು, ಆದ್ದರಿಂದ ಕೊಡಗೂಸು ಎಂದರೆ ಕೋಮಲವಾದ ಕೂಸು ಎಂದರ್ಥವಾಗಬಹುದು.

**ವಚನ :** ಎರಡೆಮ್ಮೆವೋರಿಯೊಳ್–ಎರಡು ಕೋಣಗಳಲ್ಲಿ ; ಪೂಡಿದ–ಹೂಡಿದ; ಪನ್ನಿರ್ಕಂಡುಗ–ಹನ್ನೆರಡು ಖಂಡುಗ ; ಕೂಳುಮಂ–ಅನ್ನವನ್ನೂ, ಪರಿಕರ–ಬಾಡಿಸಿ ಕೊಳ್ಳುವ ಪದಾರ್ಥಗಳು ; ಪಲ್ಲಂ ತಿಂಬಂ–ಸಿಟ್ಟಿನಿಂದ ಹಲ್ಲನ್ನು ಕಡಿಯುತ್ತಾನೆ ; ನಾಳಿನ ಬಾರಿ–ನಾಳಿನ ಸರದಿ ; ಆಕೆಯಿಂಬಳಿಯುಂ–ಅವಳ ಅನಂತರ ; ಸಂತತಿ ಚ್ಛೇದಮುಂ ಪಿಂಡಚ್ಛೇದಮುಂ–ಸಂತತಿಯು ನಿಂತುಹೋಗುವುದೂ, ಆ ಕಾರಣದಿಂದ ಪಿಂಡಪ್ರದಾನ ಮಾಡುವವರು ಯಾರೂ ಇಲ್ಲದೆ ಹೋಗುವುದೂ ;

೨೬. ಕುಂತಿಯ ಸಮಾಧಾನ : ನಿಮ್ಮಿನಾಲ್ವರೊಳ್–ನಿಮ್ಮ ಈ ನಾಲ್ವರಲ್ಲಿ, ಒರ್ವರುಂ–ಒಬ್ಬರೂ, ಇಂ ಮಿಡುಕಲ್ವೇಡ–ಇನ್ನು ನಡುಗಬೇಡಿರಿ; ಹೆದರಬೇಡಿರಿ ; ಎನಗೆ ಅಯ್ವರ್ ಮಕ್ಕಳ್ ಒಳರ್ - ನನಗೆ ಐದು ಜನ ಗಂಡು ಮಕ್ಕಳಿದ್ದಾರೆ, ತಮ್ಮೊಳಗೆ–ತಮ್ಮಲ್ಲಿಯೇ, ಎಸೆವ–ಶೋಭಿಸುವ, ಅಯ್ವರೊಳಂ–ಐದು ಮಂದಿಯಲ್ಲಿ, ಒರ್ವನಂ–ಒಬ್ಬನನ್ನು, ನಾಂ–ನಾನು, ಮಾಣದೆ–ಬಿಡದೆ, ಬಕನ ಬಾರಿಗೆ–ಬಕಾಸುರನ ಸರದಿಗೆ, ಈವೆಂ–ಕೊಡುತ್ತೇನೆ.

**ವಚನ :** ಉಸಿರದಿರಿಂ–ಮಾತಾಡದೆ ಇರಿ ; ಸವಕಟ್ಟಂ-ಏರ್ಪಾಡನ್ನು, ಸಿದ್ಧತೆಯನ್ನು ; ಉಣಿಸಂ – ಊಟವನ್ನು ; ದೊರೆಕೊಳಿಸಿ ಬಂದುದು–ದೊರೆಯುವಂತೆ ಮಾಡಿದ್ದು ; ಕರಂ ಒಳ್ಳಿತಾಯ್ತು–ಬಹಳ ಒಳ್ಳೆಯದಾಯಿತು ; ಮತ್ತಿನ-ಉಳಿದ ; ಸಯ್ಪಿನಿಂ–ಪುಣ್ಯದಿಂದ ; ಪಡೆಮಾತನೆ–ಸುದ್ದಿಯನ್ನೇ.

೨೭. ಸೂರ್ಯೋದಯ : ತಮೋಬಲಂ–ಕತ್ತಲೆಯ ಸೈನ್ಯ, ಓಡೆ–ಪರಾರಿಯಾಗಲು ; ನಿಶಾಚರಬಲಂ–ರಾತ್ರಿಂಚರರ ಎಂದರೆ ರಾಕ್ಷಸಾದಿಗಳ ಸೈನ್ಯವು, ಅಗಿದು–ಹೆದರಿ, ಅಳ್ಳಾಡೆ–ನಡುಗಲು, ರಥಾಂಗಯುಗಂಗಳ್–ಚಕ್ರವಾಕ ಪಕ್ಷಿಯ ಜೋಡಿಗಳು, ಕೂಡೆ–ಸೇರಲು, ಬಗೆ ಕೂಡೆ–ಮನೋರಥವುಂಟಾಗಲು, ಬಕಂಗೆ-ಬಕಾಸುರನಿಗೆ,

ಮಿಱ್ತು—ಸಾವು, ಮೂಡುವತೆಱದಿಂ—ಹುಟ್ಟುವ ರೀತಿಯಿಂದ, ನೇಸಱ್—ಸೂರ್ಯ, ಮೂಡಿದುದು—ಉದಯವಾಯಿತು.

**ವಚನ:** ಪಾರ್ವಂತಿಯುಂ ಪಾರ್ವನುಂ—ಬ್ರಾಹ್ಮಣಿತಿಯೂ ಬ್ರಾಹ್ಮಣನೂ; ಸೇಸೆಯನಿಕ್ಕಿ—ಮಂತ್ರಾಕ್ಷತೆಗಳನ್ನು ಹಾಕಿ.

೨೮. ಅಱತಿಯೊಳ್—ಬಂಡೆಯ ಮೇಲೆ, ಪಾಡೆಗಳಂ—ಕೋರೆಹಲ್ಲುಗಳನ್ನು, ಇಂಬಿಂ—ಸಾವಕಾಶವಾಗಿ, ತೀಡುತ್ತುಂ—ಮಸೆಯುತ್ತ, ತೀವ್ರಮಾಗೆ—ಹರಿತವಾಗಲು, ಬಂಡಿಯ ಬರವಂ—ಬಂಡಿಯು ಬರುವುದನ್ನು, ನೋಡುತ್ತಿರ್ಪ, ಬಕನಂ—ಬಕನನ್ನು, ನಾಡೆಯೆ ಅಂತರದೆ—ಚೆನ್ನಾಗಿ ದೂರದಲ್ಲಿಯೆ, ನಡುವೆ, ಕಂಡು—ನೋಡಿ, ಭೀಮಂ, ಮುಳಿದಂ—ಮುಳಿದನು.

೨೯. ಕಡೆಗಣ್ಣೊಳ್—ಕಣ್ಣಿನ ಕಡೆಗಳಿಂದಲೇ, ರಕ್ಕಸನಂ ನಡೆನೋಡಿ—ರಾಕ್ಷಸನನ್ನು ಚೆನ್ನಾಗಿ ನೋಡಿ, ಕೊಲಲ್ಕೆ – ಕೊಲ್ಲುವುದಕ್ಕೆ, ಸತ್ವಮಪ್ಪಂತಿರೆ – ಶಕ್ತಿಯುಂಟಾಗುವ ಹಾಗೆ, ಮುಂ—ಮೊದಲು, ಕೂೞಂ—ಅನ್ನವನ್ನು, ಪೊಡೆವೆಂ—ಹೊಡೆಯುತ್ತೇನೆ ಎಂದರೆ ಊಟ ಹೊಡೆಯುತ್ತೇನೆ, ಬೞಿಯಂ-ಆಮೇಲೆ, ರಕ್ಕಸನಂ-ರಾಕ್ಷಸನನ್ನು, ಪೊಡೆವೆಂ—ತದಕುತ್ತೇನೆ ಎಂದು, ಸಾಹಸ ಭೀಮಂ—ಪರಾಕ್ರಮಿಯಾದ ಭೀಮನು.

**ವಚನ:** ತುತ್ತಿಸೊಳ್—ಕವಳಗಳಲ್ಲಿಯೆ, ಸವೆಯೆ—ಮುಗಿದು ಹೋಗುವ ಹಾಗೆ, ತುತ್ತುವುದುಂ—ನುಂಗುತ್ತಲೂ; ಪಾಂಗಂ—ರೀತಿಯನ್ನು; ಬಕವೇಷದಿಂ—ಬಕಪಕ್ಷಿಯ ವೇಷದಿಂದ; ಪೆಱಗಣದೆಸೆಗೆ—ಹಿಂದುಗಡೆಗೆ; ಓಸರಿಸಿ—ಸರಿದು; ಓಸರಿಸು < ಅಪಸರಣ + ಇಸು.

೩೦. ಎರಡುಂ ಕೆಲನುಮಂ-ಎರಡು ಮಗ್ಗುಲುಗಳನ್ನೂ, ಎರಡುಂ ಕರಪರಿಘದಿಂ-ಪರಿಘದಂತಿರುವ ಎರಡೂ ಕೈಗಳಿಂದ, ಅಡಸಿ ಗುರ್ದಿ—ಹಿಡಿದು ಗುದ್ದಿ, ಪೆಱಪಿಂಗುವನಂ-ಹಿಂದಕ್ಕೆ ಸರಿಯುವನನ್ನು, ಮುರಿದಡಸಿಪಿಡಿದು—ತಿರುಗಿ ಗಟ್ಟಿಯಾಗಿ ಹಿಡಿದುಕೊಂಡು, ಘಟ್ಟಿಸಿ—ಅಪ್ಪಳಿಸಿ, ಪಿರಿಯಱತಿಯೊಳ್—ದೊಡ್ಡ ಬಂಡೆಯಮೇಲೆ; ಭೀಮಂ—ಭೀಮನು, ಅಸಗವೊಯ್ಲಂ—ಅಗಸನ ಏಟಿನಂತಿರುವ ಏಟನ್ನು, ಪೊಯ್ದಂ—ಹೊಡೆದನು.

**ವಚನ:** ಪೊಡೆಸೆಂಡಂ ಪೊಯ್ವಂತೆ— ಪುಟಚೆಂಡನ್ನು ಹೊಡೆದಹಾಗೆ; ಮೇಗೊಗೆದು—ಮೇಲಕ್ಕೆ ಹಾರಿ, ಸೆಣಸೆ—ಹೋರಾಡಲು.

೩೧. ಬಾರಿಯನಿಟ್ಟು—ಸರದಿಯನ್ನು ಹಾಕಿ, ಕೂಡೆ—ಕೂಡಲೇ, ಪ್ರೋೞಲಂ ತವೆ ತಿಂದನಂ-ಪಟ್ಟಣವನ್ನೆಲ್ಲಾ ನಾಶಪಡಿಸಿ ತಿಂದವನನ್ನು, ಆರುಂ—ಯಾರೂ, ಅಣಂ—ಸ್ವಲ್ಪವೂ, ಬಾರಿಸಲ್—ತಡೆಯಲು, ಅರ್ತರಿಲ್ಲ—ಶಕ್ತರಾಗಲಿಲ್ಲ, ಇನ್ ಜವನ ಬಾರಿಯೊಳಿಕ್ಕುವೆಂ-ಇನ್ನು (ಇವನನ್ನು) ಯಮನ ಸರದಿಗೆ ಕೊಡುತ್ತೇನೆ, ಎಂದು, ಪರ್ವೆ—ವಿಶಾಲವಾಗಿ, ಭೋಂಭೋರೆನೆ-ಭೋರ್‌ಭೋರ್ ಎಂದು ಶಬ್ದವಾಗುತ್ತಿರಲು, ಬೇಗ ಬೇಗನೆ, ಬೀಸೆ—ಬೀಸಲು, ತದ್ವದನಗಹ್ವರದಿಂ—ಆ ರಾಕ್ಷಸನ ಬಾಯೆಂಬ ಗವಿಯಿಂದ, ಬಿಸುನೆತ್ತರುಣ್ಮೆ—ಬಿಸಿಯ ರಕ್ತ ಹೊರಬರಲು, ಅಂಕದ—ಪ್ರಸಿದ್ಧನಾದ, ಬಳಾಧಿಕನಂ—

ಅತಿಶಯ ಶಕ್ತಿಯುಳ್ಳವನನ್ನು, ಬಕನಂ-ಬಕನನ್ನು, ವೃಕೋದರಂ-ಭೀಮನು, ಭೋಭೋರೆನೆ-ಶೀಘ್ರವಾಗಿಯೇ, ಕೊಂದಂ-ಕೊಂದನು.

**ವಚನ :** ತಮ್ಮಾಳ್ದನುಮಂ-ತಮ್ಮ ಸ್ವಾಮಿಯನ್ನೂ; ಅಶಿಶಿರಕಿರಣಂ-ಉಷ್ಣ ಕಿರಣನು, ಸೂರ್ಯನು ; ಅಪರಜಲನಿಧಿ ತಟನಿಕಟವರ್ತಿಯಾದಂ-ಪಶ್ಚಿಮ ಸಮುದ್ರ ಪ್ರದೇಶಕ್ಕೆ ಸಮೀಪದಲ್ಲಿರುವವನಾದನು, ಎಂದರೆ ಸೂರ್ಯನು ಮುಳುಗಿದನು ; ವಿಸ್ತೀರ್ಣ ಜೀರ್ಣಕರ್ಪಟಾವೃತಕಟಿತಟನುಂ-ಅಗಲವಾಗಿ ಹರಿದುಹೋದ ಬಟ್ಟೆಯಿಂದ ಮುಚ್ಚಿದ ಸೊಂಟಪ್ರದೇಶವುಳ್ಳವನೂ ಎಂದರೆ ಹರಕಲು ಬಟ್ಟೆ ಉಟ್ಟುಕೊಂಡಿರುವವನೂ; ಕಣ್ಮುಚ್ಚಲ್-ಮಲಗಲು, ಎಡೆವೇಡೆ-ಸ್ಥಳವನ್ನು ಬೇಡಲು ; ಪಟ್ಟಿರ್ದನಂ-ಮಲಗಿ ದವನನ್ನು ; ಪಡೆಮಾತಾವುದು-ವೃತ್ತಾಂತವೇನು ?

೩೨. ಮನದೊಳ್-ಮನದಲ್ಲಿ, ಕೂರದ-ಪ್ರೀತಿಸದ, ಪಾಂಡುರಾಜಸುತರುಂ-ಪಾಂಡುರಾಜನ ಮಕ್ಕಳೂ, ಲಾಕ್ಷಾಗೃಹೋಗ್ರಾಗ್ನಿಯಾನನದೊಳ್-ಅರಗಿನ ಮನೆಯ ಭಯಂಕರವಾದ ಅಗ್ನಿಯ ಮುಖದಲ್ಲಿ, ಮಡಿಂಗಿದರ್-ನಾಶವಾದರು ; ಎನ್ನಪುಣ್ಯಂ-ನನ್ನ ಪುಣ್ಯ ; ಅ[ರಿ]ಯರ್-ಅಸಾಧ್ಯರಾದವರು, ವೇಮಾಜಿರ್-ಮೋಸಹೋಗದವರು, ಇನ್ನಾರೊ-ಇನ್ನಾರಿದ್ದಾರೆ ; ಬೇರನೆ-ಬೇರನ್ನೇ, ಕಿೞ್ತಿಕ್ಕಿದೆಂ-ಕಿತ್ತುಹಾಕಿದೆನು ; ಈಗಳ್-ಈಗ, ಧರೆ-ಭೂಮಿ, ರಾಜ್ಯ, ನಿರ್ದಾಯಾದ್ಯಮಾಯ್ತು-ದಾಯಾದಿಗಳಿಲ್ಲ ದ್ದಾಯಿತು ; ಎಂದು-ಎಂದು, ಆ, ಸುಯೋಧನನ್-ದುರ್ಯೋಧನನು, ಆಳುತ್ತಿರೆ-ರಾಜ್ಯಭಾರ ಮಾಡುತ್ತಿರಲು, ಸಂದಹಸ್ತಿನಪುರಂ-ಪ್ರಸಿದ್ಧವಾದ ಹಸ್ತಿನಾವತಿ, ಸಂತಂ-ಯಾವಾಗಲೂ, ಬಸಂತಂ-ವಸಂತವು, ಕರಂ-ನಿಶ್ಚಯವಾಗಿಯೂ, ಮಿಗಿಲಾಗಿಯೂ.

ಈ ಪದ್ಯದಲ್ಲಿ ಬರುವ 'ಸುತರುಂ' ಎಂಬಲ್ಲಿನ ಸಮುಚ್ಚಯಕ್ಕೆ ಸಾರ್ಥಕತೆ ಇಲ್ಲ ; ಸುತ[ರಾ] ಎಂದು ಪಾಠವಿರಬಹುದು ; ಅಜೀಯರ್ ಎಂಬ ಪಾಠ ಸರಿಯೆಂದು ತೋರುವುದಿಲ್ಲವಾದ್ದರಿಂದ ಅದನ್ನು 'ಅರಿಯರ್' ಎಂದು ತಿದ್ದಿದೆ. ಅರ್ಥ, ಅರಿದು+ ಅರ್=ಅಸಾಧ್ಯರು ; 'ಅರಿಯರ್ ಪಾಂಡವರವರೊಳ್ ವಿರೋಧಮಂ ಬಿಸುಟು ಸಂಧಿಯಂ ಮಾಡುವುದೆಂಬರ ನುಡಿಯಂ' ಎಂದು ರನ್ನನ ಪ್ರಯೋಗವಿದೆ (ಗದಾ. ೬-೮), ಗೆಲಲ್ಕರಿಯನುಮೊಂದಿಬಾರದನುಮಂಕದಕರ್ಣನೆ (ಪಂಪಭಾ. ೯-೬೧) ಎಂದೂ ಉಂಟು. ವೇಮಾಜಿರ್-ಈ ಶಬ್ದದ ಸ್ವರೂಪ ವಿಚಾರದಲ್ಲೂ ಅರ್ಥ ವಿಚಾರದಲ್ಲೂ ಸಂದೇಹವಿದೆ ; ವಿಮಾಜು (ತ), ಏಮಾಳಿ (ಮ), ಏಮಾರು (ತೆ) ಎಂಬ ಶಬ್ದವು, ಮೋಸಮಾಡು, ಮೋಸಕ್ಕೆ ಒಳಗಾಗು ಎಂಬರ್ಥದಲ್ಲಿ ದೊರೆಯುತ್ತದೆ. ಇಲ್ಲಿ ಇದೇ ಅರ್ಥವನ್ನು ಇಟ್ಟುಕೊಂಡಿದೆ ; ಈ ಶಬ್ದ 'ವೇಮಾಜು' ಏಕೆ ಆಯಿತೆಂದು ಹೇಳುವುದು ಕಷ್ಟ. "ಸಂತಂ ಬಸಂತಂ ಕರಂ" ಎಂದು ಮುಗಿಯುವ ಕೆಲವು ಪದ್ಯಗಳು ಶಾಸನಗಳಲ್ಲಿ ಅಲ್ಲಲ್ಲಿ ನಗರವರ್ಣನೆಯಲ್ಲೋ, ದೇಶವರ್ಣನೆಯಲ್ಲೋ ದೊರೆಯುತ್ತವೆ : 'ಮಾಧವ ಪುರಂ ಸಂತಂ ಬಸಂತಂ ಕರಂ' ಎಂದು ಕಡೂರು ೧೪೯ನೆಯ ಶಾಸನದಲ್ಲಿದೆ. 'ಬಲ್ಲಕುಂದೆ ನಡುನಾಡುಱ್ ಸಂತಂ ಬಸಂತಂ ಕರಂ' ಎನ್ನುತ್ತದೆ ಕುಜುಗೋಡಿನ ಶಾಸನ

(ಶಾಪಮಂ ೧೮೬); ಇನ್ನೊಂದು ಶಾಸನದಲ್ಲಿ (ಅರಸಿಯ ಕೆರೆ ೧೧೬) "ಕೆಲ್ಲಂಗೆ ಳೀ ಯಂದಮಿಂದ್ರನಮರಾವತಿಯಂತೆ ಬಸಂತಮಾಗಳುಂ" ಎಂದು ಸ್ವಲ್ಪ ವ್ಯತ್ಯಾಸಮಾಡಿ ಹೇಳಿದೆ. ಪಂಪನ ಈ ಪದ್ಯ ಇವೆಲ್ಲಕ್ಕೂ ಪ್ರೇರಕವಾಗಿದ್ದಿರಬಹುದು.

**ವಚನ:** ಅಸ್ತ್ರಪರಮುಂ–ಗುರಾಣಿಯೂ, ಕಾಳಗವಲಗೆಯೂ; ಅಭೇದ್ಯ ಕವಚಮುಂ–ಛೇದಿಸಲಾಗದ ಕವಚವೂ; ಒಳವು-ಉಂಟು; ಇವೆ. ಎಂದು ಆದೇಶಂ– ಎಂದು ಅಪ್ಪಣೆ, ವಿಧಿ, ನಿಯಮ; ಬುದ್ಧಿಯೊಡೆಯರಾರಾನುಂ–ಬುದ್ಧಿಯುಳ್ಳವರು ಯಾರಾದರೂ; ಸಯಂಬರಮಂ-ಸ್ವಯಂವರವನ್ನು; ಬಿಜಿಯನಟ್ಟಿದೊಡೆ–ದೂತನನ್ನು ಕಳಿಸಿದರೆ; ದೇಶಾಧೀಶ್ವರರೆಲ್ಲಂ–ರಾಜರುಗಳೆಲ್ಲ; ವಂದಿರ್ದರ್–ಬಂದಿದ್ದರು.

೩೩. ಗುಣಾರ್ಣವ–ಅರ್ಜುನನೇ, ತಲೆಯೊಳ್ ಸೀರೆಯನಿಕ್ಕಿ – ತಲೆಯ ಮೇಲೆ ಬಟ್ಟೆಯನ್ನು ಮುಸುಕಿಟ್ಟು, ಕಿಮ್ಮನೆ–ಸುಮ್ಮನೆ, ಇನ್ನೆನಿತಂ–ಇನ್ನೆಷ್ಟು ಕಾಲ, ಪೂಣ್ದಿರ್ಪಂ–ಪ್ರತಿಜ್ಞೆಮಾಡಿ ಇರೋಣ; ಉಗ್ರಾರಿವಂಶಲತಾವಲ್ಲರಿಗಳ್ಗೆ–ಭಯಂಕರ ಶತ್ರುಗಳ ವಂಶವೆಂಬ ಬಳ್ಳಿಯ ಕುಡಿಗಳಿಗೆ, ದಾವಶಿಖಿವೋಲ್–ಕಾಡುಕಿಚ್ಚಿನ ಹಾಗೆ, ಮೆಯ್ವೋಜ–ಮೈಯನ್ನು ತೋರಿಸಿ ಎಂದರೆ, ನಾವು ನಮ್ಮನ್ನು ಪ್ರಕಟಿಸಿಕೊಂಡು, ತದ್ದ್ರೌಪದೀ ಲಲನಾ ವ್ಯಾಜದಿಂ–ಆ ದ್ರೌಪದೀ ಎಂಬ ಸ್ತ್ರೀಯ ನೆಪದಿಂದ, ಈಗಳ್– ಈಗ, ಒಂದೆ ಪೊೞಲೊಳ್ ಸಂದಿರ್ದ–ಒಂದೇ ನಗರದಲ್ಲಿ ಸೇರಿರುವ, ಭಾಸ್ವತ್ಸುಹೃದ್ಬಲಕಂ–ಪ್ರಕಾಶಮಾನವಾದ ಸ್ನೇಹಿತ ಸೈನ್ಯಕ್ಕೂ, ಮಾರ್ವಲಕಂ–ಪ್ರತಿಸೈನ್ಯಕ್ಕೂ ಎಂದರೆ ಶತ್ರುಸೈನ್ಯಕ್ಕೂ, ಶರಪ್ರಾಗಲ್ಭ್ಯಮಂ–ನಮ್ಮ ಬಾಣ ಪ್ರೌಢಿಮೆಯನ್ನು, ತೋಱುವಂ–ಪ್ರದರ್ಶಿಸೋಣ.

ಚೀರ (ಸಂ) > ಸೀರೆ=ವಸ್ತ್ರ; ಪೂಣ್‌ಧಾತು ತಮಿಳು ಮಲಯಾಳ ಭಾಷೆಗಳಲ್ಲಿ, ಹಾಕಿಕೊಳ್ಳು, ಧರಿಸು ಎಂಬರ್ಥವಿದೆ, ಪೂಣ್ದಿರ್ಪಂ–ವೇಷ ಹಾಕಿಕೊಂಡು ಇರೋಣ ಎಂದು ಅರ್ಥವಾಗುತ್ತದೆ; ಇದು ಹೆಚ್ಚು ಉಚಿತ ಪ್ರಕೃತ ಸಂದರ್ಭಕ್ಕೆ.

**ವಚನ:** ಬಗೆದ ಬಗೆಯೊಳ್–ಆಲೋಚಿಸಿದ ರೀತಿಯಲ್ಲಿ; ಉತ್ತರೋತ್ತರಂ– ಏಳಿಗೆಯನ್ನು, ತಿರ್ದುವಿನಂ–ಸೂಚಿಸುತ್ತಿರಲು, ಸರಿಯಾಗಿರಲು; ಯಮುನಾನದೀತಟ ನಿಕಟವರ್ತಿಯಪ್ಪ–ಯಮುನಾ ನದಿಯ ತೀರದ ಸಮೀಪದಲ್ಲಿರುವ; ಅಡವಿಯೊಳಗನೆ– ಕಾಡಿನಲ್ಲಿಯೆ; ದಿನಕರ ಬಿಂಬಾಂಬುಜಂ–ಸೂರ್ಯಬಿಂಬವೆಂಬ ಕಮಲವು; ಅಂಬರ ಸರೋವರದಿಂ–ಆಕಾಶವೆಂಬ ಸರೋವರದಿಂದ; ಪತ್ತುವಿಡುವುದುಂ–ಬಿಟ್ಟುಬಿಡುತ್ತಲು, ತೊಲಗಲು; ಕತ್ತಲೆಯುಗುರ್ವಾಗೆ–ಕತ್ತಲೆ ಭಯಂಕರವಾಗಲು; ತಮೋಪಶಮನ ನಿಮಿತ್ತಂ–ಕತ್ತಲನ್ನು ಕಡಮೆ ಮಾಡುವುದಕ್ಕಾಗಿ; ಅನಿಬರಿಂ ಮುಂದೆ–ಎಲ್ಲರಿಗಿಂತ ಮುಂಚೆ; ಪಾದಾಭಿಘಾತದೊಳ್–ಕಾಲಿನ ತುಳಿತದಿಂದ; ಉಚ್ಚಳಿಸುವ–ಮೇಲೆ ನೆಗೆಯುವ; ಸಪ್ಪುಳುಮಂ–ಸದ್ದನ್ನು, ಪತಂಗದಂತೆ–ಚಿಟ್ಟೆ ಹುಳುವಿನಂತೆ,

೩೪. ಬನಂ-ಈ ಕಾಡು, ಎನ್ನಾಳ್ವ ಬನಂ–ನಾನು ಆಳುವ ಕಾಡು; ಅಸ್ಮದ್ಬಲಂ- ನನ್ನ ಸೈನ್ಯ, ಶಕ್ತಿ, ನಿಶಾಬಲಂ–ರಾತ್ರಿಯ ಸೈನ್ಯ, ಶಕ್ತಿ; ಧೂರ್ತನಯ್–ನೀನು

ದುಷ್ಟನಾಗಿರುವೆ; ನಿನಗೆ, ಈ ಪೊೞ್ತಱೊಳ್—ಈ ಹೊತ್ತಿನಲ್ಲಿ, ಇತ್ತ ಬರ್ಪ—ಇಲ್ಲಿಗೆ ಬರುವ, ಅವಟಂ—ಶೌರ್ಯವನ್ನು, ಆರಿತ್ತರ್—ಯಾರು ಕೊಟ್ಟರು; ಎಂದು ಅಂತೊಡೆ—ಎಂದು ಎದುರಿಸಿದರೆ, ಆತನನ್—ಅವನನ್ನು, ಆ ಕೊಳ್ಳಿಯೊಳಿಟ್ಟೊಡೆ—ಆ ಕೊಳ್ಳಿಯಿಂದಲೆ ಹೊಡೆದರೆ, ಅಂತದು—ಹಾಗೆ ಅದು, ಲಯಾಂತೋಗ್ರಾಗ್ನಿಯಂತೆ—ಪ್ರಲಯಕಾಲದ ಭಯಂಕರವಾದ ಉರಿಯಂತೆ, ಅೞ್ವೆ—ಸುಡಲು, ಎನಸುಂ ಮಾಣದೆ—ಎಷ್ಟೂ ತಡಮಾಡದೆ, ಆರೂಢ ಸರ್ವಜ್ಞನಾ—ಅರ್ಜುನನ, ಪದಯುಗಕ್ಕೆ—ಎರಡು ಪಾದಗಳಿಗೆ, ಬಾಗಿದಂ—ನಮಸ್ಕರಿಸಿದನು.

**ವಚನ:** ತಾಗಿಬಾಗಿದಂತಾಗಿ—ತಗುಲಿಬಗ್ಗಿದಂತೆ, ಅಜುವರುಮಂ—ಆರು ಜನರನ್ನೂ, ಬಿರ್ದನಿಕ್ಕಿ—ಔತಣಮಾಡಿ, ಬಿರ್ದು=(ತ) ವಿರುಂದು, (ತೆ) ವಿಂದು, (ತು) ಪಿನ್ನೆ, (ಮ) ವಿರುನ್ನು—ಔತಣ, ಅತಿಥಿ ಇತ್ಯಾದಿ ಅರ್ಥಗಳು.

**೩೫.** ಇದು ನಿನ್ನ ಕೊಟ್ಟತಲೆ—ಇದು ನೀನು ಕೊಟ್ಟತಲೆ, ಎಂದರೆ ನನ್ನ ಜೀವವನ್ನು ನೀನು ಉಳಿಸಿದ್ದೀಯೆ; ನಿನಗಿದನಿತ್ತಪೆನೆಂದು—ಇದನ್ನು ನಿನಗೆ ಕೊಡುತ್ತೇನೆಂದು, ನುಡಿಯಲಾಗದು—ಹೇಳುವುದಾಗದು, ಮಾರ್ಕೊಳ್ಳದಿರ್—ಎದುರು ಮಾತಾಡಬೇಡ, ಪ್ರತಿಮಾತುಬೇಡ, ಎಂದು, ಗಿಳಿಯಬಣ್ಣದ-ಗಿಣಿಯಂತೆ ಪಚ್ಚೆಬಣ್ಣದ, ಕುದುರೆಯನಯ್ನೂಱುಮಂ-ಐನೂರು ಕುದುರೆಗಳನ್ನು, ಅಂಗದಪರ್ಣಂ, ಇತ್ತಂ-ಕೊಟ್ಟನು.

**ವಚನ:** ಅನ್ನೆಗಮೆಮಗಾಗಿರ್ಕೆ—ನಾವು ಬರುವವರೆಗೂ ನಮಗಾಗಿ ಇವು ನಿನ್ನಲ್ಲಿರಲಿ; ಇರವೇೞ್ದು—ಇರಲು ಹೇಳಿ; ಮಾರ್ತಾಂಡೋದಯಮೆ—ಸೂರ್ಯನ ಉದಯವೇ; ಪಯಣಂಬೋಗಿ—ಪ್ರಯಾಣಮಾಡಿ.

**೩೬.** ಪುಣ್ಯನದೀನದನಗರಾ [ರ]ಣ್ಯ ವಿಭೂಷಣೆಯಂ—ಪುಣ್ಯಕರವಾದ ನದಿ, ನದ, ನಗರ, ಅರಣ್ಯಗಳನ್ನು ಆಭರಣವಾಗಿ ಉಳ್ಳ, ಇಳಾಪುಣ್ಯ ಸ್ತ್ರೀಯಂ—ಭೂಮಿಯೆಂಬ ಪುಣ್ಯವನಿತೆಯನ್ನು, ಒಲ್ದುನೋಡುತ್ತುಂ—ಪ್ರೀತಿಪಟ್ಟು ನೋಡುತ್ತ, ಸಂಚಿತಪುಣ್ಯರ್—ಒಟ್ಟಾದ ಪುಣ್ಯವುಳ್ಳ ಪಾಂಡವರು, ಪಾಂಚಾಲದೇಶಮಂ, ಪುಗುತಂದರ್—ಪ್ರವೇಶಿಸಿದರು.

**ವಚನ:** ತದ್ವಿಷಯ ವಿಳಾಸಿನಿಗೆ—ಆದೇಶವೆಂಬ ಸ್ತ್ರೀಗೆ; ಕನಕಚ್ಛತ್ರದಂತೆ—ಚಿನ್ನದ ಕೊಡೆಯ ಹಾಗೆ;

**೩೭.** ಅಲ್ಲಿಯ ನಂದನಗಳ ಸೊಗಸು: ಪಾಡುವ—ಹಾಡುವ, ಜೇಂಕರಿಸುವ, ತುಂಬಿ; ಕೋಡುವ ಪುೞಿಲ್—ತಂಪಾಗಿರುವ ತೋಪುಗಳು; ನಡಪಾಡುವ—ನಡೆದಾಡುವ, ರಾಜಹಂಸೆ-ಶ್ರೇಷ್ಠವಾದ ಹಂಸಪಕ್ಷಿಗಳು; ಬಂದಾಡುವ-ಬಂದು ಮಾತಾಡುವ, ತೊಂಡು ವೆಣ್ಬುರುಳಿ—ತುಂಟು ಹೆಣ್ಣುಗಿಳಿಗಳು; ತೀಡುವ—ಬೀಸುವ, ತೆಂಬೆಲರ್—ತೆಂಕಣಗಾಳಿ; ನಲ್ಲರೊಳ್—ಒಲಿದವರಲ್ಲಿ, ಕೂಡುವ—ಬೆರೆಯುವ, ನಲ್ಲರ್—ಪ್ರಿಯರು, ಇವೆಲ್ಲ, ಆರೆರ್ದೆಗಂ—ಯಾರ ಎದೆಗೂ, ಆರಮನಕ್ಕಂ—ಯಾರ ಮನಸ್ಸಿಗೂ, ಅನಂಗರಾಗಮಂ—ಕಾಮಪ್ರೇಮವನ್ನು, ಮಾಡೆ—ಮಾಡಲು, ಅಲ್ಲಿಯ ನಂದನಾಳಿಗಳ್—ಅಲ್ಲಿನ

ತೋಟಗಳ ಸಾಲು, ಅರಿಕೇಸರಿಗೆ ಮನಕ್ಕೆ ವಂದುವು-ಅರಿಕೇಸರಿಯ ಮನಸ್ಸಿಗೆ ಸೊಗಸಾದುವು. ನಡವು < ನಡೆ + ವು ; " ಕೋಡು-ಶ್ರೈತ್ಯೈ " ; ತೊಂಡು + ವೆಣ್ + ಪುರುಳಿ = ತೊಂಡುವೆಣ್ಬುರುಳಿ.

೩೮. ಮದಗಜ ಬೃಂಹಿತಧ್ವನಿ-ಮದ್ದಾನೆಗಳ ಘೀಳಿಡುವ ಶಬ್ದ ; ತುರಂಗ ಮಹೇಷಿತ ಘೋಷಂ – ಕುದುರೆಗಳ ಕೆನೆಪಾಟದ ಶಬ್ದ ; ಅದಂ – ವಿಶೇಷವಾಗಿ, ಒರ್ಮೊದಲೆ-ಒಟ್ಟಿಗೇ, ಪಯೋಧಿ ಮಂಥನ ಮಹಾರವಮಂ-ಸಮುದ್ರಮಥನದ ಮಹಾ ಶಬ್ದವನ್ನು, ಗೆಲೆ-ಮೀರಿಸಲು ; ತಳ್ತ-ಸೇರಿರುವ, ಬಣ್ಣವಣ್ಣದ-ಬಣ್ಣ ಬಣ್ಣದ, ಗುಡಿ-ಬಾವುಟ, ತೊಂಬೆ-ಕುಚ್ಚು, ಗೊಂಚಲು-ಹೂಗೊಂಚಲು, ಎಲೆಯಿಕ್ಕಿದ-ಚಿಗುರಿದ, ಕಾವಣಂ-ಚಪ್ಪರ, ಇವು, ಎಲ್ಲಿಯುಂ, ಪೊದಳ್ದು-ವ್ಯಾಪಿಸಿ, ಒದವಿರೆ-ಉಂಟಾಗಿರಲು, ಅಖಿಳಾವನಿಪಾಳರ-ಸಮಸ್ತರಾಜರುಗಳ, ಬಿಟ್ಟ ಬೀಡುಗಳ್-ತಂಗಿದ ನೆಲೆಗಳು, ಕಣ್ಗೆ ಕಂಡವು-ಕಣ್ಣಿಗೆ ಕಂಡವು.

ಕಾವಣಂ < (ಸಂ) ಕಾಯವಮಾನ ; ಪೊದಳ್ = (ತ) ಪೊದುಳು, (ತು) ಪೊದುಲುನಿ, (ತೆ) ಪೊದಲು.

೩೯. ಈ ತ್ರಿಜಗಂಗಳೊಳ್-ಈ ಮೂರು ಲೋಕಗಳಲ್ಲಿ, ನೆಗಳ್ದ ಪೆಂಡಿರುಮಂ-ಪ್ರಸಿದ್ಧರಾದ ಸ್ತ್ರೀಯರನ್ನೂ, ಗೆಲೆವಂದು-(ಸೌಂದರ್ಯದಲ್ಲಿ) ಗೆದ್ದಿರುವ, ಪದ್ಮಿನೀಪತ್ರ ವಿಚಿತ್ರನೇತ್ರೆಗೆ-ಕಮಲದ ಎಸಳಿನಂತೆ ಸುಂದರವಾದ ಕಣ್ಣುಳ್ಳ ದ್ರೌಪದಿಗೆ, ಸಯಂಬರ ದೊಳ್-ಸ್ವಯಂವರದಲ್ಲಿ, ವರನಪ್ಪೆವಾದೊಡೆ-ವರನಾಗುವ ಹಾಗಾದರೆ, ಈ ಧಾತ್ರಿಯಂ-ಈ ಭೂಮಿಯನ್ನು, ಆಳ್ವೆಂ-ಆಳುವೆವು, ಆಮೆ ವಲಂ-ನಾವೇ ನಿಶ್ಚಯವಾಗಿಯೂ, ಎಂದು-ಎಂದುಕೊಂಡು, ತೆರಳ್ದ-ಒಟ್ಟಾಗಿ ಸೇರಿದ, ಸಮಸ್ತರಾಜಕಚ್ಛತ್ರದಿಂ-ಎಲ್ಲ ರಾಜರ ಬೆಳ್ಗೊಡೆಗಳಿಂದ, ಅಂದು-ಆ ದಿವಸ, ಆಪೊಳಲ್-ಆ ನಗರ, ಛತ್ರವತಿಯೆಂಬ ಅಭಿದಾನಮಂ-ಛತ್ರವತಿಯೆಂಬ ಹೆಸರನ್ನು, ಆಳ್ದುದು-ಧರಿಸಿತು.

ತೆರಳ್ =(ತ) ತಿರಳ್, (ತೆ) ತೆರಲು-ಉಂಡೆಯಾಗು, ಗುಂಪಾಗು.

**ವಚನ :** ಎಡೆವಡೆಯದ-ಸ್ಥಳವನ್ನು ಪಡೆಯದೆ ; ಭಾರ್ಗವ ಪರ್ಣಶಾಲೆ ಯೊಳ್-ಕುಂಬಾರನ ಗುಡಿಸಿಲಿನಲ್ಲಿ ; ಎಡೆಮಾಡಿಕೊಂಡು-ಜಾಗವನ್ನು ಮಾಡಿಕೊಂಡು; ಬ್ರಹ್ಮಸಭೆಯೊಳ್-ಬ್ರಾಹ್ಮಣರ ಸಭೆಯಲ್ಲಿ.

೪೦. ನೆರೆದ ಸಮಸ್ತರಾಜಕಮಂ-ಸೇರಿದ ಎಲ್ಲಾ ರಾಜರನ್ನೂ, ಆದರದಿಂದೆ-ಆದರದಿಂದ, (ದ್ರುಪದನು) ಇದಿರ್ಗೊಂಡು-ಎದುರುಗೊಂಡು, ಸಯಂಬರ ಸಾಲೆಯಂ-ಸ್ವಯಂವರದ ಶಾಲೆಯನ್ನು, ಅನೇಕ ರತ್ನ ರಚಿತಮಾಗೆ ಮಾಡಿಸಿ-ಅನೇಕ ರತ್ನಗಳಿಂದ ರಚಿತವಾಗಿರುವಂತೆ ಮಾಡಿಸಿ, ನರೇಶ್ವರರ್ಗೆ-ರಾಜರಿಗೆ, ಇರಲೆಂದು-ವಾಸಮಾಡು ವುದಕ್ಕಾಗಿ, ಓಳಿಯಿಂ-ಸಾಲಾಗಿ, ಚೌಪಳಿಗೆಗಳ್ ಪಲವಂ ನಮೆದು-ಹಲವು ತೊಟ್ಟಿ ಮನೆಗಳನ್ನು ಕಟ್ಟಿಸಿ, ಅಲ್ಲಿ, ರತ್ನದಿಂ ಜೆರಸಿದ-ರತ್ನದಿಂದ ಕೂಡಿದ, ಬಣ್ಣದೊಳ್

ಮೆಱಿಯೆ–ಬಣ್ಣದಲ್ಲಿ ಎಂದರೆ ಕೆಂಪುಬಣ್ಣದಲ್ಲಿ ಮೆರೆಯುವಂತೆ, ರಂಗಭೂಮಿಯುಂ–ರಂಗಸ್ಥಳವನ್ನು, ಕಟ್ಟಿಸಿ, [ಘ]ಟ್ಟಿಸಿ–ಘಟ್ಟನೆಮಾಡಿ, ದಮ್ಮಸುಮಾಡಿ.

**ವಚನ**: ಆಸೆಲೆಯ ಚೌಪಳಿಗೆಗಳೊಳ್ – ಆ ಸ್ಥಿರವಾದ ತೊಟ್ಟಿಗಳಲ್ಲಿ; ಪ್ರಾಸಾದದ – ಉಪ್ಪರಿಗೆಗಳ; ಪಟಿವಿಗೆಗಳಂ – ಪತಾಕೆಗಳನ್ನು; ತುಱುಗಲುಂ ಬಂಬಲುಮಾಗಿ–ಗುಂಪು ಗುಂಪಾಗಿ; ದುಗುಲದ ಗುಡಿಗಳಂ–ರೇಷ್ಮೆಯ ಧ್ವಜಗಳನ್ನು, ಸುಯ್ಯಾಣದ–ಕಸೂತಿ ಕೆಲಸದ, ಚಿನ್ನದ ಪಟ್ಟಗಳಂ – ಜರತಾರಿ ವಸ್ತ್ರಗಳನ್ನು; ಸಕಲವಟ್ಟಿಗಳಂ–ತುಂಡು ಬಟ್ಟೆಯ ಪಟ್ಟಿಗಳನ್ನು, ಮಂಡವಿಗೆಗಳಂ–ಮಂಟಪಗಳನ್ನು; ಎಡೆಯಱಿದು–ತಕ್ಕ ಸ್ಥಳಗಳನ್ನು ತಿಳಿದು; ಬುಂಭುಕಂಗಳುಮಂ–ಕುಚ್ಚುಗಳನ್ನು (?) ಎಱಲೆ ಕಟ್ಟಿಸಿ–ನೇಲುವಹಾಗೆ ಕಟ್ಟಿಸಿ: ಪೊಂಗಱೆಗೆ–? ನೀಳ್ಪಂ–ಉದ್ದವನ್ನು; ಬೆಳ್ಪು–ಬಿಳಿಯಬಣ್ಣ; ಉಪಾಶ್ರಯಂ ಬಡೆದು–ಆಧಾರವನ್ನು ಹೊಂದಿ. ಈ ಗದ್ಯದಲ್ಲಿ ವಿಚಾರಯೋಗ್ಯವಾದ ಕೆಲವು ಅಂಶಗಳಿವೆ (೧) ಸುಯ್ಯಾಣ<ಸೂಯಿಯಾಣ< ಸೂಚೀಯಾನ (ಸಂ). ಚತುಷ್ಷಷ್ಟಿಕಲೆಗಳಲ್ಲಿ 'ಸೂಚೀವಾ (ಯಾ) ನ ಕರ್ಮಾಣಿ' ಒಂದೆಂದು ವಾತ್ಸ್ಯಾಯನನ ಕಾಮಸೂತ್ರಗಳಲ್ಲಿ ಹೇಳಿದೆ (೧–೩–೧೬). ಸೂಚ್ಯಾ ಯತ್ಸಂಥಾನಕರಣಂ ತತ್ಸೂಚೀವಾನಂ–ಸೂಜಿಯಿಂದ ಮಾಡಲ್ಪಡುವ ಹೊಲಿಗೆ ಮುಂತಾದ ಕಾರ್ಯಗಳು. ಇದರಲ್ಲಿ ಮೂರು ವಿಧ (೧) ಸೀವನ-ಇದು ಕಂಚುಕಾದಿ (ರವಕೆ) ವಸ್ತ್ರಗಳಲ್ಲಿ ಮಾಡುವುದು (೨) ಊತನ–ತ್ರುಟಿತ ವಸ್ತ್ರಗಳಿಗೆ (ಹರಿದ ಬಟ್ಟೆಗಳಿಗೆ) ಮಾಡುವುದು (೩) ವಿರಚನ–ಜಮಖಾನೆ ಮುಂತಾದ ಹಾಸುವ ಬಟ್ಟೆಗಳಿಗೆ ಮಾಡುವುದು (ಕುಥಾಸ್ತರಣಾದೀನಾಂ). (೨) ಸಕಳಪಟ್ಟಿ–ಈ ಶಬ್ದ ಇನ್ನೂ ಕೆಲವುಕಡೆ ಬರುತ್ತದೆ. ದುಕೂಲದ ಸಕಲವಟ್ಟಿಯೊಳ್ (ಪಂಪಭಾ ೪–೪೧. ವ); ನಾರಂಗ ಸಕಳವಟ್ಟೆಯ ಪಟಿಯಿಗೆಗಳ್ (ಪಂಪಭಾ ೧೧–೧೪೧); ದೇವಾಂಗದ ಸಕಳ ವಟ್ಟಿಗಳುಮಂ ಮೆಟ್ಟುವೆಡೆಗಳೊಳೆಲ್ಲಂ ಪಾಸಿ (ಆದಿಪು. ೪–೩೪); ಜೊಂಗದ ನಾರಂಗದ ದೇವಾಂಗದ ಪಲತೆಱದ ಸಕಲವಟ್ಟೆಗಳಂ ಗೇಹಾಂಗಣದೊಳ್ ಮೆಟ್ಟುವ ತಾಣಂಗಳೊಳೋರಂತೆ ಪಾಸಿ (ಸುಕುಮಾ. ೧೮–೯೦). ಎಲ್ಲಿಯೂ ಇದರ ಅರ್ಥ ಸ್ಪಷ್ಟವಾಗುವುದಿಲ್ಲ; ಕಂಭಗಳಿಗೆ ಸುತ್ತಲೂ ಕಟ್ಟುವುದಕ್ಕೂ ನೆಲಕ್ಕೆ ಹಾಸುವುದಕ್ಕೂ ಬಾವುಟಗಳಿಗೂ ಸಕಲ ಬಟ್ಟೆಗಳನ್ನು ಉಪಯೋಗಿಸುತ್ತಿದ್ದರು ಎಂಬಷ್ಟುಮಾತ್ರ ಈ ಪ್ರಯೋಗಗಳಿಂದ ತಿಳಿದುಬರುತ್ತದೆ. ಬಗೆಬಗೆಯ ಬಣ್ಣಗಳ ಬಟ್ಟೆ ಇರಬಹುದು. ಶಕಲ>ಸಕಲ ಎನ್ನುವುದಕ್ಕೆ ಕಪ್ಪು ಬಣ್ಣ ಎಂಬರ್ಥವಿದೆ; ನಾರಂಗ ಸಕಳವಟ್ಟೆಯೆಂದರೆ ಕಿತ್ತಳೆಯ ಬಣ್ಣದ ಸಕಲವಟ್ಟೆ ಎಂದಾಗುತ್ತದೆ. ಇದರ ನಿಜವಾದ ಅರ್ಥ ಸಂಶೋಧನೆಗೆ ಯೋಗ್ಯವಸ್ತು. (೩) ಬುಂಭುಕ–ಕುಚ್ಚು, ಗೊಂಚಲು ಎಂದು ಅರ್ಥೈಸಿದೆ. ಆದರೆ ಇದಕ್ಕೆ ಆಧಾರ ಸೂಚಿತವಾಗಿಲ್ಲ, ಮಾಂಗಾಯ ಗೊಂಚಲ್ಗಳುಮಂ ಎಂಬ ಶಬ್ದಗಳ ಸಾಹಚರ್ಯವಿರುವುದರಿಂದ ಮುತ್ತಿನ ಬುಂಭುಕಂಗಳಂ ಎಂದಿರುವುದಕ್ಕೆ ಮುತ್ತಿನ ಕುಚ್ಚುಗಳನ್ನು ಎಂದು ಅರ್ಥಮಾಡಲು ಅವಕಾಶವಿದೆ. ಬುಂಬುಯ (=ಬುಂಭುಕ)

ಎಂಬೊಂದು ಶಬ್ದ ವೃಂದ, ಸಮೂಹ ಎಂಬರ್ಥದಲ್ಲಿ ಪ್ರಾಕೃತದಲ್ಲಿ ಪ್ರಯೋಗವಿದೆ. ಮುತ್ತಿನ ಬುಂಭುಕ-ಎಂದರೆ ಮುತ್ತಿನ ವೃಂದಗಳು, ಸಮೂಹ ಎಂದು ಅರ್ಥಮಾಡಬಹುದು. ಭುಂಭುಕ ಎಂಬೊಂದು ಶಬ್ದ ಹಲವುಸಲ ಕನ್ನಡ ಕಾವ್ಯಗಳಲ್ಲೂ ಶಾಸನಗಳಲ್ಲೂ ಪ್ರಯೋಗವಾಗಿರುವುದು ಕಾಣುತ್ತದೆ. ಪಿರಿದುಂ ಭುಂಭುಕಂ ಸಾಹಸಾಂಕಂ (ಗದಾ. ೧೦-೧೧) ; ತೊಲಗದ ಗಂಡನಾಂತಿಱಿಯೆ ಭುಂಭುಕಮದ್ಭುತಮಾದುದೆತ್ತಲುಂ (ಶಾಪವಮಂ ೪೬) ; ವಿಜಗೀಷುವೃತ್ತಿಯಂ ನಿಜವಿಜಯಮುಮೀಲೋಕದೊಳಗೆ ಭುಂಭಕಮೆನಿಕುಂ (ಶಾಪವಮಂ ೧೩೩) ; ಸಕಳೋರ್ವೀಸ್ತುತಮಪ್ಪ ಧರ್ಮಮನಿದಂ ಕಾದಂ ಚಿಲ್ವೈಶ್ವರ್ಯ ಭುಂಭುಕನಕ್ಕುಂ (ಶಾಪವಮಂ ೨೪) ; ಮಚ್ಚರಿಪ ವೈರಿಜನ ಭುಂಭುಕಂ (ಚಿತ್ರದುರ್ಗ ೮೨) ; ಆಶ್ಚರ್ಯಕರವಾದ ಅದ್ಭುತವಾದ ಯಾವುದೋ ಒಂದು ವಸ್ತುವಿರಬೇಕೆಂದು ಈ ಭುಂಭುಕಕ್ಕೆ ಅರ್ಥವನ್ನು ಊಹಿಸಬಹುದು. ಪ್ರಕೃತ ಬುಂಭುಕ ಶಬ್ದಕ್ಕೂ ಭುಂಭುಕಕ್ಕೂ ಏನು ಸಂಬಂಧವೋ ತಿಳಿಯದು. ಇದಕ್ಕೆ ಸಂಶೋಧನೆ ಬೇಕು.

೪೧. ತುಱುಗಿದ ಪೂಗೊಂಚಲ-ದಟ್ಟವಾದ ಹೂವಿನ ಗೊಂಚಲುಗಳ, ಕಾಯ್ತು-ಕಾಯಿಬಿಟ್ಟು, ಎಱಗಿದ-ಬಗ್ಗಿದ, ಮಾವುಗಳ-ಮಾವಿನಮರಗಳ, ಜೆಳೆದ ಕೌಂಗಿನ-ಜೆಳೆದ ಅಡಕೆಯ ಮರದ, ಗೊನೆ-ಕಾಯಿಗೊಂಚಲು, ಮಾಡದೊಳ್-ಉಪ್ಪರಿಗೆಯಲ್ಲಿ, ತಳ್ತಿಱಗಿರೆ-ಸೇರಿ ಬಾಗಿರಲು, ಅಲ್ಲಿಯೆ ತಿಱಿದುಕೊಳಲ್ಕೆ-ಅಲ್ಲಿಯೇ ಅವುಗಳನ್ನು ಕೊಯ್ದುಕೊಳ್ಳುವುದಕ್ಕೆ, ಇಂಬಿನ ಎಸಕಂ-ಅನುಕೂಲವಾಗಿರುವ ಕೆಲಸ, ಎಂಬಂತೆ ಉಪವನಂ-ಉದ್ಯಾನವು, ಎಸೆದುದು-ಪ್ರಕಾಶಿಸಿತು. ಈ ಪದ್ಯದ ಅನ್ವಯದಲ್ಲಿ, ಅರ್ಥದಲ್ಲಿ ಸ್ವಲ್ಪ ಕ್ಲೇಶವಿದೆ ; ಎಸೆಗಿದುದು ಪವನಂ ಎಂದೊ ಎಸಗಿದುದುಪವನಂ ಎಂದೋ ? ಇಂಬಿನ, ಎಸಕಂ-ಬೀಸುವಿಕೆಯನ್ನುಳ್ಳ, ಪವನಂ-ಗಾಳಿ, ಎಸೆದುದು ಎಂದೂ ಆಗಬಹುದು.

೪೨. ಪಾಂಚಾಳಮಹೀಪಾಳಂ-ಪಾಂಚಾಲ ದೇಶದ ರಾಜ ದ್ರುಪದನು, ಅಖಿಳ ಭೂಭೃನ್ನಿಕರಕ್ಕೆ-ಎಲ್ಲ ರಾಜರ ಸಮೂಹಕ್ಕೆ, ನಾಳೆ ಸಯಂಬರಂ ಎನೆ-ನಾಳೆ ಸ್ವಯಂವರವೆಂದು, ಓಳಿಯೆ-ಸಾಲಾಗಿ, ಕ್ರಮವಾಗಿ, ಸಾಱಿದೊಡೆ-ಸಾಱಿದರೆ, ಡಂಗೂರ ಹೊಡೆಯಿಸಿ ಹೇಳಿಸಿದರೆ, ಘೋಷಿಸಿದರೆ ; ಅವನೀಪಾಲರ್-ರಾಜರು, ಕಯ್ಗೆಯ್ಯಲೆಂದು-ಕೈಮಾಡಬೇಕೆಂದು, ತಮ್ಮ ಕೈಶಕ್ತಿಯನ್ನು ತೋರಿಸಬೇಕೆಂದು, ಪಱಿವಱಿಯಾದರ್-ಸಡಗರದಿಂದ ಕೂಡಿದರು (?) ಇಲ್ಲಿ ಪಱಿಮಱಿ-ಎಂಬುದರ ಅರ್ಥದಲ್ಲಿ ಕ್ಲೇಶವಿದೆ ; ಇದಕ್ಕೆ 'ಪೆಗಲಂ ಪತ್ತುವಾಟಂ' (ಕಶಸಾ ೫೬೫, ಕವಿಕಂ. ೨೨೭) 'ಮಿಸುಗುವ ಹಾಱುಗುಪ್ಪೆಯುಂ ಪಱಿಮಱಿಯೆನಲ್ಕಕ್ಕುಂ' (ಕ.ಕೈ. ೭೧) ; ಪಱಿಮಱಿಯೆನಲು ಹಾರುಗುಪ್ಪೆ (ಶಬ್ದಮಂ. ೫೭) ಎಂಬರ್ಥಗಳಿರುವಂತೆ ತಿಳಿದು ಬರುತ್ತದೆ ; ಇದು ಒಂದು ಆಟ. ಈ ಅರ್ಥ ಪ್ರಕೃತಕ್ಕೆ ಸುಲಭವಾಗಿ ಹೊಂದಿಕೊಳ್ಳದು. 'ಧುರದೊಳ್ ಪಱಿಮಱಿಯಾಡುವ ತೆಱದಿಂದು ಱಿದಿಱಿದರೆಂಬ ನಿಯಮಂ

ದೂಷ್ಯಂ' ಎಂಬ ಪ್ರಯೋಗವಿಲ್ಲೂ (ಶಮುದ. ೪೯-೪) ಪಱಿಮುಱಿಯಾಡು ಎಂಬು ದಕ್ಕೆ ಪಱಿಮುಱಿಯುಂ+ಆಡು ಎಂದು ಆಟವೆಂದೇ ಅರ್ಥವಾಗುತ್ತದೆ. ಈ ಆಟಕ್ಕಾಗಿ ಮಕ್ಕಳು ಪಡುವ ಸಡಗರ ಎಂದು ಇಲ್ಲಿ ಲಕ್ಷ್ಯಾರ್ಥವನ್ನು ಸೂಚಿಸಿದೆಯೆಂದು ಭಾವಿಸಬೇಕು.

೪೩. ಪದ್ಯದ ಅರ್ಥ ಸ್ಪಷ್ಟ. ತಂತಮ್ಮ-ತಮ್ಮ ತಮ್ಮ; ವಿಭೂತಿ-ಐಶ್ವರ್ಯ; ಓಳಿಯಿಂ-ಸಾಲಾಗಿ,

೪೪. ಈ ಪದ್ಯದ ಅರ್ಥ ಭಾವಗಳು ಅಸ್ಪಷ್ಟವಾಗಿವೆ, ಕೆಲವು ಪಾಠದೋಷ ಗಳಿಂದ. ಸಾಸಿರಪೊಂಗೆ-ಸಾವಿರ ಹೊನ್ನುಗಳಿಗೆ, ಎ[ಯ್ದ]ದು-ಬರುವುದಿಲ್ಲ. ಚೀ-ಛೀ, ಕಾಸಟವೆಂದು-ಹತ್ತಿಯ ಬಟ್ಟೆಯೆಂದು, ಇದರ್ಕಂ-ಇದಕ್ಕೂ, ಲಕ್ಕಗೆಯ್ವುದು-ಲಕ್ಷ ಹೊನ್ನೆಂದು ಮಾಡುವುದು. ಬೆಲೆಯಾಗಿ, ಸಾವಿರ ಹೊನ್ನು ಕೊಟ್ಟರೂ ಈ ಹತ್ತಿಯ ಬಟ್ಟೆ ಬರುವುದಿಲ್ಲ ಎಂದರೆ, ಆದಕ್ಕೆ ಲಕ್ಷ ಹೊನ್ನಾಗಲಿ, ಕೊಡುತ್ತೇನೆ ಎಂಬ ಭಾವವಿರಬಹುದು. ಮಾಸರಂ-ಸುಂದರವಾಗಿ, ಉಡಲೆಂದು-ಉಟ್ಟುಕೊಳ್ಳಲಿ ಎಂದು, ಅಧಿಕ ವಿಳಾಸದಿಂ-ಬಹುವಿಲಾಸದಿಂದ, ಉಡಲಿಕ್ಕಿ-ಉಡಲು ಕೊಟ್ಟು, ನೆಱೆಯೆ-ಪೂರ್ಣವಾಗಿ, ಬಿಯಮಂ-ವ್ಯಯವನ್ನು, ವೆಚ್ಚವನ್ನು, ಮೆಱೆದಂ-ಮೆರೆದನು, ಪ್ರಕಟಿಸಿದನು.

ಇಲ್ಲಿ ಚಿಂತನೀಯವಾದ ಎರಡು ಶಬ್ದಗಳಿವೆ: (೧) ಕಾಸಟ; ಇದರ ಅರ್ಥವನ್ನು ಸ್ಪಷ್ಟಪಡಿಸುವ ಪ್ರಯೋಗವೊಂದು ನೇಮಿಚಂದ್ರನ 'ಲೀಲಾವತಿ'ಯಲ್ಲಿದೆ; ದೇವರ್ಗಂ ದೊರಕೊಳ್ಳದೊಳೀ ವಧು ಕೂರ್ತೆಯುಮದೇಕೆ ಪಂಬಲಿಸುವನಾ| ಗೋವಂ ಪೇೞ್ ಪೆಱರಂ ಪ| ಟ್ಟಾವಳಿಯುಟ್ಟುಡೆಯೊಳುಡುವುದೇ ಕಾಸಟಮಂ (೧೪-೪೬); ದೇವತೆ ಗಳಿಗೂ ದೊರೆಯದ ಈ ಹೆಣ್ಣು ತನ್ನನ್ನು ಪ್ರೀತಿಸಿದರೂ ಕೂಡ ಆ ಗೋವನು (ದಡ್ಡನು) ಇತರ ಹೆಣ್ಣುಗಳಿಗೇಕೆ ಹಂಬಲಿಸುತ್ತಾನೆ; ರೇಷ್ಮೆ ವಸ್ತ್ರವನ್ನುಟ್ಟ ಸೊಂಟದಲ್ಲಿ ಕಾಸಟವನ್ನು ಎಂದರೆ ಹತ್ತಿಯ ಬಟ್ಟೆಯನ್ನು ಉಡುವುದೇ? ಕೆಲವು ಶಾಸನಗಳಲ್ಲಿ ಈ ಶಬ್ದ ಕಾಣುತ್ತದೆ: (೧) ವರದೆಯಿಂ ತೆಂಕ ಪ್ರೋಪಭಂಡಕ್ಕೆ ಕಾಸಟದ ಮಳವೆ ಇಪ್ಪತ್ತರ್ಕ್ಕೊಂದು (E. I. XIX, Six Inscriptions from Kolur and Devageri, B. line 16); ಖಾಸಟ ಎಂಬ ರೂಪವೂ ಉಂಟು; ಆ ಎರಡುಂ ಪ್ರೋಳಿಗೆ ಬರ್ಪ್ಪಡ್ಡವಟ್ಟೆಯ ಖಾಸಟದ ಮಳವೆ ಇಪ್ಪತ್ತರ್ಕ್ಕೊಂದು ಇಪ್ಪತ್ತು ಕಾಸಟದ ಮಳವೆಗೆ ಎಂದರೆ ಹೇರಿಗೆ ಒಂದು ಹೇರನ್ನು ಸುಂಕವಾಗಿ ಕೊಡಬೇಕಾಗಿತ್ತು. ಇಲ್ಲಿ ಕಾಸಟ ಎಂದರೆ ಹತ್ತಿಯ ಬಟ್ಟೆ ಎಂದು ತೋರುತ್ತದೆ. ಕಾಸಟ < ಕಪಾಸ್ + ಪಟ < ಕಾರ್ಪಾಸ ಪಟ(ಸಂ); ಕಾಪಾಸ್ < ಕಾರ್ಪಾಸ ಎಂದರೆ ಹತ್ತಿ, ಪಟ-ಬಟ್ಟೆ. (೨) ಮಾಸರ: ಇದಕ್ಕೆ ಪ್ರಯೋಗಬಾಹುಳ್ಯವಿದೆ; ಮಾಸರಮಾರದನೆಯ್ದೆ ಬಣ್ಣಿಪರ್ (ಶಾಂತಿಪು. ೯-೩೯); ಬಱಿಕ್ಕ ಸೀರೆಯೊಳ್ ಮಾಸರಮಾಗೆ ಸೇವಗೆಯನೊತ್ತಿ (ಲೋಕೋಪ. ೮-೧೨); ಕಡುಮಾಸರಮಾದ ಗುಣಂಗಳೋಳಿಗೊಂಡು (ಪದ್ಯಸಾ II, ೧೯);

ದೇವರೊಳಾದತಿ ಭಕ್ತಿಹರ್ಷಮಂ ಮಾಸರಮುಂಟುಮಾಡೆ (ಪಂಪರಾ. ೧೦-೧೭೪) ; ಮಾಸರಮಾಯ್ತುಮಳೊಳೊಗೆದ ಕೊಡಗೂಸುತನಂ ( ಚಂದ್ರಪು. ೧-೭೯ ) ; ಸೂಸುವಸವಪಟವಾಸದ ಚೂರ್ಣಂ। ಮಾಸರಮಾದುದು ದಿಕ್ಪರಿಪೂರ್ಣಂ (ಚಂದ್ರಪು. ೪-೬೩೮) ; ಮೌಕ್ತಿಕ ಹಾರಮಾವಗಂ ಮಾಸರಮಾಗೆ (ಶಾಂತೀಪು. ೧೫-೪೫) ; ವನಜವಿಳಾಸಮಂ ವಿವಿಧಾಸನಂಗಳವಿವರಣಮಂ ಮೆಚ್ಚಿಸದ ಮಾಸರಮಂ (ಕುಸುಮಾ. ೭-೬೩ ಗ) ; ಮಾಸರಮಸುಗೆಯ ತಳಿರಂ ಸೂಸಿದಳೊರ್ವಳ್ (ಲೀಲಾವ ೧೩-೫೧) , ಮಿಸುಗುವ ದೋರೆವಲ್ ಕರಮೆ ಮಾಸರಮಾದುದು ದೇಸೆಕಾರ್ತಿಯೊಳ್ (ಚಂದ್ರಪು. ೮-೫೧) ; ಮಾಸರಮಾಗಿರ್ದುವೊಗೆದ ಮೃಗತೃಷ್ಣಿಕೆಗಳ್ (ಚಂದ್ರಪು. ೯-೭೧) ; ಇವಲ್ಲದೆ ಈ ಶಬ್ದದಿಂದ ನಿಷ್ಪನ್ನವಾಗಿರುವ ಮಾಸರಿಕೆ, ಮಾಸರಿಕ್ಕೆ, ಮಾಸರಿಗೆ ಎಂಬುವೂ ದೊರೆಯುತ್ತವೆ. ಪ್ರಯೋಗ ಸಂದರ್ಭಗಳನ್ನು ನೋಡಿದರೆ, ಸುಂದರ, ಸೊಗಸು, ಅತಿಶಯ–ಈ ಅರ್ಥಗಳು ಆಗುವಂತೆ ಊಹಿಸಬಹುದು. ಇದು ಮಹಾಸ್ವರದ ತದ್ಭವವೆಂದು ಗ್ರಹಿಕೆಯಾಗಿದೆ (ಪಂಪರಾ. ಕೋ.) ; ಆದರೆ ಇದು ಹೊಂದುವುದಿಲ್ಲ ; ಮಹಾಶ್ರಯದ ತದ್ಭವವೆಂದು ಕಿಟ್ಟೆಲ್ ಹೇಳುತ್ತಾರೆ ; ಇದೂ ಹೊಂದುವುದಿಲ್ಲ. ತೆಲುಗಿನಲ್ಲೂ ಮಾಸರಮ್ಮೈ–ಮಿಶ್ರವಾಗಿ ಎಂಬ ಶಬ್ದವುಂಟು. ಈ ಶಬ್ದಕ್ಕೆ ಅರ್ಥವನ್ನು ನಿರ್ಣಯಿಸಬೇಕಾದರೆ ಇನ್ನೂ ಹೆಚ್ಚು ಪರಿಶೋಧನೆ ಬೇಕು. ಸದ್ಯಕ್ಕೆ ಇದನ್ನು ಸಂಸ್ಕೃತದ ಮಾಧುರದಿಂದ ಬಂದಿದೆಯೆಂದು ಭಾವಿಸಬಹುದು ; ಮಾಧುರ > ಮಾದರ > ಮಾಸರ ; ತಮಿಳಿನಲ್ಲಿ ಮಾದರ್‌ವೊೞಿ ಎಂದರೆ ಇಂಪಾದ ಮಾತು, ಸವಿಯಾದ ಮಾತು ಎಂಬರ್ಥವಿದೆ.

**ವಚನ :** ಸೆಱೆಯೆ ಕೆಯ್ಗೆಯ್ಸಿಮೆಂದು–ಪೂರ್ಣವಾಗಿ ಅಲಂಕಾರ ಮಾಡಿಸಿರಿ ಎಂದು ; ತಱಿದ ಗುಜುಗೆಯರಪ್ಪ–(?), ಅಂತಃಪುರಪುರಂಧ್ರಿಯರಂ–ರಾಣೀವಾಸದ ಸ್ತ್ರೀಯರನ್ನು ;

**೪೫.** ಈ ಪೊೞ್ತಿಂಗೆ – ಈ ಹೊತ್ತಿಗೆ, ಈ ರುತುವಿಂಗೆ ಈ ಋತುವಿಗೆ, ಈ ಪಸದನಂ–ಈ ಅಲಂಕಾರವು ; ಇಂತುಟಪ್ಪ ಮೆಯ್ವಣ್ಣಕ್ಕೆ–ಹೀಗಿರುವ ಮೈಯ ಬಣ್ಣಕ್ಕೆ, ಇಂತೀ ಪೂವಿನೊಳ್–ಹೀಗೆ ಈ ಹೂವಿನಲ್ಲಿ, ಈ ತುಡುಗೆಯೊಳ್–ಈ ಒಡವೆಯಲ್ಲಿ, ಈ ಪುಟ್ಟಿಗೆಯೊಳ್ – ಈ ಸೀರೆಯಲ್ಲಿ, ಬೆಡಂಗುವಡೆದು–ಚೆಲುವನ್ನು ಪಡೆದು, ಎಸೆದಿರ್ಕುಂ–ಪ್ರಕಾಶಿಸುತ್ತಿದೆ. ಯಾವ ಹೊತ್ತಿಗೆ, ಯಾವ ಋತುವಿಗೆ, ಯಾವ ಮೈ ಬಣ್ಣಕ್ಕೆ ಯಾವ ಯಾವ ಹೂವುಗಳು, ಒಡವೆಗಳು ಸೀರೆಗಳು ಒಪ್ಪುತ್ತವೋ ಅವುಗಳಿಂದ ಸಿಂಗಾರ ಮಾಡಿದರು ಎಂದು ತಾತ್ಪರ್ಯ.

**ವಚನ :** ನೆಱೆಯೆ ಪಸದನಂಗೊಳಿಸಿ–ತುಂಬ ಅಲಂಕಾರಮಾಡಿ.

**೪೬.** ಒಡವೆಗಳನ್ನು ತೊಡಿಸುವಾಗ ಅಂತಃಪುರ ಸ್ತ್ರೀಯರು ಆಡಿಕೊಳ್ಳುವ ಮಾತು : ಹಾರಮಂ–ಹಾರವನ್ನು, ತುಡಿಸದೆ–ಹಾಕದೆ, ಮೊಲೆಯ ಬಿಣ್ಪಿನೊಳಂ–ಮೊಲೆಯ ಭಾರದಲ್ಲೇ, ನಡು ಬಳ್ಕಿದಪ್ಪುದು–ಸೊಂಟವು ಬಳುಕಾಡುತ್ತದೆ, ಎಂದರೆ

ಹಾರ ತೊಡಿಸಿದರೆ ಅದರ ಭಾರ ಮೊಲೆಯ ಭಾರದೊಡನೆ ಸೇರಿ ನಡುವು ಇನ್ನೂ ಹೆಚ್ಚಾಗಿ ಬಳುಕುತ್ತದೆ, ತೊಡೆ–ತೊಡೆಗಳು, ನಿತಂಬದ ಬಿಣ್ಪೆಸೊಳ್–ಪಿರ್ರೆಗಳ ಭಾರದಲ್ಲಿ, ಈ ನಡುಗುವುವಲ್ಲವೇ–ಇಗೋ, ನಡುಗುತ್ತಿವೆಯಲ್ಲವೆ? ಏವುದು ಅಕ್ಕ–ಏನು ಅಕ್ಕ, ಕಟಿಸೂತ್ರಮುಂ–ಸೊಂಟದ ಹಾರವನ್ನು ಎಂದರೆ ಒಡ್ಯಾಣವನ್ನು, ಪೋ ಬಿಡು–ಸುಮ್ಮನೆ ಬಿಟ್ಟುಬಿಡು, ಏನನ್ನೂ ತೊಡಿಸಬೇಡ; ತೊಡೆಯ ಬಿಣ್ಪು–ತೊಡೆಗಳ ಭಾರ, ಪಸಾಂಬುರುಹಕ್ಕೆ–ಕಮಲದಂತಿರುವ ಪಾದಗಳಿಗೆ, ತಿಣ್ಣಂ–ಭಾರವಾಗುತ್ತದೆ, ನೂಪುರಮುಂ–ಕಾಲಿನುರುಳಿಯನ್ನು, ಏಂ ತುಡಿಸುವುದಕ್ಕ–ಅಕ್ಕನೇ ಏನು ತೊಡಿಸುವುದು, ಎಂದರೆ ಏನೂ ಬೇಡ; ಈ ತೊಡವೇವುದೊ–ಇದು ಯಾವ ಒಡವೆಯೋ, ರೂಪೆ ಸಾಲದೇ–ಸೌಂದರ್ಯವೇ, ಆಕಾರವೇ ಸಾಕಾಗದೇ? ಸಾಕು ಎಂಬ ಭಾವ.

**ವಚನ:** ಓರೊರ್ವರ್–ಒಬ್ಬರೊಬ್ಬರು; ವಕ್ರೋಕ್ತಿಯೊಳ್–ವ್ಯಂಗ್ಯವಾದ ಮಾತುಗಳಲ್ಲಿಯೇ, ಸೊಗಸಾದ ಮಾತುಗಳಲ್ಲಿಯೇ; ಮಂಗಳವಸದನಮಿಕ್ಕಿಯುಂ–ಮಂಗಳಾಲಂಕಾರವನ್ನು ಮಾಡಿಯೂ; ಪೊಸಮದವಳಿಗೆಯಪ್ಪುದಱಿಂ–ಹೊಸ ಮದವಣಗಿತ್ತಿ ಆಗಿರುವುದರಿಂದ; ತುಡಿಸಲೆವೇಳ್ಕುಮೆಂದು–ತೊಡಿಸಲೇ ಬೇಕೆಂಬುದಾಗಿ,

೪೭. ದ್ರೌಪದಿಯಾ ಪಸದನಂ–ದ್ರೌಪದಿಯ ಅಲಂಕಾರವು, ಮದನನ ಬಾಳ್ಮಸೆದುದು–ಮನ್ಮಥನ ಕತ್ತಿ ಮಸೆದಂತಾಯಿತು; ಕಾಮನಂಬು–ಮನ್ಮಥನ ಬಾಣ, ಕೂರ್ಮಸೆಯಿಟ್ಟುದು–ಹರಿತವಾಗಿ ಸಾಣೆಯಾಯಿತು; ಆ ಕುಸುಮಾಸ್ತ್ರನ–ಆ ಹೂಬಾಣನ ಎಂದರೆ ಮನ್ಮಥನ, ಚಕ್ರಮಿದು–ಈ ಚಕ್ರಾಯುಧ, ಬಾಯ್ಗೂಡಿದುದು–ಹರಿತವಾದ ಅಲಗಿನಿಂದ (ಬಾಯಿಯಿಂದ) ಕೂಡಿದುದಾಯಿತು, ಎಂಬ ಎಸಕಮುಂ–ಎಂಬ ಸೊಗಸನ್ನು, ಅಳ್ಪತ್ತು–ಪಡೆಯಿತು. "ಎಸ–ಶೋಭಾಯಾಂ" ಎಂಬುದರ ಭಾವನಾಮ ಎಸಕ.

**ವಚನ:** ಬಿಡುಮುತ್ತಿನ ಸೇಸೆಯನಿಕ್ಕಿ–ಬಿಡಿಯಾದ ಮುತ್ತುಗಳ ಮಂತ್ರಾಕ್ಷತೆಯನ್ನು ಹಾಕಿ; ಪೊಡೆಮಡಿಸಿ–ಎರಗಿಸಿ, ನಮಸ್ಕರಿಸುವಂತೆ ಮಾಡಿ.

೪೮. ನಿಟ್ಟಿಸೆ–ನೋಡಲು, ಹೋಮಾನಲನೊಳ್–ಹೋಮದ ಅಗ್ನಿಯಲ್ಲಿ, ಪುಟ್ಟಿದ ನಿನಗೆ–ಹುಟ್ಟಿದ ನಿನಗೆ, ಅಕ್ಕ–ಅಕ್ಕನೇ, ಪರಕೆಯಾವುದೋ–ಆಶೀರ್ವಾದ ಯಾವುದೋ? ಅಗ್ನಿಸಂಭವೆಯಾಗಿ ಪರಮಪವಿತ್ರಳಾಗಿರುವ ನಿನಗೆ ನಾವು ಮಾಡುವ ಆಶೀರ್ವಾದ ಯಾವುದಿದೆ? ನಿನ್ನಂ ಪುಟ್ಟಿಸಿದ ಬಿದಿ–ನಿನ್ನನ್ನು ಸೃಷ್ಟಿಸಿದ ದೈವ, ನೆಗಟ್ಟಿಯ ಜೆಟ್ಟಿಗನೊಳ್–ಪ್ರಸಿದ್ಧ ವೀರನಾದ, ಅರಿಕೇಸರಿಯೊಳ್–ಅರ್ಜುನನಲ್ಲಿ, ಈಗಳ್–ಈಗ, ನೆರಪುಗೆ–ಸೇರಿಸಲಿ, ಕೂಡಿಸಲಿ.

**ವಚನ:** ಕನತ್ಕನಕ ಖಚಿತಮುಂ – ಹೊಳೆಯುವ ಚಿನ್ನದಿಂದ ಖಚಿತವಾದುದೂ; ಮೌಕ್ತಿಕಸ್ತಂಭಮುಂ–ಮುತ್ತಿನ ಕಂಭಗಳನ್ನುಳ್ಳದ್ದೂ; ಸರ್ವತೋಭದ್ರ–ನಾಲ್ಕು ಪಾರ್ಶ್ವಗಳಲ್ಲಿಯೂ ಬಾಗಿಲನ್ನುಳ್ಳ ಸರ್ವತೋಭದ್ರಾಕಾರದ; ಸಿವಿಗೆಯನೇಱಿಸಿ–ಪಲ್ಲಕ್ಕಿಯನ್ನು ಹತ್ತಿಸಿ; ಕುಂಚದ–ಕುಂಚವನ್ನುಳ್ಳ (Brush); ಅಡಪದ–

ಅಡಕೆಲೆಯ ಚೀಲದ, ಡವಕೆಯ-ಪೀಕದಾನಿಯ, ಪಾರವಿಳಾಸಿನಿಯರ್-ಪರಿವಾರ ಸ್ತ್ರೀಯರು; ತಲೆವರಿಪ-ಮುಂಬೆ ಹೋಗುತ್ತಿರುವ, ಓಜೆಯ ಪಿಡಿಯಂ-ರೀತಿಯುಳ್ಳ ಹೆಣ್ಣಾನೆಯನ್ನು, ಪೆಂಡವಾಸದೊಳ್ಪೆಂಡಿರ್-ಅಂತಃಪುರದ ಸುಂದರ ಸ್ತ್ರೀಯರು; ತಳ್ತುಪಿಡಿದ-ಎತ್ತಿ ಹಿಡಿದ; ಕನಕಪದ್ಮದ-ಹೊಂದಾವರೆಯ; ಸೀಗುರಿಗಳ-ಒಂದು ವಿಧವಾದ ಛತ್ರಿಗಳ; ನೆಬಿಲ್-ನೆರಳು; ಎಡೆವಱಿಯದೆ-ನಡುವೆ ಭಿನ್ನವಾಗದೆ, ಎಡೆಬಿಡದೆ; ಮಂಡನಾ ಯೋಗಂಗಳೊಳ್-ಅಲಂಕಾರ ವಸ್ತುಗಳ ಜೋಡಣೆಯಲ್ಲಿ, ನೆಱೆಯೆ ಪಣ್ಣಿದ-ಚೆನ್ನಾಗಿ ಮಾಡಿದ ಎಂದರೆ ಅಲಂಕೃತವಾದ, ಮದಾಂಧಗಂಧ ಸಿಂಧುರಂಗಳಂ-ಸೊಕ್ಕಾನೆಗಳನ್ನು; ಧವಳಚ್ಛತ್ರ-ಬೆಳ್ಗೊಡೆ, ಚಂದ್ರಾದಿತ್ಯ-ಚಂದ್ರ ಸೂರ್ಯರ ಲಾಂಛನಗಳು; ಪಾಳಿಕೇತನ-ಬಾವುಟಗಳ ಶ್ರೇಣಿಗಳು, ಪೆಱಪೆಱಗನೆ-ಹಿಂದು ಹಿಂದೆಯೇ;

ಸೀಗುರಿ—ನವಿಲುಗರಿಯ ಕಣ್ಣುಗಳಿಂದ ಮಾಡಿದ ರತ್ನಖಚಿತ ಕಲಶ ದಂಡ ಗಳನ್ನುಳ್ಳ ಛತ್ರಿ, "ಪಿಂಛಚ್ಛತ್ರಮಿದಂ ಪ್ರಾಹ[ಸ್ಸೂಗು]ರೀತಿ ವಿಚಕ್ಷಣಾಃ" (ಅಭಿಲಷಿತಾರ್ಥ ಚಿಂತಾಮಣಿ ೧೮೪೭); ಪಾಳಿಕೇತನ-ಇದು ಅನೇಕ ಧ್ವಜಗಳಿಂದ ಮಾಡಿದ ಒಂದು ವ್ಯೂಹರಚನೆ; ಸ್ರಗ್ವಸ್ತ್ರ ಸಹಸಾನಾಬ್ಜ ಹಂಸಮೀನ ಮೃಗೇಶಿನಾಂ। ವೃಷಭೇಭೇಂದ್ರ ಚಕ್ರಾಣಾಂ ಧ್ವಜಾಸ್ಯುಃದಶಭೇದತಃ॥ ಹಾರ, ವಸ್ತ್ರ, ನವಿಲು, ಕಮಲ, ಹಂಸ, ಮೀನು, ಸಿಂಹ, ವೃಷಭ, ಆನೆ, ಚಕ್ರ-ಈ ೧೦ ಲಾಂಛನಗಳನ್ನುಳ್ಳ ಬಾವುಟಗಳ ೧೦ ಸಾಲುಗಳು ನಾಲ್ಕೂ ಕಡೆಗೆ ಚತುರಸ್ರವಾಗಿ ಇರುತ್ತವೆ; ಪ್ರತಿ ಸಾಲಿನಲ್ಲಿಯೂ ಒಂದೊಂದು ಬಗೆಯ ೧೦೮ ಬಾವುಟಗಳಿರುತ್ತವೆ; ಒಂದು ಕಡೆಗೆ ೧೦೮೦ ಬಾವುಟಗಳಿದ್ದ ಹಾಗಾಯಿತು; ಹೀಗೆ ನಾಲ್ಕೂ ಕಡೆಯೂ ೪೩೨೦ ಬಾವುಟ ಗಳು ಒಟ್ಟು ಇರಬೇಕು. ಈ ತೆರನಾದ ಬಾವುಟಗಳ ರಚನೆಗೆ, ಪಾಲಿಧ್ವಜ, ಪಾಲಿಕೇತನ ಎಂದು ಹೆಸರು (I. A. XIV, P 104).

೪೯. ಪರೆದು-ಚೆದರಿ, ಉಗುವ-ಸುರಿಯುವ, ಪಂಚರತ್ನದ-ಐದುಬಗೆಯಾದ ರತ್ನಗಳ, ಪರಲ್ಗಳ್-ಹರಳುಗಳು, ಉದಿರ್ದು-ಉದುರ್ದು, ಎಸೆಯೆ-ಸೊಗಸಾಗಿರಲು, ಸೌಧದೊಳ್-ಅರಮನೆಯಲ್ಲೇ, ಕೆದಱಿದ-ಚೆಲ್ಲಿದ, ಕಪ್ಪುರವಳ್ಕುಗಳೆಸೆಯೆ-ಕರ್ಪೂರದ ಹಳುಕುಗಳು ಪ್ರಕಾಶಿಸುತ್ತಿರಲು, ಎಸೆವ ಲೀಲೆಯಿಂ-ಶೋಭಿಸುವ ವಿಲಾಸದಿಂದ, ಸಯಂಬರ ಸಾಲೆಯಂ-ಸ್ವಯಂವರ ಗೃಹವನ್ನು, ಪುಗುತಂದಳ್-ಪ್ರವೇಶಿಸಿದಳು.

೫೦. ನುಡಿವುದನೆ-ಹೇಳಬೇಕಾದ್ದನ್ನೇ, ಮಱೆದು-ಮರೆತು, ಕೆಲರ್-ಕೆಲವರು, ಪೆಱತಂ-ಬೇರೆ ಏನನ್ನೋ, ನುಡಿಯೆ-ಹೇಳಲು; ನೋಡದಂತೆ ನೋಡೆ ಕೆಲರ್-ಕೆಲವರು ನೋಡದಹಾಗೆ ನೋಡುತ್ತಿರಲು, ಕೆಲರ್-ಕೆಲವರು, ಪಾವಡರ್ದ ವೊಲಿರೆ-ಹಾವು ಮೇಲೇರಿಕೊಂಡಂತೆ ಇರಲು, ಕೆಲರ್-ಕೆಲವರು, ಉದಗ್ರಾವಸಿಪರ್-

ಶ್ರೇಷ್ಠರಾದ ದೊರೆಗಳು, ಒಯ್ಯನೆ–ಮೆಲ್ಲಗೆ, ತುಡುಗೆಯಂ–ಒಡವೆಗಳನ್ನು, ಓಸರಿಸೆ–ಪಕ್ಕಕ್ಕೆ ಸರಿಸಲು,

೫೧. ಒಡನೆ ನೆರೆದರಸುಮಕ್ಕಳ–ಒಟ್ಟಿಗೆ ಸೇರಿದ ರಾಜಕುಮಾರರ, ನಿಡುಗಣ್ಗಳ–ನೀಳವಾದ ಕಣ್ಣುಗಳ, ಬಳಗಂ–ಸಮೂಹವು, ಎಱಗೆ–ತನ್ನ (ದ್ರೌಪದಿಯ) ಮೇಲೆ ಬೀಳಲು, ತನ್ನಯ ಮೆಯ್ಯೊಳ್–ತನ್ನ ಮೈಯಲ್ಲಿ, ನಡೆ–ನಾಟಿಕೊಳ್ಳಲು, ಪಲರುಂ ಅಂಬಂ ತುಡೆ–ಹಲವರು ಬಾಣಗಳನ್ನು ಹೂಡಲು, ನಡುವೆ, ಇರ್ದ–ಇದ್ದ, ಒಂದು ಪುಲ್ಲೆಯಿರ್ಪಂತೆ–ಒಂದು ಜಿಂಕೆ ಇದ್ದ ಹಾಗೆ, ಇರ್ದಳ್–ದ್ರೌಪದಿ ಇದ್ದಳು.

೫೨. ಕಿಱಿದು ಬೇಗದಿಂ–ಸ್ವಲ್ಪ ಹೊತ್ತಿನಲ್ಲೇ, ಹರಿಗಂ–ಅರ್ಜುನ, ಅಸಿಬರುಮಂ–ಅಷ್ಟು ಜನ ರಾಜರನ್ನೂ, ಮೊನೆಯಂಬುಗಳೊಳ್–ಮೊನೆಯುಳ್ಳ ಬಾಣಗಳಲ್ಲಿಯೇ, ಪೂಣ್ದಪಂ–ಹೂತುಬಿಡುತ್ತಾನೆ, ಅದರ್ಕೆ–ಅದಕ್ಕಾಗಿ, ಎನಗೆ–ನನಗೆ, ಎಡೆವೇಟ್ಕುಮೆ–ಅವಕಾಶವು ಬೇಕಾಗಿದೆಯೇ, ಎಂಬವೋಲ್–ಎನ್ನುವಂತೆ, ಅತನು–ಮನ್ಮಥನು, ಅಸಿಬರುಮಂ–ಅಷ್ಟುಮಂದಿ ರಾಜರನ್ನೂ, ನನೆಯಂಬುಗಳಿಂ–ಹೂವಿನ ಬಾಣಗಳಿಂದ, ಪೂಣ್ದಂ–ಹೂತುಬಿಟ್ಟನು.

**ವಚನ**: ಪೆಱರಱಿಯದಂತು–ಇತರರು ತಿಳಿಯದಹಾಗೆ,

೫೩. ಇಳೆಯೊಳ್–ನೆಲದ ಮೇಲೆ, ಉದಗ್ರ....ರಾಜಿ: ಉದಗ್ರ–ಶ್ರೇಷ್ಠರಾದ, ವೀರಭಟ–ವೀರಯೋಧರ, ತುಂಗಮತಂಗಜ–ಎತ್ತರವಾದ ಆನೆಗಳ, ವಾಜಿ–ಕುದುರೆಗಳ, ರಾಜಿ–ಸಮೂಹ; ಚೌಪಳಿಗೆಗಳೊಳ್–ತೊಟ್ಟಿಯ ಉಪ್ಪರಿಗೆಗಳಲ್ಲಿ, ಧರಾಧರ ಧುರಂಧರ–ರಾಜರಲ್ಲಿ ಅಗ್ರೇಸರರಾದ, ಬಂಧುರ–ಸುಂದರರಾದ, ರಾಜಕಂ–ರಾಜರ ಸಮೂಹ; ವಿಯತ್ತಳದೊಳ್–ಆಕಾಶ ಪ್ರದೇಶದಲ್ಲಿ, ಅನೇಕ–ಹಲವು, ಕಿಂಪುರುಷ, ಕಿನ್ನರ, ಖೇಚರ, ಸಿದ್ಧ–ಇವರ, ಬೃಂದಂ–ಸಮೂಹವು; ಇವು, ಅವ್ವಳಿಸಿರೆ–ಮೇಲೆ ನುಗ್ಗುವಂತೆ ಗುಂಪಾಗಿರಲು, ಮೂನೆಲೆಯಿಂ–ಮೂರು ಅಂತಸ್ತುಗಳಿಂದ, ಸ್ವಯಂಬರಂ–ಸ್ವಯಂವರ ಸ್ಥಾನವು, ಮೂಱು ಲೋಕಮನೆ–ಮೂರು ಲೋಕಗಳನ್ನೇ, ಪೋಲ್ತುದು–ಹೋಲಿತು.

**ವಚನ**: ವಿದಿತ ವೃತ್ತಾಂತೆಯಾಗಿ–ಅಲ್ಲಿ ನೆರೆದ ರಾಜರ ವಿಷಯವನ್ನು ಚೆನ್ನಾಗಿ ತಿಳಿದವಳಾಗಿ.

೫೪. ಕನಕೋಚ್ಚಾಸನ ಸಂಸ್ಥಿತಂ–ಚಿನ್ನದ ಎತ್ತರವಾದ ಪೀಠದ ಮೇಲೆ ಕುಳಿತಿರುವ, ನೃಪನವಂ–ಆ ರಾಜನು, ವೆಂಗೀಶಂ–ವೆಂಗಿದೇಶದ ರಾಜ; ಉತ್ತುಂಗ–ಎತ್ತರವಾದ, ಪೀನ–ದಪ್ಪನಾಗಿರುವ, ನಿಜ–ತನ್ನ, ಅಂಸ–ಭುಜಗಳ ಮೇಲ್ಭಾಗಕ್ಕೆ, ಅರ್ಪಿತ–ಸೇರಿಸಿದ, ಲಂಬಹಾರಂ–ನೇತಾಡುವ ಹಾರವನ್ನುಳ್ಳವನು, ಅವನ್–ಅವನು, ಆ ಪಾಂಡ್ಯಂ–ಆ ಪಾಂಡ್ಯ ದೇಶದ ಅರಸು: ಮನಂಗೊಂಡು–ಮನಸ್ಸು ಮೆಚ್ಚಿ, ನಿನ್ನನೆ–ನಿನ್ನನ್ನೇ, ಕಿಱುಗಣ್ಣೊಳ್–ಕೆಳಗಣ್ಣಿನಲ್ಲಿಯೇ, ನೋಡುತಿರ್ಪವಂ–ನೋಡುತ್ತಿರುವ, ಅವಂ–ಅವನು, ಚೇರಮ್ಮಂ–ಕೇರಳ ದೇಶದ ಚೇರಮರಾಜ; ಆದಿತ್ಯತೇಜಂ–ಸೂರ್ಯನಂತೆ

ತೇಜಸ್ಸುಳ್ಳವನು, ಅವಂ–ಅವನು, ಕಳಿಂಗದೇಶದರಸಂ–ಕಳಿಂಗದೇಶದ ರಾಜ, ಪಂಕೇಜ ಪತ್ರೇಕ್ಷಣೇ–ತಾವರೆಯಂತೆ ಕಣ್ಣುಳ್ಳ ದ್ರೌಪದಿಯೇ, ನೋಡು

ವಚನ: ಪೊಳಪಿನೊಳಂ–ಅತ್ತಿತ್ತ ಚಲಿಸುವಿಕೆಯಲ್ಲಿಯೂ, ಹೊರಳಾಟದಲ್ಲಿಯೂ, ಧವಳಿಸಿದನ್ನವಾಗೆ–ಬಿಳಿದಾದಂಥವುಗಳಾಗಿರಲು, ಸ್ವರಂಗಳೊಳಂ–ಶಬ್ದಗಳಲ್ಲಿಯೂ, ಪಾಠಕಾಜರ–ಹೊಗಳುಭಟ್ಟರ; ಇಂಚರಂಗಳೊಳಂ–ಇಂಪಾದ ಸದ್ದುಗಳಲ್ಲೂ, ಅವಷ್ಟಂಭದಿಂ–ಠೀವಿಯಿಂದ, ನೀಡಿ–ಚಾಚಿ.

೩೩. ದುರ್ಯೋಧನನ ಚಿತ್ರ: ಎನ್ನ ಮೆಲ್ಲೆರ್ದೆಯಂ–ನನ್ನ ಮೃದುವಾದ ಹೃದಯವನ್ನು, ಅಲರಂಬಿಂದೆ–ಹೂಬಾಣದಿಂದ, ಇದು–ಈ ಹೂವು, ಇಂತು–ಹೀಗೆ, ಉರ್ಚಿತ್ತು–ಭೇದಿಸಿತು, ಎಂಬಂತೆ–ಎನ್ನುವಹಾಗೆ, ಸೆಯ್ವಿಲ–ಸೆಯ್ವಿಲೆಯ ಹೂವಿನ, ಕಾವಂ–ಕಾವನ್ನು, ಒಂದಂ–ಒಂದನ್ನು, ತಿರಿಪುತ್ತುಂ–ತಿರುಗಿಸುತ್ತಾ, ಅನಿಬರ್ ತಮ್ಮಂದಿರುಂ–ಅಷ್ಟುಜನ ತಮ್ಮಂದಿರೂ, ತನ್ನೆರಡುತೋಳೊಳ್–ತನ್ನ ಎರಡು ಮಗ್ಗುಲುಗಳಲ್ಲಿ, ಬಂದು ಇರೆ–ಬಂದು ಇರಲು, ನೋಡಿ–ನಿನ್ನನ್ನು ನೋಡಿ, ಸೋಲ್ತು–ಸೋತು, ಮೋಹವಶನಾಗಿ, ಆ ಗೇಯಕ್ಕೆ ಸೋಲ್ತಂತೆವೋಲ್–ಆ ಸಂಗೀತಕ್ಕೆ ಸೋತ ಹಾಗೆ, ತಲೆಯಂ ತೂಗುವವಂ–ತಲೆಯನ್ನು ತೂಗಾಡುವವನು, ಸುಯೋಧನ ನೃಪಂ–ದುರ್ಯೋಧನನೆಂಬ ರಾಜ, ನೀಂ, ಆತನಂ, ನೋಡುಗೇ–ನೋಡುವವಳಾಗು, ನೋಡು. ನೋಡುಗೆ < ನೋಡು + ಗೆ, ಇಲ್ಲಿ ನೀಂ ನೋಡು ಎಂದಿಷ್ಟಿದ್ದರೂ ಸಾಕು, ವಿಧಿರೂಪವಾಗುತ್ತದೆ; ಗೆ ಎಂಬ ಪ್ರತ್ಯಯ ವಿಜ್ಞಾಪನಾರ್ಥದಲ್ಲಿ ಬಂದಿದೆ. (ಶಬ್ದಾನುಶಾಸನ ಸೂ. ೪೬೩) ನೋಡಿ.

ವಚನ: ಮಿಂಚಂ ತಟ್ಟುಮೆಡಱಿದಂತೆ–ಮಿಂಚನ್ನು ತಡಿಕೆಯಾಗಿ ಹೆಣೆದ ಹಾಗೆ, ಕಾಲ್ಗಾಪಿನ–ಕಾಲುರಕ್ಷಣೆಯ, ಕಾಲಿನ ಮೇಲೆ ನಡೆಯುವ ಅಂಗರಕ್ಷಕರ, ಕಡಿತಲೆಯ–ಕತ್ತಿಯನ್ನುಳ್ಳ ಪರಿವಾರದ; ಪಣ್ಯಾಂಗನಾಜನದ–ವೇಶ್ಯೆಯರ; ಇಲ್ಲಿ ಮೆಡಱು ಎಂಬ ಧಾತು, ಕೇಶಿರಾಜನ ಧಾತುಪಾಠದಲ್ಲಿಲ್ಲ, ಪ್ರಯೋಗಸಾರದಲ್ಲಿದೆ. ತಮಿಳಿನಲ್ಲಿ ಮಿಡೈ=ಹೆಣೆ ಎಂಬ ಶಬ್ದವಿದೆ. "ಖಾಂಡವವನಮೆಲ್ಲಮಂ ತಟ್ಟುಮೆಡಱಿ" (ಪಂಪಭಾ. ೫–೯೭ಗ) ಎಂದು ಇನ್ನೊಂದು ಪ್ರಯೋಗವಿದೆ.

೩೬. ಕೃಷ್ಣ ಬಲರಾಮರು ಕುಳಿತಿರುವ ದೃಶ್ಯ: ಆಯತ–ವಿಸ್ತಾರವಾದ, ಯದುವಂಶ–ಯಾದವವಂಶದ, ಕುಲಶ್ರೀಯಂ–ಕುಲಲಕ್ಷ್ಮಿಯನ್ನು, ತೆಕ್ಕೈಸಿದ–ಆಲಿಂಗಿಸಿದ, ಅದಟರ್–ಶೂರರು, ಅತಿರಥರ್–ಅತಿರಥರಾದವರು, ಅವರು, ಅತ್ಯಾಯತ–ಅತಿದೀರ್ಘವಾದ, ಭುಜಪರಿಘರ್–ಪರಿಘದಂತಿರುವ ಭುಜಗಳುಳ್ಳವರು, ನಾರಾಯಣ ಬಲದೇವರೆಂಬರ್–ನಾರಾಯಣನೂ (ಶ್ರೀಕೃಷ್ಣನೂ) ಬಲದೇವನೂ ಎನ್ನುವವರು; ಅಂಬುಜವದನೇ–ದ್ರೌಪದಿಯೇ.

ವಚನ: ಕಿಱಿದಂತರಂ ಪೋಗಿ–ಸ್ವಲ್ಪದೂರ ಹೋಗಿ.

೩೭. ಇಂತು–ಹೀಗೆ, ಇವರ್–ಈ ರಾಜರು, ಇನ್ನರ್–ಇಂಥವರು, ಈ

ದೊರೆಯರ್–ಈ ಯೋಗ್ಯತೆಯನ್ನುಳ್ಳವರು, ಎಂದು, ಅಱಿವಂತಿರೆ–ತಿಳಿಯುವಹಾಗೆ, ಪೇೞ್ವವೇೞ್ವ–(ಜೇಟಿಯು) ಹೇಳಿ ಹೇಳಿ, ರಾಜಾಂತರದಿಂದೆ–ಒಬ್ಬ ರಾಜನಿಂದ ಇನ್ನೊಬ್ಬ ರಾಜನ ಬಳಿಗೆ, ರಾಜಸುತೆಯಂ–ದ್ರೌಪದಿಯನ್ನು, ಅಂತು–ಹಾಗೆ, ನಯದಿಂದವಳುಯ್ದುಳ್–ನಯವಾಗಿ ಅವಳು ಕರೆದುಕೊಂಡುಹೋದಳು. ಹೇಗೆಂದರೆ, ಸದ್ಭ್ರಾಂತ....ರೇಖೆ: ಸದ್ಭ್ರಾಂತ–ಚೆನ್ನಾಗಿ ಬೀಸುತ್ತಿರುವ, ಸಮೀರಣ–ಗಾಳಿ ಯಿಂದ, ಉತ್ಥಿತ–ಮೇಲೆದ್ದ, ವಿಶಾಳ–ಅಗಲವಾದ, ವಿಳೋಳ–ತೂಗಾಡುತ್ತಿರುವ, ತರಂಗ–ಅಲೆಗಳ, ರೇಖೆ–ಸಾಲುಗಳು, ಮಾನಸಹಂಸೆಯಂ–ಮಾನಸ ಸರೋವರದ ಹಂಸ ಪಕ್ಷಿಯನ್ನು, ಪದ್ಮಾಂತರದಿಂದಂ–ಪದ್ಮದಿಂದ ಪದ್ಮಕ್ಕೆ, ಇಂಬುಗುಡು–ಅವಕಾಶ ವನ್ನು ತಿಳಿದು, ಉಯ್ವಮಾರ್ಗದಿಂ–ಕರೆದುಕೊಂಡುಹೋಗುವ ರೀತಿಯಿಂದ, ಅವಳ್, ಉಯ್ದಳ್. (ರಘುವಂಶ ೯–೨೬ ಹೋಲಿಸಿ)

ವಚನ: ಮಗುೞಿವರೆ–ಹಿಂದಿರುಗಿಬರಲು; ಚಾಪಮನೇಱಿಸಿಯುಂ–ಬಿಲ್ಲಿಗೆ ಹೆದೆಯನ್ನು ಹೂಡಿಯೂ, ಅಯ್ದುಶರದೊಳ್–ಐದು ಬಾಣಗಳಲ್ಲಿ, ಜಂತ್ರದಮೀನಂ ಯಂತ್ರದ ಮೀನನ್ನು, ಇಸಲಾರ್ಪೊಡೆ–ಹೊಡೆಯಲು ಸಮರ್ಥರಾದ ಪಕ್ಷದಲ್ಲಿ, ಎಚ್ಚು–ಬಾಣ ಪ್ರಯೋಗಮಾಡಿ, ಗೆಲ್ಲಂಗೊಂಡು–ಗೆಲುವನ್ನು ಹೊಂದಿ, ಆವಾಮೆ–ನಾವುನಾವೇ, ಎನಿಬರಾನುಂ–ಎಷ್ಟೋಜನ.

೫೮. ಏಱಿಪೆವೆಂದವರ್–ಏರಿಸುತ್ತೇವೆ ಎಂದು ಹೇಳಿದವರು, ನೆಲದಿಂ–ನೆಲದಿಂದ, ಎತ್ತಲುಂ ಆಱದೆ–ಬಿಲ್ಲನ್ನು ಎತ್ತಲುಕೂಡ ಅಸಮರ್ಥರಾಗಿ, ಬಿೞ್ದು–ಬಿದ್ದು; ನೆತ್ತರಂ–ರಕ್ತವನ್ನು, ಕಾಱಿಯುಂ–ವಾಂತಿಮಾಡಿಕೊಂಡೂ, ಎತ್ತಿ ಕೆಯ್ಮುಡಿದುಂ–ಎತ್ತಿ ಕೈಮುರಿದುಹೋಗಿಯೂ, ಆಗಳೆ ಕಾಲುಡಿದುಂ–ಆಗಲೇ ಕಾಲುಮುರಿದು ಹೋಗಿಯೂ, ಬೞಲ್ದು–ಸುಸ್ತಾಗಿ, ಪಲ್ಲಾಱಿ–ಹಲ್ಲು ಒಣಗಿಹೋಗಿ, ಪ್ರೊಡವುರ್ಗೆಟ್ಟು–ಚೈತನ್ಯ ಕುಂದಿ, ಉಸಿರಲಪ್ಪೊಡಮಾಜದೆ–ಮಾತಾಡಲು ಕೂಡ ಶಕ್ಯರಾಗದೆ, ಪೋದೊಡೆ–ಹೊರಟುಹೋದರೆ, ಆಗಳ್–ಆಗ, ಆನ್ ಏಱಿಪೆನೆಂದು–ನಾನು ಹೆದೆಯನ್ನು ಏರಿಸುತ್ತೇನೆಂದು, ಸುಯೋಧನಂ–ದುರ್ಯೋಧನನು, ಪೊಚ್ಚಱಿಸಿ–ಸತ್ವ ಯುಕ್ತನಾಗಿ ಬಂದು, ಚಾಪಮಂ–ಬಿಲ್ಲನ್ನು

ವಚನ: ಮೂಱುಸೂೞ್–ಮೂರುಬಾರಿ, ಬಲವಂದು–ಪ್ರದಕ್ಷಿಣೆಮಾಡಿ, ಪೊಡೆವಟ್ಟು–ನಮಸ್ಕರಿಸಿ

೫೯. ಪಿಡಿದು–ಹಿಡಿದುಕೊಂಡು, ಅರ್ಪಭರದಿಂ–ಶಕ್ಯವಾದಷ್ಟು ವೇಗದಿಂದ, ಎತ್ತಲ್ಕೆ–ಎತ್ತುವುದಕ್ಕೆ, ಒಡರಿಸಿದೊಡೆ–ತೊಡಗಿದರೆ, ನೆಲದಿಂ–ನೆಲದಿಂದ, ಆಣಿಪಿ–ಕೊಂಚವೂ, ಬಿಲ್ ತಳರದೆ–ಬಿಲ್ಲು ಅಲುಗಾಡದೆ, ನಿಲ್ವೊಡೆ–ನಿಂತುಬಿಟ್ಟರೆ, ಗುಡು ಗುಡುಗುಡು ಗೊಳ್ಳೆಂದು–ಗುಡು ಗುಡು ಗುಡು ಗೊಳ್ ಎಂಬುದಾಗಿ, ಒಡನೆ–ಒಟ್ಟಿಗೇ, ಆರೆ–ಪ್ರೇಕ್ಷಕರು ನಕ್ಕು ಕೂಗಿಕೊಳ್ಳಲು, ಸುಯೋಧನಂ–ದುರ್ಯೋಧನನು, ಕರಂ–ಬಹಳವಾಗಿ, ಸಿಗ್ಗಾದಂ–ನಾಚಿಕೆಪಟ್ಟುಕೊಂಡನು.

**ವಚನ**: ಆಳ್ದನ–ಸ್ವಾಮಿಯ ; ಸಿಗ್ಗಾದ ಮೊಗಮಂ ಕಂಡು–ನಾಚಿಕೆಯಿಂದ ಕುಗ್ಗಿದ ಮುಖವನ್ನು ನೋಡಿ.

೬೦. ಆ ಕಾನೀನಂ–ಆ ಕರ್ಣನು, ಆಂ ಏಱಪೆನ್–ನಾನು ಬಿಲ್ಲಿಗೆ ಹೆದೆಯನ್ನು ಏರಿಸುತ್ತೇನೆ, ಎಂದು, ಬಂದು, ಎತ್ತಿ ಬಿಲ್ಲಂ–ಬಿಲ್ಲನ್ನು, ಏಱಿಸಿ–ಹೆದೆಯನ್ನು ಕಟ್ಟಿ, ತೆಗೆಯಲ್–ಹೆದೆಯನ್ನು ಎಳೆಯಲು, ತಾಂ–ತಾನು, ಆರ್ತನಿಲ್ಲ-ಸಮರ್ಥನಾಗಲಿಲ್ಲ ; ತೆಗೆವಂತು–ಹಾಗೆ ಸೆಳೆಯುವಂತೆ, ಆ ನೃಪತಿಗಳ್–ಆ ರಾಜರು, ಅರಿಗನ–ಅರ್ಜುನನ, ಇದಿರೊಳ್–ಎದುರಿನಲ್ಲಿ, ಏಂ ಪುಟ್ಟಿದರೇ–ಹುಟ್ಟಿದವರೇನು? ಅಲ್ಲ.

**ವಚನ**: ಬಿಲ್ಲುಂ ಬೆಱಗುವಡಾಗಿ–ತಳಮಳಗೊಂಡು, ಕಕ್ಕಾಬಿಕ್ಕಿಯಾಗಿ, ಸಿಗ್ಗಾಗಿ–ಸಂಕೋಚಪಟ್ಟುಕೊಂಡು, ಈ ಜನವಡೆಯೊಳ್–ಈ ಜನಸಮೂಹದಲ್ಲಿ; ಆರಾನುಂ–ಯಾರಾದರೂ ; ಸಾಱುವುದುಂ–ಘೋಷಿಸುತ್ತಲು

೬೧. ಅರ್ಜುನ ಬಂದದ್ದು : ಮುಸುಕಿದ–ಮುಚ್ಚಿಕೊಂಡ, ನೀರದಾವಳಿಗಳಂ–ಮೋಡಗಳ ಸಾಲನ್ನು, ಕಿರಣಂಗಳೊಳ್–ಕಿರಣಗಳಲ್ಲಿ, ಒತ್ತಿ–ಅಮುಕಿ, ತೇಜಂ–ಪ್ರಕಾಶವು, ಆರ್ವಿಸುವಿನಂ–ವ್ಯಾಪಿಸುತ್ತಿರಲು, ಆಗಳ್–ಆಗ, ಒಪ್ಪೊರ್ಡದಲೆ–ಒಟ್ಟಿಗೇ, ಮೂಡುವ-ಹುಟ್ಟುವ, ತಲೆದೋರುವ, ಬಾಳದಿನೇಶ ಬಿಂಬದ-ಬಾಲಸೂರ್ಯ ಮಂಡಲದ, ಒಂದೆಸಕದಿಂ–ಒಂದು ಶೋಭೆಯಿಂದ, ಆ ದ್ವಿಜನ್ಮ–ಆ ಬ್ರಾಹ್ಮಣರ, ಸಭೆಯಿಂ–ಸಭೆಯಿಂದ, ಪೊಱಮಟ್ಟೊಡೆ–ಹೊರಬಂದರೆ, ಆ ಕದನ ತ್ರಿಣೇತ್ರನಾ–ಯುದ್ಧದಲ್ಲಿ ರುದ್ರನಂತಿರುವ ಆ ಅರ್ಜುನನ, ಮಾಸಿದ–ಮಾಸಿಹೋದ, ಅಂದಮುಂ–ರೀತಿಯೂ, ಪಸದನದಂತೆ–ಅಲಂಕಾರದಹಾಗೆ, ಕಣ್ಗೆ–ಕಣ್ಣುಗಳಿಗೆ, ಎಸೆದು ಪ್ರಕಾಶಿಸಿ, ತೋಱಿದುದು–ತೋರಿತು.

**ವಚನ**: ಅರಾತಿಕಾಲಾನಲನಂ – ಅರ್ಜುನನನ್ನು ; ಕಡ್ಡುವಂದ–ಗಡ್ಡಬಂದ, ದೊಡ್ಡರೆಲ್ಲಂ–ವೃದ್ಧರೆಲ್ಲ, ಮುಸುಱಿ–ಮುತ್ತಿಕೊಂಡು.

೬೨. ಸಂಗತ ಸತ್ವರ್–ಸತ್ವದಿಂದ ಕೂಡಿದ, ಸಶಕ್ತರಾದ ; ಕುರುರಾಜಂಗಂ ಕರ್ಣಂಗಂ–ದುರ್ಯೋಧನನಿಗೂ ಕರ್ಣನಿಗೂ, ಏಱಿಸಲ್ಕೆ–ಹೆದೆಯೇರಿಸುವುದಕ್ಕೆ, ಅರಿದಂ–ಅಸಾಧ್ಯವಾದ, ಇದಂ–ಈ ಬಿಲ್ಲನ್ನು, ತಾಂ ಏಱಿಪಂ ಗಡಂ–ತಾನು ಏರಿಸುವನಲ್ಲವೆ, ಈ ಪಾರ್ವಂಗೆ–ಈ ಹಾರುವನಿಗೆ, ಅಕ್ಕಟ–ಅಯ್ಯೋ, ಒಂದು ಮರುಳ್–ಒಂದು ಭೂತ; ಮೈಯೊಳ್–ಮೈಯಲ್ಲಿ, ಉಂಟಕ್ಕುಂ–ಪ್ರವೇಶವಾಗಿದೆಯಲ್ಲವೆ?

ಇಲ್ಲಿ 'ಸಂಗತಸತ್ವಂ ಕುರುರಾಜಂಗಂ ಕರ್ಣಂಗಂ' ಎಂಬುದನ್ನು ಉದಾಹರಿಸಿ 'ಸಂಗತ ಸತ್ವಂಗೆ ಕುರುರಾಜಂಗೆ ಕರ್ಣಂಗೆ' ಎಂದು ಅನ್ವಯಿಸಿಕೊಳ್ಳಬೇಕೆಂದು ಶಮದ–ದಲ್ಲಿ ಹೇಳಿದೆ ; ಒಂದು ಪ್ರತಿಯಲ್ಲಿ 'ಸಂಗತಸತ್ವಂ' ಎಂಬ ಪಾಠ ಕಾಣುತ್ತದೆ. ಆದ್ದರಿಂದ 'ಸಂಗತಸತ್ವಂ' ಎಂಬ ಪಾಠವಿರಲೂಬಹುದು.

**ವಚನ**: ಬಾಯ್ಗೆ ವಂದುದನೆ–ಬಾಯಿಗೆ ಬಂದದ್ದನ್ನೇ, ಅವಯವದಿಂ–ಸುಲಭವಾಗಿ, ಶ್ರಮವಿಲ್ಲದೆ; ತೆನ್ನ ಬಗೆದ ಕಜ್ಜಮಂ–ತಾನು ಎಣಿಸಿದ ಕಾರ್ಯವನ್ನು,

ಗೊಲೆಗೊಳಿಸುವಂತೆ–ತುದಿಮುಟ್ಟಿಸುವಂತೆ (ಬಿಲ್ಲಿನ ತುದಿಗೆ, ಕೊಪ್ಪಿಗೆ, ಸೇರಿಸುವಂತೆ), ಆ ಬಿಲ್ಲ ಗೊಲೆಯನ್ ಏಱಿಸಿನೂಂಕಿ–ಆ ಬಿಲ್ಲಿನ ತುದಿಯನ್ನು ಮೇಲಕ್ಕೆ ತಳ್ಳಿ

೬೩. ಅರ್ಜುನ ಬಿಲ್ಲಿಗೆ ಬಾಣವನ್ನು ಹೂಡಿ ಹೊಡೆದದ್ದು : ಡೆಸೆ ಕಂಪಂಗೊಳೆ–ದಿಕ್ಕುಗಳು ನಡುಗುತ್ತಿರಲು, ದಿವ್ಯಶರಮಂ ಕೊಂಡು–ದಿವ್ಯವಾದ ಬಾಣವನ್ನು ತೆಗೆದುಕೊಂಡು, ಕರ್ಣಾದಿಗಳ್–ಕರ್ಣನೇ ಮೊದಲಾದವರು, ಕಂಡು, ಬೆಕ್ಕಸಮಾಗಿರ್ಪಿನಂ–ಅಚ್ಚರಿ ಪಡುತ್ತಿರಲು, ಒಂದೆಸೂೞ್–ಒಂದೇಸಲಕ್ಕೆ, ತೆಗೆದು–ಸೆಳೆದು, ಆಕರ್ಣಾಂತಮಂ ತಾಗೆ–ಕಿವಿಯ ಕೊನೆಯನ್ನು ಮುಟ್ಟುತ್ತಿರಲು, ಆರ್ಗೆ–ಯಾರಿಗೆ, ನಿಟ್ಟಿಸಲ್–ನೋಡಲು, ಆರ್ಗೆ–ಯಾರಿಗೆ, ಇಸಲಕ್ಕುಂ–ಪ್ರಯೋಗಮಾಡುವುದು ಆಗುತ್ತದೆ, ಎಂಬ–ಎನ್ನುವ, ಎಸಕದ–ಕಾರ್ಯವನ್ನುಳ್ಳ, ಮಿನಂ–ಮೀನನ್ನು. ಸಮಂತು–ಚೆನ್ನಾಗಿ, ಎಚ್ಚು–ಹೊಡೆದು. ವಿದ್ವಿಷ್ಟ ವಿದ್ರಾವಣಂ–ಅರ್ಜುನನು, ದೇವರುಮಂ–ದೇವತೆಗಳನ್ನೂ ಧನುರ್ಧರರುಮಂ–ಬಿಲ್ಗಾರರನ್ನೂ, ಮೆಚ್ಚಿಸಿದಂ–ಮೆಚ್ಚುವಂತೆ ಮಾಡಿದನು.

**ವಚನ** : ಮೀನಕೇತನಮಾಗೆಯುಂ–ಮೀನಿನ ಧ್ವಜವಾಗಲು, ಮಕರಧ್ವಜವಾಗಲು ; ಸಹಜ ಮನೋಜನಂ–ಅರಿಕೇಸರಿಯನ್ನು ( = ಅರ್ಜುನನನ್ನು). ಮನೋಜನೆಂದೆ ಬಗೆದು–ಮನ್ಮಥನೆಂದೇ ಭಾವಿಸಿ.

೬೪. ದ್ರೌಪದಿ ಅರ್ಜುನನಿಗೆ ಸ್ವಯಂವರ ಮಾಲೆಯನ್ನು ಹಾಕಿದಳು : ಕಡೆಗಣ್–ಕುಡಿನೋಟ, ನಡೆ–ಅರ್ಜುನನ ಮೈಯಲ್ಲಿ ನಾಟಿಕೊಳ್ಳಲು, ಮನಂ–ಮನಸ್ಸು, ಬಯಸೆ–ಇಷ್ಟಪಡಲು, ತಳ್ತು–ಸೇರಿಸಿ, ಅಮರ್ದು–ಗಾಢವಾಗಿ, ಅಪ್ಪಲೆ–ಅಪ್ಪಿಕೊಳ್ಳುವುದಕ್ಕೇ, ತೊಳ್ಗಳ್–ತೋಳುಗಳು, ಆಸೆಯೊಳ್–ಆಸೆಯಲ್ಲಿ, ತೊಡರ್ದಿರೆ–ಸಿಲುಕಿಕೊಂಡಿರಲು, ಘರ್ಮಜಲಂ–ಬೆವರಿನ ಬಿಸಿನೀರು, ಪೊಣ್ಮೆ–ಹೊಮ್ಮಲು, ಭಯಂ–ಅಂಜಿಕೆಯು, ಉಣ್ಮೆ–ಹುಟ್ಟಲು, ನಾಣ್–ಲಜ್ಜೆಯು, ಕಿಡೆ–ಹೋಗಲು, ಕೆಡಲು, ಕೆಯ್ತಂ–ಮಾಟಗಳು, ಚೇಷ್ಟೆಗಳು, ವಿಕಾರದೊಳ್–ಅಂಗವಿಕಾರದಲ್ಲಿ, ತೊಡರ್ದಿರೆ–ಸಿಲುಕಿರಲು, ಉಮ್ಮಳಿಪ ಕನ್ನೆಗೆ–ವ್ಯಾಕುಲಪಡುವ ದ್ರೌಪದಿಗೆ, ಸುಂದರಮಾಲೆಯೆಂಬ ಚೇಟಿ, ಮಾಲೆಯಂ–ಸ್ವಯಂವರ ಹಾರವನ್ನು, ತಡೆಯದೆ–ತಡಮಾಡದೆ, ನೀಡೆ–ಕೊಡಲು, ಸತಿ–ದ್ರೌಪದಿ, ಮಾಣದೆ–ಬಿಡದೆ, ಗುಣಾರ್ಣವನಂ–ಅರ್ಜುನನಿಗೆ, ಮಾಲೆ ಸೂಡಿದಳ್–ಮಾಲೆಯನ್ನು ಮುಡಿಸಿದಳು, ಹಾಕಿದಳು. ವಿವಿಧ ಭಾವಗಳ ತುಮುಲಾಟ ಇಲ್ಲಿ ಚಿತ್ರಿತವಾಗಿದೆ.

**ವಚನ**: ಬದ್ದವಣದ ಪಱೆಗಳಂ–ಮಂಗಳ ವಾದ್ಯಗಳನ್ನು, ಬದ್ದವಣ< ವರ್ಧಮಾನ ; ಸುರತ ಮಕರಧ್ವಜನಂ–ಅರಿಕೇಸರಿಯ ಬಿರುದು, ಅರ್ಜುನನನ್ನು ; ಸಿವಿಗೆಯನೇಱಿಸಿ–ಪಲ್ಲಕ್ಕಿಯನ್ನು ಹತ್ತಿಸಿ, ಶಿಬಿಕಾ>ಸಿವಿಗೆ ; ನೆಲಂ ಮೂಱಿವಿಟ್ಟಂತೆ ಬರೆ–ನೆಲಂ ಎಂದರೆ ನೆಲವು, ಅಲ್ಲಿನ ಜನಗಳು, ಮೂರಿವಿಟ್ಟು–ಗುಂಪಾಗಿ, ಗುಂಪು ಸೇರಿ ; ಅಂತೆಬರೆ–ಹಾಗೆಯೇ ಬರಲು ; ಏನೆಯ್ವಂ ಎನೆ–ಏನು ಮಾಡೋಣ ಎನ್ನಲು ; ಇಲ್ಲಿನ

ಮೂರಿವಿಡು ಎಂಬುದಕ್ಕೆ ೨-೪೬ ವಚನ ನೋಡಿ. ಮೂರಿ = ಬಾಯಿ ; ಮೂರಿವಿಡು-ಬಾಯ್ಬಿಡು : ಮಾರಿಯ ಮೂರಿಯ ಮೇಳೆಜುಗುವಂದದೆ (ವರ್ಧಮಾನ ಪುರಾಣ-ಆಚಣ್ಣ, ೩-೪೪); ಜನರ್ ಮೂರಿವಿಡುತ್ತುಂ ನಿಂದು (ಅದೇ ೮-೩೪) ; ಮೂರಿ = ಸಮೂಹ. "ಮಾರಿಯ ಮೂರಿ ರಕ್ಕಸರ ಜಂಗುಳಿ" ಎಂದು ಪ್ರಯೋಗವುಂಟು.

೬೫. ಕರ್ಣನ ಮಾತು : ಜನಮೆಲ್ಲಂ ನೆರೆದು-ಜನರೆಲ್ಲ ಸೇರಿ, ಅಕ್ಕಟ-ಅಯ್ಯೋ, ಅಣ್ಣರಿವರ್-ಈ ಅಣ್ಣಗಳು, ಇಂದೇವಂದರ್-ಇಂದು ಏಕೆ ಬಂದರು, ಏವೋದರ್-ಏಕೆ ಹೋದರು, ಎಂಬಿನಮೇಂ-ಎನ್ನುತ್ತಿರಲು ಏನು, ಪೋಪಮೆ-ಹೋಗೋಣವೆ? ಬೇಡ. ಯಾರೋ ಏನೋ ಏಕೋ ಈ ಅಣ್ಣಗಳೆಲ್ಲ ಬಂದರು, ಹೋದರು ಎಂದು ತಿರಸ್ಕಾರದಿಂದ ಜನ ಆಡಿಕೊಳ್ಳುವಂತೆ ನಾವು ಹೋಗೋಣವೊ? ಎಂದು ತಾತ್ಪರ್ಯ. ನಾಡ-ನಾಡಿನ, ಕೂಟಕುಳಿಗಳ್ಗೆ-ಗುಂಪು ಸೇರುವ ಜನಕ್ಕೆ, ಏದೋಸಂ-ಏನು ದೋಷ? ಏನೂ ಇಲ್ಲ. ನಾವು ಕೂಟಕುಳಿಗಳಲ್ಲವಾದ್ದರಿಂದ ಎಂದರೆ ನೆರವಿಯ ಜನವಲ್ಲದ್ದರಿಂದ, ರಾಜರಾಗಿರುವುದರಿಂದ, ಸುಮ್ಮನೆ ಹೋಗುವುದು ನಮಗೆ ದೋಷ ಎಂದು ಭಾವ. ಏಂಬನ್ನಂ-ಏನು ಸೋಲು ; ಒಂದನೆ ಕೇಳ್-ಒಂದು ವಿಷಯವನ್ನೇ, ಕೇಳ್-ಗಮನಿಸು ; ಅಂತರನಿಕ್ಕಿ-ಎದುರಿಸಿದವರನ್ನು ಹೊಡೆದೋಡಿಸಿ, ಮಿಕ್ಕ-ಕೈಮೀರಿ ಹೋದ, ವಿಜಯ ಶ್ರೀಕಾಂತೆಗಂ-ಜಯಲಕ್ಷ್ಮಿಗೂ, ಕಾಂತೆಗಂ-ದ್ರೌಪದಿಗೂ, ನಿನಗಂ-ನಿನಗೂ, ದೋರ್ಬಲದಿಂದಂ-ನನ್ನ ಬಾಹುಬಲದಿಂದ, ಒಂದೆ ಪಸೆಯೊಳ್-ಒಂದೇ ಹಸೆಮಣೆಯ ಮೇಲೆ, ಪಾಣಿಗ್ರಹಣಂಗೆಯ್ಯೆನೇ-ವಿವಾಹವನ್ನು ಮಾಡೆನೆ? ಎಂದರೆ ಮಾಡಿಸುತ್ತೇನೆ. ಇಲ್ಲಿ ಅಣ್ಣರ್ ಎಂಬುದನ್ನು ತಿರಸ್ಕಾರಾರ್ಥದಲ್ಲಿ ಬಳಸಿದೆ; "ಅತ್ತಿಮಬ್ಬೆಯ ಕೆಲದೊಳ್ ರಂಜಿಪರೆ ಮಾಸೆವೊತ್ತಣ್ಣಂಗಳ್" ಎಂಬಲ್ಲಿರುವಂತೆ. ಕೂಟ < ಕೂಡು + ಕುಳಿ ; ಕೂಟವಾಗುವುದೇ, ಗುಂಪಾಗುವುದೇ, ಶೀಲವಾಗಿರುವವನು. ಈ ಪದ್ಯದಲ್ಲಿನ ದೇಸಿಯ ನುಡಿಗಟ್ಟುಗಳು ಆ ಕಾಲದ ಜನರ ಬಾಯಿಮಾತಿನಂತಿವೆ ; ಅತಿ ರಮಣೀಯ ಶೈಲಿ.

೬೬. ಶಲ್ಯನ ಮಾತು : ಕನ್ನೆಯಂ-ಕನ್ಯೆಯನ್ನು, ಕುಡುವೊಡೆ-ದಾನವಾಗಿ, ಪಾಣಿಗ್ರಹಣವಾಗಿ ಕೊಡುವ ಪಕ್ಷದಲ್ಲಿ, ನಿಸ್ತ್ರಪಂ-ಲಜ್ಜೆಯಿಲ್ಲದೆ, ನಿಸ್ಸಂಕೋಚವಾಗಿ, ಕುಡುವುದು-ಕೊಡುವುದು ; ಬೆಸೆಕೋಲಂ-ಹತ್ತಿ ಎಕ್ಕುವ ಬಿಲ್ಲನ್ನು, ಏಱಿಸಿದಂ-ಹೆದೆ ಕಟ್ಟಿದನು, ಎಂದು-ಎಂಬುದಾಗಿ, ಪೇೞಿರ್-ಹೇಳು, ದ್ವಿಜಕುಲಂಗೆ-ಬ್ರಾಹ್ಮಣ ಕುಲದವನಿಗೆ, ಕುಡುವುದೆ-ಕನ್ಯಾದಾನಮಾಡುವುದೆ? ಇದು, ವಿಶ್ವನರೇಂದ್ರವೃಂದದೊಳ್-ಸಮಸ್ತ ರಾಜಸಮೂಹದಲ್ಲಿ, ತೊಡರ್ದ-ಸೇರಿಕೊಂಡ, ಪರಾಭವಂ-ಅವಮಾನವು ; ಆನ್-ನಾನು, ದ್ರುಪದನಂ-ದ್ರುಪದನನ್ನು, ತಱಿದು-ಕತ್ತರಿಸಿ, ಒಟ್ಟದೆ-ರಾಶಿ ಹಾಕದೆ, ಕಡೆಗಣಿಸಿರ್ದೊಡೆ-ಉಪೇಕ್ಷೆಮಾಡಿದರೆ, ಎನ್ನ-ನನ್ನ, ಕಡುಗೊರ್ವಿದ-ಅತಿಶಯವಾಗಿ ಕೊಬ್ಬಿದ, ತೋಳ್ಗಳ-ಬಾಹುಗಳ, ಕೊರ್ವು-ಕೊಬ್ಬು, ಅದೇವುದೊ-ಅದು ಯಾತಕ್ಕೋ? ಬೆಸೆಕೋಲ್ < ಬಸೆ-ಕಾರ್ಪಾಸಚಾಪೇ + ಕೋಲ್ = ಹತ್ತಿಯ ಬಿಲ್ಲಿನ

ಕೋಲು, ಕಟ್ಟಿಗೆ. ಅರ್ಜುನನು ಏರಿಸಿದ ಬಿಲ್ಲನ್ನು ಅತಿ ತಿರಸ್ಕಾರವಾಗಿ ಚಲ್ಯ ಹೇಳುತ್ತಾನೆ.

**ವಚನ**: ಕೆಳರ್ದು-ಕೆರಳಿ, ಕೋಪಿಸಿ: ಉತ್ಸಾಹಿಸಿ-ಪ್ರೇರಿಸಿ: ನೋಡೆ ನೋಡೆ-ನೋಡುತ್ತಿರುವಾಗಲೇ.

**೬೭.** ಹಯಂ-ಕುದುರೆಗಳು, ಪಕ್ಖರೆಯಿಕ್ಕಿ-ಜೀನುಗಳನ್ನು ಹಾಕಿಸಿಕೊಂಡು, ಬಂದುವು; ಘಟೆ-ಆನೆಗಳು, ಪಣ್ಣಿದುವು-ಸುಸಜ್ಜಿತವಾದುವು; ಆಯುಧಂಗಳಿಂ-ಆಯುಧಗಳಿಂದ, ರಥಂ-ರಥಗಳು, ತೆಕ್ಕನೆ ತೀವಿ-ಚೆನ್ನಾಗಿ ತುಂಬಿದವಾಗಿ, ಬಂದುವು; ಒಂದು ಅಣಿ-ಒಂದು ಸೈನ್ಯದ ಸಾಲು, ಪುಲಿವಿಂಡುವೊಲ್-ಹುಲಿಯ ಹಿಂಡಿನಂತೆ, ಅದ ಅಳುರ್ಕೆ-ಉಂಟಾದ ವ್ಯಾಪ್ತಿ, ಹರವು. ಕೈಮಿಕ್ಕಿರೆ-ಕೈಮೀರಿರಲು, ಅಳತೆ ಮೀರಿರಲು, ಬಂದುದು; ರಣಾನಕರಾವಂ-ಯುದ್ಧಭೇರಿಗಳ ಆರ್ಭಟ, ಅಸುಂಬಮಾದುದು-ಅತಿಶಯ ವಾಯಿತು: ಇವರ್ಗೆ-ಇವರಿಗೆ, ಮಿಕ್ಕು-ಮೀರಿ, ಬರ್ದುಂಕುವನ್ನರ್-ಜೀವಿಸುವಂಥವರು, ಆರ್-ಯಾರಿದ್ದಾರೆ, ಎಂಬಿನೆಗಂ-ಎನ್ನುತ್ತಿರಲು, ರಾಜಕಂ-ರಾಜರ ಸಮೂಹ, ಮಸಗಿತ್ತು-ವಿಜೃಂಭಿಸಿತು. ರಣಕ್ಕೆ ಸಿದ್ಧತೆ ಎಷ್ಟು ಬೇಗ ನಡೆಯಿತೆಂಬುದನ್ನು ಬಿಡಿವಾಕ್ಯಗಳ ಪದ್ಯದ ದ್ರುತಶೈಲಿಯೇ ತೋರಿಸುತ್ತದೆ.

**ವಚನ**: ನೆಲಂ ಮೂರಿವಿಟ್ಟಂತೆ-ನೆಲವು (ಜನರು) ಗುಂಪಾದಹಾಗೆ, ತಳರ್ದು-ಚಲಿಸಿ, ಹೊರಟು.

**೬೮.** ಈ ರಾಜರುಗಳ ಸೈನ್ಯವನ್ನು ಸಾಗರಕ್ಕೆ ಹೋಲಿಸಿದೆ: ಮಿಳಿರ್ವ-ಅಲುಗಾಡುವ, ಕೇತನರಾಜಿಗಳ್-ಬಾವುಟೆಗಳ ಸಾಲುಗಳು, ತೆರೆಗಳ-ಅಲೆಗಳ, ಬಂಬಲಂ-ಸಮೂಹವನ್ನು; ಎತ್ತಿಸಿದ-ಎತ್ತಿದ, ಬೆಳ್ಗೊಡೆಗಳ್-ಬಿಳಿಕೊಡೆಗಳು, ಶ್ವೇತಛತ್ರಿಗಳು, ಓಳಿವಟ್ಟ-ಸಾಲಾದ, ಬೆಳ್ನೊರೆಗಳ-ಬಿಳಿನೊರೆಗಳ, ಪಿಂಡಂ-ಸಮೂಹವನ್ನು; ಭಯಂಕರ ಕರಿಗಳ್-ಭೀಕರವಾದ ಆನೆಗಳು, ಮಕರಂಗಳಂ-ಮೊಸಳೆಗಳನ್ನು; ಉಳ್ಕುವ-ಹೊಳೆಯುವ, ಕೈದುಗಳ್-ಆಯುಧಗಳು, ತೆಜಂಬೊಳೆವ-ಬಗೆಬಗೆಯಾಗಿ ಹೊಳೆಯುವ, ಮೀನಂಗಳಂ-ಮೀನುಗಳನ್ನು, ನಿರಾಕರಿಸಿರೆ-ಕಡೆಗಣಿಸಿರಲು, ನರಾಧಿಪ ಸೈನ್ಯಸಾಗರಂ-ರಾಜರ ಸೈನ್ಯವೆಂಬ ಸಾಗರವು, ಮೇರೆವಪ್ಪು-ಮೇರೆಯನ್ನು ಮೀರಿ, ಕವಿದತ್ತು-ಮುತ್ತಿಕೊಂಡಿತು.

**ವಚನ**: ಜಳನಿಧಿಯ-ಸಮುದ್ರದ, ಕಳಕಳಮುಂ-ಅಬ್ಬರವನ್ನು, ಘೋಷವನ್ನು; ಪೊಟಿಲಂ ಪುಗಲೊಲ್ಲದೆ-ಪಟ್ಟಣವನ್ನು ಪ್ರವೇಶಿಸಲು ಇಷ್ಟಪಡದೆ, ಮನುಜ ಮಾಂಧಾತನಂ-ಅರ್ಜುನನನ್ನು (ಇದು ಅರಿಕೇಸರಿಯ ಬಿರುದು)

**೬೯.** ದ್ರುಪದನ ಮಾತು: ನೀಂ-ನೀನು, ಧನುಮುಂ-ಬಿಲ್ಲನ್ನು, ತಿಗೆದು-ಬಾಣ ಹೂಡಿ ಕಿವಿವರೆಗೆ ಸೆಳೆದು, ಮೀನಂ-ಮೀನನನ್ನು, ಎಚ್ಚು-ಹೊಡೆದು, ಅಳವಂ-ಪರಾಕ್ರಮವನ್ನು, ಕೈಕೊಂಡುದರ್ಕಂ-ಸ್ವೀಕರಿಸಿದುದಕ್ಕೂ; ಕರಂ-ವಿಶೇಷವಾಗಿ, ಈ ಕನ್ನಿಕೆ-ಈ ದ್ರೌಪದಿ, ನಿನಗೆ, ಸೋಲ್ತುದರ್ಕಂ-ಒಲಿದುದಕ್ಕೂ, ಇನಿತುಂ ರಾಜಕುಲಂ-

ಇಷ್ಟು, ರಾಜರ ಸಮೂಹ, ಎಡೆಯೊಳ್–ಎಡೆಯಲ್ಲಿ, ಕೋಪಾಗ್ನಿ–ಕೋಪವೆಂಬ ಉರಿ, ಕೈಗಣ್ಮೆ–ಅಧಿಕವಾಗಲು, ಬಂದು, ಸಮಸ್ತ ಭರದಿಂ–ಸಮಸ್ತ ಸೈನ್ಯಭಾರದಿಂದ, ಮೇಲೆಟ್ಟುದು–ನಮ್ಮ ಮೇಲೆ ದಾಳಿಯಿಟ್ಟಿತು, ವಿದ್ವಿಷ್ಟ ವಿದ್ರಾವಣಾ–ಅರ್ಜುನನೇ, ನೀನಲ್ಲದೆ–ನಿನ್ನನ್ನು ಬಿಟ್ಟು, ಕಾವನಾವನೊ–ರಕ್ಷಿಸುವವನು ಯಾವನೋ? ಎನ್ನ ತಲೆಯಂ–ನನ್ನ ತಲೆಯನ್ನು, ಕಾವುದು–ಕಾಪಾಡುವುದು, ರಕ್ಷಿಸುವುದು.

ವಚನ: ಅರಾತಿಕಾಳಾನಳಂ–ಅರ್ಜುನನು ; ಕಾಳೆಗಮಂ ಪೆಱಗಿರ್ದು ನೋಡಿಂ–ಕಾಳಗವನ್ನು ಹಿಂದೆ ಇದ್ದು ನೋಡಿರಿ ; ಶರಾಸನಂಗಳಂ–ಬಿಲ್ಲುಗಳನ್ನು ; ಪೂಣೆಪುಗುವ–ಪ್ರತಿಜ್ಞೆಮಾಡಿ ಪ್ರವೇಶಿಸುವ (?) ; ಅರಾತಿ ಬಲಮುಂ – ಶತ್ರುಸೈನ್ಯವನ್ನು, ಮಾರ್ಕೊಂಡು–ಎದುರಿಸಿ, ತೆಗೆನೆಱೆದು–ಆಕರ್ಣಾಂತವಾಗಿ ಬಾಣವನ್ನು ಸೆಳೆದು, ಇಸೆ–ಪ್ರಯೋಗಿಸಲು.

೭೦. ಸರಳ–ಬಾಣಗಳ, ಪೊದಳ್ದ–ವ್ಯಾಪಿಸಿದ, ಬಲ್ಸರಿಯ–ಬಲವಾದ ಮಳೆಯ, ಕೋಳ್ಗೆ–ಸುರಿತಕ್ಕೆ, ಇರಲಾಱದೆ–ಇರಲು ಅಶಕ್ತರಾಗಿ, ಬಿಲ್–ಬಿಲ್ಲು ಎಂದರೆ ಬಿಲ್ಗಾರರ ಸೈನ್ಯ, ತೆರಳ್ದು–ಹಿಮ್ಮೆಟ್ಟಿ ; ದುರ್ಧರ ಹಯಂ–ಎದುರಿಸಲಾಗದ ಕುದುರೆಯಸೈನ್ಯ, ಅೞ್ಗಿ–ಹಾಳಾಗಿ ; ಸಂದ ಅಣಿ–ಬಂದ ಪದಾತಿಸೈನ್ಯದ ಸಾಲು; ಸಂದಣಿಸಿ–ಒಟ್ಟಾಗಿ, [ಕೋಳ್ಗು]ದಿಗೊಂಡು–ಬಾಣದ ಏಟಿನಿಂದ ವ್ಯಥಿತರಾಗಿ, ಉದಗ್ರ–ಶ್ರೇಷ್ಠವಾದ, ಭೀಕರ-ಭಯಂಕರವಾದ, ರಥಂ-ರಥಗಳು, ಅೞ್ಗಿ–ನಾಶವಾಗಿ; ದಂತಿ ಘಟೆಗಳ್ – ಬರುವ ಆನೆಯಸೈನ್ಯವು, ಪೆಱಗಿಟ್ಟೊಡೆ – ಹಿಂದೆ ಸರಿಯಲು, ಕಟ್ಟೆಗಟ್ಟಿದಂತಿರೆ—ಹಿಂದೆ ಓಡಿಬರುವ ಆನೆಯಸಾಲುಗಳಿಂದ ಏರಿಯನ್ನು ಕಟ್ಟಿದ ಹಾಗಿರಲು, ಅರಾತಿಬಲಂ–ಶತ್ರುಸೈನ್ಯ, ತಳರ್ದತ್ತು–ಸರಿಯಿತು ; ಕದನತ್ರಿಣೇತ್ರನಂ–ಅರ್ಜುನನನ್ನು, ಆಂಪವರಾರ್–ಎದುರಿಸುವವರಾರು ? ಯಾರೂ ಇಲ್ಲ.

ಇಲ್ಲಿ ಕೋಳ್ಗುದಿಗೊಂಡು, ಕೊೞ್ಗುದಿಗೊಂಡು ಎಂದೆರೆಡು ಪಾಠಗಳಿವೆ. ಕೊಳ್–ಹೊಡೆ, ತಗುಲು ಎಂಬ ಧಾತುವಿನ ಭಾವನಾಮ ಕೋಳ್ ಎಂದರೆ ಪೆಟ್ಟು, ಹೊಡೆತ; ಕುದಿ+ಕೋಳ್ = ಕುದಿಗೊಳ್ ಎಂದರೆ ಲಕ್ಷ್ಯಾರ್ಥ ನೋವನ್ನು ಪಡೆ. ಆದ್ದರಿಂದ ಈ ಪಾಠವನ್ನು ಪರಿಗ್ರಹಿಸಿದೆ. ಕೊೞ್ಗುದಿ ಎಂದರೆ ಅರ್ಥವಾಗುವುದಿಲ್ಲ ; ಕೊೞ್ ಎಂದರೆ ಗಟ್ಟಿಯಾಗುವುದು, ಕೊಬ್ಬುವುದು, ಮಂದವಾಗುವುದು. ಕೊೞ್ಗೆಸಱ್–ಮಂದವಾದ ಕೆಸರು, ನೋಡಿ ; ಇದರಿಂದ ಕುದಿ ಆಗುವುದು ಹೇಗೆ? ಆದ್ದರಿಂದ ಕೊೞ್ಗುದಿ ಎಂಬುದು ತ್ಯಾಜ್ಯ ; ಕೊೞ್ಗುದಿ ಎಂದಿರಬಹುದೆ? ಕೊಡುವ–ಶೀತವಾದ+ಕುದಿ ಎಂದರೆ ಅರ್ಥವಿಲ್ಲ. ಆದ್ದರಿಂದ ಅದೂ ಪರಿಗ್ರಾಹ್ಯವಲ್ಲ. ಕೂೞ್ಗುದಿ ಎಂದಿದ್ದಿರಬಹುದೆ? ಅನ್ನದ ಕುದಿಯನ್ನು ಹೊಂದಿ ; ಅನ್ನ ಕುದಿಯುವಂತೆ ಕುದಿದು, ಮರುಗಿ, ವ್ಯಥೆಪಟ್ಟು ಎಂದಾಗಬಹುದು ; ಆದರೆ ಈ ಪಾಠ ಊಹೆ ಮಾತ್ರ.

ವಚನ: ಅರ್ಣವ ನಿನಾದದಿಂದೆ–ಸಮುದ್ರದ ಘೋಷದಿಂದ, ಆರ್ದು–ಗರ್ಜಿಸಿ ; ಕಿಱಿದು ಪ್ರೊೞ್ತು–ಸ್ವಲ್ಪಹೊತ್ತು.

೭೧. ಪಾರ್ವನ ಶರಾಸನ ವಿದ್ಯೆಯಂ – ಹಾರುವಯ್ಯನ ಬಿಲ್ವಿದ್ಯೆಯನ್ನು, ಗೆಲಲ್ಕೆ–ಗೆಲ್ಲುವುದಕ್ಕೆ, ಅರಿದು–ಅಸಾಧ್ಯ, ಎಂದು, ನೊಂದು–ವ್ಯಥೆಪಟ್ಟು, ನಿತ್ತರಿಸದೆ–ನಿಭಾಯಿಸದೆ, ಪಾರ್ವನೊಳ್–ಹಾರುವನಲ್ಲಿ, ಕಲಹಂ–ಯುದ್ಧವು, ಆಗದು–ಆಗ ಬಾರದು, ಛೀ–ಛೀ, ಇದು, ದೊರೆಯಲ್ತು–ಯೋಗ್ಯವಲ್ಲ, ಸಮಾನವಲ್ಲ, ಎಂದು, ಭಾಸ್ಕರ ಸುತಂ–ಸೂರ್ಯಪುತ್ರ ಕರ್ಣ, ಒಯ್ಯನೆ-ಮೆಲ್ಲಗೆ, ಓಸರಿಸೆ–ಹಿಂದೆ ಸರಿಯಲು; ಮರುತ್ಸುತಂ–ಭೀಮಸೇನನು, ಮದ್ರಮಹೀಶನುಮಂ–ಮದ್ರರಾಜನಾದ ಶಲ್ಯನನ್ನೂ, ವಿರಥನೆಮಾಡಿ – ರಥಹೀನನನ್ನಾಗಿಮಾಡಿ, ತಳ್ತು - ಹಿಡಿದು, ಮಲ್ಲಯುದ್ಧದೊಳ್–ಮಲ್ಲಗಾಳಗದಲ್ಲಿ, ಒರ್ಮೆಯೆ–ಒಂದೇ ಪಟ್ಟಿಗೆ, ನೆಲಕಿಕ್ಕಿದಂ–ನೆಲಕ್ಕೆ ಬೀಳಿಸಿದನು, ಅಪ್ಪಳಿಸಿದನು.

ವಚನ: ಸುಟ್ಟೆತೋಱಿ – ಬೆರಳಿನಿಂದ ತೋರಿಸಿ; ಅಸೋಘಂ – ನಿಶ್ಚಯ ವಾಗಿಯೂ; ಮೊಗಂದಿರಿದುದಂ–ಮುಖತಿರುಗಿಸಿದ್ದನ್ನು, ಎಂದರೆ ಓಡಿಹೋದದ್ದನ್ನು, ಮನಂಗೆಟ್ಟು–ಧೈರ್ಯಕೆಟ್ಟುಹೋಗಿ.

೭೨. ಕರಮೊಸೆದು–ಬಹಳ ಸಂತೋಷಪಟ್ಟು, ಆ ದ್ರುಪದಜೆಯೊಳ್–ಆ ದ್ರೌಪದಿ ಕಾರಣಳಾಗಿ, ನೆರೆದ–ಒಟ್ಟಾಗಿ ಸೇರಿದ, ಒಸಗೆಗೆ–ಸಂತೋಷಕ್ಕೆ, ತಮ್ಮ, ಬೀರಮಂ–ಶೌರ್ಯವನ್ನೂ, ಬಿಂಕಮುಮಂ–ಗರ್ವವನ್ನೂ, ತೆಱುವಂ–ತಪ್ಪುಕಾಣಿಕೆ ಯೆಂದೂ, ತೆಲ್ಲಂಟಿಯುಮೆಂದು–ಬಳುವಳಿಯೆಂದೂ, ಈವ ಪೋಲ್–ಕೊಡುವಹಾಗೆ, ಅರಿಕೇಸರಿಗೆ, ಆಗಳ್–ಆಗ, ಬೆನ್ನಿತ್ತರ್–ಬೆನ್ನುತೋರಿಸಿದರು, ಪರಾರಿಯಾದರು.

ಇಲ್ಲಿ ರೇಫ ಱಕಾರಗಳಿಗೆ ಪ್ರಾಸವಾಗಿರುವುದನ್ನು ಗಮನಿಸಬಹುದು. “ತೆಲ್ಲಂಟಿ ಯೆಂದು ನಿಬ್ಬಣಂ”–ಘುಯ್ಯಿ. ತೆಱುವು < ತೆಱು + ವು = ತೆರುವುದು, ಕಪ್ಪ.

ವಚನ: ಬಿಲ್ಲಕೊಪ್ಪಿನ ಮೇಲೆ-ಬಿಲ್ಲಿನ ತುದಿಯ ಮೇಲೆ;

೭೩. ನಿನ್ನಂ–ನಿನ್ನನ್ನೂ, ಉಱುಗಿಸಲುಂ–ಒಲಿಸುವುದಕ್ಕೂ, ಅಜಿಯೊಳ್–ಯುದ್ಧದಲ್ಲಿ, ಎನ್ನಂ–ನನ್ನನ್ನು, ಜೆಂಕೊಂಡು–ಅಟ್ಟಿ, ಕಾದಲುಂ–ಯುದ್ಧಮಾಡುವು ದಕ್ಕೂ, ಬೀರರ್–ಶೂರರು, ಈಗಳ್–ಈಗ, ಬಂದು, ಬೆನ್ನನೆ ಮೊಗದಿಂ–ಮೌನ ಮುಖದಿಂದ, ಬೆನ್ನಿತ್ತುದಂ – ಪಲಾಯನಮಾಡುದನ್ನು, ಸರಸಿರುಹಮುಖೀ – ದ್ರೌಪದಿಯೇ, ಇನಿಸು ನೋಡ–ಇದಿಷ್ಟು ನೋಡು.

ವಚನ: ಎಂಬನ್ನೆಗಂ – ಎನ್ನುವಷ್ಟರಲ್ಲಿ, ಮಹಾವಿಭೂತಿಯಿಂ – ಮಹಾ ವೈಭವದಿಂದ.

೭೪. ಅರ್ಜುನನು ದ್ರುಪದನ ಅರಮನೆಯನ್ನು ಪ್ರವೇಶಿಸಿದನು. ಪೊಳ ಲೊಳಗೆ–ನಗರದಲ್ಲಿ, ಕನ್ನಡಿಯ, ಕಂಚಿನ, ತೋರಣದ, ಓಳಿಗಳ್–ಸಾಲುಗಳು, ತಳತ್ತಳಿಸಿ–ತಳತಳಿಸಿ, ಒಪ್ಪೆ–ಸೊಗಸಾಗಲು; ವಿಚಿತ್ರ ಕೇತು ತತಿಗಳ್–ವಿವಿಧವಾದ ಅನೇಕ ಬಾವುಟಗಳ ಸಮೂಹ, ಮಿಳಿರ್ದಾಡೆ–ಅಲುಗಾಡುತ್ತಿರಲು; ಪುರಾಂಗನಾ ಜನಂಗಳ–ನಗರದ ನಾರೀಜನಗಳ, ಜಯಜೀಯಮಾನರವಂ–ಜಯ, ಜೀಯ ಎನ್ನುವ

ಶಬ್ದವು, ಇಕ್ಕುವ-ಹಾಕುವ, ಸೇಸೆ–ಮಂತ್ರಾಕ್ಷತೆಗಳು, ಮನೋನುರಾಗಮಂ ಬಳೆಯಿಸೆ –ಮನದ ಸಂತೋಷವನ್ನುಂಟುಮಾಡಲು, ಪರಸೈನ್ಯಭೈರವಂ–ಅರ್ಜುನ, ಆ ದ್ರುಪದ ಮಂದಿರಮಂ-ಆ ದ್ರುಪದನ ಅರಮನೆಯನ್ನು, ಪೊಕ್ಕಂ–ಹೊಕ್ಕನು.

**ವಚನ :** ಪಚ್ಚೆಯ-ಪಚ್ಚೆಯಮಣಿಯ ; ರಾಜಾವರ್ತದ-ಎಳೆ ಇಂದ್ರನೀಲವೆಂಬ ರತ್ನದ ; ಪವಳದ–ಹವಳದ ; ಪದ್ಮರಾಗದ–ಕೆಂಪುರತ್ನದ, ಬೋದಿಗೆಯೊಳಂ–ಕಂಭದ ಮೇಲ್ಭಾಗದಲ್ಲಿಯೂ, ಭದ್ರದೊಳಂ–ಉಪ್ಪರಿಗೆಗಳಲ್ಲಿಯೂ ; ಕರ್ಕೇತನದ–ಚಿನ್ನದ, ಜಾಳರಿಗೆಯೊಳಂ–ಜಾಲರಿಯಿಂದ ಕೂಡಿದ ಗವಾಕ್ಷಗಳಲ್ಲಿಯೂ ; ಚಿತ್ರಭಿತ್ತಿ–ಚಿತ್ರಾರ ಬರೆದಿರುವ ಗೋಡೆ ; ಚಂದ್ರಕಾಂತ-ಚಂದ್ರಕಾಂತವೆಂಬ ಶಿಲೆಯ ; ಚಂದ್ರಶಾಲೆಯೊಳಂ-ಮೇಲ್ಮಹಡಿಯಲ್ಲಿಯೂ ; ವಿವಾಹಗೇಹಮಂ–ಮದುವೆ ಮನೆಯನ್ನು ; ಸಮೆಯಿಸಿ–ಮಾಡಿಸಿ ; ಅಪ್ರ್ಯವೃತ್ತಿಕಾ ವಿರಚಿತಮಪ್ಪ–ಒದ್ದೆಮಣ್ಣಿನಿಂದ ಮಾಡಿದ ; ಚತುರಾಂತರದೊಳ್ – ಹಸೆಯಜಗುಲಿಯಲ್ಲಿ ; ಚೆಂಬೊನ್ನ – ಕೆಂಪುಛಾಯೆಯ ಚಿನ್ನದ, ಪಟ್ಟವಣೆ-ಪಟ್ಟದ ಮಣೆ ; ದುಗುಲದ–ರೇಷ್ಮೆಯ ; ಆಜ್ಯಾಹುತಿ–ತುಪ್ಪದ ಹವಿಸ್ಸು ; ಹುತವಹ–ಅಗ್ನಿಯ, ಸಮಕ್ಷದೊಳ್–ಎದುರಿನಲ್ಲಿ, ಕೆಯ್ನೀರೆಱೆದು–ದಾನದ ನೀರನ್ನು ಹೊಯ್ದು ; ಪಾಣಿಗ್ರಹಣಂಗೆಯ್ಸೆ–ವಧೂವರರು ಕೈಕೈಹಿಡಿಯುವಂತೆ ಮಾಡಲು.

೭೫. ಅರ್ಜುನ ದ್ರೌಪದಿಯರ ಪರಸ್ಪರ ಪಾಣಿಗ್ರಹಣ ಹೇಗಿದ್ದಿತೆಂದು ವರ್ಣನೆ: ಮಂಜಿನೊಳ್–ಹಿಮದಲ್ಲಿ, ತುಱುಗಿ–ತುಂಬಿ, ಇಡಿದಿರೆ–ದಟ್ಟವಾಗಿರಲು, ತೆಂಕಣಗಾಳಿಯೊಳ್–ದಕ್ಷಿಣದಿಕ್ಕಿನ ಗಾಳಿಯಲ್ಲಿ, ಆದ–ಉಂಟಾದ, ಸೋಂಕಿನೊಳ್–ಸ್ಪರ್ಶದಲ್ಲಿ, ನಡುಗುವಶೋಕಪಲ್ಲರಿಯ ಪಲ್ಲವದೊಳ್–ನಡುಗುವ ಅಶೋಕದ ಲತೆ ಚಿಗುರಿನಲ್ಲಿ, ನವಚೂತ ಪಲ್ಲವಂ–ಹೊಸಮಾವಿನ ಚಿಗುರು, ತೊಡರ್ದವೊಲ್–ಸೇರಿಕೊಂಡಹಾಗೆ, ಘರ್ಮಜಲದಿಂ–ಬೆವರು ನೀರಿನಿಂದ, ನಡುಪ–ನಡುಗುವ, ಆಕೆಯ–ಆ ದ್ರೌಪದಿಯ, ಪಾಣಿಪಲ್ಲವಂ ಬಿಡಿದು–ಚಿಗುರಂತಿರುವ ಕೈಗಳನ್ನು ಹಿಡಿದುಕೊಂಡು, ಗುಣಾರ್ಣವನ–ಅರ್ಜುನನ, ಒಪ್ಪುವ-ಸೊಗಸಾಗಿರುವ, ಪಾಣಿಪಲ್ಲವಂ-ಚಿಗುರ್ಗೈಗಳು, ಬೆಡಂಗನಾಳ್ದುದು–ಚೆಲುವನ್ನು ಪಡೆಯಿತು.

ಇಲ್ಲಿ ದ್ರೌಪದಿಯ ಅಂಗೈಗಳೇ ಅಶೋಕದ ಚಿಗುರು ; ಅದು ಬೆವರು ಹನಿಗಳಿಂದ ತುಂಬಿ ಲಜ್ಜೆಯಿಂದ ನಡುಗುತ್ತಿದೆ. ಅರ್ಜುನನ ಅಂಗೈ ಮಾವಿನ ಚಿಗುರು ; ಈ ಚಿಗುರು ಆ ಚಿಗುರನ್ನು ಹಿಡಿದುಕೊಂಡಂತೆ ಕೈಕೈ ಹಿಡಿಕೆ ಇತ್ತು. ಇಲ್ಲಿ ದ್ರೌಪದಿಯ ಭಯ ಸಂಕೋಚ, ಲಜ್ಜೆ, ಸೌಂದರ್ಯ, ಕೋಮಲತೆ ಮುಂತಾದ ಭಾವಗಳೆಲ್ಲ ಧ್ವನಿತವಾಗಿ ಪದ್ಯ ಅತ್ಯಂತ ಸುಂದರವಾಗಿದೆ. (ಕಮಲಾ. ೧೧–೧೪೨, ೧೪೩. ನೋಡಿ.)

**ವಚನ :** ಕಿಱುಕುಣಿಕೆಗಳಂ – ಕಿರುಬೆರಳುಗಳನ್ನು ; ಬೇಳ್ವಿಯ ಕೊಂಡದ–ಹೋಮ ಮಾಡುವ ಅಗ್ನಿಕುಂಡದ ; ಮೊದಲ್ಗೆ–ಮೊದಲಿಗೆ, ಅಗ್ರಭಾಗಕ್ಕೆ : ಕನಕ ಗಿರಿಯಂ–ಮೇರುಪರ್ವತವನ್ನು ; ಬಲಗೊಳ್ವ–ಪ್ರದಕ್ಷಿಣೆಮಾಡುವ ; ಪತಂಗದಂಪತಿಯಂತೆ–ಸೂರ್ಯ ಮತ್ತು ಅವನ ಹೆಂಡತಿಯಹಾಗೆ ; ಸಪ್ತಾರ್ಚಿಯಂ–ಅಗ್ನಿಯನ್ನು ;

ಮೂಱುಸೂೞ್–ಮೂರುಸಲ, ಬಲವಂದು–ಪ್ರದಕ್ಷಿಣೆ ಬಂದು; ಪೇೞ್ದ್ಪೋಜೆಯೊಳ್–ಹೇಳಿದ ಕ್ರಮದಲ್ಲಿ ; ಲಾಜೆಯಂ–ಬತ್ತದ ಅರಳನ್ನು ;

**೭೬.** ಹಾಕಿದ ಅರಳಿನಿಂದ ಹೊರಟಹೊಗೆ ದ್ರೌಪದಿಯ ಸಿಂಗರವನ್ನು ಹೆಚ್ಚಿಸಿತು : ಅದಱ–ಆ ಅರಳಿನ, ಪೊದಳ್ದ ನೀಳ್ದಪೊಗೆಯಂ–ವ್ಯಾಪಿಸಿ ಉದ್ದವಾದ ಹೊಗೆಯನ್ನು, ಲುಳಿತಾಳಕೆ–ಸುರುಳಿಗೂದಲಿನ ಆ ದ್ರೌಪದಿ, ತನ್ನ ವಕ್ತ್ರ ಪದ್ಮದಿಂ–ತನ್ನ ಮುಖಕಮಲದಿಂದ, ಒಸೆದು–ಸಂತೋಷಿಸಿ, ಆಂತೊಡೆ–ತಾಳಿಕೊಂಡರೆ, ಆಕೆಯ, ಕಪೋಲದೊಳ್–ಕೆನ್ನೆಗಳಲ್ಲಿ, ಆ ನವಧೂಮಲೇಖೆ–ಆ ಹೊಸಹೊಗೆಯ ಗೆರೆ, ಚೆಲ್ವಿದಿರ್ಗೊಳೆ–ಚೆಲುವು ಎದುರಾಗಿರಲು, ಗಾಡಿವೆತ್ತು–ಸೊಗಸನ್ನು ಹೊಂದಿ, ಅದರ್ಮೇಲೇರಿ, ಕತ್ತುರಿಯೊಳ್–ಕಸ್ತೂರಿಯಲ್ಲಿ, ಮದವಟ್ಟೆಯಂ–ಪ್ರೀತಿಯ ಆಧಿಕ್ಯವನ್ನು ತೋರಿಸಲು ಕೆನ್ನೆಯಮೇಲೆ ಬರೆದ ರೇಖೆಗಳನ್ನು; ತೆಗೆದಂತೆ–ಬರೆದಹಾಗೆ, ಕದನತ್ರಿಣೇತ್ರನಾ–ಅರ್ಜುನನ, ಕಣ್ಗೆ–ಕಣ್ಣುಗಳಿಗೆ, ಎಸೆದು-ಸೊಗಸಾಗಿ, ತೋಱಿದುದು–ತೋರಿತು. ಮದವಟ್ಟೆ–" ಅಭಿನವಮದಲೇಖಾಲಾಲಿತಂ " ಎಂಬಲ್ಲಿನ ಮದಲೇಖೆ ಆಗಿರಬೇಕು (ಪಂಪಭಾ. ೫–೨೮) ; ಮದವಟ್ಟೆಯೊಳೊಡಂಬಟ್ಟ ವಿಪುಲ ಕಪೋಲತಲ ಲಿಖಿತ ವಿಚಿತ್ರ ಪತ್ರಲೇಖೆಯುಂ (ಆದಿಪು. ೬–೬೧ ಗ) ; ಮದ+ಪಟ್ಟೆ–ಕಾಮದ ಸೊಕ್ಕನ್ನು ತೋರಿಸುವ ಪಟ್ಟೆಯಾಕಾರದ ಗೆರೆ.

**ವಚನ :** ಓದುವ ಋಚೆಗಳುಂ–ಹೇಳುವ, ಪಠಿಸುವ, ಋಕ್ಕುಗಳೂ (ವೇದದ ಸೂಕ್ತಗಳು) ; ಪರಕೆ–ಆಶೀರ್ವಾದ.

೭೭. ಪರಿಜೆಯನಂಟು–? ಕೆನ್ನೆಗಳಂ–ಕೆನ್ನೆಗಳನ್ನು, ಒಯ್ಯನೆ–ಮೆಲ್ಲಗೆ, ನೀವುವ-ಸವರುವ, ಚಿನ್ನ ಪೂವನೋಸರಿಸುವ–ಚಿನ್ನದ ಹೂವನ್ನು ಒಂದು ಕಡೆಗೆ ಓರೆಮಾಡುವ, ಹಾರಮಂ–ಹಾರವನ್ನು, ಪಿಡಿದು–ಹಿಡಿದು, ನೋಡುವ, ಕಟ್ಟಿದ, ನೂಲ–ನೂಲಿನ, ತೊಂಗಲಂ–ಕುಚ್ಚನ್ನು, ತಿರಿಪುವ–ತಿರುಗಿಸುವ, ಕೆಯ್ತದ–ಚೇಷ್ಟೆಗಳ, ಕೆಲಸಗಳ, ಒಂದು ನೆವದಿಂ–ಒಂದು ನೆಪದಿಂದ, ಲಲಿತಾಂಗಿಯ–ಕೋಮಲದೇಹಿಯಾದ ದ್ರೌಪದಿಯ, ಶಂಕೆಯಂ–ಸಂದೇಹವನ್ನೂ, ಭಯಂಬೆರಸಿದ ನಾಣುಮಂ–ಭಯಸಹಿತವಾದ ಲಜ್ಜೆಯನ್ನೂ, ಕ್ರಮದೆ–ಕ್ರಮವಾಗಿ, ಗುಣಾರ್ಣವಾ-ಅರ್ಜುನನೇ, ಪಿಂಗಿಸು–ಹೋಗುವಂತೆ ಮಾಡು, ಬೇಸಱದಿರ್–ಬೇಜಾರುಪಡದೆ ಇರು. ಎಂದು ದ್ರೌಪದಿಯ ದಾಸಿಯರು ಅರ್ಜುನನಿಗೆ ಹೇಳುತ್ತಾರೆ.

ಇಲ್ಲಿ ಪರಿಜೆಯನಂಟು ಎಂಬ ಪದಗಳಿಗೆ ಅರ್ಥವಾಗುವುದಿಲ್ಲ. ಪರಿಜೆ ಇರಬೇಕೋ ಪರಿಚೆ ಇರಬೇಕೊ ?, ಎರಡಕ್ಕೂ ಅರ್ಥ ದುರವಗಾಹವಾಗಿರುವುದರಿಂದ ನಿರ್ಣಯಿಸಲಾಗದು. ಪರಿಜು ಎಂದರೆ ಆಕಾರ, ರೂಪ ಎಂಬರ್ಥವಿದೆ. ಅದೇ ಶಬ್ದ ಇಲ್ಲಿರಬಹುದೆ? " ತೀವಿದ ಕೊಗ್ಗಿಯ ಕತ್ತುರಿಯುಂ, ಕತ್ತುರಿಯೊಳ್ ಅಂಟಪರಿಜೆಯುಂ, ಪರಿಜೆಯೊಳ್ ಪರಿಚಯಂಬಡೆದ ಮದವಟ್ಟೆಯುಂ....ಎಸೆಯೆ ಕೈಗೆಯ್ದಾಗಳ್ " .

(ಆದಿಪು. ೪-೪೧೧) ಎಂಬಲ್ಲಿ ಪರಿಚೆ ಶಬ್ದ ಪ್ರಯೋಗವಿದೆ. ಇದಕ್ಕೆ ಅರ್ಥ ಅಜ್ಞಾತವಿದೆ; 'ಪರಿಚೆ' ಎಂದು ಸರಿಯಾದ ಪಾಠವಿರಬಹುದು.

**ವಚನ**: ಕೆಲದೊಳಿರ್ದ–ಪಕ್ಕದಲ್ಲಿದ್ದ; ದಂಡುಜುಂಬೆಗಳ್ – ಜೇಷ್ಠೆಯು ಪಾಸಿಯುರು, ತುಂಟಪಾಸಿಗಳು, ಗಯ್ಯಾಳಿಗಳು; ದಡ್ಡುಂಜೆಯೆಂದು ಸಿತಗೆ (ಪಾಠ). ಇಲ್ಲಿ ದಡ್ಡುಂಜೆಯೆಂಬುದು, ದುಂದುಜುಂಬೆ ಅಥವಾ ದಂತುಜುಂಬೆ ಎಂಬುದರ ಅಪ ಪಾಠವಿರಬಹುದು.

೭೪. ಕಾಂತೆ–ದ್ರೌಪದಿ, ಪೊದಳ್ದ–ಆವರಿಸಿದ, ನಾಣ ಭರದಿಂದೆ–ನಾಚಿಕೆಯ ಭಾರದಿಂದ, ಅಧರೀಕೃತಚಂದ್ರ ಬಿಂಬ ಸತ್ಕಾಂತಿಯುಂ–ಕಡೆಗಣಿಸಲ್ಪಟ್ಟ ಚಂದ್ರ ಮಂಡಲದ ಸುಕಾಂತಿಯನ್ನುಳ್ಳ, ಆನನಾಂಬುಜಮಂ–ಮುಖಕಮಲವನ್ನು, ಒಯ್ಯನೆ–ಮೆಲ್ಲಗೆ, ಬಾಗಿರೆ–ಬಗ್ಗಿಸಿರಲು, ಅಣುಗೆಯರ್–ಪ್ರೀತಿಗೆ ಆಸ್ಪದರಾದವರು, ಪ್ರೀತಿಯುಳ್ಳವರು, ಕಾದಲಂಗೆ–ಪ್ರಿಯನಾದ ಅರ್ಜುನನಿಗೆ, ಸಯ್ತೆ–ನೇರಾಗಿಯೇ ಸರಿಯಾಗಿಯೇ, ನಾಣ್ಚದೆ–ನಾಚಿಕೆಪಡದೆ, ಅಂತೆ ಇರು–ಹಾಗೆಯೇ ಇರು ಎಂದು, ಪಿಡಿದು, ಅಕ್ಕಜಿಕೊಳೆತ್ತಿ–ಪ್ರೀತಿಯಿಂದ ಬಾಗಿದ ಕೊರಳನ್ನು ಮೇಲೆತ್ತಿ, ಬುದ್ಧಿ ವೇೞ್ದಂತೆ–ಬುದ್ಧಿಯ ಮಾತನ್ನು ಹೇಳಿದ ಹಾಗೆ, ಆಕೆಯ, ಹಾರ–ಹಾರದ, ಮರೀಚಿ ಮಾಲೆಗಳ್–ಕಿರಣದ ಸಾಲುಗಳು, ಕದಂಪಿನೊಳ್ ಪೊಳೆದುವು – ಕೆನ್ನೆಗಳಲ್ಲಿ ತೊಳಗಿದುವು. ಇಲ್ಲಿ ದ್ರೌಪದಿಯ ಕೆನ್ನೆಯ ಮೇಲೆ ಪ್ರತಿಫಲಿಸಿದ್ದ ಹಾರದ ಕಿರಣ ಗಳನ್ನು ಅಣುಗೆಯರಿಗೆ ಹೋಲಿಸಿ ಬುದ್ಧಿ ಮಾತುಗಳನ್ನು ಅವು ತಿಳಿಸುತ್ತಿರುವಂತೆ ವರ್ಣಿಸಿರುವುದು ಮನೋಜ್ಞವಾಗಿದೆ.

**ವಚನ**: ಮಂಗಳದೊಸಗೆಯೊಳ್–ಮಂಗಳಕರವಾದ ಉತ್ಸವದಲ್ಲಿ; ಮಂಗಳ ಪಾಠಕರ್–ಸ್ವಸ್ತಿವಾಚನ ಮಾಡುವವರು.

೭೯. ಇಂದ್ರಾನೋಕಹಂ–ಇಂದ್ರನಮರ ಕಲ್ಪವೃಕ್ಷ, ಒಪ್ಪುವ ಇಂದ್ರ ತುರಗಂ–ಸೊಗಸಾಗಿರುವ ಇಂದ್ರನ ಕುದುರೆ, ಉಚ್ಚೈಶ್ರವಸ್ಸು, ಸಂದಿಂದ್ರಗೇಹಂ–ಪ್ರಸಿದ್ಧವಾದ ಇಂದ್ರನ ಅರಮನೆ, ಸುಧರ್ಮ ಎಂಬ ಸಭಾಗೃಹವು, ಪೊದಳ್ದ–ವ್ಯಾಪಿಸಿದ, ಹಿರಿದಾದ ಇಂದ್ರಾನೇಕಪಂ–ಇಂದ್ರನ ಆನೆ, ಐರಾವತವು, ಒಪ್ಪುವ, ಇಂದ್ರನ, ಅಖಿಳೇಂದ್ರೈಶ್ವರ್ಯಂ–ಇಂದ್ರನ ಎಲ್ಲ ಸಂಪತ್ತು, ಇಂದ್ರಾಣಿ–ಇಂದ್ರನ ಹೆಂಡತಿ ಶಚೀದೇವಿ, ಸಂದ, ಇಂದ್ರಾನರ್ಘ್ಯ ವಿಭೂಷಣಂಗಳ್–ಇಂದ್ರನ ಬೆಲೆಯಿಲ್ಲದ ಅಲಂಕಾರಗಳು, ಅರಿ ಭೂಪಾಳಾವಳೀ ದುಸ್ತಮಶ್ಚಂದ್ರಂಗೆ–ಶತ್ರುರಾಜರ ಸಮೂಹ ವೆಂಬ ಕತ್ತಲೆಗೆ ಚಂದ್ರನಾಗಿರುವ, ಅರಿಗಂಗೆ–ಅರ್ಜುನನಿಗೆ, ಮಂಗಳ ಮಹಾಶ್ರೀಯುಂ–ಶುಭದಾಯಕವಾದ ಮಹಾ ಐಶ್ವರ್ಯವನ್ನೂ, ಜಯಶ್ರೀಯುಮಂ–ಜಯಲಕ್ಷ್ಮಿಯನ್ನೂ ಈಗೆ–ಕೊಡಲಿ.

**ವಚನ**: ಎತ್ತಿದ ಬೋನದೊಳ್–ಬಡಿಸಿದ ಭೋಜನದಲ್ಲಿ; ಕಲ್ಯಾಣಾಮೃತಾ ಹಾರನುಂ–ಮಂಗಳಕರವಾದ ಅಮೃತದಂತಿರುವ ಆಹಾರವನ್ನು; ಆರೋಗಿಸಿ–ಊಟ

ಮಾಡಿ; ಬೞಯಂ–ಅನಂತರ; ಯಕ್ಷಕರ್ದಮದ–ಕರ್ಪೂರ, ಅಗರು, ಕಸ್ತೂರಿ, ಶ್ರೀಗಂಧ, ಕೇಸರಿ ಇವನ್ನು ಸಮನಾಗಿ ಹಾಕಿ ತೆಯ್ದ ಲೇಪನದ; ಕೆಯ್ಗಟ್ಟಿಯೊಳ್–ಗಂಧದುಂಡೆಯುಲ್ಲಿ, ಕೈಯಂ–ಕೈಯನ್ನು, ತಿಮಿರ್ದು–ಬಳಿದುಕೊಂಡು, ತಂಬುಲಮಂ ಕೊಂಡು–ತಾಂಬೂಲವನ್ನು ಹಾಕಿಕೊಂಡು.

೪೦. ಕವಿ, ಗಮಕಿ–ಕಾವ್ಯಪಾಠಕ, ವಾದಿ ವಾದಮಾಡುವವನು, ವಾಗ್ಮಿ–ಭಾಷಣ ಪ್ರವೀಣ, ಈ, ಪ್ರವರರ–ಈ ಶ್ರೇಷ್ಠರಾದವರ, ಪಂಡಿತರ–ವಿದ್ವಾಂಸರ, ನೆಗಟ್ದ–ಪ್ರಸಿದ್ಧರಾದ, ಮಾತಱಿವರ–ಮಾತುಬಲ್ಲವರ, ಸಬ್ಬವದವರ–ವಿನೋದಗಾರರ, ಒಡನೆ–ಜೊತೆಯಲ್ಲಿ, ಅಂತು–ಹಾಗೆ, ಹರಿಗಂ–ಅರ್ಜುನನು, ಆಗಳ್–ಆಗ, ಅನ್ನವಾಸದ–ಭೋಜನ ಗೃಹದ, ಓಲಗದೊಳ್–ಸಭೆಯಲ್ಲಿ, ಇರ್ದಂ–ಇದ್ದನು ಓಲಗ<(ಸಂ) ಅವಲೋಕ(ನ).

**ವಚನ :** ಆ ಪ್ರಸ್ತಾವದೊಳ್–ಆ ಸಮಯದಲ್ಲಿ.

೪೧. ಸೂರ್ಯ ಮುಳುಗಿದ, ಚಂದ್ರ ಹುಟ್ಟಿದ: ಜೇಸಱಿ–ಜನ ಜೇಜಾರು ಪಡುವಹಾಗೆ, ಲೋಕಮಂ–ಲೋಕವನ್ನು, ತಗುಳ್ದು–ಬೆನ್ನಂಟಿ, ಸುಟ್ಟ ಬಲಿಂದೆ–ಸುಟ್ಟ ವ್ಯಥೆಯಿಂದ, ಖರಾಂಶು–ಸೂರ್ಯನು, ನಾರಕಾವಾಸದೊಳ್–ನರಕವಾಸದಲ್ಲಿ, ಆೞ್ವ ವೋಲ್–ಮುಳುಗುವಹಾಗೆ, ಅಪರ ವಾರ್ಧಿಯೊಳ್–ಪಶ್ಚಿಮ ಸಮುದ್ರದಲ್ಲಿ, ಆೞ್ವುದುಂ–ಮುಳುಗುತ್ತಲು, ಇತ್ತ–ಇತ್ತಕಡೆ, ವಂದ–ಬಂದ, ಸಂಧ್ಯಾಸಮಯಾತ್ತ ರಕ್ತರುಚಿ–ಸಂಜೆಗಾಲದಲ್ಲಿ ಉಂಟಾದ ಕೆಂಪುಕಾಂತಿ, ಪಿಂಗೆ–ಹಿಂಜರಿಯಲು, ಬೞಕ್ಕ–ಅನಂತರ, ಹಿಮಾಂಶು ಮಂಡಲಂ–ಚಂದ್ರಮಂಡಲವು, [ಪೞಂ] ಗಾಸಿನ–ಹಳೆಯ ಚೊಕ್ಕ ಚಿನ್ನದ ಕಾಸಿನ, ಪೊನ್ನ–ಚಿನ್ನದ, [ಘಂ]ಟಿಯವೊಲ್–ಗಂಟೆಯಹಾಗೆ, ಕಣ್ಗೆ–ನೋಟಕ್ಕೆ ಇರ್ದುದು–ಇತ್ತು.

ಇಲ್ಲಿರುವ ‘ ಪಡಂಗಾಸಿನ ಪೊನ್ನಪುಂಜಿಯವೊಲ್ ’ ಎಂಬ ಪಾಠದಲ್ಲಿ ಕೆಲವು ತಿದ್ದುಗಳನ್ನು ಮಾಡಿಕೊಂಡಿದೆ. ಪೞಂಗಾಸು ಎಂಬುದು ಒಂದು ನಾಣ್ಯ ; ಅದು ಚೊಕ್ಕ ಚಿನ್ನದಿಂದ ಆದ ಹಳೆಯಕಾಲದ ನಾಣ್ಯ. ‘ ಪುಂಜಿ ’ ಎಂಬುದು ‘ ಘಂಟಿ ’ ಎಂಬುದರ ಅಪಪಾಠ. ಪಡಂಗಾಸಿನ–ಹದವಾದ ಕಾಸಿನ, ಪುಂಜಿ = ಪುಂಜ, ರಾಶಿ ಎಂದರೆ ಅರ್ಥವಿಶದತೆಯಿಲ್ಲ. “ ಪೞಂಗಾಸಿನ ಪೊನ್ನಗಂಟಿಯವೊಲೊಪ್ಪಿದುದುದ್ಗತ ಭಾನುಮಂಡಲಂ ” ಎಂಬ ರನ್ನನ ಪ್ರಯೋಗವನ್ನು ನೋಡಿ (ಅಜಿಪು ೬–೨೦) ‘ ಪೞಂಗಾಸು ’ ಎಂಬ ಲೇಖನವನ್ನು ನೋಡಿ (ಪ್ರ. ಕ. ೪೨–೨)

**ವಚನ :** ಉದಾರ ಮಹೇಶ್ವರನ–ಅರ್ಜುನನ ; ಆತೋದ್ಯಂಗಳೊಳ್–ವಾದ್ಯಗಳಲ್ಲಿ ; ಪಱಿಯಲ್ವೇೞ್ದು–ಚೆದರುವಂತೆ ಹೇಳಿ ; ಮಾಡಂಗಳಂ–ಮನೆಗಳನ್ನು ; ಬೀಡುವೇೞ್ದು–ಬೀಡಾಗಿ ನಿಯಮಿಸಿ ; ಸೆಜ್ಜೆಗೆ–ಹಾಸಿಗೆಗೆ ; ಬಿಜಯಂಗೆಯ್ಯಿಂ–ಹೊರಡಿರಿ, ದಯಮಾಡಿಸಿರಿ ; ಕಳನೇಱುವಂತೆ–ಯುದ್ಧರಂಗವನ್ನು ಪ್ರವೇಶಿಸುವಂತೆ ; ಸಜ್ಜೆಯ

ಸೇಜ್–ಹಾಸಿಗೆಯ ಮೇಲೆ ಕುಳಿತು ; ಸೆಡೆದಿರ್ದ–ಸಂಕೋಚಗೊಂಡಿದ್ದ ; ನಲ್ಲಳಂ–ಪ್ರಿಯಳನ್ನು.

೮೭. ಅರ್ಜುನ ದ್ರೌಪದಿಯನ್ನು ಒಲಿಸಿಕೊಂಡದ್ದು : ನೋಟದೊಳ್–ನೋಡುವಿಕೆಯಲ್ಲಿ, ಅಸ್ಕರಿಜಂ ಪಡೆದು–ಪ್ರೀತಿಯನ್ನು ಗಳಿಸಿ, ಮೆಲ್ನುಡಿಯೊಳ್–ಮೃದುವಾದ ಮಾತಿನಲ್ಲಿ, ಬಗೆವೊಕ್ಕು–ಮನಸ್ಸನ್ನು ಹೊಕ್ಕು, ಜಾಣೊಳ್–ಜಾಣತನದಿಂದ, ಅಳ್ಳಾಟಮನೆಲ್ಲಮಂ-ನಡುಕವೆಲ್ಲವನ್ನೂ, ಕಿಡಿಸಿ–ಹೋಗಲಾಡಿಸಿ, ಸೋಂಕಿನೊಳ್–ಸ್ಪರ್ಶದಲ್ಲಿ. ಒಯ್ಯನೆ–ಮೆಲ್ಲಗೆ, ಮೆಯ್ಯೊಣರ್ಚಿ–ಮೈಗೆ ಮೈ ಸೇರಿಸಿ, ಬಾಯ್ಪೂಟದೊಳ್–ತುಟಿಗಳ ಸೇರುವಿಕೆಯಲ್ಲಿ, ಅಸ್ಕರಿಜಂ ಪಡೆದು–ಮುತ್ತನ್ನು ಹೊಂದಿ, ಕೂಟದೊಳ್–ಸೇರುವಣೆಯಲ್ಲಿ, ಉಣ್ಮಿದ–ಹುಟ್ಟಿದ, ಬೆಚ್ಚತಬ್ಬಿಯೊಳ್–ಬೆಸುಗೆಯಾದ ಆಲಿಂಗನದಲ್ಲಿ, ಕೂಟಸುಖಂಗಳಂ–ಒಡಗೂಡುವ ಸುಖಗಳನ್ನು, ಪಡೆದಂ–ಪಡೆದನು ; ಬದ್ದವಲ್ಲಹಂ-ಅರ್ಜುನನು, ಏಂ ಚದುರಂಗಳ–ಏನು ಚದುರನೋ, ಏನು ಚಮತ್ಕಾರವುಳ್ಳವನೋ ! ಇಲ್ಲಿ ಅಸ್ಕರಿಜಂ ಪಡೆ ಎಂಬುದಕ್ಕೆ ಅಸ್ಕರಿಜಂ ಬಡೆದು ಎಂಬ ಸ್ವೀಕೃತ ಪಾಠವಿದೆ; ಅಸ್ಕರಿಜಂ ಎಂದರೆ ಅಸೂಯೆ, ಕರುಬು ; ಇದು ಹೊಂದುವುದಿಲ್ಲ; ಅಸ್ಕರಿಜ್ ಎಂಬುದನ್ನು ಪ್ರೇಮ ಸೂಚಕವಾದ ಮುತ್ತು ಎಂಬರ್ಥದಲ್ಲಿ ಪಂಪ ಬಳಸುತ್ತಾನೆ (ಪಂಪಭಾ. ೭–೬೮).

೮೮. ಆ ಶಯ್ಯಾಗೃಹದ ದೀಪದ ಕುಡಿಗಳು ಅಲ್ಲಾಡುತ್ತಿದ್ದುವು : ಏಕೆ? ಬೇಡಿಸುವ–ಬಯಸುವ, ಅಪ್ಪುಗಳ್ಗೆ–ಆಲಿಂಗನಗಳಿಗೆ, ಲಲ್ಲೆಯ–ಪ್ರೀತಿಯ, ಮೆಲ್ನುಡಿಗಳ್ಗೆ–ಮೃದುವಾದ ಮಾತುಗಳಿಗೆ, ಕೂಡೆ–ಕೂಡಲೆ, ನಾಣೂಡಿದ–ನಾಚಿಕೆಯಿಂದ ಲಿಪ್ತವಾದ, ಕೆಂದುಗಳ್ಗೆ–ಮಲಗಾಟಕ್ಕೆ, ಬಗೆಗೊಂಡು–(ದೀಪಗಳ) ಮನಸ್ಸು ಒಪ್ಪಿ, ತಲೆದೂಗುವಂತೆವೋಲ್–ತಲೆಯನ್ನು ತೂಗುವಹಾಗೆ, ನಾಡೆ–ನೋಡಲು, ಪೊದಳ್ದು–ವ್ಯಾಪಿಸಿ. ನೀಳ್ದ–ಉದ್ದವಾದ, ಅವರ–ಆ ದ್ರೌಪದಿ ಅರ್ಜುನರ, ಸುಯ್ಗಳ–ಉಸಿರಾಟಗಳ, ಗಾಳಿಯೊಳ್–ಗಾಳಿಯಲ್ಲಿ, ತತ್ಸುರತ ಮಂದಿರದ–ಆ ಶಯ್ಯಾಗೃಹದ, ಉಜ್ಜಳ–ಪ್ರಕಾಶ ಮಾನವಾದ, ದೀಪಿಕಾಂಕುರಂ–ದೀಪಗಳ ಕುಡಿಗಳು, ಒಯ್ಯನೆ–ಮೆಲ್ಲಗೆ, ಅಳ್ಳಾಡುವುದಾಯ್ತು–ಅಲುಗಾಡುವುದಾಯಿತು. ನಾಣ್+ಊಡು=ನಾಣೂಡು ; "ಜಾದಿನೊಳೂಡಿದವೆರಡು ವಸ್ತ್ರವೊಳವು" (ವಡ್ಡಾ. ೧೯೯).

**ವಚನ :** ಕಾಮನ ಜಾಗರದಂತೆ–ಮನ್ಮಥನ ಜಾಗರಣೆಯಂತೆ ; ಕೆಂದಿನೊಳ್–ಸುರತ ಕ್ರೀಡೆಯಲ್ಲೇ ;

೮೯. ಸೂರ್ಯನು ಉದಯವಾದನು : ನಿನಗೆ–ನಿನಗೆ (ಸೂರ್ಯನಿಗೆ), ಇನಿಸಪ್ಪೊಡಂ–ಒಂದು ಸ್ವಲ್ಪವಾದರೂ, ಮನದೊಳ್–ಮನಸ್ಸಿನಲ್ಲಿ, ಓವದ–ಪ್ರೀತಿಸದ, ಕರ್ತಲೆಯೆಂಬ–ಕತ್ತಲೆಯೆನ್ನುವ, ಪಾಪಕರ್ಮನ–ಪಾಪಿಯ, ಮಱಿಗಳ್–ಮರಿಗಳು (ಇವು), ಕರಂ–ವಿಶೇಷವಾಗಿ, ಪಲವುಮಂ–ಇಂಥ ಹಲವು ಮರಿಗಳನ್ನು, ಸೆಱೆಗೆಯ್ದುವು ಸೆರೆಹಿಡಿದುಕೊಂಡೆವು, ಇವು ಎಂದು–ಇಗೋ ಇವು ಎಂಬುದಾಗಿ, ತಮ್ಮ ನಣ್ಪಿನೊಳ್–

ತಮ್ಮ ಪ್ರೇಮದಿಂದ, ಅವಂ-ಆ ಮರಿದುಂಬಿಗಳನ್ನು, ಒಪ್ಪಿಪಂತೆ-ಒಪ್ಪಿಸಿಕೊಡುವ ಹಾಗೆ, ಮುಗುಳೊಳ್-(ತಾವರೆಯ) ಮೊಗ್ಗಿನಲ್ಲಿ, ಮಱಸುಂದಿದ ತುಂಬಿ-ಮರೆದು ನಿದ್ರಿಸಿದ ದುಂಬಿಗಳು, ಪಾಱೆ-ಹಾರಿಹೋಗಲು, ಕೋಕನದ ಕುಲಂಗಳ್-ತಾವರೆಯ ಸಮೂಹಗಳು, ಉಳ್ಳಲರ್ದುವು-ಚೆನ್ನಾಗಿ ಅರಳಿದುವು, ಎಂಬಿನಂ-ಎನ್ನುತ್ತಿರಲು, ದಿವಾಕರಂ-ಸೂರ್ಯನು, ಅಂದು, ಒಗೆದಂ-ಹುಟ್ಟಿದನು. ಈ ಉತ್ಪ್ರೇಕ್ಷೆ ರಮ್ಯವಾಗಿದೆ.

**ವಚನ :** ಮಾರ್ತಾಂಡನುಂ-ಸೂರ್ಯನೂ, ಪ್ರಚಂಡಮಾರ್ತಾಂಡನುಂ-ಅರ್ಜುನನೂ ; ಉದಿತೋದಿತರಾಗೆ-ಏಳಿಗೆಯನ್ನು ಪಡೆಯಲು

**೮೫.** ಕಚಭಾರಾಳಸಗಾಮಿನೀ ಪರಿವೃತಂ-ಕೂದಲಿನ ಭಾರದಿಂದ ನಿಧಾನವಾಗಿ ನಡೆಯುವ ಸ್ತ್ರೀಯರಿಂದ ಬಳಸಿದವನಾದ ; ಗಂಗಾ....ಕಣಂ : ಗಂಗಾ-ಗಂಗೆಯ, ತರಂಗ-ಅಲೆಗಳನ್ನು, ಉಪಮಾನ-ಹೋಲುವ, ಚಳತ್-ಚಲಿಸುತ್ತಿರುವ, ಚಾಮರ-ಚಾಮರಗಳ, ವಾತ-ಗಾಳಿಯಿಂದ, ಪೀತ-ಕುಡಿಯಲ್ಪಟ್ಟ, ನಿಜ-ತನ್ನ, ಘರ್ಮ-ಬೆವರಿನ, ಅಂಭಃಕಣಂ-ನೀರಹನಿಗಳುಳ್ಳ ; ದ್ರೌಪದೀ....ಸ್ಥಳಂ : ದ್ರೌಪದೀ-ದ್ರೌಪದಿಯ, ಕುಚ ಕುಂಭ-ಕುಂಭದಂತಿರುವ ಮೊಲೆಗಳಿಗೆ, ಅರ್ಪಿತ-ಕೂಡಿಸಿದ, ಕುಂಕುಮದ್ರವ-ಕುಂಕುಮದ ನೀರಿನಿಂದ, ವಿಲುಪ್ತ-ಬಳಿದಿರುವ, ಉರಃಸ್ಥಳಂ-ಎದೆಯ ಪ್ರದೇಶವುಳ್ಳ, ವಿದ್ವಿಷ್ಟ ವಿದ್ರಾವಣಂ-ಅರ್ಜುನನು, ಕೀರ್ತಿ-ಯಶಸ್ಸು, ಚತುರ್ವಾರ್ಧಿಯಂ-ನಾಲ್ಕುಸಾಗರಗಳನ್ನು, ಪಾಂಟೆ-ದಾಟಲು, ಅಂದು-ಆದಿನ, ಸುಖದಿಂ-ಸುಖದಿಂದ, ಇರ್ದಂ-ಇದ್ದನು.

ತೃತೀಯಾಶ್ವಾಸಂ ಸಂಪೂರ್ಣಂ

## ಚತುರ್ಥಾಶ್ವಾಸಂ

೧. ದ್ವಿಷದ್ಬಲ ಪಾರಾವಾರದೊಳ್–ಶತ್ರುಗಳ ಸೈನ್ಯವೆಂಬ ಸಾಗರದಲ್ಲಿ, ಶ್ರೀರಮಣಿಯಂ–ಲಕ್ಷ್ಮೀಲಲನೆಯನ್ನು, ಉದಗ್ರ ಭುಜವಿಜಯ ಮಹಾಮೇರುವಿನೆ–ಅತಿಶಯವಾದ ಬಾಹುಗಳೆಂಬ ಜಯಪ್ರದವಾದ ಮಹಾಮೇರು ಪರ್ವತದಿಂದಲೇ, ಕಡೆದು, ಪಡೆದ–ಹೊಂದಿದ, ಉಪಾತ್ತನಾರಾಯಣನಾ–ಅರ್ಜುನನ, ಅಳವು–ಪರಾಕ್ರಮವು, ಆರುಮಂ–ಯಾರನ್ನೂ, ಇಳಿಸಿದುದು–ತಿರಸ್ಕರಿಸಿತು.

ವಚನ: ಚಾಗಕ್ಕೆ ಬೂತುಂ–ದಾನತೆಗೆದುಕೊಳ್ಳುವುದಕ್ಕೆ ಯಾವ ಭೂತವೂ (ಪ್ರಾಣಿಯೂ), ಭೋಗಕ್ಕೆ ಪೊಱ್ತುಂ–ಸುಖಪಡುವುದಕ್ಕೆ ಹೊತ್ತೂ, ಸೆಱೆಯದೆನಿಸಿ–ಸಾಕಾಗುವುದಿಲ್ಲವೆನಿಸಿ.

೨. ಆಗ, ಚರರ್–ದೂತರ್, ಎಯ್ದಿದರ್–ಹೊರಟರು, ಎಯ್ದಿ ಹಸ್ತಿನ ಪುರಕ್ಕೆ–ಹಸ್ತಿನಾವತಿಗೆ ಸೇರಿ, ಪಾಂಡವರ್ ತಮ್ಮುತಯ್ವರುಂ–ತಾವು ಐವರಾದ ಪಾಂಡವರು, ದ್ರುಪದಾಧಿರಾಜಪುರದೊಳ್–ದ್ರುಪದರಾಜನ ನಗರದಲ್ಲಿ, ಛತ್ರವತಿಯಲ್ಲಿ, ಪಾಂಚಾಳಿಯಂ–ದ್ರೌಪದಿಯನ್ನು, ಕೈಕೊಂಡು–ಪರಿಗ್ರಹಿಸಿ, ಇರ್ದ್ದರ್–ಇದ್ದಾರೆ; ಧುರದೊಳ್–ಯುದ್ಧದಲ್ಲಿ, ಕರ್ಣನಂ–ಕರ್ಣನನ್ನು, ಅಂತು–ಎದುರಿಸಿ, ಗೆಲ್ದವನವಂ–ಗೆದ್ದವನವನು, ಸಂದ–ಪ್ರಸಿದ್ಧನಾದ, ಅರ್ಜುನಂ–ಅರ್ಜುನನು; ಸಂಗರದೊಳ್–ಯುದ್ಧದಲ್ಲಿ, ತಳ್ತು–ಸೇರಿ, ಶಲ್ಯನಂ–ಶಲ್ಯನನ್ನು, ಇಕ್ಕಿಗೆಲ್ದದಟಂ–ಹೊಡೆದು ಗೆದ್ದ ಶೂರ, ಭೀಮಂಗಡಂ–ಭೀಮನು, ನಿಜವಾಗಿಯೂ, ಕಾಣಿರೇ–ನೋಡಿರೇ.

ವಚನ: ಬಿಲ್ಲುಂಬೆಱಗುಮಾಗಿ–ಆಶ್ಚರ್ಯ ಭಯಗಳಿಂದ ಸ್ತಂಭೀಭೂತರಾಗಿ; ಇದೊಂದು ನುಡಿಗಟ್ಟು.

೩. ಜತುಗೃಹದೊಳ್–ಅರಗಿನ ಮನೆಯಲ್ಲಿ, ಕಾಯ್ವ–ಸುಡುವ, ಅೞಲ್–ನೋವು, ಉಱೆ–ಉಂಟಾಗಲು, ಅಯ್ವರುಮಂ–ಐದುಜನರನ್ನೂ, ಮಂತ್ರಬಲದೆ–ಆಲೋಚನಾ ಶಕ್ತಿಯಿಂದ, ಎಂದರೆ ಬುದ್ಧಿಬಲದಿಂದ, ಸುಟ್ಟೊಡಂ–ನಾವು ಸುಟ್ಟರೂ, ದೈವಬಲಮೊಂದೆ–ವಿಧಿಯಬಲವೊಂದೇ, ಕಾದುದು–ಅವರನ್ನು ರಕ್ಷಿಸಿತು; ದೈವಮಂ–ವಿಧಿಯನ್ನು, ಮಿಱಿ–ಉಲ್ಲಂಘಿಸಿ, ಬಾೞಲ್–ಬದುಕಲು, ನೆಱೆವರ್–ಸಮರ್ಥರಾದವರು, ಆರಯ್ಯ–ಯಾರಯ್ಯ, ಯಾರೂ ಇಲ್ಲ. ಅರ್ಥಾಂತರ ನ್ಯಾಸಾಲಂಕಾರ. ಉಱೆ < ಉಱು = ಇರು, ಪಡೆ.

ವಚನ: ನಿಶ್ಚಿತ ಮಂತ್ರರಾಗಿ–ನಿರ್ಣಯಿಸಿದ ಆಲೋಚನೆಯುಳ್ಳವರಾಗಿ; ಪೃಥಾತನೂಜರಂ–ಪಾಂಡವರನ್ನು; ನಿನ್ನ ಬಲ್ಲ ಮಾೞ್ಕೆಯಿಂ–ನೀನು ತಿಳಿದ ರೀತಿಯಿಂದ; ಒಡಂಗೊಂಡು–ಒಡಗೊಂಡು; ಬರ್ಪುದು–ಬರುವುದು.

೪. ಅದು ಪಿರಿದುಂ ಪ್ರಮಾದಂ–ಅದು ಹಿರಿದಾದ ತಪ್ಪು; ಅದುವುಂ–ಅದು ಕೂಡ, ಕುರುರಾಜನಿಂ–ದುರ್ಯೋಧನನಿಂದ, ಆಯ್ತುಪೋಯ್ತು–ಆಯಿತು ಹೋಯಿತು;

ಸಂದುದು–ಕಳೆದುಹೋದ, ಅದಂ–ಅದನ್ನು, ಮಱೆಯಲ್ಕೆವೇಳ್ಪುದು–ಮರೆಯ ಬೇಕು; ಪಾಂಡುರಾಜಂ, ಆಳ್ದುದನ್–ಆಳಿದ, ಎಳೆಯುಂ–ಭೂಮಿಯನ್ನು, ಆಳ್ವುದು–ಆಳುವುದು, ತಪ್ಪದೆ–ತಪ್ಪುವುದಿಲ್ಲ, ಮನಂ ಬಸದೆ–ಮನಸ್ಸನ್ನು ವಿಭಾಗಿಸದೆ, ಎಂದರೆ ಒಂದೇ ಮನಸ್ಸಿನಿಂದ, ನೀಂ–ನೀವು, ಬರ್ಪುದು–ಹಸ್ತಿನಾವತಿಗೆ ಬರುವುದು, ಎನೆ–ಎನ್ನಲು, ಪೋಪಕಜ್ಜಮಂ–ಹೋಗುವ ಕಾರ್ಯವನ್ನು ಎಂದರೆ ಪ್ರಯಾಣ ಮಾಡುವುದನ್ನು, ಅಯ್ವರುಂ–ಐವರೂ, ವಿದುರನೊಳ್–ವಿದುರನಲ್ಲಿ, ಸಮೆದು–ಏರ್ಪಡಿಸಿ, ಆ ದ್ರುಪದಂಗೆ–ಆ ದ್ರುಪದನಿಗೆ, ರಾಗದಿಂ–ಸಂತೋಷದಿಂದ, ಪೇೞ್ಪುದುಂ–ಹೇಳುತ್ತಲು

**ವಚನ :** ಆತನ ಬೞಿವೞಿಗೊಟ್ಟ–ಅವನು ಬಳುವಳಿಯಾಗಿ ಕೊಟ್ಟ; ಕರೇಣು–ಹೆಣ್ಣಾನೆ; ಶಶಿತಾರ ಹಾರ–ಚಂದ್ರನಂತೆ ಹೊಳೆಯುವ ಮುತ್ತಿನಹಾರ; ಕತಿಪಯ–ಕೆಲವು; ಮದಗಜ ಪುರಮಂ–ಹಸ್ತಿನಾವತಿಯನ್ನು, ಎಯ್ದೆವಂದಾಗಳ್–ಹತ್ತಿರಕ್ಕೆ ಬಂದಾಗ, ಸಮೀಪಿಸಿದಾಗ

೫. ಘನಪಥಮಂ–ಆಕಾಶವನ್ನು, ಪಳಂಚಿ–ತಗುಲಿ, ಅಲೆವ–ಪೀಡಿಸುವ, ಸೌಧಚಯಂಗಳಿಂ–ಉಪ್ಪರಿಗೆ ಮನೆಗಳಿಂದ, ಆಡುತಿರ್ಪ–ಅಲ್ಲಾಡುತ್ತಿರುವ, ಕೇತನ ತತಿಯಿಂ–ಬಾವುಟಗಳ ಸಮೂಹಗಳಿಂದ, ಕರೀಂದ್ರಗಳಗರ್ಜನೆಯಿಂ–ಶ್ರೇಷ್ಠವಾದ ಆನೆಗಳ ಕೊರಳಿನ ಗರ್ಜನೆಯಿಂದ, ಎಂದರೆ ಘೀಂಕಾರದಿಂದ; ಪಟಹಪ್ರಣಾದಮಂ–ತಮ್ಮಟೆಗಳ ಧ್ವನಿಯನ್ನು, ಘನರವಮೆಂದೆ–ಮೋಡದ ಶಬ್ದವೆಂದೇ, ಗುಡುಗೆಂದೇ, ನರ್ತಿಸುವ–ಕುಣಿಯುವ, ಕೇಕಿಗಳಿಂ–ನವಿಲುಗಳಿಂದ; ಕಡುರಯ್ಯಮಪ್ಪ–ಅತ್ಯಂತ ಸುಂದರವಾದ, ಜಿತೇಂದ್ರಪುರಮಂ-ಇಂದ್ರನ ನಗರಿಯನ್ನು ಸೋಲಿಸಿದ, ಹಸ್ತಿನಪುರಮಂ-ಹಸ್ತಿನಾವತಿಯನ್ನು, ಪರಮೇಶ್ವರರ್–ಉತ್ಕೃಷ್ಟರಾಜರಾದ, ಚಕ್ರವರ್ತಿಗಳಾದ ಪಾಂಡವರು, ಆಗಳ್–ಆಗ, ಎಯ್ದಿದರ್–ಸೇರಿದರು.

**ವಚನ :** ಪಂಚಗವ್ಯಂಗಳಿಂ–ಗೋವಿನಿಂದ ಬರುವ ಐದು ವಸ್ತುಗಳಿಂದ (ಹಾಲು, ಮೊಸರು, ಬೆಣ್ಣೆ, ಗಂಜಳ, ಸೆಗಣಿ), ತಳಿಯಿಸಿ–ಚಿಮುಕಿಸುವಂತೆ ಮಾಡಿ; ಗುಡಿಯುಂ–ಧ್ವಜವನ್ನು; ತುಱುಗಲುಂ ಬಂಬಲುಮಾಗೆ–ಗುಂಪುಗುಂಪಾಗಲು, ಪ್ರತಿಪತ್ತಿಗಳಿಂದೆ-ಉಪಚಾರಗಳಿಂದ, ಸತ್ಕಾರಗಳಿಂದ; ನಿಬಿಡಾಲಿಂಗನಂ-ಬಿಗಿಯಾದ ಅಪ್ಪು, ಗಾಢಾಲಿಂಗನ; ಸೂೞ್ಸೂೞೊಳೆ–ಬಾರಿಬಾರಿಗೆ; ಬಿರ್ದಿಸಿಕ್ಕಿ–ಔತಣಮಾಡಿಸಿ, ಕೂರ್ತುದರ್ಕಂ–ಪ್ರೀತಿಸಿದುದಕ್ಕೂ, ಪಚ್ಚುಕೊಟ್ಟು–ವಿಭಾಗಿಸಿಕೊಟ್ಟು, ಹಂಚಿ ಕೊಟ್ಟು, ಏಗೆಯ್ದುಂ–ಏನುಮಾಡಿಯೂ.

೬. ಭೀಷ್ಮನ ಕೋಪದ ಮಾತು: ಒಡೆಯರ್–ರಾಜರಾದ ಪಾಂಡವರು, ಆದೇವರ್–ಅದೇನು ಮಾಡಬಲ್ಲರು, ಎಂದು, ನಿನಗೆ, ಪಟ್ಟಮಂ ಇತ್ತೊಡೆ–ರಾಜ್ಯವನ್ನು ಕೊಟ್ಟರೆ, ಉರ್ಕಿದಪ್ಪೆ–ಉಕ್ಕುತ್ತಿದೀಯೆ, ಉಬ್ಬುತ್ತಿದೀಯೆ; ಪೇೞ್–ಹೇಳು; ಪ್ರೊಡವಿಗಧೀಶರಂತವರ್ಗಳ್–ರಾಜ್ಯಕ್ಕೆ ಹಾಗೆ ಒಡೆಯರು ಅವರು, ಅಯ್ವರುಮಂ-ಐವರನ್ನೂ. ಕ್ರಮದಿಂದೆ ಪಟ್ಟಮಂ ತಡೆಯದೆ ಕಟ್ಟಿ–ಕ್ರಮವಾಗಿ ರಾಜ್ಯಪಟ್ಟವನ್ನು ತಡಮಾಡದೆ

ಕಟ್ಟಿ, ಭೂತಳಮನಾಳಿಸದಿರ್ದೊಡೆ–ಭೂಮಂಡಲವನ್ನು ಆಳಿಸದೆ ಇದ್ದರೆ, ಅದರ್ಕೆ–ಅದಕ್ಕೆ, ಸೊರ್ಕಿ–ಮದವೇರಿ, ನೀಂ–ನೀನು, ನುಡಿಯದಿರ್ ಅಣ್ಣ–ಮಾತಾಡಬೇಡವೋ ಅಣ್ಣ ; ನಿನ್ನ, ನುಡಿಗಾಂ–ಮಾತಿಗೆ ನಾನು, ತಡೆದು–ಅಡ್ಡಿಪಟ್ಟು, ಇರ್ಪೆನೆ–ಇರುತ್ತೇನೆಯೇ, ಸುಯೋಧನಾ–ದುರ್ಯೋಧನನೇ, ಪೇಟ್–ಹೇಳು.

೭. ಕ್ರಮಮಱಿದು–ಯಾರು ಮೊದಲು ಯಾರು ಆಮೇಲೆ ಎಂಬ ಕ್ರಮವನ್ನು ತಿಳಿದು; ಎನ್ನ ಕೊಟ್ಟುದನೆ ಕೊಂಡು–ನಾನು ಕೊಟ್ಟದ್ದನ್ನೇ ನೀವು ತೆಗೆದುಕೊಂಡು, ಮನೋಮುದದಿಂಡೆ–ಮನದ ಸಂತೋಷದಿಂದ, ಅಂತು–ಹಾಗೆ, ಬಾೞ್ವುದು–ಬದುಕುವುದು ; ಅವರಿವರೆಲ್ಲರುಂ ಸಮಂ–ಅವರೂ ಇವರೂ ಎಲ್ಲರೂ ಸಮಾನ, ಪಾಂಡವರೂ ಕೌರವರೂ ಒಬ್ಬರು ಹೆಚ್ಚಲ್ಲ, ಒಬ್ಬರು ಕಡಮೆಯಲ್ಲ ; ಅದಲ್ಲದೆ–ಅದು ಹಾಗಲ್ಲದೆ, ಮಾರ್ಮಲೆದು–ಪ್ರತಿಯಾಗಿ ಉದ್ಧತ ತನವನ್ನು ತೋರಿಸಿ, ಉರ್ಕಿ–ಉಕ್ಕಿ, ಭೀಮನೊಳ್–ಭೀಮಸೇನನಲ್ಲಿ, ಸಮರದೆ–ಯುದ್ಧದಲ್ಲಿ, ಗರ್ವದಿಂ–ಜಂಬದಿಂದ, ಗಾವಿಲರ್–ದಡ್ಡರಾದ ನೀವು, ಪೊಣರಲ್–ಯುದ್ಧವಾಡಲು, ಆರ್ಪಿರೆ–ಸಮರ್ಥರಾಗುತ್ತೀರಾ? ಇನ್ನುಂ–ಇನ್ನುಮುಂದೆ, ಎಲ್ಲರಂ–ಎಲ್ಲರನ್ನೂ ಯಮಸುತನುಂ–ಧರ್ಮರಾಜನೂ, ಸುರೇಂದ್ರ ಸುತನುಂ–ಅರ್ಜುನನೂ, ಪೊಸೆದು–ಹೊಸೆದು, ಈಗಳೇ–ಈಗಲೇ, ಮುಕ್ಕಿ–ತಿಂದು, ತೋಱರೇ–ತೋರಿಸುವುದಿಲ್ಲವೇ?

**ವಚನ :** ಬೆಸಕೆಯ್ಯದುದನೆ-ಮಾಡದಿರುವುದನ್ನೇ, ಬೆಸಕೆಯ್ವರ್-ಮಾಡುತ್ತಾರೆ; ನೆಲನಂ ಪಚ್ಚುಕೊಡುವಾಗಳ್–ಭೂಮಿಯನ್ನು ವಿಭಾಗಮಾಡಿ ಕೊಡುವಾಗ ; ಅಡ್ಡಂ ಬರ್ಪ ಗಂಡರಂ–ಅಡ್ಡಿಯಾಗಿ ಬರುವ ಶೂರರನ್ನು ; ನೋೞ್ಪೆಂ–ನೋಡುವೆನು ; ಬಗ್ಗಿಸಿದೊಡೆ–ಬಯ್ದರೆ, ಗದರಿಸಿಕೊಂಡರೆ; ಅತಿಸಂಭ್ರಮಾಕುಳಿತನಾಗಿ–ಬಹು ತಲ್ಲಣದಿಂದ ವ್ಯಥಿತನಾಗಿ, ನೀವೆಂದುದನೆಂದು ಬಾೞ್ವೆಂ–ನೀವು ಹೇಳಿದ್ದನ್ನು ಹೇಳಿ ಬದುಕುತ್ತೇನೆ ;

೮. ಪಾಂಡುವಿಂ ಬೞಿಯಂ–ಪಾಂಡುರಾಜನ ಅನಂತರ, ಧರಣೀ ನಾರಿಗೆ–ಭೂಮಿಯೆಂಬ ಸ್ತ್ರೀಗೆ, ಪೆಱರ್ ಗಂಡರ್–ಬೇರೆ ಒಡೆಯರು, ಆರುಂ–ಯಾರೂ ಇಲ್ಲ ; ಅಂತಿರಲ್–ಹಾಗಿರಲು, ಏವಂಬಡೆದಿರ್ದೊಡೆ–ನಿಮ್ಮಲ್ಲಿ ಮಾತ್ಸರ್ಯದಿಂದ ಕೂಡಿ ಇದ್ದರೆ, ಸಪ್ತಾಂಗಂ–ರಾಜ್ಯದ ಸಪ್ತಾಂಗಗಳು,- ಅೞ್ದು–ಮುಳುಗಿಹೋಗಿ, ಕಿಡುಗುಂ–ನಾಶವಾಗುತ್ತವೆ ; ಈ ರಾಜಕಕ್ಕೆ–ಈ ರಾಜ್ಯಕ್ಕೆ, ಅರಸಂ–ರಾಜ, ಧರ್ಮಜನಕ್ಕುಂ–ಧರ್ಮರಾಜನಾಗುತ್ತಾನೆ, ಎಂದು, ನಯದಿಂ–ರಾಜನೀತಿಯಿಂದ, ನಿಶ್ಚೈಸಿ–ನಿರ್ಣಯಮಾಡಿ, ಕಲ್ಯಾಣ ಕಾರ್ಯರತರ್–ಮಂಗಳ ಕಾರ್ಯದಲ್ಲಿ ಆಸಕ್ತರಾಗಿರುವವರು, ಆ ಯುಧಿಷ್ಠಿರ ನೃಪಂಗೆ–ಆ ಧರ್ಮರಾಜನಿಗೆ, ಉತ್ಸಾಹದಿಂ–ಪ್ರಯತ್ನದಿಂದ, ಪಟ್ಟಮಂ–ರಾಜ್ಯ ಪಟ್ಟವನ್ನು, ಕಟ್ಟಿದರ್–ಕಟ್ಟಿದರು.

**ವಚನ :** ಪೂರ್ವಸ್ಥಿತಿಯೊಳ್–ಹಿಂದಿನ ವ್ಯವಸ್ಥೆಯಲ್ಲಿ ; ಪಚ್ಚುಕೊಟ್ಟು–ವಿಭಾಗಿಸಿಕೊಟ್ಟು ; ಪೊಲ್ಲಮಾನಸಂ–ಕೆಟ್ಟ ಮನುಷ್ಯ ; ಕಿಸುರುಂ ಕಲಹಮುಂ–ಅಸಹನೆಯೂ, ಜಗಳವೂ ; ಅಂತೆಗೆಯ್ವೆಮೆಂದು–ಹಾಗೆ ಮಾಡುತ್ತೇವೆ ಎಂದು.

೯. ಒಡವರ್ಪ – ಒಡನೆ ಬರುವ, ಉಗ್ರಮದೇಭ....ರತ್ನಂಗಳೊಳ್ ; ಉಗ್ರಮದೇಭ – ಮದಿಸಿದ ಭಯಂಕರವಾದ ಆನೆಗಳು, ವಾಜಿ – ಕುದುರೆಗಳು, ಗಣಿಕಾ–ಸ್ತ್ರೀಯರು, ಅನರ್ಘ–ಬೆಲೆಯಿಲ್ಲದ, ಹೆಚ್ಚು ಬೆಲೆಯುಳ್ಳ, ರತ್ನಂಗಳೊಳ್– ರತ್ನಗಳಲ್ಲಿ, ಲಕ್ಷ್ಮಿ–ಶ್ರೀಯು, ತೊಡರ್ದು–ಸೇರಿಕೊಂಡು, ಒಪ್ಪುತ್ತಿರೆ–ಸೊಗಸಾಗಿರಲು, ದಂತಿ ತುರಗಂ ಶ್ರೀದಿವ್ಯಕಾಂತಾಜನಂ–ಐರಾವತ, ಉಚ್ಚೈಶ್ರವಸ್ಸು ದೇವಸ್ತ್ರೀಯರು, ತೊಡವು–ಆಭರಣಗಳು, ಎಂಬ ಒಂದುಮಂ–ಎನ್ನುವ ವಸ್ತುಗಳಲ್ಲಿ ಒಂದನ್ನೂ, ಆ ಸುರಾಸುರರಿಂ–ಆ ದೇವದಾನವರಿಂದ, ಆ ಗೋವಿಂದನಿಂ–ಆ ವಿಷ್ಣುವಿನಿಂದ, ಮುನ್ನೆ– ಹಿಂದಿನ ಕಾಲದಲ್ಲಿ, ಕೋಳ್ಪಡದ–ಕೊಳ್ಳೆ ಹೊಂದದ, ಅಂಭೋನಿಧಿಯಂತೆ–ಸಾಗರದ ಹಾಗೆ, ಧರ್ಮಜಂ–ಧರ್ಮರಾಜನು, ಬಂದು, ನೆಗಟ್ದಿಂದ್ರಪ್ರಸ್ಥಮಂ–ಪ್ರಸಿದ್ಧವಾದ ಇಂದ್ರಪ್ರಸ್ಥ ನಗರವನ್ನು

೧೦. ರಗಳೆ :–ಎಯ್ದುವುದುಂ–ಸೇರುತ್ತಲೂ ; ಅವಿರಳ–ದಟ್ಟವಾದ ; ಮಳಯಾನಿಳ-ಮಲಯಮಾರುತ ; ಕಂಪುವೇಱಿ-ಕಂಪನ್ನು ಹೊರಲು ; ಕಿಱುಮಿಡಿಗಳೊಳ್- ಸಣ್ಣ ಹೀಚುಗಳಲ್ಲಿ ; ಬಳಸು–ಸುತ್ತು ; ಅರಿದೆನಿಸಿರೆ–ಅಸಾಧ್ಯವೆನಿಸಿರಲು ; ಮಿಳಿರ್ವ ಪತಾಕಾವಳಿ–ಅಲುಗಾಡುವ ಬಾವುಟಗಳ ಸಾಲು ; ಕೆಂಬೊನ್ನ ಮದಿಲ್ಗಳೊಳಗೆ– ಕೆಂಪುಚಿನ್ನದಿಂದ ಮಾಡಿದ ಕೋಟೆಯ ಗೋಡೆಗಳೊಳಗೆ ; ಕಿಸುಗಲ್ಗಳ–ಕೆಂಗಲ್ಲುಗಳ, ರತ್ನಗಳ ; ಕಣಿವೆರಸು–ಗಣಿಯಿಂದ ಕೂಡಿ ; ನೆೞಲೊಳ್–ನೆರಳಿನಲ್ಲಿ, ಅಲೆಪಿಲ್ಲದೆ– ಅಲೆದಾಟವಿಲ್ಲದೆ ; ಏಳಿಪ–ತಿರಸ್ಕರಿಸುವ ; ಪರಿತಂದು–ಓಡಿಬಂದು ; ಒಸಗೆವೆರಸಿ-ಉತ್ಸವದೊಡನೆ ಕೂಡಿ ; ಶೇಷಾಕ್ಷತಮುಂ–ಮಂತ್ರಾಕ್ಷತೆಯನ್ನು ; ಕರುಮಾಡಮಂ-ಬಣ್ಣ ಬಳಿದ ಮನೆಯನ್ನು ; ಒಳ್ಮಾಡಂಗಳಂ–ಮನೆಯ ಒಳಭಾಗಗಳನ್ನು ; ಅವಯವದಿಂದಮಿತ್ತು– ಸುಲಭವಾಗಿ ಕೊಟ್ಟು ; ನಾಲ್ವರ್ ಮನುಜರೊಳಗೆ–ನಾಲ್ಕುಜನ ಮನುಷ್ಯರೊಳಗೆ, ಅಥವಾ ನಾಲ್ವರುಂ–ನಾಲ್ಕು ಜನರೂ, ಅನುಜರೊಳಗೆ–ತಮ್ಮದಿರಲ್ಲಿ, ರಿಪುಬಳತಿಮಿರ ಭಾನು–ಶತ್ರುಸೈನ್ಯವೆಂಬ ಕತ್ತಲೆಗೆ ಸೂರ್ಯನಾದವನು. ಈ ರಗಳೆಯನ್ನು ಮಟ್ಟರಗಳೆ ಎಂದು ಕರೆದಿದೆ ; ಕೆಲವು ಹಸ್ತಪ್ರತಿಗಳಲ್ಲಿ ಈ ಹೆಸರು ಲಿಖಿತವಾಗಿರಬಹುದು, ವಾಸ್ತವವಾಗಿ ಇದು ಪ್ರಾಕೃತ ಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವ ಪಜ್ಝಟಿಕಾ (ಪದ್ಧಳಿ) ಎಂಬ ವೃತ್ತ. ಎರಡೆರಡು ಪಂಕ್ತಿಗಳನ್ನು ಒಟ್ಟಿಗೆ ತೆಗೆದುಕೊಳ್ಳಬೇಕು. ಪ್ರತಿ ಪಾದದಲ್ಲೂ ಚತುರ್ಮಾತ್ರೆಯ ನಾಲ್ಕು ಗಣಗಳು ಇರುತ್ತವೆ ; ಅಂತ್ಯಗಣ ಜಗಣ ವಾಗಿರಬೇಕು ; ಎರಡನೆಯ ಗಣ ಜಗಣವಾಗಿದ್ದರೂ ಇರಬಹುದು. ಇಲ್ಲವೇ ಇನ್ನಾವ ಚತುರ್ಮಾತ್ರಾಗಣವಾದರೂ ಆಗಬಹುದು ; ಅಂತ್ಯ ಪ್ರಾಸವಿರಬೇಕು. ಇದು ಪಜ್ಝಟಿಕೆಯ ಲಕ್ಷಣ. ಇದು ಈ ರಗಳೆಗೆ ಚೆನ್ನಾಗಿ ಹೊಂದುತ್ತದೆ :

1 2 3 4
ಎಯ್ದುವು । ದುಂತ । ತ್ಪುರದುಪ । ವನಂಗ

1 2 3 4
ಳವಿರಳ । ಮಳಯಾ । ನಿಳಕಂ । ಪಿತಂಗ

ಕೊನೆಯಗಣ (⏑—⏑) ಜಗಣ. ಕೆಲವು ಪಾದಗಳಲ್ಲಿ ಈ ಜಗಣಕ್ಕೆ ಪ್ರತಿಯಾಗಿ ನಾಲ್ಕು ಹ್ರಸ್ವಗಳ ಗಣ ಬಂದಿದೆ (⏑⏑⏑⏑);

ಲವಣಾ । ಬ್ಧಿಯಿ ಬಳ । ಸಿದುದೆನಿ । ಸು ವಗಟಿ
ಬಿಳಸೆಸೆ । ದಿರೆ ಕೋಂ । ಟೆಯು ಚೆ । ಲ್ವು ಪೊಗಟಿ

'ರಸರಸದ ಬಾವಿ' ಎಂಬಲ್ಲಿ ಎರಡನೆಯ ಗಣ 'ದಬಾವಿ' ಪಜ್ಝಟಿಕೆಯ ಲಕ್ಷಣದಂತೆ ಜಗಣವಾಗಿರಬಹುದೆಂಬುದನ್ನು ನೋಡಬಹುದು.

ಪರದರ । ಪಾರ್ವರ । ಸೂಳೆಯರ[3] । ಮನೆಗಳವು[4]

ಧನದನ । ಭವನಮ । ನೇಳಿಪ । ಮನೆಗಳವು[4]

ಇಲ್ಲಿ ನಾಲ್ಕನೆಯ ಗಣಗಳು ಪಂಚಕಲವಾಗಿದೆ; ಮೂರನೆಯ ಗಣ ಒಂದು ಪಾದದಲ್ಲಿ ಪಂಚ ಮಾತ್ರಾತ್ಮಕವಾಗಿದೆ; ಅದನ್ನು ಚತುರ್ಮಾತ್ರಾಕಾಲದಲ್ಲಿ ಉಚ್ಚರಿಸಬೇಕು; ಹಾಗೆಯೇ ನಾಲ್ಕನೆಯ ಗಣಗಳನ್ನೂ.

ಪೊಟಿಲ ಬೆ । ಡಂಗಂ । ಮೆಚ್ಚಿಮೆ[4] । ಚ್ಚಿನೋಡಿ

ಎಂಬ ಪಾದದಲ್ಲಿ ೩ನೆಯ ಗಣ ಪಂಚಕಲವಾಗಿ ತೋರುತ್ತದೆ; ಆದರೆ ಅದನ್ನು ಉಚ್ಚರಿಸುವಾಗ ಎರಡನೆಯ ಅಕ್ಷರವನ್ನು ತೇಲಿಸಿ ಹೇಳಬೇಕು. ಪ್ರಾಕೃತ ಛಂದಸ್ಸಿನಲ್ಲಿ ನಿಯತ ಲಕ್ಷಣವುಳ್ಳ ಪಜ್ಝಟಿಕೆಯನ್ನು ಪಂಪನು ಕನ್ನಡಕ್ಕೆ ತರುವ ಪ್ರಯೋಗವನ್ನು ಇಲ್ಲಿ ಮಾಡಿದ್ದಾನೆ; ಆದರೆ ಅದರಲ್ಲಿ ಮೇಲೆ ಹೇಳಿದ ಕೆಲವು ವ್ಯತ್ಯಾಸಗಳನ್ನು ಮಾಡಿ ಅದು ಶ್ರವಣ ಸುಭಗವಾಗುವುದೋ ಇಲ್ಲವೋ ಎಂಬುದನ್ನು ಪರೀಕ್ಷಿಸಿದ್ದಾನೆ. ಪಜ್ಝಟಿಕೆಯ ಅಥವಾ ಯಾವ ಛಂದಸ್ಸಾದರೂ ಆಗಲಿ ಅದರ ೧೬ ಪಂಕ್ತಿಗಳು ಒಟ್ಟಿಗೆ ಬಂದರೆ ಅದಕ್ಕೆ 'ಕಡವಕ' ಎಂದು ಪ್ರಾಕೃತದಲ್ಲಿ ಹೆಸರು. ಆದರೆ ಕವಿಗಳು ೧೬ ಪಂಕ್ತಿಗಳನ್ನು ಮೀರಿ ಎಷ್ಟು ಪಂಕ್ತಿಗಳನ್ನು ಬೇಕಾದರೂ ಪ್ರಯೋಗಿಸಿದ್ದಾರೆ. ಈ ಪಜ್ಝಟಿಕಾ ವೃತ್ತವೇ ಕಾಲಕ್ರಮದಲ್ಲಿ ಕನ್ನಡದ 'ಮಂದಾನಿಲ ರಗಳೆ'ಯಾಗಿ ಪರಿಣಮಿಸಿತು. 'ರಗಳೆ' ಎಂಬ ಶಬ್ದವೂ 'ಕಡವಕ' ಶಬ್ದದ ರೂಪಾಂತರವಿರಬಹುದು. ಈ ಎಲ್ಲ ವಿಷಯಗಳನ್ನೂ ಛಂದಶ್ಶಾಸ್ತ್ರದಲ್ಲಿ ವಿಷದವಾಗಿ ತಿಳಿಯಬಹುದು.

**ವಚನ:** ಅಜಾತಶತ್ರು–ಶತ್ರುವೇ ಇಲ್ಲದಿರುವ ಧರ್ಮರಾಜನು; ಕರವಾಳ–ಕತ್ತಿಯಿಂದ, ದಂಷ್ಟ್ರಾ-ಕೋರೆಹಲ್ಲುಳ್ಳ, ಆಭೀಳ-ಭಯಂಕರವಾದ, ಭುಜಂಗಮೂರ್ತಿ-ಸರ್ಪಾಕಾರವುಳ್ಳವನು; ವಿಶ್ವ ವಿಶ್ವಂಬರಾಧಾರಮಪ್ಪ–ಸಮಸ್ತ ಭೂಮಿಗೂ ಆಧಾರವಾಗಿರುವ; ಇರವಿಂಗೆ–ಸ್ಥಿತಿಗೆ; ಉಮ್ಮಳಿಸಿ–ವ್ಯಥೆಪಟ್ಟು; ದಿಗಂಗನಾಮುಖಾವಲೋಕನಂ ಗೆಯ್ಯಲ್–ದಿಕ್ಕುಗಳೆಂಬ ಸ್ತ್ರೀಯರ ಮುಖವನ್ನು ನೋಡಲು, ಎಂದರೆ ದಿಗಂತಗಳಲ್ಲಿ ಸಂಚಾರ ಮಾಡಲು, ಬಗೆದು–ಯೋಚಿಸಿ.

೧೧. ಸೆಣಸುಳ್ಳ–ಮಾತ್ಸರ್ಯವನ್ನುಳ್ಳ, ಉದ್ವೃತ್ತರಂ–ದುಷ್ಟರನ್ನು, ತಳ್ತು–ಸಂಧಿಸಿ, ಇಱಿಯದೆ–ಹೊಡೆಯದೆ, ಯುದ್ಧಮಾಡದೆ; ಚತುರಂಭೋಧಿ ಪರ್ಯಂತಮಂ–ನಾಲ್ಕು ಸಾಗರಗಳ ಕೊನೆಯವರೆಗೂ, ತಾಂ–ತಾನು, ಪೋಗಿ–ಹೋಗಿ, ಧಾರಿಣಿಯಂ–ಭೂಮಿಯ ರಾಜರನ್ನು, ಬಾಯ್ಕೇಳಿಸದೆ–ಆಜ್ಞೆಗೆ ಅಧೀನರನ್ನಾಗಿ ಮಾಡದೆ; ದಾರುಣ ದೈತ್ಯರ್–ಕ್ರೂರರಾದ ರಾಕ್ಷಸರು, ಮುನಿಜನಕ್ಕೆ–ಋಷಿಜನಗಳಿಗೆ, ಇಷ್ಟಿ ವಿಘ್ನಂಗಳಂ–ಯಜ್ಞಕ್ಕೆ ತೊಂದರೆಗಳನ್ನು, ಮಾಡೆ–ಮಾಡಲು, ನೀಡಿಲ್ಲದೆ–ದೀರ್ಘಕಾಲವಿಲ್ಲದೆ, ವಿಳಂಬವಿಲ್ಲದೆ, ಬೇಗನೆ, ಸಲೆ–ಚೆನ್ನಾಗಿ, ಚಲದೆ–ಹಠದಿಂದ, ಆಟಂದು–ಮೇಲೆ ಬಿದ್ದು, ಕೊಂದಿಕ್ಕದೆ–ಕೊಂದು ಹಾಕದೆ; ಒರ್ವಂ–ಒಬ್ಬನು, ಗುಣಮುಂಟು–ತನ್ನಲ್ಲಿ ಗುಣವಿದೆ; ಎಂದು, ಉಂಡು ಪಟ್ಟರ್ಪನನ್–ಉಂಡು ಮಲಗಿರುವವನನ್ನು, ಅಣಮೆ–ವಿಶೇಷ ವಾಗಿಯೆ, ನಿರುದ್ಯೋಗಿಯಂ–ಕಾರ್ಯವಿಲ್ಲದವನನ್ನು, ಉದ್ಯೋಗಹೀನನನ್ನು, ಭೂಪ ನೆಂಬರ್–ದೊರೆಯೆಂದು ಹೇಳುತ್ತಾರೊ ?

**ವಚನ:** ವಿಜಿಗೀಷುವೃತ್ತ್ಯೋದ್ಯುಕ್ತನಾಗಲ್–ಜಯಿಸಲು ಇಚ್ಛಿಸುವವನ ನಡೆವಳಿಕೆಯಲ್ಲಿ ತೊಡಗಿದವನಾಗಿ, ಎಂದರೆ ದಿಗ್ವಿಜಯವನ್ನು ಮಾಡಲು ಮನಸ್ಸುಳ್ಳವ ನಾಗಿ.

೧೨. ಅರ್ಜುನ ದ್ರೌಪದಿಯನ್ನು ಅವಳು ನಿದ್ರಿಸುತ್ತಿರುವಾಗ ಸದ್ದಿಲ್ಲದೆ ಬೀಳ್ಕೊಳ್ಳುತ್ತಾನೆ! ಎನ್ನಪೋಗಂ–ನಾನು ಹೋಗುವುದನ್ನು, ಇನಿಯಳ್ಗೆ–ಪ್ರಿಯಳಾದ ದ್ರೌಪದಿಗೆ, ಅಱಿಪಿದೊಡೆ–ತಿಳಿಸಿದರೆ, ಮನಂ–ಅವಳ ಮನಸ್ಸು, ಮಱುಕಕ್ಕೆ–ದುಃಖಕ್ಕೆ; ನೀಳ್ದಕಣ್–ನೀಳವಾದ ಕಣ್ಣುಗಳು, ಒಱೆದು–ಸ್ರವಿಸಿ, ಜಿನುಗಿ, ಉಗುವ–ಸುರಿಯುವ, ಅಶ್ರುವಾರಿಗೆ–ಕಣ್ಣೀರಿಗೆ; ತೊದಳ್ನುಡಿ–ತೊದಲ ಮಾತು, ಲಲ್ಲೆಗೆ–ಪ್ರೀತಿಯ ಮಾತಿಗೆ, ಪಕ್ಕುಗೊಟ್ಟು–ಪಕ್ಕಾಗಿ, ಗುರಿಯಾಗಿ, ಕಾಲ್ಗೆಱಗಿರೆ–ದ್ರೌಪದಿಯು ಕಾಲಿಗೆ ಬಿದ್ದು ಕೇಳಿಕೊಳ್ಳುತ್ತಿರಲು, ಪೋಗು–ಪ್ರಯಾಣವು, ಕೆಟ್ಟಪುದು–ಕೆಟ್ಟು ಹೋಗುತ್ತದೆ. ಕಳತ್ರಂ–ಹೆಂಡತಿ, ಮೋಹಮಯಂ–ಮೋಹದಿಂದಾದ, ನಿಗಳಂ–ಸಂಕೋಲೆ, ಎಂದು, ಅಱಿಪದೆ–ಅವಳಿಗೆ ತಿಳಿಸದೆ, ನಟ್ಟಿರುಳ್–ನಡುರಾತ್ರಿ, ಮಱೆದು–ಮೈಮರೆತು ನಿದ್ರಿಸುತ್ತ, ಸಾರ್ಚಿದ–ಹತ್ತಿರವಿಟ್ಟ, ನಲ್ಲಳ ತಳ್ತ ತೋಳ್ಗಳಂ–ಪ್ರಿಯಳ ತಬ್ಬಿದ ತೋಳುಗಳನ್ನು

**ವಚನ:** ಪತ್ತುವಿಡಿಸಿ–ಕೂಡಿದ್ದನ್ನು ಬಿಡಿಸಿಕೊಂಡು, ಶರನಿಧಿಗಳಂ–ಬತ್ತಳಿಕೆ ಗಳನ್ನು; ಬಿಗಿದುಕೊಂಡು–ಬೆನ್ನಿಗೆ ಕಟ್ಟಿಕೊಂಡು; ಪ್ರಥಮ ಚಳಿತ ದಕ್ಷಿಣ ಚರಣ ನಾಗಿ–ಮೊದಲು ಇಟ್ಟ ಬಲಗಾಲಿನ ಹೆಜ್ಜೆಯುಳ್ಳವನಾಗಿ; ಒಳಗನೆ–ಒಳಗಡೆಯೇ,

೧೩. ಆ ಭಗೀರಥಂ–ಪ್ರಸಿದ್ಧನಾದ ಭಗೀರಥನು, ಸಗರರ ಮೇಲೆ–ದಗ್ಧರಾದ ಅರುವತ್ತುಸಾವಿರ ಜನ ಸಗರಪುತ್ರರೂ ತನ್ನ ಅಜ್ಜರೂ ಆದವರ ಸದ್ಗತಿಗಾಗಿ ಅವರ ಮೇಲೆ, ಗಂಗೆಯಂ–ದೇವಗಂಗೆಯನ್ನು, ಅನಾಕುಳದಿಂ–ಕಷ್ಟವಿಲ್ಲದೆ, ತರಲ್–ತರಲು, ತಪೋನಿಯೋಗದೊಳ್–ತಪಸ್ಸಿನ ಕಾರ್ಯದಲ್ಲಿ, ನೆಗಟ್ಟೆ–ತೊಡಗಿಮಾಡಲು, ಅವಂಗೆ–

ಅವನಿಗೆ, ಅಮರಾಪಗೆ–ಅಮರನದಿ ಗಂಗೆ, ಮೆಚ್ಚಿ, ಗಗನದಿಂ–ಆಕಾಶದಿಂದ, ಪಾಯ್ವುದುಂ–ಹರಿದುಬರುತ್ತಲು, ಅಂಧಕದ್ವಿಷ ಜಟಾಟವಿಯೊಳ್–ಅಂಧಕಾಸುರನ ವೈರಿಯಾದ ಶಿವನ ಜಟೆಯೆಂಬ ಅರಣ್ಯದಲ್ಲಿ, ಬಳಿಕ–ಅನಂತರ, ಆದ ಶೈಲದೊಳ್–ಎದುರಾದ ಬೆಟ್ಟದಲ್ಲಿ, ಸೊಗಯಿಸೆ–ಸೊಗಸಾಗಲು, ಪಾಯ್ದುದು–ಹರಿಯಿತು; ಇದುವೆ–ಈ ಬೆಟ್ಟವೆ, ಬಂಧುರ ಕೂಟಕುಳಂ–ಸುಂದರವಾದ ಶಿಖರಗಳ ಸಮೂಹವನ್ನುಳ್ಳ, ಹಿಮಾಚಲ–ಹಿಮವತ್ಪರ್ವತವು.

ಈ ಒಂದು ಪದ್ಯದಲ್ಲಿ ಸಗರ ಚಕ್ರವರ್ತಿಯ ಪುತ್ರರಾದ ಅರುವತ್ತು ಸಾವಿರ ಜನರ ಕಥೆಯನ್ನೂ, ಶಿವ ಗಂಗಾಧರನಾದ ಕಥೆಯನ್ನೂ, ಹಿಮಾಚಲ ಗಂಗಾಲಂಕೃತವಾದುದನ್ನೂ ಪಂಪ ಧ್ವನಿಮಯ ಸಂಕ್ಷಿಪ್ತತೆಯಿಂದ ನಿರೂಪಿಸಿದ್ದಾನೆ; ಕಥೆ ತಿಳಿದವರಿಗೆ ಈ ಪದ್ಯವನ್ನು ಓದುವಾಗ ಅದರ ವಿವರಗಳೆಲ್ಲ ನೆನಪಿಗೆ ಬಂದು ಹರ್ಷಾನುಭವವಾಗುತ್ತದೆ.

೧೪. ಹಿಮಾಚಲದ ವರ್ಣನೆ: ವಿಲಸತ್ ಕಲ್ಲೋಲನಾದಂ–ಪ್ರಕಾಶಮಾನವಾದ ಅಲೆಗಳ ಧ್ವನಿ, ನೆಗಳ್ದಿರೆ–ಉಂಟಾಗಿರಲು, ನಿಜಕೂಟಾಗ್ರದೊಳ್–ತನ್ನ ಶಿಖರಗಳ ತುದಿಯಲ್ಲಿ, ಪಾಯ್ವ–ಹರಿಯುವ, ಗಂಗಾಜಲದಿಂ–ಗಂಗೆಯ ನೀರಿನಿಂದ, ಮೂರ್ಧಾಭಿಷೇಕೋನ್ನತಿ–ತಲೆಯಮೇಲೆ ಆಗುವ ಅಭಿಷೇಕದ ಅತಿಶಯ, ನಿಲೆ–ನೆಲೆಯಾಗಲು; ಚಮರೀ....ಗಳಿಂ: ಚಮರೀ–ಚಮರೀ ಮೃಗಗಳ, ಲೋಲ–ಚಲಿಸುತ್ತಿರುವ, ಲಾಂಗೂಲ–ಬಾಲಗಳ, ಮಾಲಾವಳಿ–ಸಾಲುಗಳ, ವಿಕ್ಷೇಪಂಗಳಿಂ–ಬೀಸುವಿಕೆಗಳಿಂದ, ತಚ್ಚಾಮರರುಹ–ಆ ಚಾಮರದಿಂದ ಆದ, ಮಹಾಶೋಭೆ–ಮಹಾಸೌಂದರ್ಯವು, ಕೈಗಣ್ಮೆ–ಅಧಿಕವಾಗುತ್ತಿರಲು, ಅಖಿಳಧರಾರಮ್ಯ–ಸಮಸ್ತ ಭೂಮಿಗೂ ರಮಣೀಯವಾದ, ಹೈಮಾಚಳೇಂದ್ರಂ–ಹಿಮಾಚಲವೆಂಬ ಪರ್ವತವು, ವಿಶ್ವಾಚಲ ಚಕ್ರೇಶತ್ವಮಂ–ಸಮಸ್ತ ಪರ್ವತಗಳಿಗೆ ಚಕ್ರವರ್ತಿಯಾಗಿರುವ ಪದವಿಯನ್ನು, ತಾಳ್ದಿದುದು–ಧರಿಸಿತು.

೧೫. ಗಂಗಾದ್ವಾರದ ವರ್ಣನೆ: ಚಾರು....ಘೋಷದಿಂ: ಚಾರು–ಮನೋಹರವಾದ, ವಿವಿಧ–ಬಗೆಬಗೆಯಾದ, ಅಗ್ನಿಕಾರ್ಯಪ್ರಾರಂಭ–ಅಗ್ನಿಗೆ ಹವಿಸ್ಸನ್ನು ಅರ್ಪಿಸುವುದೇ ಮುಂತಾದ ಕೆಲಸಗಳ ಆರಂಭದಲ್ಲಿ ಆದ; ಮಹಾದ್ವಿಜನ್ಮ–ಮಹಾಬ್ರಾಹ್ಮಣರ, ಘೋಷದಿಂ–ವೇದಘೋಷಗಳಿಂದ, ಅಂಹೋದೂರಮುಂ–ಪಾಪದಿಂದ ದೂರವಾದದ್ದೂ, ಅವನಿತಳಾಲಂಕಾರಂ–ಭೂಮಿಗೆ ಅಲಂಕಾರವಾದದ್ದೂ, ಸಂಸಾರಸಾರ ಗಂಗಾದ್ವಾರಂ–ಸಂಸಾರದ ಸಾರವಾದ ಗಂಗಾದ್ವಾರವೆಂಬ ಪುಣ್ಯಸ್ಥಳ.

ವಚನ: ಜೇಳ್ವಿಗಳ್ಗೆ – ಯಜ್ಞಗಳಿಗೆ; ಉಪದ್ರವಂಗೆಯ್ದು – ತೊಂದರೆಯನ್ನು ಮಾಡಿದ. ನಿಶಾಟಕೋಟಿಯುಂ–ಕೋಟ್ಯಂತರ ರಾಕ್ಷಸರನ್ನು; ಉಚ್ಚಾಟಿಸಿ–ಓಡಿಸಿ; ಪಡೆಮೆಚ್ಚೆಗಂಡನ–ಅರ್ಜುನನ; ಗಂಡಗಾಡಿಯುಂ–ವೀರಸೌಂದರ್ಯವನ್ನು; ಕಣ್ಬೇಟಂಗೊಂಡು–ನೋಡಿದಕೂಡಲೇ ಪ್ರೀತಿವಶಳಾಗಿ, ಚಕ್ಷುಃಪ್ರೀತಿಯುಂಟಾಗಿ.

೧೬. ಇಂದು ಸೂರ್ಯರಣಮಿಲ್ಲದೆ–ಚಂದ್ರಸೂರ್ಯರು ಸ್ವಲ್ಪವೂ ಇಲ್ಲದೆ, ಆಗಳುಂ–

ಯಾವಾಗಲೂ, ಕಟ್ಟಿಲೆಯೆಂಬುದು–ಕತ್ತಲೆಯೆನ್ನುವುದು ಇಲ್ಲ, ತಡ್ಬೋಗಿ ಪ್ರಣಾಮಣಿ ದ್ಯುತಿಯೆ–ಆ ಹಾವುಗಳ ಹೆಡೆಯಲ್ಲಿರುವ ರತ್ನಗಳ ಕಾಂತಿಯೇ, ಕಟ್ಟಿಲೆಯಂ–ಕತ್ತಲೆಯನ್ನು, ತಲೆದೋಱಲೀಯದು–ತಲೆತೋರಿಸುವುದಕ್ಕೆ ಅವಕಾಶವನ್ನು ಕೊಡುವುದಿಲ್ಲ; ಆ ನಾಗರ–ಆ ಸರ್ಪಗಳ, ನಾಗಕನ್ಯೆಯರ–ನಾಗಸ್ತ್ರೀಯರ, ರೂಪುಗಳ್–ಆಕಾರಗಳು, ಇಟ್ಟಳವಾಗೆ - ಮನೋಹರವಾಗಲು. ಭೋಗಿಗಳ್ – ನಾಗರುಗಳು, ಸರ್ಪಗಳು, ಭೋಗಿಗಳ್–ಸುಖಪಡುವವರು, ಎಂಬ–ಎನ್ನುವ, ಅಲ್ಲಿಯ–ಆ ಸರ್ಪಲೋಕದ, ಭೋಗನಾಯಕರ್–ಪ್ರದೇಶಪಾಲಕರು, ಮಂಡಲಪಾಲಕರು, ಭೋಗಿಗಳ್–ಸರ್ಪಗಳು ಅಥವಾ ಸುಖಪಡುವವರು ಆಗಿದ್ದಾರೆ.

ಇಲ್ಲಿ ಭೋಗ–ಸುಖ, ಐಶ್ವರ್ಯ, ಆಧಿಪತ್ಯ, ಹಾವಿನ ಹೆಡೆ ಎಂಬ ಶಬ್ದದ ಮೇಲೂ, ಭೋಗಿ–ಸುಖಿ, ಸರ್ಪ ಎಂಬ ಶಬ್ದದ ಮೇಲೂ ಪಂಪನು ಆಟವಾಡಿದ್ದಾನೆ; ಸೇನಭೋಗ ಎಂಬಲ್ಲಿನ ಭೋಗ ಪ್ರದೇಶ, ಸ್ಥಳ; ಅದರ ಮೇಲಿನ ಅಧಿಕಾರ, ಎಂಬರ್ಥದಲ್ಲಿರುವುದನ್ನು ಗಮನಿಸಬಹುದು.

**ವಚನ :** ವಿಳಾಸಂಗಳಂ – ಸೊಗಸುಗಳನ್ನು; ನಾಗವಿಮಾನಕ್ಕೆ – ಅಂತಃಪುರ ಸ್ತ್ರೀಯರಿರುವ ಉಪ್ಪರಿಗೆಗೆ; ಮನಂಬುಗಿಸುವಂತೆ–ಮನಸ್ಸಿನಲ್ಲಿ ಹೊಗಿಸಿಕೊಳ್ಳುವ ಹಾಗೆ; ಮಜ್ಜನಂಬುಗಿಸಿ–ಸ್ನಾನವನ್ನು ಮಾಡಿಸಿ; ರಸರಸಾಯನಂಗಳಂ–ರುಚಿಯುಕ್ತವಾದ ರಸಾಯನಗಳನ್ನು; ಊಡುವಂತೆ–ತಿನ್ನಿಸುವಹಾಗೆ;

**೧೭.** ನಾಗಕನ್ಯೆ ಅರ್ಜುನನನ್ನು ಮೋಹಿಸಿದ್ದು : ನಾಗವಿಭೂಷಣ ಪ್ರತತಿ–ನಾಗರು ಧರಿಸುವ ಆಭರಣಗಳ ಸಮೂಹ, ನಾಗರಖಂಡಂ–ನಾಗರ ಖಂಡವೆಂಬ ಪ್ರದೇಶ, ಅಪೂರ್ವಮಪ್ಪ–ಅಪರೂಪವಾದ, ಪುನ್ನಾಗದ–ಪುನ್ನಾಗವೆಂಬ ಪುಷ್ಪಗಳ, ಬಾಸಿಗಂ–ಹಾರಗಳು; ಬಗೆದ–ಬಯಸಿದ, ಬಣ್ಣದ, ಪುಟ್ಟಿಗೆ–ವಸ್ತ್ರಗಳು, ನಾಗಜಾಲಂ-ನಾಗವಲ್ಲಿ ಎಂದರೆ ವೀಳ್ಯದೆಲೆಯ ಸಮೂಹ, ಎಂದು–ಎಂಬುದಾಗಿ, ಆಗಡೆ–ಆಗಲೇ (ತೋರಿಸುತ್ತ), ನಾಗಲೋಕ ವಿಭವಂಗಳೊಳ್ ಆಟಿಸಿ–ನಾಗಲೋಕದ ವೈಭವಗಳಲ್ಲಿ, ಭೋಗಗಳಲ್ಲಿ ಮುಳುಗಿಸಿ, ನಾಗಶಯ್ಯೆಯೊಳ್–ನಾಗರ ಹಾಸಿಗೆಯಲ್ಲಿ, ನಾಗಿಣಿ–ನಾಗಸ್ತ್ರೀ, ನಾಗಬಂಧದೊಳೆ–ನಾಗಬಂಧವೆಂಬ ಒಂದು ಪಟ್ಟಿನಲ್ಲಿ, ತಳ್ತು–ಸೇರಿ, ಗುಣಾರ್ಣವನಂ–ಅರ್ಜುನನನ್ನು, ಮರುಳ್ಚಿದಳ್–ಮರುಳುಮಾಡಿದಳು. ಇಲ್ಲಿ ಹಲವು ಎಡೆ ಬರುವ ನಾಗಶಬ್ದಕ್ಕೆ ಹಲವು ಅರ್ಥಗಳಿವೆ; ನಾಗ ಎಂದರೆ ಸೀಸ ಅಥವಾ ತವರ ಎಂಬರ್ಥವಿದೆ; ನಾಗವಿಭೂಷಣ ಎಂದರೆ ಸೀಸದ ಅಥವಾ ತವರದ ಒಡವೆ ಎಂದಾಗುತ್ತದೆ; ಆದರೆ ಅದರ ಔಚಿತ್ಯವೇನು ಇಲ್ಲಿ?, ನಾಗ–ಹಸಿಶುಂಠಿ; ನಾಗರಖಂಡ ಎಂದರೆ ಹಸಿಯದಾದ ಶುಂಠಿಯ ಚೂರು ಎಂದು ಹೇಳೋಣವೆಂದರೆ ಅದರ ಔಚಿತ್ಯ ಇಲ್ಲಿ ಏನು? ಮತ್ತು ನಾಗರ ಎಂಬಲ್ಲಿನ ಅರ್ ಪ್ರತ್ಯಯ, ಅ ಎಂಬ ಷಷ್ಠೀ ಪ್ರತ್ಯಯ–ಇವು ಏಕೆ? ನಾಗಖಂಡ ಎಂದೇ ಸಾಕಲ್ಲವೆ? ಬಾಸಿಗ=(ತ) ವಾಶಿಕ್ಕೈ, ಹಾರ; ನಾಗಜಾಲಂ–ನಾಗಗಳ ಬಲೆ ಅಥವಾ ಸಮೂಹ ಎಂದರೆ ಏನರ್ಥ? ನಾಗಬಂಧ–ಹಾವುಗಳು ಹೆಣೆದು

ಕೊಂಡಿರುವ ಒಂದು ಶಿಲ್ಪರಚನೆಯನ್ನು ಕೆಲವು ದೇವಾಲಯಗಳಲ್ಲಿ ನೋಡಬಹುದು, ಇದು ನಾಗಬಂಧ.

**ವಚನ :** ಮುದ್ದುವೆರಸಿದ – ಮುದ್ದಿನಿಂದ ಕೂಡಿದ ; ಬೞಲ್ಮುಡಿಗಂ–ಸೋಲುತ್ತಿರುವ ತುರುಬಿಗೂ ; ಇಂಬುವೆರಸಿದ–ರುಚಿಯಿಂದ ಕೂಡಿದ, ಮಧುರವಾದ, ಪುರುಡುವೆರಸಿದ–ಸ್ಪರ್ಧೆಯಿಂದ ಕೂಡಿದ ; ಕದ್ಪವಣಿ (?) ವೆರಸಿದ–ಕದ್ದವಣಿಯಿಂದ ಕೂಡಿದ, ಸೋಂಕಿಂಗಂ–ಸ್ಪರ್ಶಕ್ಕೂ ; ಗಾಡಿವೆರಸಿದ–ಸೌಂದರ್ಯದಿಂದ ಕೂಡಿದ ; ಹಾವಕ್ಕಂ–ಶೃಂಗಾರ ಚೇಷ್ಟೆಗಳಿಗೂ ; ನಾಣ್ವೆರಸಿದ – ಲಜ್ಜೆಯಿಂದ ಕೂಡಿದ ; ಒಲಪ್ಪಿಂ–ಪ್ರೀತಿಸಿಯೂ ; ಇಂದ್ರಾಣಿಗಂ–ಶಚೀದೇವಿಗೂ. ಇಲ್ಲಿ ಬರುವ ಕದ್ದವಣಿ ಎಂಬ ಶಬ್ದದ ಪಾಠ ಚಿಂತನೀಯ ; " ಎನೆಯಿಕ್ಕಲ್ ಮಱೆಯಿಸುವಂತೋರೊರ್ವರನೊಡಲೊಳಡಸಿಕೊಳಲ್ ಕಡಂಗಿಸುವ ಕಡ್ಡವಣೆಯುಂ " ಎಂದು ' ಲೀಲಾವತಿ 'ಯಲ್ಲಿ ಪ್ರಯೋಗವಿದೆ (೧೦–೪೪೧) ; ಇನ್ನೊಂದು ಓಲೆಯ ಪ್ರತಿಯಲ್ಲೂ ಇದೇ ಪಾಠವಿದೆ. ಆದ್ದರಿಂದ ' ಕಡ್ಡವಣೆ ' ಎಂಬ ಪಾಠವನ್ನು ಗ್ರಹಿಸಬಹುದು. ಇದರ ಅರ್ಥವೇನು ? (ಪಂ.ಭಾ.) ಕೋಶಕಾರರು ಇದಕ್ಕೆ ' ರೋಮಾಂಚ ' ಎಂದು ಅರ್ಥಹೇಳಿ ಪ್ರಶ್ನೆಚಿಹ್ನೆಯನ್ನು ಹಾಕಿದ್ದಾರೆ. (ಸಂ) ಕರ್ಷಣ > (ಪ್ರಾ) ಕಡ್ಡಣ = ಎಳೆತ, ಸೆಳೆತ. ಪ್ರಕೃತ ' ಕಡ್ಡವಣೆ ' ಈ ಶಬ್ದಕ್ಕೆ ಸಂಬಂಧಿಸಿರಬಹುದು. ಕಡ್ಡವಣೆವೆರಸಿದ ಎಂದರೆ ಹತ್ತಿರಕ್ಕೆ ಎಳೆದುಕೊಳ್ಳುವುದರಿಂದ ಕೂಡಿದ ಎಂದಾಗಬಹುದು ; " ಬರಸೆಳೆದು ಬಿಗಿಯಪ್ಪಿ " ಎಂಬುದನ್ನು ಹೋಲಿಸಿನೋಡಿ.

**೧೮.** ನಾಗಕನ್ಯೆಗೆ ಮಗಹುಟ್ಟಿದ್ದು : ಅಂತಾಫಣಿಕಾಂತೆಗಂ–ಹಾಗೆ ಆ ನಾಗಸ್ತ್ರೀಗೂ, ಅರಿಕಾಂತಾಳಿಕ ಫಳಕ ತಿಳಕಹರಂ–ಶತ್ರುಕಾಂತೆಯರ ಹಣೆಯೆಂಬ ಹಲಗೆಯ ಮೇಲಿರುವ ತಿಲಕವನ್ನು ಹೋಗಲಾಡಿಸುವವನಾದ, ಹರಿಗಂಗಂ–ಅರಿಕೇಸರಿಗೂ, ಅಧಿಕತೇಜೋವಂತಂ–ಅತಿಶಯ ತೇಜಸ್ಸಿನಿಂದ ಕೂಡಿದ, ಇಂದುಮಂಡಳಕಾಂತಂ–ಚಂದ್ರಮಂಡಲದಂತೆ ಸುಂದರನಾಗಿರುವ, ಇಳಾವಂತಂ–ಇಳಾವಂತನೆಂಬ, ತನಯಂ–ಮಗನು.

**ವಚನ :** ಪುಟ್ಟುವುದುಂ-ಹುಟ್ಟುತ್ತಲು ; ನಿಕಟವರ್ತಿಗಳಪ್ಪ-ಸಮೀಪದಲ್ಲಿರುವ; ಆತ್ಮೀಯಶಾಸನಾಯತ್ತಂ ಮಾಡುತ್ತಂ–ತನ್ನ ಆಜ್ಞೆಗೆ ಅಧೀನವಾಗಿಸುತ್ತ ; ಇಂದು.... ನ್ವಿತಮುಂ : ಇಂದು ಬಿಂಬ – ಚಂದ್ರಬಿಂಬದಿಂದ, ವಿಗಳತ್ – ಸುರಿಯುತ್ತಿರುವ, ಅಮೃತಬಿಂದು–ಅಮೃತದ ಹನಿಗಳಿಂದ ಆದ, ದುರ್ದಿನ–ದುರ್ದಿನದಿಂದ, ಆರ್ದ್ರ–ಒದ್ದೆಯಾದ, ಚಂದನ–ಶ್ರೀಗಂಧದಿಂದ, ಅನ್ವಿತಮುಂ–ಕೂಡಿರುವುದೂ ; ಅಶಿಶಿರ.... ಪಲ್ಲವಮುಂ : ಅಶಿಶಿರಕರ–ಸೂರ್ಯನ, ತುರಗ–ಕುದುರೆಗಳ, ಖುರಶಿಖರ–ಗೊರಸಿನ ತುದಿಯಿಂದ, ನಿಖಂಡಿತ–ಕತ್ತರಿಸಲ್ಪಟ್ಟ, ಲವಂಗ ಪಲ್ಲವಮುಂ–ಲವಂಗದ ಬಳ್ಳಿಯ ಚಿಗುರನ್ನುಳ್ಳ ; ಐರಾವತ ಕರಲೂನ–ಐರಾವತದ ಸೊಂಡಲಿನಿಂದ ಕತ್ತರಿಸಲ್ಪಟ್ಟ, ಸಲ್ಲಕೀಶಬಳಮುಂ–ಆನೆಬೇಲದಿಂದ ವಿವಿಧ ವರ್ಣಗಳುಳ್ಳದ್ದೂ ಆಗಿರುವ ; ಉದಯ

ಗಿರಿಯಿಂ – ಉದಯಪರ್ವತದಿಂದ ; ಏಸಾಡುತ್ತಂ – ಬಾಣಪ್ರಯೋಗಮಾಡುತ್ತ ; ಚಪಳ.... ಭವನಮುಂ : ಚಪಳ–ಚಪಲತೆಯಿಂದ ಕೂಡಿದ, ಕಪಿ ಬಳ–ಕಪಿಗಳ ಸಮೂಹದಿಂದ, ವಿಲುಪ್ತ–ಹಾಳುಮಾಡಲ್ಪಟ್ಟ, ವಿಗಳಿತ–ಶಿಥಿಲವಾಗಿರುವ, ಲತಾ ಭವನಮುಂ–ಬಳ್ಳಿಯ ಮನೆಗಳೂ, ಅಧಿಕ....ಬಂಧುರ ; ಅಧಿಕಬಳ–ಅಧಿಕ ಬಲಶಾಲಿ ಯಾದ, ನಳ–ನಳನ, ಕರತಳಗಳಿತ–ಅಂಗೈಯಿಂದ ಜಾರಿದ, ಕುಳಶೈಳ ಸಹಸ್ರಸಂತಾನ– ಸಾವಿರಾರು ಕುಲಪರ್ವತಗಳ ಸಮೂಹದಿಂದ, ಕಳಿತ–ಸೇರಿದ, ಸೇತು–ಸೇತುವೆಯಿಂದ, ಬಂಧುರಮುಮಪ್ಪ–ರಮಣೀಯವಾಗಿರುವ ; ತಡಿವಿಡಿದು–ದಡವನ್ನು ಅನುಸರಿಸಿ ;

೧೯. ರಾಮಸೇತುವನ್ನು ನೋಡಿ ರಾಮಾಯಣದ ಕಥೆಯ ನೆನಪು : ಅಂದು– ಆ ಕಾಲದಲ್ಲಿ, ಇದು–ಈಸ್ಥಳ, ಸೀತೆಯೊಳ್ ನೆರೆದು ನಿಂದೆಡೆ–ಸೀತೆಯೊಡನೆ ಜೊತೆಯಾಗಿ ನಿಂತ ಸ್ಥಳ ; ತತ್ಖರದೂಷಣರ್ಕಳಂ–ಆ ಖರದೂಷಣರನ್ನು, ಕೊಂದ, ಎಡೆ–ಸ್ಥಳವಿದು ; ಪೋಗಿ–ಬೆನ್ನಟ್ಟಿಹೋಗಿ, ಪೊಮ್ಮರೆಯಂ–ಚಿನ್ನದ ಜಿಂಕೆಯನ್ನು, ಎಚ್ಚ–ಎಡೆ ತಪ್ಪದೆ; ಇದು ಅಪ್ಪುದು–ಹೊಡೆದಜಾಗ ತಪ್ಪದೆ ಇದು ಆಗಿದೆ ; ಎಂದು, ಕಾಯ್ಪಿಂ–ಕೋಪದಿಂದ, ತ್ರಿದಶಕಂಟಕನಂ – ದೇವತೆಗಳಿಗೆ ಕಂಟಕನಾಗಿರುವ, ದಶಕಂಠನಂ – ರಾವಣನನ್ನು, ಕೊಲಲೆಂದು–ಕೊಲ್ಲುವುದಕ್ಕಾಗಿ ಎಂದು, ರಾಮನಾದ–ಶ್ರೀರಾಮನಾಗಿ ಅವತಾರ ಮಾಡಿದ, ಅಂದಿನ ಸಾಹಸಂ–ಆ ಕಾಲದ ಪರಾಕ್ರಮ, ಅಕಳಂಕರಾಮನಾ–ಅಕಳಂಕ ರಾಮನೆಂಬ ಬಿರುದುಳ್ಳ ಅರಿಕೇಸರಿಯ (ಅರ್ಜುನ), ಮನದೊಳ್–ಮನಸ್ಸಿನಲ್ಲಿ, ಆವರಿಸಿತ್ತು–ವ್ಯಾಪಿಸಿತು, ತುಂಬಿಕೊಂಡಿತು.

**ವಚನ** : ಶ್ರೀರಾಮನೇ, ಅರಿಕೇಸರಿಯಾಗಿ ಹುಟ್ಟಿರುವನೆಂದು ಕವಿಯ ಭಾವನೆ. ರಾಮಜನ್ಮೋತ್ಪತ್ತಿಯೊಳಾದ–ರಾಮನ ಜನ್ಮದಲ್ಲಿ ಆದ ;

೨೦. ಅಗಸ್ತ್ಯ ಋಷಿಯ ಪ್ರಭಾವವರ್ಣನೆ : ತನ್ನಾಜ್ಞೆಯಿಂದೆ–ತನ್ನ ಅಪ್ಪಣೆಯಿಂದ, ವಿಂಧ್ಯಗಿರಿಯುಂ–ವಿಂಧ್ಯಪರ್ವತವೂ, ಬಳೆಯಲ್ಕೆ–ಬೆಳೆಯುವುದಕ್ಕೆ, ಅಣ್ಮಿದುದಿಲ್ಲ–ಪ್ರಯತ್ನಿಸಲಿಲ್ಲ ; ಅಂಬುಧಿ–ಸಮುದ್ರ, ಒರ್ಮೆ–ಒಂದುಸಲ, ಮುಕ್ಕುಳಿ ಸಲ್ಕೆ–ಬಾಯಿಮುಕ್ಕುಳಿಸುವುದಕ್ಕೆ, ಸಾಲ್ದುದಿಲ್ಲ–ಸಾಕಾಗಲಿಲ್ಲ ; ಜಗಮಂ–ಲೋಕ ವನ್ನು, ತಿಂದಿರ್ದ–ನುಂಗಿದ್ದ, ವಾತಾಪಿ–ವಾತಾಪಿ ಎಂಬ ರಾಕ್ಷಸ, ಪೊಕ್ಕು–ಹೊಟ್ಟೆ ಯೊಳಗೆ ಹೊಕ್ಕು, ಅಳುರ್ವ–ಹರಡುವ, ಆತ್ಮೋದರ ವಹ್ನಿಯಿಂ–ತನ್ನ ಜಠರಾಗ್ನಿ ಯಿಂದ, ಪೊಱಮಡಲ್–ಹೊರಕ್ಕೆ ಬರಲು, ತಾಂ–ತಾನು, ಆರ್ತನಿಲ್ಲ–ಸಮರ್ಥ ನಾಗಲಿಲ್ಲ ; ಭಾರದಿಂ–ತನ್ನ ಭಾರದಿಂದ, ಎಳೆ–ಭೂಮಿ, ಅೞ್ದುದಿಲ್ಲ–ಮುಳುಗಲಿಲ್ಲ, ಬಡಗು–ಉತ್ತರಕ್ಕೆ, ತೇಂಕಿರ್ದುದು–ತೇಲಿಕೊಂಡು ಹೋಯಿತು, ಎನಲ್–ಎಂದು ಹೇಳಲು, ಅಗಸ್ತ್ಯಂಬರಂ–ಅಗಸ್ತ್ಯನವರೆಗೂ ಬರುವ, ಪೆಂಪು–ಮಹಿಮೆ, ಆರ್ಗೆ– ಯಾರಿಗೆ ? ಯಾರಿಗೂ ಇಲ್ಲ.

**ವಚನ** : ಉಗ್ರಗ್ರಾಹ ಸ್ವರೂಪದೊಳಿರ್ದ – ಭಯಂಕರವಾದ ಮೊಸಳೆಯ ಆಕಾರದಲ್ಲಿದ್ದ ; ಅಚ್ಚರಸೆಯರಂ–ಅಪ್ಸರ ಸ್ತ್ರೀಯರನ್ನು ; ವಿಶಾಪೆಯರ್ ಮಾಡಿ– ಶಾಪಮುಕ್ತರನ್ನಾಗಿ ಮಾಡಿ.

೨೧. ಮಲಯಪರ್ವತದ ವರ್ಣನೆ: ಇದು, ಮಲಯಾಚಲಂ-ಮಲಯ ಪರ್ವತ! ಮಳಯಜಂ-ಮಲಯಪರ್ವತದಲ್ಲಿ ಹುಟ್ಟಿದ್ದು, ಮಳಯಾನಿಳಂ-ಮಲಯ ಮಾರುತ, ಎಂದು, ಸಿರಿಕಂಡಮುಂ-ಶ್ರೀಗಂಧವೂ, ಪಡೆದು-ಸಲಿದು, ಖೀಡುವ-ಬೀಸುವ, ಗಾಳಿಯುಂ-ಗಾಳಿಯೂ, ಪೆಂಪುವೆತ್ತುದು-ಹಿರಿಮೆಯನ್ನು ಪಡೆದುವು; ಪೊಸಸುಗ್ಗಿ-ಹೊಸದಾದ ಸುಗ್ಗಿ, ವಸಂತ, ಇಲ್ಲಿ ಪುಟ್ಟಿ-ಇಲ್ಲಿ ಹುಟ್ಟಿ, ಪೋಗದು-ಎಲ್ಲಿಯೂ ಹೋಗುವುದಿಲ್ಲ! ಇಲ್ಲಿಯ ಕೋಗಿಲೆ-ಇಲ್ಲಿನ ಕೋಗಿಲೆಗಳು, ಮೂಗುವಡದು-ಮೂಕತೆಯನ್ನು ಪಡೆಯುವುದಿಲ್ಲ, ಎಂದರೆ ಸದಾ ಕೂಗುತ್ತಿರುತ್ತವೆ! ಬಂದ ಮಾವು ಬೀಯದು-ಫಲ ಬಿಟ್ಟ ಮಾವು ಮುಗಿದುಹೋಗದು! ಇಲ್ಲಿಯ ನಂದನಂಗಳೊಳ್-ಇಲ್ಲಿಯ ನಂದನ ವನಗಳಲ್ಲಿ, ಎಲ್ಲಿಯುಂ-ಎಲ್ಲೆಲ್ಲೂ, ಕುಸುಮಾಸ್ತ್ರನ-ಮನ್ಮಥನ, ಆಜ್ಞೆ-ಅಪ್ಪಣೆ, ತವದು-ನಷ್ಟವಾಗದು!

೨೨. ಇದಱ-ಈ ಪರ್ವತದ, ಅಭ್ರಂಕಷಕೂಟ ಕೋಟಿಗಳೊಳ್-ಆಕಾಶವನ್ನು ಮುಟ್ಟುವ ಅನೇಕ ಶಿಖರಗಳಲ್ಲಿ, ಇರ್ದ-ಇದ್ದ, ಅಂಭೋಜ ಷಂಡಂಗಳಂ-ತಾವರೆಗಳ ಸಮೂಹಗಳನ್ನು, ಉಷ್ಣಾಂಶುವಿನ-ಸೂರ್ಯನ, ಊರ್ಧ್ವಗಾಂಶುನಿವಹಂ-ಮೇಲಕ್ಕೆ ಹೋಗುವ ಕಿರಣಗಳ ಸಮೂಹ, ಪುದಿದು-ವ್ಯಾಪಿಸಿ, ಮೆಯ್ಯಿಟ್ಟು-ಮೈಯನ್ನು ಇಟ್ಟು, ತಂಗಿ; ಅಲರ್ಚುತ್ತುಂ-ಅರಳಿಸುತ್ತ, ಇರ್ಪುದು-ಇದೆ; ಮಾದ್ಯದ್ಗ....ದದಿಂ: ಮಾದ್ಯತ್-ಮದಿಸಿದ, ಗಜ-ಆನೆಗಳ, ಗಂಡ-ಗಂಡಸ್ಥಲವೆಂಬ, ಭಿತ್ತಿ-ಗೋಡೆಯ, ಕಷಣ-ಉಜ್ಜುವಿಕೆಯಿಂದಾದ, ಪ್ರೋದ್ಭೇದದಿಂ-ಮುರಿತಗಳಿಂದ, ಚಂದನರಸಂ-ಶ್ರೀಗಂಧದ ಮರದ ರಸವು, ಸಾರ್ದುಬಂದು-ಸಮೀಪಿಸಿ, ಇದಿರೊಳ್-ಎದುರುಗಡೆಯಲ್ಲಿ, ಕೆಂಬೊನ್ನಟಂಕಂಗಳೊಳ್-ಕೆಂಪು ಚಿನ್ನವನ್ನುಳ್ಳ, ಲೋಹವನ್ನುಳ್ಳ, ತಪ್ಪಲಿನ ಇಳಿಜಾರು ಪ್ರದೇಶಗಳಲ್ಲಿ, ಇಲ್ಲಿ, ಕೂಡುವುದು-ಸಂಗಮವಾಗುತ್ತದೆ.

೨೩. ಏಳಾಲತಾಳೀ ಸ್ಥಗಿತಂಗಳ್-ಏಲಕ್ಕಿ ಬಳ್ಳಿಗಳ ಸಮೂಹದಿಂದ ತೆತ್ತಿಸಿದ, ನೆಗ[illegible]ದ-ಪ್ರಸಿದ್ಧವಾದ, ಈ ಕರ್ಪೂರ ಕಾಳಾಗರು ಮಲಯ ಮಹೀಜಂಗಳ್-ಈ ಕರ್ಪೂರ ಕರಿಅಗಿಲು ಗಂಧದ ಮರಗಳು, ಕಣ್ಗೆ ವಂದಿರ್ದುವಂ-ಕಣ್ಣಿಗೆ ಸೊಗಸಾಗಿರುವವನ್ನು, ಇವನೆ ವಲಂ-ಇವನ್ನೇ ಅಲ್ಲವೆ, ಅಂಗಜಂ-ಮನ್ಮಥನು, ಕೊಂಬುಗೊಂಡು-ಸಂಕೇತ ಸ್ಥಾನವನ್ನಾಗಿ ಮಾಡಿಕೊಂಡು, ಮೆಲ್ಲಗೆ-ಮೃದುವಾಗಿ, ಪಾರ್ದು-ನೋಡಿ, ಆರ್ದು-ಗರ್ಜಿಸಿ, ಆಗಳುಂ-ಯಾವಾಗಲೂ, ಕಿನ್ನರ ಯುವತಿ ಮೃಗೀವ್ರಾತಮಂ-ಕಿನ್ನರ ಸ್ತ್ರೀಯರೆಂಬ ಹೆಣ್ಣು ಜಿಂಕೆಗಳ ಸಮೂಹವನ್ನು, ತನ್ನ, ನಲ್ಲಂಬುಗಳಿಂದೆಚ್ಚೆಚ್ಚು-ಒಳ್ಳೆಯ ಬಾಣಗಳಿಂದ ಹೊಡೆದು ಹೊಡೆದು, ಮೆಚ್ಚಂ-ಅವರ ಇಷ್ಟಾರ್ಥವನ್ನು, ಸಲಿಸುವಂ – ಸಲ್ಲಿಸುತ್ತಾನೆ; ಇಂತು-ಹೀಗೆ, ಅದಱಿಂ – ಆ ಕಾರಣದಿಂದ, ಈ ನಗೇಂದ್ರಂ-ಈ ಪರ್ವತರಾಜ, ರಮ್ಯಂ-ರಮಣೀಯವಾದದ್ದು.

೨೪. ಸಮುದ್ರದರ್ಶನ: ಇದಿರೊಳ್-ಎದುರಿನಲ್ಲಿ, ನಿಂದೊಡೆ-ನಿಂತುಕೊಂಡರೆ, ವಜ್ರಿ-ಇಂದ್ರನು, ಸೈರಿಸಂ-ಸಹಿಸನು, ನೀಂ-ನೀನು, ಇರಲ್ವೇಡ-ಇರಬೇಡ, ಎಮ್ಮೊಳ್-

ನೆಮ್ಮಲ್ಲಿ, ಒಳ್ವೊಕ್ಕು–ಒಳಗೆ ಹೊಕ್ಕು, ನಿಲ್ವುದು–ನಿಲ್ಲುವುದು, ಎಂದು, ಕಡಂಗಿ–ಉತ್ಸಾಹಿಸಿ, ಕಾಲ್ವಿಡಿವವೊಲ್–ಕಾಲನ್ನು ಹಿಡಿಯುವಹಾಗೆ, ತನ್ನೂರ್ಮಿಗಳ್–ಸಮುದ್ರದ ಅಲೆಗಳು, ಬಂದುವು–ದಡದಲ್ಲಿರುವ ಬೆಟ್ಟಗಳ ಬಳಿಗೆ ಬಂದುವು ; ಅಂದು–ಆಗ, ಇದಱಿಂ–ಇದರಿಂದ ಎಂದರೆ ಸಮುದ್ರದಿಂದ, ಪೋದ–ಹೋದ, ತಪೋಪಳಂ–? ತಪಸ್ಸೆಂಬ ಕಲ್ಲು (?), ಗಗನಮಂ–ಆಕಾಶವನ್ನು, ಮಾರ್ಪೊಯ್ಯೆ–ಎದುರಾಗಿ ಹೊಡೆಯಲು, ಉತ್ಪ್ರೇಂಖದಸಂಖ್ಯಶಂಖಧವಳಂ–ಮೇಲೆ ತೇಲಾಡುತ್ತಿರುವ ಲೆಕ್ಕವಿಲ್ಲದಷ್ಟು ಶಂಖಗಳಿಂದ ಬೆಳ್ಳಗಾಗಿರುವ, ಗಂಭೀರ ನೀರಾಕರಂ–ಗಂಭೀರವಾದ ಸಮುದ್ರವು, ಕಣ್ಗೊಪ್ಪಿ ತೋರ್ಪುದು–ಕಣ್ಣಿಗೆ ಸೊಗಸಾಗಿ ತೋರುವುದು ; ಈ ಪದ್ಯದ ಮೂರನೆಯ ಪಾದದ ಪೂರ್ವಭಾಗ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ ; ಏನಾದರೂ ಪಾಠ ದೋಷ ಅಲ್ಲಿರಬಹುದು.

**೨೫.** ಚಳದ . . . ಜಳಮಂ : ಚಳತ್–ಚಲಿಸುತ್ತಿರುವ, ಅನಿಳ–ಗಾಳಿಯಿಂದ, ಆಹತ–ಹೊಡೆಯಲ್ಪಟ್ಟ, ಕ್ಷುಭಿತ–ಕದಡಿದ, ಭಂಗುರ–ಸ್ಥಿರವಲ್ಲದ, ತುಂಗ–ಎತ್ತರವಾದ, ತರಂಗ ಮಾಳಿಕಾ–ಅಲೆಗಳ ಸಾಲುಗಳ, ವಳನ–ಹೊರಳುವಿಕೆಯಿಂದ, ಸಮುಚ್ಛಳತ್–ಮೇಲಕ್ಕೆ ಚಿಮ್ಮುವ, ಮಣಿಗಣ–ರತ್ನರಾಶಿಗಳಿಂದ, ಆತ್ತ–ಪಡೆದ, ಮರೀಚಿ–ಕಿರಣಗಳೆಂಬ, ಲತಾ ಪ್ರತಾನ ಸಂವಳಯಿತ–ಬಳ್ಳಿಗಳ ಗುಂಪಿನಿಂದ ಬಳಸಲ್ಪಟ್ಟ, ವಿದ್ರುಮ-ಹವಳಗಳ, ದ್ರುಮ-ಮರಗಳ, ವಿಳಾಸ-ಸೊಗಸಿನಿಂದ, ವಿಶೇಷಿತ-ವಿಶಿಷ್ಟವಾಗಿ ಮಾಡಲ್ಪಟ್ಟ, ಬಾಡಬಾನಳ–ಕಡಲಗಿಚ್ಚಿನಿಂದ, ಆವಿಳ–ಬಗ್ಗಡವಾದ, ಜಳಮಂ–ನೀರನ್ನುಳ್ಳ, ಅರ್ಣವಮಂ–ಸಮುದ್ರವನ್ನು, ಗುಣಾರ್ಣವಂ–ಅರ್ಜುನನು, ಮನಂಬಯಸಿ–ಮನಸ್ಸಿನಲ್ಲಿ ಇಷ್ಟಪಟ್ಟು, ನೋಡಿದಂ–ನೋಡಿದನು.

**ವಚನ :** ಅದಭ್ರಾಭ್ರ ವಿಭ್ರಮ ಭ್ರಾಜಿತೋತ್ತುಂಗ ಶೈಲಮಂ : ಅದಭ್ರ–ಅತಿಶಯವಾದ, ಅಭ್ರ-ಮೋಡಗಳ, ವಿಭ್ರಮ-ವಿಲಾಸದಿಂದ, ಭ್ರಾಜಿತ-ಪ್ರಕಾಶಮಾನವಾದ, ಉತ್ತುಂಗ–ಎತ್ತರವಾದ, ಶೈಲಮಂ–ಪರ್ವತವನ್ನು.

**೨೬.** ವಿನತಾಪುತ್ರನ–ವಿನತೆಯ ಮಗನಾದ ಗರುಡನ, ವಜ್ರತುಂಡ ಹತಿಗಂ–ವಜ್ರದಂತಿರುವ ಕೊಕ್ಕಿನಏಟಿಗೂ, ಮೆಯ್ಯಾಂತು-ಮೈಯನ್ನುಒಡ್ಡಿ, ಕಂಡಂಗಳುಳ್ಳಿನಂ-ಮಾಂಸಖಂಡಗಳಿರುತ್ತಿರಲು, ಅಂಗಂಗಳ–ಅವಯವಗಳನ್ನು, ಒಡ್ಡಿಯೊಡ್ಡಿ–ಚಾಚಿ ಚಾಚಿ, ತನುವಂ–ದೇಹವನ್ನು, ಕೊಟ್ಟು, ಅಂತು–ಹಾಗೆ, ಜೀಮೂತವಾಹನನೆಂಬ–ಜೀಮೂತವಾಹನ ಎನ್ನುವ, ಅಂಕದ ಚಾಗಿ– ಪ್ರಸಿದ್ಧನಾದ ದಾನಿ, ನಿಚ್ಚಟಿಕೆಯಿಂದೆ–ಮನದ ನಿಶ್ಚಲತ್ವದಿಂದ, ಈ ಶೈಲದೊಳ್–ಈ ಬೆಟ್ಟದಲ್ಲಿ, ಶಂಖಚೂಡನಂ–ಶಂಖಚೂಡನೆಂಬವನನ್ನು, ಆನಂದದೆ- ಸಂತೋಷದಿಂದ, ಕಾದ-ರಕ್ಷಿಸಿದ, ಪೆಂಪು–ಹಿರಿಮೆಯು, ಎಸೆಯೆ–ಪ್ರಕಾಶಿಸಲು, ನಾಗಾನಂದಮಂ–ನಾಗರಿಗೆ, ಸರ್ಪಗಳಿಗೆ ಆನಂದವನ್ನು, ಮಾಡಿದಂ-ಮಾಡಿದನು. ಜೀಮೂತವಾಹನನ ಕಥೆ ಹರ್ಷಕವಿ ರಚಿತವಾದ ನಾಗಾನಂದ ನಾಟಕದಲ್ಲಿ ದೊರೆಯುತ್ತದೆ.

**ವಚನ :** ಅಭಿನವ ಜೀಮೂತವಾಹನಂ-ನೂತನ ಜೀಮೂತವಾಹನ, ಅರ್ಜುನ= ಅರಿಕೇಸರಿ ; ಅವನಿ–ಭೂಮಿ, ಪವನ–ವಾಯು, ಗಗನ-ಆಕಾಶ, ದಹನ-ಅಗ್ನಿ, ತರಣಿ- ಸೂರ್ಯ, ಸಲಿಲ–ನೀರು, ತುಹಿನಕರ–ಚಂದ್ರ, ಯಜಮಾನ-ಎಂಬ ಎಂಟು ಮೂರ್ತಿ ಗಳನ್ನುಳ್ಳ ಶಿವನನ್ನು ; ತ್ರಿಲೋಕೈಕ ಸಂಗೀತ ಕೀರ್ತಿಯಂ–ಮೂರು ಲೋಕಗಳಿಂದಲೂ ಹಾಡಲ್ಪಟ್ಟ ಕೀರ್ತಿಯನ್ನುಳ್ಳ ಒಬ್ಬನೇ ಒಬ್ಬನನ್ನು (ಶಿವನನ್ನು).

**೨೭.** ಯಸ್ಯ-ಯಾರ, ಪ್ರಚಂಡ-ಅತಿ ವೇಗವಾದ, ಲಯ-ತಾಳಗತಿಗಳನ್ನುಳ್ಳ, ತಾಂಡವ–ತಾಂಡವನೃತ್ಯದಿಂದ, ಕ್ಷುಭಿತಯಾ–ಕದಡಲ್ಪಟ್ಟಳೋ, ಸದಿಗ್ವಳಯಯಾ– ದಿಙ್ಮಂಡಲಗಳಿಂದ ಕೂಡಿದ, ಸಗಿರಿ–ಪರ್ವತ ಸಮೇತವಾದ, ಮತ್ತು ಸಾಗರದ್ವೀಪದೂ- ಸಮುದ್ರಗಳಿಂದಲೂ ದ್ವೀಪಗಳಿಂದಲೂ ಕೂಡಿದ, ಭುವಾ–ಭೂಮಿಗೆ, ಕುಲಾಲ- ಕುಂಬಾರನ, ಕರ–ಕೈಯಿಂದ, ನಿರ್ಭರ ಭ್ರಮಿತ–ವೇಗವಾಗಿ ತಿರುಗಿಸಲ್ಪಟ್ಟ, ಲೀಲಾಯಿತಂ–ಲೀಲೆಯುಂಟಾಯಿತೋ, ಸರ್ವಜಗತಾಂಪತಿಃ–ಸಮಸ್ತ ಜಗತ್ತಿಗೂ ಒಡೆಯನಾದ, ಗುರುಃ–ಗುರುವಾದ, ಗಿರಸುತಾಪತಿಃ–ಪಾರ್ವತೀರಮಣನಾದ ಶಿವನು, ಸಃ–ಅವನು, ನಃ–ನಮ್ಮನ್ನು, ಪಾತು–ಕಾಪಾಡಲಿ.

**ವಚನ :** ಬಾಳೇಂದು ಮೌಳಿಯಂ–ಚಂದ್ರಶೇಖರನಾದ ಶಿವನನ್ನು.

**೨೮.** ಬನವಾಸಿದೇಶದ ವರ್ಣನೆ: ಬನವಾಸಿದೇಶದೊಳ್ – ಬನವಾಸಿಯ ಪ್ರಾಂತ್ಯದಲ್ಲಿ, ಆವ ಬೆಟ್ಟುಗಳೊಳಂ–ಯಾವ ಬೆಟ್ಟಗಳಲ್ಲಿಯೂ, ಆವ ನಂದನವನಂ ಗಳೊಳಂ–ಯಾವ ಉದ್ಯಾನವನಗಳಲ್ಲೂ, ನೋಟ್ಪೊಡೆ–ನೋಡುವ ಪಕ್ಷದಲ್ಲಿ, ಸೊಗಯಿಸಿ ಬಂದ ಮಾಮರನೆ–ಸೊಗಸಾಗಿ ಹಣ್ಣು ಬಿಟ್ಟ ಮಾವಿನಮರಗಳೇ; ತಳ್ತಿಲೆ ವಳ್ಳಿಯೆ–ದಟ್ಟವಾಗಿ ಸೇರಿಕೊಂಡಿರುವ ವೀಳ್ಯದ ಬಳ್ಳಿಗಳೇ ; ಪೂತ ಜಾತಿ ಸಂಪಗೆಯೆ– ಹೂ ಬಿಟ್ಟ ಉತ್ಕೃಷ್ಟಜಾತಿಯ ಸಂಪಗೆಯೇ, ಅಥವಾ ಜಾಜಿ ಸಂಪಗೆಗಳೇ ; ಕುಕಿಲ್ವ– ಧ್ವನಿಮಾಡುವ, ಕೋಗಿಲೆಯೆ–ಕೋಗಿಲೆಗಳೇ; ಪಾಡುವ ತುಂಬಿಯೆ–ಜೇಂಕರಿಸುವ ದುಂಬಿಗಳೇ; ನಲ್ಲರ–ಒಲಿದವರ, ಒಳ್ಮೊಗಂ–ಒಳಮುಖವು, ನಗೆಮೊಗದೊಳ್– ನಗುವಿನಿಂದ ಕೂಡಿದ ಮುಖದಲ್ಲಿ, ಪಳಂಚಿ–ತಾಗಿ, ಅಲೆಯೆ–ಪೀಡಿಸಲು, ಕೂಡುವ– ಒಡಗೂಡುವ, ನಲ್ಲರೆ–ಪ್ರೇಮಿಗಳೇ.

**೨೯.** ಚಾಗದ–ದಾನದ, ಭೋಗದ–ಸುಖದ, ಅಕ್ಕರದ–ವಿದ್ಯೆಯ, ಗೇಯದ– ಸಂಗೀತದ, ಗೊಟ್ಟಿಯ–ಗೋಷ್ಠಿಗಳ, ಸಭೆಗಳ, ಅಲಂಪಿನ–ಸಂತೋಷದ, ಇಂಪುಗಳ್ಗೆ– ಇಂಪುಗಳಿಗೆ, ಆಗರಮಾದ–ಆಕರವಾಗಿರುವ, ಮಾನಸರೆ–ಮನುಷ್ಯರೇ, ಮಾನಸರ್– ಮನುಷ್ಯರು; ಅಂತು–ಹಾಗೆ, ಅವರಾಗಿ ಪುಟ್ಟಲ್–ಆ ಮನುಷ್ಯರಾಗಿ ಹುಟ್ಟಲು, ಏನಾಗಿಯುಮೇನೊ–ಏನಾದರೆ ತಾನೇ, ತೀರ್ದಪುದೆ–ತೀರುತ್ತದೆಯೆ? ಸಾಧ್ಯವಾಗು ತ್ತದೆಯೆ? ತೀರದೊಡಂ–ತೀರದಿದ್ದರೂ, ಸಾಧ್ಯವಾಗದಿದ್ದರೂ, ಮಱಿದುಂಬಿಯಾಗಿ– ದುಂಬಿಯ ಮರಿಯಾಗಿ, ಮೇಣ್–ಅಥವಾ, ಕೋಗಿಲೆಯಾಗಿ, ಬನವಾಸಿ ದೇಶದೊಳ್– ಬನವಾಸಿ ದೇಶದ, ನಂದನದೊಳ್–ಉದ್ಯಾನವನಗಳಲ್ಲಿ, ಪುಟ್ಟುವುದು–ಹುಟ್ಟುವುದು,

ಇಲ್ಲಿ ಗೊಟ್ಟಿ <(ಸಂ) ಗೋಷ್ಠೀ ಎಂಬುದಕ್ಕೆ ವಿವರಣೆ ಬೇಕಾಗಬಹುದು. ಇದರ ವಿಷಯ ವಾತ್ಸ್ಯಾಯನನ ಕಾಮಸೂತ್ರಗಳಲ್ಲಿ ಪ್ರತಿಪಾದಿತವಾಗಿದೆ (೧-೪-೧ಇತ್ಯಾದಿ), ಸಮಾನ ಶೀಲ ವಯಸ್ಸು ವಿದ್ಯೆ ಐಶ್ವರ್ಯವುಳ್ಳವರು, ನಾಗರಕರು ಮತ್ತು ಸ್ನೇಹಿತರು. ಆಗಾಗ ಒಬ್ಬರನ್ನೊಬ್ಬರು ಒಂದೆಡೆಯಲ್ಲಿ ಭೇಟಿಯಾಗಿ ಸುಖಸಂಕಥಾಸಲ್ಲಾಪ ಕ್ರೀಡೆಗಳಲ್ಲಿ ತೊಡಗಿ ಹರ್ಷದಿಂದ ಕಾಲಕಳೆಯುವುದು ಗೋಷ್ಠಿ. ಈ ಮಿತ್ರಮೇಳ ಅವರವರ ಸ್ವಭಾವಕ್ಕನುಸಾರವಾಗಿ ವೇಶ್ಯಾಗೃಹದಲ್ಲೋ, ಊರಿನ ಚಾವಡಿಯಲ್ಲೋ ಒಬ್ಬನ ಮನೆಯಲ್ಲೋ ಸೇರಬಹುದಾಗಿತ್ತು. ಅಲ್ಲಿ ಕಾವ್ಯ ಸಂಗೀತಾದಿ ಕಲಾವಿಷಯಕವಾದ ಚರ್ಚೆ ನಡೆಯುತ್ತಿತ್ತು; ಪರಸ್ಪರ ವಸ್ತ್ರಭೂಷಣಗಳನ್ನು ಕೊಡುವುದು ಆದಮೇಲೆ ಗೋಷ್ಠಿ ಮುಕ್ತಾಯವಾಗುತ್ತಿತ್ತು. ಅಲ್ಲಿ ಮಾತಾಡುವಾಗ ಪೂರ್ತಿ ಸಂಸ್ಕೃತ ಭಾಷೆಯನ್ನಾಗಲಿ ದೇಶಭಾಷೆಯನ್ನಾಗಲಿ ಬಳಸಕೂಡದೆಂಬ ವಿಧಿಯಿತ್ತು (ನಾತ್ಯಂತಂ ಸಂಸ್ಕೃತೇ ನೈವ ನಾತ್ಯಂತಂ ದೇಶಭಾಷಯಾ | ಕಥಾ ಗೋಷ್ಠೀಷು ಕಥಯಂಲೋಕೇ ಬಹುಮತೋ ಭವೇತ್ || ಸೂ. ಪು ೫೦) ಮದ್ಯಪಾನ, ಜೂಜು ಮುಂತಾದ ದುರ್ಗೋಷ್ಠಿಗಳಿಗೆ ಸೇರಬಾರದಾಗಿತ್ತು. (ಯಾಗೋಷ್ಠೀ ಲೋಕ ವಿದ್ವಿಷ್ಟಾ ಯಾಚ ಸ್ವೈರವಿಸರ್ಪಿಣೀ | ಪರಹಿಂಸಾತ್ಮಿಕಾ ವಾ ಚ ನತಾಮವತರೇದ್ ಬುಧಃ || ೫೧) ಕ್ರೀಡಾಮಾತ್ರ ದೃಷ್ಟಿಯುಳ್ಳ ಗೋಷ್ಠಿಗಳಿಗೆ ವಿದ್ವಾಂಸನು ಸೇರಬಹುದಾಗಿತ್ತು. (ಲೋಕ ಚಿತ್ತಾನುವರ್ತಿನ್ಯಾ ಕ್ರೀಡಾಮಾತ್ರೈಕ ಕಾರ್ಯಯಾ | ಗೋಷ್ಠೀ ಸಹ ಚರನ್ವಿದ್ವಾಂ ಲೋಕೇ ಸಿದ್ಧಿಂ ನಿಯಚ್ಛತಿ). ಇವು ಹೆಚ್ಚು ಕಡಮೆ ಈಗಿನ ಕ್ಲಬ್ಬುಗಳಂತೆ ಇದ್ದಿರಬಹುದು.

೩೦. ಪಂಪನ ದೇಶಪ್ರೇಮ ಭಾವಗೀತೆಯಾಗಿ ಹರಿದಿದೆ ಈ ಪದ್ಯಗಳಲ್ಲಿ: ತೆಂಕಣಗಾಳಿ ಸೋಂಕಿದೊಡಂ–ದಕ್ಷಿಣದ ಗಾಳಿ ಮೈಮುಟ್ಟಿದರೂ, ಒಳ್ನುಡಿಗೇಳ್ದೊಡಂ–ಒಳ್ಳೆಯ ಮಾತನ್ನು ಕೇಳಿದರೂ, ಇಂಪನಾಳ್ದಗೇಯಂ-ಇಂಪಿನಿಂದ ಕೂಡಿದ ಸಂಗೀತವು, ಕಿವಿವೊಕ್ಕೊಡಂ–ಕಿವಿಗೆ ಕೇಳಿಸಿದರೂ, ಬಿರಿದ ಮಲ್ಲಿಗೆಗಂಡೊಡಂ–ಅರಳಿದ ಮಲ್ಲಿಗೆಯನ್ನು ನೋಡಿದರೂ, ಆದ ಕೆಂದು–ಉಂಟಾದ ನಿದ್ದೆ, ಅಲಂಪಂ–ಸುಖವನ್ನು, ಗೆಡೆಗೊಂಡೊಡಂ – ಜೊತೆಗೂಡಿದರೂ, ಮಧುಮಹೋತ್ಸವಮಾದೊಡಂ – ವಸಂತಕಾಲದ ಮಹೋತ್ಸವ ನಡೆದರೂ, ಏನನೆಂಬೆಂ–ಏನೆಂದು ಹೇಳಬಲ್ಲೆ, ಎನ್ನಮನಂ–ನನ್ನ ಮನವು, ವನವಾಸಿ ದೇಶಮಂ–ಬನವಾಸಿಯ ಪ್ರಾಂತ್ಯವನ್ನು, ಅರಂಕುಸಮಿಟ್ಟೊಡಂ–ಯಾರು ಅಂಕುಶ ಹಾಕಿದರೂ ಎಂದರೆ ತಡೆದರೂ, ನೆನೆವುದು–ನೆನೆದುಕೊಳ್ಳುತ್ತದೆ.

೩೧. ಅಮರ್ದಂ–ಅಮೃತವನ್ನು, ಮುಕ್ಕುಳಿಪಂತುಟಪ್ಪ–ಉಗುಳುವಂತಿರುವ ಎಂದರೆ ಹೀಯಾಳಿಸುವ, ಸುಸಿಲ–ರತಿಕ್ರೀಡೆಯ, ಒಂದು ಇಂಪು–ಒಂದು ಮಾಧುರ್ಯವೂ, ತಗುಳ್ದ–ಬೆನ್ನ ಹಿಂದೆಯೇ ಬರುವ, ಒಂದು ಗೇಯಮು–ಒಂದು ಸಂಗೀತವೂ, ಆದಕ್ಕರ ಗೊಟ್ಟಿಯುಂ-ಉಂಟಾದ ವಿದ್ವಾಂಸರ ಮೇಳವೂ, ಚದುರರ–ಚತುರರ, ಒಳ್ಪಾತುಂ–ಒಳ್ಳೆಯ ಮಾತೂ, ಕುಳಿರ್ಕೋಲ್ಪ–ಶೀತದಿಂದ ತಣ್ಣಗಿರುವ, ಜೊಂಪಮುಂ–ಹೂ

ಗೊಂಚಲುಗಳೂ, ಏವೇೞ್ಪುದನುಳ್ಳ–ಏನು ಬಯಸುವುದೊ ಅದನ್ನುಳ್ಳ, ಪೆಯ್ಸಿಕಮುಂ–ದೇಹ ಸೌಖ್ಯವೂ, ಇಂತು ಎನ್ನಂ–ಹೀಗೆ ನನ್ನನ್ನು, ಕರಂ–ವಿಶೇಷವಾಗಿ, ಸೋಡಿ, ನಾಡೆ–ಚೆನ್ನಾಗಿ, ಮನಂಗೊಂಡಿರೆ-ಮನವನ್ನು ಆಕ್ರಮಿಸಿರಲು, ತೆಂಕನಾಡ-ದಕ್ಷಿಣ ದೇಶವನ್ನು, ಮಱೆಯಲ್ಕೆ-ಮರೆವುದಕ್ಕೆ, ಇನ್ನೇಂ-ಇನ್ನೇನು, ಮನಂಬರ್ಕುಮೇ-ಮನಸ್ಸು ಬರುತ್ತದೆಯೇ? ಇಲ್ಲ. ಸುಸಿಲ್=(ತ) ತುಯಿಲ್–ನಿದ್ದೆ, ರತಿಕ್ರೀಡೆ; ಕನ್ನಡ ಸುಂದು ಶಬ್ದವನ್ನು ನೋಡಿ.

**ವಚನ**: ನಾಡಾಡಿಯಲ್ಲದೆ-ಸಾಮಾನ್ಯವಲ್ಲದೆ, ಅಸಾಧಾರಣವಾಗಿ; ಉಂಡಿಗೆ ಸಾಧ್ಯಂ ಮಾಡಿ–ತನ್ನ ಹೆಸರಿನ ಮುದ್ರೆ ಅಲ್ಲಿ ಚಲಾವಣೆಯಾಗುವಂತೆ ಮಾಡಿ ಎಂದರೆ ಜಯಿಸಿ ವಶಪಡಿಸಿಕೊಂಡು;

**೩೨.** ಅರ್ಜುನನ ಪಶ್ಚಿಮ ದಿಕ್ಕಿನ ಸಂಚಾರ, ದ್ವಾರಾವತೀನಗರಕ್ಕೆ ಆಗಮನ: ಸಾರವಸ್ತುಗಳಿಂ–ರಸವತ್ತಾದ ವಸ್ತುಗಳಿಂದ, ನೆಱೆದ–ತುಂಬಿದ; ಅಂಭೋರಾಶಿಯೆ–ಕಡಲೇ, ಕಾದಿಗೆ–ಅಗಳು, ಕಂದಕ; ಕಾವನುಂ–ಅದನ್ನು ರಕ್ಷಿಸುವವನು, ಸೀರಪಾಣಿ–ನೇಗಿಲನ್ನು ಹಿಡಿದಿರುವವನು ಎಂದರೆ ಬಲರಾಮ; ವಿಳಾಸದಿಂ–ಸೊಗಸಿನಿಂದ, ಆಳ್ವಂ–ಆಳುವವನು, ಚಕ್ರಧರಂ–ಚಕ್ರಪಾಣಿ, ಶ್ರೀಕೃಷ್ಣ; ಬಗೆವಂಗೆ–ಆಲೋಚಿಸುವವನಿಗೆ, ಸಂಸಾರ ಸಾರಮಿದು–ಇದು ಸಂಸಾರದ ತಿರುಳು, ಎಂಬುದಂ-ಎನ್ನಿಸಿಕೊಳ್ಳುವುದನ್ನು, ಅಸಂಚ . . . ಪುರಮಂ: ಅಸಂಚಳ–ಅಲುಗಾಡದಿರುವ, ಕಾಂಚನದ್ವಾರ–ಚಿನ್ನದ ಬಾಗಿಲಿನಿಂದ, ಬಂಧುರ–ಸುಂದರವಾದ, ಬಂಧ–ಕಟ್ಟನ್ನುಳ್ಳ, ಗೃಹ–ಮನೆಗಳ, ಉದ್ಯತ್–ಎತ್ತರವಾದ, ದ್ವಾರವತೀಪುರಮಂ–ದ್ವಾರಾವತೀ ನಗರವನ್ನು, ನರಂ–ಅರ್ಜುನನು, ಎಯ್ತಂದಂ–ಸಮೀಪಿಸಿದನು, ಸೇರಿದನು.

**ವಚನ**: ಬರವಿನ–ಆಗಮನದ, ಸಂತಸದ–ಸಂತೋಷದ, ಒಸಗೆ–ಉತ್ಸವದ, ಪಡೆಮಾತಂ–ಸುದ್ದಿಯನ್ನು,

**೩೩.** ಶ್ರೀಕೃಷ್ಣನಿಗೆ ಶುಭಸೂಚನೆಯಾಗಿ ಅವನ ಬಲಗಣ್ಣೂ ಬಲತೋಳೂ ನಡುಗುತ್ತವೆ; ಪಲವುಂ ಜನ್ಮದೊಳಾದ ನಿನ್ನ ಕೆಳೆಯಂ–ಹಲವು ಜನ್ಮಗಳಲ್ಲಿ ನಿನಗಾದ ಸ್ನೇಹಿತ, ಬಂದಪ್ಪಂ-ಬರುತ್ತಾನೆ; ಆತಂಗೆ–ಅವನಿಗೆ, ಇಂ, ನೀಂ, ಬೆಂಬಲಂ–ಸಹಾಯಕ, ನಿನಗೆ–ನಿನಗೆ, ಆತಂ–ಅವನು ಸಹಾಯಕ; ಇಳಾವಿಖ್ಯಾತನಂ–ಲೋಕ ಪ್ರಸಿದ್ಧನಾದ, ಆತನಂ-ಅವನನ್ನು, ಕೂರ್ತು-ಪ್ರೀತಿಸಿ, ನೋಡಲುಂ-ನೋಡುವುದಕ್ಕೂ, ಅೞ್ಕಱ್ತು–ಒಲಿದು, ಅಮರ್ದು–ಗಾಢವಾಗಿ, ಅಪ್ಪಲುಂ–ಅಪ್ಪಿಕೊಳ್ಳುವುದಕ್ಕೂ, ಇಂದು–ಈದಿನ, ಪಡೆವೆ–ಪಡೆಯುತ್ತೀಯೆ, ಎಂಬಂತೆ–ಎನ್ನುವ ಹಾಗೆ, ದಲ್–ನಿಶ್ಚಯವಾಗಿ, ಆ ಬಲಿಬಲ ಪ್ರಧ್ವಂಸಿಗೆ–ಆ ಬಲಿಚಕ್ರವರ್ತಿಯ ಬಲವನ್ನು ನಾಶ ಮಾಡಿದವನಾದ ಕೃಷ್ಣನಿಗೆ, ಬಲಗಣ್ಣುಂ–ಬಲದ ಕಣ್ಣೂ, ಬಲದೋಳುಂ–ಬಲದ ತೋಳೂ, ಅಂದು–ಆಗ, ಇಟ್ಟಳಂ–ರಮಣೀಯವಾಗಿ, ಕೆತ್ತಿತ್ತು–ಸ್ಪಂದಿಸಿತು, ನಡುಗಿತು.

**ವಚನ:** ತನ್ನ ಅಲಂಪಿನ ಅಚ್ಚಿಜಿನ ರೂಪನೆ–ತಮ್ಮ ಸಂತೋಷದ, ಪ್ರೀತಿಯ ರೂಪವನ್ನೇ; ತೆಗೆದಪ್ಪಿ–ಸೆಳೆದಪ್ಪಿ ; ನಿಬಿಡಾಲಿಂಗನಂಗೆಯ್ದು–ಗಾಢವಾದ ಆಲಿಂಗನವನ್ನು ಮಾಡಿ; ಮುಹುರ್ಮುಹುರಾಲೋಕನಂಗೆಯ್ಯುತ್ತುಂ–ಪುನಃ ಪುನಃ ನೋಡುತ್ತಾ; ಮತ್ತ ವಾರಣಗಳಂ–ಮದಿಸಿದ ಆನೆಗಳನ್ನು;

೩೪. ಸುರನರಕಿನ್ನರೋರಗ ನಭಶ್ಚರ ಕಾಂತೆಯರ್–ದೇವತೆಗಳ ನರರ ಕಿನ್ನರರ ಉರಗ ಲೋಕದವರ ಖೇಚರರ ಸ್ತ್ರೀಯರು, ಏವರ್–ಯಾರು ಅವರು, ಎಂದು–ಎಂಬುದಾಗಿ, ಮಾಂಕರಿಸುವ–ತಿರಸ್ಕರಿಸುವ, ಕೆಯ್ತದ–ಮಾಟವನ್ನುಳ್ಳ, ಅಂದದ-ಚೆಲುವಿನ, ಮುರಾರಿಯ ತಂಗೆಯಂ-ಶ್ರೀಕೃಷ್ಣನ ತಂಗಿಯಾದ ಸುಭದ್ರೆಯನ್ನು, ಅಪ್ಪುಕೆಯ್ದು-ಒಪ್ಪಿ, ಚೆಚ್ಚರಂ–ಬೇಗನೆ, ಒಳಪೊಯ್ದು–ಒಳಗೆ ಹಾಕಿಕೊಂಡು, ನೀಂ–ನೀನು, ನಿನಗೆ ಮಾಡುವುದು–ನಿನ್ನವಳನ್ನಾಗಿ ಮಾಡಿಕೊಳ್ಳುವುದು, ಎಂದು-ಎಂಬುದಾಗಿ ಅಮರೇಂದ್ರ ಪುತ್ರನಂ–ಅರ್ಜುನನನ್ನು, ಆ ಪುರದ–ಆ ನಗರದ, ವಾತವಿಧೂತ–ಗಾಳಿಯಿಂದ ತೂಗಾಡಿಸಲ್ಪಟ್ಟ, ವಿನೂತ-ಹೊಗಳಲ್ಪಟ್ಟ, ಕೇತುಗಳ್-ಬಾವುಟಗಳು, ಕರೆವವೊಲಾದುದು–ಕರೆಯುವಂತೆ ಆಯಿತು.

**ವಚನ :** ಕೆಂಬೊನ್ನ ತಳಿಗೆಯೊಳ್-ಕೆಂಪುಚಿನ್ನದ ತಟ್ಟೆಯಲ್ಲಿ; ಬಿಡುಮುತ್ತಿನ–ಬಿಡಿಯಾದ ಮುತ್ತಿನ ; ಸೇಸೆಯುಂ-ಅಕ್ಷತೆಯನ್ನು , ಬೆರಸು–ಕೂಡಿ

೩೫. ಈ ಪದ್ಯದ ಅನ್ವಯದಲ್ಲಿ ಸ್ವಲ್ಪ ಕ್ಲೇಶವಿದೆ: ಒದವಿದ–ಉಂಟಾದ, ನೂಲ–ಉಡೆನೂಲಿನ, ಒಡ್ಯಾಣದ, ತೊಂಗಲ–ಕುಚ್ಚುಗಳ, ಉಲಿ–ಶಬ್ದವು ; ದೇಸೆಯ ನಾಂತು–ಚೆಲುವನ್ನು ಹೊಂದಿ, ವಿಳಾಸದಿಂದೆ–ಕ್ರೀಡೆಯಿಂದ, ಇಱುಂಕಿದ–ತೊಡೆಗಳ ನಡುವೆ ಇರಿಕಿಕೊಂಡ, ನಿಱಿ–ಸೀರೆಯ ನೆರಿಗೆಗಳು ; ಗಂಡರ ಅಳ್ಳೆರ್ದೆಗಳಂ–ಪುರುಷರ ಕೋಮಲವಾದ ಎದೆಗಳನ್ನು, ತುಱಿವೋಜೆಯನುಂಟುಮಾಡುವಂದದೆ–ತುಳಿಯುವ ರೀತಿಯನ್ನು ಉಂಟುಮಾಡುವ ಹಾಗೆ, ನಿಡುಗಣ್ಗಳೊಳ್–ದೀರ್ಘವಾದ ಕಣ್ಣುಗಳಲ್ಲಿ, ನಡೆ–ನಾಟಿಕೊಳ್ಳಲು, ಮನೋಭವನ – ಮನ್ಮಥನ; ಒಡ್ಡಣದಂತೆ – ಸೈನ್ಯದಹಾಗೆ, ತಂಡತಂಡದೆ–ಗುಂಪುಗುಂಪಾಗಿ, ಪರಿತಂದು–ಓಡಿಬಂದು, ಪುರಾಂಗನಾಜನಂ–ನಗರದ ಸ್ತ್ರೀಜನರು, ಅಂದು–ಆಗ, ಸೇಸೆಯುಂ–ಅಕ್ಷತೆಯನ್ನು, ಸೂಸಿದುದು–ಚೆಲ್ಲಿತು.

೩೬. ಮಿಳಿರ್ವ – ಅಲುಗಾಡುವ, ಕುರುಳ್ಗಳೊಳ್ – ಮುಂಗುರುಳುಗಳಲ್ಲಿ, ಪೊಳೆವ–ಹೊಳೆಯುವ, ಕಣ್ಗಳ–ಕಣ್ಣುಗಳ, ಬೆಳ್ಪು-ಬಿಳಿಬಣ್ಣವು, ಪಳಂಚಿ-ಸಂಘಟ್ಟಿಸಿ, ಚಿನ್ನಪೂಗಣೆಗೆ–ಚಿನ್ನದ ಹೂಬಾಣಕ್ಕೆ, ಎಣೆಯಾಗೆ–ಸಮಾನವಾಗಲು ; ಪುರ್ವುಂ–ಹುಬ್ಬುಗಳೂ, ಎಪೆಗಳ್–ಕಣ್ಣರೆಪ್ಪೆಗಳೂ, ಬಿಡದೆ–ನಿಲ್ಲದೆ, ಅಳ್ಳಿಱಿದು–ಕಂಪಿಸಿ, ಇಕ್ಷುಚಾಪದೊಳ್–ಕಬ್ಬಿನ ಬಿಲ್ಲಿನಲ್ಲಿ, ಖಳಕುಸುಮಾಸ್ತ್ರಂ–ದುಷ್ಟನಾದ ಮನ್ಮಥನು, ಇಟ್ಟ–ಕಟ್ಟಿದ, ಗೊಣೆಯಕ್ಕೆ–ಬಿಲ್ಲಿನ ಹೆದೆಗೆ, ಎಣೆಯಾಗಿರೆ–ಸಮಾನವಾಗಿರಲು ; ನಿಳ್ಕಿ ನಿಳ್ಕಿ–ಕಾಲ ಹೆಬ್ಬೆರಳಮೇಲೆ ನಿಂತು ನಿಂತು, ಕರಿಯನೇಱಿದನಂ–ಆನೆಯ ಮೇಲೆ ಹತ್ತಿದವನನ್ನು, ಪಡೆಮೆಚ್ಚೆ ಗಂಡನಂ–ಅರ್ಜುನನನ್ನು, ಕೋಮಲೆ–ಸುಂದರಿಯು, ನಡೆ–ನಡುವಹಾಗೆ, ನೋಡಿದಳ್–ನೋಡಿದಳು.

**ವಚನ :** ತ್ವರಿತದಿಂ–ಬೇಗನೆ; ಮೇಖಳಾಕಳಿತ–ಒಡ್ಯಾಣದಿಂದ ಕೂಡಿದ; ರುಚಿರಲುಳಿತಾಧರ ಪಲ್ಲವೆ–ಮನೋಹರವಾಗಿ ಬಾಗಿಕೊಂಡಿರುವ ಚಿಗುರಿನಂತಿರುವ ತುಟಿಯುಳ್ಳವಳು; ದಂಡುಗಳೊಳ್ – ಗುಂಪುಗಳಲ್ಲಿ, ಅಂಡುಗೊಂಡು – ಸಮೀಪಕ್ಕೆ ಬಂದು, ಹತ್ತಿರಿದ್ದು.

೩೭. ಕಾಯದೆ–ರಕ್ಷಿಸದೆ (=ಓವದೆ), ಕಾಮಂ–ಮನ್ಮಥನು, ಆರ್ದು–ಗರ್ಜಿಸಿ, ಇಸೆ–ಬಾಣಪ್ರಯೋಗಮಾಡಲು, ತೊವಲ್ವಿಡಿವಂತೆ–ಚಿಗುರನ್ನು ಹಿಡಿಯುವಹಾಗೆ; ತೋರ್ಪಾಯೆಲೆ – ತೋರುವ ಆ ವೀಳ್ಯದೆಲೆ, ಎಡಗಯ್ಯೊಳೊಪ್ಪೆ – ಎಡಗೈಯಲ್ಲಿ ಸೊಗಸಾಗಿರಲು : ನೋಟಬೇಟದ–ಕಣ್ಬೇಟದ, ಚಕ್ಷುಃ ಪ್ರೀತಿಯ, ಕೊನರ್–ಚಿಗುರು, ತಲೆದೋರ್ಪವೊಲ್–ತಲೆತೋರಿಸುವಹಾಗೆ, ಎಂದರೆ ಮೊಳೆಯುವ ಹಾಗೆ, ಬಾಯೊಳ್-ಬಾಯಲ್ಲಿ, ಇರ್ದಾಯೆಲೆ–ಕಚ್ಚಿದ್ದ ಎಲೆಯು, ಆಗೆ–ಆಗಲು, ಕಣ್ಗೆವಂದು–ಕಣ್ಣಿಗೆ ಸೊಗಸಾಗಿ ಕಂಡು, ಎಸೆಯೆ–ಪ್ರಕಾಶಿಸಲು, ಕಯ್ಯಲೆ ಕಯ್ಯೊಳೆ–ಕೈಯಲ್ಲಿದ್ದ ಎಲೆ ಕೈಯಲ್ಲಿಯೇ, ಬಾಯತಂಬುಲ-ಬಾಯಿನಲ್ಲಿದ್ದ ವೀಳ್ಯ, ಬಾಯೊಳೆ-ಬಾಯಿಯಲ್ಲಿಯೇ, ತೋಱಿ–ಕಾಣಲು; ಆಸಮರೈಕ ಮೇರುವಂ–ಯುದ್ಧದಲ್ಲಿ ಮೇರುವಿನಂತೆ ಸ್ಥಿರನಾದ ಆ ಅರ್ಜುನನನ್ನು, ನ್ಯೈಮಱಿದು – ನೈಮರೆತು, ನೋಡಿದಳ್ – ನೋಡಿದಳು. ದ್ರೌಪದಿಯು ತನ್ನ ಸ್ವಯಂವರದ ಸಮಯದಲ್ಲಿ ರಾಜಸಭೆಯನ್ನು ಹೊಕ್ಕಾಗ ಅವಳ ಸೌಂದರ್ಯವನ್ನು ಕಂಡು ರಾಜರು ಸ್ತಬ್ಧರಾದಾಗ "ಮಡಿಸಿದೆಲೆ ಬೆರಳೊಳಗೆ ಬಾಯೊಳಗಡಸಿದೆರೆ ಬಾಯೊಳಗೆ" ಎಂದಿರುವ ಕುಮಾರವ್ಯಾಸನ ಪದ್ಯವನ್ನು ಇದರೊಡನೆ ಹೋಲಿಸಬಹುದು (–೧–೨೩–೬೭).

**ವಚನ :** ತಿರುವಿಂ–ಹೆದೆಯಿಂದ, ಬರ್ದುಂಕಿಬರ್ಪಲರಂಬು – ತಪ್ಪಿಸಿಕೊಂಡು ಬರುವ ಹೂಗಣೆ.

**೩೮.** ರೂಪಿನೊಳ್–ರೂಪದಲ್ಲಿ, ಸ್ಮರನಂ–ಮನ್ಮಥನನ್ನು, ವಿಭವದೊಳ್–ವೈಭವದಲ್ಲಿ, ಇಂದ್ರನಂ–ಇಂದ್ರನನ್ನು, ಆವ ಗಂಡರುಮಂ–ಯಾವ ಪುರುಷರನ್ನೂ, ಪೋ–ಹೋಗು, ಆನ್–ನಾನು, ಮೆಚ್ಚೆಂ–ಮೆಚ್ಚೆನು; ಕಚ್ಚೆಯೊಳಿಟ್ಟು–ಅವರನ್ನು ನನ್ನ ಕಚ್ಚೆಯಲ್ಲಿಟ್ಟು, ಕಟ್ಟುವೆಂ–ಕಟ್ಟಿಬಿಡುತ್ತೇನೆ, ಎನುತ್ತಿರ್ಪಾಕೆ–ಎನ್ನುತ್ತಿರುವ ಒಬ್ಬಳು, ಗಂಧೇ–ರಿಗನಂ : ಗಂಧೇಭ–ಸೊಕ್ಕಾನೆಯ, ಕಂಧರಬಂಧ–ಕೊರಳ ಪಟ್ಟಿಯ ಮೇಲೆ, ಪ್ರವಿಭಾಸಿಯಪ್ಪ–ಪ್ರಕಾಶಿಸುತ್ತಿರುವ, ಅರಿಗನಂ–ಅರ್ಜುನನನ್ನು, ಕಾಣುತ್ತೆ–ನೋಡುತ್ತಲು, ಕಣ್ಸೋಲ್ತು–ಕಣ್ಣುಸೋತು, ಮೋಹಿಸಿ, ಕಾಮರಸಂ–ಸುರತರಸವು, ಭೋಂಕನೆ–ಶೀಘ್ರವಾಗಿ, ಸೂಸೆ–ಚೆಲ್ಲಲು, ತಾಳಲ್ ಅರಿದು–ಸೈರಿಸುವುದು ಅಸಾಧ್ಯ, ಎಂದು ಇರ್ಕಚ್ಚೆಯುಂ-ಎರಡು ಕಚ್ಚೆಗಳನ್ನೂ, ಕಟ್ಟಿದಳ್-ಬಿಗಿಯಾಗಿ ಕಟ್ಟಿಕೊಂಡಳು.

**ವಚನ :** ಬೇಂಟೆಗಾಱಂಗೆ–ಬೇಟೆಗಾರನಿಗೆ; ಮೊನೆಗೆ–ಯುದ್ಧಕ್ಕೆ; ಪೂಣೆ ಪೊಕ್ಕು – ಪ್ರತಿಜ್ಞೆಮಾಡಿ ಪ್ರವೇಶಿಸಿ?, ಪಕ್ಕಾಗಿರೆ – ಗುರಿಯಾಗಿರಲು; ಉಪಹಾಸಿತಮಪ್ಪ–ನಗುವಂತಿರುವ, ತಿರಸ್ಕರಿಸುವಹಾಗೆ ಇರುವ.

೩೯. ಕೃಷ್ಣನ ಅಂತಃಪುರ ಸ್ತ್ರೀಯರು ಅರ್ಜುನನನ್ನು ಎದುರುಗೊಂಡರು : ಲತೆಗಳ್-ಬಳ್ಳಿಗಳು, ಜಂಗಮರೂಪದಿಂ-ಓಡಾಡುವ ಆಕಾರದಿಂದ, ನೆರೆದುವೋ-ಒಟ್ಟಿಗೆ ಸೇರಿದುವೋ, ದಿವ್ಯಾಪ್ಸರೋವೃಂದಂ-ಸ್ವರ್ಗದ ಅಪ್ಸರ ಸ್ತ್ರೀಯರ ಸಮೂಹ, ಇಂದ್ರನ ಶಾಪದಿಂದೆ-ಇಂದ್ರನು ಕೊಟ್ಟ ಶಾಪದಿಂದ, ಕ್ಷಿತಿಗೆ-ಭೂಮಿಗೆ, ಇೞಿದುವೋ-ಇಳಿದು ಬಂತೋ, ಏನ್-ಏನು! ಪೇೞಿಂಬ-ಹೇಳು ಎನ್ನುವ, ಶಂಕಾಂತರಂ-ಬೇರೆ ಬೇರೆ ಸಂದೇಹಗಳು, ಮತಿಗಂ-ಬುದ್ಧಿಗೂ, ಪುಟ್ಟವಿನಂ-ಹುಟ್ಟುತ್ತಿರಲು, ಕೃಷ್ಣನಾ-ಕೃಷ್ಣನ, ಷೋಡಶಸಹಸ್ರಾಂತಃಪುರಂ-ಹದಿನಾರು ಸಾವಿರ ಅಂತಃಪುರ ಸ್ತ್ರೀಯರು, ಇಂದ್ರ ತನೂಜಂಗೆ-ಅರ್ಜುನನಿಗೆ, ಇದಿರ್ವಂದು-ಎದುರುಬಂದು, ಪರಕೆಗಳ್-ಆಶೀರ್ವಾದಗಳು, ಕರಂತಳ್ಪೊಯ್ಯೆ-ವಿಶೇಷವಾಗಿ ತಾಕಾಡುತ್ತಿರಲು, ಸೇಸಿಕ್ಕಿತು-ಅಕ್ಷತೆಯನ್ನು ಹಾಕಿತು.

**ವಚನ:** ಕೆಮ್ಮುಗಿಲ ತೆರೆಯ ಪೊರೆಯೊಳ್-ಕೆಂಪಾದ ಮೋಡವೆಂಬ ತೆರೆಯ ಸಮಿಾಪದಲ್ಲಿ; ಪೊಱಮಡುವ-ಹೊರಕ್ಕೆ ಬರುವ, ವಿದ್ಯಾಧರಿಯಂತೆ-ವಿದ್ಯಾಧರ ಸ್ತ್ರೀಯಂತೆ; ನೆಲೆಯು-ಅಂತಸ್ತಿನ; ಚೌವಳಿಗೆಯ-ತೊಟ್ಟಿಯ.

೪೦. ಬಳಸಿದ-ಸುತ್ತುಗಟ್ಟಿದ, ಗುಜ್ಜುಗಳ್-ಅಂತಃಪುರ ಸೇವಕರಾದ ಕುಬ್ಜರು, ನೆರೆದ-ಸೇರಿದ, ಮೇಳದ ಕನ್ನೆಯರ್-ಒಡನಾಡಿ ಕನ್ಯೆಯರು, ಎತ್ತಮಿಕ್ಕೆ-ಎತ್ತ ಕಡೆಯೂ ಬೀಸಲು, ಸಂಚಳಿಸುವ-ಅಲುಗಾಡುವ, ಚಾಮರಂ-ಚಾಮರಗಳು, ಕನಕ ಪದ್ಮದ-ಹೊಂದಾವರೆಯ, ಸೀಗುರಿ-ಕೊಡೆಗಳು, ತೊಟ್ಟ-ಧರಿಸಿದ, ಮಾಣಿಕಂ ಗಳ-ರತ್ನಗಳ, ಬೆಳಗು-ಕಾಂತಿಗಳು, ಇಟ್ಟಳಂ-ಚೆಲುವಾಗಿ, ತನಗೆ, ಒಡಂಬಡೆ-ಒಪ್ಪಲು, ದೇಸೆ-ಸೊಗಸು, ವಿಳಾಸಮಂ-ಸೌಂದರ್ಯವನ್ನು, ಪುದುಂಗೊಳಿಸೆ-ಹುದುವಾಗಿ ಮಾಡಲು, ಕನ್ನೆ-ಸುಭದ್ರೆ, ನಡೆನೋಡಿ-ನಟ್ಟದೃಷ್ಟಿಯಿಂದ ನೋಡಿ, ಮರಲ್ದು-ಅರಳಿ, ಉಬ್ಬಿ, ಗುಣಾರ್ಣವನೆಂಬನ್-ಅರ್ಜುನ ಎಂಬವನು, ಈತನೇ-ಇವನೇಯೇ?

**ವಚನ:** ಎಂದು, ತನ್ನ ಮೇಳದಾಕೆಗಳಂ-ತನ್ನ ಸಂಗಡ ಇರುವ ಸಖಿಗಳನ್ನು, ಬೆಸಗೊಂಡೊಡೆ-ಕೇಳಿದರೆ; ಪತ್ತಿದ ಕಣ್ಣುಮಂ-ಅಂಟಿಕೊಂಡ ಕಣ್ಣನ್ನೂ ಎಂದರೆ ಅರ್ಜುನನ ಮೇಲೆ ನಟ್ಟನೋಟವನ್ನೂ; ಉೞ್ಗಿದ ಮನಮುಮಂ-ಪ್ರೀತಿಗೊಂಡ ಮನವನ್ನೂ; ಜೋಲ್ದನಾಣುಮಂ - ಸರಿದುಹೋದ ಲಜ್ಜೆಯನ್ನೂ; ನೇಲ್ದ ಸರಮುಮಂ-ಇಳಿಬಿದ್ದ ಧ್ವನಿಯನ್ನೂ, ಅಗುಂತಿಗಳಂ-ಅತಿಶಯಗಳನ್ನು, ಅಳವಲ್ಲದೆ-ಅಳತೆಯಿಲ್ಲದೆ, ಅಧಿಕವಾಗಿ, ಪೊಗೞೆ-ಹೊಗಳಲು.

೪೧. ಈ ಪದ್ಯಕ್ಕೆ ಅರ್ಥಾನ್ವಯಾದಿಗಳು ವಿಶದವಾಗಿ ತಿಳಿದುಬರುವುದಿಲ್ಲ; ಪಾಠಕ್ಲೇಶಗಳೇನಿವೆಯೋ, ಅವೂ ಅಜ್ಞಾತವಾಗಿವೆ; ಒದವಿದ-ಉಂಟಾದ, ತನ್ನ, ಜವ್ವನದ-ಯೌವ್ವನದ, ರೂಪಿನ-ಆಕಾರದ, ಮೆಯ್ಯೊಳೆ-ದೇಹದಲ್ಲಿಯೇ, ತಪ್ಪುದಪ್ಪು ನೋಟದೊಳೆ-ತಪ್ಪು ತಪ್ಪಾದ ನೋಟದಲ್ಲಿಯೇ, ಪೊಡರ್ಪು-ಸ್ಫುರಣೆಯು ಎಂದರೆ (ಮೈಯಲ್ಲಿ) ಕಂಪನವು, ತಪ್ಪು-ಸರಿಯಾದುದಲ್ಲ, ಬಗೆ-ಇಂಗಿತ (ನೋಟದಲ್ಲಿನ), ತಪ್ಪು-ಸರಿಯಾದುದಲ್ಲ; ಮನೋಜನ-ಮನ್ಮಥನ, ಪೂವಿನಂಬು-ಹೂವಿನ ಬಾಣ,

ತೀವಿದು–ತುಂಬಿದ, ದೊಣೆ–ಬತ್ತಳಿಕೆ, ತೀವಿ–ತುಂಬಿ, ತನ್ನಂ–ತನ್ನನ್ನು, ಇಸೆ–ಹೊಡೆಯಲು, ಆಸತಿ–ಆ ಸುಭದ್ರೆ, ತಪ್ಪದೆ–ಬಿಡದೆ, ತಪ್ಪುನೋಟದೊಳ್–ಜಾರು ನೋಟದಲ್ಲಿ, ಅಪ್ಪನೋಡಿದುದಱಿಂ–ಅಪ್ಪಿಕೊಳ್ಳಲು ನೋಡಿದ್ದರಿಂದ, ಜಾಣಸೆ–ಜಾಣತನವನ್ನೆ, ತಪ್ಪದೆ–ಬಿಡದೆ, ತಪ್ಪುದು–ನಾಶಮಾಡಿತು ; ಇಲ್ಲಿ ತಪ್ಪುದು ಎಂಬ ಕ್ರಿಯಾಪದ ಗಮನಾರ್ಹ ; ತವು–ಕ್ಷಯೇ ಎಂಬ ಧಾತುವಿಗೆ ದಪಾದಿ ಪ್ರತ್ಯಯಗಳು ಪರವಾದಾಗ ಅದರ ಕೊನೆಯ ಅಕ್ಷರಕ್ಕೆ ಎಂದರೆ ವುಗೆ ಪಕಾರಾದೇಶವಾಗುತ್ತದೆ (ಶಮದ ೨೬೧ : ಶಬ್ದಾನು ೪೭೦) ಹೀಗೆ ತವು+ದ=ತಪ್ಪು ಆಗಿ ಅದಕ್ಕೆ ನಪುಂಸಕದ ಏಕವಚನ–ಉದು ಸೇರಿ ತಪ್ಪುದು–ನಾಶಮಾಡಿತು ಎಂಬರ್ಥದ ಕ್ರಿಯಾಪದವಾಗುತ್ತದೆ. ಈ ಪದ್ಯದಲ್ಲಿರುವ ಉಳಿದ 'ತಪ್ಪು' ಪ್ರಯೋಗಗಳು 'ತಪ್ಪು–ಸ್ಖಲನೇ' ಎಂಬ ಧಾತುವಿಗೆ ಸಂಬಂಧಿಸಿದುವು ; ಇದು ನಾಮಪದವೂ ಆಗಬಹುದು. ಅಪ್ಪನೋಡಿದುದು= ಅಪ್ಪಲ್–ನೋಡಿದುದು ; ಇಲ್ಲಿ ಅಲ್ ಪ್ರತ್ಯಯಲೋಪವಾಗಿದೆ, ತರಲ್‌ವೇೞ್= ತರವೇೞ್, ಬರಲ್+ವೇೞ್–ಬರವೇೞ್ ಎಂಬೆಡೆಗಳಲ್ಲಿ ಇರುವಂತೆ.

**ವಚನ :** ದುಕೂಲದ– ರೇಷ್ಮೆ ಬಟ್ಟೆಯ, ಸಕಳವಟ್ಟೆಯೊಳ್–ಬಣ್ಣ ಬಣ್ಣದ ವಸ್ತ್ರಗಳಲ್ಲಿ, ನಿಮಿರ್ಚಿದಂತಾನುಂ–ಪ್ರಸರಿಸದ ಹಾಗೂ ; ಪುದಿದು–ಮುಚ್ಚಿ, ಪುದುಂಗೊಳಿಸಿದಂತಾನುಂ–ಹುದುವಾಗಿ ಮಾಡಿದ ಹಾಗೂ ; ಅನಂಗಾಮೃತ ವರ್ಷಮಂ–ಕಾಮವೆಂಬ ಅಮೃತದ ಮಳೆಯನ್ನು ; ಎಡೆವಱಿಯದ–ನಡುವೆ ಕತ್ತರಿಸಿಹೋಗದ, ಎಂದರೆ ಅವಿಚ್ಛಿನ್ನವಾದ ; ಪೊಳಪಿನೊಳ್–ಪ್ರಕಾಶದಲ್ಲಿ ; ತಳ್ಪೊಯ್ದು–ಸಂಘಟ್ಟಿಸಿ ; ಕುವಳಯದಳನಯನೆಯ ನೋಟಂ–ನೆಯ್ದಿಲೆಯಂತೆ ಕಣ್ಣುಳ್ಳವಳ ನೋಟವು.

೪೨. ಈಕೆಗೆ–ಈ ಸುಭದ್ರೆಗಾಗಿ, ನನೆಯಂಬು–ಹೂವಿನ ಬಾಣವು, ಅಂಬನೆ–ಹೂವಿನ ಬಾಣವನ್ನೇ, ಕಚ್ಚಿರ್ದ–ಕಚ್ಚಿಕೊಂಡು, ಪಾಱುದಪುದೋ–ಹಾರಿಬರುತ್ತಿದೆಯೋ ಎಂದರೆ ಪುಂಖಾನುಪುಂಖವಾಗಿ ಹೂಗಣೆಗಳು ಹಾರಿಬರುತ್ತಿವೆಯೋ ; ಶೃಂಗಾರ ವಾರಾಸಿ–ಸಿಂಗಾರವೆಂಬ ಸಮುದ್ರವು, ಘೋಂಕನೆ–ಬೇಗನೆ, ಬೆಳ್ಳಂಗೆಡೆದತ್ತೋ–ಪ್ರವಾಹವಾಗಿ ಹರಿಯಿತೋ ; ಕಾಮನ–ಮನ್ಮಥನ, ಎಱೆ–ಒಡೆತನವು, ಪ್ರಭುತ್ವವು, ಮೆಯ್ವೆರ್ಚಿತ್ತೋ–ಅಧಿಕವಾಯಿತೋ ; ಎಂಬಿನೆಗಂ–ಎನ್ನುತ್ತಿರಲು, ಸೋಲಮಂ–ಬೇಟವನ್ನು, ಮೋಹವನ್ನು, ಉಂಟುಮಾಡೆ–ಉಂಟುಮಾಡಲು, ಆಕರ್ಣಾಂತವಿಶ್ರಾಂತ ಲೋಚನಂ–ಕಿವಿಯ ಕೊನೆಯವರೆಗೂ ಚಾಚಿಕೊಂಡಿರುವ ಕಣ್ಣುಳ್ಳ, ಹರಿಗಂ–ಅರ್ಜುನನು, ಆಲೋಚನ ಗೋಚರಂ ಬರೆಗಂ–ಕಣ್ಣಿಗೆ ಕಾಣಬರುವವರೆಗೂ, ಒಲ್ದು–ಪ್ರೀತಿಸಿ, ಆ ಕನ್ನೆಯಂ–ಆ ಸುಭದ್ರೆಯನ್ನು, ನೋಡಿದಂ.

ಇಲ್ಲಿ ಬೆಳ್ಳಂಗೆಡೆ ಶಬ್ದ ಗಮನಾರ್ಹ ; ಬೆಳ್ಳಂ+ಕೆಡೆ ; (ತ.ಮ.) ವೆಳ್ಳಂ–ಪ್ರವಾಹ ; ನೀರು ; (ತು) ಬೊಳ್ಳ–ಪ್ರವಾಹ ; (ತೆ) ವೆಲ್ಲಿ, ವೆಲ್ಲುಕ, ವೆಲ್ಲುವ–ಪ್ರವಾಹ. ಎಱೆ–ಪತಿತ್ವೇಚ, ಎಱೆವೆಸಂ, ಎಱೆವಿಟ್ಟ ಮುಂತಾದ ಶಬ್ದಗಳನ್ನು ಪರಿಶೀಲಿಸಬಹುದು.

**ವಚನ:** ಕಿಸುಗಣ್ಚಿದ – ಕೆಂಪೇರಿದ ; ಕಿಸು+ಕಾಣ್ಬು+ದ=ಕಿಸುಗಣ್ಚಿದ ; ಒರ್ಮೊದಲೆ–ಕೂಡಲೇ, ಒಟ್ಟಿಗೇ. ಅಳ್ಕಾಟಮುಂ–ಅಳ್ಕಾಡುವಿಕೆ, ಚಲನ.

**೪೩.** ಸೋಲದೊಳ್–ಪ್ರೇಮದಲ್ಲಿ, ಎಯ್ದೆ–ಚೆನ್ನಾಗಿ, ಪೀ[ರ್ವ]–ಹೀರುವ, ತೆಱದಿಂದೆ–ರೀತಿಯಿಂದ, ಎವೆಯಿಕ್ಕದೆ–ರೆಪ್ಪೆಹೊಡೆಯದೆ, ನೋೞ್ಪ–ನೋಡುವ, ಕಣ್ಗೆ–ಕಣ್ಣಿಗೆ, ಪೆಱತೊಂದು–ಬೇರೊಂದು ಕಣ್ಣು ಎಂದರೆ ಅರ್ಜುನನ ಕಣ್ಣು, ಪೀಲಿ ವೊಲಾಗೆ–ನವಿಲುಗರಿಯ ಕಣ್ಣಿನಂತಾಗಲು, ಬಂದು, ಮನಂಬುಗೆ–ಮನವನ್ನು ಹೋಗಲು, ಕಾವನಂಬು–ಕಾಮನಬಾಣ, ಚಿತ್ತದೊಳ್–ಮನಸ್ಸಿನಲ್ಲಿ, ಪತ್ತಿ–ಅಂಟಿ ಕೊಂಡು, ಕೀಲಿಸೆ-ನಾಟಲು, ಅವಱ-ಆ ಬಾಣಗಳ, ಬಿಣ್ಪಿನೊಳ್-ಭಾರದಲ್ಲಿ, ಒಯ್ಯನೆ-ಮೆಲ್ಲಗೆ, ಜೋಲ್ದವೋಲೆ–ಜೋತುಬಿದ್ದಹಾಗೆ, ಬಾಲೆ–ಸುಭದ್ರೆ, ಲೀಲೆಯಿಂ–ವಿಲಾಸ ದಿಂದ, ತಾಂಬೂಲ ಕರಂಕವಾಹಿನಿಯ ಮೇಲೆ–ಅಡಕೆಲೆಯ ಭರಣಿಯನ್ನು ಧರಿಸಿರುವ ದಾಸಿಯಮೇಲೆ, ನೆಱಲ್ದಿರೆ–ಒರಗಿಕೊಂಡಿರಲು,

**ವಚನ ;** ನವ....ಕೃತಮಪ್ಪ : ನವ-ಹೊಸದಾದ, ಕಿಸಲಯ-ಚಿಗುರಿನ, ವಂದನ ಮಾಲಾ–ತೋರಣಗಳಿಂದ, ಅಲಂಕೃತಮಪ್ಪ-ಅಲಂಕರಿಸಲ್ಪಟ್ಟಿರುವ, ಸಪ್ತ....ರ್ಮ್ಯದ: ಸಪ್ತ–ಏಳು, ತಾಳ–ತಾಳೆಮರಗಳಷ್ಟು, ಉತ್ತುಂಗ–ಎತ್ತರವಾದ, ರಮ್ಯ-ರಮಣೀಯ ವಾದ, ಹರ್ಮ್ಯದ–ಉಪ್ಪರಿಗೆಯ ; ಮೊಗಸಾಲೆಯೊಳ್–ಮುಖಮಂಟಪದಲ್ಲಿ ; ಪೊನ್ನ ಪಡಿಗಂಗಳೊಳ್–ಚಿನ್ನದ ಪೀಕದಾನಿಗಳಲ್ಲಿ ; ಇಕ್ಕಿದ–ಹಾಕಿದ, ಪಟಿಯ–ವಸ್ತ್ರಗಳ; ಕಟ್ಟಿದ, ಚಿನ್ನದ, ಬೊಂದರಿಗೆಯೊಳಂ–ಮೆತ್ತೆ (ತಿವಾಸಿ, ಲೋಡು)ಗಳಲ್ಲಿಯೂ (?) ಕಿಱಿದುಪೊೞ್ತು–ಸ್ವಲ್ಪಹೊತ್ತು ; ಅನುಲೇಪನ–ಗಂಧ ; ಕುಸುಮದಾಮ–ಹೂವಿನ ಹಾರ ; ಅಪಗತ ಪರಿಶ್ರಮನಂ ಮಾಡಿ–ಕಳೆದುಹೋದ ಆಯಾಸವುಳ್ಳವನನ್ನಾಗಿ ಮಾಡಿ. ಚಿನ್ನದ ಬೊಂದರಿಗೆ ಎಂದು (ಸಂಪಭಾ ೯–೨೮೧)ದಲ್ಲಿಯೂ, (೧೪–೨೪)ರಲ್ಲಿ ಬೊಂದರಿಗೆಯೆಂದೂ, (ಆದಿಪು. ೧೧–೭೮)ರಲ್ಲಿ ತಳಿರ ಬೊಂದರಿಗೆಯೆಂದೂ, (ಶಾಂತಿಪು. ೩–೫೧೧)ದಲ್ಲಿ ದೇವಾಂಗದ ಬೊಂದರಿಗೆಯೆಂದೂ ಪ್ರಯೋಗಗಳಿವೆ: 'ಚಿನ್ನದ'ಕ್ಕೆ ಪ್ರತಿಯಾಗಿ ಬಹುಶಃ ಚೀನದ(=ರೇಷ್ಮೆಯ)ಎಂದು ಪಾಠವಿದ್ದಿರಬಹುದು.

**೪೪.** ಈ ಕಂದಪದ್ಯದ ಅರ್ಥ ಸ್ಪಷ್ಟವಾಗಿ ತಿಳಿಯುವುದಿಲ್ಲ. ಈತಂ–ಇವನು (ಅರ್ಜುನ), ಬಿರ್ದಿನನ್–ಅತಿಥಿ, ಈತಂ–ಇವನು, ಭೂತಳಪತಿಯೆನಿಸಿದ-ರಾಜನು ಎನಿಸಿದ, ಅರಿಗಂ–ಅರಿಕೇಸರಿ ; ಹರಿ–ಕೃಷ್ಣನು, ಒಡೆಯಂ–ಸ್ವಾಮಿ ; ತಾನ್–ತಾನು, ಈತನೆ–ಇವನೇ ಬಿರ್ದಿನನೆನೆ–ಔತಣಕ್ಕೆ ಬಂದವನು, ನಂಟ ಎನ್ನಲು, ವಿಖ್ಯಾತಂಗೆ–ಪ್ರಸಿದ್ಧನಾದ, ನರಂಗೆ-ಅರ್ಜುನನಿಗೆ, ಅನಂತಂ-ಶ್ರೀಕೃಷ್ಣನು, ಸೆಱಪುಗಯ್ದಂ–ಸತ್ಕಾರ ಮಾಡಿದನು.

ಬಿರ್ದು, ಬಿರ್ದಿನ=(ತ) ವಿರುಂದು, ವಿರುಂದಿನನ್ – ಔತಣ, ಅತಿಥಿ ; ಸೆಱಪು=(ತ) ಶಿಱಪ್ಪು=ಊಟ, ಉಪಚಾರ

**ವಚನ:** ಸೆಱಪುಗೆಯ್ದು–ಉಪಚಾರಮಾಡಿ ;

೪೫. ಅರಿಗ-ಅರ್ಜುನನೇ, ನಾವಿರ್ವರುಂ-ನಾವಿಬ್ಬರೂ, ನರನಾರಾಯಣರೆನಿ-ನರ, ನಾರಾಯಣ ಎನ್ನಲು, ಆಯತಿಯಿಂದಂ-ಪರಸ್ಪರ ಅವಲಂಬನದಿಂದ, ನೆಗೆಟ್ಟ್ರಿವು-ಪ್ರಸಿದ್ಧರಾದೆವು, ನಡೆದುಕೊಂಡೆವು ; ಇಂತು-ಹೀಗೆ, ಈ ಯುಗದೊಳ್-ಈ ದ್ವಾಪರ ಯುಗದಲ್ಲಿ, ಈಗಳ್-ಈಗ, ಆಂ-ನಾನು, ನಾರಾಯಣನೆಂ-ನಾರಾಯಣನಾಗಿದ್ದೇನೆ, ನೀಂ – ನೀನು, ಉದಾತ್ತ ನಾರಾಯಣನಯ್ – ಉದಾತ್ತನಾದ ನಾರಾಯಣ ನಾಗಿರುತ್ತೀಯೆ.

ವಚನ: ಏತಜ಼ೊಳಂ – ಯಾವುದರಲ್ಲಿಯೂ ; ವಿಕಲ್ಪಮುಂ – ಭೇದವೂ, ವಿಚ್ಛಿನ್ನಮುಂ-ಅಗಲುವಿಕೆಯೂ ;

೪೬. ಇತ್ತಕಡೆ ಸೂರ್ಯ ಮುಳುಗುತ್ತಾನೆ: ಮುನ್ನಂ-ಮೊದಲು, ನವನಳಿನೀ ವನಂಗಳ ಪರಾಗ ರಜಂಗಳಂ-ಹೊಸದಾಗಿ ಅರಳಿದ ತಾವರೆಗಳ ತೋಟದ ಹೂನೀರನ್ನೂ, ದೂಳನ್ನೂ, ಉಂಡು-ತಿಂದು, ವಿಯತ್ತಳಭ್ರಮಣ ವಿಹ್ವಲನಾಗಿ-ಆಕಾಶದಲ್ಲಿ ಸುತ್ತಾಡು ವುದರಿಂದ ಅಸ್ಥಿರನಾಗಿ, ಬೞಲ್ದು-ಆಯಾಸಗೊಂಡು, ಕಾಱುವಂತೆವೋಲ್-ಕಕ್ಕುವ ಹಾಗೆ, ಕೆಂಪು-ಸಂಜೆಗೆಂಪು, ಇರೆ-ಇರಲು, ತತ್ಕ....ನಾದವೊಲ್ : ತತ್-ಆ, ಕಮಳ-ತಾವರೆ ಬಳ್ಳಿಯ, ಕಾನನ-ವನದ, ಕಂಟಕ-ಮುಳ್ಳಿನಲ್ಲಿ, ಲಗ್ನ-ಸಿಕ್ಕಿಕೊಂಡ, ಪಾದಂ-ಕಿರಣಗಳುಳ್ಳವನು, ಆದವೊಲ್-ಆದಹಾಗೆ, ಆತ್ಮಕರಮಂ--ತನ್ನ ಕಿರಣಗಳನ್ನು, ಉಡುಗುತ್ತಂ-ಸಂಕೋಚಗೊಳಿಸುತ್ತ, ರವಿ-ಸೂರ್ಯ, ಅಸ್ತಶೈಲಮಂ-ಅಸ್ತಾಚಲವನ್ನು, ಪೊರ್ದಿದಂ-ಸೇರಿದನು.

ವಚನ: ಆ ಪ್ರಸ್ತಾವದೊಳ್-ಆ ಸಮಯದಲ್ಲಿ.

೪೭. ಆ ಸರಸೀಜಬಾಂಧವನ-ಆ ಕಮಲಬಂಧುವಾದ ಸೂರ್ಯನ, ಪಿಂಬಡಿ ನೊಳ್-ಅನಂತರದಲ್ಲಿ, ಎಂದರೆ ಮುಳುಗಿದ ಮೇಲೆ, ಈ ಸರಸೀರುಹಂಗಳ್-ಈ ಕಮಲ ಗಳು, ಕಡುವಿನ್ನವಾದುವು-ಬಹಳ ಕ್ರಿಯಾಶೂನ್ಯವಾದವು, ನಿಶ್ಚೇಷ್ಟವಾದುವು ; ಈ ಪದದೊಳ್-ಈ ಸಮಯದಲ್ಲಿ, ಅವಂ-ಅವುಗಳನ್ನು, ಬಿಸುಟು-ಬಿಸಾಟು, ಬಿಟ್ಟು, ಎಂತು-ಹೇಗೆ, ಪೋಪೆಂ-ಹೋಗುವೆವು, ಎಂಬ, ಈ ಸಮುಕಟ್ಟಿನೊಳ್-ಈ ವ್ಯವಸ್ಥೆ ಯಲ್ಲಿ, ನೆಲಸಿದಂತೆ-ನಿಂತಂತೆ, ಉತ್ಕೇಸ....ಕಂಗಳೊಳ್ : ಉತ್ಕೇಸರಕೋಟಿ-ಮೇಲೆದ್ದ ಅಸಂಖ್ಯಾತ ಕೇಸರಗಳ, ಸಂಕಟ-ಇಕ್ಕಟ್ಟನ್ನುಳ್ಳ, ಕುಶೇಶಯ ಕೋಶ-ತಾವರೆಯ ಕೋಶವೆಂಬ, ಎಂದರೆ ತಾವರೆಯ ಮೊಗ್ಗೆಂಬ, ಕುಟೀರಕಂಗಳೊಳ್-ಗುಡಿಸಿಲುಗಳಲ್ಲಿ, ಷಟ್ಪದಂಗಳ್-ದುಂಬಿಗಳು, ಎಱಗಿರ್ದುವು-ಬಿದ್ದು ಇದ್ದವು. "ಸಂಕೋಚೋದಂಚ ದುಚ್ಚ ಕೇಸರಕೋಟಿ ಸಂಕಟಕುಶೇಶಯ ಕೋಶಕೋಟರ ಕುಟಿಶಾಯಿನಿ ಷಟ್ಚರಣ ಚಕ್ರೇ" ಎಂಬ (ಹರ್ಷಚರಿತೆ) ಬಾಣನ ವರ್ಣನೆಯನ್ನು ಇದರೊಡನೆ ಹೋಲಿಸಬಹುದು.

೪೮. ಚಕ್ರವಾಕಪಕ್ಷಿಗಳ ವಿಯೋಗ : ಚಂಡಮರೀಚಿಗೆ-ಸೂರ್ಯನಿಗೆ, ಅಸ್ತ ಮಯವಿಲ್ಲದುದು-ಮುಳುಗುವಿಕೆಯಿಲ್ಲದುದಾದ, ಒಂದೆಡೆ-ಒಂದು ಪ್ರದೇಶ, ನಿಮ್ಮ ಕೇಳ್ದುದುಂ ಕಂಡುದುಂ-ನೀವು ಕೇಳಿದ್ದೂ ಕಂಡದ್ದೂ, ಉಳ್ಳೊಡೆ-ಇರುವಪಕ್ಷದಲ್ಲಿ,

ಇಂ ಬೆಸಸಿಂ–ಇನ್ನು ಹೇಳಿರಿ, ಆಂ–ನಾವು, ಇರದೆ–ಬಿಡದೆ, ಅಲ್ಲಿಗೆ–ಆ ಎಡೆಗೆ, ಪೋಪೆವು-ಹೋಗುತ್ತೇವೆ, ಎಂದು – ಎಂಬುದಾಗಿ, ಪಕ್ಷಿಗಳೆಲ್ಲಮುಂ – ಎಲ್ಲಾ ಹಕ್ಕಿಗಳನ್ನೂ, ಮೆಯ್ಗೊಂಡ–ರೂಪಾಂತ, ಒಲವಿಂದೆ–ಪ್ರೀತಿಯಿಂದ, ಆಗಲ್ಕೆಗಣಮಾಜದೆ–ಆಗಲಿಕೆಗೆ ಸ್ವಲ್ಪವೂ ಸಮರ್ಥವಾಗದೆ, ಮರುಳ್ಗೊಂಡವೋಲ್–ಹುಚ್ಚು ಹಿಡಿದ ಹಾಗೆ, ಊಳ್ದು - ಕೂಗಿ, ಕೂಡೆ–ಕೂಡಲೆ, ಬೆಸಗೊಂಡು–ಕೇಳಿ, ಜಕ್ಕವಕ್ಕಿಗಳ್–ಚಕ್ರವಾಕ ಪಕ್ಷಿಗಳು, ಬೞಲ್ದುವು–ಆಯಾಸಗೊಂಡುವು.

**ವಚನ** : ಪಚ್ಚುಕೊಂಡು-ವಿಭಾಗಿಸಿಕೊಂಡು, ಹಂಚಿಕೊಂಡು ; ಅಸುಂಗೊಂಡು-ಬೇಗನೆ, ಶೀಘ್ರವಾಗಿ ; ಬೞಿಯಂ–ಅನಂತರ ; ಅಸು<(ಸಂ) ಆಶು+ಕೊಳ್= ಅಸುಂಗೊಳ್ ; ಇಲ್ಲಿ 'ಅಸುಂಗೊಳ್ ಪ್ರಾಣಾಪಹರಣೇ' ಎಂಬುದು ಸಂಗತವಾಗುವುದಿಲ್ಲ.

೪೯. ಕತ್ತಲಾಗುವುದು : ದಿತಿಸುತಂ–ರಾಕ್ಷಸನು, ಮುಂ–ಮೊದಲೇ, ಜಗ ಮೆಲ್ಲಮುಂ–ಜಗತ್ತನ್ನೆಲ್ಲ, ಮಸಿಯಿಂದಂ–ಕಾಡಿಗೆಯ ಕಪ್ಪಿನಿಂದ, ಪೂಸಿಬಿಟ್ಟನೋ–ಹೂತುಬಿಟ್ಟನೋ ; ಕಾಲಮೇಘಸಮೂಹಂ-ಕಪ್ಪು ಮೋಡಗಳ ಮೊತ್ತ, ದೆಸೆಯೆಲ್ಲಮುಂ ಎಲ್ಲಾ ದಿಕ್ಕುಗಳನ್ನೂ, ಕವಿದುದೋ–ಮುಚ್ಚಿಕೊಂಡಿತೋ ; ಶಂಭು–ಶಿವನು, ಗಂಧೇಭ ಚರ್ಮಂಗಳಂ–ಸೊಕ್ಕಾನೆಯ ಚರ್ಮವನ್ನು, ಪಸರಂಗೆಯ್ದನೋ–ಬಿಚ್ಚಿ ಹರಡಿದನೋ, ಎಂಬ, ಬಗೆಯಂ–ಚಿಂತನೆಯನ್ನು, ತಳ್ಪೊಯ್ದು–ಪ್ರತಿಘಾತಿಸಿ, ಕೞ್ಪೇೞ್–ಕಪ್ಪು ಬಣ್ಣವು ವೃದ್ಧಿಯಾಗಲು, ಸೂಚಿಸಲಾರ್ಗಂ ವಶಮಾಗದಂತು – ಸೂಚಿಸುವುದಕ್ಕೆ ಯಾರಿಗೂ ಶಕ್ಯವಾಗದಿರುವಂತೆ, ಉದ್ದಾಮ ಭೀಮಂ ತಮಂ – ಅತಿಶಯವಾಗಿ ಭಯಂಕರವಾದ ಕತ್ತಲೆ, ಕವಿದತ್ತು–ಮುಸುಕಿತು.

**ವಚನ** : ತಾರಾಗಣಂಗಳ್-ನಕ್ಷತ್ರ ಸಮೂಹಗಳು ; ದಿಶಾವನಿತೆಯರ-ದಿಕ್ಕೆಂಬ ಸ್ತ್ರೀಯರ ; ಮಕುಟಮಾಣಿಕಂಗಳಂತೆ–ಕಿರೀಟದ ರತ್ನಗಳಂತೆ ; ಎನಿತು ಬೆಳಗಿಯುಂ–ಎಷ್ಟು ಹೊಳೆದರೂ ; ಕೞ್ತಲೆಯಂ–ಕತ್ತಲೆಯನ್ನು : ಅಲೆಯಲಾಱವಾದವು–ಪೀಡಿಸ ಲಾರದಾದುವು, ಎಂದರೆ ತೊಲಗಿಸಲಸಮರ್ಥವಾದುವು. ಕನಕಪ್ರಾಸಾದ ಪಂಕ್ತಿಗ[ಳ]-ಚಿನ್ನದ ಉಪ್ಪರಿಗೆ ಮನೆಗಳ ; ಸೊಡರ್ಗಳಂ–ದೀಪಗಳನ್ನು ; ತಮೋರಾಜಕಂ–ಕತ್ತಲೆ ಯೆಂಬ ರಾಜ ; ಬೆಳಗಿನ ಸೆಱೆಯ–ಬೆಳಕೆಂಬ ಬಂದಿಯ ; ಬಂಬಲ್ಗಳೆ–ಗುಂಪುಗಳೆ : ವಿಮುಖೀಭೂತಂಗಳಾದುವು-ಮುಖತಿರುಗಿಸಿಕೊಂಡುವು ಆದುವು ; ತಂಡತಂಡದೆ-ಗುಂಪು ಗುಂಪಾಗಿ ; ನೂಪುರಂಗಳ್-ಕಾಲಂದಿಗೆಗಳ ; ದೀರ್ಘಿಕಾ-ಕೊಳಗಳ : ತಳವೆಳಗಾದುವು-ಭ್ರಾಂತಿಗೊಂಡುವು ; ಪಾರಾವತ–ಪಾರಿವಾಳ ; ಅಂತರಾಳ–ಒಳಗಡೆಯ ; ಕಟಕ–ತಪ್ಪಲಿನ ; ಕುಹರ–ಗವಿಗಳ ; ಪರಿಕರ–ಸಹಾಯುವನ್ನುಳ್ಳ, ನಿಶಾಕರಂ–ಚಂದ್ರನು ; ಹರಿದಳಿತ–ಸಿಂಹದಿಂದ ಸೀಳಲ್ಪಟ್ಟ ; ಹರಿಣ ರುಧಿರ ನಿಚಯ–ಜಿಂಕೆಯ ರಕ್ತದ ರಾಶಿಯಿಂದ, ನಿಚಿತವಾದಂತೆ–ತುಂಬಿದಂತೆ, ಲೋಹಿತಾಂಗನಾಗೆ–ಕೆಂಪೇರಿದ ದೇಹ ವುಳ್ಳವನಾಗಲು. ಈ ವಚನದ ಕೊನೆಯ ಮೂರು ಸಾಲುಗಳನ್ನು "ಭಗವತ್ಯುದಯಗಿರಿ ಶಿಖರ ಕಟಕ ಕುಹರ ಗತ ಹರಿ ಖರ ನಖರ ನಿವಹ ಹೇತಿ ನಿಹತ ನಿಜ ಹರಿಣ ಗಳಿತ

ರುಧಿರ ನಿಚಯ ನಿಚಿತನಿಃವ ಲೋಹಿತಂ ವಪುಃ" ಎಂಬ ಹರ್ಷಚರಿತೆಯ (೧) ಗದ್ಯಭಾಗದೊಡನೆ ಹೋಲಿಸಬಹುದು. ಇವರ ಸಹಾಯದಿಂದ ಪಂಪನ ಪಂಕ್ತಿಗಳ ಪಾಠವನ್ನು ಸರಿಪಡಿಸಲು ಸಾಧ್ಯವಾಗುತ್ತದೆ.

೫೦. ಚಂದ್ರೋದಯದ ವರ್ಣನೆ:—ಸಂಜೆಯೊಳ್-ಸಂಜೆಯೆಂಬ ಸ್ತ್ರೀಯಲ್ಲಿ, ನೆರೆವಯ್-ಕೂಡಿನೆ, ಎಂದು, ಕಾಯ್ದು-ಕೋಪಿಸಿ, ಒದೆವೊಡೆ-ಒದ್ದರೆ, ರೋಹಿಣೀ ಚರಣಾಲಕ್ತಕರಾಗಂ-ಚಂದ್ರನ ಹೆಂಡತಿಯಾದ ರೋಹಣೀ ನಕ್ಷತ್ರದ ಕಾಲುಗಳಿಗೆ ಬಳಿದ ಅರಗಿನ ಕೆಂಬಣ್ಣ, ಆತ್ಮಾಂಗದೊಳ್-ತನ್ನ ದೇಹದಲ್ಲಿ, ಅಚ್ಚಿಱಿದುದೋ—ಎರಕವಾಯಿತೋ, ಏನ್-ಏನು ? ಮೇಣ್-ಅಥವಾ, ಕಾಮಿಗಳ್ಗೆ-ಕಾಮಪೀಡಿತರಿಗೆ, ಈವ-ಕೊಡುವ, ರಾಗರಸಂ-ಪ್ರೇಮವರ್ಧನಕಾರಿಯಾದ ರಸವು, ಪೊಣ್ಮಿದುದೋ-ಹೊಮ್ಮಿತೋ, ತಮೋಗಜದ-ಕತ್ತಲೆಯೆಂಬ ಆನೆಯ, ಕೋಡ-ಕೊಂಬಿನ, ದಂತದ, ಏಱಿಂದಂ-ಗಾಯದಿಂದ, ಹರಿಣಂ ತಾಂ-ಜಿಂಕೆ ತಾನು, ನೊಂದುದೋ, ಏನ್-ಏನು ? ಸುಧಾಸೂತಿಯಾ-ಚಂದ್ರನ, ಬಿಂಬಂ-ಮಂಡಲವು, ರಕ್ತರುಚಿಯಿಂ-ಕೆಂಪುಕಾಂತಿಯಿಂದ, ಎನಿಸಿತ್ತು-ಎನ್ನುವಂತೆ ಇತ್ತು. ಈ ಪದ್ಯದ ಪ್ರಥಮ ಪಂಕ್ತಿಯನ್ನು "ರತಿಕಲಹಕುಪಿತ ರೋಹಿಣೀ ಚರಣಾಲಕ್ತಕ ರಸ ಲಾಂಛಿತಮಿವಾಭಿನವೋದಯ ಲೋಹಿತಂ ರಜನಿಕರ ಮುದಿತಂ" ಎಂಬ 'ಕಾದಂಬರಿ' (ಬಾಣ) ಯ ವಾಕ್ಯದೊಡನೆ ಹೋಲಿಸಿ.

**ವಚನ :** ತನ್ನರಾಗಮಂ-ತನ್ನ ಕೆಂಬಣ್ಣವನ್ನು; ರಾಗಿಗಳ್ಗೆ-ಪ್ರೇಮಿಗಳಿಗೆ, ಪಚ್ಚಿಕೊಟ್ಟಂತೆ-ಹಂಚಿಕೊಟ್ಟಹಾಗೆ, ಪತ್ತುವಿಟ್ಟಾಗಳ್-ಬಿಟ್ಟು ಹೋದಾಗ.

೫೧. ಮುಂ-ಮೊದಲು, ಈಶಂ-ಶಿವನು, ಮುನಿದು-ಕೋಪಿಸಿ, ತವೆ-ಚೆನ್ನಾಗಿ (ನಾಶವಾಗುವಂತೆ) ಸುಟ್ಟು, ಪುನರ್ಜನ್ಮಮಂ-ಮರುಹುಟ್ಟನ್ನು, ನಿನಗೆ, ಇತ್ತಂ-ಕೊಟ್ಟನು, ಎಂದು, ಆ ರತಿ-ಆ ಕಾಮನ ಹೆಂಡತಿಯಾದ ರತಿದೇವಿ, ಪಾಪಮುಂ-ಪಾಪವೂ, ಪಡಣಮುಂ-ಪತನವೂ, ಪೋಪಂತೆ-ತೊಲಗುವಂತೆ, ಕಾಮಂಗೆ-ಮನ್ಮಥನಿಗೆ, ಮಜ್ಜನಕೆಂದೆತ್ತಿದ-ಸ್ನಾನಕ್ಕೆಂದು ಮೇಲೆತ್ತಿಕೊಂಡ, ಚಂದ್ರಕಾಂತಘಟದೊಳ್-ಚಂದ್ರಕಾಂತ ಶಿಲೆಯ ಕಲಶದಲ್ಲಿ, ಅಱ್ತಿಯಿಂ-ಪ್ರೀತಿಯಿಂದ, ತಂದು, ಪುಷ್ಪವಾಸನೆಗೆ ಎಂದು-ಹೂವಿನಕಂಪು ಮಿಶ್ರವಾಗಲಿ ಎಂದು, ಇಕ್ಕಿದ-ಹಾಕಿದ, ನೀಳನೀರರುಹಮಂ-ಕರಿದಾದ ತಾವರೆಯನ್ನು, ಇಂದುವಾ-ಚಂದ್ರನ, ಕಪ್ಪು-ಕಪ್ಪು, ಕರೆ, ಪೋಲ್ತುದು-ಹೋಲಿತು. ಚಿನ್ನದ ಕೊಡದಮೇಲೆ ಕರಿತಾವರೆ ಇಟ್ಟರೆ ಹೇಗೋಹಾಗೆ ಚಂದ್ರಬಿಂಬದ ಮಧ್ಯದ ಕರೆ ಕಾಣುತ್ತಿತ್ತು. ಇಲ್ಲಿ "ಪಡಣ", ಶಬ್ದ ವಿಚಾರಣೀಯ ; "ಅದಂ ಕೇಳ್ದು ವಿದೂಷಕನೀಕೆ....ಹಡಣವೊಣಗಿದ ಪಳೆಯ ಸಿದ್ದಿಗೆಯಂತೆ....ತನ್ನ ಸೌಭಾಗ್ಯಮಂ ಬೇಟದಮೇಲೆ ನೆವಮಿಕ್ಕಿದಪಳೆಂದರಸನಂ ನಗಿಸಿದಂ" (ಲೀಲಾ ೨-೧೧೭) ; "ಹಡಣಂ ಪೋದತ್ತು ಕುತ್ತಂ ಕಟಿದುದು, ಶನಿ ಪಿಂಗಿತ್ತು" (ಸೂಕ್ತಿಸು. ೮-೪೪೫) ಎಂಬ ಎರಡು ಪ್ರಯೋಗಗಳಿವೆ, ಆದರೆ ಅರ್ಥವೇನೋ ಸ್ಪಷ್ಟವಾಗಿಲ್ಲ. (ಸಂ.) ಪತನ <ಪ್ರಾ. ಪಡಣ: "ಪತನ"ಕ್ಕೆ ಬೀಳುವುದು, ನರಕ, ಸಾವು ಎಂಬಿತ್ಯಾದಿ ಅರ್ಥಗಳು ಇವೆ ; ಇದನ್ನೇ ಇಲ್ಲಿ

ಆಶ್ರಯಿಸಿದೆ; "ಸ್ತ್ರೀಯರ ಪಾಪಫಲವಂ ಕೇಳೆಂದಿಂತೆಂದಂ ಗರ್ಭದೊಳಿರ್ದಂದಿನ ದುಃಖಮುಂ ಕನ್ಯಾಕಾಲದೊಳಭಿಮತಲಕ್ಷಣಮಾಗೆ ಪುಟ್ಟಿದ ಮನೆಯೊಳಂ ಕೊಟ್ಟ ಮನೆಯೊಳಂ ದೂಱಿಯುದ್ವುದುಂ, ಬಂಜೆಯಪ್ಪುದುಂ ಬಡತನಮುಪ್ಪುದುಂ ಪಡಣಿಗೆಯೆಂದು ಗಂಡನೊಲ್ಲದೆ ಬಿಸುಟ್ಟಿಪ್ಪುದುಂ" (ಚಾವುಂಪು : ಸೀತೆಯ ಕಥೆ) ಎಂಬೆಡೆಯಲ್ಲಿ 'ಪಡಣಿಗೆ' ಪ್ರಯೋಗವಾಗಿದೆ, ಇದಕ್ಕೆ ಪತಿತಳಾದವಳು, ಕೆಟ್ಟುಹೋದವಳು ಎಂಬರ್ಥ ಹೊಂದುತ್ತದೆ; 'ಪತನಿಕಾ' ಎಂಬ ಶಬ್ದವೊಂದಿದ್ದರೆ ಅದರ ಪ್ರಾಕೃತರೂಪ "ಪಡಣಿಗೆ" ಎಂದಾಗುತ್ತದೆ.

೫೨. ನಭೋಂತರ್ಭೂವಿವಿರಮುಂ-ಆಕಾಶದ ಭೂಮಿಯ ನಡುವಣ ಪ್ರದೇಶವನ್ನು, ಅಮರ್ದಿನ ಎಸಕಂ–ಅಮೃತದ ಶೋಭೆ, ಆವರಿಸಿತ್ತೋ–ಆವರಿಸಿಕೊಂಡಿತ್ತೋ, ಎನೆ–ಎನ್ನಲು, ವಿರಹಿಗಳ್-ಅಗಲಿದ ಪ್ರಣಯಿಗಳು, ಓ ಓ ಇದು-ಕಾಪಾಡಿ, ಕಾಪಾಡಿ, ಇದು, ಮದನನ–ಕಾಮನ, ಸೋದನ ದೀವಿಗೆಯೆನೆ–ಹುಡುಕುವುದಕ್ಕಾಗಿ ಬಳಸುವ ದೀಪವೊ ಎನ್ನಲು, ತುಹಿನಕರಂ–ಚಂದ್ರ, ತೊಳಗಿಬೆಳಗಿದಂ–ಹೊಳೆದು ಬೆಳಗಿದನು.

ವಚನ : ಅಚ್ಚಬೆಳ್ದಿಂಗಳೊಳ್ – ಶುಭ್ರವಾದ ಬೆಳುದಿಂಗಳಿನಲ್ಲಿ : ಸುಧಾಧವಳಿತ–ಸುಣ್ಣದಿಂದ ಬೆಳ್ಳಗಾಗಿಸಲ್ಪಟ್ಟ ; ಸಿರಿಯೋಲಗಂಗೊಟ್ಟು – ಐಶ್ವರ್ಯಮಯವಾದ ಆಸ್ಥಾನದಲ್ಲಿದ್ದು ;

೫೩. ಆಗಳ್–ಆಗ, ಭೋಗಿ-ಸುಖಿಯಾದ, ಅರ್ಜುನನು, ಅನಂತಂ–ಕೃಷ್ಣನು, ಅನಂತ ಫಣಾಮಣಿಕಿರಣ–ಆದಿಶೇಷನ ಹೆಡೆಯ ರತ್ನದಕಾಂತಿ, ಎಸೆಯೆ–ಪ್ರಕಾಶಿಸಲು, ದುಗ್ಧಾರ್ಣವದೊಳ್ – ಹಾಲ್ಗಡಲಲ್ಲಿ, ರಾಗದಿಂ – ಸಂತೋಷದಿಂದ, ಇರ್ಪಂತೆ–ಇರುವಹಾಗೆ, ಕೆಯ್ದಿವಿಗೆಗಳ್–ಕೈದೀಪಗಳು, ಶಜಿತ್ತರಿಸಿ–ಪ್ರಕಾಶಿಸಿ, ಬೆಳಗೆ–ಬೆಳಗಲು, ಇರ್ದಂ–ಇದ್ದನು.

೫೪. ಅತ್ತ–ಅತ್ತಕಡೆ, ಸುಭದ್ರೆಯುಂ–ಸುಭದ್ರೆಯು ಕೂಡ, ಒಡಲ್ ಉರಿಯುತ್ತಿರೆ–ವಿರಹತಾಪದಿಂದ ಮೈಸುಡುತ್ತಿರಲು, ಮರವಟ್ಟು–ಮರದಹಾಗೆ ಮಲಗಿ ಎಂದರೆ ನಿಶ್ಚೇಷ್ಟಳಾಗಿ, ವಿಜಯನಿರ್ದತ್ತಲೆ–ಅರ್ಜುನನು ಇದ್ದ ಕಡೆಗೇ, ನೋಡುತ್ತಿರೆ–ನೋಡುತ್ತಿರಲು, ಆಕೆಯರೂಪಂ–ಅವಳ ಆಕಾರವನ್ನು, ಕೆಳದಿಯರ ತಂಡಂ–ಸಖಿಯರ ಸಮೂಹ, ಸುಸಾಳಭಂಜಿಕೆಗೆತ್ತುದು–ಸೊಗಸಾದ ಬೊಂಬೆಯೆಂದು ಭಾವಿಸಿತು.

೫೫. ನಾಣ್–ನಾಚಿಕೆ, ಲಜ್ಜೆ, ಕನ್ನೆತನಂಗೆಯ್ಯಲ್–ಕನ್ಯಾಭಾವವನ್ನು ತೋರಿಸಲು, ಬಗೆಗುಂ–ಎಣಿಸುತ್ತಿದೆ ; ಮನಮುಂ–ಮನಸ್ಸು ಕೂಡ, ಮಿಗೆ–ಹೆಚ್ಚಾಗಿ, ಇಟ್ಟುವರಿಯಲ್–ಎಳೆದುಕೊಂಡು ಹೋಗಲು, ಬಗೆಗುಂ ಯೋಚಿಸುತ್ತಿದೆ ; ತನ್ನಳಿಪಂ-ತನ್ನ ಪ್ರೇಮವನ್ನು, ಕನ್ನಡಿಕುಂ–ಕನ್ನಡಿಸುತ್ತದೆ, ಎಂದರೆ ಪ್ರತಿಫಲಿಸುತ್ತದೆ; ಕನ್ನೆ–ಸುಭದ್ರೆ ತನ್ನಲೆ–ತನ್ನಲ್ಲಿಯೇ, ತಾಂ–ತಾನು, ಇಂತು-ಹೀಗೆ, ತಳವೆಳಗಾದಳ್–ತಬ್ಬಿಬ್ಬಾದಳು, ಅಸ್ಥಿರಳಾದಳು.

೫೬. ಹರಿಗನ–ಅರ್ಜುನನ, ಪಡೆಮಾತನೆ–ಸುದ್ದಿಯನ್ನೇ, ನುಡಿಯಿಸಿ–

ಕೆಳದಿಯರಿಂದ ಮಾತಾಡಿಸಿ, ಕೇಳ್ಗುಂ–ಕೇಳುತ್ತಾಳೆ, ಮಾತು, ತಪ್ಪೊಡಂ–ಮುಗಿದ ಪಕ್ಷದಲ್ಲಿ, ಮತ್ತಂ – ತಿರುಗಿಯೂ, ಅದಂ – ಅದನ್ನೇ, ಮೊದಲಿಂದ – ಆರಂಭದಿಂದ ನುಡಿಯಿಸುಗುಂ–ಹೇಳಿಸುತ್ತಾಳೆ; ಆ ನುಡಿ ಪಱಪಡೆ–ಆ ಮಾತು ನಿಂತುಹೋಗಲು, ಕೆಳದಿಯರಂ–ಸಖಿಯರನ್ನು, ಮುಳಿದು–ಕೋಪಿಸಿ, ನೋಡುಗುಂ–ನೋಡುತ್ತಾಳೆ. ತಪ್ಪೊಡೆ<ತವು+ದ=ತಪ್ಪ+ಒಡೆ; ಪಱಪಡು=ಪಱ+ಪಡು–ಕತ್ತರಿಸಿಬೀಳು, ನಡುವೆನಿಲ್ಲು, ಮುಗಿ.

೫೭. ಅಱಿಮರುಳ್ – ತಿಳಿವು ಭ್ರಮೆಗೊಳ್ಳುವುದು ಎಂದರೆ ಮನೋ ವೈಕಲ್ಯವು, ಅಂತುಟೆ–ಹಾಗೆಯೇ; ಸೊರ್ಕಿನ–ಸೊಕ್ಕಿನ, ಮೆಯ್ಮರವಿನ, ತೆಱ [ನಂ] ಶುಟೆ – ರೀತಿ ಹಾಗೆಯೇ; ಮನಮೊಱಲ್ವುದು – ಮನಸ್ಸು ಪ್ರೀತಿಸುತ್ತದೆ, ಎರ್ದೆ ಯುರಿವುದು–ಎದೆ ಉರಿಯುತ್ತದೆ. ಮೆಯ್ ಎಱಗುವುದು – ಮೈ ಬಾಗುತ್ತದೆ, ಪದೆವುದು–ಬಯಸುತ್ತದೆ, ಇದಂ–ಇದನ್ನು, ಅನ್–ನಾನು, ಇದೇಕೆಂದು–ಇದು ಏಕೆ ಎಂದು, ಅಱಿಯೆಂ–ತಿಳಿಯೆನು, ಎಂಚು, ಕನ್ನೆ, ತಳವೆಳಗಾದಳ್–ಭ್ರಾಂತಳಾದಳು.

೫೮. ಆನೆಯನೇಱಿ–ಆನೆಯನ್ನು ಹತ್ತಿ, ಸೌಷ್ಠವದೆ–ಸೊಗಸಿನಿಂದ, ಬರ್ಪ– ಬರುವ, ಅರಿಕೇಸರಿಯ–ಅರ್ಜುನನ, ಒಂದು ಗಾಡಿಯ–ಒಂದು ಚೆಲುವಿನ, ಉದ್ವಾನಿ– ಅತಿಶಯವು, ತಗುಳ್ದು–ಬೆನ್ನಟ್ಟಿ, ಕಣ್ಣೊಳೆ ತೊಟಿಲ್ದು–ಕಣ್ಣಲ್ಲಿಯೇ ಸುತ್ತಾಡಿ, ಎರ್ದೆಯೊಳ್–ಮನಸ್ಸಿನಲ್ಲಿ, ತಡಮಾಡೆ–ನಿಧಾನವಾಗಿ ಚಲಿಸಲು, ಬೇಟದ–ಪ್ರೇಮದ, ಉಪ್ಪಾನಿಯಂ–ಆಧಿಕ್ಯವನ್ನು, ಆನೆ–ತಾಳಲು, ಪಡೆಯಲು, ಮನ್ಮಥಮಹೀಭುಜಂ– ಕಾಮನೆಂಬ ರಾಜನು, ಓವದೆ–ರಕ್ಷಿಸದೆ, ನಿರ್ದಾಕ್ಷಿಣ್ಯವಾಗಿ, ತೋಱಕೊಟ್ಟ–ತೋರಿಸಿ ಬಿಟ್ಟ ಎಂದರೆ ಛೂ ಬಿಟ್ಟ, ಒಂದು ಆನೆಯೆ–ಒಂದು ಆನೆಯೇ, ತನ್ನಂ–ತನ್ನನ್ನು, ಆನೆಗೊಲೆಗೊಂಡಪುದು–ಆನೆಯ ಕೊಲೆಯನ್ನು ಕೊಲ್ಲುತ್ತದೆ ಎಂದರೆ ಆನೆಯು ಕೊಲ್ಲುವ ಹಾಗೆ ಕೊಲ್ಲುತ್ತದೆ, ಎಂದು, ಲತಾಂಗಿ–ಸುಭದ್ರೆ, ಬೆರ್ಚಿದಳ್–ಹೆದರಿದಳು, ಇಲ್ಲಿನ 'ಆನೆಗೊಲೆ ಕೊಲ್' ಎಂಬ ನುಡಿಗಟ್ಟು 'ಆಸಗವೊಯಿಲ್ವೊಯಿಯ್' ಎಂಬುದಕ್ಕೆ ರಚನೆಯಲ್ಲಿ ಸಮಾನಾಗಿದೆ.

೫೯. ಮನಂ–ಮನಸ್ಸು, ಆರಾಧಿತ ಹೋಮಭೂಮಿ–ಪೂಜಿಸಲ್ಪಟ್ಟ ಯಜ್ಞ ಭೂಮಿ; ಕಾಮಾತುರರ್–ಕಾಮಪೀಡಿತರು, ಪಶುಗಳ್–ಬಲಿಯಾದ ಪ್ರಾಣಿಗಳು; ಬಂದ ಮಾವನಿತುಂ–ಫಲವಾದ ಮಾವಿನ ಮರಗಳಷ್ಟೂ, ಸ್ಥಾಪಿತ–ನೆಟ್ಟ, ಯೂಪ ಕೋಟಿ–ಬಲಿಗಂಬಗಳು, ಬಳವತ್–ಬಲದಿಂದ ಕೂಡಿದ, ಕಾಮಾಗ್ನಿ–ಕಾಮವೆಂಬ ಉರಿಯೇ, ಹೋಮಾಗ್ನಿ–ಹೋಮ ಮಾಡುವ ಅಗ್ನಿ, ಚಂದನ ಕರ್ಪೂರ ಮೃಣಾಳ ನಾಳಮೆ–ಶ್ರೀಗಂಧ, ಕರ್ಪೂರ, ತಾವರೆಯ ದಂಟು–ಇವುಗಳೇ, ಪೊದಳ್ದ–ಹರಡಿದ, ಇಧ್ಮಂಗಳ್–ಸೌದೆಗಳು. ಇಂತಾಗೆ–ಹೀಗಾಗಲು, ತಾನಿನಿತುಂ–ಇಷ್ಟೆಲ್ಲಾ ತಾನು, ಕಾಮನ–ಮನ್ಮಥನ, ಬೇಳ್ವೆಯೆಂದು–ಯಜ್ಞವೆಂಬುದಾಗಿ, ತನ್ವಂಗಿ–ಕೃಶಾಂಗಿಯಾದ ಸುಭದ್ರೆ, ಬೆಳ್ದಿಂಗಳೊಳ್–ಬೆಳುದಿಂಗಳಿನಲ್ಲಿ, ಸುಗಿದಳ್–ಭಯಪಟ್ಟಳು.

**ವಚನ** : ಸ್ರೋತೋಭಂಗೊಂಡ-ತಡೆಯಲ್ಪಟ್ಟ, ಸ್ತಂಭಿತವಾದ ; ಗ್ರಹಗೃಹೀತೆಯಾಗಿರೆ-ಗ್ರಹದಿಂದ ಹಿಡಿಯಲ್ಪಟ್ಟವಳಾಗಿರಲು ; ಸ್ವೇದ-ಬೆವರು ; ವೈವರ್ಣ್ಯ-ಬಣ್ಣ ಮಾಸುವಿಕೆ ; ಅನಾಹಾರ-ಆಹಾರವಿಲ್ಲದಿರುವುದು ; ಅಶ್ರುಮೋಕ್ಷ-ಕಣ್ಣೀರು ಸುರಿಸುವುದು ; ನಾನಾ ವಿಕಾರಂಗಳ್-ನಾನಾಬಗೆಯಾದ ವ್ಯತ್ಯಾಸಗಳು, ದಶಾವಸ್ಥೆಗಳು ;

**೬೦.** ಪದೆವೆರ್ದೆ-ಪ್ರೀತಿಸುವ ಹೃದಯ, ಬತ್ತೆ-ಒಣಗಲು, ಕೆತ್ತುವ-ನಡುಗುವ ಅಧರಂ-ತುಟಿ, ದೆಸೆಗೆಟ್ಟ – ಸ್ಥಿತಿ ಕೆಟ್ಟ, ಅಲರ್ಗಣ್ಣ – ಹೂವಿನಂತಿರುವ ಕಣ್ಣಿನ, ನೋಟಂ-ದೃಷ್ಟಿ ; ಉಣ್ಮಿದ-ಹೊರಸೂಸಿದ, ಬೆಮರ್-ಬೆವರು ; ಓಳಿವಟ್ಟ-ಸಾಲಾಗಿ ಬರುವ, ನಿಡುಸುಯ್-ನಿಟ್ಟುಸಿರು ; ತೊದಳಿಂಗೆ-ತೊದಲಿಗೆ, ಎಡೆಗೊಂಡ-ಅವಕಾಶವಿತ್ತ, ಮಾತು ; ಕುಂದಿದ-ಕುಗ್ಗಿಹೋದ, ಲತಿಕಾಂಗಂ-ಬಳ್ಳಿಮೆಯ್ಯಿ ; ಒಂದಿದ-ಉಂಟಾದ, ವಿಕಾರಂ-ದೇಹವಿಕಾರವು, ಅದು, ಈಕೆಯೊಳ್-ಇವಳಲ್ಲಿ, ಆದುದು-ಉಂಟಾಯಿತು ; ಇಂತಿದು-ಹೀಗೆ ಇದೆಲ್ಲಾ, ಕುಸುಮಾಸ್ತ್ರನೆಂಬ-ಮನ್ಮಥನೆಂಬ, ಅದಟಂ-ಶೂರನು, ಇಕ್ಕಿದ-ಹಾಕಿದ, ಸೊಕ್ಕಿನ-ಕಾಮೋನ್ಮಾದದ, ಗೊಡ್ಡಮಾಗದೇ-ಚೇಷ್ಟೆಯಾಗಿಲ್ಲವೆ? ಆಗಿದೆ. ಗೊಡ್ಡ > (ಪ್ರಾ) ಕುಡ್ಡ, ಕೋಡ್ಡ-ಆಶ್ಚರ್ಯ, ಕುತೂಹಲ.

**೬೧.** ಕಱಯಲರಾದ-ಕಳಿತ ಹೂವಾದ, ಅಜ್ಜಿ ಹೂವಾದ, ಸಂಪಿಗೆಯಬಣ್ಣದವೋಲೆ-ಸಂಪಿಗೆ ಹೂವಿನ ಬಣ್ಣದ ಹಾಗೆ, ಬೆಳರ್ತ-ಬಿಳುಪಾದ, ಬಣ್ಣದೊಳ್-ಬಣ್ಣದಲ್ಲಿ, ಕಣ್ಗಳ ಮೊದಲ್ಗಳೊಳ್-ಕಣ್ಣುಗಳ ಮುಂಭಾಗದಲ್ಲಿ, ಕೆಂಪು-ಕೆಂಬಣ್ಣ, ಗಱಯಿಸೆ-ಉಂಟಾಗಲು, ಒಯ್ಯನೆ-ಮೆಲ್ಲಗೆ, ತೋಱೆ-ತೋರಿಬರಲು, ಮೆಯ್ಯೊಳೆ-ಮೈಯಲ್ಲಿಯೇ, ಬಾಡಿ-ಬತ್ತಿ, ಪಾಡಱದು-ಸ್ಥಿತಿಗೆಟ್ಟು, ಬಱಲ್ದು-ಬಾಗಿ, ಜೋಲ್ದ-ನೇಲುತ್ತಿರುವ, ಇರವು-ಸ್ಥಿತಿ, ಮೆಯ್ವಿಡಿದು-ಮೈಯನ್ನು ಹಿಡಿದು, ಎನ್ನ-ನನ್ನ, ಕಣ್ಗಳೊಳ್-ಕಣ್ಣುಗಳಲ್ಲಿ, ಸುಱದುವು-ಸುಳಿದಾಡಿದವು ; ತಾಮೆ-ತಾವೇ ಇವೆಲ್ಲ, ಕನ್ನೆಯ-ಕನ್ಯೆಯ, ಕನ್ನೆವೇಟಮಂ-ಕನ್ಯಾ ಪ್ರೀತಿಯನ್ನು, ಪ್ರಥಮ ಪ್ರೀತಿಯನ್ನು, ಕನ್ನಡಿಸಿದಪ್ಪುವು-ಪ್ರತಿಬಿಂಬಿಸುತ್ತಿವೆ.

**ವಚನ :** ಕುಂಚದಡಪದ ಡವಕೆಯ-ಕುಂಚವನ್ನು ಹಿಡಿಯುವ, ಅಡಕೆಲೆ ಚೀಲವನ್ನು ಹಿಡಿಯುವ, ಪೀಕುದಾನಿಯನ್ನು ಹಿಡಿಯುವ, ಪರಿಚಾರಿಕೆಯರೆಲ್ಲರುಮಂ-ಸೇವಕಿಯರನ್ನೆಲ್ಲ, ಕಣ್ಗೆತ್ತಿ-ಕಣ್ಣು ಸಂಜ್ಞೆಯಿಂದ, ಕಣ್ಣನ್ನು ಮಿಟುಕಿಸಿ, ಕಳೆದು-ಕಳಿಸಿಬಿಟ್ಟು.

**೬೨.** ಈ ಕದಂಪುಗಳ್-ಈ ಕೆನ್ನೆಗಳು, ಮೃಗಪದ ಪತ್ರರೇಖೆಗಳಂ-ಕಸ್ತೂರಿಯಿಂದ ಬರೆದ ಪತ್ರಭಂಗವನ್ನು, ಏಕೆಗೆ-ಏಕೆಳೆ ಅಥವಾ ಏಕೆಯೋ, ತಾಳ್ದಿರದಾದಪು-ತಾಳಿಕೊಂಡಿರದಂಥವಾದುವು ; ಹಾರಮಣಿ ಮಂಜರಿಯಿಲ್ಲದೆ-ಹಾರದ ರತ್ನಖಚಿತವಾದ ಗೊಂಚಲು ಇಲ್ಲದೆ, ಉರ-ಎದೆಯು, ಏಕೆ-ಏತಕ್ಕೆ. ಬಿನ್ನಗಿರ್ದುದು-ಶೂನ್ಯವಾಗಿದೆ, ಬರಿದಾಗಿದೆ ; ಹೇಮರಶನಾ ಧ್ವನಿಯಿಲ್ಲದೆ-ಚಿನ್ನದ ಒಡ್ಯಾಣದ ಸದ್ದಿಲ್ಲದೆ, ಈ ಜಗನಂ ಈ ಸೊಂಟವು, ಏಕೆ-ಏತಕ್ಕೆ, ಮೂಗುವಟ್ಟುದು-ಮೂಕವಾಯಿತು; ಈ ಬಗೆಯೊಳ್-ಈ

ರೀತಿಯಲ್ಲಿ, ಪಾದಪಂಕಜಂ–ಕಮಲದಂತಿರುವ ಪಾದವು, ಅಲಕ್ತಕದ್ರವದೊಳೊಂದದೆ–ಅರಗಿನ ರಸದಿಂದ ಲಿಪ್ತವಾಗದೆ,ನಿಂದುವು–ನಿಂತವು, ಏಕೆ ಅರಗಿನ ರಸವನ್ನು ಪಾದಗಳಿಗೆ ಬಳಿಯದೆ ಇದೆ. ಪ್ರೇಮ ಪೀಡಿತರಿಗೆ ಯಾವುದೂ ಬೇಕಾಗುವುದಿಲ್ಲ; ಇದಕ್ಕೆ ಅರತಿ ಎಂದು ಕರೆದಿದೆ. ಇಲ್ಲಿ ಬರುವ ಏಕೆಗೆ ಎಂಬ ಶಬ್ದ ಗಮನಾರ್ಹ. ಏಕೆ ಎಂಬುದಿಷ್ಟೆ ಸಾಕು, ಅದಕ್ಕೆ–ಗೆ ಏತಕ್ಕೆ ಸೇರಿದೆ; ಇದು ಯಾವ ಪ್ರತ್ಯಯ? ಈ ಹಿಂದೆ ಬಂದಿರುವ 'ನೀನಾತನಂ ನೋಡುಗೇ' ಎಂಬುದನ್ನು ನೋಡಬಹುದು; ಇಲ್ಲಿ–ಗೆ ಎಂಬುದ ವಿಜ್ಞಾಪನಾರ್ಥದಲ್ಲಿ ನೋಡು ಎಂಬ ಕ್ರಿಯೆಗೆ ಸೇರಿದೆ (ಶಬ್ದಾನು ೪೭೫); "ಬಂದುದು ಸತ್ಯಮೇಂ ಬನಕೆ ನೀಂ ತರೆ ಬಂದನೇ ಬಂದನೆ ದಿಟಂ ತಂದೆಗೆ ತಂದೆಗೇ ಕೆಳದಿ ಕಾಂತನ ನೆಂದೆನುತಂಗವಲ್ಲಿಯೊಳ್" (ಕುಸುಮಾವಳಿ, ೧೩–೯೬) ಎಂಬ ಪ್ರಯೋಗದಲ್ಲಿನ ತಂದೆಗೆ ತಂದೆಗೇ ಎಂಬ ರೂಪಗಳು ಚಿಂತನೀಯ; ಇಲ್ಲಿ ತರ್ ಧಾತುವಿನ ಭೂತಕಾಲದ ಮಧ್ಯ ಪುರುಷದ ಏಕವಚನ ಕ್ರಿಯೆತಂದಯ್ ತಂದೆ, ಬಂದಿದೆ; ಅದಕ್ಕೆ ಗೆ ಪ್ರತ್ಯಯ ಸೇರಿದೆ, ಪ್ರಶ್ನಾರ್ಥಕದಲ್ಲಿ. ಪ್ರಕೃತ ಏಕೆ ಎಂಬ ಪ್ರಶ್ನಾರ್ಥಕ ಸರ್ವನಾಮಕ್ಕೆ–ಗೆ ಪ್ರತ್ಯಯ ಅನುನಯ, ವಾತ್ಸಲ್ಯಾರ್ಥದಲ್ಲಿ ಸೇರಿದೆಯೆಂದು ಹೇಳಬಹುದು; ಏಕೆಗೆ ಎಂದರೆ ಏಕೆಲೇ, ಏಕಮ್ಮಾ ಎಂಬಂಥ ಅರ್ಥವಿರಬಹುದು. ಹೀಗೆಯೇ "ಎಲೆಗೆ ಕುಂದಬೆ ಪಲದಿವಸದಿಂದಂ ನಿನ್ನಂ ಕಂಡೆನಿಲ್ಲ" ಎಂಬಲ್ಲಿನ ಎಲೆಗೆ ಕೂಡ.

೬೩. ಸೋರ್ವ–ಸುರಿಯುತ್ತಿರುವ, ಕದುಷ್ಣವಾರಿಚಯದಿಂ – ಸಸುಬಿಸಿಯಾದ ಕಣ್ಣೀರಿನಿಂದ, ನಗೆಗಣ್–ನಗೆಯಿಂದ ಕೂಡಿದ ಕಣ್ಣು; ಸುಯ್ಯ–ಉಸಿರಿನ, ಬೆಂಕೆಗಳಿಂ–ಉರಿಯಿಂದ, ಉಷ್ಣದಿಂದ, ಬಿಂಬಾಧರಂ–ತೊಂಡೆಯಂತಿರುವ ತುಟಿ; ನಾಡೆ–ವಿಶೇಷವಾಗಿ, ಬೆಡಂಗುಗೆಟ್ಟ–ಬೆಡಗನ್ನು ಹೋಗಲಾಡಿಸಿಕೊಂಡಿರುವ, ಇರವು ಇದು–ಸ್ಥಿತಿ ಇದು, ಇಂತು–ಹೀಗೆ, ಮಜ್ಜನಂಬುಗದೆ–ಸ್ನಾನಮಾಡದೆ, ಆರೋಗಿಸಲೊಲ್ಲದ–ಊಟಮಾಡಲು ಇಷ್ಟಪಡದ, ಇರವು–ಸ್ಥಿತಿ, ಏ ಕಾರಣಂ–ಯಾವ ಕಾರಣದಿಂದ? ನಾಣಳ್ಕು–ಲಜ್ಜೆಯ ಸುಸ್ತು, ಇದೇಂ–ಇದೇನು? ಸರೋಜಾನನೇ–ಸುಭಪ್ರೆಯೇ, ಕಾಮನಂಬುಗಳ್–ಕಾಮನ ಬಾಣಗಳು, ಅತ್ತಿತ್ತೆಡೆಯಾಡಿ–ಅಲ್ಲಿ ಇಲ್ಲಿ ನಡುವೆ ಬಂದು, ನಿನ್ನಂ–ನಿನ್ನನ್ನು, ಸೋಂಕವೆ ವಲಂ–ಮುಟ್ಟುತ್ತಿಲ್ಲವೆ ನಿಜವಾಗಿಯೂ?

**ವಚನ**: ಮುನ್ನಮೆ–ಮೊದಲೇ, ಮುಟ್ಟೆ ನುಡಿಯದೆ–ಇಂಗಿತವನ್ನು ತಿಳಿದು ಮಾತಾಡದೆ; ಪೊಜವೊಜಗದೆ ಬಳಸಿ–ಹೊರ ಹೊರಗೇ, ಮೇಲು ಮೇಲೆಯೇ ಬಳಸಿದ ಮಾತುಗಳನ್ನಾಡಿ; ಶಂಕೆಯಂ-ಸಂದೇಹವನ್ನು, ಭಯವನ್ನು, ಕಿಡಿಸಿ–ಹೋಗುವಂತೆ ಮಾಡಿ.

೬೪. ವನಭೃತ್ಕುಂತಳೆಯಾ–ಮೋಡದಂತೆ ಕಪ್ಪಾದ ಮುಂಗುರುಳುಳ್ಳ, ಶಿರೀಷ ಕುಸುಮಶಾಭಾಂಗಕ್ಕೆ – ಬಾಗೆಹೂವಿನ ಬಣ್ಣವನ್ನುಳ್ಳ ಮೈಗೆ, ಕಂದಂ– ಮಾಸುವಿಕೆಯನ್ನು, ಕನತ್ಕನಕಾಂಭೋಜ ನಿಭಾನನಕ್ಕೆ–ಹೊಳೆವ ಹೊಂದಾವರೆಗೆ ಸಮಾನವಾದ ಮುಖಕ್ಕೆ, ಪಿರಿದುಂ–ಅಧಿಕವಾದ, ದೀನತ್ವಮಂ–ಬಾಡುವಿಕೆಯನ್ನು, ನೀಳ್ದ ಮಾವಿನ

ಪೋಟಿಂದದ ಕಣ್ಗೆ–ಉದ್ದವಾದ ಮಾವಿನ ಹೋಳಿನಂತಿರುವ ಕಣ್ಣುಗಳಿಗೆ, ಬಾಷ್ಪ ಜಳಮಂ–ಕಣ್ಣೀರನ್ನು, ಚಿತ್ತಕ್ಕೆ–ಮನಸ್ಸಿಗೆ, ಸಂತಾಪಮಂ–ದುಃಖವನ್ನು, ಆವಂ–ಯಾವನು, ನಿನಗಂ–ನಿನಗೂ, ಮಾಡಿದಂ–ಉಂಟುಮಾಡಿದನೋ, ಆತನೆ–ಆತನೇ, ಗಂಧೇಭ ವಿದ್ಯಾಧರಂ–ಅರ್ಜುನನು, ಪಲಂ–ಅಲ್ಲವೇ, ನಿಶ್ಚಯವಾಗಿಯೂ ?

ಈ ಪದ್ಯದಲ್ಲೂ ಇದರ ಹಿಂದಿನ ಪದ್ಯಗಳಲ್ಲೂ ಕಾಣುವ ದೇಶೀಯ ಶೈಲಿಯ ಮಾರ್ದವ ಚಿತ್ತಮೋಹಕವಾದುದು. ನೀಳ್ದ ಮಾವಿನ ಪೋಟಿಂದದ ಕಣ್ಗೆ–ಎಂಬ ಮಾತಂತೂ ನವೀನ ಸೌಂದರ್ಯದಿಂದ ಚೆಲುವಾಗಿದೆ; ತೋತಾಪುರಿ ಮಾವಿನ ಕಾಯಿಯ ಕೆನ್ನೆಯನ್ನು ಉದ್ದಕ್ಕೂ ಸೀಳಿ ತೆಗೆದರೆ ಆ ಹೋಳಿನ ಆಕಾರದಂತೆ ನೀಳ್ದಕಣ್ಣು ಇರುವುದು ವ್ಯಕ್ತವಾಗುತ್ತದೆ.

**ವಚನ**: ಮನಮನಱಿದು ಮುಟ್ಟೆ ನುಡಿದ–ಇಂಗಿತವನ್ನು ತಿಳಿದು ಮನಮುಟ್ಟು ವಂತೆ ಮಾತಾಡಿದ; ಪೆಱತೇನುಮಂ–ಬೇರೆ ಏನನ್ನೂ; ಉಮ್ಮನೆ–ಬಿಸಿಬಿಸಿಯಾಗಿ, ಬೆಮರುತ್ತಂ–ಬೆವರುತ್ತ; ಉಮ್ಮಳಿಕೆವಂದು–ವ್ಯಥೆಯಾಗಿ; ಬೆಚ್ಚನೆ ಸುಯ್ದೊಡೆ–ಬಿಸಿಯುಸಿರು ಬಿಟ್ಟರೆ.

**೬೫.** ಉಸಿರದಿರೆ–ಹೇಳದಿದ್ದರೆ, ಮನದೊಳ್–ಮನಸ್ಸಿನಲ್ಲಿ ಎಂದರೆ ಹೇಳಿದರೆ ಮನಸ್ಸಿನಲ್ಲಿ ಇಟ್ಟುಕೊಂಡಿದ್ದರೆ, ಮಱುಕಂ–ದುಃಖವು, ಎರ್ದೆಯಂ–ಹೃದಯವನ್ನು, ಪಸರಿಸುಗಂ–ಆವರಿಸುತ್ತದೆ: ಅದಱಿಂ–ಅದ್ದರಿಂದ, ಎನಗೆ–ನನಗೆ, ಇಂತುಟೆ–ಹೀಗೇ ಎಂದು, ಉಸಿರ್–ಹೇಳು; ಉಸಿರ್ದೊಡೆ–ಹೇಳಿದರೆ, ಬಗೆ–ಇಷ್ಟವು, ತೀರ್ಗುಂ–ಸಫಲ ವಾಗುತ್ತದೆ; ಬಿಸಿಯುಂ–ಬಿಸಿಯಾಗಿಯೂ, ಜೆಟ್ಟಿತ್ತುಂ–ಗಡುಸಾಗಿಯೂ ಇರುವ, ಉಸಿರ್–ಉಸಿರು, ಏಂ–ಏನು, ತೀರ್ದಪುದೇ–ಮುಗಿಯುತ್ತದೆಯೇ? ಎಂದರೆ ದುಃಖ ಸೂಚಕವಾದ ಬಿಸಿಯುಸಿರೂ ಬಿರುಸುಸಿರೂ ಎಂದಿಗೂ ನಿಲ್ಲುವುದಿಲ್ಲವೆಂದು ತಾತ್ಪರ್ಯ.

**೬೬.** ಪೇೞೆಂಬುದುಂ-ಹೇಳು ಎನ್ನುತ್ತಲು, ಆಂ-ನಾನು, ನಿನಗೆ, ಎಡೆವೇೞದೆ-ಸಂದರ್ಭವನ್ನು ತಿಳಿಸದೆ, ಪೇೞ್-ಹೇಳು, ಆರ್ಗೆ-ಯಾರಿಗೆ, ಪೇೞ್ವೆನ್-ಹೇಳುವೆನು? ಇಂದಿನ-ಈದಿನ, ಬಂದ, ಆ ಕಾಱದ-ಆ ಕೆಟ್ಟದಾದ, ವಾೞ್ತೆಗೊಂಡೊಡೆ-ಸುದ್ದಿಯನ್ನು ತಿಳಿದರೆ, ಮನಮುಂ–ಮನಸ್ಸೂ, ಎರ್ದೆಯುಂ–ಅಂತಃಕರಣವೂ, ಪಾೞಾದುದು–ಹಾಳಾಯಿತು, ಏನಂ–ಏನನ್ನು, ಪೇೞ್ವೆಂ–ಹೇಳುವೆನು?

**೬೭.** ಪಾಣ್ಬರಂಕುಸನ-ಪಾಣ್ಬರಂಕುಶ ಎಂಬ ಬಿರಿದಿದ್ದ ಅರಿಕೇಸರಿಯ ಎಂದರೆ ಅರ್ಜುನನ, ಅಂಕುಸದಾ-ಅಂಕುಶದ, ಪೊಳಪುಂ-ಹೊಳಪೂ, ಅವನ, ಕಣ್ಗಳ-ಕಣ್ಣುಗಳ, ಬೆಳ್ಪುಂ–ಬಿಳಿಯ ಕಾಂತಿಯೂ, ಭೋಂಕನೆ–ಬೇಗನೆ, ಮನಮಂ ಕದಡಿ–ಮನಸ್ಸನ್ನು ಕಲಕಿ, ಕಲಂಕಿದಪುದು-ಕದಡುತ್ತಿದೆ; ಬಿಡದೆ–ಅಷ್ಟಕ್ಕೇ ನಿಲ್ಲದೆ, ಮನಮುಂ-ಮನಸ್ಸನ್ನು, ಆದಂ–ವಿಶೇಷವಾಗಿ, ಒನಲಿಸಿದಪುದು–ಕೆರಳಿಸುತ್ತಿದೆ, ಕೆಳದಿ–ಸಖಿಯೇ.

**೬೮.** ಮನಸಿಜನಂಬು–ಕಾಮನಬಾಣ, ಅರಲ್ದ ಪೊಸಮಲ್ಲಿಗೆ–ಅರಳಿದ ಹೊಸ

ಮಲ್ಲಿಗೆ, ತೆಂಕಣ ಗಾಳಿ-ದಕ್ಷಿಣದ ಗಾಳಿ, ಎಂಬಿವು-ಎನ್ನುವ ಇವುಗಳು, ಅನುಬಲದಿಂದಂ-ಪರಸ್ಪರ ಅನುಕೂಲವಾಗಿರುವ ಶಕ್ತಿಯಿಂದ, ಎನ್ನಂ-ನನ್ನನ್ನು, ಅಲೆದಪ್ಪುವು-ಹಿಂಸಿಸುತ್ತಿವೆ; ಅವು-ಅವುಗಳು, ಚಂದ್ರನ ಬಲದಿಂದಂ-ಚಂದ್ರನ ಸಹಾಯದಿಂದ, ಪೆಟ್ಟುವೆರ್ಚಿ-ಗರ್ವಿಸಿ, ಎನ್ನನೆ-ನನ್ನನ್ನೇ, ಅಲೆದಪ್ಪುವು-ಹಿಂಸಿಸುತ್ತಿವೆ; ಅದರ್ಕೆ-ಅದಕ್ಕೆ, ಎನಗೆ-ನನಗೆ, ಈಗಳ್-ಈಗ, ಚಂದ್ರನ ಬಲಂ-ಚಂದ್ರಬಲವು, ಒಳ್ಳಿತಾಗಿ-ಒಳ್ಳೆಯದಾಗಿ, ಸಲೆಯಿಲ್ಲದೊಡೆ-ಸರಿಯಾಗಿಲ್ಲದಿದ್ದರೆ, ಆವುದುಂ-ಯಾವುದೂ, ಒಳ್ಳಿಕೆಯ್ಗುಮೇ-ಒಳ್ಳೆಯದನ್ನು ಮಾಡುತ್ತದೆಯೇ? ಇಲ್ಲ. ಕಾಮನೊಡನೆ ಚಂದ್ರನು ಸಹಕರಿಸಿ ನನ್ನನ್ನು ಪೀಡಿಸುತ್ತಿರುವುದು ತಪ್ಪಬೇಕಾದರೆ, ನನಗೆ ಚಂದ್ರಬಲ ಬರಬೇಕು ಎಂದು ಇಂಗಿತ.

**ವಚನ** : ಮಱುಕಮಂ – ಸಂಕಟವನ್ನು; ಕುದಿಪಮುಮಂ – ಕುದಿಯನ್ನೂ: ಬಗೆಯ ಕುಱಿಪಮುಮಂ-ಮನಸ್ಸಿನ ಗುರಿಯನ್ನೂ; ಮನದೊಳೆ ಮಂತಣವಿರ್ದು-ಮನಸ್ಸಿನಲ್ಲಿಯೇ ಆಲೋಚನೆಮಾಡಿ; ಬಗೆಯೊಳೆ-ಮನದಲ್ಲಿಯೇ, ಗುಡಿಗಟ್ಟಿ-ಧ್ವಜವನ್ನೇರಿಸಿ, ಎಂದರೆ ಉತ್ಸವವನ್ನು ಹೊಂದಿ, ಸಂತಸಂಬಟ್ಟು-ಸಂತೋಷಪಟ್ಟು.

೬೯. ನನೆಯಂಬಂ-ಹೂವಿನ ಬಾಣವನ್ನು, ತೆಗೆದೆಚ್ಚಂ-ಹೂಡಿ ಪ್ರಯೋಗಿಸಿದವನಾದ, ಅಂಗಜನ-ಮನ್ಮಥನ, ತಪ್ಪು, ಏನಾನುಮಂ-ತಪ್ಪು ಏನಾದರೂ ಅದನ್ನು, ತೋಱೆ-ಕಾಣಿಸಲು, ಕಾಣ್ಬನಿತಂ-ಕಾಣುವಷ್ಟನ್ನು, ಮಾಡದೆ, ಪದ್ಮಜಂ-ಬ್ರಹ್ಮನು, ಮದನನಂ-ಮನ್ಮಥನನ್ನೂ, ಬೈದಂತುಟೇ-ಬೈದ ಹಾಗೆಯೇ ಸರಿ, ಈ ಬಿನದಂ-ಈ ವಿನೋದವು, ಬೇಡ, ಕಲ್ಪಿತಂ-ಕಲ್ಪಿತವಾದುದು; ತಪ್ಪಲೆ-ತಪ್ಪಲ್ಲವೆ: ನಿನ್ನೀಮನಂ-ನಿನ್ನ ಈ ಮನಸ್ಸು, ಆತಂಗೆಂದು-ಅವನಿಗೋಸ್ಕರವಾಗಿ; ಪರಿಯದು-ಚಲಿಸದು, ಓಡದು; ನಿನಗೆ, ಆತಂ, ದೊರೆ-ಅವನು ತಕ್ಕವನು, ಸಮಾನ; ಆದಿಪುರುಷಂಗೆ-ಉಪಾತ್ತ ನಾರಾಯಣನಾದ ಅರಿಕೇಸರಿಗೆ, ಅರ್ಜುನನಿಗೆ, ನೆಟ್ಟನೆ-ನೇರವಾಗಿ, ನೀಂ-ನೀನು, ನಾಣ್ಚುವಯ್-ನಾಚಿಕೆಪಡುತ್ತೀಯ, ಏಕೆ ಅಕ್ಕ-ಅಕ್ಕನೇ ಏತಕ್ಕೆ?

ಈ ಪದ್ಯಕ್ಕೆ ವಿಶದವಾಗಿ ಅನ್ವಯವಾಗುವುದಿಲ್ಲ; ಪಾಠ ಕ್ಲೇಶಗಳು ಇರಬಹುದು. 'ಪರಿಯದಾತಂಗೆ' ಎನ್ನುವುದಕ್ಕೆ ಪ್ರತಿಯಾಗಿ 'ಪರಿದುದಾತಂಗೆ' ಇರಬಹುದು.

**ವಚನ** : ಏನುಮಂ ಬಗೆಯಲ್ವೇಡ-ಏನನ್ನೂ ಚಿಂತಿಸಬೇಡ; ಆಱೆ-ಸಮಾಧಾನವಾಗಲು; ಪರೆದಿಂಬೞಿಯಂ-ಚದರಿದ ಅನಂತರ: ಪವಡಿಸುವ-ಮಲಗುವ, ಮಾಡಕ್ಕೆ-ಮನೆಗೆ; ಪ್ರತಿಪತ್ತಿಗಳಿಂ-ಸತ್ಕಾರಗಳಿಂದ; ವಿಸರ್ಜಿಸಿ-ಬಿಟ್ಟು ಕಳುಹಿಸಿ; ಕಣ್ಣ ಪಾಪೆಯಂತೆ-ಕಣ್ಣಿನ ಗುಡ್ಡಿನಂತೆ; ತೊೞಲೆ-ಸುತ್ತಾಡಲು; ತಳರ್ಪೆನುತ್ತಂ-ಚಲನೆಯೆನ್ನುತ್ತ; ಪೆಳ್ಪಳಿಸಿ-ಭಯಪಟ್ಟು

೭೦. ಪ್ರಿಯಸತಿಯ-ಪ್ರಿಯಳಾದ ಆ ಸ್ತ್ರೀಯ, ಸುಭದ್ರೆಯ, ಆನನೇಂದು-ಚಂದ್ರನಂತಿರುವ ಮುಖವು, ಒಳಂ-ಉಂಟು, ಇದೆ; ಇಂದುವೊಳಂ-ಚಂದ್ರನು ಇದೆ. ಆವುದಂ-ಇವೆರಡರಲ್ಲಿ ಯಾವುದನ್ನು, ಬಿದಿ-ವಿಧಿ, ಬ್ರಹ್ಮನು, ನಯದೊಳೆ-ನಯವಾಗಿ: ನೋಡಿ, ಮುನ್ನಂ-ಮೊದಲು, ಮಾಡಿದಂ-ಮಾಡಿದನು, ಸೃಷ್ಟಿಸಿದನು; ಅಜಯಲ್ಕೆ-

ತಿಳಿಯುವುದಕ್ಕೆ, ಅದು, ನಾಡೆ–ಚೆನ್ನಾಗಿ, ಸಂದೆಯಂ–ಸಂದೇಹ, ನೀಳನೀರಜವನಂಗಳ–ಕನ್ನೈದಿಲೆಗಳ ತೋಟಗಳ, ಚೆಲ್ವುಗಳೆಂಬುವು-ಸೌಂದರ್ಯವೆನ್ನುವುವು, ಆ ಲತಾಂಗಿಯು-ಆ ಬಳ್ಳಿಮೆಯ್ಯ ಸುಭದ್ರೆಯ, ಕಡೆಗಣ್ಣ–ಕಡೆಗಣ್ಣುಗಳ, ಬೆಳ್ಪಿನ–ಬಿಳುಪಿನ, ಸಿಲ್ಕಿನ–ಸಿಕ್ಕುಗಳಲ್ಲಿ, ಸಿಲ್ಕಿಪ–ಸಿಕ್ಕಿಕೊಂಡ, ಸಿಲ್ಕು ಇವಲ್ಲವೇ–ಸಿಕ್ಕುಗಳು ಇವು ಅಲ್ಲವೇ? ನೀಲಿಯ ಬಣ್ಣದ ನೈದಿಲೆಗಳ ಕರಿಯ ಕಾಂತಿಯೂ ಸುಭದ್ರೆಯ ಕಣ್ಣುಗಳ ಬಿಳಿ ಕಾಂತಿಯೂ ಒಂದರೊಡನೊಂದು ಸಿಕ್ಕಿಕೊಂಡು, ಹೆಣೆದುಕೊಂಡು, ಬಿಡಿಸಲಾಗದ ಸಿಕ್ಕಾಗಿ ಪರಿಣಮಿಸಿತು ಎಂದು ಭಾವ.

೭೧. ಆ ನವಮಾಳಿಕಾಕುಸುಮಕೋಮಳೆ-ಹೊಸದಾದ ಜಾಜಿಯ ಹೂವಿನಂತೆ ಕೋಮಲವಾಗಿರುವ ಆ ಸುಭದ್ರೆ, ರಾಗರಸಪ್ರಪೂರ್ಣ ಚಂದ್ರಾನನ ಲಕ್ಷ್ಮಿಯಿಂ–ಪ್ರೀತಿರಸದಿಂದ (ಕೆಂಬಣ್ಣದಿಂದ) ತುಂಬಿದ ಮುಖಚಂದ್ರನ ಕಾಂತಿಯಿಂದ, ನಭದೊಳಿರ್ದ–ಆಕಾಶದಲ್ಲಿದ್ದ, ಅಮೃತಾಂಶುವಿನ–ಅಮೃತಕಿರಣನ, ಚಂದ್ರನ, ಉದ್ಧಕಾಂತಿಸಂತಾನಮಂ-ಶ್ರೇಷ್ಠವಾದ ಪ್ರಕಾಶದ ಮೊತ್ತವನ್ನು, ತನಗೆ–ತನಗಾಗಿ, ತನ್ನದಾಗಿ, ಮಾಡಿದಳೆಂದೊಡೆ–ಮಾಡಿಕೊಂಡಳು ಎಂದರೆ, ತದ್ಗೃಹಾಂತರೋದ್ಯಾನ ಸರಸ್ಸರೋಜರುಚಿ–ಆ ಮನೆಯ ಒಳಗಣ ಉದ್ಯಾನದಲ್ಲಿರುವ ಕೊಳಗಳ ತಾವರೆಯಕಾಂತಿ, ಆಕೆಯ–ಅವಳ, ಕೈಯದು–ಕೈಯಲ್ಲಿರುವ ವಸ್ತು, ಎನ್ನಿರೇ–ಎಂದು ಹೇಳಿರೇ.

**ವಚನ :** ಮನಮುಮನೆರ್ದೆಯುಮಂ–ಮನಸ್ಸನ್ನೂ ಹೃದಯವನ್ನೂ; ಉಱ ಸೆಱೆವಿಡಿದಿರ್ದ–ಚೆನ್ನಾಗಿ ಸೆರೆಹಿಡಿದಿರ್ದ ;

೭೨. ಕುಸುರಿಯ ರೂಪಂ-ಹೂವಿನಲ್ಲಿರುವ ಕುಸುರಿಯಂತೆ ಕೋಮಲವಾಗಿರುವ ರೂಪವನ್ನು. ಎಯ್ದೆ–ಚೆನ್ನಾಗಿ, ಪೊಗೞಲ್ಕೆ-ಹೊಗಳುವುದಕ್ಕೆ, ಅಱಿಯೆಂ-ತಿಳಿಯೆನು, ನಡು–ಸೊಂಟ, ಪುರ್ವು–ಹುಬ್ಬು. ಬಾಸೆ–ಹೊಟ್ಟೆಯಮೇಲೆ ನೀಳವಾಗಿ ಇರುವ ಕೂದಲಿನ ಸಾಲು, ಕಣ್ಣೊಸೆಗೆಯನುಂಟುಮಾಳ್ಪ ಜಘನಂ–ಕಣ್ಣಿಗೆ ಹಬ್ಬವನ್ನುಂಟು ಮಾಡುವ ಪಿರ್ರೆಗಳು, ಬೆಳರ್ವಾಯ್–ಬೆಳ್ಳಗಿರುವ ಬಾಯಿ, ಮೊಲೆಗಳ್–ಮೊಲೆಗಳು, ಕದಂಪು–ಕೆನ್ನೆಗಳು, ಉಗುರ್–ಉಗುರುಗಳು, ಬಸಿಱನೆ–ಹೊಟ್ಟೆಯನ್ನೇ, ನೋಡೆ–ನೋಡಲು, ಮೊಕ್ಕಳಂ–ವಿಶೇಷವಾಗಿ, ಆವಾರ್-ಅದು ಯಾರು, ನಡೆನೋಟ್ಪೊಡಂ–ನಾಟುವಂತೆ, ದೃಷ್ಟಿಸಿ ನೋಡಿದರೂ, ಅಂಬುಜಾಕ್ಷಿಯ – ತಾವರೆಯಂತೆ ಕಣ್ಣುಳ್ಳ ಸುಭದ್ರೆಯ, ಮೂಱು ಅಸಿಯವು-ಮೂರು ಅಂಗಗಳು ಕೃಶವಾದುವು ; ಮೂಱು ದೊಡ್ಡಿದುವು–ಮೂರು ದಪ್ಪವಾದುವು ; ಮೂಱೆಡೆ–ಮೂರು ಪ್ರದೇಶಗಳು, ತೆಳ್ಳಿದುವು-ತೆಳುವಾಗಿರುವುವು.

೭೩. ಮೃಗಶಿಶುನೇತ್ರೆಯ – ಮರಿಹುಲ್ಲೆಯ ಕಣ್ಣುಗಳಂತೆ ಕಣ್ಣುಳ್ಳ ಸುಭದ್ರೆಯ, ನಡುವೆರ್ದೆಯುಗುರ್ಗಳ್–ಸೊಂಟ ಎದೆ ಉಗುರುಗಳು, ಕರಂ ಅಸಿದು–ಬಹು ತೆಳ್ಳಗಿರುವುವು ; ಕನಕಕಾಂಚೀನಿನದ ಪ್ರಗಣಿತಂ–ಚಿನ್ನದ ಒಡ್ಯಾಣದ ಸದ್ದಿನ ಕೂಟವು, ಆಗಲ್ದ–ಬಿಟ್ಟುಹೋದ, ಎಂದರೆ ಒಡ್ಯಾಣದ ಸದ್ದಿಲ್ಲದ, ನಲ್ಲಳ-ಪ್ರಿಯೆಯ,

ಜಗನಂ–ಜಘನವು, ಎನ್ನೆರ್ದೆಯಂ–ನನ್ನ ಹೃದಯವನ್ನು, ಪೊಕ್ಕು–ಹೊಕ್ಕು, ಎಂತು–ಹೇಗೆ, ಆಳಿಪುವುದೋ–ಪ್ರೀತಿಯನ್ನಾಗಿಸುತ್ತವೆಯೊ?

**೭೪.** ಅರ್ಜುನನು ಸುಭದ್ರೆಯ ರೂಪವನ್ನು ಧ್ಯಾನಿಸುತ್ತಾ ತನ್ಮಯನಾಗಿ ಆ ಸೌಂದರ್ಯವನ್ನು ಸವಿಯುತ್ತ ಮೈಮರೆತಿದ್ದಾನೆ; ಮೊಲೆಗಳ್ ಬಟ್ಟಿದುವಾಗಿ–ಮೊಲೆಗಳು ದುಂಡಾಗಿ, ಕರ್ಗಿದ–ಕಪ್ಪಾದ, ಕುರುಳ್–ಮುಂಗುರುಳುಗಳು, ಕಣ್ಗೆ–ಕಣ್ಣಿನವರೆಗೆ, ಎಯ್ದೆ–ಬರುವಂತೆ, ನೀಳ್ದು–ಉದ್ದವಾಗಿ, ಕೊಂಕಾಗಿ–ವಕ್ರವಾಗಿ, ಅಲರ್ಗಣ್ಗಳ್–ಹೂವಿನಂತಿರುವ ಕಣ್ಣುಗಳು, ಚಪಳಂಗಳಾಗಿ–ಅಸ್ಥಿರಗಳಾಗಿ, ಜಘನಂ–ಪಿರ್ರಿಗಳು, ಕಾಂಚೀಕಳಾಪ ಪ್ರಭೋಜ್ವಲಂ–ಒಡ್ಯಾಣದ ಮುತ್ತಿನೆಳೆಗಳ ಕಾಂತಿಯಿಂದ ಪ್ರಕಾಶಮಾನವೂ, ಉದ್ವೃತ್ತಮುಂ–ಉಬ್ಬಿ ಬೆಳೆದಿರುವುದೂ, ಆಗಿ; ತಾಂ–ತಾವು, ಅಲೆಗೆ–ನನ್ನನ್ನು ಪೀಡಿಸಲಿ; ಸರೋಜಾಕ್ಷಿಯಾ–ಸುಭದ್ರೆಯ, ಮಧ್ಯಸ್ಥಂಗಳಾಗಿರ್ದುವ [ರ್ಕೆ]–ಮಧ್ಯ ಪ್ರದೇಶದಲ್ಲಿರುವುವಾದ, ತ್ರಿವಳಿಗಳ್ಗೆ–ಬಸಿರ ಮೇಲಣ ಮೂರು ಮಡಿಕೆಗಳಿಗೆ, ಗೆರೆಗಳಿಗೆ, ಕೆನ್ನಂ-ವಿಶೇಷವಾಗಿ ಎನ್ನಂ-ನನ್ನನ್ನು ಅಲೆಯಲ್-ಪೀಡಿಸಲು, ತಕ್ಕುದೆ–ಯೋಗ್ಯವಾದದ್ದೇ.

**ವಚನ:** ಕಿಱುದುಬೇಗಂ–ಸ್ವಲ್ಪಹೊತ್ತು; ಅಱಿಮರುಳಂತು-ಭ್ರಮೆಗೊಂಡವನಂತೆ, ಹುಚ್ಚನಹಾಗೆ; ಪಲುಂಬಿ–ವ್ಯಥೆಪಟ್ಟು, ಪಂಬಲಿಸಿ–ಬಯಸಿ; ಹಾವ–ಶೃಂಗಾರ ಚೇಷ್ಟೆ; ಭಾವ–ಮನಸ್ಸಿನ ವಿಕಾರ; ವಿಳಾಸ–ಸೊಗಸು; ವಿಭ್ರಮ–ಮನಸ್ಸಿನ ಸಡಗರ; ಕಟಾಕ್ಷ–ಕಡೆಗಣ್ಣು, ಈಕ್ಷಂಗಳ್–ನೋಟಗಳು; ಒನಲಿಸು–ಕೆರಳುವಂತೆ ಮಾಡು; ಕನಲಿಸು–ರೇಗಿಸು; ಅನಂಗ ಮತಂಗಜ–ಮನ್ಮಥನೆಂಬ ಆನೆಯಿಂದ; ಕೋಳಾಹಳೀಕೃತ-ಗದ್ದಲವೆಬ್ಬಿಸಲ್ಪಟ್ಟ, ಅಂತರಂಗನಾಗಿ–ಮನಸ್ಸುಳ್ಳವನಾಗಿ.

**೭೫.** ಜಗಮುಂ ಮಾಡಿದ ಪದ್ಮಜಂ ಪಡೆದನಿಲ್ಲೀ ಕನ್ನೆಯಂ–ಲೋಕವನ್ನೇ ಸೃಷ್ಟಿಸಿದ ಬ್ರಹ್ಮ ಈ ಕನ್ಯೆಯನ್ನು ಸೃಷ್ಟಿಸಲಿಲ್ಲ; ಮಾಡುವಲ್ಲಿಗೆ–ಇವಳನ್ನ ಸೃಷ್ಟಿಸುವಾಗ, ಅಂಗಜನೆಂಬಜಂ–ಮನ್ಮಥನೆಂಬ ಬ್ರಹ್ಮ, ಚಂದ್ರಂ–ಚಂದ್ರ, ಮಳಯಾನಿಳಂ–ಮಲಯಮಾರುತ, ಮಳಯಜಂ–ಶ್ರೀಗಂಧ, ನೀರೇಜಂ–ತಾವರೆ, ಇಮ್ಮಾವು–ಸಿಹಿಮಾವು, ಮಲ್ಲಿಗೆ, ಎಂದು, ಇಂತಿವಂ-ಹೀಗೆ ಇವುಗಳನ್ನು, ಅಪ್ಕೆಱಿಂದೆ–ಪ್ರೀತಿಯಿಂದ ಅಮರ್ದಿನೊಳ್–ಅಮೃತದಲ್ಲಿ, [ತನ್ನ]ಟ್ಟಿಯಿಂ–ತನ್ನ ಇಷ್ಟದಿಂದ, ತೊಯ್ದು–ನನೆಯಿಸಿ, ಮೆಲ್ಲಗೆ – ಮೃದುವಾಗಿ, ಈ ಕಾಂತೆಯಂ – ಈ ರಮಣಿಯನ್ನು, ಆ ಕಾಂತಿಯಿಂ–ಆ ಪ್ರಕಾಶದಿಂದ, ಪಡೆದಂ–ಸೃಷ್ಟಿಸಿದನು.

ಈ ಪದ್ಯಕ್ಕೆ ಮೂಲ ಕಾಳಿದಾಸಕೃತ ವಿಕ್ರಮೋರ್ವಶೀಯ ನಾಟಕದ ಪ್ರಥಮಾಂಕದಲ್ಲಿ ಬರುವ 'ಅಸ್ಯಾಸ್ಸರ್ಗವಿಧೌ ಪ್ರಜಾಪತಿರಭೂತ್' ಎಂದು ಆರಂಭವಾಗುವ ಪದ್ಯ; ಬೇರೆ ಇನ್ನೊಬ್ಬ ಅಜ್ಞಾತಕವಿ "ಇವಳಂ ಶೃಂಗಾರಸಾರಂ ಕುಸುಮಶರನೆ ಮೇಣ್ ಮಾಡಿದಂ" ಎಂದು ಆರಂಭಿಸುವ ಪದ್ಯದಲ್ಲಿ (ಕಾವ್ಯಾಲೋ ೪೨) ಇದನ್ನು ಇನ್ನೊಂದು ರೀತಿಯಾಗಿ ಅಳವಡಿಸಿಕೊಂಡಿದ್ದಾನೆ. ಈ ಮೂರನ್ನು ಪರಸ್ಪರ ಹೋಲಿಸಿ ನೋಡಬಹುದು. ಯಾವುದು ಹೆಚ್ಚು ಸುಂದರ?

**ವಚನ:** ಅಂತಲ್ತು–ಹಾಗೆ ಅಲ್ಲದು, ಹಾಗಲ್ಲ; ಅಪ್ಪಂದು–ಸೃಷ್ಟಿಯಾಗು ವಂದು ; ಆ ಕಾಂತೆಯುಂ–ಆ ರಮಣಿಯುಂ ; ವಿಧಾತ್ರಂ–ಬ್ರಹ್ಮನು ; ಕೊಸಗಿನ–ಬೆಟ್ಟ ದಾವರೆಯ, ಕೇಸರಂಗಳಂ–ಕುಸುರಿಗಳನ್ನು ; ಭಾವಿಸಿ–ನೆನೆಯಿಸಿ ; ರಸಸಿದ್ಧಮಪ್ಪ–ರಸ ವಿದ್ಯೆಯಿಂದ ಸಿದ್ಧವಾಗಿರುವ ; ಪೊನ್ನ–ಚಿನ್ನದ ; ಬಾಯ್ಪು ಜಿಡಿಯುಮಂ–ತುಟಿಯನ್ನೂ ; ರಾಜಾವರ್ತದ-ಎಳೆನೀಲದ; ಸೆಳ್ಳುಗುರುಮಂ-ತೆಳುವಾದ ಉಗುರುಗಳನ್ನೂ; ಮರುಳ್ಮಾಡ ಲೆಂದು–ಮರುಳಾಗಿಸಲೆಂದು ; ಪೆಣ್ಮಾಡಿದನಕ್ಕುಂ–ಸ್ತ್ರೀಯನ್ನು ಸೃಷ್ಟಿಸಿದವನಾದನು.

**೭೬.** ಗಾಡಿ–ಸೌಂದರ್ಯವು, ನೆಜೆದು–ಪೂರ್ಣವಾಗಿ, ಕೊಳೆ–ಆಕರ್ಷಿಸಲು, ನೋೞ್ಪ–ನೋಡುವ, ಬಗೆ–ಮನಸ್ಸು, ಬರ್ಪುದುಂ–ಬರುತ್ತಲು, ಆಸೆ–ನಾಸೆ, ದಲ್– ಅಲ್ಲವೆ, ಅಂದು–ಆಗ, ದಂತಿಯುಂ–ಆನೆಯನ್ನು, ನಿಱಿಸಿ–ನಿಲ್ಲಿಸಿ, ಮಱಲ್ದು–ತಿರುಗಿ, ನೋಡುವುದುಂ – ನೋಡುತ್ತಲು, ಆ ಸತಿ – ಆ ಹೆಣ್ಣು, ಎನ್ನುಮಂ–ನನ್ನನ್ನೂ , ಸೋಲದತ್ತ–ಪ್ರೇಮದ ಕಡೆಗೆ, ಮತ್ತೆ ಎಱಗಿ–ತಿರುಗಿ ಬಾಗಿ, ಒಲಲ್ದು–ಪ್ರೇಮದಿಂದ, ಜೋಲ್ದು–ಜೋತುಹೋಗಿ, ಅಳಿಪಿ–ಪ್ರೀತಿಸಿ, ನೋಡಿದಳ್–ನೋಡಿದಳು. ಇಂತು– ಹೀಗೆ, ಎಲೆ–ಎಲವೋ, ಸತ್ತ–ಸತ್ತುಹೋದ, ಪೊತ್ತ–ಹೊತ್ತುಕೊಂಡ, ಕಣ್ಣಱಿಯದ – ನೋಟದ ಮರ್ಮವನ್ನು ತಿಳಿಯದ, ಬೆಳ್ಳನ್ – ಬೆಪ್ಪನು, ಅಲ್ಲೆಂ – ನಾನಲ್ಲ ; ಧವಳಾಕ್ಷಿಯ–ಬೆಳ್ಳಗೆ ಹೊಳೆಯುವ ಕಣ್ಣುಳ್ಳ ಸುಭದ್ರೆಯ, ನೋಟದಂದಮಂ– ನೋಟದ ರೀತಿಯನ್ನು, ಅಱಿದೆಂ–ತಿಳಿದೆನು. ಇಲ್ಲಿ ಅರ್ಜುನನು ತನ್ನನ್ನು ತಾನೆ ಜ್ಞಾಪಿಸಿಕೊಳ್ಳುತ್ತಿದ್ದಾನೆ; ಅವಳ ನೋಟದ ಇಂಗಿತವನ್ನು ಅರಿಯದಷ್ಟು ಸತ್ತ ವಿವೇಕವುಳ್ಳವನಲ್ಲ, ಹೊತ್ತ ಹೆಣವೂ ಅಲ್ಲ, ರಹಸ್ಯ ತಿಳಿಯದವನೂ ಅಲ್ಲ ಎಂದು.

**೭೭.** ಒಪಳಾ-ಪ್ರಿಯಳಾದ ಸುಭದ್ರೆಯ, ವಿಳೋಕನಂ-ನೋಟವು, ಕಣ್ಣಾಗಳು, ದಳಿತ ಕಮಳಚ್ಛಾಯಾಟೋಪಂ–ಅರಳಿದ ಕಮಲದ ಬಣ್ಣದ ವೈಭವವನ್ನುಳ್ಳದ್ದು ; ಮನೋಜರಸ ಪ್ರಭಾವಳಯ ನಿಳಯಂ-ಪ್ರೇಮರಸದ ಕಾಂತಿವರ್ತುಲಕ್ಕೆ ಮನೆಯಾಗಿದೆ; ಪ್ರೋದ್ಯದ್ಭ್ರೂ ವಿಭ್ರಮಂ-ಎತ್ತರವಾದ ಹುಬ್ಬಿನ ವಿಲಾಸವನ್ನುಳ್ಳದ್ದು, ಮುಕುಳೀ ಕೃತಂ-ಮೊಗ್ಗಿನ ಆಕಾರವುಳ್ಳದ್ದು ; ಲಳಿತಮಧುರಂ-ಕೋಮಲವೂ ಮಧುರವೂ ಆದದ್ದು; ಲಜ್ಜಾಲೋಲಂ – ಲಜ್ಜೆಯಲ್ಲಿ ಆಸಕ್ತವಾಗಿರುವುದು, ಸ್ಮರಾಕುಳಿತಂ – ಮನ್ಮಥನಿಂದ ಪೀಡಿಸಲ್ಪಟ್ಟದ್ದು ; ಮನಂದಳಿತಂ–ಮನಸ್ಸಿನ ಬಿರಿತವನ್ನು ಉಳ್ಳದ್ದು ; ಅಪಸನ್ಮುಗ್ಧಂ– ಮುಗ್ಧತೆಯಿಲ್ಲದ್ದು ಎಂದರೆ ಜಾಣೆನಿಂದ ಕೂಡಿದ್ದು ; ಸ್ನಿಗ್ಧಂ–ನಯನಾದದ್ದು, ನುಣುಪಾದದ್ದು, ಸ್ನೇಹದಿಂದ ಕೂಡಿದ್ದು.

**೭೮.** ಸುಭದ್ರೆಯ ಕುಡಿನೋಟದಲ್ಲಿ ಅರ್ಜುನ ಸತ್ವ ತಮೋಗುಣಗಳನ್ನು ಕಾಣು ತ್ತಾನಂತೆ: ಉಡಮೊಗಮೆಂಬ-ಬಾಗೆಹೂವಿನಂತಿರುವ ಮುಖವೆಂಬ, ತಾವರೆಯ, ನೀಳ್ದಿಸ ಬೆಸೊಳ್–ಉದ್ದವಾದ ಎಸಳಿನಲ್ಲಿ, ಮಱಿದುಂಬಿ–ದುಂಬಿಯಮರಿ, ಪಾಯ್ದು–ಹಾದು, ನುಗ್ಗಿ, ಒಡಂಬಡನೊಳಕೊಂಡು–ಒಪ್ಪಿಗೆಯನ್ನು ಪಡೆದು, ಎಂದರೆ ಸರಿಯಾಗಿ ಹೊಂದಿ ಕೊಂಡು, ಕಣ್ಮಲರಬೆಳ್ಪುಗಳ್-ಹೂವಿನಂತಿರುವ ಕಣ್ಣುಗಳ ಬಿಳಿಯ ಬಣ್ಣಗಳು, ಆಲಿಯು

ಕಟಿಪ್ಪಿನೊಳ್–ಕಣ್ಣು ಗುಡ್ಡೆಗಳ ಕಪ್ಪು ಬಣ್ಣದಲ್ಲಿ, ಪೊದಳ್ದು–ಸೇರಿ, ವ್ಯಾಪಿಸಿ, ಒಡನೆ–ಕೂಡಲೆ, ಒಡನೋಡುವಪ್ಪೆನಗೆ – ಜೊತೆಯಲ್ಲಿಯೇ ನೋಡುಪಟ್ಟ ನನಗೆ, ಎಂದರೆ ನೋಡುವುದನ್ನು ಪಡೆದ ನನಗೆ, ಸಂತಸಮಂ - ಸಂತೋಷವನ್ನು, ಮಱುಕಕ್ಕೆ–ಸಂತಾಪವನ್ನು, ಮಾಣ್ದೊಡೆ–ಬಿಟ್ಟರೆ, ನಿಂತು ಹೋದರೆ ; ಈ ನಡೆಗಿಡೆ–ನಡೆ ನಿಂತುಹೋಗಲು, ಓಪಳಾ–ಪ್ರಿಯಳ, ಕಡೆಗಣ್ಣೊಳಿ–ತುದಿಗಣ್ಣುಗಳಲ್ಲಿಯೇ, ಸತ್ವಮಂ–ಸತ್ವವನ್ನೂ (ಬಿಳುಪು), ತಮಮುಮಂ-ತಮೋಗುಣವನ್ನು (ಕರಿದು ಬಣ್ಣ), ಕಂಡೆನ್–ನೋಡಿದೆನು ಈ ಪದ್ಯದ ಅರ್ಥ ಅನ್ವಯ ಸ್ಪಷ್ಟವಿಲ್ಲ. ಉಡು ಎಂದರೆ ಶಿರೀಷದ ಹೂ (ತ); ಒಡನೋಡುವಡು--ಎಂಬುದರ ರೂಪ ಹೇಗೆ ಸರಿಯೋ ? ಕರ್ಮಣಿ ಪ್ರಯೋಗವಾಗಿದ್ದರೆ ನೋಡಿಪಡು ಎಂದಿದ್ದಿರಬೇಕು ; ಪೇಱಿಪಡು ಮುಂತಾದ ರೂಪಗಳಿದ್ದ ಹಾಗೆ ; ಕಣ್ಣು ಬಿಳುಪಿನ ನಡುವೆ ಕರಿಯಗುಡ್ಡೆ ಇರುವುದು ತಾವರೆಯ ಉದ್ದವಾದ ಎಸಳಿನ ನಡುವೆ ಮರಿದುಂಬಿ ಇದ್ದ ಹಾಗೆ ಇರುವುದೆಂದೂ ಆ ಕಣ್ಣಿನ ನೋಟದಲ್ಲಿ ಬಿಳಿ ಕರಿ ಬಣ್ಣಗಳು ಪ್ರಕಟವಾಗಿ ಸತ್ವ ತಮಗಳ ಜೋಡಿಯಂತೆ ಇದ್ದುವೆಂದೂ ಪದ್ಯದ ತಾತ್ಪರ್ಯಾರ್ಥವಿರಬಹುದು. ಮಱುಕಕ್ಕೆ ಎಂಬಲ್ಲಿನ ಚತುರ್ಥಿಗೆ ಸಾರ್ಥಕ್ಯವೇನು ? ಅದು ದ್ವಿತೀಯಾರ್ಥೇ ಚತುರ್ಥೀ ಇರಬಹುದೆ ? ಹಲವು ಕ್ಲೇಶಗಳಿವೆ, ಈ ಪದ್ಯದಲ್ಲಿ.

೭೯. ಒದವಿದ–ಉಂಟಾದ, ಬೇಟವಪ್ಪೊಡೆ–ಪ್ರೇಮವಾದರೆ, ಎನಗೆ–ನನಗೆ, ಅತ್ತಳಗಂ–ತಾಳಲು ಅಶಕ್ಯ ; ಬಗೆವೇಱಿಪ್ಪೊಡೆ–ನನ್ನ ಮನಸ್ಸನ್ನು ತಿಳಿಸಬೇಕೆಂದರೆ, ಮೇಳದ–ಜೊತೆಯ, ಕೆಳೆಯರ್ಕಳಿಲ್ಲ-ಗೆಳೆಯರಿಲ್ಲ ; ಅವಳುಂ-ಸುಭದ್ರೆಯೂ, ಅಪ್ಪೊಡೆ-ಆದರೆ ಎಂದರೆ ಸುಭದ್ರೆಯಾದರೋ, ಜವ್ವನ ಮತ್ತೆ–ಯೌವನದಿಂದ ಮದಿಸಿದವಳು, ನಾಣಕಾಪು–ಲಜ್ಜೆಯಕಾಹು, ಕಾವಲು, ಪಿರಿದು–ಹಿರಿದಾಗಿದೆ ; ಓತು–ಪ್ರೀತಿಸಿ, ಮಾತಡಕಲ್–ಮಾತುಗಳನ್ನು ಅಡಕಲು, ಮಾತಿನ ಮೇಲೆ ಮಾತನ್ನು ಹೇಳಲು, ನೆಟ್ಟನೆ–ನೇರಾಗಿ, ಒಂದಿದ–ಸೇರಿದ (ನಂಬಿಕೆಯ), ದೂದವರಿಲ್ಲ–ಪ್ರೇಮ ಸಂದೇಶವನ್ನು ತರುವ ದೂತರಿಲ್ಲ ; ಅಪ್ಪುದಱಂ–ಆದ್ದರಿಂದ, ಇಂದು ವಕ್ತ್ರೆಯಾ– ಚಂದ್ರಮುಖಿಯಾದ ಸುಭದ್ರೆಗೆ ಸಂಬಂಧಿಸಿದ, ಎನ್ನೊಲವು–ನನ್ನ ಪ್ರೇಮವು, ಅದಿಂತು–ಅದು ಹೀಗೆ, ಅರಣ್ಯರುದಿತಂ ವಲಂ – ನಿಶ್ಚಯವಾಗಿ ಕಾಡಿನಲ್ಲಿ ಅಳುವುದಾಯಿತು. ಎಂದರೆ ನಿಷ್ಪ್ರಯೋಜಕವಾದದ್ದಾಯಿತು.

**ವಚನ :** ನಲ್ಲಳಂ ನೆನೆದು-ಪ್ರಿಯೆಯನ್ನು ನೆನೆದುಕೊಂಡು ; ಕಣ್ಣಾಪನೆ ಕಾದು-ಕಣ್ಣಿನ ಕಾವಲನ್ನೇ ಕಾದು, ಎಂದರೆ ಸುಭದ್ರೆಯು ಎಲ್ಲಿಯಾದರೂ ಆಕಸ್ಮಾತ್ತಾಗಿ ಕಾಣಿಸುವಳೋ ಎಂದು ತೆರೆದ ಕಣ್ಣುಗಳುಳ್ಳವನಾಗಿ ; ಚಿಂತಾಸಮುದ್ರಾಂತರ ಪರಿವೃತನಾಗಿ–ಚಿಂತೆಯೆಂಬ ಕಡಲಿನಿಂದ ಬಳಸಿದವನಾಗಿ ; ತೊೞಲ್ದುನೋಟ್ಪ ಬಗೆದಂದು–ಸುತ್ತಾಡಿ ನೋಡುವ ಮನಸ್ಸನ್ನು ಮಾಡಿ ; ಮೇಳದ–ಜೊತೆಯ ; ನಾಗರಿಕ–ಚತುರನಾದ ಪೌರ, ವಿಟ–ಸ್ತ್ರೀಲೋಲರಾದ ರಾಜಕುಮಾರನ ಸ್ನೇಹಿತ ; ವಿದೂಷಕ–ಹಾಸ್ಯಗಾರ ; ಪೀಠಮರ್ದಕ–ಸ್ತ್ರೀಬೇಟೆಯಲ್ಲಿ ರಾಜಕುಮಾರನಿಗೆ ಸಹಾಯಮಾಡುವವನು–

ಈ ನಾಲ್ವರೂ ರಾಜಕುಮಾರನ ಅಥವಾ ಕಥಾನಾಯಕನ ಸಹಚರಿಗಳು ಎಂದು ಸಂಸ್ಕೃತ ನಾಟಕಗಳಲ್ಲಿ ಚಿತ್ರಿತರಾಗಿದ್ದಾರೆ;

**೮೦.** ಇಲ್ಲಿಂದ ಮುಂದಕ್ಕೆ ಬೆಳುದಿಂಗಳಲ್ಲಿ ಅರ್ಜುನನ ವೇಶ್ಯಾವಾಟೀ ವಿಹಾರ; ಅಲ್ಲಿ ಕಾಣುವ ಬಗೆಬಗೆಯ ದೃಶ್ಯಗಳ ವರ್ಣನೆ: ಒಂದು ಮಂದಾನಿಲವು ಬೀಸಿತು; ಮೃಗಭೂ-ಕಸ್ತೂರಿಯಿಂದ, ಋದ್ಧ-ವೃದ್ಧಿ ಹೊಂದುತ್ತಿರುವ, ವಿಳಾಸಿನೀ-ರಮಣಿಯರ, ಕಬರಿಕಾ ಬಂಧಗಳಂ–ತುರುಬಿನ ಕಟ್ಟುಗಳನ್ನು, ಪೊತ್ತು–ಕಂಪನ್ನು ಧರಿಸಿ; ಮಲ್ಲಿಗೆಯೊಳ್ ಭಾವಿಸಿ–ಮಲ್ಲಿಗೆಯ ಸುಗಂಧದಲ್ಲಿ ಮಿಶ್ರಣಮಾಡಿ; ಧೂಪದೊಳ್ ಪೋಳೆದು–ಧೂಪದಲ್ಲಿ ವ್ಯಾಪಿಸಿ; ತತ್ಕಾಂತಾರತಿಸ್ವೇದ ಬಿಂದುಗಳೊಳ್–ಆ ಕಾಂತೆಯರ ರತಿಕ್ರೀಡೆಯಿಂದಾದ ಬೆವರುಹನಿಗಳಲ್ಲಿ, ನಾಂದು–ಒದ್ದೆಯಾಗಿ; ಕುರುಳ್ಗಳೊಳ್ ಸುೞಿದು–ಮುಂಗುರುಳುಗಳಲ್ಲಿ ಸುತ್ತಾಡಿ, ಮುಂಪೆ–ಮುಂದುಗಡೆ, ಒಡರ್ಚಿ–ಕೂಡಿ ಇಟ್ಟ, ಘಂಟೆಗಳ–ಗಂಟೆಗಳ, ಒಂದು, ಇಂಚರದೊಳ್–ಇನಿದಾದ ಶಬ್ದದಲ್ಲಿ, ಪಳಂಚಿ–ತಾಗಿ, ಅಂದೊಂದು–ಅಂದು ಒಂದು, ಮಂದಾನಿಲಂ-ಎಳೆಯ ಗಾಳಿ, ಸುೞಿದತ್ತು-ಸುಳಿದಾಡಿತು. ವೇಶ್ಯೆಯರ ಮನೆಯ ಮುಂದೆ ಗಂಟೆಯನ್ನು ಕಟ್ಟುವ ಪದ್ಧತಿ ಇತ್ತು; "ಅಂತೆನಿಸಿದ ವೇಶ್ಯಾವಾಟನಿಕೇತನ ಪ್ರಾಂತದೊಳ್ ಚಾರುದತ್ತಂ ಬರುತ್ತುಮದಱ ಶೃಂಗಾರ ವಿವಿಧ ಭಾವಂಗಳಂ ರುದ್ರದತ್ತಾದಿಗಳ್ಗೆ ಪೇೞುತ್ತಂ ಬರೆವರೆ ಪೊನ್ನಗಂಟೆವೆರಸೊಪ್ಪುವ ಬಾಗಿಲ್ವಾಡಮಂ ಕಂಡು" (ಕರ್ಣಪಾರ್ಯನ ಪ್ರಯೋಗ) ಎಂಬುದನ್ನು ನೋಡಬಹುದು. 'ಬಂಧಂಗಳಂ' ಎಂಬುದು 'ಗಂಧಂಗಳಂ' ಎಂದಿರಬಹುದು.

**ವಚನ:** ಪೂವಿನಂಬುಗಳಂ ಪಣ್ಣಲೆಂದು–ಹೂಬಾಣಗಳನ್ನು ಮಾಡಬೇಕೆಂದು; ಓಜನಸಾಲೆ–ಕಮ್ಮಾರನ ಅಥವಾ ಅಕ್ಕಸಾಲೆಯ ಮನೆ:

**೮೧.** ಮಾಲೆಗಾತಿಯರ ವರ್ಣನೆ: ಎತ್ತಿದ ತೋಳ–ಮೇಲಕ್ಕೆತ್ತಿದ್ದ ತೋಳುಗಳ, ಮೊತ್ತಮೊದಲ್–ಬುಡದಭಾಗ, ಅಂಗಜನಂ-ಮನ್ಮಥನನ್ನು, ಪಟವಿದ್ದೆಗೆತ್ತಿದಂತೆ-ಗಾಳಿಪಟವನ್ನು ಆಡಿಸುವ ಹಾಗೆ ಆಡಿಸುವುದಕ್ಕೆ, ಎತ್ತಂ–ಎಲ್ಲಿಯೂ, ಅಪೂರ್ವಮಾಗೆ–ಅಪರೂಪವಾಗಲು; ಪೊಸವಾಸಿಗಂ–ಹೊಸದಾದ ಹಾರವು, ಅಂಗಜ ಚಕ್ರವರ್ತಿಗೆ–ಮನ್ಮಥನೆಂಬ ಚಕ್ರವರ್ತಿಗೆ, ಎಂದು, ಎತ್ತಿದ, ಮಾನಕೇತನಮಂ-ಮಾನಸಿನ ಧ್ವಜವನ್ನು, ಒತ್ತರಿಸುತ್ತಿರೆ–ಒಂದು ಕಡೆಗೆ ಸರಿಸುತ್ತಿರಲು ಎಂದರೆ ತಿರಸ್ಕರಿಸುತ್ತಿರಲು; ಚಲ್ಲವಾಡಿ-ಚಲ್ಲಾಟವಾಡಿ, ಪೂವೆತ್ತುವ–ಹೂವಿನಹಾರಗಳನ್ನು ಮೇಲೆತ್ತಿ ತೋರಿಸುವ, ಮಾಲೆಗಾರ್ತಿಯರಂ – ಹೂವಾಡಿಗಿತ್ತಿಯರನ್ನು, ಅರಿಕೇಸರಿ – ಅರ್ಜುನ, ನಿಂದು–ನಿಂತು, ನೋಡಿದಂ–ನೋಡಿದನು. ಪಟವಿದ್ದೆ: "ಪಟಮಿಡೆ ಸಾಲ್ಗುಮನ್ಯಭವನಲ್ಲಿಭನಂ ಪಟವಿದ್ಯೆಯೆತ್ತಲುಂ ಜಟೆಮುಟಿಕರ್ಕಳಂ ತೊಡರ್ಪ ಸುತ್ತಲುಂ" ಎಂಬ ಪಂಪನ ಪ್ರಯೋಗವಿದೆ (ಆದಿ ಪು. ೩-೬೫); ಇದು ಪಟವಿದ್ಯ ಎಂಬುದರ ತದ್ಭವವೆಂದು ಹೇಳುವುದು ಸರಿಯಲ್ಲದಿರಬಹುದು, ಪಟವಿದ್ಯೆ ಎಂದೇ ಪ್ರಯೋಗವಲ್ಲಿರುವುದರಿಂದ.

**ವಚನ:** ನಾಡಾಡಿಯಲ್ಲದ—ಸಾಮಾನ್ಯವಲ್ಲದ; ಜೋಡೆಗೆಯ್ವಂಗಳಂ-ಜಾರ

ಚೇಷ್ಟೆಗಳನ್ನು ; ಮನೆಯಾಣ್ಮನಂ ಮಾಱುವಂದಮಲ್ಲದೆ ಪೂವಮಾಱುವಂದಮಲ್ತು–ಮನೆಯ ಗಂಡನನ್ನು ಮಾರುವ ರೀತಿಯಲ್ಲದೆ ಹೂವನ್ನು ಮಾರುವ ರೀತಿಯಲ್ಲಿ: ಕಣ್ಣೆವೆಯೆ–ಕಣ್ಣಿನ ರೆಪ್ಪೆಯೆ, ಕಾಂಡಪಟವಾಗೆ–ತೆರೆಯಾಗಲು ; ಬಗೆಯಾಣ್ಮನ–ಮನಸಿನೊಡೆಯನ, ಇಚ್ಛೆಯಗಂಡನ ; ದೂದವಿ–ದೂತಿ ; ಬಗೆದೆಡೆಯನೆಯ್ದಿ–ಇಷ್ಟಬಂದ ಸ್ಥಳಕ್ಕೆ ಹೋಗಿ; ಬಗೆದ ಬಗೆಯಂ ಬಗೆದಂತೆ ತೀರ್ಚಿ–ಬಯಸಿದ ಇಚ್ಛೆಯನ್ನು ಬಯಸಿದಂತೆ ತೀರಿಸಿ ; ಜೋಡೆಯರಂ–ಜಾರೆಯರನ್ನು ;

೮೨. ಕುಱುಪಂಪುರ್ವಿನ ಜರ್ಪೆ ತೋಱೆ–ಗುರುತನ್ನು ಎಂದರೆ ಸಂಕೇತ ಸ್ಥಾನವನ್ನು ಹುಬ್ಬಿನ ಅಲುಗಾಟವೇ ತೋರಿಸಲು ; ಬಗೆಯಂ ಕಣ್ಸನ್ನೆಗಳ್ ಪೇೞೆ–ಮನದ ಅಭಿಲಾಷೆಯನ್ನು ಕಣ್ಣಿನ ಸಂಜ್ಞೆಗಳೇ ಹೇಳಲು ; ತನ್ನೆಱಕಂ ತನ್ನ ಮನಕ್ಕೆ ಕೂಡೆ–ತನ್ನ ಪ್ರೀತಿ ತನ್ನ ಮನಸ್ಸಿಗೆ ಮೆಚ್ಚಿಕೆಯಾಗಲು ; ಕೆಲಕಂ–ಮಗ್ಗುಲಲ್ಲಿರುವವರಿಗೂ, ಗಂಡಂಗಂ–ಗಂಡನಿಗೂ, ಒಳ್ಪಂ–ಒಳ್ಳೆಯತನವನ್ನು, ಕರಂ–ವಿಶೇಷವಾಗಿ, ಮೆಱೆವಾ–ಮೆರೆಯುವ, ಪ್ರಕಟಿಸುವ, ಆ ಪ್ರೌಢೆಯೆ–ಆ ಜಾಣೆಯೇ, ಜೋಡೆಯಕ್ಕುಂ–ಜಾರೆಯಾಗುತ್ತಾಳೆ ; ಎಡೆಯೊಳ್–ಎಲ್ಲರ ನಡುವೆ, ದೂಂಟೆಂದೆ ದೂಂಟೆಂಗೆ–ಒಂದು ಹೆಜ್ಜೆಯಿಂದ ಇನ್ನೊಂದು ಹೆಜ್ಜೆಗೆ, ಪೆರ್ವಱೆಯಂ – ದೊಡ್ಡಭೇರಿಯನ್ನು, ಪೊಯ್ಸಿ-ಹೊಡೆಯಿಸಿ, ಡಂಗೂರಹಾಕಿಸಿ ; ಕೆಲಕ್ಕೆ-ಮಗ್ಗುಲಿಗೆ, ನಾಣ್ಚಿ–ನಾಚಿಕೆಪಟ್ಟು, ತಲೆಗುತ್ತಿ–ತಲೆ ತಗ್ಗಿಸಿಕೊಂಡು, ಇರ್ಪಾಕೆ–ಇರುವವಳು, ಏಂ ಜೋಡೆಯೇ–ಏನು ಜಾರೆಯೇ? ಅಲ್ಲ. ಈ ಪದ್ಯದಲ್ಲಿ ಒಂದೇ ಒಂದು ಸಂಸ್ಕೃತ ಶಬ್ದವಿದೆ ; ಇದರ ದೇಸಿ ಮನೋಜ್ಞ. "ದೂಂಟು–ಏಕ ಪಾದಗತಾ"

೮೩. ಎಂಥವಳು ಜಾರಸ್ತ್ರೀಯೆಂಬುದನ್ನು ಇನ್ನೂ ಹೇಳುತ್ತಾನೆ: ಕೂರಿದುವಪ್ಪ-ಹರಿತವಾದ, ತೀಕ್ಷ್ಣವಾದ, ಕಣ್ಮಲರ್ಗಳ್-ಹೂವಿನಂತಿರುವ ಕಣ್ಣುಗಳು, ಅಳ್ಳೆರ್ದೆಯೊಳ್–(ವಿಟನ) ನಡುಗುವ ಎದೆಯಲ್ಲಿ, ತಡಂ ಆಡೆ–ತಡವಾಗಿ ಆಡಲು, ನಿಧಾನವಾಗಿ ಚಲಿಸಲು ; ಕಣ್–ಕಣ್ಣುಗಳು, ತಾಮೆ–ತಾವೇ, ಪೇರಿಸೆ–ಚಲಿಸುವಂತೆ ಮಾಡಲು, ಪುರ್ವು–ಹುಬ್ಬುಗಳು, ನಾಲಗೆವೊಲಾಗೆ–ನಾಲಗೆಯಂತೆ ಮಾತಾಡುವುದಾಗಲು, ಮನಂಬುಗಿಸಲ್ಕೆ – ಮನಸ್ಸನ್ನು ಹೊಗಿಸುವುದಕ್ಕೆ, ಬಲ್ಲೊಡೆ – ತಿಳಿದಿದ್ದ ಪಕ್ಷದಲ್ಲಿ, ಆ ಜಾರೆಯೆ–ಆ ವೇಶ್ಯೆಯೇ, ಜಾರೆ–ವೇಶ್ಯೆ ; ಜಾಜನೆ–ಜಾರತನವನ್ನೇ, ಪಿರಿದುಂ–ವಿಶೇಷವಾಗಿ, ಗಱಪುತ್ತುಮಿರ್ಪಳಂ–ಬಾಯಲ್ಲಿ ಹರಟುತ್ತಾ ಇರುವವಳನ್ನು, ಸಾರಿಕೆಯೆಂಬರಲ್ಲದೆ–ಗಿಣಿ ಎಂದು ಹೇಳುತ್ತಾರಲ್ಲದೆ, ಬುದ್ಧಿಯುಳ್ಳವರ್–ವಿವೇಕಿಗಳು, ಅಭಿಸಾರಿಕೆಯೆಂಬರೆ–ಜಾರೆ ಎಂದು ಹೇಳುತ್ತಾರೆಯೆ ? ಇಲ್ಲ. ಪೇರಿಸು = ಪೇರ್ + ಇಸು ; ಪೇರ್ ಎಂಬ ಧಾತುವನ್ನು ಕೇಶಿರಾಜ ಕಾಣಿಸಿಲ್ಲ ; ತಮಿಳಿನಲ್ಲಿ ಪೇರ್ = ಅಶೈದಲ್, ಚಲಿಸು ಎಂದರ್ಥ.

ವಚನ: ಆ ಪಾಣ್ಬೆಯರ ಗೆಯ್ವಗೆಯ್ತಂಗಳಂ–ಆ ಸೂಳೆಯರು ಮಾಡುವ ಚೇಷ್ಟೆಗಳನ್ನು ; ಆಡುವ ಮಿೞ್ತುಗೊಡ್ಡಂಗಳುಮಂ–ಹೇಳುವ ಮೃತ್ಯುವಿನಂಥ ಚೇಷ್ಟೆಯ ಮಾತುಗಳನ್ನು ; 'ಸಾಯೆ ಸರಸಂ ನುಡಿದು' ಎಂಬುದನ್ನು ಹೋಲಿಸಿ ನೋಡಿ.

೭೪. ಸಂಸಾರಪಲ್ಲಿಲ್ಲದಿರುವ ಸವಿ ಜಾರತನದಲ್ಲಿ ಏನೋ ಇರಬೇಕು; ಇಲ್ಲದಿದ್ದರೆ ತಲೆ ಮೂಗನ್ನಾದರೂ ಒತ್ತೆಯಿಟ್ಟು ಜಾರತನವನ್ನು ಏಕೆ ಮಾಡುತ್ತಾರೆ ಜನ? ಅಲರ್ಗಣ್ಣೊಳ್–ಹೂವಿನಂಥ ಕಣ್ಣುಗಳಲ್ಲಿ, ಸ್ಮರಂ-ಮನ್ಮಥನು, ಇರ್ದನಕ್ಕುಂ-ಇದ್ದವನಾಗುತ್ತಾನೆ; ಎಡೆವೋಪ-ಸಂಕೇತಸ್ಥಾನಕ್ಕೆ ಹೋಗುವ, ಆ ಜೋಡೆ–ಆ ಜಾರೆ, ಕಾಮಂಗೆ–ಮನ್ಮಥನಿಗೆ, ಕಾದಲೆಯಕ್ಕುಂ–ಪ್ರೀತಿಸಿದವಳಾಗಿದ್ದಾಳೆ; ಪೆಜತೇನೊ–ಬೇರೆ ಏನೋ? ಪಾರದರದೊಳ್-ಪರದಾರತ್ವದಲ್ಲಿ, ಹಾದರದಲ್ಲಿ. ಸಂಸಾರಸರ್ವಸ್ವಮುಂ-ಸಂಸಾರದ ಸಾರವನ್ನೆಲ್ಲ, ಗೆಲೆವಂದ – ಗೆದ್ದ, ಮೀರಿದ, ಅಲಂಪಿನ – ಸುಖದ, ಇಂಪನಾಳ್ದ–ಇಂಪನ್ನು ಹೊಂದಿದ, ಸವಿಯುಂಟಕ್ಕು–ರುಚಿ ಇರಬೇಕು; ಅವಗಂ–ಯಾವಾಗಲೂ, ಸಮಂತು–ಚೆನ್ನಾಗಿ, ಅವರ್–ಜಾರರು, ತಲೆಯುಂ ಮೂಗುಮನೊತ್ತೆಯಿಟ್ಟು–ತಲೆಯನ್ನೂ ಮೂಗನ್ನೂ ಒತ್ತೆಯಿಟ್ಟು, ಉಂತೆ–ಸುಮ್ಮನೆ, ಸೆರೆವಂತೆ–ಕೊಡುವಹಾಗೆ, ಗಾಂಪರೇ–ದಡ್ಡರೇ! ಅಲ್ಲ. ಹಾದರಿಕೆಗೆ ಹಿಂದಿನ ಕಾಲದಲ್ಲಿ ವಿಧಿಸುತ್ತಿದ್ದ ಶಿಕ್ಷೆ ಗಂಡಸಿಗೆ ತಲೆ ಕತ್ತರಿಸುವುದು, ಹೆಂಗಸಿಗೆ ಮೂಗು ಕತ್ತರಿಸುವುದು. ಕ್ರಿ. ಶ. ೯೭೨ನೆಯ ಒಂದು ಶಾಸನದಲ್ಲಿ (s ii, 77) "ಹರದರಕ್ಕಾನಂಗದೊಳ್ ಪಾರದರಿಗೆಯ ಪಚ್ಚವಂಕೊಂಡು ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು" ಎಂದು ಹೇಳಿದೆ (ಪಂಕ್ತಿ ೩೨-೩೩). ಒತ್ತೆಯಿಡುವ ವಿಷಯವಾಗಿ ಈ ಕೆಳಗಿನ ಪದ್ಯವನ್ನು ನೋಡಬಹುದು (ಕಾವ್ಯಸಾರ, ಪು. ೨೩೪–೨)

> "ಕುರುಳಂಕೊಟ್ಟಪಳೆಂಬುದರ್ಕೆ ಕುಱುಪೇಸಿ ಚಿನ್ನವೂ ಬೇಡಿದಾ
> ಬೆರಲಂ ಕೊಟ್ಟಪಳೆಂಬುದರ್ಕೆ ಕುಱುಪೇನೀವುಂಗುರಂ ಮಾಸಲಾ
> ದುರಮಂ ಕೊಟ್ಟಪಳೆಂಬುದರ್ಕೆ ಹೊಱ ವೋಗೀ ಹಾರಮಾಗಳ್ ತಳೋ
> ದರಿ ಪೇೞೆಂದು ಕಲಾವಿಲಾಸನಿದಿರೊಳ್ ತಂದಿಕ್ಕುವರ್ ದೂತಿಯರ್"

ಹೀಗೆಯೇ ಅರ್ಥನೇಮಿ ಪುರಾಣದಲ್ಲಿ (೫–೨,ವ.) "ಆಕೆಗಳ ಕೊಯ್ದಿಕ್ಕಿದ ಕುರುಳ್ಗಳಿಂ ತುಂಬಿಯ ಬಣಂಬೆಯನೊಟ್ಟಿದಂತಾಗೆ, ಕಡಿದಿಕ್ಕಿದ ಬೆರಳ ಕಂಡಿಕೆಗಳಿಂ ಪಸಿಯರಿಸಿನದ ಕೊಂಬನುಡಿದು ಸುಣ್ಣಂ ತೊಡೆದೀಡಾಡಿದಂತಾಗೆ, ಕಿೞ್ತಿಕ್ಕಿದ ಕೆಂಬಲ್ಗಳಿಂ ದಾಳಿಂಬದ ಬಿತ್ತಂ ರಾಶಿಗೆಯ್ದಂತಾಗೆ, ಕಿಱುವೆರಲ್ಗಳಿಂ ಕರ್ಚುವ ಮುಖ ಮುಕುರಂಗಳ್ ಚಂದ್ರಮಂಡಲಂ ಪಾವಿನ ಪೆಡೆಯಂ ನುಂಗುವಂತಾಗೆ ಬಯಲ್ಗೊಱೆಯುಸೀಸುವ ಬಾಲೆಯರಿಂ ಸ್ತ್ರೀರಾಜ್ಯಮಂ ಸೂಱೆಗೊಟ್ಟುದಂ ಸುಲಿವಂತಾಗೆ, ಸ್ಮರ ಪರಿತಾಪಕ್ಕೆ ಪಕ್ಕಾಗಿ ಪೊಕ್ಕು ಪೊರಳ್ವ ನರಳ್ವ ನಾರಿಯರ ಸೆರವಿಗಳಿಂ" ಎಂದು ಬರುವ ಪಂಕ್ತಿಗಳನ್ನು ನೆನೆಯಬಹುದು.

**ವಚನ**: ಮನಸಿಜನ ನಡಪಿದ–ಮನ್ಮಥನು ಸಾಕಿದ; ದೀವಗಾಜನ–ಹುಲ್ಲೆ ಮುಂತಾದ ದೀಪಕ ಮೃಗಗಳನ್ನೊಡ್ಡಿ ಹುಲಿ ಮುಂತಾದುವುಗಳನ್ನು ಬೇಟೆಯಾಡುವ ಬೇಟೆಗಾರನ; ಮತ್ತವಾರಣಂಗಳೊಳ್-ಮನೆಯ ಮುಂದಿನ ಕೈಸಾಲೆಗಳಲ್ಲಿ: ಆಳವಿ

ಗಬಾದ–ಆಳತೆಯಿಲ್ಲದ, ಪ್ರಮಾಣವಿಲ್ಲದ, ಅತಿ ಅಧಿಕವಾದ, ಪೆಂಡವಾಸದೊಳ್ಪೆಂಡಿರಂ-ಸ್ತ್ರೀಯರ ನಿವಾಸದ, ಸೂಳೆಗೇರಿಯ, ಒಳ್ಳೆಯ ಹೆಂಗಸರನ್ನು

**೮೫.** ಈಕೆಗಂಡು–ಈಕೆಯನ್ನು ನೋಡಿ, ಮನಸಿಜಂ–ಮನ್ಮಥನು, ರತಿಯಂ–ರತಿದೇವಿಯನ್ನು, ಬಿಸುಟಂ–ಬಿಟ್ಟುಬಿಟ್ಟನು : ಹರನ್–ಶಿವನು, ಈಕೆಗಂಡು–ಇವಳನ್ನು ನೋಡಿ, ನೂತನ ಗಿರಿಜಾತೆಯಂ-ಹೊಸ ಹೆಂಡತಿಯಾದ ಪಾರ್ವತಿಯನ್ನು, ತೊಱೆದಂ-ತೊರೆದನು ; ನರಕಾಂತಕಂ–ವಿಷ್ಣುವು, ಈಕೆಗಂಡು–ಇವಳನ್ನು ಕಂಡು, ತೊಟ್ಟನೆ–ಇದ್ದಕ್ಕಿದ್ದ ಹಾಗೆಯೇ, ನಿಜಲಕ್ಷ್ಮಿಯಂ–ತನ್ನ ಪತ್ನಿಯಾದ ಲಕ್ಷ್ಮಿಯನ್ನು, ಮಱೆದಂ-ಮರೆತನು ; ಎಂಬ ಸೆಗಟ್ಟೆಯಂ ಎಂಬ–ಹೊಗಳಿಕೆಯನ್ನು, ಅಪ್ಪುಕೆಯ್ದು-ಹೊಂದಿ, ಜವ್ವನದ, ವಿಳಾಸದ, ಅಂದದ, ಅಲ್ಲಿಯಾ–ಆ ವೇಶ್ಯಾವಾಟದ, ಪೆಂಡಿರೆ–ಹೆಣ್ಣುಗಳೇ, ಪೆಂಡಿರ್–ಹೆಣ್ಣುಗಳು ; ಸೂಳೆಗೇರಿಯ ಸ್ತ್ರೀಯರ ಚೆಲುವನ್ನು ಇಲ್ಲಿ ಹೊಗಳಿದೆ

**೮೬.** ಅಕ್ಕ, ತಿಸರಮಿದಾವುದು – ಈ ಮೂರೆಳೆಯ ಹಾರ ಯಾವುದು? ಧರಣೇಂದ್ರನ ಕೊಟ್ಟುದು-ಧರಣೇಂದ್ರನೆಂಬ ಸರ್ಪರಾಜನು ಕೊಟ್ಟದ್ದು; ಕಣ್ಗೆಸೆವುದು-ಕಣ್ಣಿಗೆ ಸೊಗಸಾಗಿರುವ, ವಜ್ರದಾಳಿ–ವಜ್ರದ ತಾಳಿ. ಇದಾವುದು-ಇದುಯಾವುದು? ಒಲ್ಲದೆ-ನಾನು ಒಪ್ಪದೆ, ಉಱಿದು-ಬಿಟ್ಟು. ಅಟ್ಟಿದೊಡೆ-ಕಳಿಸಿಬಿಟ್ಟರೆ, ಅಂದು-ಆ ದಿವಸ ಕುಬೇರಂ–ಕುಬೇರನು, ಇತ್ತುದು–ಕೊಟ್ಟುದು ; ಎಕ್ಕಸರಂ–ಒಂದೆಳೆಯ ಹಾರ : ಇದಾವುದು-ಇದು ಯಾವುದು? ಆಂ ಮುಳಿಯೆ-ನಾನು ಕೋಪಿಸಿಕೊಳ್ಳಲು, ಕಾಲ್ವಿಡಿದ-ಕಾಲನ್ನು ಹಿಡಿದುಕೊಂಡ, ಇಂದ್ರನ ಕೊಟ್ಟುದಲ್ತೆ–ಇಂದ್ರನು ಕೊಟ್ಟದ್ದಲ್ಲವೆ? ಪೋ ಪುಸಿಯದಿರ್–ಹೋಗು, ಸುಳ್ಳು ಹೇಳಬೇಡ, ಎಂಬ–ಎಂದು ಹೇಳುವ, ಅಲ್ಲಿಯ ಪೆಂಡವಾಸದ–ಅಲ್ಲಿನ ಸೂಳೆಗೇರಿಯ, ಸೂಳೆಯರೆ–ಸೂಳೆಯರೇ, ಸೂಳೆಯರ್–ಸೂಳೆಯರು (ಸಂ.) ಶೂಲಾ > ಸೂಳೆ ; (ಸಂ) ಏಕಸರಂ > ಎಕ್ಕಸರ : (ಸಂ) ತ್ರಿಸರಂ > ತಿಸರಂ

**೮೭.** ಈ ಪದ್ಯದಲ್ಲಿ ರಾಜ ವಿಟರ ವರ್ಣನೆ ಇದೆ: ಸೀಗುರಿ–ಸೀಗುರಿಯೆಂಬ ಕೊಡೆ, ಕಾಪಿನಾ[ಳ್]-ಅಂಗರಕ್ಷಕರು, ಕುಣಿದುಮೆಟ್ಟುವ ಗುಜ್ಜರಿಗಟ್ಟಿ-ಕುಣಿದು ಹೆಜ್ಜೆಯಿಡುವ ಗುರ್ಜರದೇಶದ ಕತ್ತೆ; ಬೀರಮಂ-ಶೌರ್ಯವನ್ನು, ಚಾಗದ-ದಾನದ, ಪೆಂಪುಮಂ–ಹಿರಿಮೆಯನ್ನೂ, ಪೊಗಟ್ವ–ಹೊಗಳುವ, ಸಂಗಡವರ್ಪವರ್–ಜೊತೆಯಲ್ಲಿ ಬರುವವರು, ಒಳ್ಪಿನಿಂದೆ–ಒಳ್ಳೆಯತನದಿಂದ, ಮೆಯ್ಯೋಗಂ-ದೇಹಾಲಂಕರಣವು, ಅಳುಂಬಮಪ್ಪ-ಅತಿಶಯವಾದ, ಬಿಯಂ-ವೆಚ್ಚ, ಆಗೆ-ಆಗಿ, ಎರ್ದೆಗಂ ಬರೆ-ಹೃದಯವನ್ನು ಮುಟ್ಟುತ್ತಿರಲು, ಬರ್ಪ-ಬರುವ, ಪಾಂಗು–ರೀತಿ, ಅಗುರ್ವಾಗಿರೆ–ಆಶ್ಚರ್ಯಕರವಾಗಿರಲು, ಅರಜೋಜಂಗರ ಲೀಲೆ–ರಾಜವಿಟರ ವಿಲಾಸ, ಸುರೇಂದ್ರಲೀಲೆಯಿಂ–ಇಂದ್ರನ ವಿಲಾಸಕ್ಕಿಂತ, ಚೆಲ್ವನಾಯ್ತು-ಸೊಗಸಾಯಿತು. ಇಲ್ಲಿ ಕೆಲವು ಪಾಠಸಂದೇಹಗಳಿವೆ: (೧) ಚಾಪಿನಾಣ್–ಎನ್ನುವುದಕ್ಕೆ ಬದಲಾಗಿ ಕಾಪಿನಾ[ಳ್] ಸ್ವೀಕೃತವಾಗಿದೆ (೨) ಗುಜ್ಜರಿಗಟ್ಟಿ ಎನ್ನುವುದಕ್ಕೆ 'ವಜ್ಜರಿಗಟ್ಟಿ' ಎಂದಿದೆ; ಕರಿಯ ಪಿರಿಯ ಮೆಯ್ಯನಿಡಿಯುಕಿವಿಯ ಕುಣಿದು

ಮೆಟ್ಟುವ ವಜ್ಜರಿಗೞ್ತಿಗಳುಮಂ” ಎಂಬ ‘ಆದಿಪುರಾಣ’ದ ಪ್ರಯೋಗವಿದೆ (೪-೫೪೪); “ಧಾರಿಣಿ ಮಹಾದೇವಿ ಅಯ್ನೂರ್ವರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂ ಬೆರಸು, ವೇಸರಿಗೞ್ತಿಗಳುಂ ಪಿಡಿಗಳುಂ ಸಿವಿಗೆಗಳುಮನೇಱಿ ಕೊಡೆಗಳುಮಂ ಪಿಡಿಯಿಸಿ ಎಕ್ಕಮದ್ದಳೆಯ ಕೊೞಲ ಝುಂಕಾರದ ಪಱೆಗಳ್ ಮುಂದೆ ಬಾಜಿಸುತ್ತಂ ಬೞಿಯಂ ಕಾಪಿನವರ್ವರೆ” ಎಂದು ‘ವಡ್ಡಾರಾಧನೆ’ಯಲ್ಲಿದೆ (ಪು. ೮೦); ಇವೆಲ್ಲವನ್ನೂ ನೋಡಿದರೆ ವೇಸರಿಗೞ್ತಿ ಎಂಬ ಪಾಠವಿದ್ದಿರಬೇಕೆಂದು ತೋರುತ್ತದೆ. (೩) ‘ಒಳ್ಪಿನಿಂದೆ’ಗೆ ‘ಒಱ್ಪಿನಿಂದೆ’ ಎಂಬ ಪಾಠವಿರಬಹುದು. (೪) ‘ಬಿಯುವನಾಗೆರ್ದೆಗಂ’ಗೆ ‘ಬಿಯುವನಾರೆರ್ದೆಗಂ’ ಎಂದಿರಬಹುದು.

**ವಚನ :** ಕೋಟಿಪೊಂಗೆ ಘಂಟೆಯನಲುಗುವ-ಕೋಟಿಹೊನ್ನುಗಳನ್ನು ಕೊಟ್ಟು ಸೂಳೆಯ ಮನೆಯ ಮುಂದಿನ ಗಂಟೆಯನ್ನು ಬಡಿಯುವ; ಕಿಱುಕುಳಬೋಜಂಗರುಮಂ-ಅಲ್ಪರಾದ, ಸಾಮಾನ್ಯರಾದ ವಿಟರನ್ನೂ; ಚಿಕ್ಕ ಪೋರ್ಕುಳಿ ಬೋಜಂಗರುಮಂ-ಚಿಕ್ಕವರಾದ ಕಲಹಶೀಲರಾದ ವಿಟರನ್ನೂ; ಕತ್ತುರಿಬಿಯಮಂ-ಕಸ್ತೂರಿಯ ವೆಚ್ಚವನ್ನು; ಕತ್ತುರಿಯೊಳ್ ಪೂೞ್ದು-ಕಸ್ತೂರಿಯಲ್ಲೇ ಹೂಳಿಹೋಗಿ ಎಂದರೆ ಕಸ್ತೂರಿಯ ಸಾಂದ್ರಲೇಪನವನ್ನುಳ್ಳವರಾಗಿ: ಕತ್ತುರಿಬೋಜಂಗರುಮಂ-ಕಸ್ತೂರಿಯ ವಿಟರನ್ನು; ಬೋಜಂಗರ ಬಿಯದಳವಿಗೆ-ವಿಟರು ಮಾಡುವ ಹಣವ್ಯಯದ ಪ್ರಮಾಣಕ್ಕೆ, ಇಲ್ಲಿಂದ ಮುಂದೆ ಮಧುಪಾನಗೋಷ್ಠಿಯ ವರ್ಣನೆ: ಕಳ್ಗೊಳಮಮರ್ದಿನೊಳಂ ಪುಟ್ಟಿದ ಪೆಂಡಿರಂತೆ-ಕಳ್ಳಿನಲ್ಲೂ ಅಮೃತದಲ್ಲೂ ಹುಟ್ಟಿದ ಹೆಂಗಸಿನಂತೆ ಎಂದರೆ ಸುರಾದೇವಿಯಂತೆ, ಲಕ್ಷ್ಮೀ ದೇವತೆಯಂತೆ, ಬಳಮರ್ದುಕಾಱನ-ಸೈನ್ಯದ ಮದ್ದನ್ನು ಎಂದರೆ ತುಬಾಕಿಯ ಮದ್ದನ್ನು ಮಾಡುವವನು; ಮರ್ದಿನಂತೆ-ಕೋವಿಯ ಮದ್ದಿನಂತೆ; ದಳಂಬಡೆದು-ವೃದ್ಧಿಯಾಗಿ (ದಳವೇಱು ಎಂಬುದರೊಡನೆ ಹೋಲಿಸಿ); ಕಳ್ಗಳಂ-ಮದ್ಯಗಳನ್ನು; ಮಧುಮಂತ್ರದಿಂ-ಮದ್ಯದ ಮಂತ್ರದಿಂದ, ಮಧುದೇವತೆಗಳನರ್ಚಿಸಿ-ಹೆಂಡದ ಅಭಿಮಾನದೇವತೆಗಳನ್ನು ಪೂಜೆಮಾಡಿ; ಕೊಂಚೆ-ಕ್ರೌಂಚಪಕ್ಷಿ; ಅಂಚೆ-ಹಂಸ; ಕುಂತಳಿಕೆ-ಒಂದು ಹಕ್ಕಿ; ಮಾೞ್ಕೆಯ-ಮಾಟದ, ಸಿಪ್ಪುಗಳೊಳ್-ಚಿಪ್ಪುಗಳಲ್ಲಿ, ಮಧುಪಾನ ಪಾತ್ರೆಗಳಲ್ಲಿ; ನೆಲಮೊಳೆಱೆದು-ನೆಲಕ್ಕೆಹೊಯ್ದು (ಹೆಂಡಕುಡಿಯುವ ಮುನ್ನ ಭೂದೇವಿಗೆ ತೃಪ್ತಿಯಾಗಲಿ ಎಂದು ಸ್ವಲ್ಪ ಹೆಂಡವನ್ನು ನೆಲಕ್ಕೆ ಬೀಳಿಸುತ್ತಾರೆ); ತಲೆಯೊಳ್ ತಳಿದು-ತಲೆಗೆ ಚಿಮುಕಿಸಿಕೊಂಡು (ಮಂತ್ರೋದಕದಂತೆ); ಧರ್ಮಗಳ್ಗುಡಿವರ್ಗೆಲ್ಲಂ-ದುಡ್ಡಿಲ್ಲದೆ ಬಿಟ್ಟಿ ಹೆಂಡಕುಡಿಯುವವರಿಗೆಲ್ಲ; ಮಿಾಸಲ್ಗಳ್ಳನ್-ಮಿಾಸಲಾಗಿಟ್ಟಿರುವ ಕಳ್ಳನ್ನು; ಕಿಱಿಕಿಱಿದನೆಱೆದು-ಕೊಂಚಕೊಂಚ ಹೊಯ್ದು; ಕುಡಿಬಿದಿರ ಕುಡಿಯ-ಬಿದಿರಕಳಿಲೆಯ; ಮಾವಿನ ಮಿಡಿಯ-ಮಾವಿನ ಹೀಚುಗಾಯಿನ; ಮಾರುಡಿನ-ಬಿಲ್ವಪತ್ರೆಕಾಯಿಯ ತಿರುಳಿನ, ಮೆಣಸುಗಡಲೆಯ-ಮೆಣಸು(ಕಾರದ) ಕಡಲೆಗಳ, ಪುಡಿಯೊಳಡಸಿದ-ಪುಡಿಯಲ್ಲಿ ತುಂಬಿದ, ಅಲ್ಲ[ದ]ಲ್ಲಣಿಗೆಯ-ಹಸಿಶುಂಠಿಯ ಮಿಶ್ರಣವನ್ನುಳ್ಳ, ಚಕ್ಕಣಂಗಳಂ-ಮದ್ಯ ಕುಡಿಯುವಾಗ ನಂಜಿಕೊಳ್ಳುವ ಚಾಕಣಗಳನ್ನು; ಸಂಸ್ಕೃತದಲ್ಲಿ ಇದನ್ನು ಚಣಕ ಎಂದು

ಕರೆದಿದೆ. "ಕತಕಂ ಕುಟಜಂ ಬಿಲ್ವಂ ಕ್ಷಿಪ್ತಂಚ ಲವಣೋದಕೇ। ತೈಲ ಪಕ್ವಾಂಶ್ಚ ಚಣಕಾನ್ ಮರೀಚೇನ ವಿಮಿಶ್ರಿತಾನ್ ॥" ಎಂಬಲ್ಲಿ ಚಣಕವನ್ನು ಮಾಡುವ ಒಂದು ವಿಧಾನವನ್ನು ಹೇಳಿದೆ. ಮದ್ಯವನ್ನು ತಲೆಯಮೇಲೆ ತಳಿದುಕೊಳ್ಳುದು ಮತ್ತು ನಮಸ್ಕಾರಮಾಡುವುದು : "ವಾಮಾನಾಮಿಕಯಾ ಮೂರ್ಧ್ನಿ ಕ್ಷಿಪೇಯುರ್ಮಧು ವಿಪ್ರುಷಃ।ಪ್ರಣಿಪತ್ಯ ತತೋಽನ್ಯೋನ್ಯಂ ಲಬ್ಧ್ವಾನುಜ್ಞಾಂ ಮುಹಾಸುರಾಮ್।ಮಧು ಪಾನ ಮಾಡುವ ಎಡೆಯಲ್ಲಿ ಚಣಕಗಳನ್ನಿಟ್ಟಿರಬೇಕು : "ಏವಮಾದ್ಯುಪದಂಶಾರ್ಥಂ ಪಾನಸ್ಥಾನೇ ನಿವೇಶಯೇತ್ ॥" ಪಂಪನು ಇಲ್ಲಿ 'ಮೂನೂಱಱುವತ್ತು ಜಾತಿಯ' ಮದ್ಯಗಳಿವೆಯೆಂದು ಹೇಳಿದ್ದಾನೆ; ಅವುಗಳಲ್ಲಿ ಕೆಲವನ್ನು ಈ ಪದ್ಯದಲ್ಲಿ ಕಾಣಬಹುದು :

ಸಿರಿ ಸಿಂಬಿ ತಂಪುಗಂ ಬ। ಬ್ಬರಿ ಗಂಗಾಸಾಗರಂ ಸುರಾಳಂ ಸೋಮಂ
ವರಪಾಣಿ ಮಾಳವೋದರಿ। ಮರವಟ್ಟಗೆಯೆಂಬ ಕೆಲವು ಪೆಸರಿನ ಕಳ್ಳಂ॥
(ಧರ್ಮನಾಥಪುರಾಣ : ೧೦-೧೨೬)

**೮೮.** ಮಧು–ಒಂದು ಬಗೆಯ ಮದ್ಯ, ಸೀಧುಂ–ಇನ್ನೊಂದು ಬಗೆಯ ಮದ್ಯ, ಕಟುಸೀಧು–ತೀಕ್ಷ್ಣವಾದ ಒಂದು ಮದ್ಯ, ಪೋ-ಏ ಹೋಗು, ಪುಳಿತ ಕಳ್ಳಲ್ತಂ-ಹುಳಿ ಹೆಂಡವೂ ಅಲ್ಲ; ಕರಂ-ವಿಶೇಷವಾಗಿ, ಕಯ್ತುಬರ್ಪುದು-ಕಹಿಯಾಗಿರುವುದು ; ಮಾರೀಚಿ ತೊಡರ್ಪುಳಿಂದೆ–ಮಾರೀಚಿ ಮತ್ತು ತೊಡರ್ಪುಳ್ ಎಂಬ ಮದ್ಯಗಳಿಗಿಂತ, ಸರದಂ-ಸರದ (ಶರದ)ವೆಂಬ ಮದ್ಯ, ಕಂಪಿಲ್ಲ-ಸುವಾಸನೆಯಿಲ್ಲ, ಸೊಕ್ಕಿಪ್ಪಲಾಱದು-ಸರದವು ಸೊಕ್ಕಿಸ ಲಾರದು ; ಚಿಂತಾಮಣಿಗೆ–ಚಿಂತಾಮಣಿಯೆಂಬ ಮದ್ಯಕ್ಕೆ, ದಳಂ–ಅಡಕೆ, ಏವುದಕ್ಕ– ಯಾವುದು ಏತಕ್ಕೆ ಅಕ್ಕ ; ಈ ಕಕ್ಕರಕ್ಕೆ–ಈ ಕಕ್ಕರವೆಂಬ ಮದ್ಯಕ್ಕೆ, ಇಲ್ಲ–ಅಡಕೆ ಬೇಕಿಲ್ಲ ; ಇಂತುಟಪ್ಪುದು-ಹೀಗಿರುವುದು, ಕಳ್ಳಪ್ಪುದು-ಮದ್ಯವಾಗುತ್ತದೆ, ತಪ್ಪದು- ತಪ್ಪುವುದಿಲ್ಲ ಎಂದು, ಕಾಂತೆಯರ್–ಸ್ತ್ರೀಯರು, ಕಾಮಾಂಗಮಂ–ಕಾಮವನ್ನು ಕೆರಳಿಸುವ ಮದ್ಯವನ್ನು, ಕುಡಿದರ್–ಕುಡಿದರು.

ಮಧು : ಗುಡೇಕ್ಷು ರಸ ಸಂಭೂತಂ ಕಾಲೇನ ವಿಕೃತಿಂಗತಂ
ಧಾತಕೀ ಪುಷ್ಪಸಂಯುಕ್ತಂ ಖಂಡಮಾವಿಶ್ರಿತಃ ಮಧು ॥
ಸೀಧು : ಈಷದುಷ್ಣೀಕೃತಂ ಶುದ್ಧಂ ರಸಾಲಸ್ಯಾಸವಂ ಘಟೀ
ತ್ರಿರಾತ್ರಮುಷಿತಂ ಮದ್ಯಂ ಸೀಧು ನಾಮ ಮದಾವಹಂ ॥

ಹೀಗೆಯೇ ಕೃಷ್ಣಾಸುರಾ, ದ್ರಾಕ್ಷಾಸವ, ನಾಳಿಕೇರಾಸವ, ಮಧುಕಾಸವ, ಪನಸಾಸವ, ತಾಲಾದಿಮದ್ಯ ಇವುಗಳು ವರ್ಣಿತವಾಗಿವೆ 'ಮಾನಸೋಲ್ಲಾಸ'ದ ೧೦ನೆಯ ಅಧ್ಯಾಯದ ಐದನೆಯ ವಿಂಶತಿಯಲ್ಲಿ.

**ವಚನ :** ಕಕ್ಕರಗೆಯ್ತದಿಂ– ಕಕ್ಕರವೆಂಬ ಮದ್ಯಕಾರ್ಯದಿಂದ ಎಂದರೆ ಅದರ ಸೊಕ್ಕಿನಿಂದ; ಪೊಡರ್ಪ-ಅಲುಗಾಡುವ; ನಿಡಿಯ-ಉದ್ದವಾದ; ಮಱಮಱಿಪ ರೂಪು– ಕೆರಳಿ ಕೆಂಪಾದ ರೂಪ; ಬೆಳ್ಪನಱಿಯೆ–ಬಿಳಿಬಣ್ಣವನ್ನು ಹೋಗಲಾಡಿಸಲು ; ಮಾಜು

ಗೊಂಡಂತೆ-ಪ್ರತಿಯಾಗಿ ತೆಗೆದುಕೊಂಡಂತೆ; ತನಿಗೆತ್ತುವೆರಸು-ಹೊಸ ಆದಿರಾಟವನ್ನು ಹೊಂದಿ; ಬೆಳರ್ವಾಯ್ಗಳೊಳ್-ಬಿಳಿಚಿಕೊಂಡ ಬಾಯಿಗಳಲ್ಲಿ; ಇಲ್ಲಿ "ಮಱಲ್ದು ದೆಂದು ಕಣ್ಣದಡಿದ ಭಾವಂ"-ಇದರಿಂದ ಮಱಮಱಿಪ ಶಬ್ದ ಬಂದಿರಬಹುದು; "ನಿಡಿಯಲರ್ಗಣ್ಗಳ್ಗೆ ಮಱಮಱಪಸೋಟಮುಮಂ" ಎಂದು ಇನ್ನೊಂದು ಪ್ರಯೋಗವಿದೆ (ಪಂಪಭಾ. ೭-೮೧೮).

೮೯. ಬೆಳರ್ತ-ಬಿಳಿಚಿಕೊಂಡ, ಬೆಳರ್ವಾಯ್‌-ತುಟಿಯನ್ನುಳ್ಳ, ಕರಂ ಪೊಳೆವ-ವಿಶೇಷವಾಗಿ ಹೊಳೆಯುವ, ಅಪಾಂಗೆ-ಕಡೆಗಣ್ಣುಳ್ಳವಳು, ಕಣ್ಣಿಂದೆ ಅಳುರ್ ತುಳುಂಕೆ, ಕಣ್ಣುಗಳಿಂದ ದೃಷ್ಟಿಯ ವ್ಯಾಪ್ತಿ ಸೂಸಲು; ನಿಡುವುರ್ಬುಗಳ್-ನೀಳವಾದ ಹುಬ್ಬುಗಳು-ಪೊಡರೆ-ಅಲುಗಾಡಲು, ಬಾಯ ಕಂಪಿಂಗೆ ಸಾರ್ವಳಿಪ್ರಕರಂ-ಬಾಯಿನ ಸುಗಂಧಕ್ಕೆ ಬರುವ ದುಂಬಿಗಳ ಸಮೂಹವು, ಸೀಗು[ರಿ]ವೊಲಾಗೆ-ಕೊಡೆಯಂತಾಗಲು, ನಾಣ್ಗೆಟ್ಟು-ನಾಚಿಕೆಬಿಟ್ಟು, ಜತಿಗೆ ಮೆಟ್ಟುವಳ್ – ತಾಳಕ್ಕೆ ಸರಿಯಾಗಿ ಕುಣಿಯುತ್ತಾಳೆ; ನೋಟ್ಪರಂ-ನೋಟಕರನ್ನು, ಪಿಡಿದು ಮೆಟ್ಟುವಳ್-ಹಿಡಿದು ತುಳಿಯುತ್ತಾಳೆ.

**ವಚನ:** ಮದಿರಾ ಮದದೊಳಂ-ಮದ್ಯದ ಅಮಲಿನಲ್ಲಿಯೂ; ಅಳವಿಗಱಯೆ-ಮಿತಿಮೀರಿ.

೯೦. ಕಳ್ಳುಸೊಕ್ಕಿನಲ್ಲಿ ಇನ್ನೊಬ್ಬಳು ನರ್ತಿಸುತ್ತಾಳೆ: ಮುಡಿ-ತುರುಬು, ಮಕರಧ್ವಜಂಬೊಲ್-ಮನ್ಮಥನ ಮೀನಬಾವುಟದಂತೆ, ಬೆಂಬಿಡಿದೊಯ್ಯನೊಯ್ಯನೆ-ಬೆನ್ನಮೇಲೆ ಮೆಲ್ಲಮೆಲ್ಲಗೆ, ಎೞಲುತ್ತಿರೆ-ಸಡಿಲಿ ನೇಲುತ್ತಿರಲು, ಉಳ್ಳುಡೆ-ಒಳ ಉಡುಪು, ಕಟಿಸೂತ್ರದೊತ್ತಿನೊಳೆ-ಸೊಂಟದ ದಾರದ ಹತ್ತಿರದಲ್ಲೆ, ಜೋಲ್ದಿರೆ-ಸಡಿಲವಾಗಿ ಜೋತುಬಿದ್ದಿರಲು, ನಾಣ್ ತಲೆದೋಱಿ-ಗುಹ್ಯಾಂಗ ಕಾಣಿಸಲು, ಕೂಡೆ-ಕೂಡಲೇ, ಕೂಕಿಡುವ-ಮೇಲಕ್ಕೆ ನೆಗೆಯುವ, ಕುಕಿಲ್ವ-ಹಕ್ಕಿಯಂತೆ ಕೂಗುವ, ಬಿಕ್ಕುಳಿಪ-ಬಿಕ್ಕಳಿಸುವ, ತೇಗುವ-ತೇಗನ್ನು ಬಿಡುವ, ತನ್ನ ತೊಡಂಕು-ತನ್ನ ತೊಡಕು, ಅದೆಯ್ದೆ-ಅದು ಚೆನ್ನಾಗಿ, ನೂರ್ಮಡಿ-ಮನದೊಳ್ ಪಳಂಚಿ ಅಲೆಯೆ-ನೂರುಬಾರಿ ಮನಸ್ಸಿನಲ್ಲಿ ತಾಕಲಾಡಿ ಪೀಡಿಸುತ್ತಿರಲು, ಡಕ್ಕೆಯೊಳ್-ಢಕ್ಕಾವಾದ್ಯಕ್ಕನು ಸಾರವಾಗಿ, ಅಚ್ಚಿಜವಾಗೆ-ಆಶ್ಚರ್ಯವಾಗುವ ಹಾಗೆ, ಆಡಿದಳ್-ಕುಣಿದಳು.

**ವಚನ:** ತೊಸೆವ – ಅತ್ತಿತ್ತ ಅಲ್ಲಾಡುವ, ತೊಸೆಪಂಗಳುಮಂ-ತೂಗಾಟಗಳನ್ನು; ಮರಸರಿಗೆ ವಿಡಿದು-ದೊಡ್ಡ ಚೆಂಬನ್ನು ಹಿಡಿದುಕೊಂಡು (?); ಬೂತಾಟಂಗಳುಮಂ-ಭೂತದ ಆಟಗಳನ್ನು.

೯೧. ಈ ಪದ್ಯದಲ್ಲಿ ಸ್ವಲ್ಪ ಪಾಠಕ್ಲೇಶಗಳಿವೆ: (೧) 'ಕಳ್ಗುಡಿವಪೆಂಬುದಿದಾಗದ'ಕ್ಕೆ 'ಕಳ್ಗುಡಿವರೆಂಬು[ದ ನಾ]ಗದ' ಎಂದು ತಿದ್ದಿಕೊಂಡಿದೆ. (೨) 'ಕುಡಿವಸುಮಂತೆ'ಗೆ 'ಕುಡಿವ[ರು] ಮಂತೆ' ಎಂದು ತಿದ್ದಿದೆ: ಕಳ್ಗುಡಿವರ್ ಎಂಬುದಂ-ಹೆಂಡ ಕುಡಿಯುವವರು ಎಂಬ ಮಾತನ್ನು, ನೋಡ-ನೋಡಯ್ಯ, ನುಡಿವರೆ-ಹೇಳುತ್ತಾರೆಯೇ? ಹೇಳಬಾರದು. ಇದು ಆಗದ ಸೂರುಳ್-ನಡೆಯಲಾರದ ಪ್ರತಿಜ್ಞೆ ಇದು;

ಕುಡಿವರುಂ–ಹೆಂಡ ಕುಡಿಯುವವರೂ, ಅಂತೆ-ಹಾಗೆ, ಕುಡಿವರ್-ಕುಡುಕರು, ಎಂದೊಡೆ-ಎಂದು ಹೇಳಿದರೆ, ನಾಣ್ಚುವರ್–ಸಂಕೋಚಪಟ್ಟುಕೊಳ್ಳುತ್ತಾರೆ ಅಂತುಟಪ್ಪುದಂ–ಹಾಗಿರುವುದನ್ನು, ಕುಡಿದುಂ–ಕುಡಿದೂ, ಆರ–ಯಾರ, ಎರ್ದೆಯುಮಂ–ಮನಸ್ಸನ್ನೂ, ಸೆಱೆಗೆಯ್ವಪರ್–ಸೆರೆ ಹಿಡಿಯುತ್ತಾರೆ. ಎಂದರೆ ಆಕರ್ಷಿಸುತ್ತಾರೆ; ಎಯ್ದೆ–ಚೆನ್ನಾಗಿ, ದೋಷದೊಳ್-ದುಷ್ಟವಾದ ಚಾಳಿಯಲ್ಲಿ, ತೊಡರ್ವುದುಂ-ಸಿಕ್ಕಿಕೊಳ್ಳುವುದೂ, ಒಂದು, ಉಪಾಶ್ರಯವಿಶೇಷದೊಳ್–ವಿಶೇಷ ಅವಲಂಬನದಲ್ಲಿ, ಎಂದರೆ ನೃತ್ಯಗೀತ ಮುಂತಾದ ಅವಲಂಬನದಲ್ಲಿ, ಒಳ್ಪನೆ – ಒಳ್ಳೆಯತನವನ್ನೇ, ತಳ್ವುದು ಆಗದೇ–ಪಡೆಯುವುದು ಆಗುವುದಿಲ್ಲವೇ? ಆಗುತ್ತದೆ. ಇಲ್ಲಿಗೆ ಮಧುಪಾನ ಕ್ರೀಡೆ ಮುಗಿಯುತ್ತದೆ.

**ವಚನ** :–ಪೞಿಕೆಯ್ದು ನಲ್ಲಳಂ–ನಿಂದಿಸಿದ ಪ್ರಿಯೆಯನ್ನು : ಉೞಿಯಲಾಱದೆ –ಬಿಡಲಾರದೆ; ಸುೞಿಯೆ–ಅವಳ ಮನೆಯ ಮುಂದೆಯೇ ಓಡಾಡುತ್ತಿರಲು.

**೯೨.** ಬಸನದ–ರತಿಯ ಆಸಕ್ತಿಯು, ಒಡಂಬಡಿಂಗೆ–ಒಡಂಬಡಿಕೆಗೆ, ಅಲಸಿ–ಸಾಕಾಗಿ, ಮಾಣ್ದೊಡಂ–ಅವಳು ಬಿಟ್ಟರೂ, ಇಂತು ಇದನೀವೆನೆಂದನಂ–ಹೀಗೆ ಇದನ್ನು ಕೊಡುತ್ತೇನೆ ಎಂದವನನ್ನು, ಪುಸಿದೊಡಂ–ಸುಳ್ಳು ಹೇಳಿದರೂ ಎಂದರೆ ನಿನಗೆ ಬೇಕಾದುದನ್ನು ಕೊಡುತ್ತೇನೆಂದವನಿಗೆ ಸುಳ್ಳುಹೇಳಿದರೂ, ಆಸೆದೋಱ–ಆಸೆಯನ್ನು ತೋರಿಸಲು, ಬಗೆದೋಱದೊಡಂ–ತನ್ನ ಮನಸ್ಸನ್ನು ಪ್ರಕಟಿಸದಿದ್ದರೂ, ಸೆರೆದಿರ್ದೊಡಂ – ಕೂಡಿದ್ದರೂ, ಸಗಾಟಿಸದೊಡಂ – ಪ್ರೇಮವನ್ನು ತೋರಿಸದಿದ್ದರೂ, ಆಯ್ತಮುಂ ಚಲಮುಮುಳ್ಳೊಡೆ–ಸಾಮರ್ಥ್ಯವೂ ಚಲವೂ ನಿನಗಿದ್ದ ಪಕ್ಷದಲ್ಲಿ, ಅವಳ್ಗೆ–ಅವಳಿಗೆ, ಪೇಸದೆ–ಜುಗುಪ್ಸೆಪಟ್ಟುಕೊಳ್ಳದೆ, ಮತ್ತಂ–ತಿರುಗಿಯೂ, ಆಟಿಸುವುದೆ–ಬಯಸುವುದೇ? ಮತ್ತಂ–ಪುನಃ, ಅಂಜುವುದೆ–ಹೆದರುವುದೇ? ಮತ್ತಂ–ತಿರುಗಿಯೂ, ಅೞಲ್ವುದೆ–ವ್ಯಸನಪಡುವುದೇ? ಮತ್ತಂ–ಮತ್ತೆಯೂ, ಈವುದೆ–ಧನಕನಕಾದಿಗಳನ್ನು ಕೊಡುವುದೇ? ಈ ಪದ್ಯದ ಅನ್ವಯ, ಅರ್ಥ ಸರಿಯಾಗಿ ಆಗುತ್ತಿಲ್ಲ.

**ವಚನ** : ಎರಡಱಿಯದೊಲ್ದು–ಕಪಟವಿಲ್ಲದೆ ಪ್ರೀತಿಸಿದ, ಏವಮಂ ಮಾಡದೆ–ಅಸಮಾಧಾನವನ್ನುಂಟುಮಾಡದೆ; ಮುಂತಣ್ಗೆ–ಎದುರಿಗೆ; ಕಾಪನಿಟ್ಟು–ಕಾವಲನ್ನಿಟ್ಟು.

**೯೩.** ಇನಿಯ[ಳ್] – ಪ್ರಿಯಳು, ನೊಯ್ಗು[ಮೆ]ಡಂಬಡಂ ನುಡಿದೊಡೆ: **ಎಡಂಬಡಂ**–ಎಡವಟ್ಟಾದ ಮಾತನ್ನು, ನುಡಿದೊಡೆ–ಹೇಳಿದರೆ, ನೊಯ್ಗುಂ–ನೊಂದುಕೊಳ್ಳುತ್ತಾಳೆ, ಎಂದು, ಎಂದಪ್ಪೊಡಂ–ಎಂದಾದರೂ, ನಿನ್ನೊಳ್–ನಿನ್ನಲ್ಲಿ, ಎಳ್ಳನಿತುಂ–ಎಳ್ಳಷ್ಟನ್ನಾದರೂ, ದೋಷಮಂ–ತಪ್ಪನ್ನು, ಉಂಟುಮಾಡದಿರೆಯುಂ–ಉಂಟುಮಾಡದೆ ಇದ್ದರೂ, ಕಣ್ – ನಿನ್ನ ನೋಟ, ಪಿಂತೆ – ಹಿಂದಕ್ಕೆ, ಸಂದಪ್ಪುದು–ಹೋಗುತ್ತದೆ ಎಂದರೆ ನನ್ನನ್ನು ನೀನು ಸರಿಯಾಗಿ ನೋಡುತ್ತಿಲ್ಲ; ಓಪಳೆ–ಪ್ರಿಯಳೆ, ಒಂದನೆ–ಒಂದು ಮಾತನ್ನೇ, ಕೇ[ಳ್]–ಕೇಳು ; ಕೂರ್ಮೆಗೆಟ್ಟೆ ನಗೆ–ನಿನ್ನ ಪ್ರೀತಿಯನ್ನು ಕಳೆದುಕೊಂಡ ನನಗೆ; ನೀನ್–ನೀನು, ಏನಾನುಂ–ಏನಾದರೂ, ಒಂದು ಏವಮಂ–ಒಂದು ಅಹಿತವಾದುದನ್ನು, ಮನದೊಳ್–ಮನಸ್ಸಿನಲ್ಲಿ, ಮಾಡಿದೊಡೆ–ಮಾಡಿದರೆ,

ಅಂದೆ-ಆ ದಿವಸವೇ, ದೀವಳಿಗೆಯಂ ಮಾನಾಮಿಯುಂ-ದೀವಳಿಗೆ ಹಬ್ಬವನ್ನೂ ಮಹಾನವಮಿಯ ಹಬ್ಬವನ್ನೂ, ಮಾಡುವೆಂ-ಮಾಡುತ್ತೇನೆ. ಈ ಪದ್ಯಕ್ಕೆ ಸಮಂಜಸವಾಗಿ ಅರ್ಥ ಆಗುತ್ತಿಲ್ಲ. ಕೆಲವು ಪಾಠ ದೋಷಗಳಿರಬಹುದು ; 'ಒಡಂಬಡು'ಗೆ 'ಎಡಂಬಡು' ಇರಬಹುದು. 'ಮನಕ್ಕೆಡಂಬಡಂಮಾಡುಗುಮಜ್ಜಿಯುಂ ಮಾಡುಗುಮೇ'-ಎಂದು ರನ್ನನ ಪ್ರಯೋಗ.

**ವಚನ :** ಮುಡಿಯು-ತುರುಬಿನ, ಗಾಂಪಿಂಗೆ-ದಡ್ಡತನಕ್ಕೆ.

**೯೪.** ನಯದೊಳ್-ನಯವಾಗಿಯೇ, ನೋಡಿ, ನೋಟದೊಳ್, ಮೇಳಿಸಿ-ಪ್ರೀತಿಯುಂಟಾಗುವಂತೆಮಾಡಿ, ಮೇಳದೊಳ್-ಒಡನೆ ಇರುವುದರಲ್ಲಿ, ಅಪ್ಪುಕೆಯ್ದು-ಒಪ್ಪಿ, ಗೊಟ್ಟಿಯೊಳ್-ಗೋಷ್ಠಿಗಳಲ್ಲಿ, ಒಳಪ್ರೊಯ್ದು-ವಶಪಡಿಸಿಕೊಂಡು, ಪತ್ತಿಸುವ-ಅಂಟುವಂತೆ ಮಾಡುವ ಎಂದರೆ ಮನವನ್ನು ಜೆಸೆಯುವ, ಸೂಳೆಯರ, ಅಂದಮಂ-ರೀತಿಯನ್ನು, ಎಯ್ದೆ ಪೋಲ್ವ-ಚೆನ್ನಾಗಿ ಹೋಲುವ, ಸೂಳೆಯರ, ತುಱುಂಬು-ಮುಡಿಗಂಟು, ಸೂಳೆಯರ, ಮೆಲ್ನುಡಿ-ಮೃದುವಾದ ಮಾತು, ಸೂಳೆಯರ್, ಇರ್ಪ-ಇರುವ, ಪಾಂಗು-ರೀತಿ, ಸೂಳೆಯರ, ನೆಗಱ್ತೆ-ನಡವಳಿಕೆ, ನಾಡೆ-ವಿಶೇಷವಾಗಿ, ತನಗೆ ಅಱ್ತೆ-ಪ್ರೀತಿಕರವಾದದ್ದು, ದಲ್-ಅಲ್ಲವೆ! ಆಕ್ಕಸೆ-ಈ ಆಕ್ಕನೇ, ಸೂಳೆಯಾಗಳೇ-ಸೂಳೆಯಲ್ಲವೆ? ಹೌದು. ಇವಳು ಆಡುವ ಆಟಗಳನ್ನೂ ತುರುಬನ್ನೂ ನೋಡಿದರೆ ಇವಳು ಸೂಳೆಯಾಗಿರಬಹುದೇನೋ ಎನ್ನುವಂತಿದೆ.

**ವಚನ :** ಪಂಡಿತಿಕ್ಕೆಗೆ-ಪಾಂಡಿತ್ಯಕ್ಕೆ, ಮುಯ್ವಾಂತುಂ-ಹೆಗಲನ್ನು ಚಪ್ಪರಿಸಿಕೊಂಡು ಎಂದರೆ ತನ್ನನ್ನು ತಾನೇ ಮೆಚ್ಚಿಕೊಂಡು, ವೀಸವನಪ್ಪೊಡಂ-ಒಂದು ವೀಸವನ್ನಾದರೂ; ಎಣ್ಬರೇಱಿದ-ಎಂಟು ಜನ ಹತ್ತಿದ, ಕಱತ್ತೆಯಂತೆ-ಕತ್ತೆಯ ಹಾಗೆ; ದೆಸೆದೆಸೆಗೆ ಜೆಸೆವ-ದಿಕ್ಕುದಿಕ್ಕಿನಲ್ಲೂ ಗರ್ವವನ್ನು ಪ್ರದರ್ಶಿಸುವ, ಪಚ್ಚಪಸಿಯೆಗ್ಗರುಮಂ-ಶುದ್ಧ ಹಸಿದಡ್ಡರನ್ನು.

**೯೫.** ಇಱಿಯದ-ಯುದ್ಧಮಾಡದ, ಬೀರಂ-ಶೌರ್ಯ, ಇಲ್ಲದ ಕುಲಂ-ಇಲ್ಲದಿರುವ ಜಾತಿ, ತಮಗಲ್ಲದ ಚಾಗಂ-ತಮ್ಮಲ್ಲಿಲ್ಲದ ದಾನಗುಣ, ಓದದ-ಹೇಳದ, ಓದು-ಪಠನ, ಅಱಿಯದ-ತಿಳಿಯದ, ವಿದ್ದೆ-ವಿದ್ಯೆ, ಸಲ್ಲದ-ಇಲ್ಲದ, ಚದುರ್-ಜಾಣತನ; ನೆಱೆ-ಚೆನ್ನಾಗಿ, ಕಲ್ಲದ-ಕಲಿಯದ, ಕಲ್ಪಿ-ಕಲಿಕೆ, ವಿದ್ಯೆ, ಕೇಳ-ಕೇಳೋ, ಮಾತಱಿಯದ ಮಾತು-ಮಾತನ್ನು ತಿಳಿಯದ ಮಾತುಗಾರಿಕೆ, ತಮ್ಮ, ಬಱಿಮಾತುಗಳೊಳ್-ವ್ಯರ್ಥವಾದ ಮಾತುಗಳಲ್ಲಿ, ಪುದಿದು-ತುಂಬಿದ, ಎಗ್ಗರ್-ದಡ್ಡರು, ಎಯ್ದೆ-ಚೆನ್ನಾಗಿ, ಕಣ್ದೆಱೆವಿನಂ-ಕಣ್ಣು ತೆರೆಯುತ್ತಿರಲು, ಎಂದರೆ ವೃದ್ಧಿಯಾಗುತ್ತಿರಲು, ವಱಿಯದೇಂ-ಬೇರೆ ಮಾರ್ಗವೇನಿದೆ? ಇಲ್ಲಿ; ಎಳೆಯಂ-ಲೋಕವನ್ನು, ಕಿಡಿಸಲ್ಕೆ-ಕೆಡಿಸುವುದಕ್ಕೆ, ಕೆಲರ್-ಕೆಲವರು, ಆರ್-ಯಾರು, ಬಲ್ಲರೋ-ತಿಳಿದಿದ್ದಾರೆಯೋ? ಯಾರೂ ಇಲ್ಲ. ದಡ್ಡರ ಸಂತೆಯಲ್ಲಿ ವಿವೇಕಿಗಳಿಗೆ ಎಡೆಯಿಲ್ಲ ಎಂದು ಭಾವ.

**ವಚನ :** ಗಾಟಿಸ್ಸೊಱ್ತರ್-ತುಂಟದಾಸಿಯರು, ಎಗ್ಗ-ದಡ್ಡ, ಗೊಟ್ಟಿಗೆ

ವಂದು–ಗೋಷ್ಠಿಗೆ ಬಂದು, ಕಣ್ಣಱಿಯದೆ–ಇತರರ ಇಂಗಿತವನ್ನು ತಿಳಿಯದೆ, ಸೋಂಕೆಯುಂ–ಮುಟ್ಟುತ್ತಲು; ಮನಮಱಿಯದೆ–ಇಷ್ಟವನ್ನು ತಿಳಿಯದೆ, ನುಡಿಯೆಯುಂ-ನುಡಿಯುತ್ತಲೂ; ಆಕೆಗಳ್-ಅವರು, ಆ ತುಂಟ ತೊತ್ತಿರು; ಬಾಸೆಯೊಳ್-ತಮ್ಮ ನುಡಿಗಟ್ಟಿನ ಭಾಷೆಯಲ್ಲಿ, ಇಲ್ಲಿ ಗಾಱಿಗೊಱ್ತಿರ್ ಎಂಬುದು ಗಾಳಿಗೊಱ್ತಿರ್ ಎಂದಿರಬೇಕು; ಗಾಳು ಗೊರವಂ ಎಂಬುದನ್ನು ನೋಡಿ (ಪಂ. ಭಾ. ೬–೨೪).

೯೬. ಭಾವಕನೆಂದೊಡಂ-ರಸಿಕನೆಂದರೂ, ಚದುರನೆಂದೊಡಂ-ಜಾಣನೆಂದರೂ, ಪೆಱರ್ ಆರೊ–ಬೇರೆಯಾರಿಪ್ಪಾರೋ, ನೀನೆ–ನೀನೇ; ನಿನ್ನಾವಗುಣಂಗಳಂ–ನಿನ್ನ ಯಾವ ಗುಣಗಳನ್ನು, ಪೊಗೞ್ದೊಡೆ–ಹೊಗಳಿದರೆ, ಎಲ್ಲವಱಿಂ–ಎಲ್ಲಾ ಗುಣಗಳಿಂದ, ನೆಱೆದು–ತುಂಬಿ, ಎಮ್ಮೊಳ್–ನಮ್ಮಲ್ಲಿ, ಇಂತು–ಹೀಗೆ, ಸದ್ಭಾವದೆ–ಒಳ್ಳೆಯ ಮನಸ್ಸಿನಿಂದ, ಗೊಟ್ಟಿರಲ್–ಗೋಷ್ಠಿಯಲ್ಲಿರಲು, ಬಯಸಿ, ಬಂದೆ! ಅದೀಗಳ್-ಅದೀಗ, ಇದು, ಒಳ್ಳಿತಾಯ್ತು–ಒಳ್ಳೆಯದಾಯಿತು: ನಿನ್ನನ್ನು, ಮಾದೇವರ ಮುಂದಣಾತನೆನಲ್–ಮಹಾದೇವನಾದ ಶಿವನ ಮುಂದಿರುವವನು, ಎಂದರೆ ನಂದಿ, ಎತ್ತು ಎಂದು ಹೇಳಲು, ಅಲ್ಲದೆ, ಪೇೞಿಮ್–ಹೇಳು, ಪೆಱತೇನನೆಂಬುದೋ–ಬೇರೆ ಏನೆಂದು ಹೇಳುವುದೋ; ನೀನು ಶುದ್ಧ ಎತ್ತು ಎಂದರೆ ದಡ್ಡ ಎಂದು ಹೇಳಬೇಕು.

**ವಚನ**: ಕೊಱಚಾಡಿ–ಕಡೆಗಣಿಸಿ ಮಾತಾಡಿ; ಉೞಿದ–ಬಿಟ್ಟ, ತೊರೆದ; ಪೊಸಬೇಟದಾಣ್ಮನಂ–ಹೊಸ ಪ್ರೇಮದ ಒಡೆಯನನ್ನು, ಪೋಗಲೀಯದೆ–ಹೋಗುವುದಕ್ಕೆ ಬಿಡದೆ, ತನ್ನಳಿಪನೆ ತೋಱಿ–ತನ್ನ ಒಲವನ್ನೇ ತೋರಿಸಿ.

೯೭. ಮನೆಯನಿವಂ–ಇವನು ಮನೆಯ ಯಜಮಾನ; ಮನೋಭವನಿವಂ–ಇವನು ಮನ್ಮಥ; ಪೊಸಸುಗ್ಗಿಯೊಳಾದ–ಹೊಸದಾದ ವಸಂತಕಾಲದಲ್ಲಿ (ಮದುವೆ) ಯಾದ, ಕಿತ್ತನಿವಂ–ಇವನು ಚಿಕ್ಕವನು, ಚಿಕ್ಕಹರೆಯದವನು; ಇದು, ನೀನುೞಿದಾಗಳ್–ನೀನು ಬಿಟ್ಟಾಗ, ಎನ್ನನೇನುೞಿಯಲೀಗುಮೆ–ಇದು ನಾನು ಅವನನ್ನು ತೊರೆಯುವುದಕ್ಕೆ ಅವಕಾಶಕೊಡುತ್ತದೆಯೆ? ಇಲ್ಲ. ಎಂದು–ಎಂದು ಹೇಳಿಕೊಂಡು, ಪೋಪನಂ–ಹೋಗುವ, ಓಪನಂ–ನಲ್ಲನನ್ನು, ಇರದೆ;–ಸುಮ್ಮನಿರದೆ, ಮಿಡುಕಲೀಯದೆ–ಅಲುಗಾಡುವುದಕ್ಕೆ ಕೂಡ ಬಿಡದೆ, ಕಾಲ್ವಿಡಿದಱ್ತು–ಕಾಲುಹಿಡಿದು ಅತ್ತು, ತೋರಕಣ್ಬನಿಗಳಂ–ಕಣ್ಣೀರ ದೊಡ್ಡ ಹನಿಗಳನ್ನು, ಸಂಕಲೆಯಿಕ್ಕಿದಂತೆ ವೋಲ್–ಸಂಕೋಲೆ ಹಾಕಿದ ಹಾಗೆ, ತರಳಲೋಚನೆ–ಚಂಚಲನೇತ್ರೆಯಾದ ಅವಳು, ಇಕ್ಕಿದಳ್ ಸುರಿಸಿದಳು. ಕಿತ್ತನ್ < ಕಿಱಿದು + ಅನ್ (ಶಮದ. ೧೯೨).

**ವಚನ**: ತನ್ನ ಸೂಳೆಯೊಳಾದ, ಬೇಸಱಿಂ–ಬೇಜಾರನ್ನು; ಕೆಳೆಯಂಗೆ–ಗೆಳೆಯನಿಗೆ.

೯೮. ಮುಳಿಸಱಿದು–ಕೋಪವನ್ನು ತಿಳಿದು, ಎಂದರೆ ಕೋಪಿಸಿಕೊಂಡಿರುವುದನ್ನು ತಿಳಿದು, ಅಂಜಿ–ಹೆದರಿ; ಬಾೞ್ತೆಯಱಿದು–ಪ್ರಯೋಜನವನ್ನು ತಿಳಿದು, ಇತ್ತು–ಹೊನ್ನು ಮುಂತಾದುವನ್ನು ಕೊಟ್ಟು; ಮನಂಗೊಳೆಯುಂ – ಮನವನ್ನು

ವಶಮಾಡಿಕೊಂಡರೂ, ಕನಲ್ವುದರ್ಕೆ–ರೇಗುವುದಕ್ಕೆ ಅಳವಿಯುಂ–ಪ್ರಮಾಣವೂ, ಅಂತುಂ–ಕೊನೆಯೂ, ಇಲ್ಲ. ಕುಂಟಣಿ–ತಲೆಹಿಡುಕಿಯು, ಸನಿಯನ್ನಳ್–ಶನಿಯಂಥವಳೇ, ಮನೆದೊತ್ತು–ಮನೆಯ ದಾಸಿ, ಪೋದ ಮಾರಿಯನ್ನಳ್–ಹೋದ ಮಾರಿದೇವತೆಯಂಥವಳೇ, ನಾಮುನಿ-ನಾದಿನಿಯು, ಸೀರ್ಕರಡಿಯನ್ನಳ್-ಜಗಳದಲ್ಲಿ ಕರಡಿಯಂಥವಳೇ, ಒಲ್ದುವೊಲ್ಲದನ್ನಳ್–ಒಲಿದೂ ಒಲಿಯದಂಥವಳೇ, ಗಡ–ಅಲ್ಲವೆ, ಸೂಳೆ, ಎಂದೊಡೆ-ಎಂದರೆ, ತಲೆವೇಸಜನೆಂತು ನೀಗುವೆಂ–ತಲೆಬೇಜಾರನ್ನು ಹೇಗೆ ಕಳೆದು ಕೊಳ್ಳುವೆನು. ಸೀಱು+ಕರಡಿ=ಸೀರ್ಕರಡಿ; "ಸೀಱು–ದುಷ್ಕಲಹೇ."

**ವಚನ**:–ಗೆಂಟಿದಂ–ದೂರ ಹೋದನು; ಜೇಟಕಾರ್ತಿ–ನಲ್ಲಳು; ಬಂಚಿಸಿ–ವಂಚಿಸಿ; ನೋಪಿನಾಕೆಯ – ಕಾದಲೆಯ, ಪ್ರಿಯಳ; ಜೇಟವಾಣ್ಮನಂ – ಪ್ರೀತಿಯ ನಲ್ಲನನ್ನು. ನೋಪು=(ತ) ನೋಪ್ಪು–ಪ್ರೇಮ, ಪ್ರೀತಿ.

**೯೯.** ದೂದವರ–ಪ್ರೇಮಸಂದೇಶವನ್ನು ಒಯ್ಯುವ ದೂತರ, ಕೈಯೊಳ್–ಕೈಯಲ್ಲಿಯೇ, ಮಾತು–ಹೇಳಿಕಳುಹಿಸಿದ ಮಾತು, ಸಂದೇಶ, ತಪ್ಪುದು–ಹಾಳಾಗುತ್ತದೆ; ಕಾಲ್ವಿಡಿದಟ್ಟಿ–ಕಾಲು ಹಿಡಿದು ಹೇಳಿಕಳುಹಿಸಿ, ನಿಚ್ಚಂ–ನಿತ್ಯವೂ, ಅಚ್ಚಿಗದೊಳ್–ದುಃಖದಲ್ಲಿ, ಅತ್ತು–ಅತ್ತು, ಕಣ್ಣ ನೀರ್–ಕಣ್ಣೀರು, ತಪ್ಪುವು–ಹಾಳಾಗುತ್ತವೆ, ನಿಷ್ಪ್ರಯೋಜಕವಾಗುತ್ತವೆ, ಕರಂ–ವಿಶೇಷವಾಗಿ, ಬಿಸುಸುಯ್ಯೆ–ಬಿಸಿಯುಸಿರು ಬಿಡಲು, ಸುಯ್ದುಸುಯ್–ಬಿಟ್ಟ ಉಸಿರು, ತಪ್ಪುದು–ನಷ್ಟವಾಗುತ್ತದೆ; ಜೇಟದ ಕಾಟದೊಳ್–ಪ್ರಣಯದ ಹಿಂಸೆಯಿಂದ, ಎನ್ನ–ನನ್ನ, ತನು–ಮೈ, ತಪ್ಪುದು–ಕೃಶವಾಗುತ್ತದೆ; ಇಂತು ಕಂಡುಂ–ಹೀಗೆ ನೋಡಿಯೂ, ಇನ್ನಪ್ಪೊಡಂ-ಇನ್ನಾದರೂ, ಓಪನೆ–ಪ್ರಿಯನೇ, ಎನಗೆ–ನನಗೆ, ಆಸೆವಾತಂ–ಪ್ರೀತಿಯಮಾತನ್ನು, ನೀಂ–ನೀನು, ದಯೆಗೆಯ್ಯಲ್-ಕರುಣಿಸಿ ಹೇಳಲು, ಆಗದೇ-ಆಗುವುದಿಲ್ಲವೇ? ತಪ್ಪುದು<ತಪು+ದ =ತಪ್ಪ+ಉದು; ಹಾಗೆಯೇ ತಪ್ಪ+ಉವು.

**ವಚನ**: ಕುಂಟಣಿಯ–ದೂತಿಯ, ತಲೆಹಿಡುಕಿಯ; ಉಪರೋಧಕ್ಕೆ–ಬಲಾತ್ಕಾರಕ್ಕೆ; ಪಿರಿದೀವ–ಹೆಚ್ಚು ಹೊನ್ನನ್ನು ಕೊಡುವ; ಮುದುಪನಂ–ಮುದುಕನನ್ನು; ಉಱಿಯಲಂಜಿ–ಬಿಡಲು ಹೆದರಿ; ಸಬ್ಬವದಾಕೆಗೆ–ಸೋಳದ ಕೆಳದಿಗೆ

**೧೦೦.** ಸೂಳೆಗಾರಿಕೆಮಾಡಲು ಹೋದ ಒಬ್ಬ ಮುದುಕನ ವರ್ಣನೆ: ಕೊರೆವೊಡೆ–ಗೊರಕೆಹೊಡೆದರೆ, ಜೆಟ್ಟುಗಳ್–ಜೆಟ್ಟಗಳು, ಬಿರಿವುವು–ಬಿರಿಯುತ್ತವೆ; ಉಣ್ಮಿದ–ಸುರಿಯುವ, ಲಾಳೆಯ–ಜೊಲ್ಲಿನ, ಲೋಳೆಗಳ್–ಲೋಳಿಗಳು, ಪೊಸಲ್ವರಿವುವು-ಪ್ರವಾಹವಾಗಿ ಹರಿಯುತ್ತವೆ; ಕೆಮ್ಮಿ, ಕುಮ್ಮಿಮೊಡೆ-ಎದೆ ಕುಟ್ಟಿದರೆ, ತೋಳೊಳ್-(ಸೂಳೆಯ) ತೋಳಿನಲ್ಲಿಯೇ, ಜೀವವಿಯೋಗಮಪ್ಪುದು–ಪ್ರಾಣ ಹೋಗುತ್ತದೆ; ಎಂದು, ಇರದೆ–ಬಿಡದೆ, ಎರ್ದೆಗೆ–ಮನಸ್ಸಿಗೆ, ಅತ್ತಳಗಂ–ವ್ಯಥೆಯು, ಅಪ್ಪುದು–ಆಗುತ್ತದೆ; ಆ ನರೆಪಂ-ಆ ನರೆಗೂದಲಿನ ಮುದುಕ, ನೆರೆವಂದು-ನೆರೆಯುವುದಕ್ಕೆ ಬಂದು, ಪೊಂಗಳಂ ಸುರಿವೊಡಂ–ಚಿನ್ನದ ನಾಣ್ಯಗಳನ್ನು ಸುರಿದರೂ, ಆತನ, ಪಲ್ಲಿಲಿವಾಯ

ನಾತಮುಂ–ಅವನ ಜೊಚ್ಚು ಬಾಯ ನಾತವನ್ನು, ಆರೊ–ಯಾರೋ, ಸೈರಿಸುವರ್– ಸಹಿಸಿಕೊಳ್ಳುತ್ತಾರೆ. ಇಲ್ಲಿನ ಚಿತ್ರ ವಾಸ್ತವಿಕತೆಯಿಂದಲೂ ಜುಗುಪ್ಸಾಭಾವದಿಂದಲೂ ರಮಣೀಯವಾಗಿದೆ. ‘ ಅತ್ತಳಗ ’ಕ್ಕೆ ಸಾಮಾನ್ಯವಾಗಿ ಆಧಿಕ್ಯ, ಅತಿಶಯವೆಂಬ ಅರ್ಥ ವಿದ್ದರೂ ಇಲ್ಲಿ ವ್ಯಥೆ, ಕಳವಳ ಎಂದರ್ಥವಾಗುವಂತೆ ತೋರುತ್ತದೆ.

**ವಚನ** : ದೂದುವೋಗಿಬಂದ ದೂದವಿಗೆ-ದೌತ್ಯಕ್ಕಾಗಿ ಹೋಗಿಬಂದ ಕುಂಟಣಿಗೆ; ಏಗೆಯ್ವ ತೆಱನುಮನಱಿಯದೆ-ಏನುಮಾಡುವ ರೀತಿಯನ್ನೂ ತಿಳಿಯದೆ ; ಪಡೆಪು– ಬಯಸಿ, ಪಡೆಮಾತಂ–ಸುದ್ದಿಯನ್ನು ; ಬೆಸಗೊಳ್ವಳಂ–ಕೇಳುವವಳನ್ನು.

೧೦೧. ಬಿರಯಿಸಿ–ವಿರಹವೇದನೆಯನ್ನು ತಾಳಿ, ಜೇಟದೊಳ್–ಪ್ರೇಮದಲ್ಲಿ, ಬಿರಿವ–ಬಿರಿಯುತ್ತಿರುವ, ನಲ್ಲರ್–ಪ್ರೇಮಿಗಳು, ಅಗಲ್ದು–ಅಗಲಿ, ವಿಯೋಗವನ್ನು ಹೊಂದಿ, ಕನಲ್ದೊನಲ್ದು-ಕೆರಳಿ ಕೋಪಿಸಿ, ನಲ್ಲರ-ಒಲಿದವರ, ದೆಸೆಯಿಂದಂ-ಕಡೆಯಿಂದ, ಅಚ್ಚಿವರೆ–ಪ್ರೀತಿಯ ಸುದ್ದಿ ಬರಲು, ಕೋಗಿಲೆಯಕ್ಕೆ–ಕೋಗಿಲೆಯಾಗಲಿ, ಎಲರಕ್ಕೆ– ಗಾಳಿಯಾಗಲಿ, ತುಂಬಿಯಕ್ಕೆ–ದುಂಬಿಯಾಗಲಿ, ಅರಗಿಳಿಯಕ್ಕೆ–ಅರಗಿಳಿಯಾಗಲಿ, ಬಂದೊಡಂ–ಬಂದರೂ, ಒಱಲ್ದು–ಒಲಿದು, ಎರ್ದೆಯಾಱುವರೆಂದೊಡೆ–ಮನಸ್ಸಿನಲ್ಲಿ ಸಮಾಧಾನಪಡುತ್ತಾರೆ ಎಂದರೆ, ಓತ-ಒಲಿದ, ದೂತರೆ-ಸುದ್ದಿಯಾಳುಗಳೆ, ತರೆ–ತರಲು, ಬಂದ, ಸಬ್ಬವದ ಮಾತುಗಳಂ-ವಿನೋದದದ ಮಾತುಗಳನ್ನು, ಗುಡಿಗಟ್ಟಿ-ರೋಮಾಂಚನ ವನ್ನು ಹೊಂದಿ, ಕೇಳರೇ–ಕೇಳುವುದಿಲ್ಲವೆ ? ಕೇಳುತ್ತಾರೆ.

೧೦೨. ಇನಿಯಂ–ಪ್ರಿಯನು, ಮನದೊಳ್–ಮನಸ್ಸಿನಲ್ಲಿ, ಅಲಂಪನಾಳ್ದು– ಸಂತೋಷವನ್ನು ಹೊಂದಿ, ಅಟ್ಟಿದ–ಕಳಿಸಿಕೊಟ್ಟ, ದೂದರ–ದೂತರ, ಸೀಯನಪ್ಪ– ಸಿಹಿಯಾಗಿರುವ, ಮಾತಿನ, ರಸದೊಳ್–ರಸದಲ್ಲಿ, ಕೊನರ್ವುದು–ಕವಲೊಡೆಯುವುದು, ತಳಿರ್ವುದು-ಚಿಗುರುವುದು, ಪೂವದು-ಹೂಬಿಡುವುದು, ಕಾಯ್ಪುದು-ಕಾಯಿ ಬಿಡುವುದು, ಅಂತು–ಹಾಗೆ, ಕಾಯ್ತು–ಕಾಯಿ ಬಿಟ್ಟು, ಅನಿತಱೊಳ್–ಅಷ್ಟರಲ್ಲೂ, ನಿಂದು–ನಿಂತು, ಮನದೊಳ್–ಮನಸ್ಸಿನಲ್ಲಿ, ತೊದಳಿಲ್ಲದ–ಕಾಪಟ್ಯವಿಲ್ಲದ, ನಲ್ಮೆಯೆಂಬ–ಪ್ರೇಮವೆಂಬ, ನಂದನವನಂ–ಉದ್ಯಾನವು, ಓಪರೊಳ್–ಪ್ರಣಯಿಗಳಲ್ಲಿ, ನೆರೆದೊಡೆ–ಸೇರಿದರೆ, ಅಂತು- ಹಾಗೆ, ರಸಂಬಿಡೆ–ರಸವು ಸುರಿಯುತ್ತಿರಲು, ಪಣ್ತುದು–ಹಣ್ಣಾಯಿತು, ಆಗದೇ–ಆಗುವು ದಿಲ್ಲವೇ ? ಆಗುತ್ತದೆ. ಪ್ರೇಮವೆಂಬ ನಂದನವನವು ನಲ್ಲರು ಒಡಗೂಡಿದಾಗ ಹಣ್ಣು ಬಿಟ್ಟಂತಾಗುತ್ತದೆ ಎಂದು ಭಾವ.

೧೦೩ ಅನುವಿಸೆ–ಒತ್ತಾಯ ಮಾಡಿದರೆ, ಜೇಟಿಕಾಜನ-ಪ್ರೇಮಿಯ, ಒಲವು- ಪ್ರೇಮ, ಇರ್ಮಡಿಯಪ್ಪುದು-ಎರಡುಮಡಿ ಆಗುತ್ತದೆ; ಬಯ್ಯೆ-ಬಯ್ದರೆ, ಜೇಟಕಾಜನ- ಪ್ರೇಮಿಯ, ಬಗೆ–ಮನಸ್ಸು, ನಿಲ್ಲದಿಕ್ಕೆಗೆ–ಅಸ್ಥಿರತೆಗೆ, ಒಳಗಪ್ಪುದು–ಒಳಗಾಗುತ್ತದೆ ; ನಿಟ್ಟಿಸೆ–ನೋಡಲು, ಜೇಟ–ಪ್ರೇಮವೂ, ಜೇಟಕಾಜನ–ಪ್ರೇಮಿಯ, ರುಚಿ–ಸವಿಯೂ, ಬಂಬಲುಂತುಱುಗಲುಂ ಕೊಳುತಿರ್ಪುದು–ಗುಂಪುಗುಂಪಾಗುತ್ತದೆ, ಹೆಚ್ಚು ಹೆಚ್ಚು ಸಾಂದ್ರವಾಗುತ್ತದೆ; ನೂಂಕೆ – ತಳ್ಳಲು, ಬೇಡವೆಂದು ಸರಿಸಲು, ಜೇಟಕಾಜನ–

ಪ್ರೇಮಿಯ, ಮನಂ–ಮನಸ್ಸು, ಅಟ್ಟೆ–ಬೆನ್ನಟ್ಟಿ, ಪತ್ತುವುದು–ಏರಿಕೊಳ್ಳುತ್ತದೆ: ಬೇಟವು – ಪ್ರೇಮವು, ಏಂ – ಏನು, ವಿಪರೀತವೃತ್ತಿಯೋ – ಅಸ್ತವ್ಯಸ್ತ ಸ್ವಭಾವವುಳ್ಳುದೋ! ಒಂದನ್ನು ಮಾಡಿದರೆ ಅದಕ್ಕೆ ವಿರುದ್ಧವಾದ ಇನ್ನೊಂದು ಆಗುತ್ತದೆ. ಈ ಪದ್ಯದ ಅನ್ವಯಾರ್ಥಗಳು ವಿಶದವಾಗಿಲ್ಲ.

**ವಚನ:** ಲತೆಗಳಡರ್ಪುದು–ಬಳ್ಳಿಗಳಿಗೆ ಆಶ್ರಯ; ಇರ್ಪಂತೆ–ಇರುವ ಹಾಗೆ, ಪೊಸಯಿಸೆ–ಹೊಸದು ಮಾಡಿದರೆ, ಪೊಸತಪ್ಪುದು–ಹೊಸದಾಗುತ್ತದೆ.

**೧೦೪.** ಪ್ರೇಮಿಗಳ ಆಗುಹೋಗುಗಳು ಅವರವರ ದೂತಿಯರ ಕೈಯಲ್ಲಿವೆ; ನಲ್ಲರಿರ್ವರ–ಇಬ್ಬರು ಪ್ರೇಮಿಗಳ, ಒಡಲೊಳಗಿರ್ಪ ಜೀವಂ–ಒಡಲುಗಳಲ್ಲಿರುವ ಪ್ರಾಣವು, ನುಡಿಗಳೊಳ್–ದೂತರು ತರುವ ಮಾತುಗಳಲ್ಲಿ, ಆಸೆಯುಂಟೆನಲೊಡಂ–ಆಸೆಯಿದೆ ಎಂದ ಕೂಡಲೇ, ತಳೆದು–ತಾಳಿ, ಅಂತಿರೆ–ಹಾಗಿರಲು, ನಿಲ್ಪುದು–ನಿಲ್ಲುತ್ತವೆ; ಆವೆಡೆಯೊಳಂ–ಯಾವ ಎಡೆಯಲ್ಲೂ, ಆಸೆಗಾಣೆನೆನೆ–ಆಸೆಯನ್ನೇ ಕಾಣೆ ಎನ್ನಲು, ತೊಟ್ಟನೆ–ಬೇಗನೆ, ಪೋಪವು–ಹೊರಟುಹೋಗುತ್ತವೆ; ಅದುಕಾರಣದಿಂದಮೇ–ಆಕಾರಣದಿಂದಲೇ, ಪೋಪ, ಹೋಗುವ, ಬರ್ಪ–ಬರುವ, ಒಡಂಬಡಂ–ಒಪ್ಪಂದವನ್ನು, ಒಳಕೊಂಡ–ಹೊಂದಿರುವ, ದೂದವರ–ದೂತಿಯರ, ಕೈಯೊಳೆ–ಕೈಯಲ್ಲೆ, ಕೆಯ್ಯೆಡೆಯಿರ್ಪುದು–ನ್ಯಾಸವಾಗಿರುವುದು, ಗಿರವಿ ಇಟ್ಟಿರುವುದು, ಪ್ರೇಮಿಗಳ ಪ್ರಾಣವು, ಆಗದೇ–ಆಗುವುದಿಲ್ಲವೇ? ಆಗಿದೆ.

**ವಚನ:** ಗರ್ಭೇಶ್ವರಂ–ಆಗರ್ಭ ಶ್ರೀಮಂತ, ಹುಟ್ಟಿನಿಂದಲೇ ಐಶ್ವರ್ಯವುಳ್ಳವನು; ಪೆಱರಾರುಮಂ–ಬೇರೆ ಯಾರನ್ನೂ.

**೧೦೫.** ಅಪ್ಪಿನ–ಆಲಿಂಗನದ, ಕಾಳಸೆಗೆ–ಗಾಢತ್ವಕ್ಕೆ, ಸಂಮರ್ದಕ್ಕೆ, ಬಿಸುಗೆಗೆ, ಅಡ್ಡಂ–ಅಡ್ಡವಾಗುತ್ತದೆ, ಎಂಬ, ಬೇಸಱಿನೊಳೆ–ಬೇಸರದಿಂದ, ಮಿಱುಗುವ[ತಾ]ರಹಾರಮುಮಂ–ತೊಳಗುವ ಮುತ್ತಿನಹಾರವನ್ನು ಕೂಡ, ಕಟ್ಟಲೊಲ್ಲದೆ–ಕೊರಳಿಗೆ ತೊಡಿಸಲು ಒಪ್ಪದೆ, ಅನಿತಱ್ಕಱನಿಱ್ಕುಳಿಗೊಂಡು–ಅಷ್ಟು ಪ್ರೇಮವನ್ನು (ಮುತ್ತುಗಳನ್ನು) ಸೆಳೆದುಕೊಂಡು, ಅಲಂಪಿನತ್ತೆಱಗಿದ–ಸುಖದಕಡೆಗೆ ಬಾಗಿದ, ನಲ್ಲಳ–ಪ್ರಿಯಳ, ಅಳ್ಳೆರ್ದೆಯೊಳ್ – ನಡುಗುವ ಎದೆಯಲ್ಲಿ, ಅಕ್ಕಟ – ಅಯ್ಯೋ, ಬೆಟ್ಟುಗಳುಂ ಬನಂಗಳುಂ ತೊಱೆಗಳುಂ–ಬೆಟ್ಟಗಳೂ, ಕಾಡುಗಳೂ, ನದಿಗಳೂ, ಈಗಳ್–ಈಗ; ಒಡ್ಡಱಿಯುದೆ–ರಾಶಿರಾಶಿಯಾಗಿ, ಒಡ್ಡಿಸೆ–ಚಾಚಿಕೊಂಡಿರಲು, ಸೈರಿಸುವಂತುಟಾದುದೇ–ಸಹಿಸುವ ಹಾಗೆ ಆಯಿತೇ? ಪ್ರಿಯಳು ಮುತ್ತಿನಹಾರಹಾಕಿಕೊಂಡರೆ ಅದು ಆಲಿಂಗನಕ್ಕೆ ಅಡ್ಡವಾಗಿ ಬರುತ್ತದೆಯೆಂದು ಅದನ್ನು ಹಾಕದೆ ಇದ್ದ ನಾನು, ಬೆಟ್ಟ ಕಾಡು ನದಿಗಳು ಈಗ ಅಡ್ಡವಾಗಿ ಬಂದಿರುವುದನ್ನು ಹೇಗೆ ಸೈರಿಸಲಿ ಎಂದು ಭಾವ. ಮನೋಜ್ಞವಾದ ಪದ್ಯ.

**೧೦೬.** ಪ್ರೇಯಸಿಯ ಪ್ರಣಯಕೋಪ ತಿಳಿದು ಸಮಾಧಾನವಾಗುವುದರ ನೆನಪು: ಮುನಿಸಿನೊಳ್–ಕೋಪದಲ್ಲಿ, ಆದಂ–ವಿಶೇಷವಾಗಿ, ಏವಯಿಸಿ–ಅಸಮಾಧಾನವನ್ನು ಹೊಂದಿ, ಸೈರಿಸದೆ–ಸಹಿಸದೆ ಆದ, ಅಱಲೊಳ್–ದುಃಖದಲ್ಲಿ, ಕಂಗನೆ ಕನಲುತ್ತುಂ–ಅತಿಯಾಗಿ ಕೋಪಿಸುತ್ತ, ಉಮ್ಮಳಿಸಿ–ವ್ಯಥೆಪಟ್ಟು, ಸೈರಿಸಲಾಱದೆ–

ತಾಳಲಾರದೆ, ಮೇಲಿನಾಯ್ತು–ಮೇಲೆಬಿಸ್ದು, ಬಯ್ದು, ಅಸುವಿಸಿ–ಬಲಾತ್ಕರಿಸಿ, ಕಾಡಿ, ನೋಡಿ, ತಿಳಿಪ–ಸಮಾಧಾನವನ್ನುಪಟ್ಟು, ಅಚ್ಚುಜಿಂ–ಮುತ್ತನ್ನು, ಇಚ್ಚುಳಿಗೊಂಡ–ಸೆಳೆದುಕೊಂಡ, ಅಲಂಪುಗಳ್–ಸುಖಗಳು; ಎನ್ನೆರ್ದೆಯೊಳ್–ನನ್ನೆದೆಯಲ್ಲಿ, ತರಳಾಯತೇಪಣೇ–ಚಂಚಲವಾದ ವಿಶಾಲವಾದ ನೇತ್ರಗಳನ್ನುಳ್ಳವಳೇ, ಕನಸಿನೊಳಂ–ಕನಸಿನಲ್ಲಿ ಕೂಡ, ಪಳಂಚಿ–ತಾಗಿ, ಅಲೆವುವು–ಪೀಡಿಸುವುವು.

**ವಚನ** : ಸೈರಿಸಲಾಱದೆ–ಸಹಿಸಲಾಗದೆ ; ಮುಳಿಸೊಸಗೆಗಳಂ–ಕೋಪಪ್ರಸಾದಗಳನ್ನು.

**೧೦೭.** ಕಾದಿ–ಜಗಳವಾಡಿ, ಅನಂತರ, ಬಗೆಗೆಲಲೆಂದು–ಅವಳ ಮನಸ್ಸನ್ನು ಗೆಲ್ಲಬೇಕೆಂದು, ಆನ್–ನಾನು, ಪುಸಿನಿದ್ದೆಯೊಳ್–ಹುಸಿನಿದ್ದೆಯಲ್ಲಿ, ಇರೆ–ಇರಲು, ಲಲ್ಲೆಗೆಯ್ದು–ಅವಳು ಬಂದು ಮುದ್ದುಮಾಡಿ, ಲಲ್ಲೆಗೆ ಮಱುದಿರ್ದೊಡೆ–ಆ ಮುದ್ದಾಟಕ್ಕೆ ಮೈಮರೆತವನಂತೆ ಇರಲು, ಅಚ್ಚುಱೊನೊಳ್–ಪ್ರೇಮದಲ್ಲಿ, ಒಂದಿ–ಕೂಡಿ, ಮೊಗಂ ಮೊಗದತ್ತಸಾರ್ಚಿ–ಮುಖದಲ್ಲಿ ಮುಖವನ್ನು ಸೇರಿಸಿ, ಬೆಚ್ಚಗೆ–ಬಿಸಿಯಾಗಿ ನಿಡುಸುಯ್ದು–ನಿಟ್ಟುಸಿರುಬಿಟ್ಟು, ನಲ್ಲಳ–ಪ್ರಿಯಳ, ಮುಖಾಂಬುಜ ಸೌರಭದೊಳ್–ಮುಖಕಮಲದ ಸುಗಂಧದಲ್ಲಿ, ಪೊದಳ್ದು–ವ್ಯಾಪಿಸಿ, ಕತ್ತುರಿಯ ಕಪ್ಪುರದ–ಕಸ್ತೂರಿ ಮಿಶ್ರವಾದ ಪಚ್ಚಗಪ್ಪೂರದ, ಒಂದು ಕದಂಬದಂಬುಲಂ–ಒಂದು ಮುದ್ದೆಯಾದ ತಂಬುಲವು, ಏಂ–ಏನು, ಮಗಮಗಿಸಿತ್ತೊ–ಗಮಗಮ ಎನ್ನುತ್ತಿತ್ತೊ ! ಅತಿ ಸುಂದರವಾದ ಪದ್ಯ ; ಇಲ್ಲಿ ಬರುವ ಇಂಥ ಪದ್ಯಗಳನ್ನು ನೋಡಿದರೆ ' ಅಮರುಕಶತಕ ' ದಂಥ ಗ್ರಂಥಗಳ ನೆನಪು ಬರುತ್ತದೆ: ಪಂಪನ ರಸಿಕತೆ ಲೋಕಾನುಭವಗಳು ಈ ಪದ್ಯಗಳಲ್ಲಿ ಅಭಿವ್ಯಕ್ತವಾಗಿವೆ.

**ವಚನ**: ಹೀಗೆ ನೆನೆಯುತ್ತಿರುವ ವಿರಹಿಗೆ ಅರಿಕೇಸರಿಯ ಸಹಾನುಭೂತಿ: ಪಲುಂಬುತಿರ್ದನಂ – ಹಲುಬಿಕೊಳ್ಳುತ್ತಿದ್ದವನನ್ನು, ಕಂಡು, ಈತನುಂ–ಇವನೂ, ಎಮ್ಮಂದಿಗನಕ್ಕುಂ–ನನ್ನ ರೀತಿಯವನೇ ಆಗಿದ್ದಾನೆ; ಎನ್ನನಂಟನುಂ ಅಕ್ಕುಂ–ನನ್ನ ನಂಟನೂ ಆಗಿದ್ದಾನೆ.

**೧೦೮.** ಒಲವಿನೊಳಾದ–ಪ್ರೇಮದಲ್ಲಿ ಉಂಟಾದ ಕಲಹದ, ಕಾಯ್ಪು–ಕೋಪವು, ಮಿಗೆ – ಹೆಚ್ಚಾಗಲು, ಕಾದಲನಂ ಬಿಸುಟು – ಪ್ರಿಯನನ್ನು ತೊರೆದು, ಅಂತೆಪೋಪ – ಹಾಗೆ ಹೋಗುವ, ಕಾದಲಳ್ – ಪ್ರಿಯಳು, ಅೞುತುಂ – ಅಳುತ್ತ, ತೆಱಂದಿರಿದು–ಬಗೆಬಗೆಯಾಗಿ ಹಿಂತಿರುಗಿ, ನೋಡಿದ ನೋಟದೊಳ್–ನೋಡಿದ ನೋಟದಲ್ಲಿ, ಎಯ್ದೆ ತಳ್ತಪೆರ್ಮೊಲೆ–ಚೆನ್ನಾಗಿ ಸೇರಿಕೊಂಡ ದೊಡ್ಡ ಮೊಲೆಗಳು, ಪೊಱಮುಯ್ಪು–ಹೆಗಲ ಹಿಂಭಾಗಗಳು, ಬೆನ್–ಬೆನ್ನು, ಇನಿತುಂ–ಇಷ್ಟೂ, ಒರ್ಮೆಯೆ–ಒಂದೇ ಕಾಲದಲ್ಲಿ, ನಾಂಬಿನಂ–ಒದ್ದೆಯಾಗುತ್ತಿರಲು, ಉಣ್ಮಿಪೊಣ್ಮಿ–ಚಿಮ್ಮಿ ಸೂಸಿ, ಕಣ್ಮಲರ್ಗಳಿಂ–ಹೂವಿನಂತಿರುವ ಕಣ್ಣುಗಳಿಂದ, ಆರಲಂಬುಗಳಂತೆ–ಹೂಗಣೆಗಳ ಹಾಗೆ, ವಿಲೋಚನಾಂಬುಗಳ್–ಕಣ್ಣೀರುಗಳು, ಎಚ್ಚುಪಾಯ್ದುವು–ಚಿಮ್ಮಿ ಹರಿದುವು.

ವಚನ: ಕಾಳಾಗರು ಧೂಪ ಧೂಮ ಮಲಿನ–ಕಪ್ಪಾದ ಅಗುರಿನ ಹೊಗೆಯಿಂದ ಮಾಸಿದ; ಶ್ಯಾಮಲಾಲಂಕೃತ-ಶ್ಯಾಮವರ್ಣದಿಂದ ಸಿಂಗಾರವಾದ, ವಿಚಿತ್ರ ಭಿತ್ತಿ–ಸೊಗಸಾದ ಗೋಡೆಗಳಿಂದ, ವಿರಾಜಿತ–ಪ್ರಕಾಶಮಾನವಾದ, ರಮ್ಯಹರ್ಮ್ಯಂಗಳೊಳ್–ರಮಣೀಯವಾದ ಉಪ್ಪರಿಗೆಗಳಲ್ಲಿ;

೧೦೯. ಹಲವುಕಾಲ ಅಗಲಿದ ನಲ್ಲರು ಸೇರುವುದು; ಸಮಸಂದ–ಸಮಾನವಾಗಿ ಬಂದ, ಅಳ್ಕಜರ್-ಪ್ರೇಮವು, ಅಲಂಪನೀಯೆ-ಸುಖವನ್ನುಕೊಡಲು; ಘರ್ಮಾಂಬುವಿಂ, ಬಿಸಿಬೆವರಿನಿಂದ, ಶಯನಂ-ಹಾಸಿಗೆಯು, ನಾನೆ-ಒದ್ದೆಯಾಗಲು; ಮುನ್ನಮೆ-ಮೊದಲೇ-ನಾಣ್–ಲಜ್ಜೆಯು, ಒಚ್ಚುಡಿವೋಗೆ–ಪ್ರವಾಹವುಸಿಲ್ಲಲು, ಸೂಸುವ–ಚೆಲ್ಲುವ, ಪದಂ–ಸುರತದ್ರವವು, ಗಂಗಾಂಬುವಂ–ಗಂಗೆಯ ನೀರನ್ನು, ಪೋಲೆ–ಹೋಲಲು; ಕಂಠರವಕ್ಕೆ–ಕೊರಲಿನ ಗರಗರಿಕೆಯ ಶಬ್ದಕ್ಕೆ, ತಾಡನರವಂ – ಹೊಡೆತದ ಶಬ್ದ, ಸುರತಧ್ವನಿ, ವಿಭ್ರಮಂ–ಸೊಗಸನ್ನು, ತಂದೀಯೆ–ತಂದುಕೊಡಲು, ತಚ್ಛಯ್ಯೆಯೊಳ್–ಆ ಹಾಸಿಗೆಯಲ್ಲಿ, ಸುರತಪ್ರಾರಂಭಕೋಲಾಹಳಂ – ರತಿಕ್ರೀಡೆಯ ಅಬ್ಬರವು, ಸಮಹಸ್ತಂ ಬಿಡಿವಂತುಟಾಯ್ತು–ಸಮಾನ ಪ್ರಮಾಣವುಳ್ಳದ್ದಾಯಿತು. (?)

೧೧೦. ರಾತ್ರಿ ಕಳೆದು ಬೆಳಗಾಗುತ್ತದೆ: ಸೊಡರ್ಗುಡಿ–ದೀಪದ ಕುಡಿಗಳು, ಒಯ್ಯನೆ ಆಗೆ–ಮೆಲ್ಲಗೆ ಉರಿಯುವುದಾಗಲು (ಎಣ್ಣೆ ತೀರುತ್ತ ಬಂದಿರುವುದರಿಂದ). ಪೊಸಮಲ್ಲಿಗೆ–ಹೊಸ ಮಲ್ಲಿಗೆಯು, ಮೆಲ್ಲಗೆ–ಮೃದುವಾಗಿ, ಕಂಪುನಾಜ್–ಕಂಪಿನಿಂದ ಗಮಗಮಿಸಲು; ತಣ್ಪಿಡಿದೆಲರೂದೆ–ತಂಪಾದಗಾಳಿ ಬೀಸಲು; ಗಾವರದ–? ಮೆಲ್ಲುಲಿ–ಮೃದುವಾದ ಶಬ್ದ, ತುಂಬಿಯ ಗಾವರಂಗಳಂ–ದುಂಬಿಗಳ ಧ್ವನಿಯನ್ನು, ಗೆಡೆಗೊಳೆ–ಒಂದುಗೂಡಲು, ಚಂದ್ರಿಕಾಪ್ರಭೆ– ಬೆಳುದಿಂಗಳಿನ ಕಾಂತಿ, ವೊದಲ್ಗಿಡೆ – ಕಡಮೆಯಾಗುತ್ತಿರಲು, ನಾಡೆ–ವಿಶೇಷವಾಗಿ, ವಿತರ್ಕದಿಂ–ಬೆಳಗಾಯಿತೋ ಇಲ್ಲವೋ ಎಂಬ ಚರ್ಚೆಯಿಂದ, ಗುಣಾರ್ಣವಂ – ಅರ್ಜುನನು, ಬೆಳಗಪ್ಪಜಾವಮಂ – ಬೆಳಗಾಗುವ ಹೊತ್ತನ್ನು, ನೆಱೆಯೆ–ಪೂರ್ಣವಾಗಿ, ನಿಟ್ಟಿಸಿದಂ–ನೋಡಿದನು.

**ವಚನ**: ಪವಡಿಸುವ ಮಾಡಕ್ಕೆ–ಮಲಗುವ ಮನೆಗೆ; ನನಸೆಂದು ಬಗೆದು–ದಿಟವೆಂದು ಎಣಿಸಿ; ಮಂಗಳಪಾಠಕರವಂಗಳೊಳ್–ಮಂಗಳವನ್ನು ಹಾಡುವ ಹೊಗಳು ಭಟ್ಟರ ಶಬ್ದಗಳಲ್ಲಿ.

೧೧೧. ಸೂರ್ಯನು ಉದಯಿಸಿದನು; ಪುದಿದ ತಮಂ–ಕವಿದ ಕತ್ತಲೆ, ಮದೀಯ ಕಿರಣಾಳಿಯನಾನದವೋಲೆ – ನನ್ನ ಕಿರಣಗಳ ಸಮೂಹವನ್ನು ಎದುರಿಸಲಾರದಂತೆ; ನಿನ್ನಂ–ನಿನ್ನನ್ನು, ಆವ ಅದಟರುಂ–ಯಾವ ಶೂರರೂ, ಆನರ್–ಎದುರಿಸರು; ಎನ್ನುದಯಂ–ನನ್ನ ಉದಯವು, ನಿನಗೆ, ಅಭ್ಯುದಯಂ–ಶ್ರೇಯಸ್ಸು, ಎಂದು, ಕನ್ನೆಯಂ–ಸುಭಪ್ರೆಯನ್ನು, ಪಡೆದು–ಬಯಸಿ, ಒಳಗೊಂಡು ಪೋಗು–ಜೊತೆಯಲ್ಲಿ ಕರೆದುಕೊಂಡು ಹೋಗು, ಇರದಿರ್–ಇಲ್ಲಿರಬೇಡ, ಎಂದು, ಗುಣಾರ್ಣವ ಭೂಭುಜಂಗೆ–ಅರ್ಜುನ ರಾಜನಿಗೆ, ಕಟ್ಟಿದಿರೊಳೆ–ಎದುರಿನಲ್ಲೇ, ಬಟ್ಟೆದೋಱುವ

ವ್ರೋೞ್–ಸಾರಿಯನ್ನು ತೋರಿಸುವಹಾಗೆ, ಕಮಲೈಕಬಾಂಧವಂ–ಸೂರ್ಯನು, ಅಂದು, ಒಗೆದಂ–ಮೂಡಿದನು. ಬಟ್ಟೆ <(ಸಂ)ವರ್ತ್ಮನ್ : “ ಪದಿ–ಈಪ್ಸಾಯಾಂ ”

ಚತುರ್ಥಾಶ್ವಾಸಂ ಸಂಪೂರ್ಣಂ

## ಪಂಚಮಾಶ್ವಾಸಂ

೧. ಶ್ರೀ–ಲಕ್ಷ್ಮಿ, ವೀರಶ್ರೀ–ಜಯಲಕ್ಷ್ಮಿ, ಕೀರ್ತಿಶ್ರೀ–ಕೀರ್ತಿಯೆಂಬ ಲಕ್ಷ್ಮಿ, ವಾಕ್‌ಶ್ರೀ–ವಾಕ್ಕೆಂಬ ಲಕ್ಷ್ಮಿ, ಎಂಬ–ಎನ್ನುವ, ಪೆಂಡಿರ್–ಸ್ತ್ರೀಯರು, ತನ್ನೊಳ್–ತನ್ನಲ್ಲಿ, ಭಾವಿಸಿದ–ಧ್ಯಾನಿಸಲ್ಪಟ್ಟ, ಪೆಂಡಿರ್–ಸ್ತ್ರೀಯರು, ಎನಿಸಿದ–ಎನ್ನಿಸಿಕೊಂಡ, ಸೌಪಾಗ್ಯದ–ಸೌಭಾಗ್ಯವನ್ನುಳ್ಳ, ಹರಿಗಂ–ಅರ್ಜುನ, ಎನ್ನನ್–ನನ್ನನ್ನು, ಏನ್–ಏನು, ಒಲ್ದಪನೋ–ಒಲಿಯುತ್ತಾನೆಯೋ? ಇಂಥ ಅರ್ಜುನನು ತನ್ನನ್ನು ಒಲಿಯುತ್ತಾನೋ ಇಲ್ಲವೋ ಎಂಬ ಸಂದೇಹ ಸುಭದ್ರೆಗೆ.

೨. ಎಂಬ ಬಗೆಯೊಳ್–ಎಂಬ ಮನಸ್ಸಿನಲ್ಲಿ, ಸುಭದ್ರೆ, ಪಲುಂಬಿ–ಹಲುಬಿ, ಹಂಬಲಿಸಿ, ಮನಂ ಬಸದೆ–ಮನಸ್ಸನ್ನು ಇಬ್ಬಗೆಯಾಗಿ ಮಾಡದೆ, ತನುವನ್–ದೇಹವನ್ನು, ಅಜಸಲ್–ಸಂತಾಪವನ್ನು ಶಮನಮಾಡುವುದಕ್ಕಾಗಿ, ಅಲರಿಂ–ಹೂವಿನಿಂದ, ತುಂಬಿಗಳಿಂ–ದುಂಬಿಗಳಿಂದ, ತಣ್ಣೆಲರಿಂ–ತಂಗಾಳಿಯಿಂದ, ತುಂಬಿದ, ತಿಳಿಗೊಳದಿಂ–ತಿಳಿನೀರಿನ ಕೊಳಗಳಿಂದ, ಎಸೆವ–ಪ್ರಕಾಶಿಸುವ, ಬನಮಂ–ಉದ್ಯಾನವನ್ನು, ಪೊಕ್ಕಳ್–ಹೊಕ್ಕಳು.

೩. ತಳತಳಿಸಿ–ತಳತಳ ಎಂದು, ಪೊಳೆವ–ಹೊಳೆಯುವ, ಮಾವಿನ, ತಳಿರ್ಗಳ–ಚಿಗುರುಗಳ, ಅಶೋಕಗಳ–ಅಶೋಕೆಯ ಚಿಗುರುಗಳ, ಮಿಸುಪ–ಹೊಳೆವ, ಲತೆಗಳ–ಬಳ್ಳಿಗಳ, ನೆಲೆ–ಸ್ಥಳಗಳು, ಎಂದರೆ ಬಳ್ಳಿಮಾಡಗಳು, ಬಳ್ವಳ ಬಳೆದ–ಅತಿಶಯವಾಗಿ ಬೆಳೆದ, ಬೇಟದ–ಪ್ರೇಮದ, ಉರುಳಿಯ–ಉಂಡೆಗಳ, ಬಳಗಂ–ಸಮೂಹ, ಇದು, ಎಂದು, ಎಳೆಯಳ್–ಕೋಮಲೆಯಾದ ಸುಭದ್ರೆ, ಎಳಸಿ–ಬಯಸಿ, ತಳವೆಳಗಾದಳ್–ಭ್ರಾಂತಳಾದಳು.

೪. ಕೊಳದ, ತಡಿವಿಡಿದು–ದಡವನ್ನು ಹಿಡಿದು, ಬೆಳೆದ, ಎಳವಳಿರ್ಗಳ–ಎಳೆಯ ಚಿಗುರನ್ನುಳ್ಳ, ಅಶೋಕೆಗಳ–ಅಶೋಕೆಯ ಮರಗಳ, ಲತೆಯ–ಬಳ್ಳಿಯ, ಮನೆಗಳೊಳೆ–ಮನೆಗಳಲ್ಲಿಯೇ, ತೆಜಂಬೊಳೆವ–ತೆರತೆರನಾಗಿ ಹೊಳೆಯುವ, ಅಲರ–ಹೂವಿನ, ಬಸದೆ–ವಶದಿಂದ, ಸುೞಿವಳಿಗಳ–ಸುತ್ತಾಡುವ ದುಂಬಿಗಳ, ಬಳಗದ–ಗುಂಪಿನ, ದನಿಗೆ–ಧ್ವನಿಗೆ, ಕಿನಿಸಿ–ಕೆರಳಿ, ಕಿಂಕಿ[ರಿ]ವೋದಳ್–ಕಿರಿಕಿರಿಯಾದಳು

೫. ಸುರಯಿಯ–ಸುರಗಿಯ ಹೂವಿನ, ಬಿರಿಮುಗುಳ್ಗಳ–ಬಿರಿದ ಮೊಗ್ಗುಗಳ, ಪೊರೆವೊರೆಯೊಳ್–ಹತ್ತಿರ ಹತ್ತಿರ, ಪದರ ಪದರದಲ್ಲಿ, ಪೊಱೆವೊರಕನಲ್ಲದೆ–ಭಾರದ ವ್ಯಾಪ್ತಿಯಿಲ್ಲದೆ, ಅಲ್ಲುಗುವ–ಅಲ್ಲಿ ಸುರಿಯುವ, ರಜಂಬೊರೆದು–ಪುಷ್ಪಪರಾಗದಿಂದ ಲಿಪ್ತವಾಗಿ, ಪರಕಲಿಸಿದ–ಚೆದರಿದ, ಅಳಿಕುಳ ಪರಿಕರಮುಮಂ–ದುಂಬಿಯ ಹಿಂಡೆಂಬ ಪರಿವಾರವನ್ನುಕೂಡ, ಆತನ ಶಿಖಿಯ–ಮದನಾಗ್ನಿಯ, ಕಿಡಿಗಳೆಗೆತ್ತಳ್–ಕಿಡಿಗಳೆಂದೇ ಭಾವಿಸಿದಳು. ಸುರಗಿಯ ಪರಾಗದಲ್ಲಿ ಹೊರಳಾಡಿದ ದುಂಬಿಗಳು ಕೆಂಪು ಬಣ್ಣವಾಗಿ ಸುಭದ್ರೆಯ ಕಣ್ಣಿಗೆ ಕಾಮದ ಕಿಚ್ಚಿನ ಕಿಡಿಗಳಂತೆ ತೋರುತ್ತಿದ್ದುವು.

**ವಚನ:** ನನೆಯ-ಹೂವಿನ, ಕೊನೆಯ-ಎಳೆರೆಂಬೆಗಳ, ತಳಿರ-ಚಿಗುರಿನ, ನಿಜಿಂದಳಿರ-ನಿರಿಯಾಗಿರುವ ಚಿಗುರುಗಳ, ಮುಗುಳ-ಮೊಗ್ಗಿನ, ಬಿರಿಮುಗುಳ-ಬಿರಿದ ಮೊಗ್ಗಿನ, ಮಿಡಿಯ-ಕಾಯಿಯ, ಕಿಱುಮಿಡಿಯ-ಹೀಚುಗಾಯಿನ, ಬಲ್ಮಿಡಿಗಳೊಳ್-ದೊಡ್ಡಕಾಯಿಗಳಲ್ಲಿ, ಎಱಗಿ-ಭಾರದಿಂದ ಬಾಗಿ, ತುಱುಗಿದ-ಕಿಕ್ಕಿರಿದ, ಬನಮಂ-ವನವನ್ನು; ಪೂತಚೂತಲತೆಗಳೊಳ್-ಹೂಬಿಟ್ಟ ಮಾವಿನ ಬಳ್ಳಿಗಳಲ್ಲಿ, ತಳ್ತೆಱಪ್ಪು-ತಗುಲಿಸಿದ, ಪೊಸಮುತ್ತಿನ-ಹೊಸಮುತ್ತಿನ, ಬಾಸಣಿಗೆಯೊಳ್-ಹೊದಿಕೆಯಲ್ಲಿ, ಬಾಸಣಿಸಿದ-ಮುಚ್ಚಿದ, ಬಿರಿಮುಗುಳ್ಗಳೊಳ್-ಬಿರಿಮೊಗ್ಗುಗಳಲ್ಲಿ, ತುಱುಗಿದ-ಸೇರಿಕೊಂಡ, ಅದಿಮುರ್ತ್ತೆಯ ಸುತ್ತಿನೊಳ್-ಅದಿಮುರ್ತ್ತೆ ಎಂಬ ಹೂವಿನ ಬಳಿಸಿನಲ್ಲಿ, ಉಪಾಶ್ರಯಂ ಬಡೆದ-ಸಹಾಯವನ್ನು ಪಡೆದ, ಸಾಂದ್ರ-ಮಂದವಾದ, ಚಂದ್ರಕಾಂತದ ಶಿಲೆಯಂ-ಚಂದ್ರಕಾಂತದ ಹಾಸುಗಲ್ಲನ್ನು, ಒಳಗುಮಾಡಿ-ಒಳಗಿಟ್ಟುಕೊಂಡು,

೬. ಒಂದು ಮಾಧವೀ ಮಂಟಪವಿತ್ತು: ಇದಿರೊಳ್-ಎದುರಿನಲ್ಲಿ, ಕಟ್ಟಿದ, ತೋರಣಂ – ತೋರಣವು, ನಿಱಿದಳಿರ್ – ನೆರಿಗೆ ನೆರಿಗೆಯಾಗಿರುವ ಚಿಗುರು, ಪೂಗೊಂಚಲ್-ಹೂಗೊಂಚಲು, ಅಂದು, ಎತ್ತಂ-ಎಲ್ಲೆಲ್ಲಿಯೂ, ಎತ್ತಿದ-ಕಟ್ಟಿದ, ಪೂಮಾಲೆ-ಹೂವಿನಹಾರಗಳು, ಪರಾಗ....ಭಾಸಂ; ಪರಾಗ-ಹೂದೂಳಿನ, ರಾಗ-ಕೆಂಬಣ್ಣದಿಂದ, ಮುದಿತ-ನಲವೇರಿಸಲ್ಪಟ್ಟ, ಆಶಾ-ದಿಕ್ಕುಗಳ, ಭಾಸಂ-ಪ್ರಕಾಶ; ಉದ್ಯ....ಧ್ವನಿ; ಉದ್ಯತ್-ಮೇಲೆ ಏಳುತ್ತಿರುವ, ಮಧು-ಜೇನಿನಿಂದ, ಉನ್ಮದ-ಉನ್ಮತ್ತವಾದ, ಭೃಂಗಧ್ವನಿ-ದುಂಬಿಗಳ ಶಬ್ದ, ಮಂಗಳಧ್ವನಿಯೆನಲ್-ಶುಭ ಸಂಗೀತವೆನ್ನಲು, ಸಾಲ್ವನ್ನೆಗಂ-ಸಾಲುತ್ತಿರಲು, ಆ ಮಾಧವೀಮಂಟಪಂ-ಆ ಮಾಧವೀ ಹೂವಿನ ಬಳ್ಳಿಯ ಮಂಟಪವು, ಕಾಮಂಗೆ-ಮನ್ಮಥನಿಗೆ, ವಿವಾಹ ಮಂಟಪಂ-ಮದುವೆಯ ಮಂಟಪವು, ಎನಲ್ಕೆ-ಎಂದು ಹೇಳುವುದಕ್ಕೆ, ತಾನೆ, ತಕ್ಕುದು ಯೋಗ್ಯವಾದದ್ದು.

**ವಚನ:** ಕಾಮನ ಡಾಮರಕ್ಕಳ್ಕಿ-ಕಾಮನ ಹಿಂಸೆಗೆ, ಕೋಟಲೆಗೆ ಹೆದರಿ; ವನದುರ್ಗಂ-ಸುತ್ತಲೂ ಕಾಡಿರುವ ಕೋಟೆ; ಕಪ್ಪುರವಳುಕಿನ-ಕರ್ಪೂರದ ಹಳುಕಿನ; ಅಗಲಿತಾಗಿ-ಅಗಲವಾದಪ್ಪಾಗಿ; ಪೂವಾಸಿ-ಹೂವಿನಂತೆ ಹಾಸಿ; ಮೃಣಾಳನಾಳದೊಳ್-ತಾವರೆದಂಟಿನಲ್ಲಿ; ಸರಿಗೆಗಂಕಣಂಗಳಂ-ತಂತಿಬಳೆಗಳನ್ನು; ಯವಕಳಿಕೆಗಳೊಳ್-ಗೋದುವೆಯ ಮೊಳಕೆಗಳಲ್ಲಿ; ಕಟಿಸೂತ್ರಮುಮಂ-ಉಡೆದಾರವನ್ನೂ, ಸಾರಕರ್ಪೂರ ದೊಳ್-ಕರ್ಪೂರದ ತಿರುಳಿನಲ್ಲಿ; ಭಾವಿಸಿದ-ಮೇಳಿಸಿದ, ನೂಪುರಮುಮಂ-ಕಾಲ ಕಡಗವನ್ನೂ; ಕರ್ಣಪೂರ-ಕಿವಿಯ ಅಲಂಕಾರ; ಎಳಗಾವಿನ-ಎಳೆಯ ದಂಟಿನ; ಅಸಿಯ-ಸಣ್ಣದಾದ; ಸರಿಗೆಯುಮಂ-ಅಡ್ಡಿಗೆಯನ್ನೂ; ಲಂಬಣಮುಮಂ-ಹಾರವನ್ನೂ, ಕುಳಿರ್ಕೊೞ್ಪ-ಅತ್ಯಂತ ತಂಪಾಗಿರುವ, ತಳ್ಕಿಱಿದು-ಲೇಪಿಸಿ, ಬಳಿದು; ಎಳವೆಯ್ಯಂದ ವಾೞೆಯ-ಎಳೆಯದಾದ ಮಹೇಂದ್ರ ಬಾಳೆಯ, ಬಿಜ್ಜಣಿಗಗಳಿಂ-ಬೀಸಣಿಗೆಗಳಿಂದ; ಬಿಸುಪಿನೊಳ್-ಶಾಖದಲ್ಲಿ, ಅನಿತುಮಂ-ಅಷ್ಟು ಶೈತ್ಯೋಪಕರಣಗಳನ್ನೂ, ಗೆಲ್ದು-ಗೆದ್ದು, ಮೀರಿಸಿ.

೭. ಸುಭದ್ರೆಯ ವಿರಹತಾಪದ ವರ್ಣನೆ : ಕೆಂದಳಿರ್ವಾಸು-ಕೆಂಪುತಳಿರಿನ ಹಾಸಿಗೆ, ಸೇಕದತೊವಲ್ಗೆ-ನೀರು ಚಿಮುಕಿಸಿದ ಚಿಗುರಿಗೆ, ಎಣೆಯಾಯ್ತು-ಸಮಾನ ವಾಯಿತು, ಬೆವರಿನ ಕಾರಣದಿಂದ; ಮೃಣಾಳನಾಳಪೊಂದೊಂದು-ಒಂದೊಂದು ತಾವರೆಯ ದಂಟು, ಅ[ಡಿ] ಪೊತ್ತಿ-ತಳಹೊತ್ತಿಕೊಂಡು, ಪತ್ತಿದುವು-ಮೈಗೆ ಅಂಟಿ ಕೊಂಡುವು ; ಸೂಸುವ ಶೀತಳವಾರಿ-ಹೊಯ್ಯುವ ತಂಪಾದ ನೀರು, ಮೈಯಸೆಪ್ಪಿಂದು-ಮೈಮೇಲೆ ಹರಿದು, ಇರದೆ, ಎತ್ತ-ಎಲ್ಲೆಲ್ಲಿಯೂ, ಬತ್ತಿದುವು-ಒಣಗಿಹೋದುವು; ತಚ್ಛಶಿಕಾಂತ ಶಿಲಾತಳಂ-ಆ ಚಂದ್ರಕಾಂತ ಶಿಲೆಯ ಹಾಸುಗಲ್ಲು, ಸಿಡಿಲ್ದು-ಸಿಡಿದು, ಅಂದು-ಆಗ, ಒಡೆದತ್ತು-ಒಡೆಯಿತು ; ಮೃಗಾಂಕ ವಕ್ತ್ರೆಯಾ-ಚಂದ್ರಮುಖಿಯಾದ ಸುಭದ್ರೆಯ, ಜೇಟದ ಬೆಂಕೆ-ಪ್ರಣಯ ತಾಪವು, ಏಂ ಬಿಸಿದೊ-ಏನು ಬಿಸಿಯಾದದ್ದೋ!

೮. ಅರಿಗನ ಜೇಟದ-ಅರ್ಜುನನ ಮೇಲಣ ಪ್ರೇಮದ, ಒಂದೆ ಪೊಸಜೇಟದ-ನವೀನಾನುಭವವಾದ ಒಂದೇ ಪ್ರೇಮವೆಂಬ, ಕೇಸುರಿಯಿಂದಂ-ಕೆಂಪು ಉರಿಯಿಂದ, ಎಯ್ದೆ-ಚೆನ್ನಾಗಿ, ದಳ್ಳುರಿ-ದೊಡ್ಡ ಉರಿ, ಸೆಗೆದು, ಚಿಮ್ಮಿ, ಅಂದು-ಆಗ, ಕೆಂದಳಿರ ಪಾಸುಗಳಿಂ-ಕೆಂಪುಚಿಗುರ ಹಾಸಿಗೆಗಳಿಂದಲೂ, ಕುಳಿರ್ವ-ತಂಪಾಗಿರುವ, ಅಲಿನೀರ್ಗಳಿಂ-ಮಂಜಿನ ನೀರುಗಳಿಂದಲೂ, ಕೆಳದಿಯರ್-ಸಖಿಯರು, ಸೂಸುತುಂ-ಚೆಲ್ಲುತ್ತ, ತುರಿಪದಿಂ-ತ್ವರೆಯಿಂದ, ನದಿಪುತ್ತಿರೆ-ನಂದಿಸುತ್ತಿರಲು, ನೋಡೆ-ನೋಡಲು, ದಾಹಂ-ಉರಿಯು, ಒತ್ತರಿಸಿದುದು-ದಟ್ಟವಾಯಿತು ; ಪೊನ್ನ-ಚಿನ್ನದ, ಒಂದು, ಸಲಗೆ-ಸಲಾಕೆಯು, ಇರ್ಪುವೋಲ್- ಇರುವ ಹಾಗೆ, ಸುಭದ್ರೆಯಾ - ಸುಭದ್ರೆಯ, ಮೆಯ್-ಮೈ, ಇರ್ದುದು-ಇತ್ತು. ಕಾಸಿದ ಚಿನ್ನದ ಸಲಾಕೆಯಂತೆ ಸುಭದ್ರೆಯ ಮೈ ಇತ್ತು. ಸಲಗೆ< (ಸಂ) ಶಲಾಕಾ.

೯. ಮದನದವಾನಲಾರ್ಚಿ—ಕಾಮವೆಂಬ ಕಾಳ್ಕಿಚ್ಚಿನ ಜ್ವಾಲೆ, ತನುವಂ-ಮೈಯನ್ನು, ಸುಡೆ-ಸುಡಲು, ತಳ್ತೆಮೆಯೊಳ್-ಮುಚ್ಚಿದ ರೆಪ್ಪೆಗಳಲ್ಲಿ, ಪಳಂಚಿ-ತಾಗಿ, ಬೀಗಿದ-ಉಬ್ಬಿದ, ಬೆಳರ್ವಾಯೊಳ್-ಬಿಳಿಚಿಕೊಂಡ ತುಟಿಗಳಲ್ಲಿ, ಉಚ್ಚಳಿಸಿ-ಮೇಲಕ್ಕೆ ಚಿಮ್ಮಿ, ತುಂಗ ಕುಚಂಗಳ ಪೊಯ್ಲೊಳ್-ಉನ್ನತ ಸ್ತನಗಳ ಹೊಡೆತದಲ್ಲಿ, ಎತ್ತಲುಂ-ಎಲ್ಲ ಕಡೆಗೂ, ಕೆದಱಿ-ಚೆದರಿ, ವಳಿತ್ರಯಂಗಳ-ತ್ರಿವಳಿಗಳ, ತೊಡರ್ಪು ಗಳೊಳ್-ತೊಡಕುಗಳಲ್ಲಿ, ತೊಡರ್ದು-ಸಿಕ್ಕಿಕೊಂಡು, ಒಯ್ಯನೆ-ಮೆಲ್ಲಗೆ, ವಿಲೋಲ ನೇತ್ರಜಲ ಬಿಂದುಗಳ್-ವಿಶೇಷ ಆಸಕ್ತಿಯನ್ನುಳ್ಳ ಕಣ್ಣುಗಳ ನೀರಿನ ಹನಿಗಳು, ಆಕೆಯ-ಅವಳ, ನಿಮ್ನ ನಾಭಿಯಂ-ಆಳವಾದ ಹೊಕ್ಕಳನ್ನು, ಎಯ್ದಿದುವು-ಸೇರಿದುವು. ಸುಭದ್ರೆಯ ಕಣ್ಣೀರು, ಕಣ್ಣಿನಿಂದ ತುಟಿಗೆ, ತುಟಿಯಿಂದ ಎದೆಗೆ, ಎದೆಯಿಂದ ಹೊಟ್ಟೆಗೆ, ಅಲ್ಲಿಂದ ನಾಭಿಗೆ ಹೇಗೆ ಬಂತೆಂಬುದನ್ನು ಇಲ್ಲಿ ನಿರೂಪಿಸಿದೆ ; ಈ ಕಣ್ಣೀರಿನ ಆಟ ಚೆಲ್ವು.

೧೦. ನಗೆಮೊಗಮುಂ-ನಗುಮುಖವನ್ನು, ಪೊದಳ್ದಲರ್ದ-ಅಗಲವಾಗಿ ಅರಳಿದ, ತಾವರೆಯೆಂಬ-ತಾವರೆಯೆನ್ನುವ, ವಿಮೋಹದಿಂ-ಭ್ರಾಂತಿಯಿಂದ, ಮೊಗಂಬುಗಲೊಡಂ-ಮುಖದ ಮೇಲೆ ಬಂದಕೂಡಲೇ, ಆ ತಳೋದರಿಯ-ಆ ಒಡಿನಡುವಿನ ಸುಭದ್ರೆಯ ಸುಯ್ಗಳ-ಬಿಸಿಯುಸಿರುಗಳ, ಬೆಂಕಿಯೊಳ್-ಶಾಖದಲ್ಲಿ, ಇಚ್ಚೆಗೆಟ್ಟು-ಇಚ್ಛೆ ನಷ್ಟವಾಗಿ

ತೊಟ್ಟಗೆ ಕೊಳೆ–ಜೇಗಸೆ ಕಾವುಹತ್ತಲು, ಮುಂದೆಬಿಟ್ಟು–ಎದುರಿನಲ್ಲಿ ಬಿದ್ದು, ಮಗುಬ್ಬು–ತಿರುಗಿ, ಕಣ್ಣನೀರ–ಕಣ್ಣೀರಿನ, ಧಾರೆಯೊಳೆ–ಧಾರೆಯಲ್ಲಿಯೆ, ನಾಂದು–ನನೆದು, ಎಲರ್ಚಿ – ಚೇತನಗೊಂಡು, ಉನ್ಮದಾಳಿಗಳ್–ಸೊಕ್ಕಿದ ದುಂಬಿಗಳು, ಪೊದಳ್ದು–ಚದರಿ, ಒರ್ಮೆಯೆ–ಒಂದೇ ಕಾಲದಲ್ಲಿ, ಪಾಱಿದುವು–ಹಾರಿಹೋದುವು.

**ವಚನ** : ಕಾಯ್ದುಪುಡಿಯೊಳಗೆ-ಕಾದ ದೂಳಿನಲ್ಲಿ, ಬಿಸುಟ್ಟ-ಎಸೆದ, ಎಳವಾ[ಳೆ]ಯಂತೆ–ಎಳೆಯಮೀನಿನ ಹಾಗೆ, ಸುರತಮಕರಧ್ವಜನೊಳ್–ಅರ್ಜುನನಲ್ಲಿ, ಆದ ಜೇಟದೊಳ್–ಉಂಟಾದ ಪ್ರೀತಿಯಲ್ಲಿ, ಮಮ್ಮಲಮಱುಗುತ್ತಿರ್ದಳ್–ಮಲ ಮಲ ವ್ಯಥೆಪಡುತ್ತಿದ್ದಳು. ಇತ್ತಕಡೆ ಅರ್ಜುನನ ಅವಸ್ಥೆ. ಮದನತಾಪಕ್ಕಾಱದೆ–ಮನ್ಮಥ ತಾಪವನ್ನು ತಡೆಯಲಾರದೆ; ಉಮ್ಮಳಿಸಿ-ಮರುಗಿ, ಮಧುಮಥನನ-ಶ್ರೀಕೃಷ್ಣನ, ಕಣ್ಣಂ ಬಂಚಿಸಿ-ಕಣ್ಣಿಗೆ ಮೋಸಮಾಡಿ, ಎಂದರೆ ಕಣ್ತಪ್ಪಿಸಿಕೊಂಡು ; ವಿಜೃಂಭಮಾಣ........ ರಮ್ಯಮಂ : ವಿಜೃಂಭಮಾಣ–ವಿಜೃಂಭಿಸಿರುವ, ನವನಳಿನಪರಿಕರ-ಹೊಸದಾಗಿ ಅರಳಿದ ತಾವರೆಗಳ ಸಾಮಗ್ರಿಗಳಿಂದ, ಆಕೃಷ್ಟ–ಆಕರ್ಷಿತವಾದ, ಮಧುಕರ–ದುಂಬಿಗಳಿಂದ, ರಮಣೀಯ–ರಮ್ಯವಾದ, ಪುಳಿನಪರಿಸರ ಪ್ರದೇಶ–ಮರಳಿನ ಸಮೀಪದ ಸ್ಥಳಗಳಲ್ಲಿ, ನಿವೇಶಿತ–ಇಡಲ್ಪಟ್ಟ, ವಿರಹಿಜನನಿಚಯನಿಚಿತ – ವಿಯೋಗಿ ಜನರ ಸಮೂಹದಲ್ಲಿ ವ್ಯಾಪ್ತವಾದ,ಮಾನಸ–ಮನಸ್ಸುಳ್ಳ, ಕಾಮಿನೀ-ಕಾಂತೆಯರ, ಗಂಡೂಷ–ಮುಕ್ಕುಳಿಸಿದ, ಸೀಧು–ಮದ್ಯದಿಂದ, ಪುಳಕಿತ–ರೋಮಾಂಚಗೊಂಡ, ವಕುಳಮುಕುಳ–ಬಕುಳದ ಮೊಗ್ಗನ್ನುಳ್ಳ, ವಿದಳಿತ ಮನೋಹರಾಶೋಕ–ಬಿರಿದ ಸುಂದರವಾದ ಪುಷ್ಪಗಳನ್ನುಳ್ಳ ಅಶೋಕಯೆಂಬ, ಲತಾರಮಣೀ–ಲತೆಯೆಂಬ ಸ್ತ್ರೀಯು, ರಮಣೀಯ–ಸೊಗಸಾದ, ನೂಪುರರವ ರಮ್ಯಮಂ–ಕಾಲ್ಕಡಗಗಳ ಧ್ವನಿಯಿಂದ ರಮ್ಯವಾದ; ಅವಿರಳ....ತಳಮಂ: ಅವಿರಳ-ದಟ್ಟವಾದ, ಕುಸುಮಧೂಳೀಧೂಸರ-ಪುಷ್ಪಪರಾಗದಿಂದ ಮಾಸಲು ಬಿಳುಪುಳ್ಳ, ಪುಳಿನ–ಮರಳಿನಿಂದ, ಧವಳಿತ–ಬೆಳ್ಳಗಾದ, ಧರಾತಳಮಂ–ನೆಲವನ್ನುಳ್ಳ; ಉತ್ಫುಲ್ಲ ... ವನಮಂ : ಉತ್ಫುಲ್ಲ–ಅರಳಿರುವ, ಪಲ್ಲವ -ಚಿಗುರುಗಳ, ಲೀಲಾಯಮಾನ–ಲೀಲೆಗೊಳಗಾದ, ಮತ್ತ ಕೊಕಿಲೋಲ್ಲಾಸಿತ–ಮದಿಸಿದ ಕೋಗಿಲೆಗಳಿಗೆ ಉಲ್ಲಾಸವನ್ನುಂಟು ಮಾಡಲ್ಪಟ್ಟ, ಶೀಕರ–ತುಂತುರು ಮಳೆಯ, ಉದ್ದಾಮ ದುರ್ದಿನ ವನಮಂ–ದೀರ್ಘವಾದ ಮೋಡ ಮುಚ್ಚಿದ ದಿನದಂತಿರುವ ವನವನ್ನು ; ಎಯ್ದೆವಂದು–ಸಮೀಪಿಸಿ.

೧೧. ಬಿರಿದಲರೊಳ್ – ಬಿರಿದ ಹೂವಿನಲ್ಲಿ, ತೆಜಂಬೊಳೆವ – ತೆರತೆರನಾಗಿ ಹೊಳೆಯುವ, ತುಂಬಿ–ದುಂಬಿಗಳು, ತಳಿರ್ತೆಳ ಮಾವು–ಚಿಗುರಿದ ಎಳೆಯ ಮಾವು, ಮಾವಿನಂಕುರಮನೆ-ಮಾವಿನ ಚಿಗುರನ್ನೆ, ಕರ್ಚಿ-ಕಚ್ಚಿ, ಬಿಚ್ಚ[ಳಿ]ಪ-ವಿಸ್ತಾರವಾಗುವ ಎಂದರೆ ಉಬ್ಬುವ, ಕೋಗಿಲೆ, ಕಂಪಂ–ಸುವಾಸನೆಯನ್ನು. ಅವುಂಕಿ–ಅಮುಕಿ ತೆಗೆದು ಕೊಂಡು, ನಿತ್ತರಿಪ–ದಾಟಿ ಬರುವ, ಎಲರ್–ಗಾಳಿ, ಇವು, ಏವುವೋ–ಏನುಮಾಡು ತ್ತವೊ ; ಮದೀಯ-ನನ್ನ, ಮನೋಗತ-ಮನಸ್ಸಿನಲ್ಲಿ ತುಂಬಿಕೊಂಡಿರುವ, ಕಾಮರಾಗ-ಮನ್ಮಥನ ಪ್ರೀತಿಯೆಂಬ, ಸಾಗರದ–ಕಡಲಿನ, ಒದವಿಂಗೆ–ಸಮೃದ್ಧಿಗೆ, ಉಕ್ಕುವಿಕೆಗೆ,

ನಲ್ಲಳ–ಪ್ರಿಯಳ, ವಿಳೋಕನ ಚಂದ್ರಿಕೆ–ನೋಟವೆಂಬ ಬೆಳುದಿಂಗಳು, ಒಂದೆ–ಒಂದೇ, ಸಾಲದೇ–ಸಾಕಾಗದೇ? ಸಾಕಾಗುತ್ತದೆ.

**ವಚನ :** ಎಱಗಿ–ಬಾಗಿ, ತುಱುಗಿದ–ಕಿಕ್ಕಿರಿದ ; ಅೞ್ಕಱ್ಗೊರ್ಮುನೋಡಿ–ಪ್ರೀತಿಸಿ ನೋಡಿ.

**೧೨.** ಅಲರ್–ಹೂವು, ಅಲರ್ಗಣ್–ಹೂವಿನಂತಿರುವ ಕಣ್ಣು : ಮುಗುಳ್–ಮೊಗ್ಗು, ನಗೆ–ನಗುವು ; ಮಡಲ್–ಬಳ್ಳಿಯು, ತೊಡೆ–ತೊಡೆಗಳು ; ತುಂಬಿ–ದುಂಬಿಗಳು, ಕುರುಳ್–ಮುಂಗುರುಳುಗಳು ; ತಳಂ–ಅಂಗೈ, ತಳಿರ್–ಚಿಗುರು ; ಗೊಲೆ–ಗೊಂಚಲು, ಮೊಲೆ–ಸ್ತನಗಳು ; ಕೆಂಪು–ಸುಭದ್ರೆಯ ಕೆಂಬಣ್ಣವೇ, ಕೆಂಪು–ಬಳ್ಳಿಯ ಕೆಂಬಣ್ಣ ; ಸೆಳ್ಳುಗುರ್–ತೆಳುವಾದ ಉಗುರುಗಳು, ಕೊನೆ–ಎಳೆಯ ಕವಲು ; ಕುಡಿ–ಬಳ್ಳಿಯ ಕುಡಿಗಳು, ತೋಳ್–ತೋಳುಗಳು ; ನಯಂ–ಬಳ್ಳಿಯ ನಯವೇ, ನಯಂ–ಸುಭದ್ರೆಯ ನಯ ; ನೆಲೆ–ನೆಲೆಯೇ, ಸೆಲೆ–ಸೆಲೆಯು, ಭಂಗಿ–ರೀತಿಯೇ, ಭಂಗಿ–ರೀತಿ ; ಪದವಣ್–ಹದವಾದ ಹಣ್ಣು, ಬೆಳವರ್ಣಿಯರ್–ಹೊಳೆಯುವ ತುಟಿಗಳು ; ಪೆಱತಲ್ಲ–ಬೇರೆಯಲ್ಲ, ಇದೆಂತೋ–ಇದು ಹೇಗೋ, ಕೋಮಳಲತೆ–ಲಲಿತವಾದ ಬಳ್ಳಿ, ಪೇೞಿಂ–ಹೇಳಿರಿ ; ಎನ್ನಿನಿಯಳಂ – ನನ್ನ ನಲ್ಲಳನ್ನು, ಮಱೆಗೊಂಡುದೋ – ಮರೆಯಾಗಿ ಇಟ್ಟುಕೊಂಡಿದೆಯೋ, ಅಥವಾ, ಸೂಱೆಗೊಂಡುದೋ–ಕೊಳ್ಳೆಹೊಡೆದಿದೆಯೋ? ಬಳ್ಳಿಯಲ್ಲಿರುವ ಚೆಲುವಿನ ವಸ್ತುಗಳೆಲ್ಲ ಸುಭದ್ರೆಯಿಂದ ಎರವುಪಡೆದವು ; ಬಳ್ಳಿಗೆ ಇಷ್ಟೆಲ್ಲ ಎಲ್ಲಿ ಬರಬೇಕು ?

**ವಚನ :** ಕಿಱಿದಾನುಂ ಬೇಗಂ–ಸ್ವಲ್ಪಹೊತ್ತು ; ಅಱಿಮರುಳಾದಂತೆ–ಭ್ರಾಂತನಾದಂತೆ ; ಪಡಿಗಾಳೆಗಂಗಾದಿ–ಎದುರಾಗಿ ಹೋರಾಡಿ ; ಬರೆವರೆ–ಬರಲು ಬರಲು ; ಬಲ್ಮಿಡಿಯನೆ–ಬಲಿತ ಹೀಚುಗಳನ್ನೇ, ಮಿಟ್ಟಿಯುಮಂ–ಮಣ್ಣಿನ ಗೋಲಿಗಳನ್ನೂ ; ಏಸಾಡಿ–ಹೊಡೆದು ; (ಸಂ) ಪ್ರತಿ > ಪಡಿ ; ಮಿಟ್ಟಿ < (ಸಂ) ಮೃತ್ ;

**೧೩.** ಅಸಿಯಳಂ–ಕೃಶಾಂಗಿಯಾದ ಸುಭದ್ರೆಯನ್ನು, ಒಲ್ಗುಂ–ಪ್ರೀತಿಸುತ್ತಾನೆ, ಒಲ್ಲನ್–ಪ್ರೀತಿಸನು, ಅಣಂ–ಸ್ವಲ್ಪವೂ, ಎನ್ನದೆ–ಹೇಳದೆ, ರೂಪನೆ ನೋಡಿ–ರೂಪವನ್ನೇ ನೋಡಿ, ಕೂಡಲಾಟಿಸಿ–ಸೇರಿಯಲು ಬಯಸಿ, ಪರಿದೆಯ್ದಿ–ಓಡಿಬಂದು, ಪತ್ತಿದಲರ್ಗಣ್ಗಳಂ – ಅಂಟಿದ ಹೂವಿನಂತಿರುವ ಕಣ್ಣುಗಳನ್ನು, ಏನುಮನೆನ್ನದೆ–ಏನೆಂದೂ ಹೇಳದೆ, ಅಂತು–ಹಾಗೆ, ಉಪೇಕ್ಷಿಸಿ–ಉಪೇಕ್ಷೆಮಾಡಿ, ಮನಮೆಲ್ಲಮಂ–ಮನಸ್ಸನ್ನೆಲ್ಲ, ಕವರ್ದಪಂ–ಸೂರೆಮಾಡುತ್ತಾನೆ, ತನುವಂ–ಮೈಯನ್ನು, ಬಡಮಾಡಿ–ಬಡಕಲನ್ನಾಗಿಮಾಡಿ, ಕಾಡಿ–ಪೀಡಿಸಿ, ದಂಡಿಸಿದಪಂ–ಶಿಕ್ಷಿಸುತ್ತಾನೆ ; ಅಂಗಜನ್ಮನ–ಕಾಮನ, ಕವರ್ತೆಯ – ಸೂರೆಯ, ದಂಡದ–ಶಿಕ್ಷೆಯ, ಪಾಂಗು – ರೀತಿ, ಇದು, ಎಂತುಟೋ–ಹೇಗೆಯೋ ?

**ವಚನ :** ಉಪಕಂಠಂಗಳೊಳ್–ಸಮೀಪ ಪ್ರದೇಶಗಳಲ್ಲಿ ; ಅನಂಗಶರವಶನಾಗಿ–ಕಾಮಬಾಣಗಳಿಗೆ ಅಧೀನನಾಗಿ ; ತೊೞಲ್ದು–ಸುತ್ತಾಡಿ.

೧೪. ಉರಿವೆರ್ದೆಯಾಱಿ - ಉರಿಯುತ್ತಿರುವ ಎದೆ ಸಮಾಧಾನಗೊಳ್ಳಲು: ಚಿಂತಿಪ ಮನಂ-ಚಿಂತಿಸುವ ಮನಸ್ಸು, ಗುಡಿಗಟ್ಟಿ-ಧ್ವಜಾರೋಹಣ ಮಾಡಲು ಎಂದರೆ ಒಸಗೆ ಪಡಲು, ಮಸಲ್ದು ನೋಡುವ-ತಿರುಗಿ ತಿರುಗಿ ನೋಡುವ, ಅಚ್ಚರಿಯೊಳ್-ಆಶ್ಚರ್ಯದಲ್ಲಿಯೆ, ಬೆಚ್ಚ-ಬೆಸೆದ, ಕಣ್ಮಲರ್ಗೆ-ಹೂಗಣ್ಣಿಗೆ, ಸಂತಸದಾಗರಮಾಗೆ-ಸಂತೋಷಕ್ಕೆ ಆಕರವಾಗಲು, ಬೇಟದೊಳ್ - ಬಯಕೆಯಲ್ಲಿ, ಬಿರಿಯುವ - ಬಿರಿದು ಹೋಗುವ, ಒಡಲ್ - ಮೈ, ಒಯ್ಯನೆ ಸಂಕುರಿಸೆ - ಮೆಲ್ಲಗೆ ರೋಮಾಂಚಗೊಳ್ಳಲು, ಸೈಪಿನೊಳ್-ನನ್ನ ಪುಣ್ಯದಿಂದ, ಇಂತು-ಹೀಗೆ, ಎನೆಗೆ-ನನಗೆ, ಈ ವನಾಂತರದೊಳ್-ಈ ಉದ್ಯಾನದಲ್ಲೇ, ಮದೀಯ ಮನೋರಥ-ನನ್ನ ಇಷ್ಟಾರ್ಥದ, ಜನ್ಮಭೂಮಿಯಂ-ಹುಟ್ಟು ನೆಲವಾದ ಸುಭದ್ರೆಯನ್ನು, ಕಾಣಲಕ್ಕುಮೋ-ಕಾಣುವುದಾಗುತ್ತದೋ ?

**ವಚನ :** ಎಂದು ಬಗೆಯುತ್ತುಂ - ಎಂಬುದಾಗಿ ಚಿಂತಿಸುತ್ತ ; ಮೊಗಸಿ-ಮುತ್ತಿ ; ಪಡೆಮಾತುಗಳಂ - ಸುದ್ದಿಗಳನ್ನು, ಎಮ್ಮಂದಿಗರ್ - ನಮ್ಮಂಥವರು ; ಭೋಂಕನೆ-ಬೇಗನೆ, ಇದ್ದಕ್ಕಿದ್ದಹಾಗೆ.

೧೫. ಸುಭದ್ರೆ-ಅರ್ಜುನರ ಸಮಾಗಮ ; ಪಡಿದೆಱೆವಂದದಿಂದಂ-ಬಾಗಿಲು ತೆರೆದ ರೀತಿಯಲ್ಲಿ, ಎರ್ದೆಯುಂ-ಎದೆಯೂ, ತೆಱೆದತ್ತು-ತೆರೆಯಿತು ; ಪೊದಳ್ದ-ವ್ಯಾಪಿಸಿದ, ಸಂಕೆಯಿಂ - ಭಯದಿಂದ, ನಡುಕಮುಂ-ನಡುಕವೂ, ಆಗಳ್ - ಆಗ, ಉಬ್ಬದಿಗಮಾದುದು-ಅತಿಶಯವಾಯಿತು ; ಸಾಧ್ವಸದಿಂ-ಸಡಗರದಿಂದ, ಬೆಮರ್-ಬೆವರು, ಬೆಮರ್ವೆಡೆಗಳಿಂ-ಬೆವರುವೆಡೆಗಳಿಂದ, ಉಣ್ಮಿಪೊಣ್ಮಿದುದು-ಉಕ್ಕಿ ಹೊರ ಸೂಸಿತು ; ಕಣ್-ಕಣ್ಣುಗಳು, ನಡೆನೋಡದೆ-ಸ್ಥಿರ ದೃಷ್ಟಿಯಿಂದ ನೋಡದೆ, ತಪ್ಪು ನೋಡಿ-ತಪ್ಪಾಗಿನೋಡಿ, ಜಾರುನೋಟದಿಂದ ನೋಡಿ, ನಾಣೆಡೆಯೊಳಂ-ನಾಚಿಕೆಯ ಎಡೆಗಳಲ್ಲಿ, ಪಡೆಮೆಚ್ಚೆಗಂಡನಂ-ಅರ್ಜುನನನ್ನು, ನೋಡಲೊಡಂ-ನೋಡಿದಕೂಡಲೇ, ಆದುದು-ಆದುವು ; 'ಉಬ್ಬದಿಗಂ' ಎಂದು ಸರಿಯಾದ ಶಬ್ದರೂಪ, 'ಉಬ್ಬಡಿಗ'ವಲ್ಲ ; "ಅಲಂಪಿನುಬ್ಬದಿಗಮನಾ ಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್" (ಕಾವ್ಯಾಲೋಕನಂ) ಎಂಬಲ್ಲಿ 'ಉಬ್ಬದಿಗ'ದ ದಿಕಾರ, ದಕಾರ ಪ್ರಾಸದಲ್ಲಿ ಬಂದಿದೆ.

**ವಚನ :** ಅನಂಗಾಮೃತಪಯೋಧಿಯೊಳ್-ಮನ್ಮಥನ ಅಮೃತ ಸಾಗರದಲ್ಲಿ ; ಆಪಾದಮಸ್ತಕಂಬರಂ-ಕಾಲಿನಿಂದ ಹಿಡಿದು ತಲೆಯವರೆಗೆ ; ಏಱಿಗೆವಾಡಿವದ-ಶುಕ್ಲ ಪಕ್ಷದ ಪಾಡ್ಯದ ; ಅಸಿಯಳಂ-ಕೃಶಾಂಗಿಯನ್ನು.

೧೬. ಸರಸಮೃಣಾಳನಾಳವಳಯಂಗಳೊಳ್ - ರಸಪೂರ್ಣವಾದ ತಾವರೆಯ ದಂಟಿನ ಕಂಕಣಗಳಲ್ಲಿ, ಉಜ್ವಳವೃತ್ತ ಮೌಕ್ತಿಕಾಭರಣಗಣಂಗಳೊಳ್-ಹೊಳೆವ ದುಂಡು ಮುತ್ತಿನೊಡವೆಗಳ ಸಮೂಹದಲ್ಲಿ, ಶಶಿಕರಂಗಳೊಳ್-ಚಂದ್ರಕಿರಣಗಳಲ್ಲಿ, ಆಱದೆ-ಶಮನವಾಗದೆ, ಬೇಟದೊಳ್ - ಪ್ರೇಮದಲ್ಲಿ, ಕನಲ್ದು-ಕೆರಳಿ, ಉರಿವೆರ್ದೆ-ಉರಿಯುವ ನನ್ನೆದೆ, ನೋಡ-ನೋಡೋ, ನೋಡಲೊಡನೆ-ಸುಭದ್ರೆಯನ್ನು ಕಂಡೊಡನೆ, ಆಱಿದುದು-ಶಮನಿಸಿತು ; ಎನ್ನ ನಲ್ಲಳಂ-ನನ್ನ ಪ್ರಿಯಳನ್ನು, ಅಜಂ-ಬ್ರಹ್ಮ,

ಅಮರ್ದಿಂದೆ – ಅಮೃತದಿಂದ, ತೊಯ್ದು-ನನೆಸಿ, ಕಪ್ಪುರವಳುಕಿಂದೆ – ಕರ್ಪೂರದ ಹಳುಕುಗಳಿಂದ, ಕಡೆದು ಕಂಡರಿಸಂ ವಲಂ–ಕಡೆದು ಕೊರೆದಿರುತ್ತಾನೆಯೋ, ನಿಶ್ಚಯ ವಾಗಿಯೂ, ಏನು !

೧೭. ವೃತ್ತಕುಚಂಗಳಿಂದುದಿರ್ದ–ಬಟ್ಟವೊಲೆಗಳಿಂದುದಿರಿದ, ಚಂದನದೊಳ್– ಶ್ರೀಗಂಧದಲ್ಲಿ, ತಳಿರ್ವಾಸು-ಚಿಗುರಿನ ಹಾಸಿಗೆ, ಬೆಳ್ಪನಾಳ್ದತ್ತು-ಬಿಳುಪನ್ನು ಹೊಂದಿತು; ದುಕೂಲದ–ರೇಷ್ಮೆಯ ಬಟ್ಟೆಯು, ಒಂದು ಮಡಿ–ಒಂದು ತೊಳೆದ ವಸ್ತ್ರವು, ಮಾಸಿದ– ಮಾಸಿಹೋದ, ಮಾಟಿಕ್ಕೆವೊಲಾಯ್ತು–ರೀತಿಯಂತಾಯಿತು ; ಮೆಯ್ಯನಿಕ್ಕುತ್ತಿರೆ– ಮೈಯನ್ನು ಹಾಸಿಗೆಯ ಮೇಲೆ ಚಾಚುತ್ತಿರಲು, ಕೆಂದಳಿರ್ಗಳ್–ಕೆಂಪು ಚಿಗುರುಗಳು, ಅಚ್ಚುಗಳ್–ಮುದ್ರೆಗಳು, ಅಚ್ಚಿಱಿದಂತೆ–ಅಚ್ಚು ಹಾಕಿದಹಾಗೆ, ಪತ್ತಿ–ಅಂಟಿಕೊಂಡು, ಕಾಮನಚ್ಚೊತ್ತಿದ–ಮನ್ಮಥನು ಮುದ್ರಿಸಿದ, ಜೇಟದಚ್ಚುಗಳ–ಪ್ರೇಮದ ಮುದ್ರೆಗಳ, ಮಾಟಿಕ್ಕೆಯೊಳ್-ರೀತಿಯಲ್ಲಿ, ಸುಭದ್ರೆಯಾ-ಸುಭದ್ರೆಯ, ಮೆಯ್-ಮೈ, ಇರ್ದುದು- ಇತ್ತು.

**ವಚನ** : ಎರಡಱಿಯದ–ಕಪಟವಿಲ್ಲದ, ನೈಜವಾದ ; ನಲ್ಲಮನಂದೋಱು ವುದು-ಒಳ್ಳೆಯ ಮನವನ್ನು ತೋರಿಸುವುದು, ಸಲ್ಗೆದೋಱುವುದುಂ–ಸಲಿಗೆಯನ್ನು ತೋಱುಸುವುದೂ ; ಜಡಿದು–ಗದರಿಸಿಕೊಂಡು.

೧೮. ಮದನನ – ಮನ್ಮಥನ, ಕಾಯ್ಪು – ಕೋಪ, ಮಾಣ್ಗೆ – ಹೋಗಲಿ ; ಸರಸೀರುಹ ಜನ್ಮನ–ಬ್ರಹ್ಮನ, ಮೆಚ್ಚು–ಇಷ್ಟ, ತೀರ್ಗೆ–ಸಫಲವಾಗಲಿ ; ಕೋಳ್ಗುದಿ– ಪ್ರೇಮಾಕ್ರಮಣದ ಕುದಿತ, ಮನದಿಂದಂ–ಮನಸ್ಸಿನಿಂದ, ಇಂದು–ಈದಿನ, ಪ್ರೋಜಮಾ ಱುಗೆ–ಹಿಂದೆಗೆಯಲಿ; ಚಂದ್ರಕರಂಗಳ್–ಚಂದ್ರನ ಕಿರಣಗಳು, ಇಂದು, ಎರ್ದೆಗೆ– ಎದೆಗೆ, ತಣ್ಣಿದುವಕ್ಕೆ–ತಂಪಾದುವು ಆಗಲಿ; ಕೆಂದಳಿರ ಸೆಜ್ಜೆಯ–ಕೆಂಪು ಚಿಗುರು ಹಾಸಿಕೆಯ, ಜಿಂಜಿಣಿ–ತಾಪವು (?), ಪೋಕೆ–ಹೋಗಲಿ ; ನಿನ್ನ ಕೂಟದೊಳ್–ನಿನ್ನ ಸೇರುವಿಕೆಯಲ್ಲಿ, ಮತ್ಸಖಿಗೆ – ನನ್ನಗೆಳತಿಗೆ, ಇನಿದಕ್ಕೆ – ಸವಿಯುಂಟಾಗಲಿ ; ಗುಣಾರ್ಣವಾ–ಅರ್ಜುನನೇ, ಜೇಱಿ ಪಳಾಳದೊಳೇಂ-ಇತರ ಜಳ್ಳು ಮಾತುಗಳಿಂದ ಏನು ಪ್ರಯೋಜನ ? ಜಿಂಜಿಣಿ ಎಂಬುದರ ಅರ್ಥ ಅಜ್ಞಾತವಾಗಿದೆ ; ಇದಕ್ಕೆ ಉಷ್ಣತೆ (?) ಎಂಬರ್ಥವನ್ನು ಮಾಡಿದೆ (ಪಂಭಾ. ಕೋ.). ಇದಕ್ಕೆ ಆಧಾರ ದೊರೆತಿಲ್ಲ : ‘ ತಿಣಿ– ಸಂಭನ್ನೇ ’ ಎಂಬ ಧಾತು ಪುನರುಕ್ತವಾಗಿ ತಿಣಿತಿಣಿ=ತಿಂತಿಣಿ ಆಗಿರುವಂತೆ, ಜಿಣಿ ಎಂಬ ಧಾತು ವೊಂದಿದ್ದು ಜಿಣಿಜಿಣಿ=ಜಿಂಜಿಣಿ ಎಂಬ ನಾಮಪದವಾಗಿರಬಹುದು. ಪಳಾಳ<(ಸಂ) ಪಲಾಲ–ಹುಲ್ಲುಕಡ್ಡಿ.

೧೯. ಸುಭದ್ರೆ ಬದುಕಿರುವುದೇ ನಮ್ಮ ಪುಣ್ಯ ಎಂದು ಅರ್ಜುನನಿಗೆ ಸಖಿ ಚೂತಲತಿಕೆ ಹೇಳುತ್ತಾಳೆ : ಬೆಳಗುವ-ಪ್ರಕಾಶಿಸುವ, ಸಾಂದ್ರಚಂದ್ರ ಕಿರಣಾಳಿಗಳ ಓಳಿಗಳಿಂದಂ-ದಟ್ಟವಾದ ಚಂದ್ರಕಿರಣಗಳ ಸಾಲುಸಾಲುಗಳಿಂದ, ಎತ್ತಂ-ಎಲ್ಲೆಲ್ಲಿಯೂ, ಉಜ್ಜಳಿಸುವ–ತೊಳಗುವ, ಇರುಳ್ಗಳಂ–ರಾತ್ರಿಗಳನ್ನು , ಕಳಿದು–ಕಳೆದೂ, ತಳಿರ್ತಳ

ಮಾವುಮಂ–ಚಿಗುರಿದ ಎಳೆಯಮಾವನ್ನು, ಮನಂಗೊಳೆ–ಮನಸ್ಸು ಮೆಚ್ಚುವಂತೆ, ನಜೆನೋಡಿಯುಂ–ನಟ್ಟನೋಟದಿಂದ ನೋಡಿಯೂ, ಇಂದೊಳದ–ಹಿಂದೋಲರಾಗದ, ಇಂಚರಕೆ–ಇನಿಪಾದ ಧ್ವನಿಗೆ, ಕಿವಿಯನಾಂತುಂ–ಕಿವಿಗೊಟ್ಟೂ, ಅಂತುಮಿಂತುಂ–ಹಾಗೂ ಹೀಗೂ, ಕೋಮಳೆಯ–ಸುಭದ್ರೆಯ, ಅಸು–ಪ್ರಾಣ, ಈ ಯೊಡಲೊಳಿರ್ದುದು–ಈ ದೇಹದಲ್ಲಿದೆ, ಇದು, ಭೂಪತೀ – ರಾಜ ಅರ್ಜುನನೇ, ಎಮ್ಮಯ – ನಮ್ಮ; ಸೈಪು–ಪುಣ್ಯ.

**ವಚನ:** ಪಡೆಮಾತಂ – ಸುದ್ದಿಯನ್ನು ; ಕರ್ಣಪರಂಪರೆಯಿಂ – ಕಿವಿಯಿಂದ ಕಿವಿಗೆ; ಚಕ್ರಿ–ಕೃಷ್ಣನು ; ಚಕ್ರಿಕಾವರ್ತಿಯಪ್ಪುದಱಿಂ – ಚಕ್ರದಂತೆ ಸುತ್ತುವ ಶೀಲವುಳ್ಳವನಾದುದರಿಂದ ಅಥವಾ ಕೃತ್ರಿಮೋಪಾಯವುಳ್ಳವನಾದುದರಿಂದ; ನಾಣುಮಂ ನಡುಕಮಂ–ಲಜ್ಜೆಯನ್ನೂ ಭಯವನ್ನೂ ; ಪತ್ತುವಿಟ್ಟು–ಬಿಟ್ಟು ಹೋಗುವಂತೆಮಾಡಿ.

**೨೦.** ಶ್ರೀಕೃಷ್ಣನ ಮಾತು: ಬಲದೇವಂ–ಬಲದೇವನು, ಎನ್ನನುಜೆಯಂ–ನನ್ನ ತಂಗಿ ಸುಭದ್ರೆಯನ್ನು, ದುರ್ಯೋಧನಂಗೆ–ದುರ್ಯೋಧನನಿಗೆ, ಕುಡಲಿರ್ಪಂ–ಕೊಡಲು ಇರುವನು, ಎಂದರೆ ಕನ್ಯಾದಾನಮಾಡಲು ಇರುವನು ; ಆನ್–ನಾನು, ಒಡಂಬಡೆನ್–ಒಪ್ಪೆನು ; ನಿನಗೆ–ನಿನಗೆ, ಈವ ಅಚ್ಚಿ–ಕನ್ಯಾದಾನವಮಾಡುವ ಪ್ರೀತಿ, ಆಗಳುಂ–ಯಾವಾಗಲೂ, ದಲ್–ನಿಶ್ಚಯವಾಗಿಯೂ ; ಪದ್ಮಾಸನಂ–ಬ್ರಹ್ಮನು, ತಾನೆ–ತಾನೇ, ನೇರ್ಪಡಿಸಲ್–ಸರಿಮಾಡಲು, ಕೂಡಿದಂ–ನಿಮ್ಮಿಬ್ಬರನ್ನು ಒಟ್ಟಿಗೆ ಸೇರಿಸಿದನು ; ಇಂ ಇರ್ಪುದು ನಯಮಲ್ತು– ಇನ್ನು ಇರುವುದು ನೀತಿಯಲ್ಲ ; ಈ ಪೊೞ್ತೆ–ಈ ಹೊತ್ತೆ, ಪೊೞ್ತಾಗೆ–ಹೊತ್ತಾಗಲು; ನೀಂ–ನೀನು, ಕನ್ನೆಯಂ–ಕನ್ಯೆಯನ್ನು, ಒಡಗೊಂಡು–ಜೊತೆಯಲ್ಲಿಟ್ಟುಕೊಂಡು, ಉಯ್ವುದು–ತೆಗೆದುಕೊಂಡು ಹೋಗುವುದು; ವಿದ್ವಿಷ್ಟ ವಿದ್ರಾವಣಾ–ಅರ್ಜುನನೇ. ತಡೆಯದಿರ್–ತಡಮಾಡಬೇಡ.

**ವಚನ:** ಪೋಗೆ ಪೋಗೆ–ಹೋಗುತ್ತಿರಲು ; ಅನುಮತದೊಳ್–ಸಮ್ಮತಿಯಲ್ಲಿ ; ಪೆಱಗಂತಗುಳ್ದ–ಬೆನ್ನಟ್ಟಿಬರುವ ; ಅಂಬುಗಾಣಿಸಲ್–ಬಾಣವನ್ನು ತೋರಿಸಲು ಎಂದರೆ ಬಾಣಪ್ರಯೋಗಮಾಡಲು ; ನೀನೆ ಸಾಲ್ವೆ–ನೀನೇ ಸಮರ್ಥನಾಗಿರುವೆ ; ಮಾಣಿಸಲ್–ತಡೆಯಲು, ನಿಲ್ಲಿಸಲು ; ಬಟ್ಟೆಯೊಳ್–ದಾರಿಯಲ್ಲಿ :

**೨೧.** ಎನ್ನಂ–ನನ್ನನ್ನು, ಉಱದೆ–ಲಕ್ಷಿಸದೆ, ಕುಡಲಿರ್ದ ಕೂಸಂ–ದಾನವಾಗಿ ಕೊಡಲಿರುವ ಹೆಣ್ಣನ್ನು, ಒಡಗೊಂಡುಯ್ವಾತನಂ – ಜೊತೆಯಲ್ಲಿ ಕರೆದುಕೊಂಡು ಹೋಗುವವನನ್ನು, ತಾಗಿ–ಎದುರಿಸಿ, ತಲ್ತಿಱಿಯಲ್–ಸೇರಿ ಹೋರಾಡಲು, ಕೋಡಗ ಗಟ್ಟು ಗಟ್ಟಿತರಲ್–ಕಪಿಯನ್ನು ಕಟ್ಟಿದಹಾಗೆ ಕಟ್ಟಿತರಲು, ಇನ್ನಾರಾರ್ಪರ್–ಇನ್ನು ಯಾರು ಸಮರ್ಥರಾಗುತ್ತಾರೆ, ಅಂತಪ್ಪ–ಅಂಥ, ಪೊಚ್ಚಱಸಾಮಂತರೆ–ಪರಾಕ್ರಮವುಳ್ಳ ಸಾಮಂತರೇ, ಪೋಗಿಮೆಂದು–ಹೋಗಿರಿ ಎಂದು, ಪಲರಂ–ಹಲವರನ್ನು, ಪೇೞ್ದಾಗಳ್–ನಿಯಮಿಸಿದಾಗ, ಎಯ್ತಂದರಂ – ಸಮೀಪಿಸಿ ಎದುರಿಸಿದವರನ್ನು, ಅರಿಗನೆಚ್ಚ–ಅರ್ಜುನನು ಪ್ರಯೋಗಿಸಿದ, ಉಗ್ರೇಷು–ಭಯಂಕರವಾದ ಬಾಣಗಳ, ಧಾರಾಜಳಂ–

ಧಾರಾಕಾರವಾದ ನೀರು, ತೊಱೆಕೊಳ್ವಂತಿರೆ–ನದಿಮೇಲೆ ನುಗ್ಗಿದ ಹಾಗೆ, ಅಂದು ಆಗ, ಕೊಂಡುವು–ಆಕ್ರಮಿಸಿದುವು.

**ವಚನ :** ತನ್ನಪೇೞ್ದ–ತಾನು ನಿಯಮಿಸಿದ ; ತೆರಳಲ್‌ಬಗೆದ-ಹೋಗಲಿಚ್ಛಿಸಿದ,

**೨೨.** ಶ್ರೀಕೃಷ್ಣನ ಸಮಾಧಾನ: ಕುಲಮಂ-ಕುಲದ ವಿಷಯವನ್ನು, ಪೇೞ್ವೊಡೆ ಹೇಳುವ ಪಕ್ಷದಲ್ಲಿ, ಸೋಮವಂಶತಿಲಕಂ-ಚಂದ್ರವಂಶದಲ್ಲಿ ಶ್ರೇಷ್ಠನಾದವನು : ಬಲ್ಲಾಳ್ತನಂ ಪೇೞ್ವೊಡೆ-ಪರಾಕ್ರಮವನ್ನು ಹೇಳುವ ಪಕ್ಷದಲ್ಲಿ, ಉಜ್ವಲ....ವ್ಯೂಹಂ ; ಉಜ್ವಲ–ಹೊಳೆಯುವ, ತೀವ್ರ–ತೀಕ್ಷ್ಣವಾದ, ಅಸ್ತ್ರ–ಬಾಣಗಳ, ನಿಘಾತದಿಂ-ಹೊಡೆತದಿಂದ, ನಿಪಾತಿತ-ಕೆಡವಿದ, ರಿಪುವ್ಯೂಹಂ – ಶತ್ರುಸಮೂಹವುಳ್ಳವನು ; ಬಲಂಬೇೞೆ–ಶಕ್ತಿಯನ್ನು ಹೇಳಲು, ದೋರ್ವಲದೊಳ್–ಬಾಹುಬಲದಲ್ಲಿ, ನಿನಗಂ-ನಿನಗಿಂತಲೂ, ಬಲಿಷ್ಠಂ–ಬಲಶಾಲಿಯಾದವನು ; ಕೂಸಿಂಗೆ–ಸುಭದ್ರೆಗೆ, ಒಡೆಯಂ-ವಲ್ಲಭನು ; ಕೊಂಡುಯ್ವುದು–ತೆಗೆದುಕೊಂಡು ಹೋಗುವುದು, ಏಚಲಂ–ಏನುಛಲ, ಏಂದೋಷಂ–ಏನು ತಪ್ಪು, ಆದರ್ಕೆ–ಅದಕ್ಕಾಗಿ, ನೀಂ–ನೀನು, ಮುಳಿವುದೇ–ಕೋಪಿಸಿಕೊಳ್ಳುವುದೇ? ನೀನ್–ನೀನು, ಪೇೞ್ವೊಡೆ–ನನಗೆ ಹೇಳುವ ಪಕ್ಷದಲ್ಲಿ, ಎಂದರೆ ಅರ್ಜುನನೊಡನೆ ಹೋರಾಡು ಎಂದು ನಿಯಮಿಸಿದ ಪಕ್ಷದಲ್ಲಿ. ಆಂ–ನಾನು, ಸಾಲೆನೇ–ಸಮರ್ಥನಾಗೆನೇ ?

**ವಚನ :** ತಳಿದು–ಚಿಮುಕಿಸಿ : ನದಿಸಿದಂ–ಆರಿಸಿದನು ; ಸಹಕಾರ–ಮಾವಿನ ಮರ ; ಅಶೋಕಹ–ಮರ, ವೃಕ್ಷ ; ಮುಹುರ್ಮುಹುರಾಲೋಕನಂಗೆಯ್ಯುತ್ತಂ–ಪುನಃ ಪುನಃ ನೋಡುತ್ತ ; ಪೊೞಲಂ ಪುಗೆ–ನಗರವನ್ನು ಹೊಗಲು.

**೨೩.** ಪರಸುವ–ಹರಸುವ, ಪುರಜನದ–ಪಟ್ಟಣಿಗರ, ಒದವಿದ–ಉಂಟಾದ, ಪರಕೆಗಳ್–ಆಶೀರ್ವಾದಗಳು, ಅಂಬುಧಿನಿನಾದಮಂ–ಸಮುದ್ರ ಘೋಷವನ್ನು, ಮಿಗೆ–ಮೀರಲು, ತಮ್ಮಯ್ವರುಂ–ತಾವೈದು ಜನರೂ, ಒಡನೆ–ಜೊತೆಯಲ್ಲೇ, ಮೆಱೆದು-ಪ್ರಕಾಶಿಸಿ, ಪರಮಾನುರಾಗದಿಂ–ಅತಿ ಸಂತೋಷದಿಂದ, ಬಂದು, ಅರಮನೆಯಂ ಪೊಕ್ಕರ್.

**ವಚನ :** ತಮ್ಮೆಲ್ಲರುಮೇಕಸ್ಥರಾಗಿ-ತಾವೆಲ್ಲ ಒಟ್ಟಾಗಿ,

**೨೪.** ಎರೆದು–ಬೇಡಿ; ಯಾಚಿಸಿ, ಇಂತು–ಹೀಗೆ, ಅಟ್ಟಲೆವೇೞ್ಪ–ದೂತರನ್ನು ಕಳಿಸಬೇಕಾದ, ಕನ್ನೆ–ಕನ್ಯೆಯು, ಎಂದರೆ ಕನ್ಯೆಯನ್ನು ನಮಗೆ ವಿವಾಹದಲ್ಲಿ ದಾನ ಮಾಡಿರಿ ಎಂದು ಯಾಚಿಸಿ ದೂತರ ಮೂಲಕ ಹೇಳಿಕಳಿಸಬೇಕಾದ ಕನ್ಯೆ, ಮರುಳ್ಚಿ–ಮೋಹಿಸಿ, ಬೞಿಯಂ ಬಂದಳ್–ಹಿಂದೆಯೇ ಬಂದಳು ; ಅಂಬುಜೋದರಂ–ಕೃಷ್ಣನು, ಇಂತು ಅಟ್ಟಿದಂ–ಹೀಗೆ ಕಳಿಸಿಕೊಟ್ಟನು ; ಇಂತು–ಹೀಗೆ, ನೈಪಿಂಗೆ–ಪುಣ್ಯಕ್ಕೆ, ನೋಂತರ್–ವ್ರತಮಾಡಿದವರು, ಒಳರೇ–ಉಂಟೇ ? ನಾಮ್–ನಾವು, ಇನ್–ಇನ್ನು ಮೇಲೆ, ಇಳಾಧರನುಂ – ಕೃಷ್ಣನೂ, ಯಾದವವಂಶಜರ್ ಪೆರಸು – ಯದುಕುಲದಲ್ಲಿ ಹುಟ್ಟಿದವರೊಡನೆ ಸೇರಿ, ಬರ್ಪಂತಟ್ಟೆ–ಬರುವಹಾಗೆ ದೂತರನ್ನು ಕಳಿಸಿ, ಮನೋಹರ

ಮಪ್ಪಂತು–ರಮಣೀಯವಾಗುವ ಹಾಗೆ, ವಿವಾಹ ಮಂಗಳಮಂ–ವಿವಾಹದ ಒಸಗೆಯನ್ನು, ಮಾಳ್ಪಂ–ಮಾಡೋಣ, ಎಂಪು, ಅಂದು, ದೂತರಂ–ದೂತರನ್ನು, ಅಟ್ಟಿದರ್–ಕಳಿಸಿಕೊಟ್ಟರು.

**ವಚನ** : ಕಜ್ಜಮಂ–ಕಾರ್‍ಯವನ್ನು, ಒಡಂಬಡಿಸಿ–ಒಪ್ಪಿಸಿ ; ಪ್ರತಿಪತ್ತಿಗಳಿಂ–ಸತ್ಕಾರಗಳಿಂದ ;

**೨೫.** ಪಸುರ್ವಂದರ್–ಹಸುರವಾಣಿ ಚಪ್ಪರ, ಪಸೆ–ಹಸೆಮಣೆ, ವೇದಪಾರಗರವಂ–ವೇದದಲ್ಲಿ ಪಂಡಿತರಾದವರ ಘೋಷ, ಕಣ್ಬೇಟದ–ಕಣ್ಣಿನ ಪ್ರೀತಿಯ ಎಂದರೆ ಚಕ್ಷು ಪ್ರೀತಿಯ, ಉಪ್ಪಾನಿಯಂ–ಅತಿಶಯವನ್ನು, ಪಸರಂಗೆಯ್ದವೊಲಪ್ಪ–ಅಂಗಡಿ ಹಾಕಿದ ಹಾಗೆ ಇರುವ, ಪೊಚ್ಚಱ–ಶೂರರಾದ, ಮಹಾಸಾಮಂತ–ಮಹಾಸಾಮಂತ ರಾಜರ, ಸೀಮಂತಿನೀ ಪ್ರಸರಂ–ಸ್ತ್ರೀಯರ ಸಮೂಹ, ಮಂಗಳತೂರ್‍ಯನಾದಂ–ಮಂಗಳ ವಾದ್ಯಗಳ ಧ್ವನಿ, ಎಸೆಯುತ್ತಿರ್ಪನ್ನೆಗಂ–ಸೊಗಸಾಗುತ್ತಿರಲು, ಚಕ್ರಿ–ಕೃಷ್ಣನು, ರಾಗಿಸಿ–ಸಂತೋಷಪಟ್ಟು, ಗುಣಾರ್ಣವ ಮಹೀಪಾಲಂಗಂ–ಅರ್ಜುನ ಭೂಪತಿಗೂ, ಆ ಕನ್ನೆಯಂ–ಆ ಸುಭದ್ರೆಯನ್ನು, ಕೆಯ್ನೀರೆಱೆದಂ–ದಾನಧಾರೆಯನ್ನು ಹೊಯ್ದನು, ಎಂದರೆ ಮದುವೆ ಮಾಡಿಸಿದನು.

**ವಚನ** : ಬೇಟಮೆಂಬ–ಪ್ರೀತಿಯೆಂಬ ; ಪೊಯ್ನೀರೆಱೆವಂತೆ – ಹೊಯ್ನೀರು ಹಾಕಿದ ಹಾಗೆ ; ಬಿಯಮಂ–ವ್ಯಯವನ್ನು, ಮೆಱೆದು–ಪ್ರಕಟಿಸಿ ಎಂದರೆ ಯಥೇಚ್ಛವಾಗಿ ದ್ರವ್ಯವನ್ನು ಖರ್ಚುಮಾಡಿ.

**೨೬.** ಕೃಷ್ಣ ತನ್ನ ತಂಗಿಗೆ ಬಳುವಳಿ ಕೊಟ್ಟದ್ದು : ತೊಟ್ಟ ತುಡುಗೆಗಳ್–ತಾನು ಧರಿಸಿದ ಒಡವೆಗಳು, ಓರೊಂದೆ–ಒಂದೊಂದೇ, ಕೌಸ್ತುಭರತ್ನಮಂ–ವಿಷ್ಣುವಿನ ಎದೆಯಲ್ಲಿರುವ ಕೌಸ್ತುಭವೆಂಬ ರತ್ನವನ್ನು, ಮಸುಳಿಸೆ–ಕಾಂತಿಹೀನವಾಗಿ ಮಾಡುತ್ತಿರಲು ; ಪಾಲ್ಗಡಲೊಳ್–ಕ್ಷೀರಸಮುದ್ರದಲ್ಲಿ, ಪುಟ್ಟಿದ–ಹುಟ್ಟಿದ, ಆನೆಯಂ–ಆನೆಯನ್ನು, ಐರಾವತವನ್ನು, ಆನೆಗಳ್–ಆನೆಗಳು, ಗೆಲೆವರೆ–ಮೀರಿಸಲು; ಕುದುರೆಯಂ–ಉಚ್ಚೈಃಶ್ರವವನ್ನು, ಕುದುರೆಗಳ್–ಕುದುರೆಗಳು, ಕೀೞ್ಮಾಡೆ–ತಿರಸ್ಕರಿಸಲು : ಗಣಿಕೆಯರ್–ಸ್ತ್ರೀಯರು, ತೊಟ್ಟ–ಹೂಡಿದ, ಮದನನ–ಮನ್ಮಥನ, ಪೂಗಣೆಗೆ–ಹೂವಿನ ಬಾಣಕ್ಕೆ, ಎಣೆಯಾಗೆ–ಸಮಾನವಾಗಲು ; ಗಣಿದಮಂ–ಲೆಕ್ಕವನ್ನು, ಬಗೆಯದೆ–ಎಣಿಸದೆ, ತಂಗೆಗೆ – ತಂಗಿಗೆ, ಬೞಿವೞಿಯೆಂದು – ಬಳುವಳಿಯೆಂದು, ಇಂತು, ಪುರುಷೋತ್ತಮಂ–ಶ್ರೀಕೃಷ್ಣ, ಸರ್ವಸ್ವಮೆಲ್ಲಮಂ–ತನ್ನ ಎಲ್ಲ ಐಶ್ವರ್‍ಯವನ್ನೂ, ಇಂತು–ಹೀಗೆ, ಕೊಟ್ಟಂ–ಕೊಟ್ಟನು, ಇದು ಪಿರಿಯಕ್ಕರ ಎಂಬ ದೇಸಿವೃತ್ತ : ಪ್ರತಿ ಪಾದದಲ್ಲೂ ೧ ಬ್ರಹ್ಮಗಣ, ೫ ವಿಷ್ಣುಗಣಗಳು ೧ ರುದ್ರಗಣ ಹೀಗೆ ಏಳು ಗಣಗಳಿರುತ್ತವೆ ; ವಿಷ್ಣುಗಣಗಳ ಸ್ಥಾನದಲ್ಲಿ ಕೆಲವು ವೇಳೆ ಬ್ರಹ್ಮಗಣ–ಬಂದರೂ ಬರಬಹುದು ; " ಪದದೊಳೆರಡೆಂಬಸಂಖ್ಯೆಯೊಳಾಱಱೊಳಜಗಣಂ ಸಮವಾಯಮಪ್ಪೊಡಕ್ಕುಂ " ಎಂದು ನಾಗವರ್ಮ ಹೇಳಿದ್ದಾನೆ. ಇಲ್ಲಿ ಎರಡು, ಆರು ಎಂಬ ಗಣಸ್ಥಾನಗಳ ನಿರ್ದೇಶ

ವಿಷ್ಟರೂ ಮಿಕ್ಕ ಸ್ಥಾನಗಳಲ್ಲೂ ಅಜಗಣ ಬರಬಹುದು ಎಂದು ಕವಿ ಪ್ರಯೋಗಗಳಿಂದ ಹೇಳಬಹುದಾಗಿದೆ.

**ವಚನ:** ಇಂಬೞಿಯಂ–ಇನ್ನು ಅನಂತರ, ತರುವಾಯ; ಕಟಿೞಿಪಿದಂ–ಕಳುಹಿಸಿಕೊಟ್ಟನು.

೨೭. ತಳಿರ್ಗಳ ಪಾಸಿನೊಳ್–ಚಿಗುರುಗಳ ಹಾಸಿಗೆಯಲ್ಲಿ, ಪೊರಮಡುತಿರ್ದ ಬಿಲಂ–ಹೊರಳುತ್ತಿದ್ದ ಸಂತಾಪವನ್ನು, ಸೋಂಕುಗಳ್-ಪರಸ್ಪರ ಸ್ಪರ್ಶವು, ಕಿಡೆ ಸೋಂಕೆ-ಕೆಡುವಂತೆ ಮುಟ್ಟಲು; ಬಿಗಿಯಪ್ಪಿದಪ್ಪುಗಳ್–ಬಿಗಿಯಾಗಿ ತಬ್ಬಿಕೊಂಡ ಆಲಿಂಗನಗಳು, ಮೆಯ್ಯಮಯ್ಯ–ಮೈಯಿನ, ಉಚಿರಿನ, ಪದಪೆಂಕೆಗಳಂ-ಹದವಾದ ಉರಿಗಳನ್ನು, ಕಳೆದುವು–ಹೋಗಲಾಡಿಸಿದುವು: ಅಟ್ಟಿಜನಿಪ ಚುಂಬನಂ-ಪ್ರೀತಿಯನ್ನು ಕೊಡುವ ಮುತ್ತುಗಳು, ನಾಣುಮಂ–ಲಜ್ಜೆಯನ್ನೂ, ಕಿಱುದುಜಾಣುಮಂ–ಸ್ವಲ್ಪ ಜಾಣತನವನ್ನೂ, ಕಳೆದುವು–ಹೋಗುವಂತೆ ಮಾಡಿದುವು; ಅವರಿರ್ವರ–ಅವರಿಬ್ಬರ, ಮನ್ಮಥಪ್ರವಂ–ಮದನೋದಕ, ಗರ್ಮಮಂ–ಉಷ್ಣವನ್ನು, ಕಳೆದುವು–ಹೋಗಲಾಡಿಸಿದುವು.

೨೮ ಅಭಿನವಮದಲೇಖಾಲಾಲಿತಂ–ಹೊಸದಾಗಿ ಕಸ್ತೂರಿಯಿಂದ ಬರೆದ ಮದಲೇಖೆಯಿಂದ ಪೋಷಿಸಲ್ಪಟ್ಟ; ವಿಭ್ರಮ ಭ್ರೂರಭಸಗತಿ ವಿಳಾಸಂ–ಸುಂದರವಾದ ಹುಬ್ಬಿನ ವೇಗವಾದ ಚಲನೆಯ ವಿಳಾಸವನ್ನುಳ್ಳ; ದೀಪ್ತ ಕಂದರ್ಪದರ್ಪ ಕ್ಷುಭಿತಗಳ ನಿನಾದಂ–ಉದ್ದೀಪನಗೊಂಡ ಕಾಮಗರ್ವದಿಂದ ಕೆರಳಿದ ಕೊರಳ ಉಲಿಯನ್ನುಳ್ಳ; ಪ್ರಸ್ಫುರದ್ಘರ್ಮವಾರಿ ಪ್ರಭವಂ-ಹೊಳೆಯುತ್ತಿರುವ ಬೆವರು ನೀರುಗಳನ್ನು ಹುಟ್ಟಿಸುವ, ಕಾಂತಸಂಗಂ–ನಲ್ಲನ ಸಮಾಗಮ, ಆ ಕಾಂತೆಗೆ–ಆಸುಭದ್ರೆಗೆ, ಎಸೆದುದು–ಸೊಗಸಾಯಿತು. "ನನಮಯಯುಗಣಂಗಳ್ ಮಾಲಿನೀವೃತ್ತಮಕ್ಕುಂ".

**ವಚನ:** ಸಮಸತ್ವ–ಸಮಾನವಾದ ಶಕ್ತಿ; ಸಮರತ–ಸಮಾನವಾದ ರತಿಕ್ರೀಡೆ

೨೯. ಒಟ್ಟಜೆಯಿಂ–ಪರಾಕ್ರಮದಿಂದ, ಭಾರತದೊಳ್–ಭಾರತ ಯುದ್ಧದಲ್ಲಿ, ಕಟ್ಟಾಳ್ಗಳಂ–ಅತಿಶೂರರಾದ, ಜಟ್ಟಿಗರಂ-ವೀರರನ್ನು, ಇಱಿದು–ಹೊಡೆದು, ತವಿಸಲ್-ನಾಶಮಾಡಲು, ಪುಟ್ಟಿದನೆಂಬವೋಲ್–ಹುಟ್ಟಿದನೆಂಬಂತೆ, ಅದಟಂ-ಶೂರನಾದ, ಅಭಿಮನ್ಯು, ಕಲಿತನಂ ಪುಟ್ಟುವವೋಲ್–ಪರಾಕ್ರಮವು ಜನ್ಮತಾಳಿದ ಹಾಗೆ, ಪುಟ್ಟಿದಂ–ಹುಟ್ಟಿದನು. ಒಟ್ಟಜೆ ಎಂದರೆ ಸಮೂಹ, ಅತಿಶಯ, ಎಂದು ನಿಘಂಟುಗಳಲ್ಲಿ ಕಾಣುತ್ತವೆ; ಆದರೆ ಕವಿ ಪ್ರಯೋಗಗಳಲ್ಲಿ ಬೇರೆ ಬೇರೆ ಅರ್ಥಛಾಯೆಗಳು ಕಾಣಿಸುತ್ತವೆ. "ತೋಳ್ವಲದ ಪೊಡಪುರ್ಮೊಟ್ಟಜೆಯುಮುನ್ನತಿಯುಂ ನಲೆ ಕುಂದ ರಾಜನಾ" (ಶಾಪಮಂ ೪೦) ಎಂಬಲ್ಲಿ ಪರಾಕ್ರಮ ಎಂದಾಗಬಹುದು; "ಒಟ್ಟಜೆಗೆಟ್ಟು ಲಂಕೆಯ ವಿಭೀಷಣನಿತ್ತ ಕುಬೇರನಳ್ಕಿ ತಂದೊಟ್ಟಿದ ಪೊನ್ನರಾಶಿಗಳನಿತ್ತು"; "ಒಟ್ಟಜೆಯ ಕಪ್ಪಮನಟ್ಟುವುದೆಂದು" ಎಂಬ ರನ್ನನ ಪ್ರಯೋಗಗಳಲ್ಲಿ ಬೇರೆ ಅರ್ಥವಿರುವಂತಿದೆ.

ಇಲ್ಲಿಗೆ ಅರ್ಜುನ ಕೃತ ಸುಭದ್ರಾಪಹರಣ ಪ್ರಸಂಗ ಮುಗಿಯುತ್ತದೆ; ಈ ಕಥಾ ನಿರೂಪಣೆಗೆ ಪಂಪನು ಸುಮಾರು೧೭೫ಪದ್ಯಗಳನ್ನೂ ಅಷ್ಟೇ ಗದ್ಯಗಳನ್ನೂ ಬಳಸಿದ್ದಾನೆ. ವ್ಯಾಸಕೃತ ಮಹಾಭಾರತದಲ್ಲಿ ಈ ಉಪಾಖ್ಯಾನ ಸುಮಾರು ೩೦-೪೦ಶ್ಲೋಕಗಳಲ್ಲಿ ಮುಗಿದುಹೋಗುತ್ತದೆ. ಎಷ್ಟೋ ಉಪಾಖ್ಯಾನಗಳನ್ನು ಒಂದೆರಡು ಪದ್ಯಗಳಲ್ಲಿಯೇ ಸಂಗ್ರಹಿಸಿ ಮುಂದಕ್ಕೆ ಧಾವಿಸುವ ಪಂಪ ಈ ಅಲ್ಪವಾದ ಸುಭದ್ರಾಪಹರಣ ಪ್ರಸಂಗಕ್ಕೆ ಏಕೆ ಇಷ್ಟು ಗಮನ ಸಲ್ಲಿಸಿ ವಿಸ್ತರಿಸಿದನು? ಅರಿಕೇಸರಿ ಬರಿ ಶೂರನಲ್ಲ, ಉತ್ತಮ ಶೃಂಗಾರ ನಾಯಕನೂ ಆಗಿದ್ದನೆಂಬುದನ್ನು ನಿರೂಪಿಸುವುದು ಕವಿಯ ಉದ್ದೇಶಗಳಲ್ಲಿ ಒಂದಾಗಿರಬಹುದು; 'ಪ್ರಿಯಗಳ್ಳ' ಎಂಬ ಅರಿಕೇಸರಿಯ ಬಿರುದಿಗೆ ಸಾರ್ಥಕತೆಯನ್ನು ಕಾಣಿಸಲು ಕವಿ ಹವಣಿಸಿರಬಹುದು. ರಾಷ್ಟ್ರಕೂಟ ಮುಮ್ಮಡಿ ಇಂದ್ರ ರಾಜನ ಮಗಳು ರೇವಕ ನಿರ್ಮಡಿ ಮತ್ತು ಲೋಕಾಂಬಿಕೆಯೆಂಬ ಇಬ್ಬರು ಪತ್ನಿಯರು ಅರಿಕೇಸರಿಗಿದ್ದರು. ಅರ್ಜುನ ಸುಭದ್ರಾಪಹರಣ ಮಾಡಿದಂತೆ ಇವರಲ್ಲಿ ಯಾರನ್ನಾದರೂ ಒಬ್ಬಳನ್ನು ಅರಿಕೇಸರಿ ಅಪಹರಿಸಿಕೊಂಡು ಮದುವೆಯಾಗಿರಬಹುದು; ಇಲ್ಲದಿದ್ದರೆ ಇನ್ನಾವಳೋ ಒಬ್ಬಳನ್ನು ಅಪಹರಿಸಿರಬಹುದು. ಈ ಕಾರಣದಿಂದ ಅವನು ಪ್ರಿಯಗಳ್ಳನಾಗಿರಬಹುದು. ಅರಿಕೇಸರಿಯ ಈ ಮಹಾಕಾರ್ಯವನ್ನು ಮೆಚ್ಚಿಕೊಂಡ ಪಂಪ ಈ ಉಪಾಖ್ಯಾನವನ್ನು ದೀರ್ಘವಾಗಿ ಬೆಳಸಿರಬಹುದು. ಏನೇ ವಿಶೇಷ ಕಾರಣಗಳಿದ್ದಿರಬಹುದಾದರೂ ಕಥಾರಚನೆಯ ದೃಷ್ಟಿಯಿಂದ, ವ್ಯಾಸಭಾರತವನ್ನು ಸಂಕ್ಷಿಪ್ತಗೊಳಿಸುವ ದೃಷ್ಟಿಯಿಂದ, ನೋಡಿದರೆ ಇದು ಮೂಗಿಗಿಂತ ಮೂಗುತಿ ಭಾರವೆಂಬಂತಿದೆ; ಪಂಪನ ಪ್ರಮಾಣ ಪರಿಜ್ಞಾನ ಇಲ್ಲಿ ಅವನನ್ನು ತೊರೆದಿದೆ. ಅವನ ನಿರೂಪಣೆಯಲ್ಲಿ ಸೊಗಸಿಲ್ಲವೆಂದಲ್ಲ; ಸೂರ್ಯಾಸ್ತ ಚಂದ್ರೋದಯಗಳ ವರ್ಣನೆ, ಬೆಳುದಿಂಗಳಿನ ಚೆಲ್ವು, ಸುಭದ್ರಾರ್ಜುನರ ವಿರಹವರ್ಣನೆ, ವೇಶ್ಯಾವಾಟಿಯ ಬಿಡಿ ಬಿಡಿ ಚಿತ್ರಗಳು, ಮಧುಪಾನಗೋಷ್ಠಿ ಅಲ್ಲಿ ಕಾಣುವ ಜನ ಜೀವನ, ಪಂಪನ ಸೌಂದರ್ಯ ದೃಷ್ಟಿ, ಅವನ ರಸಿಕತೆ— ಇವೆಲ್ಲ ಈ ಕಥಾನಕದಲ್ಲಿ ಸ್ವಾರಸ್ಯಕರವಾದ ಅಂಶಗಳು. ಇವು ಚೆನ್ನಾಗಿಲ್ಲವೆಂದು ಹೇಳಲಾಗದು. ಇಲ್ಲಿರುವ ಮುಕ್ತಕಗಳು ಮನೋಹರವಾಗಿವೆ.

೩೦. ವಸಂತಕಾಲದ ವರ್ಣನೆ: ಅಗರುವ-(ಚಳಿಗಾಲದಲ್ಲಿ ಧೂಪಕ್ಕಾಗಿ ಉಪಯೋಗಿಸುವ) ಅಗರುವಿನ, ಮೆಚ್ಚು—ಮೆಚ್ಚಿಕೆಯು, ಅಚ್ಚ ಸಿರಿಕಂಡದೊಳ್— ಅಚ್ಚ ಶ್ರೀಗಂಧದ ಲೇಪನದಲ್ಲಿ, ಅಗ್ಗಲಿಸಿತ್ತು—ಅಧಿಕವಾಯಿತು; ಸೂಡುಶಯ್ಯೆಗಳ— ಬೆಚ್ಚನೆಯ ಹಾಸಿಗೆಗಳ, [ಬ]ಯಕ್ಕೆ—ಬಯಕೆಯು, ಜೊಂಪದಲರ್ವಾಸುಗಳೊಳ್— ಗೊಂಚಲಾಗಿರುವ ಹೂವಿನ ಹಾಸಿಗೆಗಳಲ್ಲಿ, ನೆಲಸಿತ್ತು-ನೆಲಸಿತು, ಪೂತಗೊಜ್ಜಗೆಗಳ- ಸೇವಂತಿ ಹೂವುಗಳ, ಸಿಂದುರಂಗಳ—ಸಿಂದುರ ಎಂಬ ಹೂವುಗಳ, ಒಳಗೆ, ಓಗರಗಂಪನೆ ಮಿಶ್ರವಾದ(?)ಸುಗಂಧವನ್ನೇ, ಬೀಱುತಿರ್ಪ-ಚೆಲ್ಲುತ್ತಿರುವ, ಮಲ್ಲಿಗೆಯೊಳ್-ಮಲ್ಲಿಗೆಯಲ್ಲಿ, ಅರಲ್ದ-ಅರಳಿದ, ಸಂಪಗೆಯೊಳ್-ಸಂಪಿಗೆ ಹೂವಿನಲ್ಲಿ, ಬಸಂತಮಾಸದೊಳ್— ವಸಂತದ ತಿಂಗಳುಗಳಲ್ಲಿ, ಅಗ್ಗಲಿಸಿತ್ತು—ಅತಿಶಯವಾಯಿತು. ಇಲ್ಲಿ ಬಯಕ್ಕೆ ಎಂಬ

ಪಾಠವನ್ನು [ಬ]ಯಕ್ಕೆ ಎಂದು ತಿದ್ದಿಕೊಂಡಿವೆ : ಬಯಕೆ, ಬಯಕ್ಕೆ, ಬಯಂಕೆ-ಎಂದು ಮೂರು ರೂಪಗಳುಂಟು (ಪಂಭಾ ೧೩–೬ ; ಅರ್ಧನೇ ೨–೨೫) ; ಓಗರಗಂಪು ಎಂಬಲ್ಲಿನ ಓಗರಕ್ಕೆ ಅನ್ನ ಎಂದು ಅರ್ಥಮಾಡಿ, ಪಕ್ವವಾದ ಎಂದು ಅರ್ಥೈಸಿದೆ (ಪಂಭಾ ಕೋ). ಇದೇ ಓಗರಶಬ್ದ 'ಓಗರವೂಗಳ ಕಂಪಸೆಯ್ದು ಪೀರುತ್ತೊಡವಂದು ವಿಂಧ್ರವನದಿಂ' ಎಂಬಲ್ಲಿ ಇನ್ನೊಂದು ಸಲ ಪ್ರಯೋಗವಾಗಿದೆ (ಪಂ ಭಾ ೧೧.೮೧) ; 'ಪ್ರಫುಲ್ಲಮಲ್ಲೀನವಪುಷ್ಪದೋಗರದ ಕಂಪುಗಳಾಗರಮಾಯ್ತು ಸುಗ್ಗಿಯೊಳ್' (ಚಂದ್ರಪು ೭–೪೯) ಎಂಬ ಇನ್ನೊಂದು ಪ್ರಯೋಗವಿದೆ. ಪ್ರಾಕೃತದಲ್ಲಿ ಓಗರ, ಒಗ್ಗರ–ಎಂದರೆ ಒಂದು ತೆರನಾದ ಬತ್ತ. ಈ ಅರ್ಥ ಹೊಂದುವುದಿಲ್ಲ. ಬಗೆ ಬಗೆಯಾದ ಹೂಗಳ ಸಮ್ಮಿಶ್ರವಾದ ಕಂಪು, ಕದಂಬ ಗಂಧ ಎಂದು ಅರ್ಥಮಾಡಬಹುದು. 'ಕದಂಬ ದಂಬುಲ' ನೋಡಿ 'ಅಲರ್ದ ಪೊಸಸಿಂದುರಂಗಳಂ' ಎಂಬ ಪ್ರಯೋಗದಲ್ಲಿ (ಆದಿಪು ೧೧–೯೦) ಸಿಂದುರ ಎಂಬುದು ಒಂದು ಹೂವೆಂದು ಸ್ಪಷ್ಟವಾಗಿದೆ; ಇದು 'ಸಿಂಧುವಾರ'ದ ತದ್ಭವವಿರಬಹುದು.

೩೧. ಮುಂ–ಮೊದಲು, ಮಹಿಯೆಲ್ಲಮಂ-ಭೂಮಿಯನ್ನೆಲ್ಲ, ಶಿಶಿರರಾಜನೆ–ಮಾಗಿಯ ಕಾಲವೆಂಬ ರಾಜನೇ, ಬಿಚ್ಚತಂ – ವಿಸ್ತಾರವಾಗಿ, ಆಳ್ದಂ – ಆಳಿದನು ; ಈಗಳ್–ಈಗ, ಆತಂ–ಆತನು, ಮಿಡುಕಲ್ಕೆ–ಅಲುಗಾಡುವುದಕ್ಕೆ, ಸಂಚರಿಸುವುದಕ್ಕೆ, ಸಲ್ಲ–ಸಲ್ಲದು, ಆಗದು ; ಇರದೆ, ಪೋಪುದು–ಹೋಗುವುದು, ಅದೇಕೆನೆ–ಅದೇಕೆ ಎನ್ನಲು ಕಾಮದೇವ–ಮನ್ಮಥನು, ಇತ್ತಂ–ಈ ಭೂಮಿಯನ್ನೆಲ್ಲ ಕೊಟ್ಟನು, ಮಧು–ವಸಂತನು, ಈ ನೆಲನಂ–ಈ ಭೂಮಿಯನ್ನು, ಪೆತ್ತಂ–ಪಡೆದನು, ಇಂತಿದು–ಹೀಗೆ ಇದು, ಪತ್ತಳೆ–ಪತ್ರಿಕೆ, ಓಲೆ, ಎಂದು ಸಾಱುವಂತೆ ಮಿಗೆ–ಸಾರುವ ರೀತಿ ಅಧಿಕವಾಗಲು, ಗಿಳಿವಿಂಡಿ ನೋಳಿಗಳ್–ಗಿಣಿಯ ಹಿಂಡುಗಳ ಸಾಲು, ಕೆಂದಳಿರಂ–ಕೆಂಪು ಚಿಗುರನ್ನು, ಕರ್ಚಿ–ಕಚ್ಚಿಕೊಂಡು, ಪಾಱಿದುವು–ಹಾರಿದುವು, ಬಿಚ್ಚತ<(ಸಂ) ವಿಸ್ತೃತ; ಪತ್ತಳೆ<(ಪ್ರಾ) ಪತ್ತಲ<(ಸಂ) ಪತ್ರ.

೩೨. ಕೆಱಗಣ ಕೆಂದಳಿರ್–ಕೆಳಗಡೆಯ ಕೆಂಪು ಚಿಗುರು, ಪುದಿದ–ತುಂಬಿದ, ಮೇಗಣ ಪಂದಳಿರ್–ಮೇಲ್ಗಡೆಯ ಹಸುರು ಚಿಗುರು, ಒಂದಿದ ಒಂದು–ಸೇರಿದ ಒಂದು, ಕೆಯ್ಗಣ್ಮಿದ – ಅತಿಶಯವಾದ, ಪಸುರ್ಪುಮಂ – ಹಸುರು ಬಣ್ಣವನ್ನೂ, ಪೊಳೆವ ಕೆಂಪುಮಂ-ಹೊಳೆವ ಕೆಂಬಣ್ಣವನ್ನೂ, ಆಳ್ದಿರೆ-ಹೊಂದಿರಲು, ಪೇಟದೊಳ್-ಪ್ರೇಮದಲ್ಲಿ, ಕನಲ್ದು–ಕೆರಳಿ, ಉೞಿದ–ಬದುಕಿಕೊಂಡ, ವಿಯೋಗಿಯ–ವಿರಹಿಯ, ಅಳ್ಳಿರ್ದೆಯಂ–ನಡುಗುವ ಎದೆಯನ್ನು, ಆಯ್ದು–ಆರಿಸಿಕೊಂಡು, ಅದಂ–ಅದನ್ನು, ಆಟಿಸಲೆಂದೆ–ಬಯಸಲಿ ಎಂದೇ, ಮನ್ಮಥಂ-ಕಾಮನು, ಘಟಿಯಿಸಿ–ಘಟಿಯಿಸಿ, ಸೇರಿಸಿ, ಕೆಂಪು ವಾಸಿದವೊಲ್–ಕೆಂಪುಬಣ್ಣವನ್ನು ಹಾಸಿದ ಹಾಗೆ, ಮಾಮರಗಳ್–ಮಾವಿನ ಮರಗಳು, ಬಸಂತದೊಳ್ – ವಸಂತ ಕಾಲದಲ್ಲಿ, ಇರ್ದುವು – ಇದ್ದುವು, ಇಲ್ಲಿ 'ಆಟಿಸಲೆಂದೆ' ಎಂಬುದು ಬಹುಶಃ 'ಆಟರಲೆಂದೆ' ಎಂದಿದ್ದಿರಬಹುದು.

೩೩. ಮಲ್ಲಿಗೆ ಅರಳುವುದು : ಪಸುರ್ಪು–ಮೊಗ್ಗಿನ ಹಸುರುಬಣ್ಣ, ಪರಿಯೆ–ಜಿಡಲು, ಹೋಗಲು, ಬಲ್ಮುಗುಳೊಳ್–ಬಲಿತಮೊಗ್ಗಿನಲ್ಲಿ, ಬೆಳ್ಪಡರೆ–ಬಿಳಿಪಾಗಲು, ಪೊರೆದೋಱೆ–ಎಸಳ ಪದರಗಳು ತೋರಲು, ತೆಂಬೆರಲ್–ತೆಂಗಾಳಿ, ಪೊರೆಪೊರೆಯಂ ಸಡಿಲ್ಚೆ–ಪದರಪದರಗಳನ್ನು ಸಡಿಲಿಸಲು, ನಡು–ಮೊಗ್ಗಿನ ಮಧ್ಯಭಾಗ. ಪೊಂಗಿರೆ–ಉಬ್ಬಿರಲು, ಮಲ್ಲಿಗೆಗಳ್–ಮಲ್ಲಿಗೆಗಳು, ಬಸಂತದೊಳ್–ವಸಂತದೊಳ್, ವಸಂತ ಕಾಲದಲ್ಲಿ, ಬಿರಿದೊಡೆ–ಅರಳಿದರೆ, ನಲ್ಲರಂ ನೆನೆದ ನಲ್ಲರ–ಪ್ರಿಯರನ್ನು ನೆನೆದುಕೊಂಡ ಪ್ರಿಯರ, ಮೆಲ್ಲೆರ್ದೆಗಳ್–ಮೃದುವಾದ ಎದೆಗಳು, ಬಸಂತದೊಳ್-ವಸಂತ ಮಾಸದಲ್ಲಿ, ಬಿರಿದುವು–ಒಡೆದುವು ; ಅದೆಂತೊ–ಅದು ಹೇಗೊ? ಮಲ್ಲಿಗೆಗೆ–ಮಲ್ಲಿಗೆಯು ಬಿರಿತಕ್ಕೆ, ನಲ್ಲರ–ಪ್ರಣಯಿಗಳ, ಮೆಲ್ಲೆರ್ದೆ–ಮೃದುವಾದ ಹೃದಯ, ವೇಳೆಗೊಂಡುದೋ–ಸಮಯ ಪಾಲನವನ್ನು ಮಾಡಿತೋ?

ಜೋಳವಾಳಿ, ಲೆಂಕವಾಳಿಗಳಂತೆ ವೇಳೆವಾಳಿ ಎಂಬುದೂ ಉಂಟು. ಪ್ರಭು ಸತ್ತ ಕೂಡಲೇ ತಾನೂ ಸಾಯುವೆನೆಂದು ಪ್ರತಿಜ್ಞೆಮಾಡಿದ ಅವನ ಆಪ್ತನು ಸಾಯುವುದು ವೇಳೆವಾಳಿ; ಹಾಗೆಯೇ ಇಲ್ಲಿ ಮಲ್ಲಿಗೆ ಬಿರಿದುಪಕ್ಕೆ ಸರಿಯಾಗಿ ಅದೇ ಕಾಲದಲ್ಲೇ ನಲ್ಲರ ಎದೆಗಳು ಬಿರಿದುವು; ಇದು ಸಮಯಪಾಲನೆಯಾಗಿದೆ. ಹೀಗೆಯೇ ತನ್ನ ತಮ್ಮಂದಿರಲ್ಲಿ ಯಾರೊಬ್ಬರು ಸತ್ತರೂ ತಾನು ಸಾಯುವೆನೆಂದು ಧರ್ಮರಾಜ ಪ್ರತಿಜ್ಞೆ ಮಾಡಿರುತ್ತಾನೆ; “ಅನುಜರ್ ನಾಲ್ವರುಮಂ ಧರ್ಮನಂದನಂ ವೇಳೆಗೊಂಡು ಕಾವಂ”(ಪಂ. ಭಾ. ೧೩–೧೫). ವೇಳೆಯಂ=ಸಮಯವನ್ನು+ಕೊಳ್=ವೇಳೆಗೊಳ್.

೩೪. ನನೆಯ–ಹೂವಿನ, ಎಳಗಂಪಂ–ಎಳೆಯ ಕಂಪನ್ನು, ಎತ್ತಿಯುಂ–ಧರಿಸಿಯೂ, ಅಣಂ–ಸ್ವಲ್ಪವೂ, ನನೆನಾಱದೆ–ಹೂಗಂಪಿನಿಂದ ಗಮಗಮಿಸದೆ; ಅರಲ್ದ–ಅರಳಿದ, ಅನೇಕ ಕೋಕನದವನಂಗಳೊಳ್–ಅನೇಕ ತಾವರೆಯ ವನಗಳಲ್ಲಿ, ಸುೞಿದು–ಸುತ್ತಾಡಿ, ತಣ್ಣಸಮಾಗದೆ–ಶೀತಲವಾಗದೆ; ಕೂಡೆ–ಕೂಡಲೆ, ಬಂದಮಾವಿನ ಪೊಸ ಪೂವಿನೊಳ್–ಫಲಿತವಾದ ಮಾವಿನ ಮರದ ಹೊಸ ಹೂಗಳಲ್ಲಿ, ಪೊರೆದು–ಲಿಪ್ತವಾಗಿ, ಪೊಣ್ಮಿದ–ಹೊಮ್ಮಿದ, ತಂಪು–ಸುಗಂಧವು, ಮೊಗಂಗಳಂ–ಮುಖಗಳನ್ನು, ಚಳಿಲ್ಲನೆ–ಚಳಿಲೆಂದು ಎಂದರೆ ತಂಪು ತಂಪಾಗಿ, ಕೊಳೆ–ಆಕ್ರಮಿಸಲು, ಪೊಯ್ಯೆ–ಅಪ್ಪಳಿಸಲು, ವಸಂತಮಾಸದೊಳ್, ತೆಂಕಣ ಗಾಳಿ, ತೀಡಿಸುದು–ಬೀಸಿತು. ಈ ಪದ್ಯದ ಮೂರನೆಯ ಸಾಲಿನಲ್ಲಿ ಏನೋ ಕ್ಲೇಶವಿದೆ; ‘ಪೊಣ್ಮಿದೆ’ ಎಂದಿರಬೇಕೆಂದು ತೋರುತ್ತದೆ.

೩೫. ಮುಗುಳ್ಪದನಾದ–ಮೊಗ್ಗಿನ ಹದಕ್ಕೆ ಬಂದ, ಸಂಪಗೆ, ಮಡಲ್ತ–ಹಬ್ಬಿದ, ಆದಿರ್ಮುತ್ತೆ,–ಅದಿರ್ಮುತ್ತೆ ಎಂಬ ಹೂವು, ಮರಲ್ವರಲ್ದ–ಅರಳಿ ಅರಳಿದ, ಮಲ್ಲಿಗೆ, ನನೆಗರ್ಚಿ–ಹೂವನ್ನು ಕಚ್ಚಿ, ಕಾಕಳಿಯೊಳ್–ಇಂಪಾದ ಧ್ವನಿಯಲ್ಲಿ, ಆಣತಿಗೆಯ್ವ-ಆಲಾಪನೆಯನ್ನು ಮಾಡುವ, ಮದಾಳಿ-ಸೊಕ್ಕಿದ ದುಂಬಿ, ಪೋ-ಹೋಗು, ಪುಗಿಲ್ ಪುಗಿಲ್–ಹೊಗಿರಿ, ಪ್ರವೇಶಿಸಿರಿ, ಎನುತಿರ್ಪ–ಎನ್ನುತ್ತಿರುವ, ಪಕ್ಕಿ–ಕೋಗಿಲೆ ಹಕ್ಕಿ, ಮನಮಂ ಕವರುತ್ತಿರೆ–ಮನವನ್ನು ಸೂರೆಮಾಡುತ್ತಿರಲು, ಯೋಗಿಗಂ

ವಿಯೋಗಿಗಂ–ಋಷಿಗೂ ವಿರಹಿಗೂ, ವಸಂತಕ ಚಕ್ರವರ್ತಿಯಾ–ವಸಂತಕಾಲವೆಂಬ ಚಕ್ರವರ್ತಿಯು, ಪೊಕ್ಕ ಪುಗಿಲ್–ಹೊಕ್ಕ ಪ್ರವೇಶವು, ಇಂತು–ಹೀಗೆ, ಅರಿವಾಯ್ತು–ತಾಳಲಸಾಧ್ಯವಾಯಿತು.

**ವಚನ:** ಒಸಗೆ ವರ್ಪಂತೆ-ಉತ್ಸವ ಬರುವ ಹಾಗೆ ; ಅನ್ನವಾಸದೋಲಗದೊಳ್-ಭೋಜನಶಾಲೆಯ ಆಸ್ಥಾನದಲ್ಲಿ, ಸಭೆಯಲ್ಲಿ.

**೩೬.** ಇಲ್ಲಿಂದ ಬೇಡನ ಆಗಮನ ಮತ್ತು ಮೃಗಯಾ ಕ್ರೀಡೆಯ ವರ್ಣನೆ; ತೊಟ್ಟ–ಧರಿಸಿದ, ಎಕ್ಕವಡಂ–ಎಕ್ಕಡ, ಮರವಿಲ್–ಮರದಬಿಲ್ಲು ಅಥವಾ ದೊಡ್ಡ ಬಿಲ್ಲು, ಕಟ್ಟಿದ, ಪಣೆಕಟ್ಟು–ಹಣೆಯ ಕಟ್ಟು, ಬೇಂಟೆವಱಿ–ಬೇಟೆಯ ಡೋಲು, ದೊರೆಯೊಳ್-ಸಮಾನತೆಯಲ್ಲಿ, ಒಡಂಬಟ್ಟ–ಒಪ್ಪುತ್ತಿರುವ, ಅಸಿಯ–ತೆಳುವಾದ, ಸುರಗಿ–ಕತ್ತಿ, ದಳಿವದ–ಮೇಲು ಹೊದಿಕೆಯ, ತೊಟ್ಟ–ಧರಿಸಿದ, ಅಂಗಿಗೆ–ಅಂಗಿ, ಇವೆಲ್ಲ, ತನ್ನೊಳ್ ಮರೆ–ತನ್ನಲ್ಲಿ ಸೇರಿರಲು, ಬೇಂಟೆಯನೊರ್ವಂ–ಬೇಡರವನೊಬ್ಬನು.

**೩೭.** ಬಂದು, ಪೊಡೆವಟ್ಟು–ನಮಸ್ಕರಿಸಿ, ಕಂಡು–ನೋಡಿ, ಇಂತೆಂದಂ–ಹೀಗೆಂದನು ; ಪೊಲನ್–ಹೊಲಗಳು, ಉಡುಗಿಬಂದವು–ತೆನೆಕಾಳುಗಳನ್ನು ಬಿಡಿಸಿ ಗುಡಿಸಿಯಾಯಿತು, ಪುಲ್ ಉಡಿದುದು–ಹುಲ್ಲಿನೆಸಳು ಒಡೆಯಿತು: ಕಾಡುಂದಲ್–ಕಾಡು ಕೂಡ ನಿಜವಾಗಿಯೂ, ಎಲೆಯಿಕ್ಕಿ–ಎಲೆಬಿಟ್ಟು ಚಿಗುರಿ, ಘಳಿಲನೆ–ಬೇಗನೆ, ನಿಂದುವು–ನಿಂತುಕೊಂಡುವು, ಎತ್ತಲುಂ–ಎಲ್ಲೆಲ್ಲಿಯೂ, ಈಗಳ್–ಈಗ, ಮೃಗಂಗಳ್–ಪ್ರಾಣಿಗಳು, ತಣಿದುವು–ತೃಪ್ತಿಪಟ್ಟುವು, ಉಡುಗು: "ನಾನಾವಿಧ ಧಾನ್ಯಂಗಳಂ ಪದನಱಿದುಡುಗುವ ಕಣಂಮಾಡುವ" (ಆದಿಪು. ೬–೭೭ವ.).

**೩೮.** ಸುಟಱಿಯದು ಗಾಳಿ–ಗಾಳಿ ಬೀಸುವುದಿಲ್ಲ: ಮೃಗಂ–ಮೃಗಗಳು, ಕೆಯ್ವಳಿಗಳ-ಹೊಲದ ದಾರಿಗಳಲ್ಲಿರುವ, ಮೇತದೊಳೆ–ಮೇವಿನಲ್ಲಿಯೇ, ತಣಿದಪುವು-ತೃಪ್ತಿಪಡುತ್ತವೆ: ಪಂದಿಗಳುಂ–ಹಂದಿಗಳು ಕೂಡ, ಅದಂ–ವಿಶೇಷವಾಗಿ, ಪಱಪಿರಿಕ್ಕಿದುವು–ಹಳೆಯ ಕೂದಲುಗಳನ್ನು ಬೀಳಿಸಿಕೊಂಡವು : ಅವನಿಪತೀ–ರಾಜನೇ, ಪಱು–ಕಾಡು, ಪರಿವಾಡಲ್–ಓಡಾಡಲು, ಕರಂ–ಅತಿಶಯವಾಗಿ, ಬೆಡಂಗು–ಸೊಗಸು.

**೩೯.** ಈ ಪದ್ಯ ಸರಿಯಾಗಿ ಅರ್ಥವಾಗುವಂತಿಲ್ಲ: ಬರವಂ–ಮೃಗಗಳ ಬರವನ್ನೂ, ಕಾಡಂ–ಕಾಡನ್ನೂ ಎಂದರೆ ಕಾಡಿನ ಸ್ವರೂಪವನ್ನೂ, ಬೇಗೆಗೆ-ಬೇಗೆಗೆ (?), ಕರಮಱಿದು–ವಿಶೇಷವಾಗಿ ತಿಳಿದು; ಎರಡುಂ ಮೃಗಂಗಳುಂ–ಎರಡು ಜಿಂಕೆಗಳೂ ತಣ್ಣುಱಿಲೊಳ್–ತಂಪಾದ ಮರಗಳ ತೋಪಿನಲ್ಲಿ, ನೆರೆದು–ಸೇರಿ, ಒಡವಂದವು–ಜೊತೆಗೂಡಿ ಬಂದುವು; ತಪ್ಪದು-ಇದು ತಪ್ಪುವುದಿಲ್ಲ: ಅರಿಕೇಸರಿ–ಅರ್ಜುನನೇ, ಕಂಡು–ನೋಡಿ, ಕೋಳ್ಪಂಗಂ–ಮೃಗವು ಸಿಕ್ಕಿಬೀಳುವ ರೀತಿಯನ್ನು, ಮೆಚ್ಚುವಯ್–ಮೆಚ್ಚುತ್ತೀಯೆ.

**೪೦.** ಈ ಪದ್ಯವೂ ಸರಿಯಾಗಿ ಅರ್ಥವಾಗುವುದಿಲ್ಲ ; ಕಾಡೊಡಮೆ–ಕಾಡಿನ ವಸ್ತು, ವೇಳೆ–ಕಾಲ, ಸಲೆ– ಚೆನ್ನಾಗಿ, ಕೆಯ್ಗೂಡಿದುದೆನೆ – ಕೈಗೂಡಿತೆನ್ನಲು,

ನೆಲದೊಳಿರ್ದ–ನೆಲದಲ್ಲಿದ್ದ, ನೆಲ್ಲಿಯಕಾಯುಂ–ನೆಲ್ಲಿಕಾಯಿ ಕೂಡ, ನೋಡ–ನೋಡು, ನೆಲಮುಟ್ಟಲ್–ನೆಲವನ್ನು ಸೋಕಲು, ಅಱ್ತಿಯೊಳ್–ಪ್ರೀತಿಯಲ್ಲಿ, ಆಡುವೊಡೆ–ಆಡುವ ಪಕ್ಷದಲ್ಲಿ, ಈ ದೆವಸಂ–ಈ ದಿವಸವು, ಬೇಂಟೆಯದಿವಸಂ–ಬೇಟೆಯಾಡುವ ದಿನ, ಅಲ್ತೆ–ಅಲ್ಲವೇ? ಇದರ ತಾತ್ಪರ್ಯವೇನೋ?

**ವಚನ** : ಬೇಂಟೆ ಜಾಱಲ್ಲದೆ–ಬೇಟೆಯ ವಿಷಯವಾಗಿ ಸುಳ್ಳು ಸಂದೇಹಗಳನ್ನು ಹೇಳುವುದು ಬೇಟೆಜಾಱು; ಅದಲ್ಲದೆ, ಎಂದರೆ ನಿಜವಾದ ಬೇಟೆಯ ಮಾತುಗಳನ್ನು, ಬಿನ್ನವಿಪೆಂ–ಹೇಳುತ್ತೇನೆ. ‘ಜಾಱು’ ಶಬ್ದಕ್ಕೆ ಸುಳ್ಳು, ಸಂದೇಹ ಎಂಬರ್ಥಗಳಿರಬಹುದೆಂದು ಕೆಳಗಣ ಪ್ರಯೋಗಗಳು ಸೂಚಿಸುತ್ತವೆ; (೧) ಇವು ಪಾದದೊಳ್ ತಳದೊಳ್ ತೋಱೆ ಜಾಱೇಂ....ಪುಣ್ಯಾಹವಂ ತಾನೆನಿಕ್ಕುಂ (ಲೋಕೋಪಕಾರ ೧೧–೧೪); ನೀಱೆಯರ ಮನಮನೆಱಗಿಸೆ ಜಾಱೇಂ ಜವ್ವನದಿನಮರನೆಸೆದಂ ನಿಸದಂ (ಪಾರ್ಶ್ವಪು. ೫–೧೦೨); ಜಾಱೇಂ ಮುನಿ ಮನಮಂ ಪದಿನಾಱೆಡೆಗೆ ಪಸರಿಸುತ್ತುಮಿರ್ದೊಡಂ ಚಿತ್ರಂ ಮೆಯ್ವೋಱೆತ್ತು (ಅದೇ); ಜಾಱಲ್ತು ಮುಕ್ತಿಪಥಮಂ ತೋಱಲ್ಕಱೆದಪರಿ ಜೈನರಲ್ಲದವರವರಂ ದೂಱಲ್ಕೆವೇಡ” (ಸಮುಪ. ೧೪–೧೯).

೪೧. ಇಲ್ಲಿಂದ ಮುಂದಕ್ಕೆ ಮೃಗಯಾ ವಿನೋದಕ್ಕೆ ಸಂಬಂಧಿಸಿದ ಅನೇಕ ಸಾಂಕೇತಿಕ ದೇಸಿ ಶಬ್ದಗಳು ಪ್ರಯೋಗವಾಗಿವೆ; ಅವುಗಳ ಸರಿಯಾದ ಅರ್ಥ ತಿಳಿಯುವಂತಿಲ್ಲ; ಆಡಲ್–ಬೇಟೆಯಾಡುವುದಕ್ಕೆ, ಆಡಿಸಲ್–ಆಡಿಸುವುದಕ್ಕೆ, ಪಾಱಿಯಂ–ಕ್ರಮವನ್ನು, ನಿಱಿಸಲುಂ – ಸ್ಥಾಪಿಸುವುದಕ್ಕೂ, ಪರಿಗೊಳಲ್ – ಓಡುವುದಕ್ಕೂ, ತೊವಲಿಕ್ಕಲ್–ಚಿಗುರನ್ನು ಹಾಕುವುದಕ್ಕೂ, ಒಳಗಂಬರಲ್–ಒಳಗೆ ಬರುವುದಕ್ಕೂ, ಕಾಡಬೇಲಿಯುಂ–ಕಾಡಿನ ಬೇಲಿಯನ್ನು, ಎಲ್ಲೆಯನ್ನು, ಮಾರ್ಕಾಡಂ–ಎದುರುಗಾಡನ್ನು, ಅಱಿಯಲುಂ–ತಿಳಿವುದಕ್ಕೂ, ಮೂಡಿಗೆ – ಬತ್ತಳಿಕೆ, ಕಕ್ಕಂಬಂ–?, ಸುೞಿಸಿ–ಸುಳಿಯುವಂತೆಮಾಡಿ, ಜೊಂಪಂ-?, ಬೀಡು ಬಿಡುವಿಂಬು-ಬೀಡನ್ನು ಬಿಡಲು ತಕ್ಕಸ್ಥಳ, ಅವಕಾಶ; ಕದಳಿ–ಬಾಳೆ, ತೆಂಗಿನ–ತೆಂಗಿನ ಮರಗಳು, ತಾಣಂ–ಸ್ಥಳ; ಜಾಣಿಂ–ಚಮತ್ಕಾರದಿಂದ, ನೀರ್ದಾಣಂ–ನೀರಿನ ಎಡೆ, (ಪ್ರಾಣಿ ನೀರು ಕುಡಿಯಲು ಬರುವ ಜಾಗ), ಎಂದೆಡೆಯಱಿದುಂ–ಎಂದು ಜಾಗಗಳನ್ನು ತಿಳಿದುಕೊಂಡೂ, ಮಾಡಲ್ ಮಾಡಿಸಲ್–ಮಾಡುವುದಕ್ಕೂ ಮಾಡಿಸುವುದಕ್ಕೂ, ಪಡೆಮೆಚ್ಚೆ–ಸೈನ್ಯ ಮೆಚ್ಚಲು, ನೀಂ ಬಲ್ಲೆ–ನೀನು ತಿಳಿಯುವೆ, ಹರಿಗ–ಅರ್ಜುನನೇ, ನೀಂ ಮೆಚ್ಚೆ–ನೀನು ಮೆಚ್ಚಲು, ಆನೆಬಲ್ಲೆಂ–ನಾನೇ ತಿಳಿದಿರುವೆನು, ಕೇಳ್–ಕೇಳು.

೪೨. ಮೃಗದ–ಪ್ರಾಣಿಯ, ಒಲವರುಮುಮಂ–ಯಾವುದರಲ್ಲಿ ಅದಕ್ಕೆ ಹೆಚ್ಚು ಪ್ರೀತಿ, ಪಕ್ಷಪಾತ ಎಂಬುದನ್ನೂ, ಅರಸನ ಬಗೆಯುಮಂ–ರಾಜನ ಇಷ್ಟವನ್ನೂ, ಅಱಿದು–ತಿಳಿದು, ಅಲಸದೆ–ಆಯಾಸಪಡದೆ, ಎಳಸದೆ–ಬಯಸದೆ, ಓಲಗಿಸಲ್–ಸೇವೆಮಾಡಲು, ನೆಟ್ಟನೆ–ನೇರಾಗಿ, ಬಲ್ಲನುಳ್ಳೊಡೆ–ತಿಳಿದವನಿದ್ದರೆ, ಗುಣಾರ್ಣವ–ಅರ್ಜುನನೇ, ಬೇಂಟೆಕಾಱನೋಲಗಕಾಱಂ–ಬೇಟೆಗಾರನೂ, ಸೇವಾಳುವೂ, ಅವನಲ್ತೆ–ಅವನೇ ಅಲ್ಲವೆ? ಹೌದು.

೪೩. ಮೃಗಮಂ-ಪ್ರಾಣಿಯನ್ನು (ಎಂಥ ಪ್ರಾಣಿ ಎಂಬುದನ್ನು), ಗಾಳಿಯಂ-ಕಿಗ್ಗಾಳಿ ಮೇಗಾಳಿಗಳನ್ನು, ಎಂದರೆ ಗಾಳಿ ಬೀಸುವ ದಿಕ್ಕನ್ನು, ಇರ್ಕೆಯಂ-ಪ್ರಾಣಿ ಇರುವೆಡೆಯನ್ನು, ಪಕ್ಕೆಯಂ-ಮಲಗುವ ಎಡೆಯನ್ನು, ಹಕ್ಕೆಯನ್ನು, ಗಣಿದಮಂ-ಸಂಖ್ಯೆಯನ್ನು, ಕಂಡಿಯಂ-ನುಸುಳುವ ಕಂಡಿಗಳನ್ನು, ಮಾರ್ಕಂಡಿಯಂ-ಎದುರುಗಂಡಿಯನ್ನು, ಪುಗಿಲಂ - ಪ್ರಾಣಿಯ ಪ್ರವೇಶವನ್ನು, ಪೋಗಂ - ಹೋಗುವುದನ್ನು, ಬಾರಿಯಂ-?, ಸನ್ನೆಯಂ-ಇಂಥ ಮೃಗಕ್ಕೆ ಇಂಥ ಸಂಜ್ಞೆಯೆಂಬುದನ್ನು, ನೂಱುವ-? ಅಮರ್ಚುವ - ಸೇರುವ, ನಿಲ್ವೆಡೆಯಂ - ನಿಲ್ಲುವ ಸ್ಥಳವನ್ನು, ಬಗೆಯಂ-ಪ್ರಾಣಿಗಳ ಮನವನ್ನು, ತೆಗೆಯಂ-ಹಿಂಜರಿಯುವದನ್ನು, ಅಲ್ಲಾಟಮಂ-ಅಲುಗಾಡುವಿಕೆಯನ್ನು, ಕಾಟಮಂ-ಹಿಂಸೆಯನ್ನು, ನೋವುಮಂ-ಯಾತನೆಯನ್ನು, ಸಾವುಮಂ-ಸಾವನ್ನು, ಎಲ್ಲಂದದಿಂ-ಎಲ್ಲಾ ರೀತಿಗಳಿಂದ, ಬಗೆವಾಗಳ್ - ಭಾವಿಸಿದಾಗ, ಅರಸರೊಳೆಲ್ಲಂ-ರಾಜರಲ್ಲೆಲ್ಲ, ನೀಂ ಬಲ್ಲೆ-ನೀನು ತಿಳಿಯುವೆ, ಬೇಂಟೆಕಾಱರೊಳೆಲ್ಲಂ-ಬೇಟೆಗಾರರಲ್ಲೆಲ್ಲ, ಆನೆ ಬಲ್ಲೆಂ-ನಾನೇ ತಿಳಿದಿರುವೆನು, ಕೇಳ್-ಕೇಳು.

ವಚನ: ನೆಲನುಂ - ನೆಲದ ತಗ್ಗುದಿಣ್ಣೆಗಳನ್ನೂ; ಕೈಯುಂ - ಕೈಯನ್ನೂ (ಮುಂಗಾಲುಗಳ ಗುರುತುಗಳನ್ನೂ); ಒಳಗಂ ಬರಲ್-ಒಳಕ್ಕೆ ಹೋಗಲು; ಪೆರ್ವೇಂಟೆಯಂದಂ-ಇದು ಪೆರ್ವೇಂಟೆ (ಹೆಬ್ಬೇಟೆ) ಎಂಬ ಬೇಟೆಯ ರೀತಿ; ದೀಪದ ಬೇಂಟೆಯಂ-ದೀಪಕಮೃಗದ ಆಕರ್ಷಣೆಯನ್ನು ಒಡ್ಡಿಬಂದ ಪ್ರಾಣಿಗಳನ್ನು ಬೇಟೆಯಾಡುವುದು; ಕಟಿಪುಂ-ದೂರ ಹೋಗುವುದು, ಉಟಿಪುಂ-ಇರುವುದು; ಕಾಪುಂ-ರಕ್ಷಣೆ; ಮೇಪುಂ-ಮೇವು; ತೋಡುಂಬೀಡುಂ-ಬಾಣ ಸಂಧಾನ, ಬಾಣ ಬಿಡುವುದು; ದೆಸೆ-ದಿಕ್ಕು, ಕೊಸೆಯುಂ-ಮೃಗಗಳು ಕಾಮದಿಂದ ನೆರೆಯುವುದು ("ಕೊಸೆ-ನಿಧುವನೇ"); ಬೆಚ್ಚುಂ- ಭಯಪಡುವುದು; ಪೋಗುಂ ಮೇಗುಂ-ಹೋಗನ್ನೂ ಮೇಗನ್ನೂ; ಕಡಂಗಲುಂ ಕಡಂಗಿಸಲು-ಉತ್ಸಾಹ ಪಡುವುದಕ್ಕೂ, ಉತ್ಸಾಹಪಡಿಸುವುದಕ್ಕೂ; ಮೂಱುಕೊಂಬುಮಂ-ಮೂರು ಸಂಕೇತ ಸ್ಥಾನಗಳನ್ನು: ಆಱುನಾಪೋಗುಮಂ-ಆರು ಬಗೆಯಾದ ಪ್ರಾಣಿ ಕಾಮಕ್ರೀಡೆಗಳನ್ನು; ಮೂಱುರವು-ಮೂರು ಬಗೆಯ ಸ್ಥಿತಿ; ನಂಬಿದ ಬರವುಮಂ-ಏನೂ ಅಪಾಯವಿಲ್ಲವೆಂದು ಪ್ರಾಣಿ ನಂಬಿ ಬರುವುದನ್ನು; ನಂಬದ ಬರವು-ಸಂದೇಹದಿಂದ ಬರುವುದು. ಮಲೆಯುದುದಂ ಮಲೆಯಿಸಲುಂ-ಕೆರಳದುದನ್ನು ಕೆರಳಿಸಲು; ಎಡೆಯಾಗದ-ನಡುವೆ ಸಿಕ್ಕಿಕೊಳ್ಳದ; ಪಣಮುಡಿದರಂತೆ-ಜೂಜಿನಲ್ಲಿ ಒತ್ತೆ ಸೋತವರ ಹಾಗೆ; ಅಡ್ಡಂ ಮಾಡಲುಂ-ಅಡ್ಡಗಟ್ಟಲೂ; ಕುಮಾರ ಸ್ವಾಮಿಯ-ರಾಜಕುಮಾರ ಪ್ರಭುಗಳ, ಅಥವಾ ಷಣ್ಮುಖನ

೪೪. ಬರೆದಂತೆ-ಚಿತ್ರಿಸಿದ ಹಾಗೆ, ಬೆನ್ನ ಕರ್ಪು-ಬೆನ್ನಿನ ಕಪ್ಪು ಮಚ್ಚೆ, ಎಸೆದಿರೆ-ಸೊಗಸಾಗಿರಲು, ಸೂಚಮನುರ್ಚಿ-ಹುಲ್ಲಿನ ಊಬುಗಳನ್ನು ಮುರಿದು, ಪುಲ್ಲೆಗೆ-ಹೆಣ್ಣು ಜಿಂಕೆಗೆ, ಆಟಿಸಿ-ಬಯಸಿ, ಮಲೆತರ್ಪ-ಔದ್ಧತ್ಯದಿಂದ ಬರುವ, ಎರಲೆಯ-ಗಂಡು ಜಿಂಕೆಯ, ಸೋಲಮಂ-ಮೋಹವನ್ನು, ಅಱ್ತಿಯೊಳ್-ಪ್ರೀತಿಯಲ್ಲಿ,

ನಿಂದು ನೋೞ್ಪುದು-ನಿಂತು ನೋಡುವುದು, ಅರಿಕೇಸರಿ-ಅರ್ಜುನನೇ, ಒಂದು ಅರಸಪ್ರಿೞೇ-ಒಂದು ರಾಜ ವಿನೋದವಲ್ಲವೇ ? ಹೌದು. ಮೂವತ್ತೊಂದು ಬಗೆಯಾದ ಬೇಟೆಗಳಲ್ಲಿ ಇದು 'ಕಾಮಜಾ' ಎಂಬ ಬೇಟೆ.

೪೫. ಪದಮುಮಂ-ಕಾಲಡಿಯನ್ನೂ, ಇಂಬುಮಂ-ಅದರ ವಿಸ್ತಾರವನ್ನೂ, ಅಣಂ-ಸ್ವಲ್ಪವೂ, ಅಱಿಯದುದು-ತಿಳಿಯದಿರುವುದು, ಅದು, ಏವುದು ಬಡ್ಡ-ವಸು ಪೌಢಿಮೆ ; ಜೆಳ್ಮಿಗಂ-ಅಂಜುವ ಮೃಗ, ಪಜ್ಜೆದಲ್-ಅದರ ಹೆಜ್ಜೆ ನಿಜವಾಗಿಯೂ, ಎಂಬುದಂ ಎರಡುಮಂ-ಎಂಬ ಎರಡನ್ನೂ, ಅಱಿವಾತನೆ-ತಿಳಿಯುವವನೇ, ಚದುರಂ-ಜಾಣನು ; ಚದುರಂಗೆ-ಜಾಣನಿಗೂ ತಿಳಿಯಲಾಗದ, ಬಡ್ಡವಜ್ಜೆಗಳ್-ಪೌಢಿಮೆಯನ್ನುಳ್ಳ ಹೆಜ್ಜೆ ಗುರುತುಗಳು, ಒಳವೇ-ಉಂಟೇ? ಇಲ್ಲ.

**ವಚನ** : ಪಂದಿವೇಂಟೆಯ ಮಾತಂ-ಕಾಡುಹಂದಿಯನ್ನು ಬೇಟೆಯಾಡುವ ವಿಷಯವನ್ನು ;

೪೬. ನೆಲನಂ – ನೆಲವನ್ನು, ನಿಱುಗೆಯಂ – ನಿಂತೆಡೆಯನ್ನು, ನಡೆವೊಂದು ಪದಮುಮಂ-ನಡೆಯುವ ಒಂದು ರೀತಿಯನ್ನು, ಸೋವಳಿ-ಅಟ್ಟುವಿಕೆಯನ್ನು, ಮೇವಳಿ-ಮೇಯುವಿಕೆಯನ್ನು, ಬಿಸುವಳಿಯಂ-ಒಟ್ಟಾಗುವಿಕೆಯನ್ನು, ಬಲಮಂ-ಶಕ್ತಿಯನ್ನು, ಶಕುನಮಂ-ಶಕುನ ಸಂಕೇತಗಳನ್ನು, ಒಳ್ಳಿತ್ತುಪಾಯಮಂ-ಒಳ್ಳೆಯ ಉಪಾಯವನ್ನು, ಪಿಡಿವಂದು-ಹಿಡಿಯುವಾಗ, ಈತನೆ-ಇವನೇ, ವಂದಿ-ಹಂದಿಯು, ಕುರುಡು-ಕುರುಡಾದದ್ದು, ಕುಂಟು-ಕುಂಟಾದದ್ದು, ಎಂದು, ಅಲಸದೆ-ತಡವಿಲ್ಲದೆ, ಅಱಿದು-ತಿಳಿದು, ಇಂತು, ಬಲ್ಮೆಗೆ ಬೆರಲೆತ್ತಿ-ಹೀಗೆ ತನ್ನ ತಿಳಿವಿಗೆ ಬೆರಳೆತ್ತಿ, ಕೈವಾರಿಸಿ ; ಪಜ್ಜೆಯಂ-ಹೆಜ್ಜೆಯ ಗುರುತುಗಳನ್ನು, ನೆಲೆಗಳಂ-ವಸತಿಗಳನ್ನು, ಕಿಡಲೀಯದೆ-ಕೆಡಲು ಬಿಡದೆ, ಕೆಡಿಸದೆ ; ಸಿಲೆಯ ಮೇಲಾದೊಡಂ-ಕಲ್ಲಿನ ಮೇಲೆ ಆದರೂ, ಶಕುನಮಂ ನಿಱಿಸಂತೆ-ಸಂಕೇತವನ್ನು ಸ್ಥಾಪಿಸುವ ಹಾಗೆ, ನೀಂ ಮೆಚ್ಚಲುಂ-ನೀನು ಮೆಚ್ಚುತ್ತಿರಲು, ಪಂದಿಯಂ-ಕಾಡುಹಂದಿಯನ್ನು, ನಿಱಿಸುವೆಂ-ನಿಲ್ಲಿಸುತ್ತೇನೆ. ಇಲ್ಲಿ ಅರ್ಥವಿಶದತೆ ಇಲ್ಲ.

**ವಚನ** : ಅಸಿಯ ನಡುವುಂ-ತೆಳುವಾದ ಹೊಟ್ಟೆಯೂ ; ಅಗಲುರಮುಂ-ಅಗಲವಾದ ಎದೆಯೂ ; ತಳ್ತು ಕಟ್ಟಿದ ಕಿವಿಯುಂ-ಸೇರಿಸಿ ಕಟ್ಟಿದ ಕಿವಿಯೂ ಎಂದರೆ ನೇರಾಗಿ ನಿಂತಿರುವ ಕಿವಿಗಳೂ ; ಕವಿದ ಪುರ್ಬುಂ-ಕೆಳಕ್ಕೆ ಬಾಗಿದ ಹುಬ್ಬುಗಳೂ : ಜಾತ್ಯಶ್ವದಂತೆ-ಒಳ್ಳೆ ಜಾತಿಯ ಕುದುರೆಯ ಹಾಗೆ; ಕೋಳಿಕಾಳಿಕಾಜನಂತೆ-ವಾಮಾಚಾರದ ಶಾಕ್ತೇಯ ಮತದ ವಂಚಕನಂತೆ (ಕೌಳಿಕ+ಆಳಿಕಾಜ ಎಂದು ಪಾಠವಿರಬಹುದು), ಬಱಿಯಱಿವಿಡಿದು-ಕುಲದ, ಮಾರ್ಗದ, ಜ್ಞಾನವನ್ನು ಹಿಡಿದು ; ತುಂಬಿನ ನೀರಂ-ತೂಬಿನ ನೀರನ್ನು ; ಕೋಳಂಪಟ್ಟು=ಸುಲಿಗೆಗೆ ಒಳಗಾಗಿ ; ಒತ್ತರದಂತೆ-ಒತ್ತರದ (?) ಹಾಗೆ ; ಆಳುರ್ವಂತೆ – ಹರಡುವಂತೆ, ಅಳುರ್ದುಕೊಳ್ವುದು – ಹರಡಿಕೊಳ್ಳುವುದು ; ಕಿಱುವೇಂಟೆಯ ನಾಯ್-ಕಿಱು ಬೇಟೆಯೆಂಬ ಬೇಟೆಯಲ್ಲಿ ಭಾಗವಹಿಸುವ ನಾಯಿ : ಕೊಂಡುಂಜಾಱಿಯುಂ-? ಪರಿಯಿಸಲ್-ಬಿಡುವಂತೆ ಮಾಡಲು : ಬಲ್ಮೆಗಂ-ಶಕ್ತಿಗೂ ಅಥವಾ ಜ್ಞಾನಕ್ಕೂ ; ಉಬಿದ ಬೇಂಟೆಯಂ-ಮಿಕ್ಕ ಬೇಟೆಗಳನ್ನು

೪೭. ಪಸಿವು–ಹಸಿವು, ದೊರೆಕೊಳ್ಗುಂ–ಉಂಟಾಗುತ್ತದೆ; ಉಣಿಸುಗಳ್–ಆಹಾರಗಳು, ಇನಿಕೆಯ್ಗುಂ–ರುಚಿಯಾಗುತ್ತವೆ; ಆವಂದದೊಳ್–ಯಾವ ರೀತಿಯಲ್ಲಿ, ಕನಲ್ದು-ಕೆರಳಿ, ಅಡಪೆಯ್ಯಂ-ಉಂಟಾದ ಬೊಜ್ಜನ್ನು, ಅಸಿಯನಾಗಿಪ್ಪುದು-ಕೃಶವಾಗಿಸುತ್ತದೆ; ಉಱುದುವಪ್ಪುವು–ಉಳಿದುವೂ ಆಗುತ್ತದೆ; ಮೃಗದಮೆಯ್ಯೊಳ್–ಪ್ರಾಣಿಯ ಮೈಯಲ್ಲಿ, ಬಗೆಗೊಳಲಪ್ಪುದು–ಅವುಗಳ ಮನವನ್ನು ತಿಳಿವುದಾಗುತ್ತದೆ; ನಿಸದಂ–ನಿಶ್ಚಯವಾಗಿಯೂ, ಬಲ್ಲಾಳ–ಶೂರನ, ಬಿಲ್ಬಲ್ಮೆ–ಬಿಲ್ಲಿನ ಪ್ರೌಢಿಮೆ, ಎಸೆವುದು–ಪ್ರಕಾಶಿಸುತ್ತದೆ; ಇಸುತೆ–ಬಾಣವನ್ನು ಪ್ರಯೋಗಿಸುತ್ತಾ, ತನ್ನೊಳಂ–ತನ್ನಲ್ಲಿಯೂ, ಲೇಸಪ್ಪುದು–ಒಳ್ಳೆಯದಾಗುತ್ತದೆ; ಜೇಂಟೆಯಂ–ಬೇಟೆಯನ್ನು, ಅಱಿಯದೆ–ತಿಳಿಯದೆ, ಬಸನಮೆಂದು–ವ್ಯಸನವೆಂದು, ಏಳಿಸುವರ್–ನಿಂದಿಸುತ್ತಾರೆ: ಜೇಂಟೆಯೆ–ಬೇಟೆಯೇ, ಬಿನದಂಗಳ–ವಿನೋದಗಳ, ಅರಸಲ್ತೇ–ರಾಜನಲ್ಲವೇ? ಎಲ್ಲ ವಿನೋದಗಳಲ್ಲೂ ಮೃಗಯಾ ವಿನೋದವೇ ಶ್ರೇಷ್ಠ. ಇದನ್ನು 'ಮೇದಶ್ಛೇದ ಕೃಶೋದರಂ' ಎಂದು ಆರಂಭವಾಗುವ ಕಾಳಿದಾಸನ ಪದ್ಯದೊಡನೆ (ಅಭಿಜ್ಞಾನ ಶಾಕುಂತಲ ೨–೪) ಹೋಲಿಸಬಹುದು.

**ವಚನ:** ಮೃಗವ್ಯಾಯಾಮಕಾರ್ತಿಕೇಯಂ–ಮೃಗಗಳಿಗೆ ಕಸರತ್ತು ಮಾಡಿಸುವುದರಲ್ಲಿ ಷಣ್ಮುಖನಾದವನು, ಅರಿಕೇಸರಿ–ಅರ್ಜುನ; ತೊವಲನಿಕ್ಕು–ಚಿಗುರನ್ನು ಹಾಕು; ಪರಿಯ ತಾಣಕ್ಕೆ–ನುಗ್ಗುವ ಸ್ಥಳಕ್ಕೆ; ಪೆಱಗಣ–ಹಿಂದುಗಡೆಯ, ಉಲಿಪಿಂಗಂ–ಸದ್ದಿಗೂ, ಉಳ್ಳೊಳಕ್ಕಂ–ಗದ್ದಲಕ್ಕೂ, ಗೆಂಟಾಗಿ–ದೂರವಾಗಿ; ಜೇಂಟೆಕಾಱನ ಸಮೆದ–ಬೇಟೆಗಾರನು ಮಾಡಿದ; ಗುಣಣೆಯ–ನೃತ್ಯಶಾಲೆಯ; ಬಾಣಸಿನ–ಅಡಿಗೆಯ ನನೆಯ ಪಂದರುಮಂ–ಹೂವಿನ ಚಪ್ಪರವನ್ನೂ: ತಳಿರ ಕಾವಣಂಗಳುಮಂ–ಚಿಗುರಿನ ಹಂದರಗಳನ್ನೂ; ಮಾಡದ ನೆಲೆಯ ಚೌಪಳಿಗೆಗಳುಮಂ–ಅಂತಸ್ತುಗಳ ಮನೆಯ ತೊಟ್ಟಿಗಳನ್ನೂ; ಇಂಬಪ್ಪಂತಿರೆ–ಅನುಕೂಲವಾಗುವ ಹಾಗೆ: ಕೌಂಗಿನ–ಅಡಕೆಯ (ಮರದ), ಮೈಂದವಾಱೆಯುಮಂ–ಮಹೇಂದ್ರ ಬಾಳೆಯನ್ನೂ, ತೊವಲ್ವೆರಸು ನಟ್ಟ–ಚಿಗುರಿನ ಸಮೇತವಾಗಿ ನಾಟಿದ; ಬಿಟ್ಟುಳಿಯ–? ಕಕ್ಕುಂಬ–? ತೊಡಂಬೆಯ–ಗೊಂಚಲಿನ, ಮೂಡಿಗೆಯ–ಬತ್ತಳಿಕೆಯ, ಕವಳಿಕೆಯ–ಬಾವುಟದ, ಕಾಂಡಪಟಂಗಳುಮಂ–ತೆರೆಗಳನ್ನೂ; ಪಡಿಗಳಂ–ಬಾಗಿಲುಗಳನ್ನು, ಅಮರ್ಚಿ–ಸೇರಿಸಿ; ತಿಣ್ಣಮಿರಿಸಿ–ಅಧಿಕ ಸಂಖ್ಯೆಯಲ್ಲಿಟ್ಟು, ನೇಣುಮಂ–ಹಗ್ಗವನ್ನು; ಜೇಂಟೆವಸದನಂಗೊಂಡು–ಬೇಟೆಯ ವೇಷವನ್ನು, ಅಲಂಕಾರವನ್ನು ಮಾಡಿಕೊಂಡು; ಕಂಡಿಯ–ಮೃಗವು ಹೊಗುವ ಹೊರಗೆ ಬರುವ ಸ್ಥಳ; ಪುಗಿಲ ಪುಲ್ಲೆಯ–ಹೊಗುವ ಜಿಂಕೆಯ, ಮೊದಲುರಮುಮಂ–ಎದೆಯ ಮೊದಲ ಭಾಗವನ್ನೂ; ಬಲ್ಮೆಯುಂ–ಪ್ರೌಢಿಮೆಯನ್ನು, ಕೌಶಲವನ್ನು.

೪೮. ಮುಂದಣ ಮಿಗಮಂ ಕಱಿಪದೆ–ಮುಂದಿನ ಜಿಂಕೆಯನ್ನು ಸಾಯಿಸದೆ, ಸಂದಿಸಿ–ಸೇರಿಕೊಂಡು, ಬಱಿಗೊಳ್ವ–ಅದರ ಹಿಂದೆ ಹೋಗುವ, ಮಿಗಮುಮಂ–

ಜಿಂಕೆಯನ್ನೂ, ಕಟಿಪದೆ-ಸಾಯಿಸದೆ, ತಾನೊಂದು ಅಳವಿದಪ್ಪದೆ-ತಾನು ಒಂದು ಅಳತೆಯನ್ನು ತಪ್ಪದೆ, ಎಚ್ಚು-ಬಾಣಪ್ರಯೋಗ ಮಾಡಿ, ಬಲಿಂದಮನಿಂ-ಶ್ರೀಕೃಷ್ಣ ನಿಂದ, ಬಿಲ್ಲ ಬಲ್ಮೆಯುಂ-ಬಿಲ್ವಿದ್ಯೆಯ ಕೌಶಲವನ್ನು, ಪೊಗೞಿಸಿದಂ-ಹೊಗಳುವ ಹಾಗೆ ಮಾಡಿದನು.

**ವಚನ:** ಪೆರ್ಚಿ-ಹೆದರಿ; ಪೊಳೆವುಲ್ಲೆಗಳುಂ-ಹೊಳೆಯುವ ಚಿಗರಿಗಳನ್ನು; ಎಯ್ಗಳುಮಂ-ಮುಳ್ಳು ಹಂದಿಗಳನ್ನೂ; ತಡಂಮೆಟ್ಟಿ-ಉದ್ದವಾದ ಹೆಜ್ಜೆ ಹಾಕಿ; ಕಡವಿನ-ಸಾರಂಗದ; ಮರೆಯು-ಹುಲ್ಲೆಗಳ;

೪೯. ತಮಗೆ-ಸಿಂಹಗಳಿಗೆ, ಅಸುಕರಂಗಡ-ಅತಿ ರಭಸವಲ್ಲವೆ, ಅತಿಭಾಸುರ-ಅತಿ ಪ್ರಕಾಶಮಾನವಾದ, ಮೃಗರಾಜ-ಪ್ರಾಣಿಗಳಿಗೆ ರಾಜ, ಎಂಬ, ನಾಮಮುಂ ಗಡಂ-ಹೆಸರೂ ಅಲ್ಲವೆ, ಎಂದು, ಆ ದೋಸಕ್ಕೆ-ಆ ದೋಷಗಳಿಗಾಗಿ, ಮುಳಿದು-ಕೋಪಿಸಿ, ನೆಗೞ್ದರಿಕೇಸರಿ-ಪ್ರಸಿದ್ಧನಾದ ಅರಿಕೇಸರಿ, ಕೇಸರಿಗಳನಿತುಮಂ-ಅಷ್ಟು ಸಿಂಹಗಳನ್ನೂ, ತಳ್ತಿಱಿದಂ-ಎದುರಿಸಿ ಹೊಡೆದನು.

೫೦. ಇಱಿದು-ಹೊಡೆದು, ಕೊಂದು, ಅವಱನೆತ್ತರೊಳ್-ಆ ಸಿಂಹಗಳ ರಕ್ತದಲ್ಲಿ, ತನ್ನುರಮಂ-ತನ್ನ ಎದೆಯನ್ನು, ತಳಿದಿಱಿದಂ-ಬಳಿದನು. ಲೇಪಿಸಿದನು; ಉರುಗಜಂಗಳಂ-ಶ್ರೇಷ್ಠವಾದ ಆನೆಗಳನ್ನು, ಆಟಂದು-ಮೇಲೆ ಬಿದ್ದು (ಧಾ. ಆಟರ್), ಅಱಸಿ-ಹುಡುಕಿ, ಕೊಲುತಿರ್ಪುವು-ಕೊಲ್ಲುತ್ತಿವೆ, ಎಂಬ, ಈ ಕಱಪಿನೊಳ್-ಈ ಕೋಪದಲ್ಲಿ, ಅರಿಗಂಬರಂ-ಅರಿಕೇಸರಿಯ ಮಟ್ಟಕ್ಕೆ ಬರುವ, ಗಜಪ್ರಿಯರೊಳರೇ-ಆನೆಯಲ್ಲಿ ಪ್ರೀತಿಯುಳ್ಳವರುಂಟೇ? ಇಲ್ಲ. ಅರಿಕೇಸರಿಯ 'ಗಜಪ್ರಿಯ' ಎಂಬ ಬಿರುದಿನ ಸಾರ್ಥಕ್ಯ.

**ವಚನ:** ಅನವರತ....ಕಾನನಂ: ಅನವರತ-ಸಂತತವಾದ, ಶರಾಸಾರ-ಬಾಣಗಳ ಮಳೆಯಿಂದ, ಶೂನ್ಯೀಕೃತ-ಬರಿದಾಗಿ ಮಾಡಲ್ಪಟ್ಟ, ಕಾನನಮಾಗೆ-ಕಾಡನ್ನುಳ್ಳದಾಗಿ, ಎಚ್ಚು-ಹೊಡೆದು; ಮೃಗವ್ಯ ವ್ಯಾಪಾರದಿಂ-ಬೇಟೆಯ ಕಾರ್ಯದಿಂದ, ಬೞಲ್ದು-ಬಳಲಿ;

೫೧. ಒಂದು ಸೋಗೆ ನವಿಲ್-ಗರಿಯ ನವಿಲೊಂದು, ಗಂಡು ನವಿಲೊಂದು, ಕರ್ಕಡೆಗಾಸಿಯಾಗಿ-ಕಕ್ಕಡೆ ಎಂಬ ಆಯುಧದ ಏಟಿನಿಂದ ಆಯಾಸಗೊಂಡು, ಜವಮುಱಿದು-ವೇಗವನ್ನು ಬಿಟ್ಟು, ನಿಧಾನವಾಗಿ, ಪಾಱುವುದುಂ-ಹಾರುತ್ತಲು, ಇದು-ಈ ನವಿಲು, ಎನ್ನನಲ್ಲಳ-ನನ್ನ ಪ್ರಿಯಳ, ರತಿಶ್ರಮ ವಿಶ್ಲಥ ಕೇಶಪಾಶದೊಳ್-ರತಿಕ್ರೀಡೆಯ ಬಳಲಿಕೆಯಿಂದ ಸಡಿಲವಾಗಿ ಬಿಚ್ಚಿಹೋದ ಕುರುಳುಗಳಲ್ಲಿ, ಸವಸವನಾಗಿ ತೋಱಿದಪುದು-ಸರಿ ಸಮಾನವಾಗಿ ತೋರುತ್ತದೆ, ಎಂಬುದೆ ಕಾರಣದಿಂದದಂ-ಎಂಬ ಕಾರಣದಿಂದಲೇ ಅದನ್ನು, ಹಯವಲ್ಗನ ಸಂಚಳ ರತ್ನ ಕುಂಡಳಂ-ಕುದುರೆಯ ಅಲುಗಾಟ ದಿಂದ ಅಲುಗಾಡುವ ರತ್ನದ ಕುಂಡಲವನ್ನುಳ್ಳ, ಗುಣಾರ್ಣವಂ-ಅರ್ಜುನ, ಇದಲ್-ಹೊಡೆಯಲು, ಒಲ್ಲನಿಲ್ಲ-ಒಪ್ಪಿದವನಾಗಲಿಲ್ಲ; ಎಂದರೆ ಆ ನವಿಲನ್ನು ತಿರುಗಿ ಹೊಡೆಯ

ಲಿಲ್ಲ. ಇದು ಸುಂದರವಾದ ಪದ್ಯ : "ಅಪಿ ತುರಗ ಸಮೀಪಾದುತ್ಪತಂತಂ ಮಯೂರಂ" ಎಂದು ಆರಂಭವಾಗುವ ಪದ್ಯದೊಡನೆ (ರಘುವಂಶ ೯-೬೭) ಹೋಲಿಸಿ ನೋಡಿರಿ.

**ವಚನ :** ಯಮುನಾನದೀ ತಟನಿಕಟವರ್ತಿಗಳಾದರ್ – ಯಮುನಾನದಿಯ ತೀರಕ್ಕೆ ಸಮೀಪವಿರುವವರಾದ್ದರು.

**೫೨.** ಆ ನದಿ ಅರ್ಜುನನನ್ನು ಸ್ವಾಗತಿಸಿತು : ಸರಳ–ಸರಲವೃಕ್ಷ (ತೇಗದ ಮರ), ತಮಾಳ–ಹೊಂಗೆಮರ, ತಾಳ–ತಾಳೆ, ಹರಿಚಂದನ–ಶ್ರೀಗಂಧದ, ನಂದನ–ತೋಟ, ಇವೇ ಉಳ್ಳ, ಭೂಜರಾಜಿಯಿಂ–ಮರಗಳ ಸಾಲುಗಳಿಂದ, ಸುರಿವಲರೋಳಿ–ಸುರಿಯುವ ಹೂಗಳ ಸಾಲು, ತದ್ವನ ಲತಾಂಗಿಯ -ಆ ವನವೆಂಬ ಸ್ತ್ರೀಯು, ಸೂಸುವ–ಎರಚುವ, ಸೇಸೆಯಾಯ್ತು – ಮಂತ್ರಾಕ್ಷತೆಯಾಯಿತು ; ಭೃಂಗರವಂ–ದುಂಬಿಗಳ ನಾದ, ಆದೊಂದು ಮಂಗಳರವಕ್ಕೆ–ಆದೊಂದು ಮಂಗಳವಾದ್ಯಗಳ ಶಬ್ದಕ್ಕೆ, ಎಣೆ ಯಾಯ್ತು – ಸಮಾನವಾಯಿತು, ಮನೋನುರಾಗದಿಂ – ಮನದ ಸಂತೋಷದಿಂದ, ಮತ್ತಕಳಹಂಸರವಂ–ಮದಿಸಿದ ಹಂಸಪಕ್ಷಿಗಳ ಶಬ್ದ, ಪಡೆಮೆಚ್ಚೆಗಂಡನಂ–ಅರ್ಜುನ ನನ್ನು, ಕರೆವವೊಲಾಯ್ತು–ಕರೆಯುವ ಹಾಗೆ ಆಯಿತು.

**೫೩.** ಒಂದು ತಂಪಾದ ಗಾಳಿ ಬೀಸಿತು: ಯಮುನಾ ನದೀ ತರಂಗಮನಮುಂಕಿ–ಯಮುನಾ ನದಿಯ ಅಲೆಗಳನ್ನು ಅದುಮಿ, ವನಲತೆಯ ಮನೆಗಳಂ ಸೋಂಕಿ–ಕಾಡು ಬಳ್ಳಿಯ ಮನೆಗಳನ್ನು ಮುಟ್ಟಿ, ಬಂದ, ಆದೊಂದು ಮಂದಶ್ವಸನಂ–ಆದೊಂದು ಮಂದಮಾರುತ, ವನಭ್ರಮಣ ಪರಿಶ್ರಮಮಂ–ಕಾಡಿನ ಅಲೆದಾಟದಿಂದ ಆದ ಆಯಾಸ ವನ್ನು, ಮುನ್ನಮೆ–ಮೊದಲೇ, ಕಳೆದುದು–ಹೋಗಲಾಡಿಸಿತು. ಇದು ರಚನೆಯಲ್ಲೂ ಕಲ್ಪನೆಯಲ್ಲೂ ಸುಂದರವಾದ ಪದ್ಯ; 'ಯಮುನಾ ನದೀ ತರಂಗಮಂ' ಎಂಬಲ್ಲಿನ ದೀರ್ಘಾಕ್ಷರಗಳು ಆ ನದಿಯ ವಿಸ್ತಾರವನ್ನೂ ಅಲೆಗಳ ಮಾಲೆಗಳನ್ನೂ ಬಿಂಬಿಸುತ್ತವೆ; 'ಅಮುಂಕಿ' ಎಂಬಲ್ಲಿನ ಜಗಣ ಗಾಳಿ ಹೇಗೆ ಅದನ್ನು ಮುಟ್ಟಿ ಅಮುಕಿತು ಎಂಬುದನ್ನು ಧ್ವನಿಸುತ್ತದೆ ; ಗಾಳಿ ತಂಪಾಗಲು ಕಾರಣ, ಅಲೆಗಳನ್ನು ಅಮುಕಿದ್ದು, ಬಳ್ಳಿಮನೆ ಗಳನ್ನು ಸೋಕಿದ್ದು ; ಮೃದು ಬಂಧ.

**ವಚನ :** ಕಾಳಿಂದೀ....ಚಾರಿಯುಂ : ಕಾಳಿಂದೀ–ಯಮುನಾನದಿಯ, ಜಲ–ನೀರಿನ, ಶಿಶಿರ–ತಂಪಾದ, ಶೀಕರ–ತುಂತುರನ್ನುಳ್ಳ, ವಾರಿ–ನೀರಿನ ಮೇಲೆ, ಚಾರಿಯುಂ–ಸಂಚಾರ ಮಾಡುವುದೂ, ಮೃಗಯಾ .... ಹಾರಿಯುಂ : ಮೃಗಯಾ – ಬೇಟೆಯ, ಪರಿಭ್ರಮ–ಅಲೆದಾಟದ, ಶ್ರಮ–ಆಯಾಸದಿಂದ, ಉತ್ಥಿತ–ಹುಟ್ಟಿದ, ಸ್ವೇದಜಲಲವ ಹಾರಿಯುಂ–ಬೆವರು ನೀರಿನ ಕಣಗಳನ್ನು ಹೋಗಲಾಡಿಸುವುದೂ ; ತನ್ನ ಬಾಳ ನೀರಂತೆ–ತನ್ನ ಕತ್ತಿಯ ಕಾಂತಿಯಂತೆ ; ಕಜ್ಜಂಗಿ–ಕಪ್ಪಾಗಿ, ಕರ್ಗಿದ–ಕರಿದಾದ ; ಕಾಳಾಹಿಮಥನ–ಶ್ರೀಕೃಷ್ಣನ.

**೫೪.** ತನ್ನೊಳಗಣ–ತನ್ನ ಒಳಗಡೆ ಇದ್ದ, ಪನ್ನಗನಂ–ಕಾಳಿಂಗ ಸರ್ಪವನ್ನು, ಮುನ್–ಪೂರ್ವಕಾಲದಲ್ಲಿ, ನೀನ್–ನೀನು, ಪಿಡಿದು–ಹಿಡಿದು, ಒಗೆಯೆ–ಎಸೆಯಲು,

ಕಾಯಲಾಱದೆ-ರಕ್ಷಿಸಲಾರದೆ, ಪಿರಿದುಂ-ಹೆಚ್ಚಾಗಿ, ಬನ್ನದ-ಸೋಲಿನ, ಕರ್ಪು-ಕರಿಬಣ್ಣ, ಹರಗಳ ತಮಾಳ ನೀಳಚ್ಛವಿಯಿಂ-ಶಿವನ ಕೊರಳಿನಂತೆ, ಹೊಂಗೆಯಂತೆ ಕರಿದು ಕಾಂತಿಯಿಂದ, ತೊಱೆಗೆ-ನದಿಗೆ, ಇನ್ನುಂ-ಇನ್ನೂ ಕೂಡ, ಎಸೆದುದು-ಪ್ರಕಾಶಿಸುತ್ತದೆ.

೫೫. ತಳಿರಿಡಿಮು-ಚಿಗುರು ಕಿಕ್ಕಿರಿದು, ಪೂತಲತೆಗಳಂ-ಹೂಬಿಟ್ಟ ಬಳ್ಳಿಗಳನ್ನು, ಒಡನೊಡನೆ-ಕೂಡ ಕೂಡಲೇ, ಎಲರ್-ಗಾಳಿ, ಅಲೆಯೆ-ಪೀಡಿಸಲು, ಬಿಡದೆ-ನಿಲ್ಲದೆ, ಸುರಿವ-ಸುರಿಯುವ, ಅಲರ್ಗಳಂ-ಹೂವುಗಳನ್ನು, ಅಂದು-ಆಗ, ಎಡೆಗುಡದೆ-ಅವಕಾಶವನ್ನುಕೊಡದೆ, ನೂಂಕಿ-ತಳ್ಳಿ, ಇದಱ-ಈ ನದಿಯ, ಬಂಬಲ್ದೆರೆಗಳ್-ಸಾಲಾದ ತೆರೆಗಳು, ಮೆಲ್ಲನೆ-ಮೃದುವಾಗಿ, ತಡಿಯಂ-ದಡವನ್ನು, ಸಾರ್ಚಿದಪ್ಪುವು-ಸೇರಿಸುತ್ತವೆ. ಇಲ್ಲಿನ ಚಿತ್ರ ತುಂಬ ಮನೋಜ್ಞವಾಗಿದೆ, ಇದರ ಆಧಾರದ ಮೇಲೆ ವರ್ಣಶಿಲ್ಪಿ ಸೊಗಸಾದ ದೃಶ್ಯವನ್ನುರಚಿಸಬಹುದು ಈ ಚಿತ್ರ ಪಂಪನಿಗೆ ಬಹು ಪ್ರಿಯವಾದದ್ದು; ಆದಿಪುರಾಣದ (೧-೬೧) ಪದ್ಯವನ್ನು ನೋಡಿ; ಒಂದೇ ದೃಶ್ಯ, ಎರಡರಲ್ಲಿ ಯಾವುದು ಹೆಚ್ಚು ಸುಂದರ?

೫೬. ವಿದಳಿತ ನುತ ಶತಪತ್ರದ-ಅರಳಿದ ಪ್ರಸಿದ್ಧವಾದ ತಾವರೆಯ, ಪುದುವಿನೊಳ್-ಹುದುವಿನಲ್ಲಿ, ಆಶ್ರಯದಲ್ಲಿ, ಇರದೆ, ಅಗಲೆವೋದ-ಅಗಲಿಯೇ ಹೋದ, ಹಂಸನಂ-ಗಂಡು ಹಂಸಪಕ್ಷಿಯನ್ನು, ಅಱಸಲ್-ಹುಡುಕಲು, ಪದೆದು-ರಾಗಿಸಿ, ಎಳಸುವ-ಬಯಸುವ, ಪೆಣ್ಣಂಚೆಯ-ಹೆಣ್ಣು ಹಂಸೆಯ, ಪವಕೊರಲ-ಹದವಾದ ಕೊರಳಿನ, ಇಂಚರದ-ಇಂಪಾದ ಧ್ವನಿಯ, ಸರಮೆ-ಸ್ವರವೇ, ಇದಱೊಳ್-ಇದರಲ್ಲಿ, ಕಿವಿಗೆ, ಸವಿ.

೫೭. ಜಲದೇವತೆಗಳ್-ನೀರಿಗೆ ಅಭಿಮಾನದೇವತೆಗಳು, ನಿಱಿವಿಡಿದು-ನೆರಿಗೆಯನ್ನು ಹಿಡಿದು, ಉಡಲ್-ಉಡಲು, ನಿಮಿರ್ಚಿದ-ಬಿಚ್ಚಿದ, ಕುಱುವಡಿಯ-ಚಿಕ್ಕ ಮಡಿಬಟ್ಟೆಯ, ತರಂಗದಂತೆ-ಅಲೆಗಳ ಹಾಗೆ, ಬಂಬಲ್ದೆರೆಗಳ್-ಸಾಲಾದ ಅಲೆಗಳು, ನೆಱೆಯಲರ್ದ-ಪೂರ್ಣವಾಗಿ ಅರಳಿದ, ಅಂಭೋರುಹದ-ತಾವರೆಯ, ಅಲರ್ದುಱುಗಲಂ-ಹೂವಿನ ಸಮೂಹವನ್ನು, ಎಸೆಯೆ-ಸೊಗಸಾಗಲು, ಅಲೆದು-ಪೀಡಿಸಿ, ಒಗೆದುವು-ನೆಗೆದುವು.

೫೮. ತರಂಗಚಯಂ-ಅಲೆಗಳ ಸಮೂಹ, ತುರಗಚಯಂಗಳಂತಿರೆ-ಕುದುರೆಗಳ ಸಮೂಹದಂತಿರಲು; ಕಳಹಂಸೆ-ಕೋಮಲವಾದ ಹಂಸಪಕ್ಷಿ, ಚಮರೀರುಹಂಗಳಂತಿರೆ-ಚಾಮರಗಳಂತೆ ಇರಲು ; ಬೆಳ್ನೊರೆ-ಬಿಳಿದಾದ ನೊರೆ, ಬೆಳ್ಗೊಡೆಗಳಂತಿರೆ-ಶ್ವೇತಚ್ಛತ್ರಿಯಂತಿರಲು ; ಮಱಿದುಂಬಿ-ದುಂಬಿಯ ಮರಿಗಳು, ಗೊಟ್ಟಿಗಾಣರಂತಿರೆ-ಗೋಷ್ಠಿಯ ಗಾಯಕರಂತಿರಲು, ಸಾರಿಕೆ-ಹೆಣ್ಣು ಗಿಣಿಗಳು, ಮೇಳದವರಂತಿರೆ-ಜೊತೆಗಾರರಂತಿರಲು ; ಕೊಳನಲ್ಲಿ-ಅಲ್ಲಿಕೊಳವು, ರಾಜಗೇಹದಂತಿರೆ-ಅರಮನೆಯ ಹಾಗಿರಲು, ತಾಮರಸಂಗಳ್-ತಾವರೆಗಳು, ತಾಂ ಅರಸರಂತಿರೆ-ತಾವು ರಾಜರಂತೆ. ಒಪ್ಪುಗುಂ-ಸೊಗಸಾಗಿವೆ.

**ವಚನ :** ಭಾಸ್ಕರ ತನೂಜೆಯಂ–ಸೂರ್ಯನ ಮಗಳು, ಯಮುನಾ ನದಿಯನ್ನು; ಪಿಶಂಗ–ಕಪಿಲವರ್ಣವಾಗಿ ಮಾಡಲ್ಪಟ್ಟ ಎಂದರೆ ಕಪ್ಪುಕೆಂಪುಗಳ ಮಿಶ್ರವರ್ಣ;

**೫೯.** ಜಲಕ್ರೀಡೆಗೆ ಅರಸಿಯರು ಬಂದರು: ಒತ್ತಿದ–ಬಳಿದುಕೊಂಡ, ತಳ್ಕು–ಗಂಧಸೇ ಮೊದಲಾದ ಲೇಪನ, ಎತ್ತಿದ–ಹಿಡಿದುಕೊಂಡ, ತಱಿ–ಛತ್ರಿಗಳು, ಮುತ್ತಿನ ಪೊಸದುಡಿಗೆ–ಮುತ್ತಿನ ಹೊಸ ಒಡವೆಗಳು, ತಳಿರ–ಚಿಗುರನ್ನು ಸಿಕ್ಕಿಸಿಕೊಂಡ, ಸೋರ್ಮುಡಿ–ಜಾರುಗಂಟು, ಇವೆಲ್ಲ, ಮನಮಂ–ಮಾನವನ್ನು, ಪತ್ತಿಸಿ–ಅಂಟಿಕೊಂಡು, ಜೊತ್ತಿಸೆ – ಮರುಳುಮಾಡಲು, ಮದನೋನ್ಮತ್ತೆಯರ್ – ಕಾಮದಿಂದ ಮದಿಸಿದ, ಅರೆಬರ್–ಕೆಲವರು, ಅರಸಿಯರ್–ರಾಣಿಯರು, ಅವಯವದೆ–ಲೀಲೆಯಿಂದ, ಬಂದರ್–ಬಂದರು. ಇಲ್ಲಿ 'ಜೊತ್ತಿಸು' ಎಂಬುದರ ಅರ್ಥ ಚಿಂತನೀಯ; ಕೆಲವು ಪ್ರಯೋಗಗಳು: (೧) ಮತ್ತಿನ ಜೊತ್ತಿಸಿ ಕೊಟ್ಟಸಿತ ವ್ರತಂಗಳಂ (ಸುಕುಮಾ ೭–೫ ವ.); ತದ್ಭಟರಂ ಮೆಲ್ಲನೆ ಜೇಱಿವೇಱಿ ಬರವೇೞ್ದಿನಿತಾನುಂ ತೆಱದ ಲಲ್ಲೆಯಿಂ ಜೊತ್ತಿಸಿದಳ್ (ಅದೇ ೧೦); ನಾನಾ ಪ್ರಕಾರದ ತತ್ತುಪಱಂಗಳಿಂ ಜೊತ್ತಿಸಿ ವಶೀಕೃತಂಮಾಡಿ (ಅದೇ ೧೩ ವ); ನಂಬಿಯಣ್ಣಂ ಕಡುಗೋಪದಿಂ ನಿಮ್ಮ ಜೊತ್ತಿಗಾನಂಜುವನಲ್ಲೆಂ (ತ್ರಿಪುವಿ ೨–೧೦೪ ವ); ಪುರುಡಂ ಪೋರಟೆವೆತ್ತು ಜೊತ್ತುಂ ಗತಕಂ ಗನ್ನಂ ಕಚಾಕರ್ಷಣಂ (ಅದೇ ೨೪–೧೦೦); ಇಲ್ಲೆಲ್ಲ ನಂಬಿಸು, ಮರುಳುಮಾಡು, ವಂಚಿಸು ಎಂಬರ್ಥಗಳು ಹೊಂದುತ್ತವೆ; ಜೊತ್ತು+ಇಸು; ಗತಕ, ಗನ್ನಂ ಎಂಬುದರ ಜೊತೆಯಲ್ಲಿ ಜೊತ್ತು ಇರುವುದನ್ನು ಗಮನಿಸಿ; 'ಅವಯವ'ಕ್ಕೆ ಅಶ್ರಮ, ಸುಲಭ, ಲೀಲಾಜಾಲ ಇತ್ಯಾದಿ ಅರ್ಥವಾಗುತ್ತದೆ; ಇಲ್ಲಿ ಲೀಲೆಯೆಂದು ಗ್ರಹಿಸಿದೆ.

**೬೦.** ಇದು ಮೃದು ಕಳಹಂಸದ ರವಂ–ಇದು ಮೃದುವಾದ ಹಂಸಪಕ್ಷಿಯ ಶಬ್ದ, ಇದು ನೂಪುರ ನಿನದಂ–ಇದು ಕಾಲ್ಗಡಗಗಳ ಶಬ್ದ: ಇದು ರಥಾಂಗಯುಗಂ–ಇದು ಚಕ್ರವಾಕ ಪಕ್ಷಿಗಳ ಜೋಡಿ, ಇವು ಕುಚಯುಗಂ–ಇವು ಜೋಡಿ ಮೊಲೆಗಳು; ಇದು ಸರಸಿಜಂ–ಇದು ತಾವರೆ, ಇದು ಮೊಗಂ–ಇದು ಮುಖ; ನೆರೆದ ಪೆಂಡಿರ ತಂಡಂ–ಸೇರಿದ ಸ್ತ್ರೀಯರ ಗುಂಪು, ಎನಿಸಿದುದು–ಎನಿಸಿತ್ತು. ಸ್ತ್ರೀಯರ ಅಂದಿಗೆಯ ರವ ಕುಚ ಮುಖಗಳನ್ನು ಹಂಸರವಕ್ಕೆ ರಥಾಂಗಯುಗಕ್ಕೆ ತಾವರೆಗೆ ಹೋಲಿಸುವುದು ರೂಢಿ; ಇಲ್ಲಿಯಾದರೆ ಈ ಉಪಮಾನಗಳಿಗಿಂತ ಉಪಮೇಯಗಳೇ ಸೌಂದರ್ಯದಲ್ಲಿ ಮಿಗಿಲಾಗಿ ಎರಡಕ್ಕೂ ಭೇದವನ್ನು ಸೂಚಿಸುತ್ತಿದ್ದುವು ಎಂದು ಭಾವಿಸಬೇಕು.

**ವಚನ :** ಸಾಂದಿನ–ಸಾದಿನ, ಗಂಧದ; ಸೌಸವಮಂ–ಪರಿಮಳವನ್ನು; ಕದಪಂ–ಬಗ್ಗಡವನ್ನು, ಕೆಸರನ್ನು, ಸಾಂಪು=(ತ) ಚಾಂದು–ಶಾಂದು.

**೬೧.** ಬಾಲೆಯರು ಕೊಳವನ್ನು ಹೊಕ್ಕಾಗ ಬಾಳೆ ಮೀನುಗಳು ಓಡಿದುವು: ನೀಲದ–ನೀಲರತ್ನದ, ಜೆಲ್ಲಿಯ, ಗಾಡಿಯುಂ–ಸೌಂದರ್ಯವೂ, ಈ ಲಲಿತಾಂಗಿಯರ–ಈ ಕೋಮಲೆಯರ, ಕಣ್ಗೆ–ಕಣ್ಣುಗಳಿಗೆ, ಪೋಲ್ತುಂ–ಹೋಲಿಯೂ, ನಾಂ–ನಾವು, ಕಣ್ಗೇಳಿದವಾಗಿರೆವು–ನೋಡುವವರ ಕಣ್ಣುಗಳಿಗೆ ಹೀನವಾಗಿರೆವು, ಎಂದು, ಎಳೆವಾಳೆ

ಗಳ್-ಎಳೆಯ ಬಾಳೆ ವಿಮಾನುಗಳು, ಬಾಬೆಯರ್ ಪುಗುವಾಗಳ್-ಬಾಲೆಯರು ಕೊಳವನ್ನು ಹೊಗುವಾಗ, ಓಡಿದುವು. ಇಲ್ಲಿ ಎರಡನೆಯ ಪಂಕ್ತಿಯಲ್ಲಿ ಏನೋ ಪಾಠಕ್ಲೇಶವಿದೆ; ಏಳಿದುವು-ತಿರಸ್ಕಾರಕ್ಕೆ, ಉಪಾಸೀನತೆಗೆ, ಗುರಿಯಾದುವು.

೬೨. ಹರಿಗಂ-ಅರ್ಜುನ, ಆದಲೆ-ಅತ್ತಕಡೆ, ನೀರ್-ನೀರು, ಗುಂಡಿತ್ತು ಎಂದು-ಆಳ ಎಂದು, ಈದಲೆಯೊಳ್-ಇತ್ತಕಡೆಯಲ್ಲಿಯೇ, ನಿಂದು-ನಿಂತು, ಸತಿಗೆ-ಕಾಂತೆಗೆ, ಜಾನುದಘ್ನಂ-ಮೊಳಕಾಲು ಮುಳುಗುವುದು, ಊರೋದಘ್ನಂ-ಎದೆ ಮುಳುಗುವುದು, ಕಂಠದಘ್ನಂ-ಕಂಠ ಮುಳುಗುವುದು, ಎಂಬ, ಅಳವಿಗಳಂ-ಅಳತೆಗಳನ್ನು, ಆದರದೆ-ಪ್ರೀತಿಯಿಂದ, ತೋಱುತ್ತೆ-ತೋರಿಸುತ್ತ

**ವಚನ:** ಘಟ್ಟಣೆಯೊಳಂ – ತಾಗುವಿಕೆಯಲ್ಲಿ, ಅಳ್ಳೀಱಿಸೊಳ್ – ಅಲ್ಪವಾದ ಏಟಿನಲ್ಲಿ; ತಳ್ಳಂಕುಗುಟ್ಟೆ–ತುಳುಕಾಡಿ; ನೀರಾಟಂ–ಜಲಕ್ರೀಡೆ.

೬೩ ಮುಖಾಬ್ಜಮಂ – ಮುಖಕಮಲವನ್ನು, ಪೊಸತಲರ್ದ – ಹೊಸದಾಗಿ ಅರಳಿದ, ಒಂದು ತಾವರೆಯೆಗೆತ್ತು–ಒಂದು ತಾವರೆಯೆಂದೇ ಭಾವಿಸಿ, ಒಂದು, ತುಂಬಿ–ದುಂಬಿಯು, ಚುಂಬಿಸೆ–ಮುತ್ತಿಡಲು, ಸತಿ–ಕಾಂತೆ, ಬೆರ್ಚಿ–ಹೆದರಿ, ಪೆಳ್ಪಳಿಸಿ–ನಡುಗಿ, ನೋಟ್ಪುದುಂ–ನೋಡುತ್ತಲು, ಆಕೆಯ ಕಣ್ಣ ಬೆಳ್ಪುಗಳ್-ಆವಳ ಕಣ್ಣಿನ ಬಿಳುಪುಗಳು, ಪಸರಿಸೆ–ಹಬ್ಬಲು, ಕುವಲಯಂಗಳ್ – ಬೆಳ್ದಾವರೆಗಳು, ಅರಲ್ದುವೆಗೆತ್ತು – ಅರಳಿವೆಯೆಂದೇ ಭಾವಿಸಿ, ತುಂಬಿಗಳ್–ದುಂಬಿಗಳು, ಮತ್ತೆಯುಂ–ತಿರುಗಿಯುಂ, ಮುಸುಱುವುದುಂ-ಮುತ್ತಿಕೊಳ್ಳುತ್ತಲು, ಆಗಳವಳ್–ಆಗ ಅವಳು, ಭಯದಿಂದಂ–ಹೆದರಿಕೆಯಿಂದ, ಗುಣಾರ್ಣವನಂ–ಅರ್ಜುನನನ್ನು, ಅಪ್ಪಿದಳ್–ತಬ್ಬಿಕೊಂಡಳು. ಪೆಳ್ಪಳಿಸು= ಬೆಳ್ಪಳ+ಇಸು; " ಬೆಳ್ಪಳಮೆಂದುಂ ಸಂಚಳಂ "

೬೪. ಆಸಿಯಳ್-ಕೃಶಾಂಗಿಯು, ಅವುಂಕಿ-ಅಮುಕಿ, ಕೆಂದಳದೊಳ್-ಕೆಂಪಾದ ಅಂಗೈಗಳಿಂದ, ಒತ್ತುವ–ಸೂಸುವ, ನೀರ್–ನೀರು, ಮೊಗಮಂ-ಮುಖವನ್ನು, ಪಳಂಚಿ-ತಾಗಲು, ಅಪ್ಪಳಿಸಲು, ಒರ್ವಳ್–ಒಬ್ಬಳು, ಬಂಚಿಸಲ್–ವಂಚಿಸುವುದಕ್ಕಾಗಿ, ತಪ್ಪಿಸಿಕೊಳ್ಳುವುದಕ್ಕಾಗಿ, ಇನಿಸಾನುಮಂ–ಒಂದಿಷ್ಟನ್ನು, ಮುಱುಗಿದಾಗಡೆ–ಮುಳುಗಿದಾಗಲೇ, ಭೋಂಕನೆ–ಬೇಗನೆ, ಬಂದು, ಬಾಳೆವಿಮಾನ್-ಬಾಳೆವಿಮಾನು, ಮುಸುಱಿ–ಮುತ್ತಿಕೊಂಡು, ನಿರಂತರಂ–ಎಡೆಬಿಡದೆ; ಕರ್ದುಕೆ–ಕಚ್ಚಲು, ಸತ್ವವಿಯೊಳ್–ಸತ್ವವಿಯಲ್ಲಿ, ಸಮನಾಗಿ--ಸಮಾನವಾಗಿ, ಮಾರ್ಗಮಂ ಪೊಸಯಿಸಿ–ಮಾರ್ಗೀಶೈಲಿಯನ್ನು ಹೊಸದಾಗಿಸಿ, ದೇಸಿಯಂ–ದೇಸಿಶೈಲಿಯನ್ನು, ಚೆಲುವನ್ನು, ಅಪೂರ್ವರೂಪದಿಂ–ಅಪೂರ್ವವಾದ ರೂಪದಿಂದ, ಪೊಸತುಮಾಡಿದಳ್–ಹೊಸದನ್ನಾಗಿ ಮಾಡಿದಳು.

೬೫. ಆ ಸಕಳ ಸ್ತ್ರೀ ನಿವಹದ–ಆ ಸಮಸ್ತ ನಾರಿಯರ ಸಮೂಹವು, ಪೂಸಿದ–ಲೇಪಿಸಿಕೊಂಡ, ಮೃಗಮದದ–ಕಸ್ತೂರಿಯ, ಮುಡಿಯ ಪೂವಿನ–ತುರುಬಿನ ಹೂಗಳ, ರಜದಿಂ–ದೂಳಿನಿಂದ, ವಾಸಿಸಿದ–ಕಂಪೇರಿದ, ನೀರ–ನೀರಿನ, ಕದಡಿಂದೆ–ಬಗ್ಗಡದಿಂದ, ಆಸವದೊಳ್–ಮದ್ಯದಲ್ಲಿ, ಸೊರ್ಕಿ–ಮದಿಸಿ, ವಿಮಾಂಗಳ್–ವಿಮಾನುಗಳು, ಜೆಂಡು

ಮಗುಳ್ದುವು-ಬೆಂಡಿನಂತೆ ಹೊಟ್ಟೆಮೇಲೆ ಬೆನ್ನು ಕೆಳಗೆ ಆದುವು ; ಅಸ್ತವ್ಯಸ್ತವಾದುವು ; ಹೊರಳಾಡಿದುವು.

೬೬. ಮುಡಿಬಿಡೆ–ತುರುಬು ಬಿಚ್ಚಿಹೋಗಲು, ಪರೆದ–ಚದರಿದ, ಎಸಳ್ಗಳ–ಹೂವಿನೆಸಳುಗಳ, ಪೊಸದುಡುಗೆಯ–ಹೊಸ ಒಡವೆಗಳ, ಮುತ್ತುಗಳ, ಕುಚದ ಸಿರಿಕಂಡದ–ಎದೆಗಳ ಶ್ರೀಗಂಧದ, ಬೆಳ್ಪು–ಬಿಳಿಯ ಬಣ್ಣ, ಒಡನೊಡನೆ–ಕೂಡೆ ಕೂಡೆ, ಎಸೆದಿರೆ–ಶೋಭಿಸುತ್ತಿರಲು, ಜಗುನೆಯ ಮಡು–ಯಮುನೆಯ ಮಡು, ಗಂಗೆಯ ಮಡುವಂ–ಗಂಗಾನದಿಯ ಮಡುವನ್ನು, ಇನಿಸಂ–ಸ್ವಲ್ಪ, ಅನುಕರಿಸಿರ್ಕುಂ–ಹೋಲುತ್ತಿದೆ. ಕರಿದಾದ ಯಮುನೆಯ ನೀರು ಬೆಳ್ಳಗಾಯಿತು ಎಂಬ ಭಾವ.

**ವಚನ :** ನಾಡೆಯುಂ ಪೊೞ್ತು–ಬಹಳ ಹೊತ್ತು ; ಬಾಯ್ದೆಱೆಗಳುಂ–ತುಟಿಗಳೂ ; ಪಳಂಚಿದ–ತಾಗಿದ, ಅಂಟಿಕೊಂಡ ; ಬಣ್ಣಂಗಳುಂ–ಬಣ್ಣ ಬಣ್ಣದ ಸೀರೆಗಳೂ ;

೬೭. ಅಂಗಜಂ – ಮನ್ಮಥನು, ತೆಱಪುವಡೆದು – ಅವಕಾಶವನ್ನು ಪಡೆದು, ನೋಟಕರ, ಮನಮುಂ–ಮನಸ್ಸನ್ನು; ಕೆಯ್ಸೆಱೆಗೊಳೆ–ಸೆರೆಹಿಡಿಯಲು. ಆಗಳ್–ಆಗ, ಕೊಳದಿಂ–ಕೊಳದಿಂದ, ಪೊಱಮಡೆ–ಸ್ತ್ರೀಯರು ಹೊರಗೆ ಬರಲು, ಜಿಗಿಲ್ತು–ಅಂಟಾಗಿ, ಪತ್ತಿದ–ಮೈಗೆ ಸೇರಿಕೊಂಡ, ಕುಱುವಡಿಗಳ್–ಚಿಕ್ಕ ಮಡಿಬಟ್ಟೆಗಳ್, ಅವರ, ನಾಣ್ಗಳ ತೆಱಪಂ–ಲಜ್ಜಾಕರವಾದ ಎಡೆಗಳನ್ನು, ಮೆಱೆದುವು–ಪ್ರಕಟಿಸಿದುವು.

**ವಚನ :** ಮಡಿಯ ಭಂಡಾರ-ವಸ್ತ್ರಗಳ ಭಂಡಾರ ; ನಿಯೋಗಿಗಳ್-ಉದ್ಯೋಗಿಗಳು ; ಪಡಲಿಗೆಗಳೊಳ್–ತಟ್ಟೆಗಳಲ್ಲಿ ; ಒಟ್ಟಿದ–ರಾಶಿಹಾಕಿದ, ದೇವಾಂಗವಸ್ತ್ರ–ರೇಷ್ಮೆವಸ್ತ್ರ ; ಕೆಯ್ಗೆಯ್ದುಂ-ಸಿಂಗರಿಸಿಕೊಂಡೂ, ಆರೋಗಿಸಿ-ಊಟಮಾಡಿ ; ಕೆಯ್ಗಟ್ಟಿಗೊಂಡು–ಕೈ ಗಂಧವನ್ನು ಸ್ವೀಕರಿಸಿ ;

೬೮. ಶ್ರೀಕೃಷ್ಣನಮಾತು : ಇಲ್ಲಿ–ಈ ಎಡೆಯಲ್ಲಿ. ಸಂದ ಖರಧೇನುಕರಂ–ಪ್ರಸಿದ್ಧರಾದ ಖರಧೇನುಕರೆಂಬ ರಾಕ್ಷಸರನ್ನು, ಮುಳಿಸಿಂದಂ–ಸಿಟ್ಟಿನಿಂದ, ಅವುಂಕಿ–ಒತ್ತಿ, ಕೊಂದೆಂ–ಕೊಂದೆನು ; ಕಾಳಿಂದಿಯ–ಯಮುನೆಯ, ಪಾವಂ–ಹಾವನ್ನು, ಪಿಡಿದು–ಹಿಡಿದು, ಈ ಸಿಲೆಯಲ್ಲಿ–ಈ ಬಂಡೆಯ ಮೇಲೆ, ಅಪ್ಪಳಿಸಿದೆಂ–ಹೊಡೆದೆನು ; ಮತ್ತಂ–ಮತ್ತು, ಮುನ್ನಂ–ಪೂರ್ವ ಕಾಲದಲ್ಲಿ, ಆಟಂದರಂ – ಮೇಲೆಬಿದ್ದ, ಉಗ್ರ ದೈತ್ಯರಂ–ಭಯಂಕರರಾದ ರಾಕ್ಷಸರನ್ನು, ಅಳುರ್ಕೆಯಿಂ–ಪರಾಕ್ರಮದಿಂದ, ಇಲ್ಲಿ–ಈ ಎಡೆಯಲ್ಲಿ, ಇಕ್ಕಿದೆಂ–ಕೊಂದೆನು ; ಅಂದು–ಆಗ, ಗುಣಾರ್ಣವಂಗೆ–ಅರ್ಜುನನಿಗೆ, ಮಧುಕೈಟಭಹಾರಿ– ಮಧುಕೈಟಭರೆಂಬ ರಾಕ್ಷಸನನ್ನು ಸಂಹರಿಸಿದ ಶ್ರೀಕೃಷ್ಣ, ತೊಟಲ್ದು–ಸುತ್ತಾಡಿ, ತೋಱಿದಂ–ತೋರಿಸಿದನು.

**ವಚನ :** ಅನೂನ ದಾನಿಯ-ಕುಂದಿಲ್ಲದ ದಾನಿಯ; ದಾನದುದ್ದಾನಿಯ-ದಾನದಲ್ಲಿ ಅತ್ಯತಿಶಯವಾದವನ ; ಆನಲ್–ತಾಳಲು, ಸ್ವೀಕರಿಸಲು ; ಆನಲ್ಲದೆ–ನಾನಲ್ಲದೆ.

೬೯. ಉರಿವುರಿಯಸೆ-ಉರಿಯುವ ಉರಿಯನ್ನೇ, ತಳಿಸಿಪಿರ್-ತಲೆ ಕೂದಲು, ಅನುಕರಿಸಿರೆ-ಹೋಲಿರಲು; ಸಂತಪ್ತ ಕನಕ ವರ್ಣಮುಂ-ಕಾಸಿದ ಚಿನ್ನದ ಹೊಂಬಣ್ಣವೂ, ಉರಿಯ, ಒಂದು, ಉರುಳಿವೊಲಿರೆ-ಉಂಡೆಯ ಹಾಗಿರಲು; ಜಠರಾನಳಂ-ಹೊಟ್ಟೆಯ ಉರಿ, ಜಠರಾಗ್ನಿ, ಹಸಿವು, ಉರಿವಿನಂ-ಉರಿಯುತ್ತಿರಲು, ಉರಿಪ ಬಣ್ಣದ-ಕಿಚ್ಚಿನ ಬಣ್ಣದ, ಒರ್ವಂ-ಒಬ್ಬ, ಪಾರ್ವಂ ಬ್ರಾಹ್ಮಣನು.

**ವಚನ:** ಅಂತು ವರ್ಪನಂ ಕಂಡು-ಹಾಗೆ ಬರುವವನನ್ನು ನೋಡಿ.

೭೦. ತಪನಿಯಮನಿರತಂ – ತಪಸ್ಸಿನ ನಿಯಮದಲ್ಲಿ ಆಸಕ್ತನಾಗಿರುವ, ಈ ಬರ್ಪ ಪಾರ್ವಂ–ಇಗೋ ಬರುವ ಬ್ರಾಹ್ಮಣನು, ತನಗೆ ಏನಱ್ತು ಅದಂ–ತನಗೆ ಏನು ಬೇಕಾಗಿದೆಯೋ ಅದನ್ನು, ಬೇಡಿದೊಡೆ–ಬಯಸಿ ಕೇಳಿದರೆ, ಇಂ ಅಪಗತದುರಿತರ್–ಇನ್ನು ಪಾಪರಹಿತರಾದವರು, ಸಂಪೂರ್ಣ ಪುಣ್ಯರ್–ಪೂರ್ಣವಾದ ಪುಣ್ಯವಂತರು; ಆನಲ್ಲದಿಲ್ಲ–ನಾನಲ್ಲದೆ ಇಲ್ಲ; ಪೆಱರೊಳರೇ ಪೇೞ್–ಬೇರೆ ಯಾರಾದರೂ ಉಂಟೋ, ಹೇಳು.

**ವಚನ:** ಎಂಬನ್ನೆಗಂ–ಎನ್ನುತ್ತಿರಲು; ಎಯ್ದೆವಂದು–ಸಮೀಪಕ್ಕೆ ಬಂದು; ಋಚಂಗಳಂ – ಋಕ್ಕುಗಳನ್ನು, (ವೇದದ ಪದ್ಯಗಳನ್ನು); ಸಿತ ದೂರ್ವಾಂಕುರ–ಬೆಳ್ಳನೆಯ ಗರಿಕೆ ಹುಲ್ಲಿನ ಸಸಿ; ಶೇಷಾಕ್ಷತಂಗಳಂ-ಆಶೀರ್ವಾದದ ಅಕ್ಷತೆಯನ್ನು; ಬಾೞ್ತೆಯಪ್ಪುದಂ–ಪ್ರಯೋಜನವಾಗುವುದನ್ನು.

೭೧. ಮಣಿಕನಕಾದಿವಸ್ತುಗಳಂ–ರತ್ನ ಚಿನ್ನ ಮುಂತಾದ ವಸ್ತುಗಳನ್ನು, ಒಂದುಮಂ–ಒಂದನ್ನೂ, ಒಲ್ಲೆನ್–ಬಯಸೆನು; ಅವು ಏವುವು–ಅವು ಏನು ಮಹಾ! ಎನಗೆ–ನನಗೆ, ಆದಂ–ವಿಶೇಷವಾಗಿ, ಇಸ್ನುಣಿಸು–ಸವಿಯಾದ ಆಹಾರ, ಅೞ್ತಿ-ಪ್ರೀತಿ; ಪಸಿದು-ಹಸಿದು, ಮೆಯ್ಯ್-ಮೈ, ಜೊಂಮನೆ ಪೋದಪುದು-ಜೋಮುಹಿಡಿದ ಹಾಗಾಗಿದೆ; ಎನ್ನ–ನಾನು, ವೇಡ್ಪುದಂ–ಬಯಸಿದ್ದನ್ನು, ತಣಿಯುಣಲ್–ತೃಪ್ತಿಯಾಗುವ ಹಾಗೆ ಉಣ್ಣಲು, ಈವೊಡೆ–ಕೊಡುವ ಪಕ್ಷದಲ್ಲಿ, ಈವುದು–ಕೊಡುವುದು: ಎನೆ–ಎನ್ನಲು, ಅದೇವಿರಿದು – ಅದೇನು ದೊಡ್ಡದು, ಇತ್ತೆನ್ – ಕೊಟ್ಟೆನು, ಆವುದು – ಯಾವುದು, ಉಣ್ಬ–ಊಟಮಾಡುವ, ಉಣಿಸು–ಆಹಾರ, ಎನೆ ಪಾರ್ಥಂ–ಎಂದು ಅರ್ಜುನನು ಹೇಳಲು, ಪೇೞ್ವೆಂ – ಹೇಳುವೆನು, ಎಂಬ ಪದದೊಳ್ – ಎಂಬ ಸಮಯದಲ್ಲಿ, ನರಕಾಂತಕಂ–ಶ್ರೀಕೃಷ್ಣನು, ಅಗ್ನಿದೇವನಂ–ಅಗ್ನಿದೇವತೆಯನ್ನು

**ವಚನ:** ಕಾಣಲೊಡಂ–ಕಂಡೊಡನೆಯೇ; ಬಕವೇಷಿ–ಬಕಪಕ್ಷಿಯ ವೇಷವನ್ನುಳ್ಳವನು; ಏನಿತ್ತೆ–ಏನುಕೊಟ್ಟೆ,

೭೨. ಬಡವಂ – ಬಡವನು, ಪಸಿದು – ಹಸಿದು, ಉಣವೇಡಿದಂ – ಉಣ್ಣಲು ಬೇಡಿದನು, ಇತ್ತೆಂ-ನಾನು ಕೊಟ್ಟೆ, ಅದಲ್ಲದೆ, ಇಲ್ಲಿ ಕುಸುರಿಯ ಮಾತುಗಾಣೆಂದಲ್–ಈ ಸಮಯದಲ್ಲಿ ಸೂಕ್ಷ್ಮವಾದ ಮಾತನ್ನು ಕಾಣೆನು; ಎನೆ–ಎನ್ನಲು, ಮುರಾಂತಕಂ–ಕೃಷ್ಣನು, ಕೇಳ್ದು – ಕೇಳಿ, ಏಂ ತಗುಳ್ದೆ – ಏನನ್ನು ಅನುಸರಿಸಿದೆ, ಮಾಡಿದೆ, ಈವ

ಮಾತಂ-ಕೊಡುವ ಮಾತನ್ನು; ಇನ್ನು ಸಿರದಿರ್-ಇನ್ನು ಮಾತಾಡಬೇಡ, ಇವನುಣ್ಬುದು ಖಾಂಡವಂ—ಇವನು ಊಟಮಾಡುವುದು ಖಾಂಡವವನ; ಈತನಗ್ನಿ—ಇವನು ಅಗ್ನಿ ದೇವತೆ, ಮುಂ-ಹಿಂದಿನ ಕಾಲದಲ್ಲಿ, ಇವನ್-ಇವನು, ಇಂತೆ ಪುಸಿದು-ಹೀಗೆಯೇ ಸುಳ್ಳು ಹೇಳಿ, ಆದಿ ನರೇಂದ್ರರೆಲ್ಲರಂ – ಹಿಂದಣ ರಾಜರನ್ನೆಲ್ಲ, ಇಂದ್ರನೊಳ್ – ಇಂದ್ರನಲ್ಲಿ, ಪಾಯಿಸಿದಂ—ನುಗ್ಗುವಂತೆ ಮಾಡಿದನು, ಎಂದರೆ ಹೋರಾಡುವಂತೆ ಮಾಡಿದನು.

**ವಚನ:** ಅಜಮುಖವ್ಯಾಘ್ರಂ—ಮೇಕೆಯ ಮುಖವನ್ನುಳ್ಳ ವ್ಯಾಘ್ರ, ಎಂದರೆ ಕಪಟಿ; ಶ್ವೇತಕೃಷ್ಣಕಾರಕಂ – ಬಿಳಿದನ್ನು ಕರಿದಾಗಿ ಮಾಡುವವನು, ಎಂದರೆ, ಮೋಸಗಾರ; ತನ್ನಂ ಮೂದಲಿಸಿದಂತಾಗೆ—ತನ್ನನ್ನು ನಿಂದಿಸಿದ ಹಾಗಾಗಲು:

೭೩. ಎರೆದನ ಪೆಂಪುವೇೞ್ವೊಡೆ-ಬೇಡಿದವನ ಹಿರಿಮೆಯನ್ನು ಹೇಳುವ ಪಕ್ಷದಲ್ಲಿ; ಅನಲಂ-ಅಗ್ನಿದೇವತೆ; ಪೋಣರ್ವಾತನ-ಹೋರಾಡುವವನ, ಪೆಂಪುವೇೞ್ವೊಡೆ-ಹಿರಿಮೆಯನ್ನು ಹೇಳುವುದಾದರೆ, ಆ ಸುರಪತಿ—ಆ ಇಂದ್ರ; ಕೊಟ್ಟ ತಾಣಮೆಡೆವೇೞ್ವೊಡಂ—ಕೊಟ್ಟ ಸ್ಥಳವನ್ನು ಹೇಳುವುದಾದರೂ, ಆ ಯಮುನಾನದೀತಟಾಂತರಂ—ಆ ಯಮುನಾ ನದಿಯ ತೀರಪ್ರದೇಶ: ಒಸೆದಿತ್ತನಾನ್—ಸಂತೋಷಿಸಿ ಕೊಟ್ಟವನು ನಾನು, ಎಱೆಯೆ ಕೇಳ್ದಂ—ಯಾಚಿಸಿ ಕೇಳಿದನವನು; ಇಳಾಧರ—ಭೂಮಿಯನ್ನು ಧರಿಸಿದ ಶ್ರೀಕೃಷ್ಣನೇ, ನೀನದರ್ಕೆ—ನೀನು ಅದಕ್ಕೆ, ಮಾತೆರಡಣಮಾಡಲಾಗದು-ಎರಡು ಮಾತನ್ನು ಸ್ವಲ್ಪವೂ ಆಡಲಾಗದು; ಇದು ಇಂಥ ಸಂದರ್ಭ, ಸ್ಕೃಪಿಸೊಳಲ್ಲದೆ – ಪುಣ್ಯವಿಶೇಷದಿಂದಲ್ಲದೆ, ಕೂಡಿ ಬರ್ಕುಮೇ—ಒಟ್ಟಾಗಿ ಬರುತ್ತದೆಯೇ? ಇಲ್ಲ,

೭೪. ದನುಜಾರೀ—ರಾಕ್ಷಸ ವೈರಿಯಾದ ಶ್ರೀಕೃಷ್ಣನೇ, ದಿವಿಜೇಂದ್ರ ಶಾಶ್ವತ ಗುಣಾ – ದೇವನಾಯಕನಾದ ಇಂದ್ರನಂತೆ ಶಾಶ್ವತವಾದ ಗುಣಗಳನ್ನುಳ್ಳವನೇ, ನಿನ್ನಳ್ಕದೇಂ—ನಿನ್ನ ಅಂಜಿಕೆ ಏನು? ಬೇಡಿದಾನ್-ಯಾಚಿಸಿದವನು, ಅನಲಂ—ಅಗ್ನಿ; ತೀರ್ಥ ಸಮೀಪಂ—ಪುಣ್ಯತೀರ್ಥಕ್ಕೆ ಹತ್ತಿರ; ಅಂಬುನಿವಹ ವ್ಯಾಕೋಳ ಕಾಳಿಂದಿಯಾ ಬನಮುಂ—ನೀರರಾಶಿಯಿಂದ ಸಂಚರಿಸುತ್ತಿರುವ ಯಮುನಾ ನದಿಯು ಕಾಡುಗಳು ಕೂಡ, ಕೇಳ್ಪುವು – ನನ್ನ ಮಾತನ್ನು ಕೇಳಿವೆ; ಭೂತಮುಮ್ಮುಂ – ಪಂಚಭೂತಗಳೂ, ಕೊಟ್ಟಿರ್ದುದಾನ್ – ನಾನು ಮಾತುಕೊಟ್ಟಿರುವುದನ್ನು, ಅಱಿಗುಂ – ತಿಳಿದಿವೆ; ಅಂತಱಿಂ – ಆದ್ದರಿಂದ, ಎನಗೆ – ನನಗೆ, ಇಂ ಮಾಣ್ಬುದು—ಇನ್ನು ಇಲ್ಲವೆನ್ನುವುದು, ಸೂೞೆ—ಸರದಿಯೆ, ಕ್ರಮವೆ? ಅಲ್ಲ. ಇಂದು—ಈಗ, ಆಂ—ನಾನು, ತಳ್ವಿಲ್ಲದೆ-ತಡವಿಲ್ಲದೆ, ಖಾಂಡವಮುಂ—ಖಾಂಡವ ವನವನ್ನು, ಊಡುವೆಂ—ಉಣಿಸುತ್ತೇನೆ, ಅಗ್ನಿಗೆ. ಇಲ್ಲಿರುವ ಬೇಡಿದಾನ್, ಕೊಟ್ಟಿರ್ದುದಾನ್-ಎಂಬಿವೆರಡು ಪೂರ್ವದ ಹಳಗನ್ನಡ ಪ್ರಯೋಗಗಳು.

೭೫. ಒತ್ತಿ—ಆಕ್ರಮಿಸಿ, ತಱುಂಬಿ—ಅಡ್ಡಗಟ್ಟಿ, ನಿಂದ—ನಿಂತ, ರಿಪುಭೂಜ ಸಮಾಜದ—ಶತ್ರುಗಳೆಂಬ ಮರಗಳ ಸಮೂಹದ, ಬೇರ್ಗಳಂ—ಬೇರುಗಳನ್ನು. ನಭಕ್ಕೆ—ಆಕಾಶಕ್ಕೆ, ಎತ್ತುವೆ, ಬಂದು, ತನ್ನ, ಮಱೆವೊಕ್ಕೊಡೆ—ಶರಣಾಗತರಾದರೆ, ಕಾಯದೆ—ರಕ್ಷಿಸದೆ, ಚಾಗದ—ತ್ಯಾಗದ, ಒಳ್ಪಿನ—ಒಳ್ಳೆಯತನದ, ಅಚ್ಚೊತ್ತದೆ—ಅಚ್ಚನ್ನು ಹಾಕದೆ,

ಮಾಣ್ಬು–ಬಿಟ್ಟು, ಬಾಳ್ವ–ಬಾಳುವ, ಪುೞುವಾನಸನೆಂಬಂ–ಕೀಟಕ್ಕೆ ಸದೃಶನಾದ ಮನುಷ್ಯನೆಂಬವನು, ಎಂದರೆ ಮಾನವಕೀಟವು, ಅಜಾಂಡಮೆಂಬುದೊಂದು–ಬ್ರಹ್ಮಾಂಡ ವೆಂಬ ಒಂದು, ಅತ್ತಿಯಪಣ್ಣೊಳ್–ಅತ್ತಿಯ ಹಣ್ಣಲ್ಲಿ, ಇರ್ಪ–ಇರುವ, ಪುೞುವಲ್ಲದೆ–ಹುಳುವಲ್ಲದೆ, ಮುರಾಂತಕಾ–ಕೃಷ್ಣನೇ, ಮಾನಸನೇ–ಮನುಷ್ಯನೇ ? ಅಲ್ಲ.

**ವಚನ** : ಮಱುಮಾತಿಂಗೆಡೆಯಿಲ್ಲದಂತೆ – ಪ್ರತಿಮಾತಿಗೆ ಎಂದರೆ ಉತ್ತರಕ್ಕೆ ಅವಕಾಶವಿಲ್ಲದಿರುವಂತೆ ; ಗಂಡವಾತುಮಂ–ಪೌರುಷದ ಮಾತನ್ನು ; ನನ್ನಿವಾತುಮಂ–ಸತ್ಯದ ಮಾತನ್ನೂ ;

**೭೬.** ಅರಿಗ – ಅರ್ಜುನನೇ. ಕೇಳ್ – ಕೇಳು, ಸಮಕಟ್ಟಿಂಗೆ – ಹೋಲಿಕೆಗೆ, ಒರೆಗೆ – ಸಮಾನಕ್ಕೆ; ಆರುಂ – ಯಾರೂ, ನಿನ್ನೊಳ್ – ನಿನ್ನಲ್ಲಿ, ಸಮಂ – ಎಣೆ, ಧಾತ್ರಿಯೊಳ್ – ಭೂಮಿಯಲ್ಲಿ, ಇಲ್ಲ ; ಹಿಮಕೃದ್ಭೂಧರದಂತೆ – ಹಿಮವತ್ಪರ್ವತದ ಹಾಗೆ, ನಿನ್ನ ಗುಣಸಂದೋಹಂಗಳಂ–ನಿನ್ನ ಗುಣಗಣಗಳನ್ನು, ಮತ್ತೊರ್ವನೊಳ್–ಇನ್ನೊಬ್ಬನಲ್ಲಿ, ಕಾಣಲಕ್ಕುಮೆ – ಕಾಣಲಾಗುತ್ತದೆಯೆ ? ಆಗದು – ಆಗುವುದಿಲ್ಲ ; ಅದೆಂತೆನೆ – ಅದು ಹೇಗೆ ಎಂದರೆ, ಸಮ....ತಿಯನ್ ; ಸಮಸ್ತ–ಎಲ್ಲ, ಉರ್ವೀಧರ–ಭೂಮಿಯನ್ನು ಧರಿಸಿರುವ, ಅಶೇಷ–ಸಕಲವಾದ, ಶೇಷ–ಶೇಷನೆಂಬ, ಮಹಾನಾಗ–ಮಹಾಸರ್ಪದ, ಫಣಾ-ಹೆಡೆಯ, ಮಣಿದ್ಯುತಿಯಂ – ರತ್ನದ ಕಾಂತಿಯನ್ನು. ಏಂಖದ್ಯೋತದೊಳ್–ಮಿಂಚುಹುಳುವಿನಲ್ಲಿ ಏನು, ಕಾಣ್ಬರೇ–ಕಾಣುತ್ತಾರೆಯೆ ?

**೭೭.** ಮುನಿಯಿಸಿದಂ-ಕೆರಳಿಸಿದವನು, ಕರಂ-ವಿಶೇಷವಾಗಿ; ಪಿರಿಯನಪ್ಪುದು-ದೊಡ್ಡವನಾಗಿರಲಹುದು; ಬೇೞ್ಪನ–ಬೇಡುವವನ, ಬೇೞ್ಪವಸ್ತು–ಬಯಸಿದ ಪದಾರ್ಥ, ಕಾಂಚನಗಿರಿಯಿಂದಂ-ಚಿನ್ನದ ಬೆಟ್ಟಕ್ಕಿಂತ, ಮೇರುಪರ್ವತಕ್ಕಿಂತ, ಅಗ್ಗಳಮೆನಿಸಿಪ್ಪುದು-ಶ್ರೇಷ್ಠವೆನಿಸಿಕೊಳ್ಳುವುದು ; ಅದು, ಆದೊಡಮೇನೋ–ಆದರೆ ತಾನೇ ಏನೋ ! ಜೀವಮುಳ್ಳನಮಿಱಿದು – ಜೀವವಿರುವವರೆಗೂ ಕಾದಾಡಿ, ಅರ್ಥಮುಳ್ಳನೆಗಮಿತ್ತು–ಐಶ್ವರ್ಯವಿರುವವರೆಗೂ ದಾನಮಾಡಿ, ನೆಗೞ್ತೆಯನಾಂಪುದು–ಕೀರ್ತಿಯನ್ನು ಪಡೆಯುವುದು, ಎಂಬ, ಪೆಂಪಿನ–ಹಿರಿಮೆಯ, ಸಮಕಟ್ಟು–ವ್ಯವಸ್ಥೆ, ಕಣ್ಗೆ–ದೃಷ್ಟಿಗೆ ಇದೆ; ಅರಿಕೇಸರಿ, ನಿನ್ನವೊಲ್–ನಿನ್ನಹಾಗೆ, ಪೆಱಂ–ಬೇರೆಯವನು, ಆರ್–ಯಾರು, ದೊರೆ–ಸಮಾನ.

**ವಚನ :** ಕೋಡಿಂಗೆ–ಕೊಡುಗೆಗೆ, ದಾನಕ್ಕೆ ; ದಿತಿಜಕುಲ ಪಾವಾನಲನುಮಂ-ಶ್ರೀಕೃಷ್ಣನನ್ನೂ ; ಅನಲಂ–ಅಗ್ನಿ ; ಪರಸಿ–ಹರಸಿ ; ಮನಃಪವನವೇಗದಿಂ–ಮನೋವೇಗದಿಂದ, ಪವನವೇಗದಿಂದ ; ಬಯ್ತಿಟ್ಟ–ಬಚ್ಚಿಟ್ಟ ; ದಿವ್ಯ ಸಂಭವಂಗಳಪ್ಪ–ಸ್ವರ್ಗದಲ್ಲಿ ಹುಟ್ಟಿದ, ಅತಿಶ್ರೇಷ್ಠವಾದ ಹುಟ್ಟನ್ನುಳ್ಳ ; ಗಂಡಸ್ಥಮಪ್ಪ – ಕಪೋಲ ಪ್ರದೇಶದಲ್ಲಿರುವ ; ತವದೊಣೆಗಳುಮಂ – ಅಕ್ಷಯವಾದ ಬತ್ತಳಿಕೆಗಳನ್ನು ; ಕೆಯ್ಕೊಳಲ್ವೇೞ್ಕುಂ–ಸ್ವೀಕರಿಸಬೇಕು :

**೭೮.** ಪಾವಕಂ–ಅಗ್ನಿ, ಅೞ್ಪಿ-ಸುಟ್ಟು, ಖಾಂಡವಮಂ-ಖಾಂಡವ ವನವನ್ನು,

ಉಂಡಪಂ–ಉಣ್ಣುತ್ತಾನೆ ; ಅರ್ಜುನಂ–ಅರ್ಜುನನು, ಊಡಿದಪಂ–ಉಣಿಸುತ್ತಾನೆ ; ಐರಾವತವಾಹನಂ–ಇಂದ್ರನು, ನೆಱೆದು–ಸಮರ್ಥನಾಗಿ, ಸಾಧನ ಸಂಯುತಂ–ಸೈನ್ಯ ಸಮೇತನಾದವನು, ಆಂಪಂ–ಎದುರಿಸುತ್ತಾನೆ ; ಅಲ್ಲಿ–ಆ ಸಂದರ್ಭದಲ್ಲಿ, ನಾನಾವಿಧ ಯುದ್ಧಮುಂಟು – ನಾನಾ ತೆರನಾದ ಯುದ್ಧಗಳಿವೆ, ಎನುತೆ – ಎನ್ನುತ್ತ, ಶೈಬ್ಯ, ಬಳಾಹಕ, ಮೇಘವರ್ಣ, ಸುಗ್ರೀವ–ಎಂಬ ಹೆಸರುಗಳನ್ನುಳ್ಳ, ಹಯಂಗಳಿಂದೆಸೆವುದಂ–ಕುದುರೆಗಳಿಂದ ಶೋಭಿಸುವ, ರಥಮಂ–ರಥವನ್ನು, ಹರಿ–ಕೃಷ್ಣ, ತಾನು–ತಾನು ಕೂಡ, ಏಱಿದಂ–ಹತ್ತಿದನು.

**ವಚನ :** ಅಂತು ದಾರುಕಂ–ಹಾಗೆ ದಾರುಕನೆಂಬ ಸಾರಥಿ ; ಚೋದಿಸಲೊಡಂ–ಮುಂದೆ ಹರಿಸಿದಕೂಡಲೇ.

**೭೯.** ಇರ್ವರ ರಥಚೋದಕರ್–ಇಬ್ಬರ ಸಾರಥಿಗಳು, ಚೋದಿಸುವುದುಂ–ರಥಗಳನ್ನು ಮುಂದೆಹರಿಸುತ್ತಲು : ಅವರ, ಎರಡು ರಥದ, ಗಾಳಿಯ, ಕೋಳಿಕೆ–ಆಕ್ರಮಣದಿಂದ, ಆದ ರಜಃಪಟಲಂ–ಉಂಟಾದ ಧೂಳಿನ ಸಮೂಹ, ಕವಿದು–ಮುಸುಕಿ, ದಿವಿಜ ವಧುವಿರ–ದೇವಸ್ತ್ರೀಯರ, ಕಣ್ಣೊಳ್–ಕಣ್ಣಿನಲ್ಲಿ, ಆದಮೆ–ವಿಶೇಷವಾಗಿಯೇ, ಱೀವಿದುದು–ತುಂಬಿತು.

**ವಚನ :** ಅನಿತೆ ನೀಳಮೊಳಂ ನೆಱೆದು–ಅಷ್ಟೇ ಉದ್ದದಲ್ಲಿ ತುಂಬಿ, ಆವರಿಸಿ.

**೮೦.** ಕಕುಭ–ಕೆಂಪುಮತ್ತಿ, ಅಶೋಕ–ಅಶೋಕೆ, ಕದಂಬ, ಲುಂಗ–ಮಾತು ಲುಂಗ, ಲವಲೀಭೂಜ–ಅರನೆಲ್ಲಿಯೆಂಬ ಮರ, ಅರ್ಜುನಾನೋಕಹ–ಬಿಳಿಮತ್ತಿ ಮರದ, ಪ್ರಕರಂ–ಸಮೂಹವನ್ನುಳ್ಳ, ಪುಷ್ಪಿತ....ನಿಕರಂ : ಪುಷ್ಪಿತ–ಹೂಬಿಟ್ಟ, ಹೇಮಪಂಕಜ – ಹೊಂದಾವರೆಯ, ರಜಸ್ಸಂಸಕ್ತ – ಧೂಳಿನಲ್ಲಿ ಆಸಕ್ತಿಯನ್ನುಳ್ಳ, ಭೃಂಗಾಂಗನಾನಿಕರಂ–ಹೆಣ್ಣುದುಂಬಿಗಳ ಸಮೂಹವನ್ನುಳ್ಳ, ಸಾರಸ....ತ್ತರಂ : ಸಾರಸ–ಬಕದ, ಹಂಸ–ಹಂಸೆಯ, ಕೋಕಿಳ–ಕೋಗಿಲೆಯ, ಕುಳ–ಸಮೂಹದ, ಧ್ವಾನೋತ್ತರಂ–ಶಬ್ದಸಮೂಹವನ್ನುಳ್ಳ, ಆನಂದನಂ–ಆನಂದಕರವಾದ, ನಂದನಂ–ಆ ಖಾಂಡವವನ, ಕರಂ – ವಿಶೇಷವಾಗಿ, ಸಕ್ತನಿಳಿಂಪ ದಂಪತಿಗಳಿಂದೆ – ಆಸಕ್ತರಾದ ದೇವದಂಪತಿಗಳಿಂದ, ಚೆಲ್ವನಾಯ್ತು–ಸೊಗಸಾಯಿತು.

**ವಚನ :** ತೊಟಿಲ್ದು ತೋಱು–ಸುತ್ತಾಡಿ ತೋರಿಸಿ.

**೮೧.** ಅಳಿಗಳ್–ದುಂಬಿಗಳು, ಅಲರಂ ನೋಯಿಸದೆ–ಹೂವನ್ನು ನೋಯಿಸದೆ, ಒಯ್ಯನೊಯ್ಯನೆ–ಮೆಲ್ಲಮೆಲ್ಲಗೆ, ಬಂಡುಣ್ಬುವು–ಮಕರಂದವನ್ನು ಕುಡಿಯುತ್ತವೆ; ಗಾಳಿ, ಆಟಂದು ಬಂದು–ಮೇಲೆ ನುಗ್ಗಿಬಂದು, ಅಲೆಯಲ್ಕೆ–ಬೀಸುವುದಕ್ಕೆ, ಅಣ್ಮದು–ಪ್ರಯತ್ನಿಸದು, ಸೂರ್ಯಕಿರಣಾನೀಕಕ್ಕಂ–ಸೂರ್ಯನ ಕಿರಣಗಳ ಸಮೂಹಕ್ಕೂ, ಎಂದಪ್ಪೊಡಂ–ಎಂದಾದರೂ, ಸಲವಿಲ್ಲ–ಪ್ರವೇಶವಿಲ್ಲ; ಉದ್ಧತಸಿದ್ಧ ಖೇಚರರೆ-ಗರ್ವಿಷ್ಠರಾದ ಸಿದ್ಧರೇ ಖೇಚರರೇ, ತಾಂ–ತಾವು, ಆಳ್ವೇಲಿಯಾಗಿ–ಮಾನವರೇ ಬೇಲಿಯಾಗಿ, ಇಂತು, ನಿಚ್ಚಲುಂ–ನಿತ್ಯವೂ, ಓರಂತೆ ಇರೆ–ಕ್ರಮವಾಗಿ ಇರಲು, ಕಾವರ್-ರಕ್ಷಿಸುತ್ತಾರೆ;

ಸಂದಸಕ್ಕೆ–ಖಾಂಡವವನಕ್ಕೆ, ಇಂದ್ರನಾ-ಇಂದ್ರನ, ಕಾಪು–ರಕ್ಷಣೆ, ಈ ದೊರೆತು-ಈ ಪಾಟಿಯಾದದ್ದು, ಸಲವು<ಸಲ್+ಅವು ; ಈ ದೊರೆತು-ಈ ದೊರೆಯುದು. ಸ್ವೀಕೃತ ಪಾಠದಲ್ಲಿ ಆಳ್ವೇರಿ ಎಂದಿದೆ; ಇಲ್ಲಿ ಆಳ್ವೇಲಿ ಎಂಬ ಪಾಠಾಂತರವನ್ನು ಸ್ವೀಕರಿಸಿದೆ; ಬಾಜಿಳ್ವೇಲಿ ಎಂಬುದರೊಡನೆ ಹೋಲಿಸಿ; ಆಳ್ವೇರಿ ಶಬ್ದ ಪಂಪನಕಾಲದಷ್ಟು ಹಳೆಯ ದಲ್ಲವೆಂದು ಊಹೆ.

೮೨. ಮಘವಂ–ಇಂದ್ರನು (ಶಚೀಸಮೇತನಾಗಿ), ಒರ್ಮೆ–ಒಂದು ಸಲ, ಬನಮಂ–ವನವನ್ನು, ತೊಟಿಲ್ದು–ಸುತ್ತಾಡಿ, ನೋಡಿ, ಪ್ರೂತಚೂತಮಂ–ಹೂವಾದ ಮಾವಿನ ಮರವನ್ನು, ನೆರ್ಮ್ಮೆಡ–ಒರಗಿಕೊಂಡ, ಆಶ್ರಯಿಸಿದ, ಅಶೋಕ ವಲ್ಲರಿಯ– ಅಶೋಕೆಯ ಬಳ್ಳಿಯ, ಪಲ್ಲವಮೊಂದನೆ–ಒಂದೇ ಚಿಗುರನ್ನು, ಶಚಿ–ಇಂದ್ರನ ರಾಣಿ, ಕೊಯ್ದು–ಬಿಡಿಸಿ, ರಾಗದಿಂ–ನಲವಿನಿಂದ, ಸೋರ್ಮುಡಿಯೊಳ್–ಉದ್ದವಾದ ಜಡೆಯಲ್ಲಿ ತಗುಳ್ಚಿದೊಡೆ–ಮುಡಿದುಕೊಂಡರೆ, ಸೂಟಿನೆ–ಸೂಳ್ ಎಂದು ಶಬ್ದಮಾಡುತ್ತ, ಬಾರಿಸಿದಂ–ತಡೆದನು, ದಲ್ ಎಂದೊಡೆ–ನಿಶ್ಚಯವಾಗಿಯೂ ಎಂದರೆ ಕೂರ್ಮೆಯ ಮಾತು ಮೆಚ್ಚುವನಿತರ್ಕೆ–ಪ್ರೀತಿಯ ಮಾತನ್ನು ಮೆಚ್ಚುವಷ್ಟರಮಟ್ಟಿಗೆ, ಬಳಾರಿ– ಇಂದ್ರನು, ಮುರಾಸುರಾರಿಯೇಂ–ಏನು ಶ್ರೀಕೃಷ್ಣನೇ? ಅಲ್ಲ.

೮೩. ಇಂತಪ್ಪ ಬನಮಂ–ಇಂಥ ವನವನ್ನು, ಇದಂ–ಇದನ್ನು, ಅನಲನ– ಅಗ್ನಿಯನ್ನು, ಊಡಲೆಂದು–ಉಣ್ಣಿಸಬೇಕೆಂದು, ಎಂತುಪ್ರೊಣ್ದಯ್–ಹೇಗೆ ಪ್ರತಿಜ್ಞೆ ಮಾಡಿದೆ; ಮುಂ–ಮೊದಲು, ಪೂಣ್ದಂತೆ-ಶಪಥಮಾಡಿದಂತೆ, ಊಡು–ತಿನ್ನಿಸು ; ಶಿತಶರ ಸಂತತಿಯಂ–ಹರಿತವಾದ ಬಾಣಸಂಘಾತವನ್ನು, ಬಿಲ್ಲೊಳ್–ಬಿಲ್ಲಿನಲ್ಲಿ, ಪೂಡು– ಸಂಧಾನಮಾಡು ; ಏಕೆ ನೀಂ ತಡೆದಿರ್ಪಯ್–ಏಕೆ ನೀನು ತಡಮಾಡುತ್ತಿರುವೆ?

೮೪. ಬನದೊಳ್ – ಕಾಡಿನಲ್ಲಿ, ಪರಮಾಣುವನಿತು – ಪರಮಾಣುವಷ್ಟು ಸೂಕ್ಷ್ಮವಾದ, ಚರಾಚರಂ–ಜೀವ ಅಜೀವವಸ್ತುಗಳು, ಪೋಗೆ–ತಪ್ಪಿಹೋಗಲು, ಅನಲಂ–ಅಗ್ನಿ, ತಣಿಯಂ–ತೃಪ್ತಿಪಡನು ; ಅದರ್ಕೆ ಅದಕ್ಕೆ, ಆಂ–ನಾನು, ನೆರನಪ್ಪೆಂ– ಸಹಾಯಕನಾಗುತ್ತೇನೆ ; ಉಗ್ರ–ಭಯಂಕರರಾದ, ಕಿನ್ನರ ಸುರದನುಜೋರಗರ– ಕಿನ್ನರರು, ದೇವತೆಗಳು, ರಾಕ್ಷಸರು, ನಾಗರು, ಇವರ ಕದನಮೇಂ–ಇವರ ಯುದ್ಧವೇನು, ನಿನಗರಿದೇ–ನಿನಗೆ ಅಸಾಧ್ಯವೇ?

**ವಚನ** : ನೋಡಿಂ – ನೋಡಿರಿ ; ಭುಜಪರಿಘ – ಪರಿಘಾಯುಧದಂತಿರುವ ಭುಜಗಳು ; ಕೆಯ್ಯಾವಿಕೊಂಡು–ಕೈಯನ್ನು ತುಂಬಿಕೊಂಡು.

೮೫. ಓಡುಗೆ ನಿಮ್ಮ ಪೆಯ್ಯಪಸಿವು–ಓಡಲಿ ನಿಮ್ಮ ದೊಡ್ಡ ಹಸಿವು; ಆಂತ ವಿರೋಧಿಗಳ್–ಎದುರಿಸಿದ ವೈರಿಗಳು, ಎನ್ನ ಕೆಯ್ಯೊಳ್–ನನ್ನ ಕೈಯಲ್ಲಿ, ಅಜ್ಜಾಡುಗೆ– ನಾಶವಾಗಲಿ; ಕೊಳ್ಳಿಂ–ತೆಗೆದುಕೊಳ್ಳಿರಿ, ಉಣ್ಣಿಂ–ಊಟಮಾಡಿರಿ, ಎನೆ–ಎನ್ನಲು, ಅನಲಂ–ಅಗ್ನಿ, ಕೇಳ್ದು–ಕೇಳಿ, ಪರಸುತ್ತುಂ–ಹರಸುತ್ತ, ಆ ಲಯಕ್ರೀಡೆಯೊಳ್–ಆ ಪ್ರಳಯಕಾಲದ ಲೀಲೆಯಲ್ಲಿ, ಚರಾಚರಮುಮಂ–ಜೀವಾಜೀವಗಳನ್ನೂ, ಸುಡುವ

ಅಂದಿನ ಮೆಯ್ಗ್ಗಂ–ಸುಡುವ ಅಂದಿನ ರೂಪಕ್ಕೂ, ಅಗ್ಗಳಂಮಾಡಿ–ಅತಿಶಯತೆಯನ್ನು ಮಾಡಿ, ತಗುಳ್ದು ನೀಳ್ದು ಬಳಿದು–ಅನುಸರಿಸಿ ನೀಳವಾಗಿ ಬೆಳೆದು, ಅರ್ಚಿಸೆ–ಸುಡುವುದ ಕ್ಕಾಗಿ, ಆವನಾಂತಮುಂ–ಆ ಅರಣ್ಯದೊಳಗನ್ನು, ಪರ್ಚಿದಂ–ಹಬ್ಬಿದನು

೮೬. ಫಳ....ನಂದನಕ್ಕೆ: ಫಳಕರ್ಪೂರ–ಫಲಿತಕರ್ಪೂರ, ಲವಂಗ, ಲುಂಗ–ಮಾದಲ, ಲವಲೀ–ಅರಸೆಲ್ಲಿ, ಹಿಂತಾಳ–ಹಿಂತಾಳ, ತಾಳೀ–ತಾಳೆ, ತಮಾಳಳತಾ–ಹೊಂಗೆಯಬಳ್ಳಿ, ಇವುಗಳಿಂದ, ಸುಂದರ–ಸೊಗಸಾದ, ನಂದನಕ್ಕೆ–ವನಕ್ಕೆ, ಮುಂ ತನ್ನ ಅರ್ಚಿಗಳ್ ಅಳುರೆ–ಮೊದಲು ತನ್ನ ಜ್ವಾಲೆಗಳು ವ್ಯಾಪಿಸಲು, ಬಂದು ಮುಂಮುಂದರಿದು ಬಂದು, ಮೊಕ್ಕಳಂ–ವಿಶೇಷವಾಗಿ, ಎತ್ತಂ–ಎಲ್ಲೆಲ್ಲಿಯೂ, ಸುರಿಯುತ್ತುಮಿರ್ಪ–ಸುರಿಯುತ್ತಿರುವ, ರಸಮುಂ–ಮರದ ರಸವನ್ನು, ಮನಂಗೊಳೆ–ಮನವನ್ನಾಕರ್ಷಿಸಲು, ಸಪ್ತಾರ್ಚಿ–ಅಗ್ನಿಯು, ಪೊದಳ್ದು–ಹರಡಿ, ನೀಳ್ದು–ದೀರ್ಘವಾಗಿ, ಒಸಗೆಯಿಂದ–ನಲಿವಿನಿಂದ, ಆಪೋಶನಂಗೊಳ್ವವೊಲ್–ಅಪೋಶನ ತೆಗೆದುಕೊಳ್ಳುವಹಾಗೆ, ಪೀರ್ದು ಕೊಂಡಂ–ಹೀರಿಕೊಂಡನು.

೮೭. ನನೆಕೊನೆಯ–ಮೊಗ್ಗಿನ ಟಿಸಲಿನ, ತಳಿರ ಪೂವಿನ–ಚಿಗುರಿನ ಹೂವಿನ, ಬನಮನಿತುಂ–ಆ ವನವೆಲ್ಲ, ಶಿಖಿಗಳಳುರೆ–ಜ್ವಾಲೆಗಳು ವ್ಯಾಪಿಸಲು, ಜೆಂಕೆಯು–ಜೆಂಕಿಯು, ಪೊಯ್ದುರ್ವಿನೊಳೆ–ಹೊಡೆದ ರಭಸದಲ್ಲಿ, ಕೊರಗಿರ್ದ–ಬಾಡಿದ, ಲತೆಗಳ–ಬಳ್ಳಿಗಳ, ಕೊನೆಗೊನೆಯನೆ–ಕವಲು ಕವಲುಗಳನ್ನೇ, ದಹನಂ–ಅಗ್ನಿ, ಅಳುರ್ದು–ಸುಟ್ಟು, ಕೊನೆಕೊನೆಗೊಂಡಂ–ತುತ್ತತುದಿಯನ್ನು ಆಕ್ರಮಿಸಿದನು.

ವಚನ: ಇಂದ್ರನ ಬೆಸದೊಳ್–ಇಂದ್ರನ ಅಪ್ಪಣೆಯಲ್ಲಿ; ತಾಗೆ–ಸಂಘಟ್ಟಿಸಲು

೮೮. ಉರಿ–ಅಗ್ನಿ, ಬನಮುಂ–ವನವನ್ನು, ಕೊಂಡಪುದು–ಸುಡುತ್ತಿದೆ, ಅದಂ ಕಂಡು ಎಂತು ಇರಲಕ್ಕುಂ–ಅದನ್ನು ನೋಡಿ ಹೇಗೆ ಸುಮ್ಮನಿರುವುದು, ಎಂದು, ತಾಗಿದ–ಎದುರಿಸಿದ, ನೆಗಳ್ತೆವೆಳ್ಗಂಡರ–ಪ್ರಸಿದ್ಧರಾದ ಒಳ್ಳೆಯ ಶೂರರ, ಗಂಡೋಡು ವಿನಂ–ಪೌರುಷವು ಪಲಾಯನ ಮಾಡುತ್ತಿರಲು, ಗಾಂಡೀವಮುಕ್ತಬಾಣಗಣಂಗಳ್–ಗಾಂಡೀವದಿಂದ ಬಿಡಲ್ಪಟ್ಟಬಾಣಗಳ ಸಮೂಹಗಳು, ಕೊಂಡುವು–ನಾಟಿದುವು.

ವಚನ: ಮೊನೆಯಂಬಿನ–ಮೊನಚಾದ ಬಾಣದ, ಅಂಬೇಜಂಗೆ–ಬಿಲ್ಲು ಯುದ್ಧಕ್ಕೆ, ಹತವಿಹತ ಕೋಳಾಹಳರಾಗಿ–ಹೊಡೆತ ಮರುಹೊಡೆತಗಳ ಗೊಂದಲ ವನ್ನುಳ್ಳವರಾಗಿ; ಅಸಿದ್ಧರ್–ಸಿದ್ಧತೆಯಿಲ್ಲದವರು, ಕಾಪುರುಷರಂತೆ–ಅಲ್ಪ ಮನುಷ್ಯ ರಂತೆ; ಒಂದೊರ್ವರಂ ಮಿಗೆಯೋಡೆಯುಂ–ಒಬ್ಬೊಬ್ಬರನ್ನು ಮೀರಿ ಓಡುತ್ತಿರಲು; ಅಧರರಾಗೆಯುಂ–ತಿರಸ್ಕೃತರಾಗಲು; ಪನ್ನತಿಕೆಯಿಂ–ಪರಾಕ್ರಮದಿಂದ; ಆಂತೊಡೆ–ತಾಗಿದರೆ. ಇಲ್ಲಿ ಒಂದೊರ್ವರಂ ಎಂಬುದು ಓರೊರ್ವರಂ ಎಂದಿರಬೇಕು; ಆದರೆ ಇದು ಪಂಪನ ವಿಶಿಷ್ಟ ಪ್ರಯೋಗ; ಹಲವೆಡೆಗಳಲ್ಲಿ ಬರುತ್ತದೆ.

೮೯. ನಾಗರ ಖಂಡಂಗಳಂ–ಹಸಿರುಂಡಿಯ ಚೂರುಗಳನ್ನು, ಆ ನಾಗರಖಂಡ ದೊಳೆ–ಆ ಸರ್ಪಗಳ ಚೂರುಗಳಲ್ಲೇ, ತೊಡರೆ–ಸಿಕ್ಕಿಕೊಳ್ಳುವಂತೆ, ನಡಸಿಸುವುದುಂ–

ಅರ್ಜುನನು ಬಾಣಪ್ರಯೋಗಮಾಡುತ್ತಲು, ಆ ನಾಗರಖಂಡಂಗಳುಮಂ-ಆ ಹಸಿ ಶುಂಠಿಯ ಚೂರುಗಳನ್ನೂ, ಆ ನಾಗರಖಂಡಂಗಳುಮಂ-ಆ ಹಾವುಗಳ ತುಂಡುಗಳನ್ನೂ ದಹನಂ-ಅಗ್ನಿ, ಅಳುರ್ದುಕೊಂಡಂ-ವ್ಯಾಪಿಸಿ ಸುಟ್ಟನು.

೯೦. ಉನ್ಮದ....ಕುಲಂಗಳ್: ಉನ್ಮದ-ಸೊಕ್ಕಿದ, ಪರಭೃತ-ಕೋಗಿಲೆ, ಷಟ್ಚರಣ-ದುಂಬಿ, ರಾಜಕೀರ-ಅರಗಿಳಿ, ಇವುಗಳ, ಕುಲಂಗಳ್-ಸಮೂಹಗಳು. ವಿರಹಿಗಳ-ಅಗಲಿದ ಪ್ರೇಮಿಗಳ, ಸುಯ್ಯ-ಬಿಸಿಯುಸಿರಿನ, ಜೆಂಕೆಯೊಳ್-ಜೆಂಕಿಯಲ್ಲಿ, ಇರದೆ-ನಿಲ್ಲದೆ, ಒಣಗಿದುವಕ್ಕುಂ-ಒಣಗಿದುವಾಗಿವೆ, ಈಗಳ್-ಈಗ, ಎನಲ್-ಎನ್ನಲು, ಉರಿವುರಿಯಿಂದಂ-ಉರಿಯುವ ಉರಿಯಿಂದ, ಕರಿಮುರಿಕನಾದುವು-ಸೀದು ಸುಕ್ಕಿದುವು.

೯೧. ಉರಿಕೊಳೆ-ಉರಿ ಆಕ್ರಮಿಸಲು, ದೆಸೆಗಾಣದೆ-ದಿಕ್ಕುಕಾಣದೆ, ದೆಸೆವರಿ ವಂದು-ದಿಕ್ಕುದಿಕ್ಕಿಗೆ ಓಡಿ, ಕುಜಂಗಳಂ-ಮರಗಳನ್ನು, ಪಡಲ್ವಡಿಸಿ-ಕೆದರಿಬೀಳಿಸಿ, ಭಯಂಬೆರಸು-ಭಯದೊಡನೆ ಕೂಡಿ, ಒಳಱೆ-ಕೂಗಿಕೊಳ್ಳಲು, ಆ ವನಕರಿಶರಭ ಕಿಶೋರಕಂಠಗರ್ಜನೆ-ಆ ಕಾಡಾನೆಗಳ, ಶರಭಗಳ ಮರಿಗಳ ಕೊರಳಿನ ಗರ್ಜನೆ, ಆ ಬನದೊಳ್-ಆ ಕಾಡಿನಲ್ಲಿ, ನೆಗೆದುವು-ಚಿಮ್ಮಿ ಹಾರಿದುವು.

೯೨. ಸಂಗತ ಧೂಮಾವಳಿಯಂ-ಸೇರಿಕೊಂಡ ಹೊಗೆಯ ಸಾಲುಗಳನ್ನು, ಇಭಂಗಳೆ ಗೆತ್ತು - ಆನೆಗಳೆಂದೇ ಭಾವಿಸಿ, ಸಿಂಗಂಗಳ್ - ಸಿಂಹಗಳು, ಒಳಱು- ಕೂಗಿಕೊಂಡು, ಪಾಯ್ದು-ನುಗ್ಗಿ, ಕಣ್ಣಂ-ಕಣ್ಣುಗಳನ್ನು, ಪೊಗೆ-ಹೊಗೆಯು, ಪುಗೆ- ಹೊಗಲು, ಅಳುರೆ-ವ್ಯಾಪಿಸಲು, ಗರ್ಜಿಸಿ-ಗರ್ಜನೆಮಾಡಿ, ಲಂಗಿಸಿ-ಹಾರಿ, ಪುಡಪುಡನೆ ಪುಟ್ಟಿ-ಪುಡಪುಡ ಬೆಂದುಹೋಗಿ, ಪಲವುಂ-ಹಲವು ಸಿಂಹಗಳು, ಸತ್ತುವು-ಸತ್ತು ಹೋದುವು.

ವಚನ: ಲತಾಗೃಹಂಗಳೊಳಂ-ಬಳ್ಳಿಮನೆಗಳಲ್ಲಿಯೂ; ಧಾರಾಗೃಹಂಗಳೊಳಂ- ನೀರಧಾರೆ ಸುರಿಯುವ ಮನೆಗಳಲ್ಲಿಯೂ ;

೯೩. ಕಿರ್ಚು-ಉರಿ, ಒಡನೆ-ಜೊತೆಜೊತೆಯಾಗಿ, ಅಳುರೆ-ಸುಡಲು, ಆ ಪ್ರಾಣವಲ್ಲಭರ್-ಆ ಪ್ರಾಣಪ್ರಿಯರು, ಪ್ರೇಮಿಗಳು, ತೋಳಂ ಸಡಿಲಿಸದೆ-ತಬ್ಬಿರುವ ತೋಳುಗಳನ್ನು ಸಡಿಲಮಾಡದೆ, ಪ್ರಾಣಮಂ-ಜೀವವನ್ನು, ಅಂದು-ಆಗ, ಒಡಗಳೆ ದರ್-ಜೊತೆಯಲ್ಲಿ ನೀಗಿಕೊಂಡರು ; ಓಪರ್-ಪ್ರೇಮಿಗಳು, ಓಪರೊಳ್-ಪ್ರೀತಿಸಿದವ ರಲ್ಲಿ, ಒಡಸಾಯಲ್-ಸಹ ಮರಣವನ್ನು, ಪಡೆದರ್-ಪಡೆದರು ; ಇನ್ನವುಂ-ಇಂಥವು ; ನೈಪು-ಪುಣ್ಯ, ಒಳವೇ-ಉಂಟೇ? ಇಲ್ಲ. ಈ ಪದ್ಯ ಪಂಪನಿಗೆ ತುಂಬ ಮೆಚ್ಚಾದದ್ದು ; (ಆದಿ ಪು.) ೫-೨೪ ನೋಡಿ.

ವಚನ: ಕೋಳುಮಂ - ಆಕ್ರಮಣವನ್ನೂ ; ಶಿಖಾಕಳಾಪದ - ಜ್ವಾಲೆಗಳ ಸಮೂಹದ ; ಕೋಳುಮಂ-ಆಕ್ರಮಣವನ್ನೂ ; ಬಂಚಿಸಿ-ವಂಚಿಸಿ ; ಬಲೆಪಱಿದ ಕೋಕನಂತೆ-ಬಲೆ ಹರಿದ ಕೋಕಪಕ್ಷಿಯ ಹಾಗೆ ; ವನಪಾಲಕಂ-ಕಾಡಿನ ಕಾವಲುಗಾರ; ಕೋಳ್ < ಕೊಳ್ ; ಭಾವನಾಮ.

೯೪. ದೇವ–ಸ್ವಾಮಿಯೆ, ಬಿನ್ನಪಂ–ಬಿನ್ನಹ; ಇಂದು, ಕೃಶಾನು–ಅಗ್ನಿ, ಖಾಂಡವಮಂ–ಖಾಂಡವ ವನವನ್ನು, ತಗುಳ್ದು–ವ್ಯಾಪಿಸಿ, ನಾನಾವಿಧಂ ಸುಡೆ–ನಾನಾ ರೀತಿಯಾಗಿ ಸುಡಲು; ನೋಡಲಾಱದೆ–ನೋಡಲಸಮರ್ಥರಾಗಿ, ತಳ್ತ–ಎದುರಿಸಿದ, ದೇವರ ಕಾಪಿನಾಳ್–ಸ್ವಾಮಿಯವರ ಕಾವಲುಗಾರರು, ದೇವಕಿನ್ನರ ಪನ್ನಗಾವಳಿ–ದೇವತೆಗಳ ಕಿನ್ನರರ ನಾಗರ ಸಮೂಹ, ಮೊಟ್ಟನಪ್ಪಿನಂ–ಮುಟ್ಟಸವಾಗುತ್ತಿರಲು, ಎಚ್ಚು–ಬಾಣಪ್ರಯೋಗ ಮಾಡಿ, ಕೊಂದು–ಸಾಯಿಸಿ, ದೇವರಂ–ಪ್ರಭುವಾದ ನಿಮ್ಮನ್ನು, ಏವರ್–ಏನುಮಾಡುವರು ಎಂದು, ಒರ್ವಂ–ಒಬ್ಬ, ಅಗುರ್ವು–ಭಯವು, ಪರ್ವಿರೆ–ಹಬ್ಬಿರಲು, ಅಱಿದಿರ್ದಂ–ತಿಳಿದಿದ್ದಾನೆ. ಇಲ್ಲಿ 'ಅಱಿದಿರ್ದಂ' ಎಂಬುದಕ್ಕೆ "ಉಱಿದಿರ್ದಂ" ಎಂದು ಪಾಠವಿದ್ದಿರಬಹುದು. "ಮಲ್ಲಿಕಾಯುತಮಾಲೆಯುಪ್ಪುದು ರಂಸಜಂಜಭರಂಬರಲ್".

೯೫. ನೋಟಕ್ಕೆ–ನೋಡುವುದಕ್ಕೆ, ಎರಡು ರಥಮೊಳವು–ಎರಡು ರಥಗಳಿವೆ; ಎರಡಱೊಳ್–ಎರಡರಲ್ಲಿ, ಅವನ, ಒಂದು ರಥಮೆ–ಒಂದು ರಥವೇ, ತೋಟಿಗೆ–ಕಾಳಗಕ್ಕೆ, ಪಲವಾಗಿರೆ–ಅನೇಕವಾಗಿರುವಂತೆ, ಪರಿದು–ಹರಿದು, ಓಡಿ, ಕಣ್ಣೊಳಿನ್ನುಂ–ಕಣ್ಣುಗಳಲ್ಲಿ ಇನ್ನುಕೂಡ, ತಿರಿದಪುದು–ತಿರುಗುತ್ತಿದೆ; ನಮ್ಮ ಬನಮೆನಿತನಿತುಂ–ನಮ್ಮ ವನವು ಎಷ್ಟೋ ಅಷ್ಟು, ಉರಿದಪುದು–ಉರಿಯುತ್ತಿದೆ.

**ವಚನ:** ಪೌಲೋಮೀಪತಿ–ಇಂದ್ರ; ವಿಳಯಕಾಳಾಂಬುದದಂತೆ–ಪ್ರಳಯಕಾಲದ ಮೋಡದ ಹಾಗೆ; ಮೊಱಗುಮಂ–ಗುಡುಗನ್ನೂ; ಬೆಸಸಿದಾಗಳ್–ಅಪ್ಪಣೆ ಮಾಡಿದಾಗ; ಕೂಟಕೋಟಿಗಳೆ–ಕೋಟ್ಯಂತರ ಶಿಖರಗಳೆ; ಕಿೞ್ತಿಟ್ಟು ಬರ್ಪಂತೆ–ಕಿತ್ತಿದ್ದು ಬರುವಹಾಗೆ, ಕಱ್ತುಲಿಸಿ–ಕತ್ತಲೆಮಾಡಿ,

೯೬. ಲೋಕಮಂ–ಲೋಕವನ್ನು, ಈಗಳ್–ಈಗ, ಸಪ್ತಸಾಗರ ಜಲಂಗಳೆ–ಏಳು ಕಡಲ ನೀರುಗಳೆ, ಕವಿದುವು–ಮುಚ್ಚಿಕೊಂಡುವು, ಎಂಬಿನಂ–ಎನ್ನುತ್ತಿರಲು, ಮುಗಿಲ್ಗಳ್–ಮೋಡಗಳು, ಅಲ್ಲಿ, ಕವಿದು–ಮುಚ್ಚಿಕೊಂಡು, ಕಱೆಯುತ್ತಿರೆ–ಮಳೆಯನ್ನು ಸುರಿಸುತ್ತಿರಲು, ಪಾವಕಂ–ಅಗ್ನಿ, ಉರ್ಕುಗೆಟ್ಟು–ಶಕ್ತಿ ಕಡಮೆಯಾಗಿ, ಎಂತುಮೊ–ಹೇಗೋ, ದಾನಂ–ದಾನವು, ತೊದಳಾಯ್ತು–ಸುಳ್ಳಾಯಿತು. ಎನೆ–ಎನ್ನಲು, ಗುಣಾರ್ಣವಂ–ಅರ್ಜುನನು, ಮಾರುತಬಾಣದೆ–ವಾಯುವ್ಯಾಸ್ತ್ರದಿಂದ, ಮೇಘಮಾಲಿಕಾ ನಿವಹಮನೆಚ್ಚು–ಮೇಘಮಾಲೆಗಳ ಸಮೂಹವನ್ನು ಹೊಡೆದೋಡಿಸಿ, ಕೂಡೆ–ಕೂಡಲೆ, ಶರಪಂಜರಮಂ–ಬಾಣಗಳ ಪಂಜರವನ್ನು, ಪಡೆದಂ–ಪಡೆದನು, ಉಂಟುಮಾಡಿದನು.

**ವಚನ:** ಪುಂಖಾನು ಪುಂಖಮಾಗೆ–ಬಾಣದಗರಿ ಬಾಣದ ಗರಿಯನ್ನು ಸೋಕುವ ಹಾಗೆ, ಪರಂಪರೆಯಾಗಿ; ಎಡೆವಱಿಯದಂತೆ–ನಡುವೆನಿಲ್ಲದ ಹಾಗೆ, ಅನುಸ್ಯೂತವಾಗಿ; ತೋಡುಂಬೀಡುಂ–ತೊಡುವುದೂ, ಬಿಡುವುದೂ; ತುಱುಗಿ–ದಟ್ಟವಾಗಿ; ಮಾಣಿಸೆ–ನಿಲ್ಲಿಸಲು; ತಟ್ಟಿಮೆಡಱಿ–ತಟ್ಟಿ (ದಡ್ಡಿ) ಯನ್ನು ಹೆಣೆದು; ಮಶಕಮಾತ್ರ

ಮಪ್ಪೊಡಂ–ಸೊಳ್ಳೆಯಷ್ಟು ಪ್ರಾಣಿಯಾದರೂ; ಮಿಸುಕಲ್–ಅಲ್ಲಾಡಲು, ಚಲಿಸಲು, ಛಿದ್ರವಿಲ್ಲದಂತಾಗೆ–ರಂಧ್ರವಿಲ್ಲದಿರುವ ಹಾಗೆ; ಜೀಮೂತಂಗಳೆಲ್ಲಂ–ಮೇಘಗಳೆಲ್ಲ; ತೆರಳ್ದು–ಚಲಿಸಿ; ಆವಗೆಯ ಕಿಚ್ಚಿನಂತೆ–ಮಡಕೆ ಸುಡುವ ಒಲೆಯ ಕಿಚ್ಚಿನಂತೆ, ಒಳಗೊಳಗಳುರ್ದು–ಒಳಗೊಳಗೆ ವ್ಯಾಪಿಸಿ, ಸುಟ್ಟು

೯೭. ವನಖಗ ವನಮೃಗ ವನತರುವನಚರ ವನವನಜನಿವಹಂ–ಕಾಡುಹಕ್ಕಿ, ಕಾಡುಮೃಗ, ಕಾಡುಮರ, ಕಾಡುಪ್ರಾಣಿಗಳ, ಕಾಡುತಾವರೆಗಳ ಸಮೂಹಗಳು, ಉಳ್ಳನಿತುಂ–ಇರುವಷ್ಟೂ, ಸೀರನಿತುಂ–ಸೀರಿನಷ್ಟಾದರೂ, ಅಣಂ–ಸ್ವಲ್ಪವೂ, ಉಳಿದುದಿಲ್ಲೆಂಬಿನಂ – ಉಳಿಯಲಿಲ್ಲವೆನ್ನುತ್ತಿರಲು, ದಹನಂ–ಅಗ್ನಿ, ಅಳುರ್ದು–ವ್ಯಾಪಿಸಿ, ಖಾಂಡವ ವನಮಂ–ಖಾಂಡವವನವನ್ನು, ಉಂಡಂ–ಉಂಡನು. ಸೀರು–ಒಂದು ಸಣ್ಣ ಹೇನು.

**ವಚನ:** ವನಗಹನಮೆಲ್ಲಂ–ಕಾಡೆಲ್ಲ; ವಿಸ್ಮಯಮಾಗೆ–ಆಶ್ಚರ್ಯವಾಗಲು; ಪೊಱಮಡಲೀಯದೆ–ಹೊರಹೊರಡಲು ಬಿಡದೆ.

೯೮. ಒಂದು ದೆಸೆಯೊಳ್–ಒಂದು ದಿಕ್ಕಿನಲ್ಲಿ, ತಗುಳ್ದ–ಅಟ್ಟಿಬರುವ, ಮುಕುಂದನ–ಕೃಷ್ಣನ, ಕರಚಕ್ರಂ–ಕೈಯ ಚಕ್ರಾಯುಧ; ಒಂದು ದೆಸೆಯೊಳ್–ಒಂದು ದಿಕ್ಕಿನಲ್ಲಿ, ನರ–ಅರ್ಜುನ, ಎಚ್ಚ–ಪ್ರಯೋಗಿಸಿದ, ಒಂದು, ಶರಂ–ಬಾಣ, ಒಂದು ದೆಸೆಯೊಳ್–ಒಂದುಕಡೆ, ದಹನಾರ್ಚಿ–ಅಗ್ನಿಯ ಜ್ವಾಲೆ, ಸುತ್ತಿಮುತ್ತುವಪದದೊಳ್–ಸುತ್ತಿಮುತ್ತಿಕೊಳ್ಳುವ ಸಮಯದಲ್ಲಿ.

೯೯. ಅರಿಕೇಸರಿಯೆರಡು ಪದಾಂಬುಜಮುಂ–ಅರಿಕೇಸರಿಯ ಎರಡು ಪಾದಪದ್ಮಗಳೂ, ಈಗಳ್–ಈಗ, ಎನಗೆ–ನನಗೆ, ಶರಣಕ್ಕೆ–ಶರಣಾಗತಿಯನ್ನು ನೀಡಲಿ, ಎಂಬುದುಮಾಗಳ್–ಎನ್ನುತ್ತಲು ಆಗ, ಹರಿಚಕ್ರಂ ಕೊಳ್ಳದೆ–ಕೃಷ್ಣನ ಚಕ್ರಾಯುಧ ಹೊಡೆಯಲಿಲ್ಲ; ನರಶರಮುರ್ಚದೆ–ಅರ್ಜುನನ ಬಾಣ ಭೇದಿಸಲಿಲ್ಲ; ಅವನಂ–ಅವನನ್ನು, ದಹನಶಿಖೆಗಳ್–ಅಗ್ನಿ ಜ್ವಾಲೆಗಳು, ಅಳುರದೆ–ಸುಡಲಿಲ್ಲ.

**ವಚನ:** ವನಾಂತರಾಳದೊಳ್–ಕಾಡಿನ ನಡುವೆ; ಬರ್ದುಂಕಿ–ತಪ್ಪಿಸಿಕೊಂಡು; ಎರಟ್ಟುಂಡಮಪ್ಪಿನಂ–ಎರಡು ತುಂಡಾಗುತ್ತಿರಲು; ಆಖಂಡಳತನಯಂ–ಇಂದ್ರನ ಮಗ, ಅರ್ಜುನ; ನನ್ನಿಮಾಡಿ–ನಿಜವಾಗಿಸಿ, ದಿಟವಾಗಿಸಿ.

೧೦೦. ಪಗೆಸಾಱುವುದುಂ–ದ್ವೇಷವನ್ನು ಸಾರಿ ಹೇಳುತ್ತಲು, ಪಗೆಸಾಱಿದ–ವೈರವನ್ನು ಸಾರಿದ, ನಿನ್ನಂ–ನಿನ್ನನ್ನು, ಕೊಲ್ಲೆಂ–ಕೊಲ್ಲೆನು; ಆರ ಮಱೆಯಂ ಪೊಕ್ಕುಂ–ಯಾರಿಗೆ ಶರಣಾಗಿಯಾದರೂ, ಪಗೆಯಂ ನೆಱಪು–ಹಗೆಯನ್ನು ತೀರಿಸು; ಎನೆ–ಎನ್ನಲು, ನೆಱಪುವ ಬಗೆಯೊಳ್–ತೀರಿಸುವ ಮನದಿಂದ, ಕರ್ಣನ ದೊಣೆಯಂ–ಕರ್ಣನ ಬತ್ತಳಿಕೆಯನ್ನು, ಕಡಂಗಿ–ಉತ್ಸಾಹಿಸಿ, ಪೊಕ್ಕಂ–ಪ್ರವೇಶಿಸಿದನು.

**ವಚನ:** ಲಾವಗೆಗಂ–ಲಾವಗೆಯೆಂಬ ಹಕ್ಕಿಗೂ; ಓದುತ್ತಂ–ಹೇಳುತ್ತ; ತಣ್ಣೆದೆಯಾಗು–ತಂಪಾದವನಾಗು; ಅೞ್ಱಿಮೆೞ್ಱಿದಂತಾದುದಂ–ನಾಶವಾಗಿ ಸಾರಿಸಿ

ದಂತಾಗಲು. "ಅಟ್ಟಿ-ಜೀರ್ಣೆ", ಮೆಟ್ಟು=(ತ)ಮೆಟ್ಟುಕಸ್ಟು-(ನೆಲ ಮುಂತಾದುವನ್ನು) ಸಾರಿಸು; ಮನೆಯನ್ನು ಸಾರಿಸಿ ಗುಡಿಸಿಬಿಟ್ಟ, ಎಂಬ ರೂಢಿಯ ಮಾತಿಗೆ ಮನೆಯನ್ನು ಹಾಳುಮಾಡಿದನು ಎಂಬರ್ಥವಿರುವಂತೆ.

೧೦೧. ಎನಗೆ-ನನಗೆ, ಮಗಂ-ಮಗನು, ಎಂದು-ಎಂದು ಹೇಳಿ, ಪಾರ್ಥನಂ-ಅರ್ಜುನನನ್ನು, ಪಿಡಿದು-ಹಿಡಿದು, ಕಟ್ಟದೆ, ಮಾಣ್ಬೆನೆ-ಬಿಡುತ್ತೇನೆಯೆ? ಚಕ್ರಿಯುಂ-ಕೃಷ್ಣನನ್ನು, ಧರಿತ್ರಿಗೆ-ಲೋಕಕ್ಕೆ, ಗುರುವೆಂದು-ಗುರುವೆಂದು ಹೇಳಿ, ವಜ್ರದೊಳ್-ವಜ್ರಾಯುಧದಲ್ಲಿ, ಉರುಳ್ಚದೆ-ಉರುಳಿಸದೆ, ಕೆಡವದೆ, ಮಾಣ್ಬೆನೆ-ನಿಲ್ಲುತ್ತೇನೆಯೆ? ಬಗೆಯದೆ-ಲಕ್ಷ್ಯಮಾಡದೆ, ಕರಂ-ವಿಶೇಷವಾಗಿ,ಗೊಡ್ಡಮಾಡಿದರ್ಗೆ-ಚೇಷ್ಟೆಮಾಡಿದವರಿಗೆ, ಈಗಳೆ-ಈಗಲೇ, ತಕ್ಕುದಂ-ತಕ್ಕದ್ದನ್ನು, ಮಾಟ್ಪೆನೆಂದು-ಮಾಡುತ್ತೇನೆಂದು, ಸುರಾಧಿಪಂ-ಇಂದ್ರ, ನಿಜವಾಹನಮಂ-ತನ್ನವಾಹನವಾದ ಐರಾವತವನ್ನು, ಏಱಿ-ಹತ್ತಿ, ದಿವದಿಂ-ಸ್ವರ್ಗದಿಂದ, ತೊಟ್ಟನೆ-ಶೀಘ್ರವಾಗಿ, ಪ್ರೋಜಮುಟ್ಟಂ-ಹೊರಹೊರಟನು.

**ವಚನ:** ದೇವನಿಕಾಯಂ ಬೆರಸು-ದೇವತೆಗಳ ಸಮೂಹ ಸಮೇತನಾಗಿ; ಪೞುವಗೆಯೊಳ್-ದುರ್ಭಾವದಲ್ಲಿ, ಭೈರವಂಬಾಯ್ಬಿಟ್ಟಂತೆ-ಭೈರವನು ನುಗ್ಗುವ ಹಾಗೆ; ಸರಸಿಜಸಂಭವಂ-ಬ್ರಹ್ಮ; ಮಾರ್ಕೊಂಡು-ಎದುರಿಗೆ ನಿಂತು.

೧೦೨. ಬನಮನೆ-ಖಾಂಡವವನವನ್ನೇ, ಕಾಯಲೆಂದು-ರಕ್ಷಿಸಬೇಕೆಂದು, ಇಱಿವೆಯಪ್ಪೊಡೆ-ಕಾಳಗಮಾಡುವ ಪಕ್ಷದಲ್ಲಿ, ಮುನ್ನಮೆ-ಮೊದಲೇ, ಪೋದುದು-ನಾಶವಾಯಿತು; ಅಂದು-ಆಗ, ಪಾರ್ಥನೊಳ್-ಅರ್ಜುನನಲ್ಲಿ, ಎನಗೆ-ನನಗೆ, ಏವಂ-ಅಸಮಾಧಾನ, ಕೋಪ, ಎಂಬ ಬಗೆಯುಳ್ಳೊಡೆ-ಎನ್ನುವ ಎಣಿಕೆಯಿದ್ದರೆ, ನಿನ್ನಯ-ನಿನ್ನ, ಪುತ್ರಂ-ಮಗ; ಅಚ್ಯುತಂಗೆ-ಕೃಷ್ಣನಿಗೆ, ಇನಿಸು-ಇಷ್ಟು, ಎಡೆಗೊಂಡೆಯಪ್ಪೊಡೆ-ಎಡೆಯಲ್ಲಿ ನೋಯುತ್ತಿರುವುದಾದರೆ, ಅದು ಕೂಡದು-ಅದು ಸಲ್ಲದು, ಮೂವರೊಳ್-ತ್ರಿಮೂರ್ತಿಗಳಲ್ಲಿ, ಒರ್ವಂ-ಒಬ್ಬನು; ಎಮ್ಮ-ನಮ್ಮ, ಮಾತಿನಿತೆ-ಮಾತು ಇಷ್ಟೇ, ಗುಣಾರ್ಣವಂಗೆ-ಅರ್ಜುನನಿಗೆ, ಗೆಲ್ಲಮಂ-ಜಯವನ್ನು, ಕುಡು-ಕೊಡು; ಇಂತಿದೆ-ಹೀಗೆ ಇದೇ, ಕಜ್ಜದ-ಕಾರ್ಯದ, ಉಜ್ಜುಗಂ-ಉದ್ಯೋಗ. ಬೇರೆ ಏನಿಲ್ಲ ಎಂದು ಅರ್ಥ. ಈ ಪದ್ಯದಲ್ಲಿ, ಇತರ ಹಲವೆಡೆಗಳಲ್ಲಿ ಇರುವಂತೆ, ಸಂಕ್ಷಿಪ್ತತೆಯ ಸೌಸವವಿದೆ: ಒಂದು ಸಂದರ್ಭದ ಹುರುಳೇನೆಂದು ಮನಗಂಡ ಪಂಪ ಅಷ್ಟನ್ನು ಮಾತ್ರ ಧ್ವನಿಮಯವಾಗಿ ಹೇಳುತ್ತಾನೆ. ಅದರ ಮೇಲೆ ಮಾತಿಲ್ಲ, ಪರಿಭಾವನೆಗೆ ಎಷ್ಟು ಅವಕಾಶ ಬೇಕಾದರೂ ಇದೆ.

**ವಚನ:** ಕಮಲಾಸನಂ-ಬ್ರಹ್ಮ; ಆಸೆದೋಱಿ-ಆಸೆಯನ್ನು ತೋರಿಸಿ; ಉಳ್ಳುದನೆ ನುಡಿವೊಡೆ-ಇರುವುದನ್ನು ಇರುವಹಾಗೆಯೇ ಹೇಳಲು; ಅಂತೆಗೆಯ್ವೆಂ-ಹಾಗೆ ಮಾಡುತ್ತೇನೆ.

೧೦೩. ಆತ್ಮತನೂಭವನ-ತನ್ನ ಮಗನಾದ ಅರ್ಜುನನ, ಉತ್ತಮಾಂಗದೊಳ್-

ತಲೆಯಲ್ಲಿ, ಸುರಿವರಲ-ಸುರಿಯುವ ಹೂಗಳ, ಒಂದು ಬೆಳ್ಸರಿ-ಒಂದು ಬಿಳಿಯಧಾರೆ, ದೊರೆಕೊಳೆ-ಉಂಟಾಗಲು ; ಅಲ್ಲಿ-ಆ ಎಡೆಯಲ್ಲಿ, ನಿಲ್ಲದೆ-ಇರದೆ, ಕುಸುಮಂ-ಹೂವು, ಕೆಲವು, ಅಲ್ಲುಗೆ-ಅಲ್ಲಿ ಸುರಿಯಲು ; ತಾನೆ-ತಾನೇ, ತನ್ನ, ರತ್ನವಿಸ್ಫುರಿತ-ರತ್ನದಿಂದ ಪ್ರಕಾಶಿಸುತ್ತಿರುವ; ಕಿರೀಟಮಂ-ಕಿರೀಟವನ್ನು, ಕವಿದು-ಅರ್ಜುನನ ತಲೆಯ ಮೇಲೆ ಇಟ್ಟು, ನರಂಗೆ-ಅರ್ಜುನನಿಗೆ, ಕಿರೀಟಿನಾಮಮುಮಂ-ಕಿರೀಟಿ ಎಂಬ ಹೆಸರನ್ನು, ಆಗಳ್-ಆಗ, ಸರಸದಿಂ-ರಸಮಯವಾಗಿ, ಉಚ್ಚರಿಸಿ-ಹೇಳಿ. ಸುರಾಧಿಪಂ-ಇಂದ್ರ, ಸಾಹಸಮಂ-ಅರ್ಜುನನ ಪರಾಕ್ರಮವನ್ನು, ಪೊಗೞ್ದಂ-ಹೊಗಳಿದನು.

**ವಚನ :** ಕಱಂಗಿ ಕಟ್ಟಿಗಿದ-ಕಪ್ಪು ಕಪ್ಪಾದ; ವ್ಯಾಘಾತ-ಏಟು, ಹೊಡೆತ ; ವಿಕಲ್ಪಮುಂ-ವ್ಯತ್ಯಾಸವು ; ವಿಚ್ಛಿನ್ನಮುಂ-ಭೇದವೂ ;

**೧೦೪.** ಅನಿತಿನಿತೆನ್ನದೆ-ಅಷ್ಟು ಇಷ್ಟು ಎಂದು ಹೇಳದೆ, ಅಂತ ಸುರ ಪನ್ನಗ ಕಿನ್ನರ ಸೈನ್ಯಮೆಲ್ಲಂ-ಎದುರಿಸಿದ ದೇವತೆ ನಾಗಕಿನ್ನರರ ಸೈನ್ಯವೆಲ್ಲ, ಅಂಬಿನಪೊಸೆಯೊಳ್-ಬಾಣಯುದ್ಧದಲ್ಲಿ, ಪಡಲ್ವಡೆ-ಚೆಲ್ಲಾಪಿಲ್ಲಿಯಾಗಲು, ಲತಾಭವನಂ-ಬಳ್ಳಿಮಾಡ, ಕೃತಕಾಚಳಂಗಳ್-ಕೃತಕಪರ್ವತಗಳು, ಎಂಬನಿತುಮುವು-ಎಂಬ ಇಷ್ಟೆಲ್ಲ, ಅೞ್ಗಿತೞ್ಗಿ-ನಾಶವಾಗಿ ತಗ್ಗಲು, ನುಡಿಯಂ-ಮಾತನ್ನು, ನುಡಿದಂತೆ-ಹೇಳಿದಂತೆ, ನೆಗೞ್ಚಲ್-ಮಾಡಲು, .ಅಂದು-ಆ ದಿವಸ, ಅಮರೇಂದ್ರನಂದನಂ-ಅರ್ಜುನನು, ಅಗ್ನಿದೇವನಂ - ಅಗ್ನಿದೇವತೆಯನ್ನು, ಅಮರೇಂದ್ರನಂದನಮಂ - ಇಂದ್ರನ ವನವಾದ ಖಾಂಡವವನವನ್ನು, ಊಡಿದಂ-ಊಟಮಾಡಿಸಿದನು.

**ವಚನ :** ಸ್ವಾಹಾಂಗನಾನಾಥಂ-ಅಗ್ನಿ ; ನೀರೋಗನಾಗಿ-ರೋಗವಿಲ್ಲದವನಾಗಿ;

**೧೦೫.** ಧರ್ಮಜಂ ಬೆರಸು-ಧರ್ಮರಾಜನೊಡನೆ, ತನ್ನೊಡವುಟ್ಟಿದರ್-ತನ್ನ ಸಹೋದರರು, ಎಯ್ದೆ-ಸಮೀಪಿಸಿ, ಇದಿರ್ವರೆ-ಇದಿರ್ಗೊಳ್ಳಲು, ತಳ್ತುಕಟ್ಟಿದ ಗುಡಿ-ಸೇರಿಸಿ ಕಟ್ಟಿದ ಧ್ವಜಗಳು; ರಂಗವಲ್ಲಿಗಳೆ-ರಂಗೋಲಿಗಳೆ, ಪಾಂಗುಡಿಯಂತಿರೆ-ಉದ್ದವಾದ ಕುಡಿಗಳ ಹಾಗಿರಲು, ಸುದತಿಯರ್-ಸ್ತ್ರೀಯರು, ಸೇಸೆಯಂ-ಅಕ್ಷತೆಯನ್ನು, ಸೂಸೆ-ಚೆಲ್ಲಲು, ಅಂಗನೆಯರ್-ವನಿತೆಯರು, ಚಾಮರಮಂ-ಚಾಮರಗಳನ್ನು, ಇಕ್ಕೆ-ಬೀಸಲು, ಲೋಕಮಂ-ಜಗತ್ತನ್ನು, ನಿಜಕೀರ್ತಿ-ತನ್ನ ಕೀರ್ತಿಯು, ಪುದಿದಿರೆ-ತುಂಬಿರಲು, ಪರಸೈನ್ಯ ಭೈರವಂ-ಅರ್ಜುನ, ನಿಜಮಂದಿರಮಂ-ತನ್ನರಮನೆಯನ್ನು, ಪೊಕ್ಕಂ-ಪ್ರವೇಶಮಾಡಿದನು. ಪಾವು + ಕುಡಿ = ದಾಂಗುಡಿ.

ಪಂಚಮಾಶ್ವಾಸಂ ಸಂಪೂರ್ಣಂ

# ಷಷ್ಠಾಶ್ವಾಸಂ

೧. ಶ್ರೀಗೆ ಫಳಂ ಚಾಗಂ–ಐಶ್ವರ್ಯಕ್ಕೆ ಪ್ರಯೋಜನ ದಾನ; ವಾಕ್‌ಶ್ರೀಗೆ ಫಳಂ ಸರ್ವಶಾಸ್ತ್ರಪರಿಣತಿ–ವಾಗ್ವಿಭೂತಿಗೆ ಪ್ರಯೋಜನ ಸಕಲಶಾಸ್ತ್ರಗಳಲ್ಲಿ ಪಾಂಡಿತ್ಯ; ವೀರಶ್ರೀಗೆ ಫಳಂ ಆಯಂ-ಪ್ರತಾಪಕ್ಕೆ ಪ್ರಯೋಜನ ಔಚಿತ್ಯ; ಎಂದಿಂತಾಗಳುಮಱಿದು-ಎಂದು ಇಂತು ಯಾವಾಗಲೂ ತಿಳಿದುಕೊಂಡು, ಪರಾಕ್ರಮಧವಳಂ–ಪರಾಕ್ರಮದಲ್ಲಿ ವೃಷಭನಂತಿರುವ ಅರ್ಜುನನು, ಎಸಗಿದಂ–ಮಾಡಿದನು.

**ವಚನ :** ಪರಮಂಡಳಿಕರ್–ಶತ್ರುಗಳಾದ ಮಂಡಲಾಧಿಪರು; ಬೆಸಕೆಯ್ಯೆ–ಆಜ್ಞೆಯನ್ನು ಪಾಲಿಸಲು.

೨. ತುಂಗ....ಕೀರ್ತಿ : ತುಂಗ–ಎತ್ತರವಾದ, ತರಂಗ-ಅಲೆಗಳಿಂದ, ಭಂಗುರ–ಚಂಚಲವಾದ, ಪಯೋಧಿ-ಕಡಲಿನಿಂದ, ಪರೀತ-ಬಳಸಿದ, ಮಹಾಮಹೀತಳ–ಮಹಾ ಭೂಮಂಡಲದಿಂದ, ಆಲಿಂಗಿತ-ತಬ್ಬಿಕೊಳ್ಳಲ್ಪಟ್ಟ. ಕೀರ್ತಿ–ಕೀರ್ತಿಯನ್ನುಳ್ಳ ಅರ್ಜುನ; ಬಡಪಾರ್ವನ ಪುಯ್ಯಲಂ–ಬಡಬ್ರಾಹ್ಮಣನ ಗೋಳನ್ನು, ಒರ್ಮೆ-ಒಂದುಸಲ, ಕೇಳ್ದು-ಕೇಳಿ, ಕೇಳ್ದನಾವಂಗಂ–ಕೇಳಿದ ಯಾವನಿಗೂ, ಅಗುರ್ವು–ಭಯವು, ಪರ್ವೆ-ಹಬ್ಬಲು, ಸೆರಗಿಲ್ಲದೆ ಪೋಗಿ-ಸಹಾಯವಿಲ್ಲದೆ ಹೋಗಿ, ಜವನೊಳ್‌ತಾಗಿ-ಯಮನನ್ನು ಎದುರಿಸಿ, ಪಾರ್ವರ ಪಿಳ್ಳೆಯ ಪೋದ ಜೀವಮಂ–ಬ್ರಾಹ್ಮಣಬಾಲಕನ ಹೋದ ಪ್ರಾಣವನ್ನು, ವಿಕ್ರಮಾರ್ಜುನಂ-ಅರ್ಜುನ, ತಂದಂ ಗಡ–ತಂದನಲ್ಲವೇ ?

**ವಚನ :** ಪಂಚರತ್ನಹಿರಣ್ಮಯಂ-ಐದುಬಗೆಯ ರತ್ನಗಳಿಂದಲೂ ಚಿನ್ನದಿಂದಲೂ ಮಾಡಲ್ಪಟ್ಟ; ಅಳವಿಯ-ವಿಸ್ತಾರದ; ರಕ್ಕಸಪಡೆಯಿಂ-ರಾಕ್ಷಸ ಸೈನ್ಯದಿಂದ; ನಲ್ಮೆ-ಒಳ್ಳೆಯತನವನ್ನು.

೩. ಇದಱಂದಂ–ಈ ಸಭಾಗೃಹದ ಅಂದ, ಬಿಸವಂದಂ–ಆಶ್ಚರ್ಯಕರ; ಒಂದು ತೆಱನಲ್ತು–ಒಂದು ರೀತಿಯಲ್ಲ; ಅದೆಂತೆಂದೊಡೆ–ಅದು ಹೇಗೆಂದರೆ; ಆರಯ್ವೊಡೆ–ವಿಚಾರಮಾಡಿದರೆ, ಇದಱೊಳ್ – ಇದರಲ್ಲಿ, ದಿವ್ಯಸರೋವರಂಗಳ್ – ಶ್ರೇಷ್ಠವಾದ ಸರೋವರಗಳು, ಇದಱೊಳ್ – ಇದರಲ್ಲಿ, ಕಲ್ಪಾವನೀಜಂಗಳ್ – ಕಲ್ಪವೃಕ್ಷಗಳು, ಇಂತಿದಱೊಳ್–ಹೀಗೆ ಇದರಲ್ಲಿ, ನಾಟಕಶಾಲೆ–ನಾಟಕಮಂದಿರ, ರಮ್ಯಂ–ರಮ್ಯ; ಇದಱೊಳ್–ಇದರಲ್ಲಿ, ದೇವಾಪ್ಸರೋನೃತ್ಯಂ–ದೇವತೆಗಳ ಅಪ್ಸರಸೆಯರ ಕುಣಿತ; ಇಂತಿದಱಂತಾಗಿರೆ–ಹೀಗೆ ಇದರ ಹಾಗಿರಲು, ನೋಡುವೊಡೆ–ನೋಡುವ ಪಕ್ಷದಲ್ಲಿ, ಸಭಾಗೇಹಮಂ – ಸಭಾಭವನವನ್ನು, ಮಾಡಲ್ – ನಿರ್ಮಿಸಲು, ಆರುಂ – ಯಾರೂ, ಅಱಿಯರ್–ತಿಳಿಯರು.

**ವಚನ** : ಮಾರ್ಕೊಳ್ಳದೆ-ಪ್ರತಿಭಟಿಸದೆ; ಕೊಳ್ಳಿಂ–ತೆಗೆದುಕೊಳ್ಳಿರಿ; ತೆರಳ್ದು – ಒಟ್ಟಾಗಿ; ಉರುಳಿಗೊಂಡಂತಿರ್ದ–ಉಂಡೆಯಾಗಿದ್ದ, ಬಾಸಣಿಗೆಗಳೆದು–ಮುಸುಕನ್ನು ತೆಗೆದು. ಬಾಸಣಿಗೆ < (ಸಂ)ವಾಸನಿಕ.

೪ ಇವನಿಂದ್ರನಟ್ಟಿದಂ – ಇವನನ್ನು ಇಂದ್ರನು ಕಳಿಸಿಕೊಟ್ಟನು, ನಿನಗೆ–ನಿನಗಾಗಿ; ಇದರ ಪೆಸರ್–ಇದರ ಹೆಸರು, ದೇವದತ್ತಮೆಂಬುದು–ದೇವದತ್ತವೆಂದು! ನಿನಗೆ ಅಭ್ಯುದಯಕರಂ – ನಿನಗೆ ಏಳಿಗೆಯನ್ನುಂಟುಮಾಡತಕ್ಕದ್ದು ; ಅರಿಗಾ–ಅರ್ಜುನನೇ, ನೋಡು, ಶಂಖಂ–ಶಂಖವು, ರಿಪುಹೃದಯಕವಾಟಪುಟವಿಘಟನಂ–ಶತ್ರುಗಳ ಹೃದಯದ ಬಾಗಿಲುಗಳನ್ನು ಧ್ವಂಸಮಾಡುವಂಥದು.

**ವಚನ :** ತನಗೆ ಕೊಂಡು–ತನಗಾಗಿ ತೆಗೆದುಕೊಂಡು ; ಮಡಗಿದೊ–ಇಟ್ಟರೆ.

೫. ಈ ಗದೆ–ಈ ಗದೆಯು, ಅಧಿಕ....ರೌದ್ರಂ : ಅಧಿಕ–ಅತಿಶಯವಾದ, ರಿಪು–ವೈರಿಗಳಾದ, ನೃಪತಿ–ರಾಜರ, ಬಳ–ಸೈನ್ಯಗಳ, ನವರುಧಿರ–ಹೊಸದಾದ ರಕ್ತದಿಂದ, ಸ್ಫುರಿತ–ಪ್ರಕಾಶಿಸುವ, ರೌದ್ರಂ–ಭಯಂಕರತೆಯನ್ನುಳ್ಳದ್ದು, ಪೆಸರಿಂ–ಹೆಸರಿನಿಂದ, ರುಧಿರಮುಖಿ, ಎಂಬುದು–ಎನ್ನುವುದು ; ಇದಂ, ಅಧಿಕಬಳಸ್ಥಂಗೆ–ಅತ್ಯಂತ ಶಕ್ತಿವಂತನಾದ, ಭೀಮಸೇನಂಗೆ, ಇತ್ತಂ

**ವಚನ :** ಬಳಿಯಂ–ಅನಂತರ ;

೬. ನಾರದಾಗಮನ : ಬೆಳಗುಗಳಿಲ್ಲಂ–ಕಾಂತಿಗಳೆಲ್ಲ, ಒಂದುಗುಳಿಯಾಗಿ–ಒಂದು ಗೋಳವಾಗಿ, ನಭಸ್ಥಳದಿಂದಂ–ಆಕಾಶದಿಂದ, ಈ ಮಹೀತಳಕಿಳಿತರ್ಪುದು–ಈ ಭೂಮಿಗೆ ಇಳಿದುಬರುತ್ತಿದೆ, ಎಂದು–ಎಂಬುದಾಗಿ, ಮನುಜಾಕೃತಿಯೆಂದು–ಮನುಷ್ಯನ ಆಕಾರವೆಂಬುದಾಗಿ. ಮುನೀಂದ್ರನೆಂದು – ಋಷಿಶ್ರೇಷ್ಠನೆಂಬುದಾಗಿ, ಕಣ್ಗೊಳಿಸೆ–ಕಣ್ಣಿಗೆ ಕಾಣಿಸಲು, ಮುನೀಂದ್ರರೊಳ್–ಋಷಿಶ್ರೇಷ್ಠರಲ್ಲಿಯೂ, ಕಮಲಸಂಭವನಂದನನೆಂದು–ಬ್ರಹ್ಮನ ಮಗ ನಾರದನೆಂದು, ನೋಟಕರ್–ನೋಡುವವರು, ತಳವೆಳಗಾಗೆ – ವ್ಯಾಕುಲಿತರಾಗಲು, ನೀರದಮಾರ್ಗದಿಂ – ಆಕಾಶದಿಂದ, ಅಂದು, ನಾರದಂ, ಸಾರೆವರೆ–ಹತ್ತಿರ ಬರಲು.

೭. ಬಳಸಿ–ಸುತ್ತುವರಿದು, ತನ್ನೊಡನೆ, ಒಯ್ಯನೊಯ್ಯನೆ–ಮೆಲ್ಲಮೆಲ್ಲಗೆ, ಬರ್ಪ–ಬರುವ, ದೇವರ–ದೇವತೆಗಳ, ಒಂದು ಗಾವಳಿಯಂ–ಒಂದು ಸಮೂಹವನ್ನು, ಇನ್ ಇರಿಂ–ಇನ್ನು ಇಲ್ಲಿಯೇ ಇರಿ, ಎಂದು–ಎಂದು ಹೇಳಿ, ತನ್ನನೆ–ತನ್ನನ್ನೇ, ನಿಲ್ಕಿ–ಮೆಟ್ಟುಂಗಾಲಿಟ್ಟು. ನೋಳ್ಪರ-ನೋಡುವವರ, ಕಣ್ಗೆ–ಕಣ್ಣುಗಳಿಗೆ, ಕಣ್ಬೊಳಪು-ಕಣ್ಣ ಪ್ರಕಾಶ, ತನ್ನಯ–ತನ್ನ, ಮೆಯ್ಯ–ಮೆಯ್ಯಿನ, ಬೆಳ್ಪಿನೊಳ್ ಪುದು–ಬಿಳುಪಿನಲ್ಲಿ ಸೇರಿ, ನಿಂದೊಡೆ–ನಿಂತುಕೊಂಡರೆ, ವಾಳಿವಿಮಾನ್–ಬಾಳಿವಿಮಾನು, ಪೊಳೆಯೆ–ಹೊಳೆಯಲು, ಧಾತ್ರಿಗೆ ವರ್ಪ–ನೆಲಕ್ಕೆ ಬರುವ, ಗಂಗೆವೊಲ್–ಗಂಗಾನದಿಯಂತೆ, ಮುನಿಪುಂಗವಂ–ಋಷಿಶ್ರೇಷ್ಠನು, ಒಪ್ಪಿದಂ–ಸೊಗಸಾದನು.

ಮೇಲಿನ ೬ನೆಯ ಪದ್ಯವನ್ನು ಮಾಘನ ಈ ಕೆಳಗಿನ ಪದ್ಯದೊಡನೆ ಹೋಲಿಸಬಹುದು (ಶಿಶುಪಾಲವಧಂ ೧–೩).

ಚಯಸ್ತ್ವಿಷಾಮಿತ್ಯವಧಾರಿತಂ ಪುರಾ । ತತಃ ಶರೀರೀತಿ ವಿಭಾವಿತಾಕೃತಿಂ
ವಿಭುರ್ವಿಭಕ್ತಾವಯವಂ ಪುಮಾ । ನಿತಿ ಕ್ರಮಾದಮುಂ ನಾರದ ಇತ್ಯಬೋಧಿ ಸಃ

೮. ಸರಿಗೆಯೊಳ್–ಚಿನ್ನದ ದಾರದಲ್ಲಿ, ಸಮೆದ–ಮಾಡಿದ, ಅಕ್ಷಮಾಲಿಕೆ–ಜಪಸರ, ಪೊನ್ನಮುಂಜಿ – ಚಿನ್ನದ ಉಡಿದಾರ, ತೊಳಪ್ಪ ಭಸ್ಮರಜಸ್ತ್ರಿಪುಂಡ್ರಕಂ–ಹೊಳೆವ ವಿಭೂತಿಯ ಧೂಳಿನ ಮೂರು ಗೆರೆಗಳು; ಪಿಂಗಜಟಾಳಿ–ಪಿಂಗಲಬಣ್ಣದ ಜಟೆಯಸಾಲು, ತಾವರೆಯಸೂತ್ರದೊಳಾದ ಜನ್ನವಿರಂ – ತಾವರೆಯ ನೂಲಿನಿಂದ ಮಾಡಿದ ಜನಿವಾರ, ದುಕೂಲದ ಕೋವಣಂ–ರೇಷ್ಮೆಯ ಕೌಪೀನ, ಇವೆಲ್ಲ, ಕರಂ ಒಡಂಬಡೆ–ವಿಶೇಷವಾಗಿ ಒಪ್ಪಲು, ಆ ತಪಸ್ವಿ–ಆ ಋಷಿ, ನೋಟಕರ್ಕಳಂ–ನೋಡುವವರನ್ನು, ಮರುಳ್ಗಿದಂ–ಮರುಳುಮಾಡಿದನು, ಆಕರ್ಷಿಸಿದನು. “ಸಮೂಢಕರ್ಪೂರಪರಾಗಪಾಂಡುರಮ್, ದಧಾನಮಂಭೋರುಹ ಕೇಸರದ್ಯುತೀರ್ಜಟಾಃ, ಪಿಶಂಗಮೌಂಜೀಯುಜಮರ್ಜುನಚ್ಛವಿಂ, ಸುವರ್ಣಸೂತ್ರಾಕಲಿತಾಧರಾಂಬರಾಂ” ಎಂಬ ಮಾಘನ ವರ್ಣನೆಯೊಡನೆ ಹೋಲಿಸಿ.

೯. ಬಟ್ಟಗೊಡೆ–ದುಂಡಗಿರುವ ಕೊಡೆಯು, ಚಂದ್ರಕಾಂತಿಯುಂ – ಚಂದ್ರನ ಪ್ರಕಾಶವನ್ನು, ಅಟ್ಟುಂಬರಿಗೊಳೆ–ಅಟ್ಟಿ ಓಡಿಸಲು, ಸ್ರೊವಳ್ದ – ಪರಡಿದ, ಕೃಷ್ಣಾಜಿನಂ–ಜಿಂಕೆಯ ಚರ್ಮ, ಒಂದು, ಇಟ್ಟಳಮೆಸೆಯೆ–ಸೊಗಸಾಗಿ ಹೊಳೆಯಲು, ಗಾಡಿಗಳೊಳ್–ಸೊಗಸುಗಳಲ್ಲಿ, ಎಸೆವ–ಧ್ವನಿಮಾಡುವ, ವೀಣಾಕ್ವಣಿತಂ–ವೀಣಾನಾದ. ಬೆಡಂಗಂ–ಬೆಡಗನ್ನು, ಪುಟ್ಟಿಸೆ–ಹುಟ್ಟಿಸಲು.

೧೦. ಬೆರಲೊಳ್–ಬೆರಳುಗಳಲ್ಲಿ, ಬೀಣೆಯ ತಂತಿಗಳ್–ವೀಣೆಯ ತಂತಿಗಳು, ಒರಸಿದ–ಉಜ್ಜಿದ, ಕೆಂಗಡೆಗಳ್–ಕೆಂಪಾದ ಜಡ್ಡುಗಳು, ಅಕ್ಷಮಾಲೆಯೊಳ್–ಜಪಮಾಲೆಯಲ್ಲಿ, ಎಸೆಯೆ – ಹೊಳೆಯಲು, ಪೊಸೆಯೆ – ಹೊಸೆದುಕೊಳ್ಳಲು, ಚಿನ್ನತಪಸಿಯ ಕಯ್ಯೊಳ್ – ಚೆಲುವ ತಪಸ್ವಿಯ ಕೈಯಲ್ಲಿ, ಮುತ್ತು ಪವಳಂ – ಮುತ್ತುಗಳೂ ಹವಳಗಳೂ, ಬೆರಸಿದವೊಲಾಯ್ತು – ಬೆರಸಿದ ಹಾಗಾಯಿತು. ಇದನ್ನು ಮಾಘನ (೧–೯) ಪದ್ಯದೊಡನೆ ಹೋಲಿಸಿ :

> ಅಜಸ್ರಮಾಸ್ಫಾಲಿತ ವಲ್ಲಕೀಗುಣ ಕ್ಷತೋಜ್ಜ್ವಲಾಂಗುಷ್ಠನಖಾಂಶು ಭಿನ್ನಯಾ
> ಪುರಃಪ್ರವಾಲೈರಿವ ಪೂರಿತಾರ್ಧಯಾ ವಿಭಾಂತ ಮಚ್ಛಸ್ಫಟಿಕಾಕ್ಷಮಾಲಯಾ ॥

೧೧. ಇವನ್ – ನಾರದನು, ಎಳೆಯೊಳ್ – ನೆಲದಮೇಲೆ, ಅಡಿಯಿಟ್ಟಂ–ಕಾಲಿಟ್ಟನು, ಎಂಬೆಡೆಯೊಳ್ – ಎನ್ನುವ ಸಮಯದಲ್ಲಿ. ಅರಸಂ – ರಾಜ, ಪರಿಜನ ಸಮೇತಂ–ಪರಿವಾರ ಸಮೇತನಾಗಿ, ಇದಿರೆೞ್ದು - ಎದುರಿಗೆ ಎದ್ದು ಹೋಗಿ, ಪೊಡೆವೊಡೆ–ನಮಸ್ಕರಿಸಲು, ತಪಸ್ವಿ – ನಾರದ. ಕೆಯ್ಯಂ ಪಿಡಿದು – ಕೈಯನ್ನು ಹಿಡಿದು, ಎತ್ತಿ–ಮೇಲಕ್ಕೆತ್ತಿ, ಪಲವುಂ–ಹಲವುಸಲ, ಪರಕೆಗಳಿಂ–ಹರಕೆಗಳಿಂದ, ಪರಸಿದಂ–ಹರಸಿದನು.

**ವಚನ :** ಅಬ್ಜಜಪುತ್ರನಂ–ಬ್ರಹ್ಮನ ಮಗನನ್ನು, ನಾರದನನ್ನು; ಪೀಠಾಗ್ರದೊಳ್–ಚಿತ್ರದ ಪೀಠದಮೇಲೆ, ಸಂಭೃತಶುಭಜಲಂಗಳಿಂದಂ- ಇರಿಸಿದ ನಿರ್ಮಲವಾದ ನೀರುಗಳಿಂದ ; ಕರ್ಚಿ–ತೊಳೆದು ; ಪವಿತ್ರೀಕೃತ ಮಸ್ತಕರಾಗಿರ್ದು -ಶುಚಿರ್ಭೂತವಾದ ಶಿರವುಳ್ಳವರಾಗಿ ; ಕೞ್ಚು > ಕರ್ಚು > ಕಚ್ಚು—ತೊಳೆ.

೧೨. ಬ್ರಹ್ಮಂ-ಬ್ರಹ್ಮನು, ಜಗಮುಂ-ಲೋಕವನ್ನು, ಪಡೆದಂ-ಸೃಷ್ಟಿಸಿದನು; ತಾನ್-ತಾಂ, ಪೆಂಪಂಪಡೆಯಲ್-ಹಿರಿಮೆಯನ್ನು ಹೊಂದಲು, ಆರ್ತನಿಲ್ಲ-ಸಮರ್ಥ ನಾಗಲಿಲ್ಲ; ನಿಮ್ಮಂ ಪಡೆದಲ್ತೆ-ನಿಮ್ಮನ್ನು ಹಡೆದಲ್ಲವೇ, ಪಡೆದನೆನಿಸಿದ-ಸೃಷ್ಟಿಕರ್ತ ನೆನ್ನಿಸಿದ, ಕಡುಪೆಂಪಿನ-ಅತಿಶಯವಾದ ಹಿರಿಮೆಯ, ಪೊಱೆಗೆ-ಹೊರೆಗೆ, ನೀವು, ಮೊದಲಿಗರಾದಿರ್-ಮೊದಲು ವರ್ತಿಸುವವರಾದಿರಿ.

೧೩. ಬಾಡೇನ್-ವಾಡವೇನು, ಮಾತೇನು, ಮುನಿನಾಥಾ-ನಾರದನೇ, ಭವತ್ಪಾದಪ್ರಕ್ಷಾಳನೋದಕಂ-ನಿಮ್ಮ ಪಾದತೊಳೆದ ನೀರು, ಮದೀಯ-ನನ್ನ, ಕರ್ಮ ....ಮಾಯ್ತು: ಕರ್ಮಫಲೋದಿತ-ಕರ್ಮದ ಪರಿಣಾಮವಾಗಿ ಬಂದ, ಸಂತಾಪರೂಪ-ದುಃಖರೂಪವುಳ್ಳ, ಪಾಪಕಳಾಪ-ಪಾಪದ ಸಮೂಹವನ್ನು, ವಿಚ್ಛೇದನಕರಂ-ಭೇದಿಸು ವುದು, ಆಯ್ತು-ಆಯಿತು.

೧೪. ಬೆಸನ್-ಕೆಲಸಕಾರ್ಯ, ಎನಗೆ-ನನಗೆ, ಆವುದೊ-ಯಾವುದೋ, ಬೆಸನಂ-ಕಾರ್ಯವನ್ನು, ಬೆಸಸಿಂ-ಅಪ್ಪಣೆಮಾಡಿರಿ; ಪಿರಿದಕ್ಕೆ-ಅದು ಹಿರಿಯದಾಗಿರಲಿ, ಅದಂ-ಅದನ್ನು, ಗೆಯ್ಯೆ-ಮಾಡಲು, ಸಾರ್ದಿರ್ದೆನ್-ಸಮೀಪವಾಗಿದ್ದೇನೆ; ನಿಮ್ಮಯ ಬರವಂ ಬೆಸಸಿಂ-ನೀವು ಬರುವುದಕ್ಕೆ ಕಾರಣವನ್ನು ಹೇಳಿರಿ, ಪೊಸತಾಗಿರೆ ಬಂದಿರ್-ಹೊಸದಾಗಿ ನೀವು ಬಂದಿದ್ದೀರಿ; ಈಗಳ್-ಈಗ, ಎಲ್ಲಿಂ ಬಂದಿರ್-ಎಲ್ಲಿಂದ ನೀವು ಬಂದಿರಿ. ಈ ಕಂದದಲ್ಲಿ ಐದು ಪುಟ್ಟ ವಾಕ್ಯಗಳಿವೆ; ಇದು ಪಂಪನ ಶೈಲಿಯ ವೈಶಿಷ್ಟ್ಯ.

**ವಚನ**: ಅಲ್ಲಿಯ ಪಡೆಮಾತಾವುದು-ಅಲ್ಲಿಯ ಸುದ್ದಿಯೇನು?

೧೫. ಧರ್ಮರಾಜನ ಪ್ರಶ್ನೆಗಳು: ದಿವಿಜೇಂದ್ರಂ ಸುಖಮಿರ್ದನೇ-ಇಂದ್ರನು ಸುಖವಾಗಿದ್ದಾನೆಯೆ? ದಿತಿಸುತವ್ಯಾಬಾಧೆಗಳ್-ರಾಕ್ಷಸರ ಕಾಟಗಳು, ದೇವರ್ಗಿಲ್ಲವಲಾ-ದೇವತೆಗಳಿಗೆ ಇಲ್ಲವಲ್ಲವೆ? ಷೋಡಶರಾಜರಿರ್ಪ ತೆಱನೇನ್-ಹದಿನಾಱು ಪ್ರಸಿದ್ಧ ರಾಜರು ಇರುವ ರೀತಿ ಏನು? ಎಮ್ಮಸ್ವಯಕ್ಷ್ಮಾಪರ್-ನಮ್ಮವಂಶದ ರಾಜರು, ಆವ ವಿಳಾಸಂಗಳೊಳ್-ಯಾವ ವೈಭವಗಳಲ್ಲಿ, ಇರ್ಪರ್-ಇದ್ದಾರೆ? ಎಮ್ಮಯ್ಯನೈಶ್ವರ್ಯಂ-ನಮ್ಮ ತಂದೆಯ ಭಾಗ್ಯ, ತಾಂ ಏಡೊರೆತು-ತಾನು ಯಾವ ಯೋಗ್ಯತೆಯನುಳ್ಳದ್ದು? ಇಂತಿವನೆಲ್ಲಂ-ಹೀಗೆ ಇವನ್ನೆಲ್ಲ, ತಿಳಿವಂತುಟಾಗಿ-ತಿಳಿಯುವ ಹಾಗೆ ಆಗಲು, ಪಂಕೇಜ ಗರ್ಭಾತ್ಮಜಾ-ನಾರದನೇ; ಬೆಸಸಿಂ-ಹೇಳಿರಿ.

**ವಚನ**: ಇಳಾಧರೇಶ್ವರಂ-ರಾಜರಿಗೆ ರಾಜ, ಧರ್ಮರಾಜ; ದೇವಲೋಕದ ಪಡೆಮಾತೆಲ್ಲಮುಂ-ಸ್ವರ್ಗದ ಸುದ್ದಿಯನ್ನೆಲ್ಲ.

೧೬. ನೀಡಿರದೆ-ತಡವಿಲ್ಲದೆ ಎಂದರೆ ಎಲ್ಲರಿಗಿಂತ ಮುಂಚಿತವಾಗಿ, ಇಂದ್ರ ನೋಲಗಕೆ ಪೋಗಿಯುಂ-ಇಂದ್ರನಸಭೆಗೆ ಹೋಗಿಯೂ, ಆಗಳುಂ-ಆಗಕೂಡ. ಅಂತೆ ಪೋಗಿಯುಂ-ಹಾಗೆ ಹೋಗಿಯೂ, ಷೋಡಶರಾಜರಿಂ-ಷೋಡಶರಾಜರಿಗಿಂತ, ಕಡೆಯೊಳ್-ಕೊನೆಯಲ್ಲಿ, ಇರ್ಪುದು-ಇರುವುದು; ಜೀಯಪಸಾದವೆಂಬುದುಂ-ಜೀಯಾ, ಪ್ರಸಾದ ಎನ್ನುವುದೂ, ನೋಡಿದ ದೃಷ್ಟಿಗೆ-ನೋಡಿದ ನೋಟಕ್ಕೆ,

ಅಳ್ಕಿ–ಹೆದರಿ, ಸುಗಿದಿರ್ಪುದುಂ–ಸುಕ್ಕಿ ಇರುವುದೂ, ಆದಮೆ–ವಿಶೇಷವಾಗಿಯೆ, ಮಾನಭಂಗಮುಂ–ಮಾನಹಾನಿಯನ್ನು, ಮಾಡೆ–ಮಾಡಲು, ಪಾಂಡುರಾಜನಾ–ಪಾಂಡುವಿನ, ಮನಃಕ್ಷತಕ್ಕೆ–ಮನದ ಗಾಯಕ್ಕೆ, ನೋವಿಗೆ, ಅಳವಿಗಾಣೆವು–ಅಳತೆಯನ್ನು ಕಾಣೆವು, ನೋಡಿರೇ–ನೋಡಿರೋ

೧೭. ಪರಚಕ್ರಂಗಳಂ – ಶತ್ರುಮಂಡಲಗಳನ್ನು, ಒತ್ತಿಕೊಂಡು–ಆಕ್ರಮಿಸಿಕೊಂಡು, ಅದಟರಂ–ಶೂರರನ್ನು, ಕೊಂದಿಕ್ಕಿ–ಕೊಂದುಹಾಕಿ, ದಾಯಾದರೆಲ್ಲರುಂ–ದಾಯಾದಿಗಳೆಲ್ಲರೂ, ಅಳ್ಕುತ್ತಿರೆ–ಅಂಜುತ್ತಿರಲು, ಸಂದ ಸಾಹಸದ–ಪ್ರಸಿದ್ಧ ಪರಾಕ್ರಮವನ್ನುಳ್ಳ, ನಿವ್ರ್ಮಾಯ್ವರುಂ–ನಿವ್ರ್ಮಾ ಐದು ಜನರೂ, ಮಕ್ಕಳಾಗಿರೆಯುಂ–ಮಕ್ಕಳಾಗಿದ್ದರೂ, ನಿಚ್ಚಲುಂ–ದಿನವೂ, ಇಂದ್ರನೋಲಗದೊಳ್–ಇಂದ್ರನ ಆಸ್ಥಾನದಲ್ಲಿ, ಆ ಪಾಂಡುರಾಜಂಗೆ–ಆ ಪಾಂಡುವಿಗೆ, ಅಂತು–ಹಾಗೆ, ನಿರ್ಸೆರಂ–ನಿಷ್ಕಾರಣವಾಗಿ, ಅಪ್ಪ ಒಂದು ಅಪಮಾನದಿಂದಂ–ಆಗುವ ಒಂದು ಅವಮಾನದಿಂದ, ಇನಿತೊಂದು–ಇಷ್ಟೊಂದು ; ಊನತ್ವಮಪ್ಪಂತುಟೇ–ಕೊರತೆಯಾಗುವಂಥದೇ.

**ವಚನ:** ಆಮುಂ–ನಾವು ಕೂಡ ; ಎನ್ನಿರ್ದಿರವಂ–ನಾನಿದ್ದ ಸ್ಥಿತಿಯನ್ನು ; ಬೇಳ್ವಂತೆ–ಯಜ್ಞಮಾಡುವ ಹಾಗೆ ; ಅಱಪಲೆಂದೆ ಬಂದೆಂ–ತಿಳಿಸಬೇಕೆಂದೇ ಬಂದೆವು ; ಶತಕ್ರತುವಂ–ನೂರು ಯಜ್ಞಗಳನ್ನು ; ನಿರ್ವರ್ತಿಸಿ–ಮುಗಿಸಿ ; ನಿಚ್ಚಂ–ನಿತ್ಯವೂ ; ಒಂದು ಪೊೞ್ತು–ಒಂದು ಹೊತ್ತು ; ಮಾಱ್ಪಿರಪ್ಪೊಡೆ–ಮಾಡುವಿರಾದರೆ.

೧೮. ಬಿರುದರನೊತ್ತಿ–ಬಿರುದುಳ್ಳ ರಾಜರನ್ನು ಆಕ್ರಮಿಸಿ, ಬೀರರನಡಂಗಿಸಿ–ಶೂರರನ್ನು ಅಡಗಿಸಿ, ಕೊಂಕಿಗರಂ ಕಱಲ್ಚಿ–ವಕ್ರವಾಗುವವರನ್ನು ಸಡಿಲಿಸಿ, ಜೆನ್ನರ ನಡಿಗೊತ್ತಿ—ಜೆನ್ನ ಪೊಂಗರನ್ನು ಎಂದರೆ ಪರಾಕ್ರಮಿಗಳನ್ನು ಕೆಳಕ್ಕೆ ಅದುಮಿ, ಮಂಡಳಿಕರಂ–ಸಾಮಂತರನ್ನು, ಬೆಸಕೆಯ್ಸಿ–ಸೇವೆಮಾಡಿಸಿ, ಕಱುಂಬರಂ–ಅಸೂಯೆಗಾರರನ್ನು, ನಿರಾಕರಿಸಿ–ಉಪೇಕ್ಷಿಸಿ, ಸಮಸ್ತವಾರಿಧಿಪರೀತಮಹೀತಳದ–ಸಕಲ ಸಾಗರಗಳೂ ಬಳಸಿದ ಭೂಮಂಡಲದ, ಅರ್ಥಮೆಲ್ಲಮುಂ–ದ್ರವ್ಯವನ್ನೆಲ್ಲ, ತರಿಸಿ–ಬರಮಾಡಿಕೊಂಡು, ನೆಗೞ್ತೆಯುಂ–ಕೀರ್ತಿಯನ್ನು, ನಿಱಿಸಲಾರ್ಪೊಡೆ–ಸ್ಥಾಪಿಸಲು ಸಮರ್ಥರಾಗಿದ್ದರೆ, ರಾಜಸೂಯಮುಂ–ರಾಜಸೂಯ ಯಜ್ಞವನ್ನು, ಮಾಡಿರೆ–ಮಾಡಿರೋ. ಇಲ್ಲಿ ಜೆನ್ನರ್ ಎಂಬುದು ಜೆನ್ನಪೊಂಗರ್ ಎಂಬುದರ ಸಂಕ್ಷಿಪ್ತ ರೂಪವಿರಬಹುದು.

**ವಚನ :** ಅನಿತನೆ ನುಡಿದು ಮಾಣ್ದು–ಇಷ್ಟನ್ನೇ ಹೇಳಿ ನಿಲ್ಲಿಸಿದ ;

೧೯. ಅಯ್ಯನ ಮಾತು–ತಂದೆಯ ಮಾತು, ಇಂದ್ರಲೋಕದೊಳಗೆ–ಸ್ವರ್ಗದಲ್ಲಿ, ಒಯ್ಯನೆ–ಮೆಲ್ಲಗೆ, ಬೆಳಗುವುದು–ಬೆಳಗುತ್ತದೆ, ಎನಲ್–ಎನ್ನಲು ; ಈ ಧರಾವಳಯದೊಳ್–ಈ ಭೂಮಂಡಲದಲ್ಲಿ, ಎಮ್ಮ ಸಾಹಸಂ–ನಮ್ಮ ಶೌರ್ಯ, ಬೆಳಗುವುದು–ಪ್ರಕಾಶವಾಗುತ್ತದೆ ; ದ್ವಿಜಮುಖ್ಯರ್–ಬ್ರಾಹ್ಮಣಶ್ರೇಷ್ಠರು, ತಣಿವರ್–ತೃಪ್ತಿಪಡುವರು ; ಅಗ್ಗಳಿಕೆ–ಹಿರಿಮೆ, ಅಪ್ಪುದು–ಆಗುತ್ತದೆ ; ಕೀರ್ತಿ–ಕೀರ್ತಿಯು,

ಪೊಣಳ್ದು-ವ್ಯಾಪಿಸಿ, ಪರ್ವುವುದು-ಹಬ್ಬುವುದು: ಇವೆಲ್ಲ, ಪುರಾಕೃತ ಪುಣ್ಯದಿಂದೆ-ಹಿಂದೆಮಾಡಿದ ಪುಣ್ಯದಿಂದ, ಸಂಗಳಿಸುವುದು—ಸೇರುತ್ತದೆ, ಎಂದೊಡೆ-ಎಂದರೆ, ಈ ಮಖದೊಳ್-ಈ ಯಜ್ಞದಲ್ಲಿ, ಮುನೀಂದ್ರನಾಯಕಾ-ನಾರದನೇ, ಏಂ ತೊದಳುಂಟೆ-ಸುಳ್ಳಿರುತ್ತದೆಯೇ? ಏನೂ ಇಲ್ಲ.

**ವಚನ:** ನಿಲಿಸುಡಿಪುದರ್ಕೆ – ಸ್ಥಿರವಾಗಿ ನಿಲ್ಲುವಂತೆ ಹೇಳುವುದಕ್ಕಾಗಿ; ಏವಿರಿದು-ಏನು ಹಿರಿದು, ಏನು ದೊಡ್ಡದು.

೨೦. ಮರುಳಂ-ಮರುಳನು, ಹುಚ್ಚನು, ಪರಪಿನ-ಹರಹಿನ, ವಿಸ್ತಾರವಾದ, ನೀಳದ-ನೀಲಿ ಬಣ್ಣದ, ಕಡೆಯುಂ-ಅಂತ್ಯವನ್ನು, ತಪೆ ನೋಡಲಾಱದೆ-ಪೂರ್ತಿನೋಡಲ ಸಮರ್ಥನಾಗಿ, ಅಂಬರತಳಮಂ– ಆಕಾಶಪ್ರದೇಶವನ್ನು, ಕರಿದು – ಕಪ್ಪಾದದ್ದು, ಎಂಬಂತಿರೆ-ಎನ್ನುವ ಹಾಗೆ, ನಿನ್ನಂ-ನಿನ್ನನ್ನು, ನರನೆಂಬುದೆ-ಮನುಷ್ಯಮಾತ್ರ ಎಂದು ಹೇಳುವುದೆ? ನಿನ್ನ ಸಾಹಸಕ್ಕೆ-ನಿನ್ನ ಶೌರ್ಯಕ್ಕೆ, ಅದು-ಆ ಯಜ್ಞವನ್ನು ಮಾಡಿಸುವುದು, ಪಿರಿದೇ-ದೊಡ್ಡದೇ.

**ವಚನ:** ನಾಡೆಯುಂ ಪೊೞ್ತಿರ್ದು-ಬಹಳಕಾಲವಿದ್ದು; ಮುಗಿಲಪೊರೆಯೊಳ್-ಮೋಡದ ಪದರದಲ್ಲಿ; ಈ ಪದದೊಳ್-ಈ ಸಮಯದಲ್ಲಿ.

೨೧. ದ್ವಾರವತೀಪುರಕ್ಕೆ-ದ್ವಾರಕಾನಗರಿಗೆ, ತಡವಿಲ್ಲದೆ-ತಡವಾಗದೆ, ಚರರಂ-ದೂತರನ್ನು, ಬೇಗಮಟ್ಟಿ-ಬೇಗನೆ ಕಳುಹಿಸಿ, ಪಂಕೇರುಹನಾಭನಂ-ಶ್ರೀಕೃಷ್ಣನನ್ನು, ಬರಿಸಿ-ಬರಮಾಡಿಕೊಂಡು, ಮಜ್ಜನ ಭೋಜನಭೂಷಣಾದಿ-ಸ್ನಾನ ಊಟ ಅಲಂಕಾರ ಮೊದಲಾದ, ಸತ್ಕಾರದೊಳ್-ಉಪಚಾರಗಳಲ್ಲಿ, ಅಚ್ಚಿಜಂ-ಪ್ರೀತಿಯನ್ನು, ನೆಱೆಯೆ ಮಾಡಿ-ಪೂರ್ಣವಾಗಿ ಮಾಡಿ, ಮುರಾಂತಕ-ಕೃಷ್ಣನೇ, ಪಾಂಡುಭೂಭುಜಂ ಕಾರಣಮಾಗೆ-ಪಾಂಡುರಾಜನು ಕಾರಣವಾಗಲು, ನಾರದನ ಪೇೞ್ದ-ನಾರದನು ಹೇಳಿದ, ನೆಗೞ್ತೆಯ-ಪ್ರಸಿದ್ಧಿಯನ್ನುಳ್ಳ, ರಾಜಸೂಯಮಂ-ರಾಜಸೂಯ ಯಜ್ಞವನ್ನು

೨೨. ಬೇಳಲ್‌ಬಗೆವೊಡೆ-ಮಾಡಲು ಯೋಚಿಸುವ ಪಕ್ಷದಲ್ಲಿ, ಹರಿಯೊಡನೆ-ಕೃಷ್ಣನೊಡನೆ; ಆಳೋಚಿಪಂ – ಆಲೋಚನೆಮಾಡೋಣ, ಎಂದು, ಬೞಿಯಂ-ದೂತನನ್ನು, ಅಟ್ಟಿದೆಂ – ಕಳಿಸಿದೆನು; ನೀನ್ – ನೀನು, ಎಮ್ಮಂ – ನಮ್ಮನ್ನು, ಪಾಳಿಸುವಯ್ – ಕಾಪಾಡುತ್ತೀಯೆ; ನಿಮ್ಮೊಡನೆ-ನಿಮ್ಮ ಕೂಡೆ, ಆಳೋಚಿಸದೆ-ಆಲೋಚನೆಮಾಡದೆ, ನೆಗೞಲ್-ಮಾಡಲು, ನೆರವುಂಟೇ ಏಂ– ಸಹಾಯವಿದೆಯೇ, ಏನು? ಈ ಎರಡು ಪದ್ಯಗಳು ಯುಗ್ಮವೆನ್ನಿಸಿಕೊಳ್ಳುತ್ತವೆ. ನಾರದನ ಪೇೞ್ದ ಎಂಬಲ್ಲಿ ಷಷ್ಠಿ ವಿಭಕ್ತಿ ಪ್ರಥಮಾರ್ಥದಲ್ಲಿ ಬಂದಿದೆ.

**ವಚನ:** ನೆಱೆಯೆ ಕೇಳ್ದು – ಪೂರ್ಣವಾಗಿ ಕೇಳಿ, ಕಜ್ಜದ ಬಿಣ್ಪುಮಂ– ಕಾರ್ಯದ ಭಾರವನ್ನು, ಅಸಾಧ್ಯತೆಯನ್ನು; ಶುಂಭದಂಭೋಧರಧ್ವನಿಯಿಂ – ಒಡೆಯುತ್ತಿರುವ ಮೇಘ ಗರ್ಜನೆಯಿಂದ, ಗುಡುಗಿನ ಶಬ್ದದಿಂದ.

೨೩. ಎಂತು – ಹೇಗೆ, ಬಿಗುರ್ತು–ಭಯಪಡಿಸಿ, ಬೀರರನೆ – ಶೂರರನ್ನೇ, ಕೊಂದಪಿರ್–ಕೊಲ್ಲುತ್ತೀರಿ? ಎಂತು–ಹೇಗೆ, ಸಮಸ್ತವಾರ್ಧಿಪರ್ಯಂತ–ಸಕಲಸಮುದ್ರ

ಗಳ ಕೊನೆಯುವರೆಗೆ, ಧರಿತ್ರಿಯಂ–ಭೂಮಿಯನ್ನು, ವಶಕೆ–ಅಧೀನಕ್ಕೆ, ತಂದಪಿರ್–ತರುತ್ತೀರಿ? ಎಂತು–ಹೇಗೆ, ಧನಂಗಳಂ–ದ್ರವ್ಯಗಳನ್ನು, ಪ್ರಯೋಗಾಂತರದಿಂದಂ–ಬೇರೆ ಬೇರೆ ಉಪಾಯಗಳಿಂದ ತೆರಲ್ಚಿದಪಿರ್–ಕೂಡಿಹಾಕುತ್ತೀರಿ? ಇವಾದೊಡಂ–ಇವು ಆದರೂ. ರಾಜಸೂಯಾಂತಂ–ರಾಜಸೂಯದ ಕೊನೆಯವರೆಗೆ ಮುಟ್ಟುವುದು. ಎಂತು–ಹೇಗೆ? ಅಪಾಯಶತಂಬರೆ–ನೂರಾರು ಅಪಾಯಗಳು ಬರಲು, ರಾಜಸೂಯಮಂ–ರಾಜಸೂಯ ಯಜ್ಞವನ್ನು, ಎಂತು–ಹೇಗೆ, ಬೇಳ್ಪಿರ್–ಯಜ್ಞ ಮಾಡುತ್ತೀರಿ?

೨೪. ನಾಣ್ಗೆಟ್ಟೋರವಂ–ಆ ಕಪಟಿಯಾದ ಸಂನ್ಯಾಸಿ. ಧರ್ಮಜನುನೇನೊಂದನ ಪ್ಪೊಡಂ–ಏನೊಂದಾದರೂ ಪೊಳ್ಳು ಕೆಲಸವನ್ನು, ತಗುಳ್ಚಿ–ಅಂಟಿಸಿ,ಗಟಪಿದೊಡೆ–ಹರಟಿದರೆ, ಆ ಬೇಳುನುಡಿಗೇಳ್ದು–ಆ ಬೇಳುವೆಯ ಎಂಬರೆ ಮರುಳುಮಾಡುವ ಮಾತನ್ನು ಕೇಳಿ, ಕೆಮ್ಮನೆ–ಸುಮ್ಮನೆ, ಬೇಳಲ್–ಯಜ್ಞಮಾಡಲು. ನಿಮಗೆ, ಅಂತು–ಹಾಗೆ, ರಾಜಸೂಯಂ–ರಾಜಸೂಯವೆಂಬ ಯಜ್ಞವು, ಪೊಗ್ಗೇ–ಸಾಧ್ಯವೇ? ಪೊಗ್ಗು+ಏ (ಪ್ರಶ್ನಾರ್ಥಕ), "ಕಡಲೆಗಳಂತಿಂಬ ಪೊಗ್ಗು ಕಲ್ಗಳಲುಂಟೇ?", "ಏಪೊಗ್ಗೆ ಕರ್ಣನಿಂತೀ ನಿಮ್ಮದಿಂಗರಿಜಿಂಯೆ ಸಾವನೇ", "ಕಾವಲಿದಿರ್ಚಿ ಕೈದುಪಿಡಿಯಲ್‌ಬಗೆದ ಪುದು ಪೊಗ್ಗೆ"–ಇವು ಬೇರೆ ಪ್ರಯೋಗಗಳು.

ವಚನ: ಕಡೆಯೊಳ್–ಅಂತ್ಯದಲ್ಲಿ; ಅಟ್ಟುಮಟ್ಟುಗೆದಂತಾದರ್–ನಾಶವಾಗಿ ಮುಟ್ಟವಾಗಿ ಹೋದಂತಾದರು ಭಾರಾವತಾರದೊಳ್–ಭಾರವನ್ನು ಇಳಿಸುವುದರಲ್ಲಿ; ಎನಿತಾನುಂ–ಎಷ್ಟೋ, ಘಸಣಿಪೋದುದದು–ಆಯಾಸವಾಯಿತು; ಮಹೌನಂಗೊಂಡು–ಮಾತಿಲ್ಲದೆ.

೨೫. ಪಯೋನಿಧಿಪರೀತ ಮಹೀತಳಮೆಂಬುದು–ಕಡಲು ಸುತ್ತುವರಿದ ಭೂಮಿ ಎಂಬುದು. ಎನಿತು ಗಡಂ–ಎಷ್ಟು ದಿಟವಾಗಿಯೂ! ಅಂಪ–ಎದುರಿಸುವ, ಬೀರನ–ಶೂರನ, ಪೆಸರಾವುದು–ಹೆಸರು ಯಾವುದು? ಈ ನುಡಿಯಂ–ಈ ಮಾತನ್ನು (ಯಜ್ಞದ), ಈ ಪದದೊಳ್–ಈ ಸಮಯದಲ್ಲಿ, ಪೆಜಗಿಕ್ಕೆ–ಹಿಂದಿಡಲು, ನಾರದಂ–ನಾರದನು, ಮನದೊಳ್–ಮನಸ್ಸಿನಲ್ಲಿ, ಪೇಸುಗುಂ–ಜುಗುಪ್ಸೆಪಟ್ಟುಕೊಳ್ಳುತ್ತಾನೆ; ಸುರಪನುಂ–ಇಂದ್ರನುಕೂಡ, ನಗುಗುಂ–ನಗುತ್ತಾನೆ; ಅಯ್ಯನ–ತಂದೆಯ (ಪಾಂಡುವಿನ), ಮುಖಂ–ಮುಖವು, ಕಡು ವಿನ್ನನಕ್ಕುಂ–ಅತಿಶೂನ್ಯವಾಗುತ್ತದೆ: ಸರಸೀರುಹೋದರಾ–ಕೃಷ್ಣನೇ, ಈ ಮಖಮಂ–ಈ ಯಜ್ಞವನ್ನು, ಎಂತು–ಹೇಗೆ, ಉಪೇಕ್ಷಿಸುವುದು–ಅಲಕ್ಷ್ಯಮಾಡುವುದು?

೨೬. ಭೀಮಸೇನನ ಮಾತು: ಪನ್ನತರ–ಪೀರರ, ನಡುವಂ–ಸೊಂಟವನ್ನು, ಉಡಿಯಲ್ಕೆ–ಮುರಿಯುವುದಕ್ಕೆ, ಎನ್ನ–ನನ್ನ, ಭುಜಾರ್ಗಳಮೆ–ಅಗಲಿಯ ಹಾಗಿರುವ ಭುಜಗಳೆ, ಸಾಲ್ಗುಂ–ಸಮರ್ಥವಾಗುತ್ತವೆ; ಒಸೆ ಪೇಣ್ ಮುನಿ ಪೇಣ್–ಪ್ರೀತಿಸು ಇಲ್ಲವೆ ಕೋಪಿಸಿಕೊಳ್ಳು; ಎನ್ನನುಡಿ–ನನ್ನಮಾತು, ಟಾಠಡಾಧಣಂ–ಟವರ್ಗಾಕ್ಷರ ಗಳಂತೆ ನಿಯತ, ಶಾಶ್ವತ; ರಾಜಸೂಯಂ ಬೇಳಲ್–ರಾಜಸೂಯ ಯಜ್ಞವನ್ನು

ಮಾಡಲು, ಎನ್ನಂ–ನನ್ನನ್ನು, ಬೆಸಸುವುದು–ಆಜ್ಞೆಮಾಡುವುದು. ಇಲ್ಲಿ ಒಸೆ ಮೇಣ್ ಮುನಿ ಮೇಣ್–ಎಂಬಲ್ಲಿ ಮೇಣ್ ಎಂದು ಎರಡುಸಲ ಬಂದಿದೆ; ಇದಕ್ಕೆ ಇಲ್ಲವೇ, ಅಥವಾ, ಎಂದರ್ಥ; ಇದೊಂದು ನುಡಿಗಟ್ಟು; ಒಸೆಗೆ ಮೇಣ್ ಮುಸಿಗೆ ಮೇಣ್ (ಕರಾಮಾ ೧–೧೩೪); ಪಿರಿಗೆ ಮೇಣ್ ಪೊಗಟ್ಟಿಗೆ ಮೇಣ್ (ಕರಾಮಾ ೧–೧೩೫). ಟಾಠಡಾಢಣಂ ಎಂಬಮಾತು ಪಂಪನಕಾಲದ ಜನರು ಆಡುವ ಮಾತಿನಲ್ಲಿ ಬಳಕೆ ಯಲ್ಲಿದ್ದಿರಬಹುದು; ಈ ಶಬ್ದವನ್ನು ಕನ್ನಡಕ್ಕೆ ಪ್ರಕೃತಿಯಾಗಿ ಸ್ವೀಕರಿಸಬಹುದು; ಸಪ್ತವಿಭಕ್ತಿಗಳೂ ಅದಕ್ಕೆ ಸೇರಬಹುದು.

**ವಚನ:** ಗಜಱಿ–ಗದರಿ, ಕೆರಳಿ; ಅಮಳರುಂ–ಅವಳಿಗಳಾದ ನಕುಲ ಸಹದೇವರು; ತೆಮಳೆ ನುಡಿದೊಡೆ–ತೆವಳಿಹೋಗುವಂತೆ ಎಂದರೆ ಜಾರಿಹೋಗುವಂತೆ ಮಾತನಾಡಿದರೆ; ಅಳುಂಬಂ–ವಿಶೇಷವಾಗಿ; ಭೃತಮಕ್ಕುಂ–ಹೀನವಾಗುತ್ತದೆ; ಬಡಗಣ ತಡಿಯ–ಉತ್ತರತೀರದ; ಪಚ್ಚುಕೊಟ್ಟೊಡೆ–ವಿಭಾಗಿಸಿಕೊಟ್ಟರೆ; ಪೋೞಮಂ ಹೋಳುಗಳನ್ನು; ಇವೇವುವು–ಇವು ಏನು; ಚೋದ್ಯಂಬಟ್ಟು–ಆಶ್ಚರಿಪಟ್ಟು, ಜರಾಸಂಧಂಗಳ್ಕಿ–ಜರಾಸಂಧನಿಗೆ ಹೆದರಿ; ನೀರ್ಗಾದಿಗೆಯಾಗೆ–ನೀರಿನ ಕಂದಕವಾಗಲು, ಖಾತಿಕಾ>ಗಾದಿಗೆ; ಸೆಱೆಗಳ್–ಸೆರೆಯಲ್ಲಿರುವವರು, ಬಂದಿಗಳು; ಆದೇಶಂ–ಭವಿಷ್ಯ ವಾಣಿ; ಪೇೞ್ವುದೆಂದು–ಹೇಳಿ ನಿಯಮಿಸಬೇಕೆಂದು;

೨೭. ಕಲಿ–ಶೂರನಾದ ಜರಾಸಂಧನು, ಮಾರ್ಕೊಳ್ಳದೆ–ಪ್ರತಿಮಾತಾಡದೆ, ಕೊಟ್ಟು–ಧರ್ಮಯುದ್ಧವನ್ನು ಕೊಟ್ಟು, ಮೆಯ್ಯೊಳೆ–ಏಕಾಂಗಿಯಾಗಿ, ಸಿಡಿಲ್ ತಾಪಂತೆ ವೋಲ್–ಸಿಡಿಲು ಎರಗುವಹಾಗೆ, ತಾಗೆ–ಎರಗಲು, ಮೆಯ್ಗಲಿ–ಶೂರನಾದ, ಭೀಮಂ–ಭೀಮನು, ಪೆಱಪಿಂಗದೆ–ಹಿಂದಕ್ಕೆ ಸರಿಯದೆ, ಆಂತು–ಎದುರಿಸಿ, ಪಲವುಂ ಬಂಧಂಗಳಿಂ–ಹಲವು ಪಟ್ಟುಗಳಿಂದ, ತಳ್ತು-ಸೇರಿ, ತತ್ಕುಲಶೈಲಂ-ಆ ಕುಲಪರ್ವತ, ಕುಲಶೈಲದೊಳ್-ಕುಲಪರ್ವತದೊಡನೆ, ಕಲುಷದಿಂ–ದ್ವೇಷದಿಂದ, ಪೋರ್ವಂತೆವೊಲ್–ಹೋರಾಡುವ ಹಾಗೆ, ಪೋರ್ದು–ಕಾಪಾಡಿ, ನೆಯ್ದಿಲ ಕಾವಂ–ನೈದಿಲೆಯ ದಂಟನ್ನು, ತುದಿಗೆಯ್ದೆ–ತುದಿಯವರೆಗೂ ಬರುವಂತೆ, ಸೀಳ್ವ ತೆಱದಿಂ–ಸೀಳುವಹಾಗೆ, ಜರಾಸಂಧನಂ–ಜರಾಸಂಧನನ್ನು, ಸೀಳ್ದಂ–ಸೀಳಿದನು.

**ವಚನ:** ರಾಜ್ಯದೊಳ್ನಿಱಿಸಿ–ರಾಜ್ಯದಲ್ಲಿ ಸ್ಥಾಪಿಸಿ; ಸೆಱೆಗಳುಮಂ–ಬಂದಿಗಳನ್ನೂ, ಮುಂದಿಟ್ಟು–ಮುಂದಿಟ್ಟುಕೊಂಡು.

೨೮. ಜರಾಸಂಧಂ–ಜರಾಸಂಧನು, ಮುನ್ನಂ–ಮೊದಲು, ಮಡಿದೊಡೆ–ಸತ್ತು ಹೋದರೆ, ಇಳೆ–ಲೋಕವು, ನಿಷ್ಕಂಟಕಂ–ನಿರ್ಬಾಧವಾಯಿತು, ಅದರ್ಕೆ–ಆದ್ದರಿಂದ, ಇನ್ – ಇನ್ನು, ಇರಲ್ವೇಡ – ಇರಬೇಡ; ನಾಲ್ಕುಂದೆಸೆಗೆ – ನಾಲ್ಕು ದಿಕ್ಕುಗಳಿಗೆ, ನಿಮ್ಮನುಜರಂ–ನಿಮ್ಮ ತಮ್ಮಂದಿರನ್ನು, ಬೆಸಸಿಂ–ನೇಮಿಸಿರಿ; ಭರಂಗೆಯ್ವಾಗಳ್–ಕಾರ್ಯಭಾರವನ್ನು ಮಾಡುವಾಗ, ನೀಂ–ನೀನು, ಪೆಸರ್ವೆಸರೊಳ್–ಹೆಸರು ಹೆಸರಿನಲ್ಲಿ ನಾಲ್ವರುಮನ್–ನಾಲ್ಕು ಜನರನ್ನು, ಆದರಂಗೊಂಡು–ಸಾದರದಿಂದ, ಆ ನಾಲ್ಕುಂದೆಸೆಗೆ

ಆ ನಾಲ್ಕು ದಿಕ್ಕುಗಳಿಗೆ, ಬೆಳ್ಕುಱುವಿನಂ-ಭಯವುಂಟಾಗುತ್ತಿರಲು, ಬೆಸಸಿಂ-ನೇಮಿಸಿರಿ. ಒಬ್ಬೊಬ್ಬ ತಮ್ಮನಿಗೆ ಹೆಸರುಹೇಳಿ ಒಂದೊಂದು ದಿಕ್ಕನ್ನು ಜಯಿಸುವಂತೆ ಅಪ್ಪಣೆ ಮಾಡಿರಿ. ಬೆಳ್ಕು-ಭಯ+ಉಱು-ಹೊಂದು.

**ವಚನ:** ಇಂದ್ರನ ಮೇಲೆವೇೞ್ಪಂತೆ-ಇಂದ್ರನಮೇಲೆ ದಂಡೆತ್ತಿ ಹೋಗು ಎಂದು ನಿಯಮಿಸುವಂತೆ; ಅದಿರ್ಪಲ್ವೇೞ್ವಂತೆ-ನಡುಗಿಸಲು ನಿಯಮಿಸುವಂತೆ: ಉತ್ತರೋತ್ತರ ಮಾಗಲ್-ಏಳಿಗೆಯುಂಟಾಗಲು;

೨೯. ಅರಿನರಪಾಳ ಮೌಳಿ ಮಣಿಯೊಳ್-ಶತ್ರುರಾಜರ ಕಿರೀಟಗಳ ರತ್ನಗಳಲ್ಲಿ, ಶಂಖಚಕ್ರಚಾಮರಹಳಚಿಹ್ನ ಚಿಹ್ನಿತ ಪದಾಕೃತಿ-ಶಂಖ, ಚಕ್ರ, ಚಾಮರ, ನೇಗಿಲು-ಈ ಗುರುತುಗಳಿಂದ ಕೂಡಿದ ಪಾದಗಳ ಆಕಾರವು ಎಂದರೆ ಚಕ್ರವರ್ತಿಯ ಪಾದಗಳು, ನೆಲೆಗೊಂಡವು-ಸ್ಥಿರವಾಗಿ ನಿಂತವು, ಎಂದರೆ ಶತ್ರುರಾಜರೆಲ್ಲಾ ಚಕ್ರವರ್ತಿಯ ಪಾದಗಳಿಗೆ ತಲೆ ಬಾಗಿದರು; ಬೀಸುವ ಚಾಮರಾಳಿ-ಬೀಸುವ ಚಾಮರಗಳ ಸಾಲು, ಸುಂದರಿಯರ, ಕೈಗಳಿಂ-ಕೈಗಳಿಂದ, ಬರ್ದುಕಿ-ತಪ್ಪಿ, ಬಿೞ್ದುವು-ಬಿದ್ದವು; ನೋಡೆ ನೋಡೆ-ನೋಡು ನೋಡುತ್ತಿರುವ ಹಾಗೆಯೇ, ಬೆಳ್ಗೊಡೆ-ಶ್ವೇತಚ್ಛತ್ರಿಗಳು, ನಿಂದು-ನಿಂತು, ಉರಿದುವು-ಸುಟ್ಟವು; ವೈರಿನರೇಂದ್ರಗೇಹದೊಳ್-ವೈರಿರಾಜರ ಅರಮನೆಗಳಲ್ಲಿ, ಸಾಲಭಂಜಿಕೆಗಳ್- ಬೊಂಬೆಗಳು, ಅೞ್ತುವು-ಅತ್ತವು

**ವಚನ:** ವಿಜಯದ ಗುಡಿವಿಡಿಸಿ-ವಿಜಯಸೂಚಕವಾದ ಬಾವುಟವನ್ನು ಹಿಡಿಯಿಸಿ; ಚಾಳಿಸಿ-ಚಲಿಸುವಂತೆಮಾಡಿ; ಕಾಪುರುಷರ್ಮಾಡಿ-ಅಲ್ಪರನ್ನಾಗಿಮಾಡಿ; ಅನನೀಕರೆನಿಸಿ-ಸೈನ್ಯರಹಿತರಾದವರು ಎಂದೆನಿಸಿ; ಕೆಟಿಗಿವಿಗೆಯ್ಯಲೀಯದೆ-ಉದಾಸೀನರಾಗಿರಲು ಬಿಡದೆ; ಆಟಂದು-ಮೇಲೆ ಹಾಯ್ದು; ಸಾಯಕಂಗಳಿಂದೆ-ಬಾಣಗಳಿಂದ; ನಚ್ಚಂ ಕಿಡಿಸಿ-ನಂಬಿಕೆಯನ್ನು ಹೋಗಲಾಡಿಸಿ.

೩೦. ಗ್ರಾಮಂ ಕುಳಂ ರಾಜಕಂ-ಗ್ರಾಮದವರೂ, ಕುಲವ್ಯವಸ್ಥೆಯುಳ್ಳವರೂ, ರಾಜರೂ, ಭಯದಿಂ- ಹೆದರಿಕೆಯಿಂದ, ಬೆರ್ಚಿ-ಬೆದರಿ, ಉಜದಿರ್ಪಂತೆ-ಲಕ್ಷ್ಯಮಾಡದಿರುವಂತೆ, ಎಮಗೆ-ನಮಗೆ, ಆವ ಗರ್ವಂ-ಯಾವಗರ್ವ? ಎಮ್ಮಂ-ನಮ್ಮನ್ನು, ಇಱಿಯಲ್ವೇಡ-ಘಾತಿಸಬೇಡ; ಎಮ್ಮಳ್ಳುದಂ-ನಮಗಿರುವುದನ್ನು, ನೆಱೆಕೊಂಡು-ಪೂರ್ಣವಾಗಿ ತೆಗೆದುಕೊಂಡು. ಎಮ್ಮಯ ಬಾೞ್ಕೆಯೊಳ್-ನಮ್ಮ ಬದುಕುಗಳಲ್ಲಿ, ನಿಱಿಸುವಂ-ಸ್ಥಾಪಿಸುವವನು, ನೀಂ-ನೀನು, ಎಂದು. ಕೆಯ್ಸೆಱೆಯಂ-ಕೆಯ್ಗೆ ಸಿಕ್ಕಿದ್ದ ಸೆರೆಯಾಳುಗಳನ್ನು, ತಂದಿತ್ತು-ತಂದುಕೊಟ್ಟು, ಅಳವಟ್ಟ-ಅಳತೆಗೆ ಒಳಗಾದ, ಸಾರ ಧನಮಂ-ಸಾರಭೂತವಾದ ದ್ರವ್ಯವನ್ನು. ಕೊಟ್ಟು-ಅರ್ಪಿಸಿ, ಮೂವಿಟ್ಟಿಗಂ ಪೂಣ್ದು - ಮೂರು ಬಗೆಯಾದ ಬಿಟ್ಟಿ ಕೆಲಸಗಳನ್ನು ಮಾಡುತ್ತೇವೆಂದು ಭಾಷೆಕೊಟ್ಟು, ಅರಿಗಂಗೆ-ಅರ್ಜುನನಿಗೆ, ಕಾಲ್ಗೆಱಗಿತ್ತು-ಕಾಲಿಗೆಬಿದ್ದು ನಮಸ್ಕರಿಸಿತು. ಮೂವಿಟ್ಟಿ < ಮೂಱು+ವಿಷ್ಟಿ > ಬಿಟ್ಟಿ. ಸೋತರಾಜನು ಗೆದ್ದವನಿಗೆ ಪ್ರತಿಫಲಾಪೇಕ್ಷೆಯಿಲ್ಲದೆ ಮಾಡಬೇಕಾಗಿದ್ದ ಮೂರು ಬಗೆಯ ವಿಷ್ಟಿಕರ್ಮಗಳು; ಶೋಧನಕರ್ಮ; ವಹನಕರ್ಮ, ಅಪನಯನ

ಕರ್ಮ-ಎಂಬಿವು ಮೂರು ಬಿಟ್ಟಿಗಳು; ಶೋಧನಕರ್ಮ-ಶಿಬಿರ, ಮಾರ್ಗ, ಸೇತು, ಕೂಪ, ನೀರು–ಇವುಗಳನ್ನು ಶೋಧನೆಮಾಡಿ ಸೇರ್ಪಡಿಸುವುದು (೨) ಆಯುಧಗಳು, ಯಂತ್ರಗಳು, ಆವರಣಗಳು, ಉಪಕರಣಗಳು ಆಹಾರ ಇವನ್ನು ಗೆದ್ದ ರಾಜನಿಗಾಗಿ ಸಾಗಿಸಿ ಕೊಡುವ ಕೆಲಸ ವಹನಕರ್ಮ (೩) ಯುದ್ಧದಲ್ಲಿ ಗಾಯಗೊಂಡವರನ್ನೂ ಸತ್ತವರನ್ನೂ ಅವರ ಆಯುಧ ಕವಚಗಳ ಸಮೇತವಾಗಿ ತರುವುದು ಅಪನಯನ ಕರ್ಮ. "ಶಿಬಿರ ಮಾರ್ಗ ಸೇತುಕೂಪ ತೀರ್ಥಶೋಧನಕರ್ಮ, ಯಂತ್ರಾಯುಧೋಪಕರಣ ಗ್ರಾಸವಹನಂ, ಆಯೋಧನಾಚ್ಚ ಪ್ರಹರಣಾವರ ಪ್ರತಿ ವಿದ್ಧಾಪನಯನಮಿತಿ ವಿಷ್ಟಿಕರ್ಮಾಣಿ" (ಕೌಟಿಲೀಯ ಅರ್ಥಶಾಸ್ತ್ರ ೧೦–೪)

**ವಚನ:** ಮೈತ್ರಾಸನ ವೃತ್ತಿಯೊಳ್–ಮಿತ್ರರಾಗಿ ಉದಾಸೀನರಾಗಿರುವ ಸ್ಥಿತಿಯಲ್ಲಿ, ನಿಜಿಸಿ–ಸ್ಥಾಪಿಸಿ; ಉದ್ಧತಾ ಪ್ರತಿಮಹಿತರ್ ಮಾಡಿ? ಉಚ್ಚಾಟಿಸಿ–ಓಡಿಸಿ; ಸರ್ವ ಹರಣಗೆಯ್ದು–ಎಲ್ಲವನ್ನು ಕಸಿದುಕೊಂಡು; ಕಸವರಮೆಲ್ಲಮಂ–ಚಿನ್ನವನ್ನೆಲ್ಲ; ಪರ್ವತಾರಾಜರಂ–ಬೆಟ್ಟದರಸುಗಳನ್ನು; ತಪ್ಪಲೊಳ್–ತಪ್ಪಲಿನಲ್ಲಿ; ಅಲೆದು–ಪೀಡಿಸಿ. ಕೊರೆದು; ಪೊನ್ನ ಪಾಸಜೀಗಳಂ–ಚಿನ್ನದ ಹಾಸುಬಂಡೆಗಳನ್ನು. ಇಲ್ಲಿ 'ಮೈತ್ರಾಸನವೃತ್ತಿ' ಎಂಬುದು 'ವೈತಸೀವೃತ್ತಿ' ಎಂದಿರಬಹುದು; "ವೃತ್ತಿಮಾಶ್ರಿತ್ಯ ವೈತಸೀಂ" ಎಂದು ರಘುವಂಶದಲ್ಲಿ ಬರುತ್ತದೆ; ಬಲಿಷ್ಠನಾದ ರಾಜನಿಗೆ ದುರ್ಬಲರಾಜನು ಎರಗಿ ಬಾಗಿ ಬಾಳಬೇಕು; ಹೇಗೆಂದರೆ ವೇತಸವೆಂಬ ಹುಲ್ಲು ತೊರೆಯ ಪ್ರವಾಹ ಬಂದಾಗ ತಲೆಯನ್ನು ಬಾಗಿ ಬದುಕಿಕೊಳ್ಳುತ್ತದೆ; ಮರಗಳಾದರೆ ತೊರೆಯನ್ನು ತಡೆದು ಬಿದ್ದು ಹೋಗುತ್ತವೆ; ಮಲ್ಲಿನಾಥನು "ಬಲೀಯಸಾಭಿಯುಕ್ತೋ ದುರ್ಬಲಃ ಸರ್ವತ್ರಾನುಪ್ರಣತೋ ವೇತಸ ಧರ್ಮಮಾತಿಷ್ಠೇತ್" ಎಂದಿದ್ದಾನೆ. (ರಘುವಂಶ ೪–೩೫) "ಇದಿರಾದ ತರುಗಳು ದಿಂಡು ಗೆಡೆವುವು ತೊಜಳಿಗೆ ಮಣಿದರೆ ಗೇಕು ಬದುಕುವುದು" ಎಂಬ ಕುಮಾರವ್ಯಾಸನ ಮಾತನ್ನು ಇಲ್ಲಿ ನೆನೆಯಬಹುದು. 'ಉದ್ಧತಾ ಪ್ರತಿಮಹಿತರ್'–ಎಂಬುದು ತಪ್ಪು ಪಾಠವಿರಬಹುದು; 'ಉದ್ಧೃತ ಪ್ರತಿರೋಪಿತರ್ ಅಥವಾ ಉತ್ಖಾತ ಪ್ರತಿ ರೋಪಿತರ್' ಎಂದು ಸರಿಯಾದ ಪಾಠವಿರಬಹುದು, "ಆನಮ್ರಾಣಾಂ ಸಮುದ್ಧರ್ತುಂ"–ಬಾಗದವರನ್ನು ಬೇರುಸಹಿತ ಕಿತ್ತು, ಉನ್ಮೂಲನಮಾಡಿ ಎಂಬರ್ಥದಲ್ಲಿ 'ರಘುವಂಶ'ದಲ್ಲಿ ದೊರೆಯುತ್ತದೆ (೪–೩೫). 'ಉತ್ಖಾತ ಪ್ರತಿರೋಪಿತಾಃ' ಎಂಬ ಮಾತು ಅದೇ ಗ್ರಂಥದ (೪–೩೭) ರಲ್ಲಿ ಬರುತ್ತದೆ. ಇಲ್ಲಿ ಉತ್ಖಾತ ಎಂದರೆ ಬೇರುಸಹಿತ ಕಿತ್ತು, ಸಮುದ್ಧರ್ತುಂ ಎಂಬುದಕ್ಕೆ ಸಮ; ಪ್ರತಿರೋಪಿತಾಃ ಎಂದರೆ 'ಪಶ್ಚಾತ್ ಸ್ಥಾಪಿತಾಃ' ಎಂದರ್ಥ. ಎಂದರೆ ಬೇರುಸಹಿತ ಕಿತ್ತು ಇನ್ನೊಂದೆಡೆಯಲ್ಲಿ ನಡುವುದು, ಬತ್ತದ ಸಸಿಗಳನ್ನು ಕಿತ್ತು ನಡುವಂತೆ; ಎದುರಾದ ರಾಜರನ್ನು ಅರ್ಜುನ ಅವರವರ ಸ್ವಸ್ಥಾನದಿಂದ ಕಿತ್ತು ಬೇರೆ ಬೇರೆ ಎಡೆಗಳಲ್ಲಿ ಸ್ಥಾಪಿಸಿದನು ಎಂದು ಪ್ರಕೃತಾರ್ಥ.

**೩೧.** ತತ್ತಟದ–ಆ ಜಂಬೂನದವೆಂಬ ನದಿಯ ತೀರದ, ಕನಕರೇಣುವಂ–

ಚಿನ್ನದ ರೇಣುಗಳನ್ನುಳ್ಳ ಬಂಡೆಗಳನ್ನು, ಆಖಂಡಲ ತನಯಂ – ಅರ್ಜುನನು, ಗಾಂಡೀವದ–ಗಾಂಡೀವ ಧನುಸ್ಸಿನ, ಕೊಪ್ಪುಗಳೊಳ್ – ತುದಿಗಳಿಂದ, ಖಂಡಿಸಿ – ಕತ್ತರಿಸಿ, ಅಸುಂಗೊಳೆ–ಸಚೇತನನಾಗಿ, ಅವನ್–ಅವುಗಳನ್ನು, ನಿಶಿತ ಪರಶು ಶರ ಸಮಿತಿಗಳಿಂ–ಹರಿತವಾದ ಕೊಡಲಿ ಬಾಣಗಳ ಸಮೂಹದಿಂದ, ಖಂಡಿಸಿದಂ–ಕತ್ತರಿಸಿದನು.

**ವಚನ**: ಪಿರಿಯ ಸೆಲೆಗಳುಮಂ – ದೊಡ್ಡ ಶಿಲೆಗಳನ್ನು, ಬಂಡೆಗಳನ್ನು; ಪುಂಜಿಸಿ–ರಾಶಿಮಾಡಿ.

**೩೨.** ಘಟೋತ್ಕಚಂ ಬೆರಸು – ಘಟೋತ್ಕಚನ ಸಮೇತವಾಗಿ, ದಾನವ ಸೇನೆಯಂ–ರಾಕ್ಷಸ ಸೈನ್ಯವನ್ನು, ಬರಿಸಿ–ಬರಮಾಡಿಕೊಂಡು, ಈ ಬಲಂಬೆರಸು–ಈ ಸೈನ್ಯಸಹಿತವಾಗಿ, ನಮ್ಮ ಪುರಕ್ಕೆ – ನಮ್ಮನಗರಿಗೆ, ಪೊತ್ತು ನಡೆ – ಹೊತ್ತುಕೊಂಡು ಹೋಗು, ಎನೆ–ಎನ್ನಲು, ತದ್ಗಿರೀಂದ್ರ ಕಂದರ ಕನಕಾಚಲಂಗಳ್–ಆ ಬೆಟ್ಟದ ಕಣಿವೆಗಳಲ್ಲಿರುವ ಚಿನ್ನದ ಬೆಟ್ಟಗಳು, ಎನಿತುಂಟು–ಎಷ್ಟಿವೆಯೋ, ಅನಿತುಂ–ಅಷ್ಟೂ, ತವೆ–ಮುಗಿದುಹೋಗಲು, ಹೇಮ ರೇಣುಗಳ್ವೆರಸು – ಚಿನ್ನದ ಧೂಳಿನ ಸಮೇತವಾಗಿ, ಘಟೋತ್ಕಚ ರೌದ್ರಸಾಧನಂ – ಘಟೋತ್ಕಚನ ಭಯಂಕರವಾದ ಸೈನ್ಯ, ಕಡಂಗಿ–ಉತ್ಸಾಹಿಸಿ, ಪೊತ್ತು–ಹೊತ್ತು, ನಡೆದತ್ತು–ನಡೆಯಿತು.

**ವಚನ**: ಜಕ್ಕರ್-ಯಕ್ಷರು : ಎಕ್ಕೆಯಿಂ-ಒಟ್ಟಾಗಿ, ಗುಂಪಾಗಿ ; ಬಾಯ್ಕೇಳಿಸಿ-ಆಜ್ಞಾಧೀನವನ್ನಾಗಿ ಮಾಡಿ ; ಅದಿರ್ಪಿಯುಮುದಿರ್ಪಿಯುಂ – ನಡುಗಿಸಿಯೂ ಉದುರಿಸಿಯೂ ; ವರುಣಾನಿ–ವರುಣನ ಹೆಂಡತಿ ; ಅಯ್ದೆ ಮಿಸುಗು–ಸೌಮಂಗಲ್ಯವನ್ನು ಸೂಚಿಸುವ ತಾಳಿ ; ಅಸಿಯರಾಗೆ–ಕೃಶರಾಗಲು ; ಕವರ್ದು–ಬಾಚಿ ;

**೩೩.** ತೊಂಡಿನೊಳ್–ದುಷ್ಟತನದಲ್ಲಿ, ಉರ್ಕ್ಕಿ–ಸೊಕ್ಕಿ, ಕೆಟ್ಟ–ಹಾಳಾದ, ದಶಕಂಠನಂ-ರಾವಣನನ್ನು, ಕೊಂಡ-ಹಿಡಿದ, ಪೆರ್ಮರುಳ್-ದೊಡ್ಡಭೂತ, ತನ್ನುಮಂ-ತನ್ನನ್ನೂ ಎಂದರೆ ವಿಭೀಷಣನನ್ನೂ, ಕೊಂಡುದೆ–ಹಿಡಿಯಿತೆ? ಬಲಗರ್ವಮಂ–ಸೈನ್ಯದ ಗರ್ವವನ್ನು ಅಥವಾ ಶಕ್ತಿಯ ಗರ್ವವನ್ನು, ನೀಂ – ನೀನು, ಬಿಸುಡು – ಬಿಸಾಡು, ಬಿಡು ; ಪಾಯ್ದೊಡೆ – ಹಾಯಿದರೆ, ದಾಟಿದರೆ; ಆ ಸಮುದ್ರಂ – ಆ ಬಳಸಿದ ಕಡಲು, ಏ ಬಂಡಮೋ-ಏನು ಪ್ರಯೋಜನವೋ, ಎಂದು, ನಿಜ ಸಾಯಕದೊಳ್-ತನ್ನ ಬಾಣದಲ್ಲಿ, ಬರೆದೆಚ್ಚು – ಬರೆದು ಪ್ರಯೋಗಿಸಿ, ಪರಸೈನ್ಯ ಭೈರವಂ – ಅರ್ಜುನನು, ಲಂಕೆಯ, ವಿಭೀಷಣನಂ–ವಿಭೀಷಣನನ್ನು, ಅಪ್ಪುಂಕಿ–ಒತ್ತಿ, ಕಪ್ಪಮಂ–ಕಪ್ಪ ಕಾಣಿಕೆಗಳನ್ನು, ಕೊಂಡಂ–ತೆಗೆದುಕೊಂಡನು. ಏಬಂಡಂ ; 'ನ್ಯಾಯಾರ್ಜಿತಮಲ್ಲದೆನಿಪ ಧನಮೇಬಂಡಂ' ಎಂದು ನಾಗಚಂದ್ರನ ಪ್ರಯೋಗ ; ಬಂಡ<ಸಂ, ಭಾಂಡ–ಹಣ, ದ್ರವ್ಯ, ಮೂಲಧನ. ಅನ್ಯಾಯದಿಂದ ಬಂದ ಹಣ ಯಾವ ಹಣ ಎಂಬಲ್ಲಿ ತಿರಸ್ಕಾರಾರ್ಥವಿದೆ, ಅದು ಹಣವೇ ಅಲ್ಲ, ಅದು ನಿಷ್ಪ್ರಯೋಜಕ. ಅರ್ಜುನನು ವಿಭೀಷಣನಿಗೆ ಬಾಣಲಿಖಿತವನ್ನು ಕಳಿಸಿದ ಇಲ್ಲಿನ ತಂತ್ರ, ಭರತ ಚಕ್ರವರ್ತಿ ಮಾಗಧಾಮರನಿಗೆ ಸಂದೇಶ ಕಳಿಸಿದ್ದನ್ನು ಹೋಲುತ್ತದೆ; ಇಲ್ಲಿ ಜೈನಪುರಾಣದ ಪ್ರಭಾವವಿರಬಹುದು.

**ವಚನ**: ಮತದೊಳ್–ಅಭಿಪ್ರಾಯದಲ್ಲಿ, ಸಮ್ಮತಿಯಲ್ಲಿ· ಬಱಿಯಸಟ್ಟಿ–ದೂತನನ್ನು ಕಳಿಸಿ; ತುಱುಲ–ನಮಸ್ಕಾರದ; ಪರಕೆಯು–ಆಶೀರ್ವಾದದ; ಸಮಾನ ಪ್ರತಿಪತ್ತಿಯಿಂ–ಸಮಾನ ಸತ್ಕಾರದಿಂದ; ಕಿಱುವಿರಿಯರ್–ಕಿರಿಯರು, ಹಿರಿಯರು; ಬಲ್ಲಿದಿರ–ಸಮರ್ಥರಾಗಿದ್ದೀರಾ, ಕ್ಷೇಮವಾಗಿದ್ದೀರಾ; ಬಿರ್ದಿನೊಳಂ–ಔತಣದಲ್ಲೂ, ಮಯನ ಕೊಟ್ಟ–ಮಯನು ಕೊಟ್ಟ: ಎಡೆಯಱಿದು – ಉಚಿತ ಸ್ಥಳವನ್ನು ತಿಳಿದು; ಪನಿಸಾ–ಬನ್ನಿಯಮರ; ಬ್ರಹ್ಮ–ಶ್ರೇಷ್ಠ ಪುರೋಹಿತ. ಮಂತ್ರೋಚ್ಚಾರಣೆ ಮೊದಲಾದುವು ಸರಿಯಾಗಿ ಇವೆಯೇ ಎಂಬುದನ್ನು ನೋಡಿಕೊಳ್ಳುವವನು; ಅಧ್ವರ್ಯು–ಯಜ್ಞಕ್ಕೆ ಬೇಕಾದ ನೆಲವನ್ನು ಅಳೆಯುವುದು, ಪಾತ್ರೆಗಳನ್ನು ಸಿದ್ಧಪಡಿಸುವುದು, ವೇದಿಕೆಯನ್ನು ಕಟ್ಟುವುದು, ಸಮಿತ್ತು ನೀರುಗಳನ್ನು ತರುವುದು, ಅಗ್ನಿಯನ್ನು ಉರುಹುವುದು, ಪಶುವನ್ನು ತಂದು ಅದನ್ನು ಬಲಿಮಾಡುವುದು, ಇವೆಲ್ಲದರ ನಡುವೆ ಯಜುರ್ವೇದವನ್ನು ಪಠಿಸುವುದು–ಈ ಕೆಲಸಗಳನ್ನು ಮಾಡುವವನು; ಅಗ್ನೀಧ್ರ–ಯಾಗಾಗ್ನಿಯನ್ನು ಪ್ರಜ್ವಲನ ಮಾಡುವವನು; ಮೈತ್ರಾವರುಣ – ಯಜ್ಞದಲ್ಲಿ ಭಾಗವಹಿಸುವ ಒಬ್ಬ ಪುರೋಹಿತ; ಅಗ್ನಿ ಪರಿಚಾರಕ–ಅಗ್ನಿ ಸೇವೆಯನ್ನು ಮಾಡುವ ಪುರೋಹಿತ; ಉದ್ಗಾತೃ–ಸಾಮವೇದವನ್ನು ಪಠಿಸುವವನು; ನೇತ–ಯಜ್ಞಕರ್ಮವನ್ನು ಮಾಡಿಸುವ ನಾಯಕ ಪುರೋಹಿತ; ಹೋತೃ–ಋಗ್ವೇದವನ್ನು ಹೇಳುವವನು; ಜಮದಗ್ನಿ–ಅಗ್ನಿಯನ್ನು ನಿರಂತರವಾಗಿ ಉರಿಸುವವನು; ಷೋಡಶ ಋತ್ವಿಜರ್ಕಳಿಂ-೧೬ ಋತ್ವಿಕ್ಕುಗಳಿಂದ; ಬೇಳಲ್ವೇಳ್ದು–ಹವಿಸ್ಸನ್ನು ಅರ್ಪಣೆ ಮಾಡುವಂತೆ ನಿಯಮಿಸಿ; ಯಜಮಾನಂ–ದೀಕ್ಷೆ ವಹಿಸಿ ಯಜ್ಞಮಾಡುವವನು.

**೩೪.** ಚಾರುತರ – ರಮಣೀಯವಾದ, ಯಜ್ಞ ವಿದ್ಯಾಪಾರಗರ – ಯಜ್ಞ ವಿದ್ಯೆಯಲ್ಲಿ ಪರಿಣತರಾದವರ, ರವಂಗಳಿಂ–ಧ್ವನಿಗಳಿಂದ, ಸ್ವಧಾಕಾರ–ಸ್ವಧಾ ಎಂಬ ಶಬ್ದದ ಉಚ್ಚಾರಣೆ, ವಷಟ್ಕಾರ–ವಷಟ್ ಎಂಬ ಶಬ್ದೋಚ್ಚಾರಣೆ, ಸ್ವಾಹಾಕಾರ–ಸ್ವಾಹ ಎಂಬ ಶಬ್ದದ ಉಚ್ಚಾರಣೆ, ಓಂಕಾರ – ಓಂ ಎಂಬ ಶಬ್ದದ, ಧ್ವನಿ – ನಾದವು, ನೆಗೞೆ – ಉಂಟಾಗಲು, ಆವುತಿ ಧೂಮಂ – ಹವಿಸ್ಸಿನ ಹೊಗೆಯು, ನೆಗೞ್ದುದು–ಉಂಟಾಯಿತು.

**೩೫.** ಬಳ[ಸು] ಮುಗಿಲ್ಗಳ್ – ಸುತ್ತುವರಿಯುವ ಮೋಡಗಳು, ಕನಕಾಚಳಮಂ–ಮೇರು ಪರ್ವತವನ್ನು, ಬಳಸುವ ವೋಲ್–ಸುತ್ತಿಕೊಳ್ಳುವಹಾಗೆ, ಇಕ್ಕಿದ–ಹಾಕಿದ, ಆಹುತಿಗಳ–ಹವಿಸ್ಸುಗಳ, ಗೊಂದಳದಿಂ-ಗುಂಪಿನಿಂದ, ಒಡನೆ ಒಗೆದ-ಕೂಡಲೇ ಹುಟ್ಟಿದ, ಪೊಗೆಗಳ್ – ಹೊಗೆಗಳು, ಅಗಳ್ – ಆಗ, ಕನಕ ಯೂಪಮಂ – ಯಾಗದ ಚಿನ್ನದ ಕಂಭವನ್ನು, ಎಡೆಬಿಡದೆ–ನಿರಂತರವಾಗಿ, ಬಳಸಿದುವು–ಬಳಸಿಕೊಂಡುವು.

**೩೬.** ಯಾಗದ ಹೊಗೆ ಹಬ್ಬಿತು: ಒಡನೆ-ಕೂಡಲೇ, ದಿಗಂತ ದಂತಿಗಳ-ದಿಕ್ಕಿನ ಆನೆಗಳ, ಕೋಡವೊದಲ್ಗಳೊಳ್–ದಂತಗಳ ಬುಡಗಳಲ್ಲಿ, ಎಯ್ದೆಪೊಕ್ಕು–ಚೆನ್ನಾಗಿ ಪ್ರವೇಶಿಸಿ, ಸಿಪ್ಪಡಸಿದ–ಚಿಪ್ಪನ್ನು ತೊಡಿಸಿದ, ಮಾೞ್ಕೆಯಾದುದು–ರೀತಿಯಾಯಿತು;

ಭಾನುವಳಯಂ–ಸೂರ್ಯಬಿಂಬವು, ಕರಂಗಳಡಂಗಿ–ಕಿರಣಗಳು ಮರೆಯಾಗಿ, ಕಿಲುಂಬು ಗೊಂಡ–ಕಿಲುಬು ಹತ್ತಿದ. ಕನ್ನಡಿಗೆ, ಎಣೆಯಾಯ್ತು–ಸಮಾನವಾಯಿತು; ದಿವಿಜಾಪಗೆ–ದೇವಗಂಗಾನದಿ, ಕೂಡೆ–ಕೂಡಲೆ ; ಕರ್ಪುರದರ್ಪ–ಕಪ್ಪುಹತ್ತಿ, ಅಗ್ಗದ–ಶ್ರೇಷ್ಠವಾದ, ಅತಿಶಯವಾದ, ಯಾಗದ ಧೂಮದ–ಯಜ್ಞದ ಹೊಗೆಯು, ಏಳ್ಗೆಯೊಳ್–ಏಳುವುದ ರಲ್ಲಿ, ಯಮುನೆಗೆ–ಯಮುನಾ ನದಿಗೆ, ಎಣೆಯಾದುದು–ಸಮಾನವಾಯಿತು. ಇಲ್ಲಿ 'ಯಾಗದ ಧೂಮದೇಳ್ಗೆಯೊಳ್' ಎಂಬುದನ್ನು ಎಲ್ಲ ಅಂಶಗಳಿಗೂ ಅನ್ವಯಿಸಿ ಕೊಳ್ಳಬೇಕು. ಒಂದೇ ಕಾರಣದಿಂದ ಇಲ್ಲಿ ಹಲವು ಕ್ರಿಯೆಗಳಾಗುತ್ತವೆ; ಕಾರಣಾಲಂಕಾರ, "ಕಾರಣಸ್ಯ ಸಕಾರ್ಯಸ್ಯ ವರ್ಣನಂ ಕಾರಣಂ ವಿದುಃ".

೩೭, ಗಣನಾತೀತಾಜ್ಯಾಹುತಿ ಗಣದಿಂದಂ – ಅಸಂಖ್ಯವಾದ ಆಹುತಿಗಳ ಸಮೂಹದಿಂದ. ಜಾತವೇದನುಂ–ಅಗ್ನಿಯೂ, ತಣಿಯೆ–ತೃಪ್ತಿಪಡಲು. ಬ್ರಾಹ್ಮಣ ಸಮಿತಿ–ಬ್ರಾಹ್ಮಣರ ಸಮೂಹ, ಬೇಳೆ–ಹವಿಸ್ಸನ್ನರ್ಪಿಸಲು, ದೇವರ್ ನೆರೆದು–ದೇವತೆಗಳು ಸೇರಿ, ದಿವ್ಯಹವ್ಯಾಮೃತಮಂ–ಶ್ರೇಷ್ಠವಾದ ಹವಿಸ್ಸುಗಳೆಂಬ ಅಮೃತವನ್ನು, ತಣಿಯುಂಡರ್–ತೃಪ್ತಿಯಾಗುವಂತೆ ಊಟಮಾಡಿದರು.

೩೮. ತ್ರಿದಶೇಂದ್ರಂಗೆ – ಇಂದ್ರನಿಗೆ, ಯುಧಿಷ್ಠಿರಾಧ್ವರದ – ಧರ್ಮರಾಜನು ಮಾಡಿದ ಯಜ್ಞದ, ಮಾಸಾಮರ್ಥ್ಯಮಂ–ಮಹಾ ಸಾಹಸವನ್ನು, ಸೊಲ್ಸೊಲಿಡೆ–ಕ್ರಮಕ್ರಮವಾಗಿ, ಪೇಳಲ್–ಹೇಳಲು, ಪರಿವಂತೆ–ಮೇಲಕ್ಕೆ ಓಡುವಹಾಗೆ, ಪಲವುಂ ಧೂಮಂಗಳ್–ಹಲವು ಹೊಗೆಗಳು, ಪೊಣ್ಮೆ–ಮೇಲಕ್ಕೇರಲು; ಆ ಹೋಮಧೂಮದ–ಆ ಹೋಮದ ಹೊಗೆಯ, ಗಂಧಂ–ಸುವಾಸನೆ, ನಸುಮುಟ್ಟೆ–ಸ್ವಲ್ಪ ಸೋಂಕಲು, ದಿವ್ಯಮಖಮಂ–ಶ್ರೇಷ್ಠ ಯಜ್ಞವನ್ನು, ಕೆಯ್ಕೊಂಡು-ಸ್ವೀಕರಿಸಿ, ಆ ಪಾರಿವ ಜಕ್ಕವಕ್ಕಿಗಳ್-ಆ ಪಾರಿವಾಳ ಚಕ್ರವಾಕ ಪಕ್ಷಿಗಳು,ಸಗ್ಗಕ್ಕೆ-ಸ್ವರ್ಗಕ್ಕೆ, ಪಾಱುವುವು-ಹಾರಿಹೋಗುವುವು; ಅದೇಂ ಪೆಂಪೋ–ಅದೇನು ಹಿರಿಮೆಯೋ, ಮಹಾಯಜ್ಞದಾ–ಆ ಮಹಾಯಾಗದ !

ವಚನ : ಪುರೋಡಾಶ ಪವಿತ್ರೋದರನುಂ–ಹುರಿದ ಹಿಟ್ಟಿನಿಂದ ಪಾವನವಾದ ಹೊಟ್ಟೆಯುಳ್ಳವನೂ; ಸೋಮಪಾನ ಕಷಾಯಿತೋದರನುಂ–ಸೋಮರಸ ಪಾನದಿಂದ ಕದಡಿದ ಹೊಟ್ಟೆಯುಳ್ಳವನೂ ;

೩೯. ಒಟ್ಟಿದ ಪೊನ್ನಬೆಟ್ಟುಗಳಂ–ರಾಶಿಹಾಕಿದ ಚಿನ್ನದ ಬೆಟ್ಟಗಳನ್ನು, ಈವೆಡೆಗೆ–ದಾನಮಾಡುವ ಸಮಯಕ್ಕೆ, ಏವುದೊ ತೂಕಂ–ತೂಕಮಾಡುವುದು ಏನು? ಎನ್ನ, ಕೆಯ್ಗಟ್ಟಳೆ–ನನ್ನ ಕೈಯೇ ಕಟ್ಟಳೆ, ತೂಕ, ಕೊಳ್ಳಿಂ–ತೆಗೆದುಕೊಳ್ಳಿರಿ, ಎಂದು, ಕುಡೆ-ದಾನಕೊಡಲು, ಪೋಡಶ ಋತ್ವಿಜರ್ಗೆ-ಹದಿನಾರು ಋತ್ವಿಕ್ಕುಗಳಿಗೆ, ಇತ್ತುದರ್ಕೆ-ಕೊಟ್ಟಿದ್ದಕ್ಕೆ, ವಿಪ್ರಕೋಟಿ-ಕೋಟ್ಯಂತರ ಬ್ರಾಹ್ಮಣರು, ಬಾಯ್ಬಿಟ್ಟರೆ-ಆಶ್ಚರ್ಯದಿಂದ ಬಾಯಿಬಿಟ್ಟುಕೊಂಡಿರಲು, ಮಡಗಲ್ಕೆ – ಇಡುವುದಕ್ಕೆ, ಎಡೆಯಿಲ್ಲದೆ–ಸ್ಥಳವಿಲ್ಲದೆ, ಪೊನ್ನರಾಶಿಯಂ–ಚಿನ್ನದ ರಾಶಿಯನ್ನು, ಬಟ್ಟನೆ ಬಂದು ಕಾಯೆ–ಸುತ್ತುವರಿದು ಬಂದು ರಕ್ಷಿಸುತ್ತಿರಲು, ಯಮನಂದನಂ–ಧರ್ಮರಾಜನು, ತೊದಳಿಲ್ಲದೆ–ವಂಚನೆಯಿಲ್ಲದೆ, ಏನ್ ಇತ್ತನೋ–ಏನು ದಾನಮಾಡಿದನೋ !

೪೦. ದಾನಾಂಭಃ ಪೀನ ಗಂಡಸ್ಥಳ ಕರಿನಿಕರಂ-ಮದೋದಕವನ್ನುಳ್ಳ, ದೊಡ್ಡದಾದ ಗಂಡಪ್ರದೇಶವನ್ನುಳ್ಳ ಆನೆಗಳ ಸಮೂಹ, ಬಾಚಿತ್ತಿಯೋ-ಪ್ರಯೋಜನವೋ, ನಿಮಗೆ, ಮೆಚ್ಚು ಪೇೞಿಮ್-ಬಯಸಿದ್ದನ್ನು ಹೇಳು, ಆಜಾನೇಯಾಶ್ವೋತ್ಕರಂ-ಉತ್ತಮವಾದ ಕುದುರೆಗಳ ಸಮೂಹ, ಬಾಚಿತ್ತಿಯೊ-ಪ್ರಯೋಜನವೋ, ಮಣಿನಿಕರಂ ಬಾಚಿತ್ತಿಯೋ - ರತ್ನರಾಶಿ ಪ್ರಯೋಜನವೋ, ಪೇೞಿಂ - ಹೇಳಿರಿ, ಎಂದು, ಆ ದೀನಾನಾಥರ್ಗೆ-ಆ ಬಡವರಿಗೂ ನಿರ್ಗತಿಕರಿಗೂ, ವೃದ್ಧ ದ್ವಿಜಮುನಿ ನಿಕರಕ್ಕೆ-ಮುದುಕರಾದ ಬ್ರಾಹ್ಮಣರ ಋಷಿಗಳ ಸಮೂಹಕ್ಕೆ, ಅಂದು-ಆ ದಿನ, ಎಡಱ್ಪೋಪಿನಂ-ಬಡತನವು ಹೋಗುತ್ತಿರಲು, ಕಃ ಕೇನಾರ್ಥೀ-ಯಾರು ಏನನ್ನು ಬೇಡುತ್ತಾನೆ, ಕೋ ದರಿದ್ರಃ-ಯಾರು ಬಡವ, ಎನುತುಂ-ಎಂದು ಹೇಳುತ್ತ, ಅನಿತುಮಂ-ಅಷ್ಟನ್ನೂ, ಧರ್ಮಜಂ-ಧರ್ಮರಾಜನು, ಸೂಱೆಗೊಟ್ಟಂ-ಸೂರೆಯಾಗಿ ಕೊಟ್ಟನು.

**ವಚನ:** ಧವಳಚ್ಛತ್ರ-ಬೆಳ್ಗೊಡೆ; ಅಗ್ರಪೂಜೆಗೆ-ಪ್ರಥಮಪೂಜೆಗೆ, ಆರ್ ತಕ್ಕರೆನೆ-ಯಾರು ಯೋಗ್ಯರು ಎನ್ನಲು

೪೧. ಬಲಿಯಂ ಕಟ್ಟಿದನಾವನ್ - ಬಲಿಚಕ್ರವರ್ತಿಯನ್ನು ಕಟ್ಟಿದವನು ಯಾವನೋ, ಈ ಧರಣಿಯಂ-ಈ ಭೂಮಿಯನ್ನು, ವಿಕ್ರಾಂತದಿಂದಂ-ಪರಾಕ್ರಮದಿಂದ, ರಸಾತಲದಿಂದೆತ್ತಿದನಾವಂ-ಪಾತಾಳದಿಂದ ಎತ್ತಿ ತಂದವನು ಯಾವನೋ, ಅಂದು-ಹಿಂದೆ, ಪೂರ್ವಕಾಲದಲ್ಲಿ, ನರಸಿಂಹಾಕಾರದಿಂ-ನರಸಿಂಹನ ರೂಪದಿಂದ, ದೈತ್ಯನಂ-ರಾಕ್ಷಸನಾದ ಹಿರಣ್ಯಕಶಿಪುವನ್ನು, ಚಲದಿಂ-ಹಠದಿಂದ, ಸೀಳ್ದವನಾವನ್-ಸೀಳಿದವನು ಯಾವನೋ, ಅಬ್ಧಿಮಥನ ಪ್ರಾರಂಭದೊಳ್-ಸಮುದ್ರಮಥನ ಕಾರ್ಯದಲ್ಲಿ, ಮಂದರಾಚಳಮಂ-ಮಂದರ ಪರ್ವತವನ್ನು, ತಂದವನಾವಂ-ತಂದವನು ಯಾವನೋ, ಆತನೆ-ಆತನೇ, ವಲಂ-ದಿಟವಾಗಿಯೂ, ತಕ್ಕಂ-ಯೋಗ್ಯನು; ಪೆಱರ್‌ತಕ್ಕರೇ-ಇತರರು ಯೋಗ್ಯರೇ? ಅಲ್ಲ.

**ವಚನ:** ಮನದೊಳಚ್ಚೊತ್ತಿದಂತೆ - ಮನಸ್ಸಿನಲ್ಲಿದ್ದದ್ದನ್ನೇ ಅಚ್ಚೊತ್ತಿದ ಹಾಗೆ; ಮನದೆಗೊಂಡು-ಮನಸ್ಸಿಗೆ ತಂದುಕೊಂಡು, ಒಪ್ಪಿ, ಪುರುಷೋತ್ತಮಂಗೆ-ಶ್ರೀಕೃಷ್ಣನಿಗೆ, ಅರ್ಘ್ಯಮೆತ್ತಿದಾಗಳ್-ಅಗ್ರತೀರ್ಥವನ್ನೆತ್ತಿದಾಗ.

೪೨. ಶಿಶುಪಾಲವಧೆಯ ಪ್ರಸಂಗ: ಶಿಶುಪಾಲಂ-ಶಿಶುಪಾಲನು, ಮುಳಿದು-ಕೆರಳಿ, ಆ ಸಭೆಯೊಳಗೆ-ಆ ಸಭೆಯಲ್ಲಿ, ಮಹಾಪ್ರಳಯ ಜಳಧಿ ನಾದದಿಂ-ಮಹಾಪ್ರಳಯ ಕಾಲದ ಸಮುದ್ರಘೋಷದಿಂದ, ಇರದೆ-ಇದ್ದೆಡೆಯಲ್ಲಿ ಇರದೆ, ಉಚ್ಚಳಿಸಿ-ಮೇಲಕ್ಕೆ ನೆಗೆದು, ಧರ್ಮಸುತ-ಧರ್ಮರಾಜನೇ, ಹರಿಗೆತ್ತಿದ-ಕೃಷ್ಣನಿಗೆ ಎತ್ತಿದ, ಅನರ್ಘ್ಯದರ್ಘ್ಯಮಂ-ಅಮೂಲ್ಯವಾದ ಅಗ್ರೋದಕವನ್ನು, ತೆ-ಚೀಃ, ಕಳಿಕಳಿ-ತೆಗೆತೆಗೆ ಎಂದು, ನುಡಿದಂ-ಕರ್ಕಶವಾಗಿ ಮಾತಾಡಿದನು. ಇಲ್ಲಿ ತೆ ಎಂಬ ನಿಪಾತ, ಜುಗುಪ್ಸಾ ಸೂಚಕ, ನಿವಾರಣಾರ್ಥಕ; "ತುಂಬಿ ಪೀರ್ವವೊಲೀಂ ಪೀರ್ವುದೇ ಕಡಂದುಱು ತೆ ನವ್ಯಾಮೋದಮಂ ಪೂಗಳೊಳ್" ಎಂದು ರುದ್ರಭಟ್ಟನ ಪ್ರಯೋಗ.

೪೩. ತೀವಿದ ನರೆಯುಂ–ತುಂಬಿರುವ ನರೆಗೂದಲೂ, ಡೊಳ್ಳುಂ–ಬೊಜ್ಜು ಹೊಟ್ಟೆಯೂ, ದೇವವ್ರತನೆನಿಸಿ–ದೇವವ್ರತ ಎಂದು ಕರೆಸಿಕೊಂಡು, ನೆಗಬ್ದ–ನಡೆದು ಕೊಂಡ, ಯಶಮುಂ–ಕೀರ್ತಿಯೂ, ಬೆರಸು–ಸಮೇತವಾಗಿ, ಇಂ–ಇನ್ನು, ಹರಿಗೆ–ಕೃಷ್ಣನಿಗೆ, ಅರ್ಘ್ಯಮುಂ–ಅರ್ಘ್ಯವನ್ನು, ಈವುದು–ಕೊಡುವುದು, ಎಂದು–ಎಂಬುದಾಗಿ, ಆವನುಂ-ಯಾವನೂ, ಈ ಭೀಷ್ಮನಂತು–ಈ ಭೀಷ್ಮನಹಾಗೆ, ನುಡಿದರುಂ–ಹೇಳಿದವರೂ, ಒಳರೇ–ಇದ್ದಾರೆಯೆ ?

೪೪. ಕುರುವೃದ್ಧಂ – ಕುರುಗಳಲ್ಲಿ ಹಿರಿಯವನು, ಕುಲವೃದ್ಧಂ – ಕುಲಕ್ಕೆ ಹಿರಿಯನು, ಆದ, ಸರಿತ್ಸುತಂ–ಭೀಷ್ಮನು, ತಕ್ಕನೆಂದು–ಯೋಗ್ಯನೆಂದು, ನಂಬಿದ–ನಂಬಿಕೊಂಡಿರುವ, ಸಭೆಯೊಳ್–ಸಭೆಯಲ್ಲಿ, ದೊರೆಗೆಡಿಸಿ–ಯೋಗ್ಯತೆಯನ್ನು ಕೆಡಿಸಿಕೊಂಡು, ನುಡಿದೊಡೆ-ಹೇಳಿದರೆ, ಏನ್ ಒಲವರಮೆನ್ನದೆ-ಪಕ್ಷಪಾತವೆಂದು ಹೇಳುವುದಿಲ್ಲವೇ ಏನು? ನೀನುಂ–ನೀನು ಕೂಡ (ಧರ್ಮರಾಜನು ಕೂಡ), ಅದನೆ ಕೊಂಡು–ಭೀಷ್ಮನ ಮಾತನ್ನೇ ಒಪ್ಪಿ, ಎಸಗುವುದೇ–ಅದರಂತೆ ಮಾಡುವುದೇ ?

೪೫. ಮನದೆ–ಮನಸ್ಸಿನಲ್ಲಿ, ಒಲವರಮುಳ್ಳೊಡೆ–ಪಕ್ಷಪಾತವಿದ್ದರೆ, ಹರಿಗೆ–ಕೃಷ್ಣನಿಗೆ, ಅಗ್ರಪೂಜೆಯಂ–ಮೊದಲ ಪೂಜೆಯನ್ನು, ಮನೆಯೊಳ್–ಮನೆಯಲ್ಲಿ, ಕುಡು–ಕೊಡು ; ಯಜ್ಞದೊಳ್–ಯಜ್ಞದಲ್ಲಿ, ಈ ಮನುಜಾಧೀಶ್ವರ ಸಭೆಯೊಳ್–ಈ ನೆರೆದ ರಾಜರ ಸಭೆಯಲ್ಲಿ, ದುರಾತ್ಮನಂ–ದುಷ್ಟನನ್ನು (ಕೃಷ್ಣನನ್ನು), ನೆನೆಯಲುಂ–ನೆನೆದುಕೊಳ್ಳುವುದಕ್ಕೆ ಕೂಡ, ಆಗದು – ಆಗುವುದಿಲ್ಲ ; ಬೆಸಗೊಳ್ವಾ – ಅವನನ್ನು ಕೇಳುತ್ತೀಯೋ ?

೪೬. ಎಗ್ಗು-ದಡ್ಡತನ, ಅಳವಱಿಯದೆ-ಪ್ರಮಾಣವನ್ನು ತಿಳಿಯದೆ, ಬಳವಳ-ಅತಿಶಯವಾಗಿ, ಬಳೆವಿನೆಗಂ–ಬೆಳೆಯುತ್ತಿರಲು, ಪಚ್ಚೆಪಸಿಯ ತುಱುಕಾಱಂಗೆ–ಹಸಿಹಸಿ ದನಕಾಯುವವನಿಗೆ, ಅಗ್ಗಳಿಕೆಯನೆ – ಶ್ರೇಷ್ಠತೆಯನ್ನೇ, ಮಾಡಿ – ಉಂಟುಮಾಡಿ, ನೀನುಂ–ನೀನು ಕೂಡ, ಭೂಪರಿನಿಬರ–ಇಷ್ಟು ಜನ ರಾಜರ, ಕೊರಲೊಳ್–ಕೊರಳಿನಲ್ಲಿ, ಪ[ಱಿ]ಯಂ–ನಿಂದೆಯನ್ನು, ಕಟ್ಟಿದೆಯೋ–ಕಟ್ಟಿದ್ದೀಯೇ. ಈ ಪದ್ಯದಲ್ಲಿ ಕುಳ ಱ ಕಾರ ಪ್ರಾಸ ಬಂದು, ಪ್ರಾಸದ ನಿಯಮ ಸಡಿಲವಾಗಿದೆ; ಇದು ಕ್ವಚಿತ್ತಾದ ಪ್ರಯೋಗವೆಂದು ಭಾವಿಸಬೇಕು. ಈ ತೆರನ ಪ್ರಾಸಭಂಗಕ್ಕೆ ಆದಿ ಪು. ೧–೪೪ನ್ನು ನೋಡಿ.

೪೭. ದೇವರನಡಿಗೆಱಗಿಸಿ–ದೇವತೆಗಳನ್ನು ಪಾದಕ್ಕೆ ನಮಸ್ಕರಿಸುವಂತೆ ಮಾಡಿ, ಸಕಳಾವನಿತಳದಪಟರಂ–ಸಮಸ್ತ ಭೂಮಂಡಲದ ಶೂರರನ್ನು, ಪಡಲ್ವಡಿಸಿದ–ಚೆಲ್ಲಾಪಿಲ್ಲಿಯಾಗಿ ಬೀಳಿಸಿದ, ಶೌರ್ಯಾವಷ್ಟಂಭದೊಳ್–ಪ್ರತಾಪದ ಗರ್ವದಿಂದ, ಆನಿರೆ–ನಾನು ಇರಲು, ಗೋವಳಿಗಂಗೆ–ಗೋಪಾಲನಿಗೆ, ದನಗಾಹಿಗೆ, ಅಗ್ರಪೂಜೆಯಂ–ಪ್ರಥಮ ಪೂಜೆಯನ್ನು, ನೀಂ ಕುಡುವಾ–ನೀನು ಕೊಡುತ್ತೀಯೋ ?

೪೮. ಸಮಕಟ್ಟಱಿಯದೆ–ಸರಿಯಾದ ವ್ಯವಸ್ಥೆಯನ್ನು ತಿಳಿಯದೆ, ಹರಿಗೆ–

ಕೃಷ್ಣನಿಗೆ, ಅರ್ಘ್ಯಮೆತ್ತಿ–ಅರ್ಘ್ಯ ತೀರ್ಥವನ್ನು ಎತ್ತಿಕೊಂಡು, ನಿಂದಿರ್ದ–ನಿಂತಿದ್ದ, ಯಜ್ಞಮಮ–ಆ ಯಜ್ಞ, ಮೊದಲೊಳ್–ಆರಂಭದಲ್ಲಿ, ತಾನಮರ್ದಂ–ತಾನು ಸರಿಯಾಗಿಯೇ ಸೇರಿಕೊಂಡು ಬಂದರೂ, ಈಗ, ಅಮರ್ದಂ–ಅಮೃತವನ್ನು, ತಣಿಯುಂಡು–ತೃಪ್ತಿಯಾಗಿ ಊಟಮಾಡಿ, ಗೋಮೂತ್ರದಿಂದೆ–ಗಂಜಳದಿಂದ, ಬಾಯ್ಪುಗಿಸಿದಪೋಲ್–ಬಾಯಿಗೆ ಬಳಿದಹಾಗೆ, ಅಮರ್ದಿರದೆ–ಹೊಂದಿಕೊಂಡು ಇರುವುದಿಲ್ಲವಲ್ಲ?

೪೯. ಕುಡವೇೞ್ವನ–(ಅಗ್ರಪೂಜೆಯನ್ನು) ಕೊಡಲು ಹೇಳುವವನ, ಕುಡುವನ–ಕೊಡುವವನ, ಕುಡೆ–ಕೊಡಲು, ಪಡೆವನ–ಪಡೆಯುವವನ, ಪೆಂಪು–ಹಿರಿಮೆ, ಏಂ ನೆಗೞ್ತೆವಡೆಗುಮೋ–ಏನು ಕೀರ್ತಿಯನ್ನು ಪಡೆಯುತ್ತದೊ? ಪೇೞ್ವಂ–ಹೇಳುವವನು, ಕುಡವೇೞ್ಗೆಮ – ಕೊಡುವಂತೆ ಹೇಳಲಿ, ಕುಡುವ – ಕೊಡುವ, ಅಣ್ಣಂ–ಅಣ್ಣನು, ಕುಡುಗೆಮ–ಕೊಡಲಿ; ಕುಡೆ–ಕೊಡಲು, ಕೊಳ್ವ–ಸ್ವೀಕರಿಸುವ, ಕಲಿಯಂ–ಶೂರನನ್ನು, ಅಱಿಯಲ್ಕಕ್ಕುಂ – ತಿಳಿಯುವುದಾಗುತ್ತದೆ. ಯಾವನು ಸ್ವೀಕರಿಸುತ್ತಾನೋ ಆ ಶೂರನನ್ನು ನೋಡಿಕೊಳ್ಳುತ್ತೇನೆ. ಇಲ್ಲಿ ಅಣ್ಣಂ ಎಂಬುದು ತಿರಸ್ಕಾರಾರ್ಥದಲ್ಲಿ ಬಳಸಿದೆ. ಪೌರುಷಯುಕ್ತವಾದ ಅಚ್ಚ ದೇಸಿ ಶೈಲಿ.

**ವಚನ:** ಅನಿತಱೊಳ್ – ಅಷ್ಟರಲ್ಲಿ, ಮಾಣದೆ–ಬಿಡದೆ, ಗೀರ್ವಾಣಾರಿ–ಶಿಶುಪಾಲನು, ಅಸುರಾರಿಯಂ–ಶ್ರೀಕೃಷ್ಣನನ್ನು, ಇಂತೆಂದಂ

೫೦. ಯುಧಿಷ್ಠಿರಂ–ಧರ್ಮರಾಜನು, ಅರ್ಘ್ಯಮನೆತ್ತೆ–ಅಗ್ರ ಪೂಜಾದ್ರವ್ಯಗಳನ್ನು ಎತ್ತಿಹಿಡಿಯಲು, (ಅದು) ನಿನಗೆ, ದೊರೆಯಕ್ಕುಮೆ–ನಿನ್ನ ಯೋಗ್ಯತೆಗೆ ಸದೃಶವಾಗುತ್ತದೆಯೆ, ಎಂದರೆ ನೀನು ಅಯೋಗ್ಯ, ನಿನಗೆ ಅರ್ಘ್ಯ ತಕ್ಕುದಲ್ಲ; ಶಂಖದೊಳ್ ಪಾಲೆಱೆದಂತಿರೆ–ಶಂಖದಲ್ಲಿ ಹಾಲು ಹೊಯ್ದಹಾಗೆ ಎಂದರೆ ಪಾವನವಾಗಿರುವ, ಮಲಿನಮಿಲ್ಲದ–ಕಳಂಕವಿಲ್ಲದ, ಒಳ್ಗುಲದ–ಸತ್ಕುಲದ, ಅರಸುಗಳಿರೆ–ರಾಜರಿರಲು, ನೀನುಂ – (ಅಯೋಗ್ಯನಾದ) ನೀನೂ, ಅಗ್ರಪೂಜೆಯಂ – ಪ್ರಥಮ ಪೂಜೆಯಂ, ಆಂಪಾ–ಸ್ವೀಕರಿಸುತ್ತೀಯೋ!

೫೧. ನಂದ ಗೋಪಾಲ ಸುತಾ–ನಂದನೆಂಬ ದನಗಾಹಿಯ ಮಗನೇ, ಮನದೊಲವರದಿಂದೆ–ಮನಸ್ಸಿನ ಪಕ್ಷಪಾತದಿಂದ, ಈ ಯಮತನಯನ ಕುಡುವಗ್ರಪೂಜೆ–ಈ ಧರ್ಮರಾಜನು ಕೊಡುವ ಅಗ್ರಪೂಜೆಯು, ಮತ್ಸನ್ನಿಧಿಯೊಳ್–ನನ್ನ ಸಮಕ್ಷದಲ್ಲಿ, ನಿನಗೆ, ಅಶನಿಯ–ಸಿಡಿಲಿನ, ಮಿೞ್ತುವ–ಮೃತ್ಯುವಿನ, ನಂಜಿನ–ವಿಷದ, ದೊರೆಯೆಂದು–ಸಮಾನವೆಂದು, ಒಣರ–ಭಾವಿಸು. ಒಣರ್=(ತ) ಉಣರ್–ಭಾವಿಸು, ಯೋಚಿಸು.

೫೨. ನಿನಗೆ ಮನೆ ನಂದ ಗೋಪಾಲನ ಮನೆ; ಮನೆವೆಂಡತಿ–ಮನೆಯ ಹೆಂಡತಿ, ತುಱುಗಾರ್ತಿ–ದನಕಾಯುವವಳು; ಪಚ್ಚನೆ ಪಸಿಯ ಗೋವನಯ್–ಹಚ್ಚಹಸಿಯ ಗೊಲ್ಲನಾಗಿದ್ದೀಯೆ; ಕರಂ–ವಿಶೇಷವಾಗಿ, ಅನಯದೆ–ದುರ್ನೀತಿಯಿಂದ, ನಿನ್ನಳವಿಗೆ–ನಿನ್ನ ಯೋಗ್ಯತೆಗೆ, ಶಕ್ತಿಗೆ, ಅಳವನಱಿಯದೆ–ಅಳತೆಯನ್ನು ತಿಳಿಯದೆ, ನೆಗೞ್ದಪ–ಮಾಡಿದ್ದೀಯೆ, ನಡೆದುಕೊಂಡಿದ್ದೀಯೆ.

೫೩. ಮುರಂ–ಮುರನೆಂಬ ರಾಕ್ಷಸ, ಅಡಸಿ ಪಿಡಿದು–ಮೇಲೆಬಿದ್ದು ಹಿಡಿದು, ಕಟ್ಟಿದ–ಕಟ್ಟಿಹಾಕಿದ, ಪರಿಭವಮುಂ–ಅವಮಾನವನ್ನು, ಮಱೆ[ದ]–ಮರೆತೆಯೋ? ನಿನ್ನ ಪೆಡಗಯ್ಗಟ್ಟಂ–ನಿನ್ನ ಹಿಂಗಟ್ಟು ಮುರಿಯನ್ನು, ಸರಿತ್ಸುತಂ–ಭೀಷ್ಮ, ಶರದಿಂ–ಬಾಣದಿಂದ, ಬಿಡಿಸಿದನಲ್ಲವೆ–ಬಿಡಿಸಿದಾತನಲ್ಲವೆ? ಇನ್ನವು–ಇಂಥವು, ಬನ್ನಂ–ಭಂಗ, ಎಂಬುದು–ಎನ್ನುವುದು, ಒಳವೇ–ಉಂಟೇ?

೫೪. ಎಲವೊ–ಎಲೋ, ದನುಜಾಂತಕನೆಂಬ–ರಾಕ್ಷಸರಿಗೆ ಮೃತ್ಯು ಎನ್ನುವ, ನಿನ್ನನಚ್ಚುವೋಡ–ನಿನ್ನ ನಂಬಿಕೆಗೆ ಪಾತ್ರವಾದ, ಅಂಕಂ–ಹೆಸರು, ಎನ್ನನ್ನಂ–ನನ್ನಂಥವನು, ಮುನ್ನಂ–ಮೊದಲು, ಪುಟ್ಟದೆ–ಹುಟ್ಟದೆ, ನಿನಗೆ, ಸಂದುದು–ಪ್ರಾಪ್ತವಾಯಿತು; ಈ ಪೆಸರ್–ಈ ಹೆಸರು, ಎನ್ನ ಮುಂದೆಯುಂ–ನನ್ನೆದುರಿಗೂ, ಸಂದಪುದೇ–ಸಲ್ಲುತ್ತದೆಯೇ?

೫೫. ಆನಿರ್ದ ಸಭೆಯೊಳ್–ನಾನು ಇದ್ದ ಸಭೆಯಲ್ಲಿ, ಅರ್ಘ್ಯಮನಾನಲ್ಕೆ–ಅಗ್ರಪೂಜೆಯನ್ನು ಸ್ವೀಕರಿಸುವುದಕ್ಕೆ; ಆಟಿಸಿದ–ಬಯಸಿದ, ನಿನ್ನ, ಬಿಸುನೆತ್ತರಂ–ಬಿಸಿರಕ್ತವನ್ನು, ಇಂತೀಸೆರವಿ–ಹೀಗೆ ಈ ಸಭೆ, ನೋಡೆ–ನೋಡುತ್ತಿರಲು, ಕುಡಿಯದೊಡೆ–ಕುಡಿಯದೆ ಇದ್ದರೆ, ಏನೋ, ಶಿಶುಪಾಲನೆಂಬ–ಶಿಶುಪಾಲ ಎನ್ನುವ, ಪೆಸರ್–ಹೆಸರು, ಎಸೆದಪುದೇ–ಶೋಭಿಸುತ್ತದೆಯೇ? ಇಲ್ಲ.

೫೬. ಅಂದು–ಹಿಂದೆ, ಮುಚುಕುಂದನೆಂಬನ–ಮುಚುಕುಂದ ಎಂಬ ರಾಕ್ಷಸನ, ಮಱೆವೊಕ್ಕುದಂ–ಮರೆಹೊಕ್ಕದ್ದನ್ನು, ಮಱೆದ–ಮರೆತೆಯಾ? ನೀಂ–ನೀನು, ಜರಾಸಂಧಂಗಂ–ಜರಾಸಂಧನಿಗೂ, ಬಿಱುತು–ಹೆದರಿ,ಓಡಿದುದಂ–ಪಲಾಯನ ಮಾಡಿದ್ದನ್ನು, ಭೂತಳಂ–ಲೋಕ, ಅಱಿಯದೆ–ತಿಳಿಯದೆ, ಎಲವೊ–ಎಲೋ, ನೆನೆ–ನೆನೆದುಕೋ, ಗೋವುಗಾದುದು–ದನಕಾದದ್ದು, ಪುಸಿಯೇ–ಸುಳ್ಳೇ?

೫೭. ಮೀನಾನೆ ಪಂದಿಯೆಂದು–ಮತ್ಸ್ಯಕೂರ್ಮವರಾಹಗಳ ಅವತಾರವೆಂದು, ಎನಿತಾನುಂ ತೆಱನಾಗಿ–ಎಷ್ಟೋ ಬಗೆಯಾಗಿ, ಡೊಂಬವಿದ್ದೆಯನಾಡಲ್–ಡೊಂಬರ ವಿದ್ಯೆಯನ್ನು ತೋರಿಸುವುದಕ್ಕೆ, ನೀಂ–ನೀನು, ಅಱಿವೆ–ತಿಳಿಯುತ್ತೀಯೆ; ಉಱದೆ–ಇರದೆ, ಇದಿರ್ಚಿದೊಡೆ–ಎದುರಿಸಿದರೆ, ನಿನ್ನಂ–ನಿನ್ನನ್ನು, ಇಲ್ಲಿ, ದೆಸೆವಲಿಗೆಯ್ಯಲ್–ದಿಗ್ಬಲಿಯನ್ನು ಕೊಡಲು, ಆನಱಿವೆಂ–ನಾನು ಬಲ್ಲೆ.

೫೮. ಅಱಿಯದೆ ಇದಂ ಮಾಡಿದೆಂ–ತಿಳಿಯದೆ ಇದನ್ನು ಮಾಡಿದೆ, ಎನ್ನ–ನನ್ನ, ಅಱಿಯಮಿಕೆಗೆ–ತಿಳಿಗೇಡಿತನಕ್ಕೆ, ಸೈರಿಸು–ಸಹಿಸು, ಎಂದು–ಎಂದು ಹೇಳಿ, ನೀನ್–ನೀನು, ಸಭೆಯೊಳ್–ಸಭೆಯಲ್ಲಿ, ಕಾಲ್ಗೆ–ನನ್ನ ಕಾಲುಗಳಿಗೆ, ಎಱಗೆಱಗು–ಬಾಗು, ಬಾಗು, ಕೊಲ್ಲೆನ್–ನಾನು ಕೊಲ್ಲುವುದಿಲ್ಲ, ಎಂದು, ಎರ್ದೆ–ಎದೆ, ತೆಱೆವಿನೆಗಂ–ಬಿರಿಯುತ್ತಿರಲು, ಹರಿಯ–ಕೃಷ್ಣನ, ನೆಱನಂ–ಮರ್ಮಸ್ಥಾನವನ್ನು, ಅಸುರಂ–ರಾಕ್ಷಸ ಶಿಶುಪಾಲ, ನುಡಿದಂ–ಎತ್ತಿ ಆಡಿದನು. ಅಱಿಯಮಿಕೆ < ಅಱಿ + ಅಮೆ + ಇಕೆ, ಪ್ರತಿಷೇಧಾರ್ಥದ ಭಾವನಾಮ.

**ವಚನ**: ಕಾಯ್ಪಿನೊಳ್–ಕೋಪದಲ್ಲಿ, ಪಿಡುಗಿ–ಸಿಡಿಲಂತೆ ಸಿಡಿದು,

೫೯. ಪೊಳೆದುಳ್ಕುವ–ಹೊಳೆದು ಪ್ರಕಾಶಿಸುವ, ಕುಡುದಾಡೆಯ–ವಕ್ರವಾದ ಕೋರೆಹಲ್ಲಿನ, ಪೊಳೆಪು–ಕಾಂತಿ, ನೊಸಲ್ಗೆ–ಹಣೆಗೆ, ಅಡರ್ದು–ಏರಿ, ಪೊಡರ್ವ–ನಡುಗುವ, ಪುರ್ವು–ಹುಬ್ಬು, ಎಸೆವಿನಂ–ಶೋಭಿಸುತ್ತಿರಲು, ಅಪ್ಪಳಿಸುವ–ಮೇಲೆ ನುಗ್ಗುವ, ಮುಳಿಸಿನ–ಕೋಪದ, ದಳ್ಳುರಿಗಳಂ–ಉಜ್ವಲವಾದ ಉರಿಗಳನ್ನು, ಉಗುಳ್ವ ವೊಲ್–ಕಾರುವ ಹಾಗೆ, ಅಸುರಂ–ರಾಕ್ಷಸ, ಉರಿವ ಪಟಿಗಳಂ–ಉರಿಯುತ್ತಿರುವ ಸಿಂದೆ ಗಳನ್ನು, ಉಗುಳ್ದಂ–ಬಾಯಿಂದ ಹೊರಸೂಸಿದನು.

**ವಚನ**: ಎವೆ ಮಿಡುಕದೆ–ಕಣ್ಣರೆಪ್ಪೆ ಆಡಿಸದೆ, ಪಂಡೆಯುಂ ಪಾವಡರ್ದಂತೆ–ಹೇಡಿಯನ್ನು ಹಾವು ಹತ್ತಿದಂತೆ, ಎಂದರೆ ಭಯದಿಂದ, ಉಸಿರದಿರೆ–ಮಾತಾಡದಿರಲು.

೬೦. ಶ್ರೀಕೃಷ್ಣನ ಮಾತು: ನಿನ್ನಯ ತಾಯ್–ನಿನ್ನತಾಯಿ, ಸಾತ್ವತಿಯುಂ–ಸಾತ್ವತಿಯೂ, ನಿನ್ನಂ ತಂದು–ನಿನ್ನನ್ನು ತಂದು, ಎನ್ನ ತೊಡೆಯ ಮೇಲೆ–ನನ್ನ ತೊಡೆಗಳ ಮೇಲೆ, ಇಱಿಪುವುದುಂ–ಇಳಿಸುತ್ತಲೂ, ಎಂದರೆ ತೊಡೆಯಮೇಲೆ ನಿನ್ನನ್ನು ಇಡಲು, ನಿನ್ನ ಲಲಾಟದ–ನಿನ್ನ ಹಣೆಯ, ಕಣ್ಣದು–ಆ ಕಣ್ಣು, ಮುನ್ನಮೆ ಕಿಡೆ–ಮೊದಲೇ ನಷ್ಟ ವಾಗಲು, ನಿನ್ನ ಮೃತ್ಯು–ನಿನ್ನಸಾವು, ಎನ್ನಯ ಕೆಯ್ಯೊಳ್–ನನ್ನ ಕೈಯಲ್ಲಿ.

೬೧. ನೆಱೆದುದಂ–ತುಂಬಿರುವುದನ್ನು ಎಂದರೆ ನಿನ್ನ ಸಾವು ನನ್ನ ಕೈವಶ ವೆಂಬುದನ್ನು; ಅಱಿದು–ತಿಳಿದು, ಈ ಕಿಱಿಯವಂ–ಈ ಚಿಕ್ಕವನು, ಅಱಿಯದೆ–ತಿಳಿಯದೆ, ಕೆಡೆನುಡಿದನಪ್ಪೊಡಂ–ತಿರಸ್ಕರಿಸಿ ಮಾತಾಡಿದರು ಕೂಡ, ಎಂದರೆ ಬೀಳ್ನುಡಿ ಗಳನ್ನಾಡಿದರೂ, ನೂಱುವರಂ–ನೂರರವರೆಗೆ, ಎಂದರೆ ನೂರು ಬಯ್ಗುಳಗಳಾಗುವವರೆಗೆ; ನೆಱೆ ಸಲಿಸುವುದು–ಪೂರ್ಣವಾಗಿ ಅವಕಾಶ ಕೊಡುವುದು, ಎಂಬುದಂ–ಎಂದು ಹೇಳಿದ್ದನ್ನು, ಆಂ ಮಱೆವೆನೆ–ನಾನು ಮರೆಯುತ್ತೇನೆಯೆ, ಬಯ್–ಬೇಕಾದಷ್ಟು ಬಯ್ಯಿ, ಬಯ್ಯೆ–ಬಯ್ಯಲು, ನೂಱುವರಂ–ನೂರು ಬೈಗುಳಗಳವರೆಗೂ, ಸಲಿಸುವೆಂ–ಸಲ್ಲಿಸುತ್ತೇನೆ.

೬೨. ಮುನಿಯಲ್ ಎನಗೆ–ಸಿಟ್ಟು ಮಾಡಿಕೊಳ್ಳಬೇಡ, ನನ್ನಮೇಲೆ; ಆಗ–ಆ ಸಮಯದಲ್ಲಿ, ಗಾಂಗೇಯನಿರ್ದಂ–ಭೀಷ್ಮನಿದ್ದನು, ಇರ್ದಂ ಘಟೋದ್ಭವಂ–ದ್ರೋಣ ನಿದ್ದನು, ನೆಗಳ್ದಪೃಥಾತನುಜರುಂ–ಪ್ರಸಿದ್ಧರಾದ ಪೃಥೆಯ ಮಕ್ಕಳೂ ಎಂದರೆ ಪಾಂಡವರೂ, ಇರ್ದರ್–ಇದ್ದರು, ದುರ್ಯೋಧನನಿರ್ದಂ–ದುರ್ಯೋಧನನು ಇದ್ದನು, ಆ ಬಲ್ಲವರುಂ–ಆ ತಿಳಿದವರೂ, ಕೇಳೆ–ಕೇಳಲು, ಪೇಟ್ಟಿರ್–ಹೇಳುತ್ತಾರೆ. ಇಲ್ಲಿ ಮುನಿಯಲ್ ಎಂಬಲ್ಲಿನ ಅಲ್‌ಪ್ರತ್ಯಯ ಪ್ರತಿಷೇಧಾರ್ಥದಲ್ಲಿ ಬಂದಿದೆ.

೬೩. ಎನೆಯೆನೆ–ಎನ್ನಲೆನ್ನಲು, ಎಂದು ಹೇಳುತ್ತಿರಲು; ಬಾಯ್ಗಂ ಬಂದ ನಿತುಮಂ–ಬಾಯಿಗೆ ಬಂದಷ್ಟನ್ನೂ, ಅಮರಾರಿ–ರಾಕ್ಷಸ, ಶಿಶುಪಾಲ, ಬಯ್ಯೆ–ಬಯ್ಯಲು, ನೂಱೆಂಬನಿತುವರಂ–ನೂರು ಎಂಬಷ್ಟರವರೆಗೂ, ಸೈರಿಸಿ–ಸಹಿಸಿ, ಮನ್ನಿಸಿ–ಕ್ಷಮಿಸಿ, (ಆಮೇಲೆ) ನಸುಕಿನಿಸದೆ–ಸ್ವಲ್ಪ ಕೋಪಿಸಿಕೊಳ್ಳದೆ, ಮಿಗೆಕಿನಿಸಿ–ಅತಿಶಯ ವಾಗಿ ಕೆರಳಿ, ದಿತಿಜ ಕುಳದವ ದಹನಂ–ದೈತ್ಯಕುಲಕ್ಕೆ ಕಾಡುಗಿಚ್ಚಾದ ಶ್ರೀಕೃಷ್ಣ,

೬೪. ಮುಳಿದು–ಕೋಪಿಸಿ, ತನಗರ್ಘ್ಯಮೆತ್ತಿದ–ತನಗೆ ಅರ್ಘ್ಯಕ್ಕಾಗಿ ಎತ್ತಿದ ತಳಿಗೆಯೊಳಿಡೆ–ತಟ್ಟೆಯನ್ನು ಬೀಸಿಹೊಡೆಯಲು, ತಿಱಿದ ತೆಱದೆ–ಕತ್ತರಿಸಿದ ರೀತಿಯಿಂದ, ತಲೆ ಪಱಿದು–ತಲೆ ತುಂಡಾಗಿ, ಆಗಳ್–ಆಗ, ತಳಿಗೆಯಮೇಲೆ–ತಟ್ಟೆಯ ಮೇಲುಗಡೆ, ಕಳಕಳಿಸಿ–ಕಳಕಳ ಎಂದು ಕೂಗುತ್ತ, ನಗುತುಂ–ನಗುತ್ತ, ಇರ್ದುದು–ಇತ್ತು; ಅಸುರನ–ರಾಕ್ಷಸನ, ಅದಟು–ಪರಾಕ್ರಮ, ಇದೇನಚ್ಚರಿಯೋ–ಇದೇನಾಶ್ಚರ್ಯವೊ!

**ವಚನ:** ಜವಂ–ಯಮನು; ಶಿರೋಂಬುಜಮುಂ–ಕಮಲದಂತಿರುವ ತಲೆಯನ್ನು; ಅಲಿಲ್ದು–ದುಃಖಿಸಿ; ಎನಿಬರಾನುಂ–ಎಷ್ಟೋ ಜನ.

೬೫. ಅಸುರವೈರಿ–ಶ್ರೀಕೃಷ್ಣ, ಕರಚಕ್ರಮುಂ–ಕೈಯ ಚಕ್ರಾಯುಧವನ್ನು, ತಿರಿಪಿ–ತಿರುಗಿಸಿ, ದನುಜರ–ರಾಕ್ಷಸರ, ತಲೆಗಳಂ–ತಲೆಗಳನ್ನು, ಇಡೆ–ಹೊಡೆಯಲು, ಪಱಿದು–ಕತ್ತರಿಸಿ, ಅಂಬರ ತಳಮನೆಯ್ದಿ–ಆಕಾಶ ಪ್ರದೇಶಕ್ಕೆ ಹೋಗಿ, ಮೇಘದ–ಮೋಡಗಳ, ಪೊರೆವೊರೆಯೊಳ್–ಪದರ ಪದರಗಳಲ್ಲಿ, ತೊಡರ್ದು–ಸಿಕ್ಕಿಕೊಂಡು, ತಲೆಗಳ್–ತಲೆಗಳು, ನೆಲಕೆ–ನೆಲಕ್ಕೆ, ಬೀಱವೆ–ಬೀಳುವುದಿಲ್ಲವೆ? ಇಲ್ಲ.

**ವಚನ:** ಮಹಾಪ್ರಘಟ್ಟ–ದೊಡ್ಡ ಸಮಾರಂಭ; ಅವಭೃಥಸ್ನಾನ–ಯಾಗಾಂತ್ಯದಲ್ಲಿ ಮಾಡುವ ಮಂಗಳಸ್ನಾನ; ನಿರ್ವರ್ತಿಸಿ–ಮುಗಿಸಿ, ವಿಸರ್ಜಿಸಿದಾಗಳ್–ಬೀಳ್ಕೊಟ್ಟಾಗ; ಅಂತಕನಂದನನಂ–ಧರ್ಮರಾಜನನ್ನು

೬೬. ಹಿಮಸೇತು ಪ್ರತಿಬದ್ಧ ಭೂವಳಯಮಂ-ಹಿಮವತ್ಪರ್ವತ ರಾಮಸೇತುಗಳ ಮೇರೆಕಟ್ಟನ್ನುಳ್ಳ ಭೂಮಂಡಲವನ್ನು, ನಿಷ್ಕಂಟಕಮಾಡಿ–ಕಂಟಕರಹಿತವನ್ನಾಗಿ ಮಾಡಿ ಎಂದರೆ ಶತ್ರುಗಳಿಂದ ಅಪಾಯವಿಲ್ಲದಂತೆ ಮಾಡಿ, ವಿಕ್ರಮಮುಮಂ ತೋಱಿ–ಪರಾಕ್ರಮವನ್ನು ಪ್ರದರ್ಶಿಸಿ, ನಿಜಾನುಜರ್–ನಿನ್ನ ತಮ್ಮಂದಿರು, ನೆರಪಿದ–ಕೂಡಿಸಿದ, ಒಂದೈಶ್ವರ್ಯದಿಂ–ಒಂದು ಸಂಪತ್ತಿನಿಂದ, ರಾಜಸೂಯಮುಂ–ರಾಜಸೂಯವನ್ನು, ಇಂದು–ಈಗ, ಅಗ್ಗಳದ–ಶ್ರೇಷ್ಠವಾದ, ಅಗ್ಗಳಿಕೆಯ–ಅತಿಶಯತೆಯನ್ನುಳ್ಳ, ಮಖಂ–ಯಜ್ಞ, ತಾಂ–ತಾನು, ಎಂಬಿನಂ–ಎನ್ನುವ ಹಾಗೆ, ನಿನ್ನ ಕೀರ್ತಿ ಮುಖಂ–ನಿನ್ನ ಕೀರ್ತಿ ಮುಂಭಾಗವು, ದಿಗ್ದಂತಿ ದಂತಂಗಳೊಳ್–ದಿಕ್ಕಿನಾನೆಗಳ ದಂತಗಳಲ್ಲಿ, ಕೀರ್ತಿಮುಖಂ ಪೊಲ್–(ಪೋಣಿಸಿದ) ಬಳೆಗಳಂತೆ, ಏನೆಸೆದುದೋ–ಏನು ಶೋಭಾಯಮಾನವಾಯಿತೋ? ಕೀರ್ತಿಮುಖ: ಮಂಗಳಪಾತ್ರ ಚೂಡಾಮಣಿ ಎಂಬ ನರ್ತಕಿಯ ಅಲಂಕಾರಗಳನ್ನು ವರ್ಣಿಸುವಾಗ ವೃತ್ತವಿಲಾಸನು "ಮೂಗಿನ ಮೂಗುತಿಯ ತೋರಹಾರದ, ಕೀರ್ತಿಮುಖದ, ತೋಳಬಂದಿಯ ಕಾಲಹಳಚಿನುಂಗರದ" ಎಂಬಲ್ಲಿ ಈ ಶಬ್ದವನ್ನು ಬಳಸಿದ್ದಾನೆ. "ಬಳೆಗೋದುದು ಕೀರ್ತಿ ದಿಶಾಕರಿಕಳಭಂಗಳ ನಿಗ್ಗವಂಗಳೊಳ್" ಎಂಬ ಜನ್ನನ ಪ್ರಯೋಗವನ್ನು ಶಬ್ದದ ಅರ್ಥದೃಷ್ಟಿಯಿಂದ ನೋಡಬಹುದು.

ಇಲ್ಲಿಗೆ ಶಿಶುಪಾಲವಧೆಯ ಪ್ರಸಂಗವು ಮುಗಿಯುತ್ತದೆ. ವ್ಯಾಸಭಾರತದಲ್ಲಿ

ಈ ಉಪಾಖ್ಯಾನ ಆರು ಅಧ್ಯಾಯಗಳಷ್ಟು ವಿಸ್ತಾರವಾಗಿದೆ. ಪಂಪನು ಇಪ್ಪತ್ತೈದು ಪದ್ಯಗಳಲ್ಲಿ ಇದನ್ನು ನಾಟಕೀಯತೆಯಿಂದ ಸಂಗ್ರಹಿಸಿದ್ದಾನೆ. ಈ ಪ್ರಸಂಗದಲ್ಲಿ ನೇರವಾಗಿ ಸಂಬಂಧವನ್ನುಳ್ಳ ವ್ಯಕ್ತಿಗಳು ಇಬ್ಬರು, ಶಿಶುಪಾಲ ಮತ್ತು ಶ್ರೀಕೃಷ್ಣ. ಪಂಪನು ಅವರನ್ನು ಮುಂಪೆಬಿಟ್ಟು ಈ ನಾಟಕವನ್ನಾಡಿಸಿದ್ದಾನೆ. ಅಗ್ರಪೂಜೆಗೆ ಶ್ರೀ ಕೃಷ್ಣನನ್ನೆ ಸೂಚಿಸಿದ ಭೀಷ್ಮ, ಅದರಂತೆ ಒಪ್ಪಿ ಮಾಡಲು ತೊಡಗಿದ ಧರ್ಮರಾಜ ಇವರಿಬ್ಬರನ್ನು ಶಿಶುಪಾಲ ನಿಂದಿಸುವುದು ಅವನ ಸ್ವಭಾವಕ್ಕೆ ತಕ್ಕುದಾಗಿಯೇ ಇದೆ; ಅನಂತರ ಕೃಷ್ಣನ ನಿಂದೆ, ಸ್ವಾತ್ಮಪ್ರಶಂಸೆ. ಕೃಷ್ಣನು ಸ್ವಲ್ಪವಾದರೂ ಉದ್ರಿಕ್ತ ನಾಗದೆ ಸ್ಥಿತ ಪ್ರಜ್ಞನಂತೆ ಇದ್ದು ಶಿಶುಪಾಲನ ತೆಗಳಿಕೆಗಳನ್ನು ಕೇಳಿ ಸಮಾಧಾನ ಚಿತ್ತದಿಂದ ತನ್ನ ಮಾತನ್ನು ಆರಂಭಿಸುತ್ತಾನೆ. ಆಮೇಲೆ ಕೋಪಬಂದು ಅರ್ಘ್ಯದ ತಟ್ಟೆಯಿಂದಲೇ ಶಿಶುಪಾಲನ ಕೊರಳನ್ನು ಕತ್ತರಿಸುತ್ತಾನೆ. ಇಲ್ಲಿ ಒಂದು ಯುದ್ಧವೇ ನಡೆಯುತ್ತದೆ. ಕೃಷ್ಣ ಚಕ್ರಾಯುಧವನ್ನು ಪ್ರಯೋಗಿಸುತ್ತಾನೆ, ವ್ಯಾಸಭಾರತದಲ್ಲಿ. ಶಿಶುಪಾಲನ ಸಂಹಾರಕ್ಕೆ ಇಷ್ಟೆಲ್ಲ ಗೊಂದಲವೇಕೆ, ತಟ್ಟೆಯೊಂದು ಸಾಕು ಎಂದು ಪಂಪನು ಭಾವಿಸಿದ್ದಾನೆ. ಈ ದೃಶ್ಯದ ಕ್ರಿಯೆಯ ಆರೋಹಣ, ಶಿಖರ, ಅವರೋಹಣ ಗಳು ಕಲಾಮಯವಾಗಿವೆ; ಪಾತ್ರಗಳ ಗುಣ ಸ್ವಭಾವ ಪ್ರಸ್ಫುಟವಾಗಿ ಚಿತ್ರಿತವಾಗಿವೆ. ಬೇರೊಬ್ಬರ ಮಾತುಗಾರಿಕೆ ನಡುವೆ ಬರುವುದಿಲ್ಲ. ಶೈಲಿ ಮಿತಹಿತವಾಗಿದೆ. ಒಟ್ಟಿನಲ್ಲಿ ಪಂಪನ ಚಿತ್ರಣ ನಾಟಕದ ಒಂದು ದೃಶ್ಯದಂತೆ ರಮಣೀಯವಾಗಿದೆ. ಇಲ್ಲಿ ಅವನ ಎಲ್ಲ ಶಕ್ತಿವಿಶೇಷಗಳನ್ನೂ ಕಾಣಬಹುದು.

**ವಚನ:** ಮಂದರಧರನಂ–ಶ್ರೀಕೃಷ್ಣನನ್ನು; ಅದೇವಿರಿದು–ಅದೇನು ದೊಡ್ಡದು;

**೬೭.** ಇಲ್ಲಿಂದ ಮುಂದಕ್ಕೆ ದ್ಯೂತಪ್ರಸಂಗವು ಆರಂಭವಾಗುತ್ತದೆ: ಮೇಗಿಲ್ಲದ–ಮೇಲಿಲ್ಲದ ಎಂದರೆ ಉತ್ತಮವಾದದ್ದು ಇಲ್ಲದ, ಬಲ್ಲಾಳ್ತನದ–ಪರಾ ಕ್ರಮದ, ಆಗರಮೆನೆ–ಆಕರವೆನ್ನಲು, ನೆಗಟ್ಟ–ಪ್ರಸಿದ್ಧರಾದ, ತತ್ಪೃಥಾಸುತರ– ಆ ಪಾಂಡವರ, ಉದ್ಯೋಗದ–ಕಾರ್ಯದ, ಚಾಗದ–ದಾನದ, ಯಾಗದ–ಯಜ್ಞದ, ಭೋಗದ–ಸುಖದ, ಮೈಮೆಗೆ-ಮಹಿಮೆಗೆ, ಸುಯೋಧನಂ–ದುರ್ಯೋಧನನು, ಬೆಱಗಾದ- ಆಶ್ಚರ್ಯಪಟ್ಟವನಾದನು.

**ವಚನ:** ಮಂತಣಮಿರ್ದು–ಆಲೋಚಿಸಿ; ಪೆರ್ಚ್ಚಿರ್ಕೆಂಗೆ–ಹೆಚ್ಚಳಕ್ಕೆ; ಬಸನಂ ಗಳಂ–ಜೂಜು ಬೇಟೆ ಮುಂತಾದ ಸಪ್ತವ್ಯಸನಗಳನ್ನು; ಸಮಕಟ್ಟುವಂ–ಏರ್ಪಡಿಸೋಣ; ರಾಷ್ಟ್ರವ್ಯಸನ–ರಾಜ್ಯಕ್ಕೆ ಉಂಟಾಗುವ ಪೀಡೆಗಳು; ಬಳವ್ಯಸನ–ಸೈನ್ಯದ ಪಿಶೂರಿಗಳು; ಪಾರ್ವಮಪ್ಪೊಡೆ–ನೋಡೋಣ ಎನ್ನುವುದಾದರೆ, ಪರಮಂಡಳ ವ್ಯಸನ–ಶತ್ರುದೇಶ ಗಳಿಂದ ಆಗುವ ಉಪಟಳ; ಕೇಱಿಯುಂ–ಆಗ್ರಹಿಸಿಯೂ; ಛಿದ್ರಿಸುವಮಪ್ಪೊಡೆ– ಭೇದಿಸೋಣವೆಂದರೆ; ಇನ್ನಾವ ಮಾಱ್ಕೆಯೊಳ್–ಇನ್ನಾವ ರೀತಿಯಲ್ಲಿ, ಇನ್ನಾವ ಮಾಟದಲ್ಲಿ.

**೬೮.** ಬೆಸಸಿದ–ಹೇಳಿದ, ನಿನ್ನ ಮಾತಿನಿತುಂ–ನಿನ್ನ ಮಾತಿಷ್ಟೂ, ಅಂತುಟೆ–

ಹಾಗೆಯೇ; ಪಾಂಡುಪುತ್ರರಂ–ಪಾಂಡವರನ್ನು, ಗೆಲ್ಲವು–ಅವು ಗೆಲ್ಲುವುದಿಲ್ಲ; ಬಸನ ದೊಡಂಬಡಂ–ವ್ಯಸನದ ಒಪ್ಪಿಗೆಯನ್ನು, ಮಱೆದುಂ–ಮರೆತೂ, ಆ ಯಮನಂದನನಲ್ತೆ–ಆ ಧರ್ಮರಾಜನಲ್ಲವೆ, ನೆತ್ತದೊಳ್–ಪಗಡೆಯಾಟದಲ್ಲಿ, ಬಸನಿಗಂ–ಆಸಕ್ತಿಯುಳ್ಳವನು; ಆತನಂ–ಅವನನ್ನು, ಬರಿಸಿ–ಬರಮಾಡಿಕೊಂಡು, ನೆತ್ತಮಂನಾಡಿಸಿ–ಪಗಡೆಯಾಟವನ್ನಾಡು ವಂತೆಮಾಡಿ, ಈ ವಸುಮತಿಯಂ–ಈ ಭೂಮಿಯನ್ನು, ಗೆಲ್ದುಕೊಳ್ವಂ–ಗೆದ್ದು ತೆಗೆದುಕೊಳ್ಳೋಣ; ಮನಂಬಸದೆ–ಮನಸ್ಸನ್ನು ವಿಭಾಗಿಸದೆ ಎಂದರೆ ಬೇರೆ ಏನನ್ನೂ ಯೋಚಿಸದೆ, ಫಣೀಂದ್ರಕೇತನಾ–ದುರ್ಯೋಧನನೇ, ನೀಂ–ನೀನು, ಬ...ಯಟ್ಟು– ದೂತರೊಡನೆ ಹೇಳಿ ಕಳುಹಿಸು.

**ವಚನ**: ನಾಬಿವಾಸಗೆಗಳಂ – ಕಳ್ಳದಾಳಗಳನ್ನು; ನಾ..+ಪಾಸಗೆ<(ಸಂ) ಪಾಶಕ, ನಾಬಿನುಡಿ ತುಂಬುಕಳ್ಳನೊಳುಂಟು; ಗೋಷ್ಠಿಯೊಳಿರ್ಪಂ–ಗೋಷ್ಠಿಯಲ್ಲಿ ರೋಣ; ಪುಲ್ಲಗೆಯಂ–ಹೀನ ಚಿಂತನೆಯನ್ನು; ನಿಯತಿಃ ಕೇನಲಂಘ್ಯತೇ–ವಿಧಿಯನ್ನು ಯಾರಿಂದ ಮೀರುವುದಕ್ಕೆ ಆದೀತು; ಸಮಾನ ಪ್ರತಿಪತ್ತಿಯೊಳ್–ಸಮಾನ ಸತ್ಕಾರದಲ್ಲಿ; ತಱಿಕೈಸಿ–ಅಪ್ಪಿಕೊಂಡು;

೬೯. ಪೃಥಾ ತನೂಜರ–ಪಾಂಡವರ, ಸಭಾಗೃಹದಂದಮಂ–ಸಭಾಮಂದಿರದ ಸೌಂದರ್ಯವನ್ನು, ನೋಡಿ, ಅಂತುಟಪ್ಪುದಂ–ಹಾಗೆಯೇ ಇರುವುದನ್ನು, ಮಾಡಿಪೆ ನೆಂದು–ಮಾಡಿಸುವೆನೆಂದು, ಸಭಾಲಯಮಂ–ಸಭಾಭವನವನ್ನು, ಮಾಡಿಸಿ, ನಿಜರಾಜ ಲೀಲೆಯೊಳ್ ಕೂಡಿ–ತನ್ನ ರಾಜಲೀಲೆಯಲ್ಲಿ ಸೇರಿ, ಯುಧಿಷ್ಠಿರ ಪ್ರಭುಗೆ–ಧರ್ಮರಾಜ ನಿಗೆ, ಸುಯೋಧನಂ–ದುರ್ಯೋಧನನು, ತಾನೆ–ತಾನೇ; ಉಯ್ದು–ಕರೆದುಕೊಂಡು ಹೋಗಿ, ತೋಱಿದಂ–ತೋರಿಸಿದನು; ನೋಡಿರೆ–ನೋಡಿರೋ, ಸಿಂಹ ಮಾಡುವರ– ಸಿಂಹದ ವೇಷವನ್ನು ಹಾಕಿಕೊಂಡು ಕುಣಿವವರ, ಬಾಲಮನಾಡಿದರ್–ಬಾಲವನ್ನು ಹಿಡಿದುಕೊಂಡು ಕುಣಿದರು, ಎಂಬ ಮಾಚ್ಕೆಯಿಂ–ಎಂಬ ರೀತಿಯಿಂದ, ತೋಱಿದಂ– ತೋರಿದನು. ಬಾಬಯ್ಯನ ಹಬ್ಬದ ಹುಲಿವೇಷದವನ ಬಾಲವನ್ನು ಹಿಡಿದು ಅವನು ಕುಣಿಯುವಂತೆ ಕುಣಿಯುವುದು.

**ವಚನ**: ಕಂದುಕ ಕ್ರೀಡಾದಿ–ಚೆಂಡಾಟವೇ ಮೊದಲಾದ, ಈಗಿನ ಪೋಲೋ ಆಟ; ಸಿಂಗಾಕ್ಷಂ–ದುರ್ಯೋಧನ; ಅಕ್ಷಕ್ರೀಡೆಯಂ–ಪಗಡೆಯಾಟವನ್ನು; ಪೂಡಲ್ವೇಳ್ದು– ಆಟವನ್ನು ಹೂಡುವಂತೆ ಹೇಳಿ; ಪುಸಿಯನೆ–ಸುಳ್ಳಾಗಿಯೆ; ಪೆಱರಂ–ಇತರರನ್ನು;

೭೦. ನೋಡುವುದಱೊಳೇನ್–ಸುಮ್ಮನೆ ನೋಡುತ್ತಿರುವುದರಲ್ಲಿ ಏನು ಪ್ರಯೋಜನ; ತಮ್ಮುಕ್ತಿರ್ವರುಂ–ತಾವಿಬ್ಬರೂ ಎಂದರೆ ಧರ್ಮರಾಜ ದುರ್ಯೋಧನರೂ, ಅಱ್ತಿಯೊಳ್–ಪ್ರೀತಿಯಲ್ಲಿ, ಆಡುತ್ತಿರಲಾಗ–ಆಡುತ್ತಿರಲಾಗದು! ಎಂದರೆ ಆಡಬಾರದೆ, ಎನೆ–ಎನ್ನಲು, ನಾಮಾಡುವಮೆ–ನಾವಿಬ್ಬರೂ ಆಡೋಣವೆ (ಎಂದು ದುರ್ಯೋಧನ), ಬನ್ನಿಂ–ಬನ್ನಿರಿ; ಎಂಬುದು–ಎನ್ನುತ್ತಲು, ನೆತ್ತಮಂ–ಪಗಡೆಯನ್ನು, ಆಡುವ ಬಗೆ ಬಂದು–ಆಡುವ ಮನಸ್ಸುಂಟಾಗಿ, ಧರ್ಮಸುತಂ–ಧರ್ಮರಾಜನು,

೭೧. ಕರೆದೊಡೆ–ಕರೆದರೆ, ಜೂದಿಂಗಂ–ಜೂಜಿಗೂ, ಧುರಭರಕೆ–ಯುದ್ಧ ಕಾರ್ಯಕ್ಕೂ, ಆಪೇಟಕ್ಕೆ-ಬೇಟೆಗೂ, ಭೂಭುಜಂಗೆ-ರಾಜನಾದವನಿಗೆ, ಮೆಯ್ಗರೆದಿರಲ್-ಮೈಮರಸಿಕೊಂಡಿರುವುದು, ಆಗದು–ಆಗುವುದಿಲ್ಲ, ತಕ್ಕದ್ದಲ್ಲ; ಎಂದು ಪುರಾತನ ಗುರುವಚನಂ–ಪ್ರಾಚೀನರಾದ ಹಿರಿಯರ ಮಾತು, ತನಗೆ, ಸಿಟ್ಟಿ ಪಟ್ಟುದಱಿಂದಂ–ನಿಷ್ಠೆಯಾಗಿ ಬಿಟ್ಟದ್ದರಿಂದ; "ಆಹೂತೋ ನ ನಿವರ್ತೇತ ದ್ಯೂತಾದಪಿ ರಣಾದಪಿ। ಸ್ಮರನ್ನಿತಿ ಕ್ಷಮಾಪಾಲೋ ಜಾನೀಯಾದಕ್ಷ ಶೀಲನವ್ ॥"

**ವಚನ**: ನಾಬಿವಾಸಗೆಯನಿಕ್ಕಲ್ವೇೞ್ಪುದುಂ – ಕಳ್ಳದಾಳಗಳನ್ನು ಹಾಕುವಂತೆ ಹೇಳುತ್ತಲು; ಅರಸಾಳಂತೆ–ರಾಜಭಟನಂತೆ, ಕಣ್ಣಱಿದು–ಕಣ್ಣಿನ ಇಂಗಿತವನ್ನು ತಿಳಿದು; ಮಟ್ಟಮಱಿದಿಕ್ಕುವಾಗಳ್–ಸಮ ಪ್ರದೇಶವನ್ನು ತಿಳಿದು ದಾಳಹಾಕುವಾಗ, ಒಡ್ಡಮಂ–ಪಣವನ್ನು, ಒತ್ತೆಯನ್ನು; ಪೊೞ್ತು ಪೋಗಿಂಗಂ–ಹೊತ್ತುಹೋಗುವುದಕ್ಕೂ, ಅೞ್ತಿಗಂ-ಸ್ನೇಹಕ್ಕೂ; ಪಲಗೆಗೆ–ಹಲಗೆಗೆ, ಪಗಡೆಯಾಟದ ಹಾಸಿನ ಒಂದು ಸಲದ ಹಲಗೆಗೆ; ಸಾಯಿರ–ಸಾವಿರ, ಗದ್ಯಾಣಪೊನ್ನೇ-ಗದ್ಯಾಣವೆಂಬ ಚಿನ್ನದ ನಾಣ್ಯವೇ, ಸಾಲ್ಗುಂ–ಸಾಕು; ಅಗ್ಗಳಂ ಬೇಡ–ಹೆಚ್ಚುಬೇಡ; ಒಕ್ಕಲಂ–ಕುಲವನ್ನು; ಪುಡಿಯೊಳ್–ಧೂಳಿನಲ್ಲಿ; ಪಾಸಂಗೆಯಂ ಪೊರಳ್ಚಿ–ದಾಳಗಳನ್ನು ಹೊರಳಿಸಿ; ನೆತ್ತಮನಱಿಯದವನಂತೆ – ಪಗಡೆಯಾಟವನ್ನು ತಿಳಿಯದವನ ಹಾಗೆ; ದಾಯಮನಾಡೆ–ಗರವನ್ನು ಹಾಕಲು; ಮಡಿಮಡಿಗುಱುವುದುಂ–ಬಾರಿಬಾರಿಗೆ ಇರುವುದನ್ನು, ಎಂದರೆ ಇರುವ ಒತ್ತೆಯನ್ನು; ಪತ್ತೆಂಟು ಪಲಗೆಯಂ–ಹತ್ತೆಂಟು ಹಲಗೆಗಳನ್ನು, ಮೆ[ಟ್ಟಿ]ಡಿಸಲೆಂದೆ–ಮೋಸಮಾಡಬೇಕೆಂದೇ, ಏವಯಿಸಿ–ಅಸಮಾಧಾನಪಟ್ಟು, ಕೆರಳಿ; ಇನ್ನೊಡ್ಡಂ–ಇನ್ನೊಂದು ಒತ್ತೆಯನ್ನು, ಕೊಳ್ಳಿಂ–ತೆಗೆದುಕೊಳ್ಳಿರಿ;

೭೨. ಪಲಗೆಗೆ–ಪಗಡೆಯ ಮಣೆಗೆ, ಒಂದುಸಲಕ್ಕೆ, ಪತ್ತುಸಾಯಿರಮೆ–ಹತ್ತು ಸಾವಿರವೇ ಗದ್ಯಾಣ, ಎಂದಿರದೊಡ್ಡಿ–ಎಂದು ಇರದೆ ಪಣವಾಗಿಟ್ಟು, ತಾಂ–ತಾವು ಎಂದರೆ ಶಕುನಿ ದುರ್ಯೋಧನರು, ಎರಡ್ಪಲಗೆಯನಾಡಿ–ಎರಡು ಹಲಗೆಗಳನ್ನಾಡಿ, ಸೋಲ್ತೊಡೆ–ಸೋತರೆ, ಸುಯೋಧನಂ–ದುರ್ಯೋಧನನು, ಏವದೆ–ಅಸಮಾಧಾನದಿಂದ, ಧರ್ಮಪುತ್ರನಂ–ಧರ್ಮರಾಜನನ್ನು, ಕುಲಧನ ಸಂಕುಲಂಗಳನೆ–ಕುಲದ ಧನಸಮೂಹಗಳನ್ನೆಲ್ಲ, ತಂದಿಡೆ–ತಂದು ಪಣವಾಗಿ ಒಡ್ಡಲು, ಇಟ್ಟು, ಅವಂ–ಅವುಗಳನ್ನು, ಮುಂದೆ ಭಾರತದೊಳ್–ಮುಂದೆ ನಡೆಯಲಿರುವ ಭಾರತ ಯುದ್ಧದಲ್ಲಿ, ಒಡ್ಡುವುದಂ–ತನ್ನ ವಂಶವನ್ನು ಬಲಿಯಾಗಿ ಒಡ್ಡುವುದನ್ನು, ಕಡುನನ್ನಿ ಮಾಡ್ಪವೋಲ್–ಕಡುದಿಟವನ್ನಾಗಿ ಮಾಡುವಂತೆ, ಆಕುಲಮತಿ – ವ್ಯಾಕುಲಿತ ಮನದವನಾದ ಧರ್ಮರಾಜನು (?), ಸೋಲ್ತಂ–ಸೋತನು.

ಈ ಪದ್ಯದ ಅನ್ವಯದಲ್ಲಿ ತುಂಬ ಕ್ಲೇಶವಿದೆ; 'ಸುಯೋಧನನೇವದೆ ಧರ್ಮಪುತ್ರನಂ' ಎಂಬುದರ ಪಾಠ ಕೆಟ್ಟಿರಬಹುದು: ಸುಯೋಧನ[ನೋ]ವದೆ ಧರ್ಮಪುತ್ರನಂ, ಸುಯೋಧನನೇವದೆ ಧರ್ಮಪುತ್ರ[ನುಂ] ಎಂದೋ ಏನೋ ಪಾಠವಿರ

ಬಹುದು. ಗದ್ಯಾಣ, ಗದ್ಯಣ ಎಂಬ ಶಬ್ದಗಳು ಲ್ಯಾಟಿನ್ ಭಾಷೆಯಲ್ಲಿನ Gordion ಎಂಬ ಚಿನ್ನದ ನಾಣ್ಯದ ಹೆಸರಿನಿಂದ ಬಂದದ್ದೆಂದು ಹೇಳುತ್ತಾರೆ. ರೋಮಿಯರಿಗೂ ಕನ್ನಡಿಗರಿಗೂ ವ್ಯಾಪಾರ ಸಂಬಂಧವಿದ್ದ ಕಾಲದಲ್ಲಿ ಇದು ಬಂದಿರಬೇಕು; ದಿನಾರ, ದ್ರಮ್ಮಗಳು ಗ್ರೀಕ್ ಭಾಷೆಯಿಂದ ಸಂಸ್ಕೃತದ ಮೂಲಕ ಕನ್ನಡಕ್ಕೆ ಬಂದಿರುವ ಹಾಗೆ. ಈ ಪದ್ಯದ ಕೊನೆಯಲ್ಲಿ ಸೋತವನಾರು ಎಂಬುದನ್ನು ತಿಳಿಯುವುದೇ ಕಷ್ಟ.

**ವಚನ:** ಕಾಳಿಂಗಾಂಗ ಸಂಭವಂಗಳಪ್ಪ–ಕಳಿಂಗ, ಅಂಗದೇಶಗಳಲ್ಲಿ ಹುಟ್ಟಿದ; ಆಜಾನೇಯ–ಉತ್ತಮ ಜಾತಿಯ; ಸೆಱಗೆಯ್ದುಂ–ಸೆರೆಹಿಡಿದೂ; ವ್ರಣವೈದ್ಯನಂತೆ–ಹುಣ್ಣು ಚಿಕಿತ್ಸೆಮಾಡುವ ವೈದ್ಯನಂತೆ, ಕೊಡಸಾರಿಯುಂ–ಕೊಡದ ಸಾರಿಯುಂ, ಎಂದರೆ ಕೊಡದ ಪಗಡೆಕಾಯನ್ನು, ಕೊಡಸಾರಿ (ನಾರಿ) ಎಂಬ ಮೂಲಿಕೆಯನ್ನು; ಕಱಿವು ಱುವುಮನಱಿದು–ಹೋದದ್ದು ಉಳಿದದ್ದು ಇವನ್ನು ತಿಳಿದೂ, ರಸವಾದಿಯಂತೆ–ಪಾದರಸವನ್ನು ಚಿನ್ನವನ್ನಾಗಿ ಮಾಡುವ ವಿದ್ಯೆಯನ್ನು ಬಲ್ಲವನಂತೆ, ಕಟ್ಟಿಯುಂ–ಪಾದರಸವನ್ನು ಉಂಡೆಮಾಡಿಯೂ; ಅಣುಗಾಳಂತೆ–ಪ್ರೀತಿಯ ಮನುಷ್ಯನಂತೆ, ದಾಯಂ ಬಡೆದುಂ–ಗರಗಳನ್ನು ಹೊಂದಿಯೂ, ದಾಯಭಾಗವನ್ನು ಹೊಂದಿಯೂ; ಮೇಳದಂಕದಂತೆ-ಸ್ನೇಹಯುದ್ಧದಂತೆ; ಸುಱಿಯಱಿದುಂ-ಸುಳಿವನ್ನು ತಿಳಿದುಕೊಂಡೂ; ಡೊಂಬರ ಕೋಡಗದಂತೆ–ದೊಂಬರ ಕಪಿಯಂತೆ; ಸೆಱೆ–ಪಗಡೆಯಾಟದಲ್ಲಿ ಕಾಯಿಗಳನ್ನು ಹಿಡಿಯುವುದು; "ಸೆಱೆಯುಮೇಱುಂ ನೆತ್ತಮಾಡುವವೊಳ್" ಎಂದು ಕವಿರಾಜ ರಾಜನ ಪ್ರಯೋಗ (ಕ್ರಿ. ಶ. ೯೩೦).

**೭೩:** ಭಯಮಱಿಯದ–ಅಂಜಿಕೆಯನ್ನು ತಿಳಿಯದ, ಕಲಿಯುಂ–ಶೂರನೂ, ಚಾಗಿಯುಂ-ದಾನಿಯೂ, ಎನಿಸದೆ-ಎನ್ನಿಸಿಕೊಳ್ಳದೆ, ನಾಡೆ-ವಿಶೇಷವಾಗಿ, ಲೋಭಿಯುಂ ಜಿಪುಣನೂ, ಪಂದೆಯು-ಹೇಡಿಯೂ, ಆಗಿಯೆ-ಆಗಿಯೇ, ಬಾಳ್ವಂಗಲ್ಲದೆ-ಬಾಳುವವನಿಗಲ್ಲದೆ, ಸೂಳೆಯಕಣ್–ವೇಶ್ಯೆಯಕಣ್ಣೂ, ದಾಸಗೆಯ ಕಣ್ಣುಂ–ದಾಳಗಳ ಕಣ್ಣುಗಳೂ (ಗುರುತು), ಏನುಱುಗುಗುಮೇ – ಏನು ಬಾಗುತ್ತವೆಯೇ? ಇಲ್ಲ. ದಾಳಗಳ ಕಣ್ಣುಗಳಿಗೆ 'ತಿಲಕಾಕಾರ ಬಿಂದುಗಳು' ಎಂದು ಕರೆದಿದೆ.

**ವಚನ:** ಕಯ್ಸೆಸರಂ ಬೆರಸು–ಕಹಿಯಾದ ಧ್ವನಿಯೊಡನೆ ಕೂಡಿ; ಒನಲಿಸೆಯುಂ – ಮೂದಲಿಸಿ ಕೆರಳಿಸಿಯೂ; ಕನಲಿಸೆಯುಂ – ಕೋಪವುಂಟಾಗುವಹಾಗೆ ಮಾಡಲೂ; ಕಜ್ಜಮನೆ–ಕಾರ್ಯವನ್ನೇ.

**೭೪.** ಸಾಲದೆ ಜೂದು–ಜೂಜು ಸಾಕಾಗಲಿಲ್ಲವೇ? ನಿಮ್ಮೊಳಗಿದೇಂಗಳ–ನಿಮ್ಮಲ್ಲಿಯೇ ನಿಮಗೆ ಇದೇನಿದು? ಮಾಣಿಸಿಂ–ನಿಲ್ಲಿಸಿರಿ; ಎಂಬೊಡೆ–ಎಂದು ಹೇಳಿದರೆ, ಅನ್ಯಭೂಪಾಲ ಕಿರೀಟ ತಾಟಿತ ಪದಂ–ಶತ್ರುರಾಜರ ಕಿರೀಟಗಳು ತಗುಲಿದ ಪಾದವುಳ್ಳವನು, ಎಂದರೆ ಅನ್ಯರಾಜರನ್ನು ಕಾಲಿಗೆ ಎರಗಿಸಿದವನು, ಯಮನಂದನಂ–ಧರ್ಮರಾಜನು, ಅಜ್ಜ–ತಾತನೇ, ಸೋಲದೊಳ್–ಜೂಜಿನಲ್ಲಿ ಸೋತಿದ್ದರಲ್ಲಿ, ಆದಂ–

ವಿಶೇಷವಾಗಿ, ಏವಯಿಸಿದೆಂ–ನೊಂದಿದ್ದೇನೆ, ನುಡಿಗೆ–ಮಾತಿಗೆ, ಇನ್ನೆಡೆಯಿಲ್ಲ–ಇನ್ನು ಅವಕಾಶವಿಲ್ಲ; ಪೋಗಿಂ–ಹೋಗಿರಿ, ಆತ್ಮಾಲಯಕೆ–ನಿಮ್ಮ ಮನೆಗೆ, ಎಂದೊಡೆ–ಎಂದರೆ. ಏನುಮೆನಸಲಣ್ಮದೆ–ಏನು ಹೇಳಲೂ ಪ್ರಯತ್ನಿಸದೆ, ಬಾರಿಸಲಣ್ಮದೆ–ತಡೆಯಲು ಪ್ರಯತ್ನಿಸದೆ, ಇರ್ವರುಂ–ಇಬ್ಬರೂ, ಎಂದರೆ ಭೀಷ್ಮ ವಿದುರರು.

೭೫. ನಿನಗೆ, ಮಗಂ–ಮಗನು, ಪುರಾಕೃತದ ಕರ್ಮಮೆ–ಹಿಂದೆಮಾಡಿದ ಕರ್ಮವೇ, ಪುಟ್ಟುವವೋಲ್ ಪುಟ್ಟಿ–ಹುಟ್ಟುವಹಾಗೆ ಹುಟ್ಟಿ, ನಿಮ್ಮನಿಬರುಮಂ–ನಿಮ್ಮ ಇಷ್ಟು ಮಂದಿಯನ್ನೂ, ರಸಾತಳದೊಳ್–ಪಾತಾಳದಲ್ಲಿ, ಅಳ್ದಿದಪಂ–ಅದ್ದುತ್ತಾನೆ, ಪಾಂಡುನಂದನರೊಳ್–ಪಾಂಡವರಲ್ಲಿ, ಪಗೆ–ಹಗೆತನ, ಪೊಲ್ಲ–ಕೆಟ್ಟದ್ದು; ಅಹೀಂದ್ರಕೇತನನ–ಸರ್ಪಧ್ವಜನ ಎಂದರೆ ದುರ್ಯೋಧನನ, ಜೂದಿನ ಗೆಲ್ಲಂ–ಜೂಜಿನ ಜಯವು, ಅದೆಂತುಟೆನ್ನ–ಅದುಹೇಗೆ ಎನ್ನುವೆಯೋ, ನಂಜಿನ ಸವಿಯಂತುಟು–ವಿಷದ ರುಚಿಯಹಾಗೆ, ಎಂದೊಡೆ-ಎಂದರೆ, ಇನಿಸು–ಇಷ್ಟು; ಅಂತದೊಳ್-ಕೊನೆಯಲ್ಲಿ, ಅಂತಕನಲ್ಲಿಗೆ–ಮೃತ್ಯುವಿನ ಬಳಿಗೆ, ಅಟ್ಟುಗುಂ–ಅಟ್ಟುತ್ತದೆ.

೭೬. ಪುರುಡಿಸಿಕೊಂಡೀಗಳ್ – ಅಸೂಯೆಯಿಂದ ಕೂಡಿ ಈಗ, ನೀನರಸಿನ ಗರ್ವದೊಳ್–ನೀನು ರಾಜನೆಂಬ ಗರ್ವದಲ್ಲಿಯೇ, ಬೀಗಿ–ಉಬ್ಬಿ, ಬೆಸೆಯದೆ–ಅಹಂಕಾರ ಪಡದೆ, ಮಗನಂ ಕರೆದು–ಮಗನಾದ ದುರ್ಯೋಧನನನ್ನು ಕರೆದು, ಮುಂಗೆಲ್ದ ವಸ್ತುವಾಹನ ಚಯಮುಂ–ಮೊದಲು ಗೆದ್ದಿರುವ ವಸ್ತುವಾಹನಗಳ ಸಮೂಹವನ್ನು, ಯುಧಿಷ್ಠಿರಂಗೆ–ಧರ್ಮರಾಜನಿಗೆ, ಒಪ್ಪಿಸವೇಟ್–ಒಪ್ಪಿಸುವಂತೆ ಹೇಳು.

ಪಂಪನ ಈ ದ್ಯೂತಪ್ರಸಂಗವನ್ನು ಕರ್ಣಪಾರ್ಯನು ತನ್ನ 'ನೇಮಿನಾಥ ಪುರಾಣ'ದಲ್ಲಿಯೂ (x, ೧೪–೩೫) ಮಂಗರಸನು ತನ್ನ 'ನೇಮಿ ಜಿನೇಶ ಸಂಗತಿ'ಯಲ್ಲೂ (xxiv, ೧೪–೩೯) ಅನುಕರಿಸಿದ್ದಾರೆ.

೭೭. ಕದನ ಪ್ರಾರಂಭ ಶೌಂಡಂ–ಯುದ್ಧೋದ್ಯೋಗದಲ್ಲಿ ಅತ್ಯಂತ ಆಸಕ್ತಿಯನ್ನುಳ್ಳ; ರಿಪುನೃಪ ಬಲದಾವಾನಲಂ–ಶತ್ರುಸೈನ್ಯಕ್ಕೆ ಕಾಳ್ಕಿಚ್ಚಾಗಿರುವ; ವೈರಿ.... ಗ್ರಾಸಿ: ವೈರಿಭೂಭೃತ್–ಶತ್ರುರಾಜರ, ಮದವತ್–ಮದದಿಂದ ಕೂಡಿದ, ಮಾತಂಗ–ಆನೆಗಳ, ಕುಂಭಸ್ಥಳ–ತಲೆಯ ಪ್ರದೇಶವನ್ನು, ದಳನ–ಸೀಳುವ, ಖರ–ತೀಕ್ಷ್ಣವಾದ, ಉಗ್ರ – ಭಯಂಕರವಾದ, ಅಸಿ, ಕತ್ತಿಯನ್ನುಳ್ಳ; ಪಂಚಾಸ್ಯಧೈರ್ಯಂ – ಸಿಂಹದಂತೆ ಧೈರ್ಯಶಾಲಿಯಾದ; ವಿದಿತ ಪ್ರತ್ಯಕ್ಷಂ – ಇಂದ್ರಿಯಗಳಿಗೆ ಗೋಚರವಾದುದನ್ನೆಲ್ಲ ತಿಳಿದವನಾದ; ಆಶಾ....ದಾನಂ: ಆಶಾಕರಿ–ದಿಕ್ಕಿನಾನೆಗಳ, ನಿಕಟತಟ–ಸಮೀಪ ಪ್ರದೇಶದಲ್ಲಿ, ಶ್ರಾಂತ – ವಿಶ್ರಮಿಸಿಕೊಳ್ಳುತ್ತಿರುವ, ದಾನಂ – ದಾನಗುಣವನ್ನುಳ್ಳ; ವಿಕ್ರಾಂತ ತುಂಗಂ–ಪರಾಕ್ರಮದಲ್ಲಿ ಉನ್ನತನಾದ; ಹರಿಗನಿರೆ–ಅರ್ಜುನನಿರಲು, ಭರಂಗೆಯ್ದು–ಜೋರುಮಾಡಿ, ಇದಿರೊಳ್–ಎದುರಿನಲ್ಲಿ, ಬಿಗುರ್ತು–ಹೆದರಿಸಿ, ಆಂಪ–ಮುಂಪಾಗುವ, ಗಂಡಂ–ಶೂರನು, ಆವಂ–ಯಾರು?

**ಸಪ್ತಮಾಶ್ವಾಸಂ ಸಂಪೂರ್ಣಂ**

# ಸಪ್ತಮಾಶ್ವಾಸಂ

೧. ಶ್ರೀರಮಣೀರಮಣಂಗೆ–ಐಶ್ವರ್ಯವೆಂಬ ವನಿತೆಗೆ ವಲ್ಲಭನಾದ, ಅರಿನಾರೀ ವೈಧವ್ಯ ದೀಕ್ಷಾದಕ್ಷಂಗೆ–ಶತ್ರು ಸ್ತ್ರೀಯರಿಗೆ ವಿಧವೆಯ ತನದ ದೀಕ್ಷೆಯನ್ನು ಕೊಡಲು ಸಮರ್ಥನಾದ, ಹರಿಗಂಗೆ–ಅರ್ಜುನನಿಗೆ, ಆರೆಣೆ–ಯಾರು ಸಮಾನ? ಅಂಧನರೇಂದ್ರ–ಧೃತರಾಷ್ಟ್ರನೇ, ಈಗಡೆ–ಈಗಳೇ, ನಿನ್ನಮಗನಂ–ನಿನ್ನ ಮಗನಾದ ದುರ್ಯೋಧನನನ್ನು, ಬಾರಿಸು-ತಡೆ, ನಿವಾರಿಸು.

೨. ತೋಳ್ವಲಂ – ಅರ್ಜುನನ ಬಾಹುಬಲ, ಶರಣ್ಗೆವಂದರಂ–ಶರಣಾಗತ ರಾದವರನ್ನು, ಕಾದುದು–ರಕ್ಷಿಸಿತು ; ಬಲವದರಿನೃಪತಿಗೆ–ಬಲಿಷ್ಠರಾದ ಶತ್ರುರಾಜರಿಗೆ, ಕಾಲಾಗ್ನಿ – ಪ್ರಳಯಕಾಲದ ಅಗ್ನಿ, ಆದುದು–ಆಯಿತು ; ನೆಲಕ್ಕೆ–ಭೂಮಿಗೆ, ಕಾಪಾದುದು–ರಕ್ಷಣೆಯಾಯಿತು ; (ತೋಳ್ವಲಂ) ಈ ದೊರೆತೆನೆ-ಬಾಹುಬಲ ಇಂಥಾದ್ದು ಎನ್ನಲು, ಮರುಳೆ–ದಡ್ಡನೇ, ಹರಿಗನೊಳ್ ಅರ್ಜುನನಲ್ಲಿ, ಪಗೆಗೊಳ್ವಾ–ಹಗೆತನವನ್ನು ಹೊಂದುತ್ತೀಯೋ?

**ವಚನ :** ಎನಿತಾನುಂತೆಱದೊಳೆ-ಎಷ್ಟೋ ವಿಧವಾಗಿ ; ಸಾಱಿಯುಂಕೇಳ್ದಿಯುಂ–ಸಾರಿಹೇಳಿಯೂ ಆಗ್ರಹದಿಂದ ಹೇಳಿಯೂ ; ಜಡಿದು–ಗದರಿಸಿ, ಬಯ್ದು ; ಏಗೆಯ್ದುಂ–ಏನುಮಾಡಿಯೂ ; ತಲೆಗಪಿಯನಲ್ಲದೆಯುಂ–ತಲೆಗೆ ಮುಸುಕಿಲ್ಲದವನಾದರೂ, ಏವದೊಳ್–ಅಸಮಾಧಾನದಲ್ಲಿ, ತಲೆಗವಿದು-ತಲೆಯನ್ನು ಮುಚ್ಚಿಕೊಂಡು, ಸಿಗ್ಗಂ ಕೊಂಡಾಡಿ–ನಾಚಿಕೆಯನ್ನು ವ್ಯಕ್ತಪಡಿಸಿ, ನೆತ್ತಮನಾಡಿ–ಪಗಡೆಯನ್ನಾಡಿ

೩. ವ್ಯಾಳ ಗಜಂಗಳಂ-ತೊಂಡಾನೆಗಳನ್ನು, ಅಗ್ಗದ–ಶ್ರೇಷ್ಠರಾದ, ಸೂಳೆಯರ–ದಾಸಿಯರ, ಒಕ್ಕಲಂ–ಕುಟುಂಬಗಳನ್ನು, ಅನರ್ಘ್ಯ–ಅತ್ಯಂತ ಬೆಲೆಬಾಳುವ, ವಸ್ತುಗಳಂ–ಪದಾರ್ಥಗಳನ್ನು, ಇಳಾಪಾಳಂ–ಧರ್ಮರಾಜನು, ಸೋಲ್ತೊಡೆ–ಸೋತರೆ, ಜೂದಿನ ಕೇಳಿಯಂ–ಜೂಜಿನ ಕ್ರೀಡೆಯನ್ನು, ಆ ಕೇಳಿಯನಿತಱೊಳ್–ಆ ಆಟ ದಷ್ಟರಲ್ಲಿ, ಮಾಣಿಸಿದರ್–ನಿಲ್ಲಿಸುವಹಾಗೆ ಮಾಡಿದರು.

**ವಚನ :** ಮಾಣದೆ–ಬಿಡದೆ ; ರಪಣಮುಂ ತೋಱಯುಂ – ಆಸ್ತಿಯನ್ನು ತೋರಿಸಿಯೂ; ಒತ್ತೆಯನುಗ್ಗಡಿಸಿಯುಂ–ಒಡ್ಡವನ್ನು (ಪಣವನ್ನು) ಕೂಗಿ ಹೇಳಿಯೂ; ಗೆಲ್ದಿಂಬಳಿಯಿಂ–ಗೆದ್ದಮೇಲೆ ; ಮುದುಗಣ್ಗಳ್–ಮುದುಕರಾದ ಭೀಷ್ಮನೇ ಮುಂತಾದವರು ; ಮಗುಱ್ದೆ–ಪುನಃ ; ಸಂಕೆಯೊಳಂ–ಅಂಜಿಕೆಯಲ್ಲೂ ; ನನ್ನಿಯೊಳಂ–ಸತ್ಯದಲ್ಲೂ ; ನೆಲನನೊತ್ತೆವಿಡಿಯೆಂ–ರಾಜ್ಯವನ್ನು ಒತ್ತೆಯಾಗಿ ಸ್ವೀಕರಿಸೆನು ; ಅಱದರಪ್ಪೊಡೆ–ತಿಳಿದವರಾದರೆ ; ಒಂದೆ ಪಲಗೆಯೊಳ್-ಒಂದೇ ಹಲಗೆಯಲ್ಲಿ ; ಗೆಲ್ಲ ಸೋಲ ಮಪ್ಪಂತು–ಗೆಲವೂ ಸೋಲೂ ಆಗುವ ಹಾಗೆ ; ರಪಣ ; 'ಶಬ್ದವಿಹಾರ'ದಲ್ಲಿ ನನ್ನ ಲೇಖನವನ್ನು ನೋಡಿ.

೪. ಆ ಪಲಗೆಯುಮಂ–ಆ ಹಲಗೆಯನ್ನೂ, ಸೋಲ್ತು–ಸೋತು, ಮಹೀಪ

ಧರ್ಮರಾಜನು, ಚಲದಿಂ-ಹಠದಿಂದ, ಬೞಿಕ್ಕೆ-ಆಮೇಲೆ, ಆ ದ್ರೌಪದಿಯುಮಂ-ಆ ದ್ರೌಪದಿಯನ್ನೂ, ಸೋಲ್ತುಂ ಗಡಂ-ಸೋತನು, ದಿಟವಾಗಿಯೂ ; ಪಾಪದ ಫಳಂ-ಪಾಪದಫಲ, ಎಯ್ದೆವಂದ-ಹತ್ತಿರಕ್ಕೆ ಬಂದ, ದಿವಸದೊಳ್-ದಿವಸದಲ್ಲಿ, ಆರ್ಗಂ-ಯಾರಿಗಾದರೂ, ಏನೇನಾಗದೊ-ಏನೇನು ತಾನೆ ಆಗುವುದಿಲ್ಲವೋ ?

**ವಚನ :** ಅಜಾತಶತ್ರುವಿನ-ಧರ್ಮರಾಜನ ; ಕಸವರಮೆಲ್ಲಂ-ಚಿನ್ನವೆಲ್ಲ, ಐಶ್ವರ್ಯವೆಲ್ಲ ; ಲಯಮಿಲ್ಲದುದಂ-ಕೇಡಿಲ್ಲದ್ದನ್ನು ; ಮೇಗಿಲ್ಲದ-ಉತ್ತಮವಿಲ್ಲದ, ಅತ್ಯತಿಶಯವಾದ ; ಗೊಡ್ಡಾಟವಾಡಲ್-ತುಂಟಾಟವಾಡಲು ; ಲೆಂಕಂ-ಸೇವಕ, ಪೇೞ್ದೊಡಂ-ನಿಯಮಿಸಿದರೆ : ರಜಸ್ವಲೆಯಾಗಿರ್ದೆಂ-ಮುಟ್ಟಾಗಿದ್ದೇನೆ ; ಒತ್ತಂಬದಿಂ-ಬಲಾತ್ಕಾರದಿಂದ ; ಕಣ್ಗೆಡೆಜಡಿದು-ಕಣ್ಣುಕೆಡುವಂತೆ ಗದರಿಸಿ, ಅಧೀರಳಾಗುವಂತೆ ಮಾಡಿ ;

೫. ಅಮರಾಪಗಾಸುತಕೃಪದ್ರೋಣಾದಿಗಳ್-ಭೀಷ್ಮ ಕೃಪ ದ್ರೋಣರೇ ಮೊದಲಾದವರು, ಮನದೊಳ್ನೊಂದು-ಮನಸ್ಸಿನಲ್ಲಿ ದುಃಖಿತರಾಗಿ, ಬೇಡವೇಡ-ಬೇಡಬೇಡ ; ಎನೆಯುಂ-ಎಂದರೂ, ಮಾಣದೆ-ಬಿಡದೆ, ತೊೞ್ತಿ-ತೊತ್ತೇ, ತೊೞ್ತುವೆಸಕೆಯ್-ತೊತ್ತಿನಕೆಲಸವನ್ನು ಮಾಡು, ನೀಂ-ನೀನು, ಪೋಪೋಗು-ಹೋಗು ಹೋಗು, ಎಂದು, ಎನಿತಾನುಂ ತೆಱದಿಂದೆ-ಎಷ್ಟೋ ವಿಧವಾಗಿ, ಬಯ್ದು-ಬೈದು ; ಉಟ್ಟುದುವರಂ-ಉಟ್ಟಸೀರೆಯವರೆಗೆ, ಕೆಯ್ದಂದು-ಕೈಯನ್ನು ಹಾಕಿ, ದುಶ್ಶಾಸನಂ-ದುಶ್ಶಾಸನನು; ತನಗಂ-ತನಗೂ, ಮೆಲ್ಲನೆ-ಮೆಲ್ಲಗೆ, ಮೃತ್ಯುಸಾರೆ-ಸಾವು ಸಮೀಪಿಸಲು, ಕೃಷ್ಣೆಯಾ-ದ್ರೌಪದಿಯ, ಧಮ್ಮಿಲ್ಲಮಂ-ತುರುಬನ್ನು, ತೆಗೆದಂ-ಹಿಡಿದೆಳೆದನು.

**ವಚನ :** ಕೃಷ್ಣಕಬರೀಭಾರಮುಂ – ಕಪ್ಪಾದ ಕೂದಲಿನ ರಾಶಿಯನ್ನು ; ಮೇಗಿಲ್ಲದೆ-ಕೀೞ್ತನದಿಂದ ; ಕೃಷ್ಣೋರಗನಂ-ಕೃಷ್ಣಸರ್ಪವನ್ನು ; ಬೆಳ್ಳಾಳಂತೆ-ಅಂಜುಬುರುಕನಂತೆ ; ಉಮ್ಮನೆ ಬೆಮರುತ್ತುಂ-ಬಿಸಿಬಿಸಿಯಾಗಿ ಬೆವರುತ್ತ ; ಕಣ್ಕೆತ್ತಿ-ಕಣ್ಣು ಸಂಜ್ಞೆಮಾಡಿ, ಕಣ್ಣನ್ನು ಮಿಟುಕಿಸಿ ; ಕಿಱುನಗೆ ನಗುವ-ಸ್ವಲ್ಪಸ್ವಲ್ಪ ನಗುವ; ಕೂರದರ-ಪ್ರೀತಿಸದವರ, ಹಗೆಗಳ ; ಬಿನ್ನನಾದ-ಶೂನ್ಯವಾದ ; ನೆತ್ತರ್-ರಕ್ತ.

೬. ಕೋಪದ ಪೆರ್ಚಿನೊಳ್ ನಡುಗುವ-ಕೋಪದ ಹೆಚ್ಚಳದಲ್ಲಿ ನಡುಗುತ್ತಿರುವ, ಊರು ಯುಗಂ-ಎರಡು ತೊಡೆಗಳು ; ಕಡುಪಿಂದೆ-ತೀವ್ರತೆಯಿಂದ, ಅರಲ್ವ-ಅರಳುವ, ನಾಸಾಪುಟಂ-ಮೂಗಿನ ಹೊಳ್ಳೆಗಳು ; ಎಕ್ಕೆಯಿಂ-ಒಟ್ಟಿಗೆ, ಪೊಡರ್ವ-ಸ್ಫುರಿಸುವ, ಚಲಿಸುವ, ಪುರ್ವು-ಹುಬ್ಬುಗಳು ; ಪೊದಳ್ದ-ಹರಡಿಕೊಂಡಿರುವ, ಲಯಾಂತಕ ತ್ರಿಶೂಲೋಪಮ-ಪ್ರಳಯಕಾಲದ ಯಮನ ತ್ರಿಶೂಲಕ್ಕೆ ಸಮಾನವಾದ, ಭೀಷಣ-ಭಯಂಕರವಾದ, ಭ್ರುಕುಟಿ-ಹುಬ್ಬಿನ ಗಂಟು ; ಮುನ್ನಮೆ-ಮೊದಲೇ; ರೌದ್ರಗದಾಯುಧಂಬರಂ-ಭಯಂಕರ ಗದಾಯುಧದವರೆಗೆ, ಪೋಪ-ಹೋಗುವ; ಭೀಮಸೇನನಾ-ಭೀಮನ ; ಭುಜಾರ್ಗಳಂ-ಅಗುಳಿಯಂತಿರುವ ಭುಜಗಳು ; ರಿಪುಗಳ ಗ್ರಹಮಾದುದು-ಶತ್ರುವಿನ ಕೊರಳನ್ನು ಹಿಡಿಯುವುದು ಆಯಿತು.

೭. ನೆಲನಂ ನುಂಗುವ–ನೆಲವನ್ನು ನುಂಗುವ, ಮೇರುವಂ ಪಿಡಿದು ಕೀಳ್ವ–ಮೇರು ಪರ್ವತವನ್ನು ಹಿಡಿದು ಕೀಳುವ, ಆಶಾಗಜೇಂದ್ರಂಗಳಂ–ದಿಕ್ಕಿನಾನೆಗಳನ್ನು, ಚಲದಿಂ ಕಟ್ಟುವ–ಛಲದಿಂದ ಕಟ್ಟಿಹಾಕುವ, ಸಪ್ತ ಸಪ್ತಿಯುಂ–ಸೂರ್ಯನನ್ನು, ಇಳಾ ಭಾಗಕ್ಕೆ ತರ್ಪ–ಭೂಭಾಗಕ್ಕೆ ತರುವ, ಒಂದು ತೋಳ್ವಲಮುಂ–ಒಂದು ತೋಳ್ಬಲವೂ, ಗರ್ವಮುಂ–ಅಹಂಕಾರವೂ, ಉಣ್ಮೆ ಪೊಣ್ಮೆ–ಚಿಮ್ಮಿ ಹೊಮ್ಮಲು, ಮನದೊಳ್–ಮನಸಲ್ಲಿ, ಕೋಪಾಗ್ನಿ–ಕೋಪವೆಂಬ ಉರಿ, ಕೆಯ್ಗಣ್ಮೆ–ಮಿತಿಮೀರಿ, ಕಣ್ಮಲರೊಳ್ ಬಂದಿರೆ–ಹೂವಿನಂತಿರುವ ಕಣ್ಣುಗಳಲ್ಲಿ ತಲೆದೋರಿರಲು, ಕಲುಷದಿಂ–ಕಡಿನಿಂದ, ಗಾಂಡೀವಿ–ಅರ್ಜುನ, ಗಾಂಡೀವಮಂ–ಗಾಂಡೀವವೆಂಬ ಬಿಲ್ಲನ್ನು, ನೋಡಿದಂ–ನೋಡಿದನು.

೮. ಪ್ರಕುಪಿತ ಮೃಗಪತಿಶಿಶುಸನ್ನಿಕಾಶರ್-ವಿಶೇಷವಾಗಿ ಕೆರಳಿದ ಸಿಂಹದ ಮರಿಗಳಿಗೆ ಸಮಾನರಾದ, ಅತಿವಿಕಟ ಭೀಷಣಭ್ರೂಭಂಗರ್–ಅತಿ ವಿಕಾರವೂ ಭಯಂಕರವೂ ಆದ ಹುಬ್ಬುಗಂಟನ್ನುಳ್ಳ, ನಕುಲ ಸಹದೇವರ್–ನಕುಲನೂ ಸಹದೇವನೂ, ಇರ್ವರುಂ–ಇಬ್ಬರೂ, ಅಕಾಲ ಕಾಲಾಗ್ನಿರೂಪಮಂ-ಕಾಲವಲ್ಲದ ಕಾಲದ, ಪ್ರಳಯಕಾಲದ ಅಗ್ನಿಯ ಆಕಾರವನ್ನು, ಕೈಕೊಂಡರ್–ಸ್ವೀಕರಿಸಿದರು.

ವಚನ: ಜಳನಿಧಿಗಳಂತೆ-ಸಮುದ್ರಗಳ ಹಾಗೆ ; ನನ್ನಿಯ ಕೇಡಂ–ಸತ್ಯದ ವಿನಾಶವನ್ನು ; ವಿಕ್ಷೇಪದಿಂ–ಅಲುಗಾಟದಿಂದ ;

೯. ಅನಿತೊಂದು–ಅಷ್ಟೊಂದು, ಉರ್ಕಿನೊಳ್–ಉತ್ಕಟವಲ್ಲಿ, ಉರ್ಕ್ಕಿ–ಉಕ್ಕಿ, ಕೌರವಖಳರ್–ಕೌರವರೆಂಬ ದುಷ್ಟರು, ಪಾಂಚಾಳ ರಾಜಾತ್ಮಜಾನನ ಪದ್ಮಗ್ಲಪನೈಕ ಕಾರಣಪರರ್–ದ್ರೌಪದಿಯ ಮುಖಕಮಲ ಬಾಡುವುದಕ್ಕೆ ಏಕೈಕ ಕಾರಣರಾದವರು, ತಾಮಾಗೆಯುಂ–ತಾವಾಗಿಯೂ, ಮತ್ತಂ–ಪುನಃ, ಅಣ್ಣನ ಕಣ್ಸನ್ನೆಗೆ–ಧರ್ಮರಾಜನ ಕಣ್ಣಸಂಕೇತವನ್ನು, ಮೀಜಲಣ್ಮದೆ–ಮೀರಲು ಪ್ರಯತ್ನಿಸದೆ, ಪೃಥಾಪುತ್ರರ್–ಪಾಂಡವರು, ಸಮಂತು–ಸಮಾಧಾನವಾಗಿ, ಇರ್ದರ್–ಇದ್ದರು ; ಇನಿತೊಂದಾದೊಡಮೇಂ–ಇಷ್ಟೊಂದು ಆದರೂ ಕೂಡ ಏನು, ಮಹಾಪುರುಷರ್–ಮಹಾಪುರುಷರು, ಆಜ್ಞಾಲಂಘನಂಗೆಯ್ವರೇ–ಆಜ್ಞೆಯನ್ನು ಉಲ್ಲಂಘಿಸುತ್ತಾರೆಯೇ?

ವಚನ : ಕೇಶಪಾಶಮಂ–ಕೂದಲು ಮುಡಿಯನ್ನು ; ಸಿಗ್ಗು–ನಾಚಿಕೆ : ಅಗ್ಗಳಂ ಪೆರ್ಚೆ–ಅತಿಶಯವಾಗಿ ಹೆಚ್ಚಲು.

೧೦. ಮುಡಿಯಂ ಪಿಡಿದೆಳೆದವನಂ–ತುರುಬು ಹಿಡಿದು ಎಳೆದವನನ್ನು, ಮಡಿಯಿಸಿ–ಸಾಯಿಸಿ, ಮತ್ತೆ, ಅವನ, ಕರುಳ–ಕರುಳಿನ, ಪಿಣಿಲಿಂದೆ–ಜಡೆಯಿಂದ, ಎನ್ನಂ–ನನ್ನನ್ನು, ಮುಡಿಯಿಸುವಿನೆಗಂ–ಮುಡಿಸುವವರೆಗೂ, ಮುಡಿಯಂ–ತುರುಬನ್ನು ಮುಡಿಯೆಂ ಗಡ–ಕಟ್ಟುವುದಿಲ್ಲ, ದಿಟ ; ಕೇಳಿಂ–ಕೇಳಿರಿ, ಈಗಳ್–ಈಗ, ಆಂ–ನಾನು, ನುಡಿನುಡಿದೆಂ–ಪ್ರತಿಜ್ಞೆ ಮಾಡಿದೆನು.

೧೧. ಭೀಮಸೇನನ ಪ್ರತಿಜ್ಞೆ : ಆಜದ ಕೋಪ ಪಾವಕನಿಂ–ಆರಿಹೋಗದ

ಕೋಪಾಗ್ನಿಯಿಂದ, ಅಣ್ಣನ ನನ್ನಿಯುಂ-ಅಣ್ಣನಾದ ಧರ್ಮರಾಜನ ಸತ್ಯ(ವಾಕ್ಯ)ವನ್ನು; ಮೀಱುವೆಂ ಮೀಱೆಂ-ಮೀರುತ್ತೇನೆ, ಮೀರುವುದಿಲ್ಲ, ಎನಿಪ್ಪ-ಎನ್ನಿಸುವ, ಪದದೊಳ್-ಸಮಯದಲ್ಲಿಯೆ, ನೋಡ-ನೋಡೋ, ದ್ರುಪದರಾಜ ಸುತಾವಚನಂಗಳ್-ದ್ರೌಪದಿಯ ಮಾತುಗಳು, ಮರುಳ್ಗೆ-ಭೂತಕ್ಕೆ, ಧೂಪಮಂ-ಧೂಪವನ್ನು, ತೋಱಿದ-ತೋರಿಸಿದ; ಮಾಱ್ಕೆಯಿಂ-ರೀತಿಯಿಂದ, ಅಲ್ಲಿ, ವ್ಯಕ್ತಿದೋಱೆ-ಅಲ್ಲಿ ವ್ಯಕ್ತವಾಗಲು, ಮರುತ್ಸುತಂ-ಭೀಮಸೇನನು, ಆ ಸಭೆಯೊಳ್-ಆ ಸಭೆಯಲ್ಲಿ, ನವ ಮೇಘನಾದದಿಂ-ಹೊಸ ಮೋಡದ ಗುಡುಗಿನ ಶಬ್ದದಿಂದ, ನುಡಿದಂ-ಪ್ರತಿಜ್ಞೆ ಮಾಡಿದನು.

೧೨. ಮುಳಿಸಿಂದಂ-ಕೋಪದಿಂದ, ನುಡಿದೊಂದು-ನುಡಿದ ಒಂದು, ನಿನ್ನ ನುಡಿ-ಶಪಥ, ಸಲ್ಗೆ-ಸಲ್ಲಲಿ, ಆರ್ ಆಗದೆಂಬರ್-ಆಗದು ಎಂದು ಹೇಳುವವರು ಯಾರು? ಮಹಾಪ್ರಳಯೋಲ್ಕೋಪಮ ಮದ್ಗದಾಹತಿಯಿಂ-ಮಹಾ ಪ್ರಲಯಕಾಲದ ಉಲ್ಕೆಗೆ ಸಮಾನವಾದ ನನ್ನ ಗದೆಯ ಏಟಿನಿಂದ, ಅತ್ಯುಗ್ರಾಜಿಯೊಳ್-ಅತಿ ಭಯಂಕರ ಯುದ್ಧದಲ್ಲಿ, ಮುನ್ನ-ಮೊದಲು, ಈ ಖಳ ದುಶ್ಶಾಸನನಂ-ಈ ದುಷ್ಟ ದುಶ್ಶಾಸನನನ್ನು, ಪೊರಳ್ಚಿ-ನೆಲದಮೇಲೆ ಹೊರಳಾಡಿಸಿ, ಬಸಿಱಂ ಪೋೞ್ಡಿಕ್ಕಿ-ಹೊಟ್ಟೆಯನ್ನು ಹೋಳು ಮಾಡಿ, ಬಂಬಲ್ಗರುಳ್ಗಳಿಂ-ತೆಕ್ಕೆಯಾಗಿರುವ ಕರುಳುಗಳಿಂದ, ಪಂಕೇಜ ಪತ್ರೇಕ್ಷಣೇ-ಕಮಲನೇತ್ರೆಯೇ, ಆನಲ್ತೆ-ನಾನಲ್ಲವೆ, ವಿಳಾಸದಿಂ-ಸೊಗಸಿನಿಂದ, ಮುಡಿಯಿಪೆಂ-ಮುಡಿಯಿಸುತ್ತೇನೆ.

೧೩. ಕುಡಿವೆಂ-ಕುಡಿಯುತ್ತೇನೆ, ದುಶ್ಯಾಸನೋರಸ್ಥಲಮಂ-ದುಶ್ಶಾಸನನ ಎದೆಯ ಪ್ರದೇಶವನ್ನು, ಅಗಲೆ-ಅಗಲವಾಗುವ ಹಾಗೆ, ಪೋೞ್ದು-ಸೀಳಿ, ಆರ್ದು-ಗರ್ಜಿಸಿ, ಕೆನ್ನೆತ್ತರಂ-ಕೆಂಪಾದ ರಕ್ತವನ್ನು; ಪೊಕ್ಕು-ನುಗ್ಗಿ, ಉಡಿವೆಂ-ಮುರಿಯುತ್ತೇನೆ, ಪಿಂಗಾಕ್ಷನ-ದುರ್ಯೋಧನನ, ಊರುದ್ವಯಮುಮಂ-ಎರಡು ತೊಡೆಗಳನ್ನು, ಉರು ಗದಾಘಾತದಿಂ-ಶ್ರೇಷ್ಠಗದೆಯ ಹೊಡೆತದಿಂದ; ನುಚ್ಚುನೂಱಾಗೊಡೆವೆಂ-ಪುಡಿಪುಡಿಯಾಗುವಂತೆ ಮುರಿಯುತ್ತೇನೆ, ತದ್ರತ್ನ ರಶ್ಮಿ ಪ್ರಕಟ ಮಕುಟಮಂ-ಆ ರತ್ನ ಕಾಂತಿಗಳಿಂದ ಪ್ರಕಾಶಮಾನವಾದ ಕಿರೀಟವನ್ನು, ಪಂಕೇಜವಕ್ತ್ರೇ-ಕಮಲವದನೆಯೇ, ನಂಬುನಂಬು-ನಂಬಿಕೋ ನಂಬಿಕೋ, ಆಹಿತರಂ ನೋಡಿ-ವೈರಿಗಳನ್ನು ನೋಡಿ, ಕಣ್ಣಿಂ-ಕಣ್ಣುಗಳಿಂದ, ಕಿಡಿಯುಂ ಕೆಂಡಂಗಳುಂ ಸೂಸಿದಪುವು-ಕಿಡಿಯೂ ಕೆಂಡಗಳೂ ಸೂಸುತ್ತಿವೆ.

೧೪. ಮುಳಿಸಂ ಮಾಡಿಯುಂ-ಕೋಪವನ್ನುಂಟುಮಾಡಿಯೂ, ಏವಮಂ ಪಡೆದುಂ-ನಮಗೆ ದುಃಖವನ್ನುಂಟು ಮಾಡಿಯೂ, ಇನ್ನು-ಇನ್ನು ಕೂಡ, ಈ ಪಂದೆಗಳ್-ಈ ಹೇಡಿಗಳು, ಪ್ರಾಣದಿಂದೊಳರ್-ಜೀವಸಹಿತವಾಗಿದ್ದಾರೆ; ಇನ್ನುಂ-ಇನ್ನು ಕೂಡ, ತಲೆ-ತಲೆಗಳು, ಮತ್ತಂ-ಮತ್ತು, ಅಟ್ಟೆಗಳ ಮೇಲಿರ್ದಪ್ಪುವು-ಮುಂಡಗಳ ಮೇಲಿವೆ, ಎಂದಂದೆ ದಲ್-ಎಂದಾಗಲೇ ದಿಟವಾಗಿಯೂ, ಮುಳಿಸಿಲ್ಲ-ಕೋಪವಿಲ್ಲ, ಅಣ್ಣನ ನನ್ನಿಯೆಂಬುದನೆ ಪೇೞ್-ಅಣ್ಣ ಧರ್ಮಜನ ಸತ್ಯವೆಂಬುದನ್ನೇ ಹೇಳು; ಏವೇೞ್ಪಿಂ-ಏನು

ಹೇಳಿಯೂ, ಈ ಕೌರವರ್ಕಳಂ–ಈ ಕೌರವರನ್ನು, ಉಂತೆ–ಸುಮ್ಮನೆ, ಇನ್ನೆಗಂ–ಇದು ವರೆಗೆ. ಉರ್ಚಿ ಮುಕ್ಕದೆ–ಭೇದಿಸಿ ನುಂಗದೆ, ಸಡಿಲ್ದ–ಸಡಿಲನಾದ, ಈ ಭೀಮಸೇಂ–ಈ ಭೀಮಸೇನನು ಏನು. ಮಾಣ್ಬುದೇ–ನಿಲ್ಲುತ್ತಾನೆಯೇ, ಸುಮ್ಮನಾಗುತ್ತಾನೆಯೇ ?

**ವಚನ** : ಆಜಿನುಡಿದು–ಸಮಾಧಾನವಾಗುವಂತೆ ಮಾತಾಡಿ.

೧೫. ಸುರಸಿಂಧು ಪ್ರಿಯಪುತ್ರ–ಭೀಷ್ಮನೇ, ಕೇಳ್–ಕೇಳು, ಕಳಶಜಾ ನೀಂ ಕೇಳ್–ದ್ರೋಣನೇ, ನೀನು ಕೇಳು, ಕೃಪಾ–ಕೃಪನೇ, ಕೇಳ-ಕೇಳು, ಮಂದರದಿಂದೆ-ಮಂದರಪರ್ವತದಿಂದ, ಅಂಬುಧಿಯಂ-ಸಾಗರವನ್ನು, ಕಲಂಕಿದಸುರ ಪ್ರಧ್ವಂಸಿವೋಲ್-ಕದಡಿದ ರಾಕ್ಷಸ ಶತ್ರುವಾದ ವಿಷ್ಣುವಿನ ಹಾಗೆ, ಬಾಹು ಮಂದರದಿಂ–ನನ್ನ ತೋಳುಗಳೆಂಬ ಮಂದರಪರ್ವತದಿಂದ, ವೈರಿಬಲಾಬ್ಧಿ–ವೈರಿಗಳ ಸೈನ್ಯಸಾಗರ, ಘೂರ್ಣಿಸೆ–ಕ್ಷೋಭೆಗೊಂಡು ಶಬ್ದಮಾಡುತ್ತಿರಲು, ಬಿಗುರ್ತ–ಬೆದರಿದ, ಈ ಕೌರವರ್ ಕೂಡೆ ನೂರ್ವರುಮಂ-ಈ ನೂರುಮಂದಿ ಕೌರವರನ್ನು ಒಟ್ಟಿಗೇ. ಕೊಲ್ವೆಂ–ಕೊಲ್ಲುತ್ತೇನೆ, ಇದೆನ್ನ ಪೂಣ್ಕೆ–ಇದು ನನ್ನ ಪ್ರತಿಜ್ಞೆ, ನುಡಿದೆಂ–ಶಪಥ ಮಾಡಿದೆನು. ನಿಮ್ಮ ಈ ಸಭಾಮಧ್ಯದೊಳ್–ನಿಮ್ಮ ಈ ಸಭಾ ಮಧ್ಯದಲ್ಲಿ.

**ವಚನ** : ಪ್ರಳಯಕಾಳಜಳಧರನಿನಾದದಿಂ–ಪ್ರಳಯಕಾಲದ ಮೇಘದ ಧ್ವನಿಯಿಂದ ; ತಾಟಿಸಿದಂತಾಸುಂ–ಸಂಘಟ್ಟಿಸಿದ ಹಾಗೂ ; ಮೊಳಗಿದಂತಾಸುಂ–ಗುಡುಗಿದ ಹಾಗೂ ;

ಇಲ್ಲಿಗೆ ಭೀಮಸೇನನ ಪ್ರತಿಜ್ಞೆ ಮುಗಿಯುತ್ತದೆ. ವ್ಯಾಸಭಾರತದಲ್ಲಿ ಈ ಪ್ರತಿಜ್ಞೆ ಮೂರು ನಾಲ್ಕುಕಡೆ ಹಂಚಿಹೋಗಿರುವುದರಿಂದ ಪಂಪನಲ್ಲಿ ಕಾಣುವ ತೀವ್ರತೆಯಾಗಲಿ, ಸಾಂದ್ರತೆಯಾಗಲಿ, ನಿರ್ಘೋಷವಾಗಲಿ ಅಲ್ಲಿ ಕಾಣುತ್ತಿಲ್ಲ. ಪಂಪನ ಪದ್ಯಗಳನ್ನು ಹಿಂಡಿದರೆ ಈಗಲೂ ಕೆಂಪುಕೋಪ ಸುರಿಯುತ್ತದೆ. ಶಬ್ದಗಳು ಸಿಡಿಲ ಚಕ್ಕೆಗಳಂತೆ ಒಂದಾಗಿ ಸೇರಿ ಕಿಡಿಗುಟ್ಟುತ್ತಿವೆ; ಕೋಪವನ್ನು ಅಳೆದು ಸುರಿದು ಮುಗಿಸಲಾರವೆಂಬಂತಿವೆ. ಇಷ್ಟು ಕೋಪ ಬಂದಾಗಲೂ ಭೀಮನು ವಿವೇಕವನ್ನು ಕಳೆದುಕೊಂಡಿಲ್ಲ. ವ್ಯಾಸಭಾರತದಲ್ಲಿ ಭೀಮನ ಕೋಪ ಧರ್ಮರಾಯನ ಮೇಲೂ ಎರಗುತ್ತದೆ. ಜೂಜಾಡಿ ಸೋತು ಇಷ್ಟಕ್ಕೆಲ್ಲ ಮೂಲಕಾರಣನಾದ ಧರ್ಮರಾಜನನ್ನೇ ಆ ಕೋಪ ಆವರಿಸಿಕೊಳ್ಳುತ್ತದೆ; ಸಹದೇವ ಅಗ್ನಿಯನ್ನು ತೆಗೆದುಕೊಂಡು ಬಾ, ಈ ಧರ್ಮಪುತ್ರನ ತೋಳುಗಳನ್ನು ಸುಡುತ್ತೇನೆ (ಅಸ್ಯಾಃ ಕೃತೇ ಮನ್ಯುರಯಂ ತ್ವಯಿ ರಾಜನ್ ನಿಪಾತ್ಯತೇ। ಬಾಹೂ ತೇ ಸಂಪ್ರಧಕ್ಷ್ಯಾಮಿ ಸಹದೇವಾಗ್ನಿಮಾನಯ॥) ಎಂದು ಭೀಮನ ಆರ್ಭಟ. ಇದು ಆಗದ ಮಾತು ; ಪಂಪನಿಗೆ ಅಪ್ರಕೃತ ; ಬಿಟ್ಟಿರುವುದು ಭೀಮನಲ್ಲಿ ಇನ್ನೂ ವಿವೇಕವಿದೆ ಯೆಂಬುದನ್ನು ತೋರಿಸುವುದಾಗಿದೆ.

೧೬. ಭರತ ಯಯಾತಿ ಕುತ್ಸ ಪುರುಕುತ್ಸ ಪುರೂರವರಿಂದಂ–ಭರತ ಯಯಾತಿ, ಕುತ್ಸ, ಪುರುಕುತ್ಸ, ಪುರೂರವ ಎಂಬ ಈ ರಾಜರ ಪರಂಪರೆಯಿಂದ, ಇನ್ನೆಗಂ ಇದುವರೆಗೂ, ಪರಿವಿಡಿಯಿಂದೆ-ಕ್ರಮದಿಂದ, ಬಂದ, ಶಶಿವಂಶಮದು–ಆ ಚಂದ್ರವಂಶವು,

ಈಗಳ್–ಈಗ, ಇವಂದಿರಿಂದೆ–ಇವರಿಂದ ಎಂದರೆ ಕೌರವ ಪಾಂಡವರಿಂದ, ಬಿತ್ತರಿಸುವ ಪಕ್ಕಂ–ಮುಂದೆ ಹಾಯ್ದು ಹೋಗುವುದಾಗುತ್ತದೆ ಎಂದರೆ ವೃದ್ಧಿಯಾಗುತ್ತದೆ, ಎಂಬ– ಎಂಬುದಾಗಿಯೇ, ಬಗೆದಿರ್ದೊಡೆ–ಭಾವಿಸಿದ್ದರೆ, ಕೀಲೊಳ್–ಕೀಲಿನಲ್ಲಿಯೇ, ಕಿಚ್ಚು ಪುಟ್ಟಿ–ಉರಿಹುಟ್ಟಿ, ಭೋರ್ಗರೆದು–ಭೋರೆಂದು ಶಬ್ದಮಾಡಿ, ಉರಿದಂತೆ-ಉರಿದ ಹಾಗೆ, ನಿನ್ನ ಮಗನಿಂದುರಿದತ್ತು–ನಿನ್ನ ಮಗನಿಂದ ಉರಿದುಹೋಯಿತು ; ಇದನಾರೋ ಬಾರಿಪರ್-ಇದನ್ನು ಯಾರೋ ತಡೆಯುವವರು? ಇಲ್ಲಿರುವ ಉಪಮೆ ರಮ್ಯವಾಗಿದೆ; ವಿಷಮಯು.

ವಚನ: ಆನೆಯ ಕೋಡು ಬಾಗಪೆಂಬಂತೆ–ಆನೆಯ ಕೋಡು ಬಗ್ಗುವುದಿಲ್ಲ ವೆಂಬಂತೆ ; ಉದ್ವೃತ್ತತೆಯುಮಂ-ದುಡುಕುತನವನ್ನೂ ; ಕೆಯ್ಗಣ್ಡಿದ-ಕೈಮೀರಿದ, ಮನೆ ವಾಳ್ತೆಗೆ–ಮನೆಯ ಬದುಕಿಗೆ ; ತಾಮುಂತಾಮುಮರಿವರ್–ತಾವು ತಾವೇ ತಿಳಿದು ಕೊಳ್ಳುತ್ತಾರೆ ; ಉಪ್ಪಿಕ್ಕಿದೊಡೆ ತುಪ್ಪದ ಪೆ[ಟ್ಟಿ]ಡಿತೆಂಬಂತೆ–ಉಪ್ಪು ಬಡಿಸಿದರೆ ತುಪ್ಪಕ್ಕೆ ಮೋಸವೆನ್ನುವ ಹಾಗೆ ; ಕೆಮ್ಮನಿರ್ಪಿರವು–ಸುಮ್ಮನಿರುವ ಸ್ಥಿತಿ ; ಪೋಗಿಂಗೆ– ಹೋಗಿಗೆ, ಹೊರಟುಹೋಗುವುದಕ್ಕೆ, ಪೆಟ್ಟಿಡಿತು ಶಬ್ದ ಚಿಂತನಾರ್ಹ ; ಪೆಟ್ಟಿಡು+ ಇತು=ಪೆಟ್ಟಿಡಿತು ; ಇದು ಭಾವನಾಮ ; ಮಾಡು, ನೋಡು ಎಂಬ ಧಾತುಗಳಿಗೆ ಇತು ಪ್ರತ್ಯಯ ಸೇರಿ ಮಾಡಿತು, ನೋಡಿತು ಎಂದಾದ ಹಾಗೆ ; ಮಾಡಿದುದು, ನೋಡಿ ದುದು ಎಂಬುವುಗಳಿಗೆ ಮಾಡಿತು, ನೋಡಿತು ಎಂಬ ರೂಪಗಳಾದ ಹಾಗೆ ಪೆಟ್ಟಿಟ್ಟುದು ಪೆಟ್ಟಿಡಿತು ಆಗಿದೆಯೆಂದೂ ಹೇಳಬಹುದು.

೧೭. ಏ ದೊರೆಯಂ ಯಮನಂದನಂ – ಧರ್ಮಪುತ್ರನು ಎಂಥವನು ! ಅಸಮಾನನಾದವನು ; ಏ ದೊರೆಯಂ ಭೀಮಸೇನಂ–ಎಂಥವನು ಭೀಮಸೇನ ! ಸಾಟಿಯಿಲ್ಲದವನು; ಕಂಜೋದರನ–ಶ್ರೀಕೃಷ್ಣನ, ಮೈದುನಂ-ಮೈದುನನಾದ ಅರ್ಜುನ, ತಾನ್–ತಾನು, ಏ ದೊರೆಯಂ–ಎಂಥವನು ; ಅಸದೃಶನಾದವನು ; ಅಮಳ್ಗಳ್– ನಕುಲಸಹದೇವರು, ತಾಂ–ತಾವು, ಏ ದೊರೆಯರ್–ಎಂಥವರು, ಅಪ್ರತಿಮರಾದವರು ; ಅವರ್ಗಂ–ಅವರಿಗೂ ಕೂಡ, ಈ ಇರವಾಯ್ತೇ–ಈ ಸ್ಥಿತಿಯುಂಟಾಯಿತೇ.

೧೮. ಜೂದಾಡಿ–ಜೂಜಾಡಿ, ಸೋಲ್ತು–ಸೋತುಹೋಗಿ, ನನ್ನಿಗೆ – ಸತ್ಯ ಕ್ಕಾಗಿ, ಮೇದಿನಿಯುಂ ಕೊಟ್ಟು–ರಾಜ್ಯವನ್ನು ಕೊಟ್ಟು, ಪಾಂಡುನಂದನರೀಗಳ್–ಈಗ ಪಾಂಡುಕುಮಾರರು, ಪೋದೊಡಮೇನ್–ಹೊರಟುಹೋದರೇನು ? ನಮ್ಮ ನೃಪತಿಗೆ– ನಮ್ಮ ರಾಜ ದುರ್ಯೋಧನನಿಗೆ, ಅವು–ಜೂಜು ರಾಜ್ಯಾಪಹಾರಗಳು, ತವುದಲೆಯೊಳ್- ಅಂತ್ಯದಲ್ಲಿ, ಕೊನೆಯಲ್ಲಿ, ತಿಣುಕಾಗದೆ–ಕಷ್ಟವಾಗದೆ, ಪೋದಪುದೇ–ಹೋಗು ತ್ತದೆಯೆ ? ‘ ತವು–ಕ್ಷಯೇ ’ ಎಂಬ ಧಾತುವಿಗೆ–ದಲೆ ಪ್ರತ್ಯಯ ಸೇರಿ ಭಾವನಾಮ ವಾಗಿದೆ, ತವುದಲೆಯೆಂದು ; ಇದಕ್ಕೆ ಸಹಜವಾಗಿ ನಾಶ ಎಂದರ್ಥವಾದರೂ ಅಂತ್ಯ, ಮುಡಿವು ಎಂಬರ್ಥಗಳೂ ಆಗುತ್ತವೆ ; ತವುದಲೆ>ತೌದಲೆ ; ‘ಬಿತ್ತರಿಸಿದ ಬೀದಿ ವೀದಿ ಗಳ ತೌದಲೆಗೊಪ್ಪುವ ಮಂಡಪಂ’ ಎಂದು ಜನ್ನನ ಪ್ರಯೋಗ. ‘ತಿಣುಕು– ಅಪಾನವಾಯೌ’ ಎಂದಿದ್ದರೂ ಇಲ್ಲಿ ಅದರ ಲಕ್ಷಣಾರ್ಥವನ್ನು ಸ್ವೀಕರಿಸಿದೆ.

೧೯. ಜೂದಿನ ಗೆಲ್ಲದೊಳ್–ಜೂಜಿನ ಗೆಲವಿನಲ್ಲಿ, ಆದ–ತನಗುಂಟಾದ, ಈ ಮೇದಿನಿಯುಂ ಕಂಡು–ಈ ಭೂಮಿಯನ್ನು ನೋಡಿ, ಕಜ್ಜಮಂ ಕಾಣದೆ–ಮುಂದಾಗುವ ಕಾರ್ಯವನ್ನು ತಿಳಿಯದೆ, ದುಜ್ಜೋದನಂ–ದುರ್ಯೋಧನನು, ಅದೇನದೇಂ–ಅದೇನು, ಅದೇನು, ಎಂದರೆ ಅತಿಶಯವಾಗಿ, ಮರುಳಾದನೊ-ಭ್ರಾಂತನಾದನೋ? ಬಡಿ ಗಂಡನಿಲ್ಲ-ಎತ್ತಿದ ಬಡಿಗೆಯನ್ನು ಅವನು ಕಾಣಲಿಲ್ಲ, ಪಾಲನೆ ಕಂಡಂ-ಹಾಲನ್ನು ಮಾತ್ರ ಕಂಡನು.

೨೦. ಎನಿತಾನುಮಂದದಿಂ – ಎಷ್ಟೋ ರೀತಿಯಾಗಿ, ಜೂದನಿಕ್ಕೆಯುಂ–ಜೂಜನ್ನು ಹೂಡಿಯೂ, ದ್ರುಪದಸುತೆಯುಂ–ದ್ರೌಪದಿಯನ್ನು, ಎೞೆದುಯ್ಯೆಯುಂ–ಎಳೆದುಕೊಂಡು ಬಂದೂ, ದುಶ್ಶಾಸನನಿಂದಂ–ದುಶ್ಶಾಸನನಿಂದಲೂ, ಶಕುನಿಯೆಂಬ–ಶಕುನಿಯೆಂಬುವ, ಬೆಳ್ಪೊಱಸಿಂದಂ–ಬಿಳಿ ಪಾರವಾಳದಿಂದಲೂ, ಇಂತಿನಿತೊಂದಾದುದು–ಹೀಗೆ ಇಷ್ಟೊಂದು (ಆಗಬಾರದ್ದು) ಆಯಿತು. ಪಾರಿವಾಳ=ಪೊಱಸು ಎಂಬ ಹಕ್ಕಿ ಅಪಶಕುನ ಸೂಚಕ, ಅನಿಷ್ಟಕಾರಕ. 'ಶಬ್ದವಿಹಾರ'ದಲ್ಲಿ ಪೊಱಸು ಎಂಬ ಲೇಖನವನ್ನು ನೋಡಿ.

**ವಚನ:** ಬಾಹಿಗೆಯುಂ–ಬಹಿಃಪ್ರದೇಶವನ್ನು, ಊರ ಹೊರಗನ್ನು; ಮಗುೞಿಮೆಂದೊಡೆ–ಹಿಂದಿರುಗಿ ಎಂದರೆ; ಮನಂಬಂಧಿಸಿದ ಮೋಹದಿಂ–ಮನಸ್ಸನ್ನು ಕಟ್ಟಿದ ಪ್ರೇಮದಿಂದ; ಗೞಗೞನೆ–ಗಳಗಳ ಎಂದು.

೨೧. ಪುಗುವುದರಣ್ಯಂ–(ನೀವು) ಪ್ರವೇಶಮಾಡುವುದು ಕಾಡು; ಇರ್ಪಿರವು ಪನ್ನೆರಡಬ್ದಂ–(ಅಲ್ಲಿ) ಇರುವ ಸ್ಥಿತಿ ಹನ್ನೆರಡು ವರ್ಷಗಳು; ಅದಲ್ಲದೆ–ಅದೂ ಅಲ್ಲದೆ, ಅಲ್ಲಿ, ಕೋಡ್ಮೃಗದ–ಕೊಂಬುಳ್ಳ ಪ್ರಾಣಿಗಳ, ವನೇಚರಾಧಿಪರ–ಬೇಡರ ಅರಸುಗಳ, ದಾಯಿದರ-ದಾಯಾದಿಗಳ, ಅತ್ತಣಿಂ-ಪೆಸೆಯಿಂದ, ಅಪ್ಪ-ಆಗುವ, ಅಪಾಯ ಕೋಟಿಗೆ-ನೂರಾರು ಅಪಾಯಗಳಿಗೆ, ಪವಣಿಲ್ಲ–ಲೆಕ್ಕವಿಲ್ಲ, ಕಲ್ಪಿಗೆಡೆಯಾವುದೊ–ಕಲಿಸುವುದಕ್ಕೆ ಎಂದರೆ ಬುದ್ಧಿಯ ಮಾತನ್ನು ಹೇಳಲು ಏನು ಅವಕಾಶ; ಪಾೞಿಯ ಬಟ್ಟೆದಪ್ಪಿ–ಧರ್ಮ ಮಾರ್ಗವನ್ನು ಬಿಟ್ಟು, ಮುಂ–ಮುಂಚೆ, ನೆಗೞ್ದಿಡೆಯಿಲ್ಲ–ನಡೆದ ಕಾಲವಿಲ್ಲ; ಪೋಗು-ಹೋಗು, ಜಯಮಕ್ಕೆ-ಜಯವಾಗಲಿ,ಶುಭಂ, ಮಂಗಳಂ, ನಿಮಗಕ್ಕೆ-ನಿಮಗುಂಟಾಗಲಿ,

**ವಚನ:** ಕೊಕ್ಕರಿಕ್ಕೆಯಾಗಿಯುಂ–ಅಸಹ್ಯವನ್ನುಂಟು ಮಾಡುವುದಾಗಿಯೂ; ಪಾೞಿಗೆಗೆಂಟಾಗಿಯುಂ–ಧರ್ಮಕ್ಕೆ ದೂರವಾಗಿಯುಂ; ನೆಗೞ್ವಮಲ್ಲೆಂ–ಮಾಡುವವರಲ್ಲವಾಗಿದ್ದೇವೆ; ಬಟ್ಟೆಯುಂ–ಮಾರ್ಗವನ್ನು, ತಗುಳ್ದು–ಅನುಸರಿಸಿ.

೨೨. ಮಳೆಗಾಲದ ವರ್ಣನೆ: ಮೇಘಕಾಲದೊಳ್–ಮಳೆಗಾಲದಲ್ಲಿ, ದೆಸೆ-ದಿಕ್ಕು, ಪಸುರೇಱೆ–ಹಸುರು ಹತ್ತಿ ಎಂದರೆ ಬೆಳೆದ ಪೈರು ಪಚ್ಚೆಗಳಿಂದ ಹಸುರಾಗಿ, ಪಚ್ಚೆಯೊಳೆ–ಹಸುರುರತ್ನದಲ್ಲಿಯೇ, ಮುಚ್ಚಿ, ಮುಸುಂಕಿದ–ಹೊದಿಸಿದ, ಮಾೞ್ಕೆಯಾದುದು–ರೀತಿಯಾಯಿತು; ಆಗಸಂ–ಆಕಾಶವು. ಅಳಿ....ಯಾದುದು; ಅಳಿನೀಲ–ದುಂಬಿಯಂತೆ ಕಪ್ಪಗಿರುವ, ನೀಳಗಳ ಕಂಠ-ಶಿವನ ಕೊರಳಿನಂತೆ ಕರಿದಾಗಿರುವ, ತಮಾಳ-ಹೊಂಗೆಯ ಹಾಗೆ ಕರಿದಾಗಿರುವ, ವಿನೀಳ–ಅತಿ ನೀಲಿಬಣ್ಣದ, ನೀರದ ಪ್ರಸರ–

ಮೋಡಗಳ ಸಮೂಹದಿಂದ, ವಿಭಾಸಿಯಾದುದು-ಪ್ರಕಾಶಿಸುವುದಾಯಿತು ; ಸಮೀರಂ-ಗಾಳಿಯು, ಉದಾರ ಕದಂಬ ಕೇತಕೀ ಪ್ರಸರ ರಜಸ್ಸರ ಪ್ರಕಟ ಪಾಂಸುಲಂ-ವಿಸ್ತಾರವಾಗಿ ಹಬ್ಬಿರುವ ಕದಂಬ ಮತ್ತು ಕೇದಗೆ ಹೂವುಗಳ ಸಮೂಹದಿಂದ ಹೊರಬರುತ್ತಿರುವ ಪರಾಗದಿಂದ, ಆದುದು-ಕೂಡಿದುದಾಯಿತು ;

೨೩. ಗಗನಮಂಡಳಂ-ಆಕಾಶ ಪ್ರದೇಶ, ಕರಿಯ ಮುಗಿಲ್ಗಳಿಂ-ಕಪ್ಪು ಮೋಡಗಳಿಂದ, ಒಪ್ಪಿರೆ-ಚೆಲ್ವಾಗಿರಲು ; ವನಾಂತರಂ-ಕಾಡಿನ ಒಳಗು, ಸೋಗೆಯಿಂ-ನವಿಲುಗಳಿಂದ, ಎಸೆದೊಪ್ಪೆ-ಸೊಗಸಾಗಿರಲು ; ತೋರ್ಪ-ತಲೆದೋರುವ, ಮೊಳೆಯುವ, ಪೊಳೆವುಲ್ಗಳಿನ್-ಮೊಳೆಯುವ ಹುಲ್ಲುಗಳಿಂದ, ಈ ಧರಣೀವಿಭಾಗಂ-ಈ ನೆಲದ ಭಾಗ, ಒಪ್ಪಿರೆ-ಸುಂದರವಾಗಿರಲು, ಪೊಸವೇಟಕಾಜರ-ಹೊಸ ಪ್ರಣಯಿಗಳ, ಎರ್ದೆಗಳ್-ಹೃದಯಗಳು, ಪೊಸಕಾರ ಪೊಡರ್ಪುಗಂಡು-ಹೊಸ ಮಳೆಗಾಲದ ವಿಜೃಂಭಣೆಯನ್ನು ನೋಡಿ, ಅದೇಂ ಕರಿತುವು-ಅದೇನು ಕಪ್ಪಗಾದವು, ಅದೇಂ ಕಲಂಕಿದುವು-ಅದೇನು ಕದಡಿದುವು, ಅದೇಂ ಕುಱುಗೊಂಡವು-ಅದೇನು ಗುಣಿಗಳಾದುವು ಎಂದರೆ ಕುಗ್ಗಿದುವು ; ಅದೇಂ ಕನಲ್ದುವೋ-ಅದೇನು ಕೆರಳಿದುವೋ ! "ಪೊಡರ್-ಸ್ಫುರಣೇ"-ಇದರ ಭಾವನಾಮ ಪೊಡರ್+ಪು=ಪೊಡರ್ಪು ; ಕರಿತುವು ಎಂಬುದನ್ನು 'ಕರಿ-ದಾಹೇ'-ಸುಡುವುದು ಎಂಬ ಧಾತುವಿನಿಂದ ಬಂದದ್ದೆಂದು ಭಾವಿಸಿ, ಕರಿಕಾದುವು, ಇದ್ದಿಲಾದುವು ಎಂದೂ ಅರ್ಥಮಾಡಬಹುದು.

೨೪. ಭವಲಾಲಾಟ ವಿಲೋಚಾಗ್ನಿಶಿಖಿಯಿಂ-ಈಶ್ವರನ ಹಣೆಗಣ್ಣ ಉರಿಯ ಜ್ವಾಲೆಯಿಂದ, ಬೆಂದು-ಸುಟ್ಟು, ಅಳ್ಕಿ-ಸುಸ್ತಾಗಿ, ಮತ್ತಂ-ತಿರುಗಿಯೂ, ಮನೋಭವಂ-ಕಾಮನು, ಎಚ್ಚಿತ್ತೊಡೆ-ಎಚ್ಚರಗೊಂಡರೆ, ಎಂದರೆ ಪುನರುಜ್ಜೀವಿತನಾದರೆ, ಕಾಮಕಾಂತೆ-ಕಾಮನ ಹೆಂಡತಿ ರತಿ, ಬೞಿಯಂ-ಅನಂತರ, ತನ್ನಿಚ್ಚೆಯಿಂ-ತನ್ನ ಇಷ್ಟಕ್ಕನುಗುಣವಾಗಿ, ಮೆಚ್ಚಿ-ಮೆಚ್ಚಿಕೊಂಡು, ನವಿಲಿಂ-ನವಿಲುಗಳಿಂದಲೂ, ಕುಂದಂಗಳಿಂ-ಕುಂದಪುಷ್ಪಗಳಿಂದಲೂ, ಇಂದ್ರಗೋಪ ವಿಳಾಸಂಗಳಿಂ-ಕೆಂಪು ಮಿಂಚುಹುಳುಗಳ ಲೀಲೆಗಳಿಂದಲೂ, ಆಲಿಕಲ್ಲ ಪರಲಿಂ-ನೀರ್ಗಲ್ಲುಗಳ ಹರಳುಗಳಿಂದಲೂ, ಕಾರೊಳ್-ಮಳೆಗಾಲದಲ್ಲಿ, ಮಹೀಮಂಡಲಂ-ಭೂಮಂಡಲವು, ಬಣ್ಣವುರಂ ತೀವಿದ-ವರ್ಣಪೂರ ಎಂಬ ವಸ್ತ್ರದಿಂದ ಮುಚ್ಚಿದ, ಮಾಟಿಸ್ಕೆಯಾಯ್ತು-ತೆರನಾಯಿತು. ಬಣ್ಣವುರ<(ಸಂ) ವರ್ಣಪೂರ ಎನ್ನುತ್ತಾನೆ ಕೇಶಿರಾಜ ; ಅರ್ಥ ಅನಿರ್ದಿಷ್ಟ ; ಬಣ್ಣಬಣ್ಣದ ಜಮಖಾನೆ, ನೆಲಕ್ಕೆ ಹಾಸುವ ಬಟ್ಟೆ ಎಂಬರ್ಥವಿರಬಹುದು ; ಅಗ್ಗಳನ ಮೂರು ಪ್ರಯೋಗಗಳು ಇಂತಿವೆ (೧) ಹರಿನೀಳ ಸ್ಥಳಿಯೊಳ್ ಬಣ್ಣವುರಂ ಪರಿವೆತ್ತುದು ಬಗೆ ಮರುಳ್ವನ್ನೆವರಂ (೪-೬೩) (೨) ಕಟ್ಟಿದ ಪಲತೆಱದ ಸೂಸಕದ ನೆಟಿಲ್ ಕುಟ್ಟಿಮ ತಳದೊಳ್ ಪೊಳೆದೆಡೆಗಟ್ಟುತ್ತಿಲ್ಲಲ್ಲಿ ಬಣ್ಣವುರಮಂ ತೀವಲ್ (೬-೪೬) ; (೩) ಬೆಳ್ಮುಗಿಲ ಮಱೆಯಿಡಿಸೆ ಬಣ್ಣವುರಂ ಬಳಸಿರ್ದೊಡೆ ಸೊಗಯಿಸಿದುದು ಪಳಿಕಿನ ಪಟ್ಟವಣೆ ವೇದಿಕಾಧಿತ್ಯಕದೊಳ್ (೬-೫೨) ; ರುದ್ರಭಟ್ಟನ ಪ್ರಯೋಗ : ಆ ರತ್ನಾಕರಂ ಕೂಡೆ ಬಣ್ಣವುರಂ ತೀವಿದ ಮಾಟಿಸ್ಕೆಯಿಂದೆಸೆವಿನಂ ಚೆಲ್ವಾದನಬ್ಜೋದರಂ (೧-೪೯).

೨೫. ಪೊಳೆವಮರೇಂದ್ರ ಗೋಪದ – ಹೊಳೆವ ಕೆಂಪುಮಿಂಚು ಹುಳುಗಳ, ಪಸುರ್ತೆಳವುಲ್ಲ ಳ–ಹಸುರಾದ ಎಳೆಯ ಹುಲ್ಲುಗಳ, ತಳ್ತ ಕಾರ್ಮುಗಿಲ್ಗಳ–ಸೇರಿಕೊಂಡ ಕರಿಮೋಡಗಳ, ಕಿಱುಗೊಂಕುಗೊಂಕಿದ–ಸಣ್ಣ ಸಣ್ಣ ಡೊಂಕುಗಳನ್ನುಳ್ಳ, ಪೊನಲ್ಗಳ - ಪ್ರವಾಹಗಳ, ಕೆಂಪು ಪಸುರ್ಪು ಕರ್ಪು ಬೆಳ್ಪು –ಕೆಂಪು ಹಸುರು ಕಪ್ಪು ಬಿಳಿ ಬಣ್ಣಗಳು, ಶಕ್ರಕಾರ್ಮುಕ ವಿಳಾಸಮಂ-ಕಾಮನಬಿಲ್ಲಿನ ಸೊಗಸನ್ನು, ಒಳಕೊಳೆ–ಒಳಕೊಂಡಿರಲು. ಕಾರ್ಮುಕಂ-ಮಳೆಗಾಲದ ಮುಂಭಾಗ, ಕಾಮನ ಕಾರ್ಮುಕದಂತೆ-ಮನ್ಮಥನ ಬಿಲ್ಲಿನಂತೆ ಎಂದರೆ ಕಬ್ಬಿನ ಬಿಲ್ಲಂತೆ, ಎರ್ದೆಗೊಂಡು–ಮನವನ್ನು ಸೂರೆಗೊಂಡು, ಏನ್ ಜೀಟದತ್ತ ಳಗಮನುಂಟು ಮಾಡಿದುದೋ–ಪ್ರೇಮದ ಆಧಿಕ್ಯವನ್ನು ಏನು ಉಂಟುಮಾಡಿತೋ! ಅತ್ತಳಗ–ಆಧಿಕ್ಯ, ಅತಿಶಯ ; ಮುಖ>ಮುಕ ;

ವಚನ : ತೊವಲ್ತು–ಚಿಗುರಿ; ಪಸಿಯ–ಹಸಿದಾದ, ನೇತ್ರಮಂ–ಬಟ್ಟೆಯನ್ನು; ಪಚ್ಚವಡಿಸಿದಂತೆ– ಹೊದಿಸಿದಹಾಗೆ ; ಪದ್ಮರಾಗದ – ಕೆಂಪುರತ್ನದ ; ಉಪಾಶ್ರಯಂ ಬಡೆದು–ಅವಲಂಬನವನ್ನುಹೊಂದಿ ; ಕಿಸುಗಾಡ–ಕೆಂಪುಮಣ್ಣಿನ ಕಾಡಿನ ; ಒನಲಿಸುವಂತೆ– ಕೆರಳಿಸುವಹಾಗೆ ; ಜರಿಪೊನಲ್ಗಳುಂ – ಸರಿಯುವ ಪ್ರವಾಹಗಳು ; ಇಲ್ಲಿಗೆ ಮಳೆಗಾಲದ ವರ್ಣನೆ ಮುಗಿಯುತ್ತದೆ. ಆ ಕಾಲದ ಪ್ರಕೃತಿಯಲ್ಲಿ ಕಾಣುವ ವಿವಿಧ ವರ್ಣಗಳ ವಿಲಾಸ ಪಂಪನ ಮನವನ್ನು ಮೆಚ್ಚಿಸಿವೆ; ಕೆಂಪು ಬಿಳುಪು ಕಪ್ಪು ನೀಲಿ ಹಸುರುಗಳ ಕಾಲ ಮಳೆಗಾಲ. ಈ ವರ್ಣನೆ ಸ್ವಾನುಭವದಿಂದ ಬಂದಿವೆ; ಸ್ವಭಾವೋಕ್ತಿ. ಇದರಲ್ಲಿ ಕವಿಯ ಅಚ್ಚರಿ, ಹರ್ಷ, ಸೌಂದರ್ಯದೃಷ್ಟಿಗಳು ನವಿಲುಗರಿಯ ವಿಲಾಸದಿಂದ ರಂಜಿಸುತ್ತಿವೆ.

೨೬. ಕಾಮ್ಯಕವನ ಪ್ರವೇಶ:– ದೆಸೆಗೆತ್ತಂ – ಎಲ್ಲೆಲ್ಲಿಯೂ, ದಿಕ್ಕುದಿಕ್ಕಿಗೆ, ಗಜಱುತ್ತುಮಿರ್ಪ–ಗರ್ಜಿಸುತ್ತಿರುವ, ಪುಲಿಯಿಂ–ಹುಲಿಗಳಿಂದಲೂ, ನೀಲಾಭ್ರಮಂ– ಕರಿಮೋಡವನ್ನು, ದಂತಿಗೆತ್ತು–ಆನೆಯೆಂದು ಭ್ರಮಿಸಿ, ಪಿಡಿಲ್ದು–ಹಿಡಿದು ; ಅಗಸಕೆ– ಆಕಾಶಕ್ಕೆ, ಎಯ್ದೆ ಪಾಯ್ದು–ಮುಟ್ಟುವಂತೆ ನುಗ್ಗುವ, ಪಲವುಂ ಸಿಂಗಂಗಳಿಂ–ಹಲವು ಸಿಂಹಗಳಿಂದಲೂ, ಎತ್ತ-ಎಲ್ಲೆಲ್ಲಿಯೂ, ಆಗುರ್ವಿಸಿ-ಭಯಪಡಿಸಿ, ಪಾಯ್ವ-ಹರಿಯುವ, ಅರ್ವಿಗಳಿಂ – ಬೆಟ್ಟದಝರಿಗಳಿಂದಲೂ, ಮದಾಂಧ ವನಗಂಧೇಭಂಗಳಿಂ – ಮದದಿಂದ ಸೊಕ್ಕಿದ ಕಾಡಾನೆಗಳಿಂದಲೂ, ಕಾಮ್ಯಕವನಂ–ಕಾಮ್ಯಕವೆಂಬ ಅರಣ್ಯ, ಕಣ್ಗುರ್ವಿಸೆಯುಂ–ಕಣ್ಣುಗಳಿಗೆ ಭಯವನ್ನುಂಟುಮಾಡಿಯೂ, ಚಿತ್ತದೊಳ್–ಮನಸ್ಸಿನಲ್ಲಿ, ಅತಿಪ್ರೀತಿಯಂ – ಪ್ರೀತಿಯ ಹೆಚ್ಚಳವನ್ನು, ಮಾಡಿತ್ತು – ಮಾಡಿತು. ಅರ್ವಿ=(ತ) ಅರುವಿ, (ತು) ಅರ್ಬಿ=(ಹೊಸಗನ್ನಡ) ಅಬ್ಬಿ.

ವಚನ : ತದ್ವನಾಧಿಪತಿಯಪ್ಪ – ಆ ಕಾಡಿಗೊಡೆಯನಾದ ; ಪುಗಲೀಯದೆ– ಪ್ರವೇಶಿಸುವುದಕ್ಕೆ ಬಿಡದೆ.

೨೭. ಕಿರ್ಮೀರನ ವಧೆ : ಮಸಿಯಂ ಪುಂಜಿಸಿದಂತುಟಪ್ಪ – ಮಸಿಯನ್ನು ರಾಶಿ ಮಾಡಿದಂತಿರುವ, ತನು–ಮೈ, ನೀಳಾಂಭೋಧರಂ–ಕರ್ಮೋಡ ; ವಾಡೆಗಳ್–

ಕೋರೆಹಲ್ಲುಗಳು, ಪೊಸಮಿಂಚು–ಹೊಸದಾದ ಮಿಂಚುಗಳು ; ಉಗ್ರವಿಲೋಚನಂ–ಭಯಂಕರವಾದ ಕಣ್ಣುಗಳು, ದಿವಿಜಗೋಪಂ–ಕೆಂಪು ಮಿಂಚುಹುಳುಗಳು : ಕಾರೊ–ಮಳೆಗಾಲವೋ, ಮೇಣ್–ಅಥವಾ, ಕಾಳರಕ್ಕಸನೋ–ಕಪ್ಪಾದ ರಾಕ್ಷಸನೋ, ಪೇಳ್–ಹೇಳು, ಎನೆ–ಎನ್ನಲು, ಬಂದು ತಾಗೆ–ಬಂದು ಸಂಘಟ್ಟಿಸಲು, ಭೀಮ–ಭೀಮನು, ಗದೆಯಂ ಕೊಂಡೆಯ್ದಿ–ಗದೆಯನ್ನು ತೆಗೆದುಕೊಂಡು ಸಮೀಪಕ್ಕೆ ಹೋಗಿ, ಸಿಡಿಲ್ದು–ಸಿಡಿದು, ಸಿಡಿಲ್ ಪೊಯ್ವವೊಲಾಗೆ–ಸಿಡಿಲು ಹೊಡೆದಂತಾಗಲು, ವೀರನಂ–ವೀರನಾದ, ಕಿರ್ಮೀರನಂ–ಕಿರ್ಮೀರನನ್ನು, ಇಳೆಯೊಳ್–ನೆಲದಮೇಲೆ, ಪೊಯ್ದಂ–ಅಪ್ಪಳಿಸಿದನು.

ವಚನ : ಆಟವಿಕರ – ವನವಾಸಿಗಳ, ಅಟ್ಟಟ್ಟಿಯೊಳಂ – ದೌತ್ಯ ಮುಂತಾದ ಸೇವೆಗಳಲ್ಲಿಯೂ ; ಮಸುಳಿಸೆ–ಕಂದಿಸಲು

೨೮. ಪಿರಿಯ ಮರಂಗಳೆ ಮಾಡಮಾಗೆ–ಹಿರಿಯಮರಗಳೇ ಮನೆಯಾಗಲು, ಪೊಳೆವೆಳಪಳಿರ್ಗಳೆ ಸಜ್ಜೆಯಾಗೆ–ಹೊಳೆವ ಎಳೆಯ ಚಿಗುರುಗಳೇ ಹಾಸಿಗೆಯಾಗಲು, ಪಿರಿಯ ಮಡುಗಳೆ ಮಜ್ಜನಮಾಗೆ–ಹಿರಿಯ ಮಡುಗಳೇ ಸ್ನಾನತೀರ್ಥವಾಗಲು, ಪೊಸನಾರೆ ದೇವಾಂಗ ವಸ್ತ್ರಮಾಗೆ–ಹೊಸದಾದ ನಾರುಗಳೇ ರೇಷ್ಮೆಯ ವಸ್ತ್ರಗಳಾಗಲು, ಪಱಿದ ತಱಗೆಲೆಯೆ ಪರಿಯಣಮಾಗೆ–ಚೆದರಿದ ಒಣ ಎಲೆಗಳೇ ಊಟದ ತಟ್ಟೆಗಳಾಗಲು, ಪಣ್ಪಲಮೆತ್ತಿದ ಬೋನಮಾಗೆ – ಹಣ್ಣು ಹಂಪಲುಗಳೇ ಬಡಿಸಿದ ಅನ್ನವಾಗಲು, ಪಾಂಡವರಾ-ಪಾಂಡವರ, ಬನದೊಳಿರ್ಪಿರವು-ಕಾಡಿನಲ್ಲಿರುವ ವಾಸ, ಸಿರಿಯ–ಐಶ್ವರ್ಯದ, ಮಹಿಮೆಯುಂ–ಮಹತ್ವವನ್ನು, ಮೆಱೆಯಲ್–ಪ್ರಕಟಿಸಲು, ಏನಾರ್ತುದೊ–ಏನು ಸಮರ್ಥವಾಯಿತೋ ! ಬೋನ<(ಸಂ) ಭೋಜನ.

೨೯. ಪಾಸಱೆ ಸಿಂಹಪೀಠಂ – ಹಾಸುಬಂಡೆಯೆ ಸಿಂಹಾಸನ, ಅಳಿನೀರುತಿ ಮಂಗಳಗೀತಿ–ದುಂಬಿಗಳ ಶಬ್ದ ಮಂಗಳ ಸಂಗೀತ, ಭೂತಳಂಪಾಸು–ನೆಲವು ಹಾಸಿಗೆ, ಮೃಗವ್ರಜಂ–ಪ್ರಾಣಿಗಳ ಗುಂಪು, ಪರಿಜನಂ–ಸೇವಕರು, ಪೊದಱ್–ಹೊದರುಗಳು, ಓಲಗಸಾಲೆ–ಆಸ್ಥಾನ ಮಂಟಪ, ಮೊಕ್ಕಳಂ ಬೀಸುವ ಗಾಳಿ–ವಿಶೇಷವಾಗಿ ಬೀಸುವ ಗಾಳಿಯು, ಚಾಮರದ ಗಾಳಿಯೆನಲ್-ಚಾಮರದ ಗಾಳಿಯೆನ್ನಲು, ದೊರೆವೆತ್ತು–ಸಮಾನತೆಯನ್ನು ಹೊಂದಿ, ಪಾಂಡುಪುತ್ರರಾ–ಪಾಂಡವರ, ವನವಾಸ ನಿವಾಸಮೆ–ಅರಣ್ಯವಾಸದ ವಸತಿಯೆ, ಏಂ ಸುಖಾವಾಸ ನಿಮಿತ್ತಮಾಯ್ತೊ–ಏನು ಸುಖವಸತಿಗೆ ಕಾರಣವಾಯಿತೋ ! ಹರ್ಷಕೃತ 'ನಾಗಾನಂದ ನಾಟಕ'ದ "ಶಯ್ಯಾಶಾದ್ವಲಮಾಸನಂ...." ಎಂಬ ಪದ್ಯವನ್ನು ಹೋಲಿಸಿ. (ಅಂಕ ೪–ಪದ್ಯ ೨)

ವಚನ: ತಱುಂಬುವಂತಿರ್ದ-ಅಡ್ಡಗಟ್ಟುವ ಹಾಗೆ ಇದ್ದ, ಶಿಖರಿ-ಬೆಟ್ಟ; ಬಳ್ವಳ ಬಳೆದು–ಅತಿಶಯವಾಗಿ ಬೆಳೆದು ; ಕಾಡೆರ್ಮೆಯ–ಕಾಡೆಮ್ಮೆಯ ; ಮೂಂಕಿಱಿವ–ವಾಸನೆನೋಡಲು ಮೂಗನ್ನು ಚಾಚುವ ; ಮರವಾಯ್ವ–ಮರಕ್ಕೆ ಡಿಕ್ಕಿಹೊಡೆಯುವ, ನುಗ್ಗುವ; ಪಾಂಡವರು ದ್ವೈತವನಕ್ಕೆ ಬರುವರು.

೩೦. ಈ ಬನಂ–ಈ ಕಾಡು, ಆರ್ಗಂ–ಯಾರಿಗೂ, ಪುಗಲಿಲ್ಲ–ಪ್ರವೇಶಮಾಡ

ಲಾಗುವುದಿಲ್ಲ ; ನೆಲಸಲ್-ಇರಲು, ಇಂಬು-ಅವಕಾಶ ; ಉಡಲ್-ಉಡಲು, ನಾರುಂಟು-ನಾರುಮಡಿ ಇವೆ ; ಮೆಲ್ಲೆ-ತಿನ್ನಲು, ಕೊಂಬುಗಳೊಳ್-ಮರದ ರೆಂಬೆ ಗಳಲ್ಲಿ, ಪಣ್ಪಲಮುಂಟು-ಹಣ್ಣು ಹಂಪಲಿವೆ; ಮಿಾಯೆ-ಸ್ನಾನಮಾಡಲು, ಕುಡಿಯಲ್-ಕುಡಿಯಲು, ನೀರುಂಟು-ನೀರಿದೆ ; ಪದ್ಮಾಕರಾಳಿಗಳೊಳ್-ತಾವರೆಯ ಕೊಳಗಳ ಸಾಲುಗಳಲ್ಲಿ, ತಣ್ಪುಗಳುಂಟು-ತಂಪುಗಳಿವೆ ; ಹೇಮಲತಿಕಾ ಕುಂಜಂಗಳೊಳ್-ಹೊಂಬಣ್ಣದ ಬಳ್ಳಿಯ ಹೊದರುಗಳಲ್ಲಿ, ನಮ್ಮ ನನ್ನಿಗೆ-ನಮ್ಮ ಸತ್ಯವಾಕ್ಯಕ್ಕೆ, ಬನ್ನಂ ಬರಲೀಯದೆ-ಭಂಗವುಂಟಾಗದ ಹಾಗೆ, ಈ ಬನದೊಳಿರ್ದು-ಈಕಾಡಿನಲ್ಲಿದ್ದು, ಏಂ ಕಾಲಮಂ ಪಾರೆವೇ-ಏನು ಕಾಲವನ್ನು ನಿರೀಕ್ಷಿಸೆವೇ? ನಿರೀಕ್ಷಿಸೋಣ ಎಂದು ಅಭಿಪ್ರಾಯ.

**ವಚನ :** ಏಕ ಕಾರ್ಯಾಲೋಚನ ಪರರಾಗಿ-ಒಂದೇಕಾರ್ಯದ ಆಲೋಚನೆಯಲ್ಲಿ ಆಸಕ್ತರಾಗಿ ; ಅದ್ವೈತ ಸಾಹಸರ್-ಎರಡಿಲ್ಲದ ಸಾಹಸಿಗರು ; ಛಿದ್ರಿಸಲೆಂದು-ರಹಸ್ಯ ವನ್ನು ಭೇದಿಸಲೆಂದು ; ಮೆಯ್ಗರೆದು-ಮೈಮರಸಿಕೊಂಡು.

೩೧. ಮೃಗಯಾಕ್ರೀಡೆಗೆ-ಬೇಟೆಯ ಆಟಕ್ಕೆ, ಪಾಂಡುರಾಜತನಯರ್-ಪಾಂಡವರು, ಪೋಪನ್ನೆಗಂ-ಹೋಗುತ್ತಿರಲು, ಬಂದು, ತೊಟ್ಟನೆ-ಬೇಗನೆ, ಪಾಂಚಾಳಿಯ ನೆತ್ತಿ-ದ್ರೌಪದಿಯನ್ನು ಎತ್ತಿಕೊಂಡು, ತನ್ನರಥದೊಳ್-ತನ್ನ ರಥದಲ್ಲಿ, ತಂದಿಟ್ಟುಕೊಂಡು, ಉಯ್ವಂ-(ಸೈಂಧವನು) ತೆಗೆದುಕೊಂಡು ಹೋದನು. ಅನ್ನೆಗಂ-ಅಷ್ಟರಲ್ಲಿ, ಆ ಪಡೆಮಾತುಗೇಳ್ದು-ಆ ಸುದ್ದಿಯನ್ನು ಕೇಳಿ, ಅತಿಬಳರ್ ಭೀಮಾರ್ಜುನರ್-ಅತಿ ಬಲರಾದ ಭೀಮನೂ ಅರ್ಜುನನೂ, ಕಾಯ್ಪು-ಕೋಪವು, ಕೈಮಿಗೆ-ಅಧಿಕವಾಗಲು, ಬೆನ್ನಂಪರಿದು-ಬೆನ್ನಹಿಂದೆ ಓಡಿ, ಎಲವೋ-ಎಲೋ, ಎತ್ತಪೋಪೆ-ಎಲ್ಲಿಹೋಗುವೆ, ಪೋ ಪೋಗಲ್-ಹೋಗಬೇಡ, ಹೋಗಬೇಡ, ಎಂದು-ಹೇಳುತ್ತ, ಎಯ್ದಿದರ್-ಸಮಿಾಪಿಸಿದರು.

**ವಚನ :** ಗದಾಘಾತ-ಗದೆಯು ಹೊಡೆತ ; ಬಾಣಪಾತ-ಬಾಣಗಳು ಎರಗು ವಿಕೆ ; ಕೋಡಗಗಟ್ಟುಗಟ್ಟಿ-ಕಪಿಯನ್ನು ಕಟ್ಟುವ ಕಟ್ಟಿನಲ್ಲಿ ಕಟ್ಟಿ ; ಬಿಲ್ಲ ಕೊಪ್ಪಿನೊಳ್-ಬಿಲ್ಲಿನ ತುದಿಗಳಿಂದ ;

೩೨. ಲಾಕ್ಷಾಗೃಹಮಂ-ಅರಗಿನ ಮನೆಯನ್ನು, ಪುಗಿಸಲುಂ-ಹೋಗಿಸು ವುದಕ್ಕೂ, ಅಕ್ಷಕ್ರೀಡೆಯೊಳ್-ಪಗಡೆಯಾಟದಲ್ಲೇ, ಧರಣಿಯಂ-ಭೂಮಿಯನ್ನು, ಕೊಳಲುಂ-ವಶಮಾಡಿಕೊಳ್ಳುವುದಕ್ಕೂ, ಪಿಂಗಾಕ್ಷಂಗೆ-ದುರ್ಯೋಧನನಿಗೆ, ಪೇಳ್ದು-ಹೇಳಿ, ಸೈರಿಸದೆ-ಸಹಿಸಿಕೊಳ್ಳಲಾಗದೆ, ಆಕ್ಷೇಪದಿಂ-ತೆಗಳಿಕೆಯಿಂದ, ಕೇಡಿಗತನದಿಂದ, ಎಮ್ಮಂ-ನಮ್ಮನ್ನು, ಇಲ್ಲಿ, ಛಿದ್ರಿಸಬಂದಯ್-ಭೇದಿಸಲು ಬಂದೆಯಾ !

**ವಚನ :** ಏವಂದಪುದು-ಏನುಬರುತ್ತದೆ ; ಒಂದು ದಿವಸದನುವರದೊಳ್-ಒಂದು ದಿನದ ಯುದ್ಧದಲ್ಲಿ ; ಗೆಲ್ವೆನಕ್ಕೆ-ಗೆಲ್ಲುತ್ತೇನೆಂಬುದಾಗಲಿ ; ದಾಯಿಗರ-ದಾಯಾದಿಗಳ ; ಪಗೆಯಿಂ ಜೀಯ ಬಂದರ ಮೂಗನರಿದರೆಂಬಂತೆ-ಹಗೆಯನ್ನು ಕೊಲ್ಲ ಬಂದವರ ಮೂಗನ್ನು ಕತ್ತರಿಸಿದರೆಂಬಂತೆ ;

೩೩. ಭೀಷ್ಮ–ಭೀಷ್ಮನೇ, ಮಿಡುಕದೆ–ಚಲಿಸದೆ, ನೋಡುತಿರು; ಕುಂಭಜ–ದ್ರೋಣನೇ, ಸುರ್ಕಿರು–ಮುರುಟಿಕೊಂಡಿರು; ಕರ್ಣ–ಕರ್ಣನೇ, ಮಿಕ್ಕು–ಮೀರಿ, ಮಾರ್ನುಡಿಯದೆ–ಪ್ರತಿಹೇಳದೆ, ಮೂಗುವಟ್ಟಿರು–ಮೂಗನಾಗಿರು; ಗುರುಪ್ರಿಯ ನಂದನ–ಅಶ್ವತ್ಥಾಮನೇ, ಕೂಗಡಂಗದಿರ್ದೊಡೆ–ನಿನ್ನಕೂಗು ಅಡಗದೆ ಇದ್ದರೆ, ಬರ್ದು ಕಾವುದು–ಬದುಕುವುದೇನ್, ಇರ್–ಇರು; ಪ್ರೊಡರ್ದೊಡೆ–ವಿಜೃಂಭಿಸಿದರೆ, ಈಗಡೆ ಕೊಂದಪೆಂ–ಈಗಲೇಕೊಲ್ಲುತ್ತೇನೆ; ಎಂದು–ಎಂಬುದಾಗಿ, ಕೂಡೆ–ಕೂಡಲೇ, ಕಣ್ಗಿಡೆ ಜಡಿದು–ಅಧೀರರಾಗುವಂತೆ ಗದರಿಸಿ, ಆ ಖಚರನ್–ಆ ಚಿತ್ರಾಂಗದನೆಂಬ ಗಂಧರ್ವನು, ಪವಮಾಣು ಮಾರ್ಗದಿಂ–ಆಕಾಶ ಮಾರ್ಗವಾಗಿ, ಇರ್ವರುಮಂ–ದುರ್ಯೋಧನ ದುಶ್ಶಾಸನರನ್ನು, ಉಯ್ದಂ–ತೆಗೆದುಕೊಂಡುಹೋದನು. 086648

ವಚನ: ನೆಗಟ್ತೆಯ ಬೀರರೆಲ್ಲಂ–ಪ್ರಸಿದ್ಧರಾದ ಶೂರರೆಲ್ಲ; ಬಡವರ ಪಿತರರಂತೆ–ಬಡವರ ಪಿತೃಗಳಂತೆ; ಮಿಳ್ಮಿಳ ನೋಡುತ್ತಿರೆ–ಮಿಳಮಿಳ ನೋಡುತ್ತಿರಲು, ಮಿಕ್ಕುದುಂಡರಂತೆ–ಉಳಿದದ್ದನ್ನು, ಎಂಜಲನ್ನು ತಿಂದವರಹಾಗೆ; ಬಿಲ್ಲುಂ ಬೆಱಗು ಮಾಗಿರೆ-ಏನು ಮಾಡಬೇಕೆಂದು ತೋರದವರಾಗಿರಲು; ಬಾಯಱಿದು-ಬಾಯಿಸೋತು ಹೋಗುವ ಹಾಗೆ, ಪುಯ್ಯಲಿಡುತಂ–ಕೂಗಿಕೊಳ್ಳುತ್ತ, ಆರ್ತಧ್ವನಿಮಾಡುತ್ತ; ಕವಿದು ಪಟ್ಟು–ಎರಗಿಬಿದ್ದು,

೩೪. ನೋಂತರ-(ಕೊಲ್ಲಬೇಕೆಂದು) ವ್ರತಮಾಡಿದವರ, ಪಗೆವರಂ–ಹಗೆಗಳನ್ನು, ಎಱ್ತಱಿದಂತಾಯ್ತು–ಎತ್ತು ಇರಿದಹಾಗಾಯಿತು, ಎಂದಿರದೆ–ಎಂದು ಸುಮ್ಮನೆ ಇರದೆ, ಪುರುಷಕಾರದ–ಪುರುಷ ಪ್ರಯತ್ನದ, ಪೆಂಪಂ–ಹಿರಿಮೆಯನ್ನು, ಚಿಂತಿಸಿ–ಭಾವಿಸಿ, ಮಹೀಶನಂ-ರಾಜ ದುರ್ಯೋಧನನನ್ನು, ಎಂತಪ್ಪೊಡಂ-ಹೇಗಾದರೂ, ತರಿಸಿ, ಎನಗೆ–ನನಗೆ, ಪುರುಷ ಭಿಕ್ಷಮನಿಕ್ಕಿಂ–ಗಂಡಸನ್ನು ಭಿಕ್ಷೆಯಾಗಿ ಕೊಡಿರಿ. ಈ ಪದ್ಯವನ್ನು ಕರ್ಣಪಾರ್ಯನ "ಅಂತಕಸುತ ಕರುಣಿಸಿ ಮತ್ಕಾಂತನನೆಂತುಂ ತರಲ್ಕೆ ಪೇಟ್ಟಪು ನೀನಿಂ, ನೋಂತರ ಪಗೆವರನೆತ್ತಿಱಿದಂತಿರದಿರು ಕುರುಕುಳಕ್ಕೆ ಬನ್ನಂ ಬರ್ಕುಂ" ಎಂಬ ಪದ್ಯದೊಡನೆ ಹೋಲಿಸಿನೋಡಿ. ಇಲ್ಲಿ ಬರುವ ಗಾದೆಯ ಅಭಿಪ್ರಾಯ ಸ್ಪಷ್ಟತೆಗಾಗಿ, "ನಾವು ಕೊಲುವೆವೆಂಬ ಹಗೆಯುಮನ್ನಿಗರಿಂ ಸಾವ ಹಡೆದು ಹೋಗುವುದು ದೇವ ಕೇಳತಿಹಿತವೆಮಗಲ್ಲ" ಎಂಬ ಮಂಗರಸನ ಪದ್ಯಭಾಗವನ್ನು ನೋಡಬಹುದು.

ವಚನ: ಪುಯ್ಯಲಿಡುವ–ಹುಯ್ಯಲಿಡುವ, ಅಳುವ; ಪುಯ್ಯಲಂ–ಆರ್ತನಾದವನ್ನು.

೩೫. ಪಿರಿದುಂ ಕಾಯ್ಪಿನೊಳ್–ಹಿರಿದಾದ ಕೋಪದಲ್ಲಿ, ಎಯ್ದೆ–ಚೆನ್ನಾಗಿ, ಕಾಯ್ಪ–ಕೋಪಿಸುವ, ಸಮಕಟ್ಟು–ಏರ್ಪಾಡು, ಇಂ–ಇನ್ನು, ದೋಷಮಲ್ತೆ–ದೋಷವಲ್ಲವೆ, ಅಕ್ಕ–ಅಕ್ಕನೇ; ಮಚ್ಚರಮುಂ–ಮತ್ಸರವೂ, ಮೋಘ[ಮ]ಡಂಬಡುಂ–ವ್ಯರ್ಥವಾದ ಎಡವಟ್ಟುತನವೂ, ಕಲುಷಮುಂ–ವೈರವೂ, ಮುನ್ನುಳ್ಳದು–ಮೊದಲು

ಇರುವುವಾಗಿದೆ; ಆಂತೆ ಎತ್ತಿಯುಂ–ಹಾಗೆ ಅವನ್ನು ಈಗ ಎತ್ತಿಕೊಂಡು, ಪ್ರೀತಿಯುಂ–ರಕ್ಷಣೆಯೂ, ಪಂಥಮುಂ–ಮಾರ್ಗವೂ, ಇಲ್ಲದಂತೆ–ಇಲ್ಲದಿರುವ ಹಾಗೆ, ಮನದೊಳ್–ಮನಸ್ಸಿನಲ್ಲಿ, ನಿಷ್ಕಾರಣಂ – ಕಾರಣವಿಲ್ಲದೆ, ಕಾಯ್ವ[ೆಂ] – ಕೋಪಿಸುತ್ತಾನೆನು, ಪರಚಿಂತಾಕರ–ಅನ್ಯರಿಗೆ ಚಿಂತೆಯನ್ನುಂಟುಮಾಡುವವನೇ, ಏಪಿ–ಹೋಗು, ಎಂಬ ನುಡಿಯುಂ–ಎಂಬ ಮಾತನ್ನು, ಮುಂ ಕೇಳ್ದಿನಿಲ್ಲಾಗದೆ–ನಾನು ಮೊದಲು ಕೇಳಿದವನಾಗಲಿಲ್ಲವೇ? ಎಂದರೆ ಕೇಳಿದ್ದೇನೆ. ಈ ಪದ್ಯದ ಅನ್ವಯ ತಾತ್ಪರ್ಯಗಳು ಕೊಂಚ ಕ್ಲೇಶಕರವಾಗಿವೆ.

**ವಚನ**: ತನ್ನೊಳೆ ಬಗೆದು–ತನ್ನಲ್ಲಿಯೇ ಭಾವಿಸಿ

**೩೬.** ಅದರ್ಕೆ–ಅದಕ್ಕಾಗಿ, ಬಾಷ್ಪಜಲಮಂ–ಕಣ್ಣೀರನ್ನು, ಸುರಿಯಲ್ವೇಡ–ಸುರಿಸಬೇಡ; ನಿನ್ನಾಣ್ಮನಂ ನಿನ್ನೊಳಿಂದಿರದಾಂ ಕೂಡುವೆಂ–ನಿನ್ನ ಗಂಡನನ್ನು ನಿನ್ನೊಡನೆ ಇಂದು ಸೇರಿಸುತ್ತೇನೆ; ಎಮ್ಮೊಳಾದ ಕಲಹಕ್ಕೆ–ನಮ್ಮನಮ್ಮಲ್ಲಿಯೇ ಉಂಟಾದ ಜಗಳಕ್ಕೆ, ಕೇಳ–ಕೇಳು, ಕೌರವರ್ ನೂರ್ವರೆ ದಲ್–ಕೌರವರು ನೂರು ಜನರೇ, ದಿಟ; ಆಮುಂ–ನಾವೂ, ಅಯ್ವರೆ ದಲ್–ಐವರೇ, ನಿಜ; ಮತ್ತೊರ್ವರೊಳ್–ಬೇರೊಬ್ಬರಲ್ಲಿ, ತೊಟ್ಟ–ಸಂಘಟಿಸಿದ, ಸಂಗರರಂಗಕ್ಕೆ–ಯುದ್ಧಭೂಮಿಗೆ, ಜಸಕ್ಕೆ–ಕೀರ್ತಿಗೆ, ಕೂಡುವೆಡೆಯೊಳ್–ಸೇರುವ ಸಂದರ್ಭದಲ್ಲಿ, ಆವ್–ನಾವು, ನೂಱಯ್ವರಲ್ಲವೇ–ನೂರಯ್ದು ಜನರಲ್ಲವೇ? ವ್ಯಾಸಭಾರತದಲ್ಲಿ "ಪರೈಃ ಪರಿಭವೇ ಪ್ರಾಪ್ತೇ ವಯಂ ಪಂಚೋತ್ತರಂ ಶತಂ। ಪರಸ್ಪರ ವಿರೋಧೇತು ವಯಂ ಪಂಚ ಶತಂ ತು ತೇ।" ಎಂದಿರುವ ಶ್ಲೋಕವನ್ನು ನೋಡಬಹುದು; ಇದೇ ಅಭಿಪ್ರಾಯವನ್ನೇ 'ಕಲುಷದಿ ನೆಮ್ಮೊಳ್ ಕಲಹಂ ಘಟಿಯಿಸಿದೊಡೆ ನೂರ್ವರವರ್ಗಳಯ್ವರೆ ನಾಮುಂ। ಚಲದಿಂ ದನ್ಯರೊಳಾದೊಡೆ ಕಲಹಂ ನೂಱಯ್ವರಲ್ಲವೇ ನಾಮೆಲ್ಲಂ" ಎಂದು ಕರ್ಣಪಾರ್ಯನೂ, "ಧುರದೊಳಗವರು ನೂರ್ವರು ನಾವೈವರು ಪರಬಾಧೆಯೊಾಗಿಸಗಲು ನಿರುತದಿ ನಾವು ನೂರೈವರದಱಿಂದ ಪರಿಹರಿಪುದು ಮತವೆಂಪು" ಎಂದು ಮಂಗರಸನೂ ಅನುವದಿಸಿದ್ದಾರೆ.

**ವಚನ**: ಪಾೞಿಯ–ಧರ್ಮದ, ಪಸುಗೆಯಂ–ವಿವೇಕವನ್ನು; ಪೂಣ್ದ ಬೆಸನಂ–ಪ್ರತಿಜ್ಞೆಮಾಡಿದ ಕೆಲಸವನ್ನು; ಕರಮಾಸೆವಟ್ಟು–ಬಹು ಆಶೆಯಿಂದ ಕೂಡಿ.

**೩೭.** ನಿಮ್ಮಣ್ಣನಂ ಸುಯೋಧನನಂ–ನಿಮ್ಮ ಅಣ್ಣನಾದ ದುರ್ಯೋಧನನನ್ನು, ಗಂಧರ್ವರ ಪಡೆ–ಗಂಧರ್ವರ ಸೈನ್ಯ, ಪಿಡಿದುಯ್ದುದು ಗಡ–ಹಿಡಿದುಕೊಂಡು ಹೋಯಿತಲ್ಲವೆ? ನಮಗೆ, ಇದಂ–ಇದನ್ನು, ಕಡೆಗಣಿಸಲಾಗ–ಉಪೇಕ್ಷೆಮಾಡಲಾಗದು, ಆತನ ಸೆಱೆಯಂ–ಅವನ ಸೆರೆಯನ್ನು, ಬೇಗಂ–ಬೇಗನೆ, ಬಿಡಿಸಿ, ತರ್ಪುದು–ತರುವುದು.

**ವಚನ**: ಎಲ್ಲಿವೊಕ್ಕೊಡಂ–ಎಲ್ಲಿ ಹೊಕ್ಕರೂ; ತವದೊಣೆಗಳಂ–ಅಕ್ಷಯವಾದ ಬತ್ತಳಿಕೆಗಳನ್ನು; ಜೇವೊಡೆದು–ಹೆದೆಯನ್ನು ಮಿಡಿದು, ಟಂಕಾರಮಾಡಿ; ಗಂಧರ್ವರ ಪೋಪ ಬಟ್ಟೆಯಂ–ಗಂಧರ್ವರು ಹೋಗುವ ದಾರಿಯನ್ನು; ಜಲಕ್ಕನೆ ಕಂಡು–ವಿಶದವಾಗಿ ನೋಡಿ.

೩೮. ಕೊಳ್‌ಕೊಳ್-ತಗೋತಗೋ, ಎಂದೆಚ್ಚೊಡೆ-ಎಂದು ಬಾಣಪ್ರಯೋಗ ಮಾಡಿದರೆ, ವಿಳಯೋಳ್ಕದ ತೇಜದಿಂದೆ–ಪ್ರಳಯಕಾಲದ ಉಲ್ಕೆಯಹಾಗೆ, ಮುಸುಱಿ–ಮುತ್ತಿಕೊಂಡು, ದಿವ್ಯಾಸ್ತ್ರಚಯಂಗಳ್–ದಿವ್ಯವಾದ ಬಾಣಸಮೂಹ, ಕೊಳೆ–ನಾಟಲು, ಗಾಂಧರ್ವ ಬಲಂಗಳ್–ಗಂಧರ್ವ ಸೈನ್ಯಗಳು, ಮಿಟ್ಟಿಗೊಂಡ–ಮಣ್ಣುಹೆಂಟೆ ತಗುಲಿದ, ಚಿಟ್ಟಿಯ ತೇಜದಿಂ–ಚಿಟ್ಟೆಯ ಹುಳುವಿನ ಹಾಗೆ, ಕೆಡೆದುವು–ಬಿದ್ದುವು; ಮಿಟ್ಟಿ<ಮೃತ್ತಿಕಾ>ಪ್ರಾ ಮಿತ್ತಿಆ, ಮೀಟ್ಟಿ; ಮಟ್ಟಿ, ಮಾಟಿ ಎಂದೂ ಹಿಂದಿಯಲ್ಲುಂಟು.

ವಚನ: ಕೊಳ್ ನಿನ್ನ ನಚ್ಚಿನ ಸೆಱೆಯಂ– ತಗೋ ನಿನ್ನ ನಂಬಿಕೆಯ ಸೆರೆಯಾಳನ್ನು; ತರತರದಿಂದೆ-ಸಾಲಾಗಿ; ಸೋಪಾನಂಮಾಡಿ–ಹಂತಗಳನ್ನಾಗಿಮಾಡಿ; ತೊಡೆಯನೇಱಿಸಿಕೊಂಡು ಬಾಯೊಳ್‌ತಂಬುಲಂಗೊಟ್ಟಂ-ತೊಡೆಯಮೇಲೆ ಕುಳ್ಳಿರಿಸಿಕೊಂಡು ಬಾಯಿಂದ ತಾಂಬೂಲವನ್ನು ಕೊಟ್ಟನು; ಇದು ಅತ್ಯಂತ ವಾತ್ಸಲ್ಯಸೂಚಕ. ಪಗೆವರ–ಹಗೆಗಳ; ಕಟ್ಟುವಟ್ಟಿರ್ದ-ಕಟ್ಟುಗಳಿಂದ ಬಿಗಿದ; ಎಳಿದಿಕ್ಕೆಗೆ–ದೀನತನಕ್ಕೆ.

೩೯. ಎಮ್ಮಂ ಪಿಡಿದೆೞೆವಂದಿನ–ನಮ್ಮನ್ನು ಹಿಡಿದು ಎಳೆಯುವ ಆ ದಿವಸದ, ನಿಮ್ಮಡಟುಗಳ್–ನಿಮ್ಮ ಪರಾಕ್ರಮಗಳು, ಈಗಳ್- ಈಗ, ಎತ್ತವೋದುವೊ–ಎಲ್ಲಿ ಹೋದುವೊ, ಪಿಡಿವಟ್ಟು-ಸೆರೆಯಾಗಿ, ಅಮ್ಮ-ಅಪ್ಪನೇ, ಬೞಲ್ದಿರೆ-ಆಯಾಸಗೊಂಡಿರೇ! ನಿಮ್ಮಳವಂ–ನಿಮ್ಮ ಶಕ್ತಿಯನ್ನು, ಕಂಡಿರೆ–ಕಂಡಿರಾ! ನಿಮಗಂ–ಅಂಥ ನಿಮಗೂ, ಈಗಳ್–ಈಗ, ಈ ಎಡರಾಯ್ತೇ–ಈ ತೊಂದರೆ ಉಂಟಾಯಿತೇ!

ವಚನ: ಸಾಯೆ ಸರಸಂ ನುಡಿದು–ಸಾಯುವಂತೆ ಸರಸವಾಗಿ ಹೇಳಿ; ಒಪ್ಪುಗೊಳ್–ಸ್ವೀಕರಿಸು; ದಾಡೆಗಳೆದ–ಹಲ್ಲುಕಿತ್ತ, ಕುಳಿಕನಂತೆಯುಂ–ಕುಳಿಕ ಎಂಬ ಮಹಾಸರ್ಪದ ಹಾಗೂ; ಗಳಿತ ಗರ್ವನಾಗಿ–ಸೋರಿಹೋದ ಗರ್ವವುಳ್ಳವನಾಗಿ; ನಯಜ್ಞನಾಗಿ–ನೀತಿಯನ್ನು ಬಲ್ಲವನಾಗಿ;

೪೦. ಧರ್ಮರಾಜನ ದೂತನು ತಂದ ಸುದ್ದಿ: ಕಿವಿಗೆ, ಇನಿದುಂ–ರುಚಿಯಾದದ್ದೂ, ನೃಪಂಗೆ-ದುರ್ಯೋಧನನಿಗೆ, ಹಿತಮುಂ-ಹಿತಕರವಾದದ್ದೂ, ನುಡಿ-ಮಾತು, ಎಲ್ಲಿಯುಂ ಇಲ್ಲ-ಎಲ್ಲಿಯೂ ಇಲ್ಲ; ಕೇಳು-ಕೇಳು, ಎನ್ನಕಂಡುದನೆ-ನಾನು ಕಂಡದ್ದನ್ನೇ, ಬಿನ್ನವಿಸುವೆಂ–ವಿಜ್ಞಾಪಿಸಿಕೊಳ್ಳುತ್ತೇನೆ; ಜೂದಿನೊಳ್–ಜೂಜಿನಲ್ಲಿ, ಉಕ್ಕೆವದಿಂದೆ–ಮೋಸದಿಂದ, ಗೆಲ್ದ–ಗೆದ್ದ, ನಿನ್ನವನಿತಳಂ–ನಿನ್ನ ರಾಜ್ಯಪ್ರದೇಶ, ಕರಾತಳದವೋಲ್–ಅಂಗೈಯಲ್ಲಿರುವುದರ ಹಾಗೆ, ತನಗಂ – ತನಗೂ, ಬೆಸಕೆಯ್ಯೆ – ಸೇವೆಮಾಡಲು, ಧಾರ್ತರಾಷ್ಟ್ರನಾ ಕೆ[ಯ್ತುಂ]–ದುರ್ಯೋಧನನ ಗೆಯ್ಮೆಯೂ, ಆ ನವನಯಂ–ಆ ಹೊಸ ರಾಜನೀತಿಯೂ, ಬೃಹಸ್ಪತಿಯುಮಂ-ಬೃಹಸ್ಪತಿಯನ್ನೂ, ಗೆಲೆವಂದುದು–ಗೆದ್ದಿತು, ಮೀರಿಸಿತು.

೪೧. ಮೊದಲೊಳ್–ಮೊದಲಲ್ಲಿ, ತಿಣ್ಣಂ–ತೀವ್ರವಾಗಿ, ಅದು, ಒಪ್ಪಿ–ಕೊಡುತ್ತೇನೆ ಎಂದು ಒಪ್ಪಿ, ತಪ್ಪಿದುದಂ–ಕೊಡದೆ ತಪ್ಪಿದುದನ್ನು, ಈಯೆಂದಟ್ಟಿದಂ–

ಕೊಡು ಎಂದು ದೂತನೊಡನೆ ಹೇಳಿಕಳಿಸಿದನು; ದಂಡನಟ್ಟದೆ–ಸೈನ್ಯವನ್ನು ಕಳಿಸದೆ, ಸಾಮರ್ಥ್ಯದಿನಟ್ಟಿದೋಲೆಗೆ–ಪರಾಕ್ರಮದಿಂದ ಕಳಿಸಿದ ಓಲೆಗೆ, ಮಹಾಪ್ರತ್ಯಂತ ಭೂಪಾಳರ್–ಎಲ್ಲೆಕಟ್ಟುಗಳಲ್ಲಿರುವ ರಾಜರು, ಅಟ್ಟಿದ–ಕಳಿಸಿಕೊಟ್ಟ, ಕಾಳಿಂಗ ಗಜೇಂದ್ರ ದಾನಜಲಧಾರಾಸಾರದಿಂ–ಕಳಿಂಗದೇಶದ ಆನೆಗಳ ಮದೋದಕದ ಧಾರೆಗಳ ಮಳೆಯಿಂದ, ಆ ಸುಯೋಧನ ನೃಪದ್ವಾರೋಪಕಂಠಂಗಳೊಳ್–ಆ ದುರ್ಯೋಧನನ ಅರಮನೆಯ ಬಾಗಿಲುಗಳ ಸಮೀಪ ಪ್ರದೇಶಗಳಲ್ಲಿ, ಒಳ್ಗಿಸಜರ್–ಒಳ್ಳೆಯ ಕೆಸರು, ಕುಂದಿದುದಿಲ್ಲ–ಕಡಿಮೆಯಾಗಲಿಲ್ಲ. ನೋಡ–ನೋಡು. "ಅನೇಕ ರಾಜನ್ಯರಥಾಶ್ವ ಸಂಕುಲಂ ತದೀಯಮಾಸ್ಥಾನನಿಕೇತನಾಜಿರಂ। ನಯತ್ಯಯುಗ್ಮಚ್ಛದಗಂಧಿರಾರ್ದ್ರತಾಂ ಭೃಶಂ ನೃಪೋಪಾಯನದಂತಿನಾಂ ಮದಃ (ಕಿರಾತಾರ್ಜುನೀಯ ೧-೧೬) ಎಂಬ ಪದ್ಯ ದೊಡನೆ ಇದನ್ನು ಹೋಲಿಸಿ.

೪೨. ಈ ಪದ್ಯ ಸರಿಯಾಗಿ ಅರ್ಥವಾಗುವುದಿಲ್ಲ: ರಿಪು–ವೈರಿ, ಕುಸಿದಂ-ಕುಗ್ಗಿದನು, ವಿಜಯದೆ–ಗೆಲುವಿನಿಂದ, ನಿದ್ರಿಸಿದ್ದಂ–ನಿದ್ದೆಹೋದನು; ಎಂದಿನಂದಮಂ ಕಂಡು–ಎಂದೂ ಇದ್ದ ರೀತಿಯನ್ನು ನೋಡಿ, ತಪ್ಪಿದಂ–ತಪ್ಪಿ ನಡೆದನು; ಆಳ್ವಿಸಕೆ–ಅಧೀನತೆಗೆ, ಅಗಿಯೆ–ಹೆದರಲು, ನುಡಿದಂ–ಹೇಳಿದನು; ಅವನಾ ಬೀಡಿನೊಳ್–ಆ ದುರ್ಯೋಧನನ ಪಾಳೆಯದಲ್ಲಿ, ಪಿಸುಣಂ–ಚಾಡಿಮಾತನ್ನು, ಅಣಂ ಕೇಳ್ದನಿಲ್ಲಂ–ಸ್ವಲ್ಪವನ್ನೂ ನಾನು ಕೇಳಲಿಲ್ಲ.

೪೩. ನೆಗಟ್ದ–ಪ್ರಸಿದ್ಧವಾದ, ಅರಿಗನ ಸಾಹಸಂ–ಅರ್ಜುನನ ಪರಾಕ್ರಮ, ಒರ್ಮೆಗೊರ್ಮೆ–ಒಂದೊಂದು ಸಲ, ಕೆಲದವರ ಮಾತಿನೊಳ್–ಮಗ್ಗುಲಲ್ಲಿರುವವರ ಮಾತಿನಲ್ಲಿ, ತನ್ನ, ಮನಂಬುಗೆ-ಮನವನ್ನು ಹೊಗಲು, ಮಂತ್ರಪದಕ್ಕೆ-ಮಂತ್ರಾಕ್ಷರಕ್ಕೆ, ಉರಗಂ–ಸರ್ಪ, ಸುಗಿವಂತೆವೊಲ್–ಹೆದರುವ ಹಾಗೆ, ಅಗಿದು ಸುಗಿದು–ಹೆದರಿ ಹೆದರಿ, ತಲೆಗರೆದಿರ್ಪಂ–ತಲೆಮರೆಸಿಕೊಂಡಿದ್ದಾನೆ. "ಕಥಾಪ್ರಸಂಗೇನ ಜನೈರುದಾಹೃತಾದನ ಸ್ಮೃತಾಖಂಡಲ ಸೂನುವಿಕ್ರಮಃ। ತವಾಭಿಧಾನಾತ್ ವ್ಯಥತೇ ನತಾನನಃ ಸದುಸ್ಸಹ ಸ್ಮಂತ್ರಪದಾದಿವೋರಗಃ (ಕಿರಾತಾರ್ಜುನೀಯ ೧-೨೪) ಎಂಬುದರೊಡನೆ ಹೋಲಿಸಿರಿ.

೪೪. ಅಱಿವು–ನನ್ನ ತಿಳಿವಳಿಕೆ, ನಾನು ತಂದಿರುವ ಸುದ್ದಿ, ಇಂತು–ಹೀಗೆ; ರಾಜಕಾರ್ಯದ-ರಾಜ ವ್ಯವಹಾರದ, ತೆಱಂ–ರೀತಿ, ಎನಗೆ ಅಱಿವಂತು–ನನಗೆ ತಿಳಿಯುವ ಹಾಗೆ, ಪೊಗ್ಗೆ–ಸಾಧ್ಯವೆ? ದೇವರ ಮುಂದೆ–ಪ್ರಭುಗಳ ಎದುರಿಗೆ, ಆಂ–ನಾನು, ಪಿರಿದುಂ ಗಟಿಪಲ್–ಹೆಚ್ಚಾಗಿ ಹರಟಲು, ಅಱಿಯೆಂ–ತಿಳಿಯೆನು; ಅಹಿತಂ–ಶತ್ರು, ಮಱಸೊಂದಿದನಲ್ಲಂ–ವಿಸ್ಮೃತನಾದವನಲ್ಲ, ಎಚ್ಚತ್ತಿರ್ದಂ–ಎಚ್ಚರಿಕೆಯಿಂದ ಇದ್ದಾನೆ. ಮಱೆ+ಸುಂದು = ಮಱಸುಂದು > ಮಱಸೊಂದು–ಪ್ರೈಮರೆದು ಮಲಗು.

**ವಚನ:** ಕಿರಾತದೂತಂ–ಬೇಡರವನಾದ ದೂತ; ಯಜ್ಞಸೇನ ತನೂಜೆ–ದ್ರೌಪದಿ.

೪೫. ನುಡಿವೊಡೆ–ಹೇಳುವ ಪಕ್ಷದಲ್ಲಿ, ರಾಜಕಾರ್ಯ ನಯಮೆತ್ತ–ರಾಜಕಾರ್ಯದ

ರೀತಿಯೆಲ್ಲಿ, ಅಬಲಾಜನದ-ಸ್ತ್ರೀಯರ, ಬುದ್ಧಿಯಿತ್ತ-ಬುದ್ಧಿಯೆಲ್ಲಿ? ಉಡುಪತಿ ವಂಶ-ಚಂದ್ರವಂಶಪಾವನಾದ ಧರ್ಮರಾಜನೇ, ನೋಡುವೊಡೆ-ನೋಡಿದರೆ, ಇದೊಂದು-ಇದು ಒಂದು, ಅಘಟಂ-ಅಸಾಂಗತ್ಯ; ಬಗೆವಾಗಳ್-ಆಲೋಚನೆ ಮಾಡಿದಾಗ, ಎಂತು ಕೇಳ್-ಹೇಗೆ ಕೇಳು; ನುಡಿಯದೆ-ಮಾತಾಡದೆ, ಕೆಮ್ಮಗಿರ್ದೊಡಂ-ಸುಮ್ಮನಿದ್ದರೂ, ಇರಲ್ಕೆ-ಇರುವುದಕ್ಕೆ, ಅಣಮಿಾಯದೆ-ಸ್ವಲ್ಪವೂ ಅವಕಾಶವನ್ನು ಕೊಡದೆ. ನಿಮ್ಮೊಳ್-ನಿಮ್ಮಲ್ಲಿ, ಎನ್ನುಮಂ-ನನ್ನನ್ನು ಕೂಡ, ಕುರುಕುಳರ್ಕಳ್-ಆ ಕೌರವರು, ಗೆಯ್ದ-ಮಾಡಿದ, ಅಪರಾಧ ಕೋಟಿಗಳ್-ಅನೇಕ ಅಪರಾಧಗಳು, ನುಡಿಯಿಸಿದಪ್ಪುವು-ಮಾತಾಡಿಸುತ್ತಿವೆ.

೪೬. ಆವಡವಿಗಳೊಳ್-ಯಾವ ಕಾಡುಗಳಲ್ಲಿ, ಪಣ್ದಲಂ-ಹಣ್ಣು ಹಂಪಲುಗಳು, ಆವಗಂ-ಯಾವಾಗಲೂ, ಎಂದರೆ ಸಮೃದ್ಧವಾಗಿ, ಒಳವು-ಇವೆಯೋ, ಅಲ್ಲಿಗೆ, ಅಱಸಿ-ಹುಡುಕಿಕೊಂಡು, ಪರಿಪರಿದು-ಓಡಿಓಡಿ, ಕರಂ-ವಿಶೇಷವಾಗಿ, ತಾವಡಿಗೊಳ್ವ-ಅಲೆದಾಡುವ, ಈ ಭೀಮನ, ಜೀವಸಮಿದು-ಈ ಪ್ರಯಾಸ, ಸಂಕಷ್ಟ, ನಿನ್ನ ಮನಮಂ-ನಿನ್ನ ಮನಸ್ಸನ್ನು, ಒಸಲಿಸಿತಿಲ್ಲಾ-ಕೆರಳುವಂತೆ ಮಾಡಲಿಲ್ಲವೇ? ತಾವಡಿ=(ತ) ತಾವಡಿ-ಪ್ರಯಾಣ, ಪೋರ್.

೪೭. ಪೋಗಿ-ಹೋಗಿ, ಸುಪರ್ವ ಪರ್ವತದ-ದೇವತೆಗಳ ಬೆಟ್ಟದ, ಮೇರು ಪರ್ವತದ, ಕಾಂಚನ ರೇಣುಗಳಂ-ಚಿನ್ನದ ಕಣಗಳನ್ನು, ಪರಾಕ್ರಮೋದ್ಯೋಗದಿಂ-ಶೂರಕಾರ್ಯಗಳಿಂದ, ಎತ್ತಿ ತಂದು-ಎತ್ತಿಕೊಂಡು ತಂದು, ನಿನಗಿತ್ತ-ನಿನಗೆ ಕೊಟ್ಟ, ಆದಟಂ-ಶೂರನಾದ ಅರ್ಜುನನು, ಬಡಪಟ್ಟು-ಬಡವಾಗಿ, ಬೆಟ್ಟದೊಳ್-ಬೆಟ್ಟದಲ್ಲಿ, ಪೋಗಿತೊಟಲ್ದು-ಹೋಗಿ ಸುತ್ತಾಡಿ, ನಾರ್ಗಳಂ-ನಾರುಗಳನ್ನು, ಉಡಲ್ ತರುತಿರ್ದು-ಉಟ್ಟುಕೊಳ್ಳುವುದಕ್ಕಾಗಿ ತರುತ್ತಾ ಇದ್ದು, ಸಂಚಿತ ಶೌರ್ಯಧನಂ-ಒಟ್ಟು ಪರಾಕ್ರಮವೇ ಧನವಾಗಿರುವ, ಧನಂಜಯಂ-ಅರ್ಜುನ, ಆಗಳೆ-ಆಗಲೇ, ಎಲೆ-ಎಲೇ, ನಿನಗೆ, ಕೋಪಮಂ-ಕೋಪವನ್ನು, ಮಾಡಲಾರ್ತನಿಲ್ಲ-ಮಾಡಲು ಶಕ್ಯನಾಗಲಿಲ್ಲವೆ?

೪೮. ಕಾಯಕ್ಲೇಶದಿಂ-ದೇಹಾಯಾಸದಿಂದ, ಅಡವಿಯ-ಕಾಡಿನ, ಕಾಯುಂ ಪಣ್ಣುಮಂ-ಕಾಯನ್ನೂ ಹಣ್ಣನ್ನೂ, ಉದಿರ್ಚಿ-ಉದಿರಿಸಿ, ತಿಂದು, ಅಗಲದೆ-ಅಲುಗಾಡದೆ, ಬಿಡದೆ, ನಿಂದ-ನಿಂತುಕೊಂಡಿರುವ, ಈ ಯಮಳರ್-ಈ ನಕುಲಸಹದೇವರು, ಆವತೆಱದಿಂ-ಯಾವರೀತಿಯಿಂದಲೂ, ಸನ್ನಿಕಾಜನ-ಸತ್ಯವಂತನಾದ, ನಿನ್ನ ಮನಮಂ-ಮನವನ್ನು, ನೋಯಿಸರಯ್-ನೋಯಿಸಲಿಲ್ಲವೇ?

೪೯. ಆ ದುಶ್ಶಾಸನನಿಂದೆ-ಆ ದುಶ್ಶಾಸನನಿಂದ, ಎನಗಾದ-ನನಗುಂಟಾದ, ಪರಾಭವಮುಂ-ಅವಮಾನವನ್ನು, ಏನುಮಂ ಬಗೆಯದೊಡೆ-ಏನನ್ನೂ ಲೆಕ್ಕಿಸದಿದ್ದರೆ, ಇಂತು-ಹೀಗೆ, ತೊವಲ್ನಾರುಂ-ತೊಗಲು ನಾರುಗಳು, ಆದರಮೆ-ಆದರಕ್ಕೆ ಪಾತ್ರವಾಯಿತೆ? ಅನಾದರದೇಂ-ಈ ಅನಾಸಕ್ತಿ, ಅನಾದರ, ಏನು? ನಿನ್ನ ಮನಕ್ಕೆ-ನಿನ್ನ ಮನಸ್ಸಿಗೆ, ಚಿಂತೆಯುಮಿಲ್ಲಾ-ಚಿಂತೆ ಕೂಡ ಇಲ್ಲವೇ?

೫೦. ಎಮ್ಮಯ್ವರ–ನಾವು ಐದುಜನರ, ಜೇವಸಮಂ–ಕಷ್ಟವನ್ನು, ನೀಂ–ನೀನು, ಮನದೊಳ್–ಮನಸ್ಸಿನಲ್ಲಿ, ನೆನೆಯೆಯಪ್ಪೊಡಂ–ನೆನೆಯುವುದಿಲ್ಲವಾದ ಪಕ್ಷದಲ್ಲಿ, ಮರುಳೆ–ಮರುಳನೆ, ನೀಂ–ನೀನು, ನಿನ್ನಿರವಂ–ನಿನ್ನ ಸ್ಥಿತಿಯಂ, ಬಗೆಯಂದೆ–ಲೆಕ್ಕಿಸದೆ, ಅಂತು–ಹಾಗೂ, ಘುಮ್ಮೆಂಬಡವಿಯೊಳಡಂಗಿ–ಘುಮ್ಮೆನ್ನುವ ಕಾಡಿನಲ್ಲಿ ಅಡಗಿಕೊಂಡು, ಚಿಂತಿಸುತಿರ್ಪ–ಯೋಚನೆ ಮಾಡುತ್ತಿರುವೆಯೋ ?

೫೧. ಶಮಮನೆಕೆಯ್ಕೊಳ್ವೊಡೆ–ಶಾಂತಿಯನ್ನೇ ಸ್ವೀಕರಿಸುವ ಪಕ್ಷದಲ್ಲಿ, ಬಿಲ್ಲುಮಂಬುಮಂ-ಬಿಲ್ಲುಬಾಣಗಳನ್ನು, ಬಿಸುಟು-ಬಿಸಾಡಿ, ತಪಕೆನೀಂಬಗೆವೊಡೆ–ತಪಸ್ಸನ್ನು ನೀನು ಬಯಸುವ ಪಕ್ಷದಲ್ಲಿ, ವಿಕ್ರಮಮಂ-ಪ್ರತಾಪವನ್ನು, ಪಗೆಯಂ ದ್ವೇಷವನ್ನು, ಕಿಡಿಸುವ–ಹಾಳುಮಾಡುವ, ಶಮದಿಂ–ಶಾಂತಿಯಿಂದ ; ಸಿದ್ಧಿ-ಸಿದ್ಧಿಯು, ಮೋಕ್ಷವು, ಮುನಿಗಾಯ್ತು–ಋಷಿಗೆ ಆಯಿತು ; ಭೂಪತಿಗಾಯ್ತೇ–ರಾಜನಿಗಾಯಿತೇ ?

೫೨. ತಪ್ಪುಮನೆ–ತಪ್ಪನ್ನೇ, ನುಡಿಯೆಂ–ಹೇಳೆನು, ಎಂಬುದಿದು–ಎಂಬ ಈ ಮಾತು, ಒಪ್ಪದು–ಒಪ್ಪುವುದಿಲ್ಲ ; ಅಹಿತರ್–ವೈರಿಗಳು, ನಿನಗೆ–ನಿನ್ನ ವಿಷಯದಲ್ಲಿ ; ತಪ್ಪಿರ್ದರ್–ತಪ್ಪು ಮಾಡಿದ್ದಾರೆ ; ಅವರ್ ತಪ್ಪಿದ ಬ ಕ್ಕೆ–ಅವರು ತಪ್ಪುಮಾಡಿದ ಮೇಲೆ, ತಪ್ಪಿದ–ನೀನು ತಪ್ಪು ಮಾಡಿದ, ತಪ್ಪು–ಸ್ಖಲನವು, ನನ್ನಿಗೆ–ಸತ್ಯಕ್ಕೆ, ಒಪ್ಪಮಲ್ಲದ–ಒಪ್ಪಿಗೆಯಾಗದ, ತಪ್ಪೇ–ಸ್ಖಲನವೇ, ಏಂ ಗಳ–ಏನು, ದಿಟವಾಗಿಯೂ !

ವಚನ : ಜೆಂಬಲಂಬಾಯ್ತಂತೆ–ಜೆಂಬಲವಾಗಿ ಬರುವ ಹಾಗೆ ;

೫೩. ದ್ರೌಪದಿ–ದ್ರೌಪದಿಯು, ಪೆಜತಂ ನುಡಿಯದೆ–ಬೇರೇನನ್ನೂ ಹೇಳದೆ, ತಕ್ಕುದನೆ–ಯೋಗ್ಯವಾದುದನ್ನೇ, ನುಡಿದಳ್–ಹೇಳಿದಳು ; ಕೇಳಿಮಿಂ ಕೇಳದಿರಿಂ ಕೇಳಿರಿ ಅಥವಾ ಕೇಳದಿರಿ ; ಇಂ ನುಡಿಯಲ್–ಇನ್ನು ಮಾತಾಡಲು, ಎಡೆಯಿಲ್ಲ-ಅವಕಾಶವಿಲ್ಲ ; ಅವನಿಪತೀ – ರಾಜ ಧರ್ಮಜನೇ, ಎನ್ನ ಮನದ ಮುಳಿಸು – ನನ್ನಮನದ ಕೋಪ, ನಿಮ್ಮಂ–ನಿಮ್ಮನ್ನು, ನುಡಿಯಿಸಿದಪ್ಪುದು–ಮಾತಾಡಿಸುತ್ತಿದೆ. ಎಂದರೆ ನಿಮ್ಮ ವಿಷಯವಾಗಿ ಕಟುವಾಗಿ ಮಾತಾಡಲು ನನ್ನ ಕೋಪ ಪ್ರೇರಿಸುತ್ತಿದೆ.

೫೪. ನಾಲ್ಕುಂ ನೃಪವಿದ್ಯೆಯುಂ–ಸಾಮ ದಾನ ದಂಡ ಭೇದಗಳೆಂಬ ನಾಲ್ಕು ರಾಜವಿದ್ಯೆಗಳನ್ನೂ, ಆಡಲ್ ಕಲ್ತುಂ-ಆಡಲು ಕಲಿತುಕೊಂಡೂ, ನೃಪ–ರಾಜನೇ, ನೆಱೆಯೆ – ಪೂರ್ಣವಾಗಿ, ಕಲ್ತಿಯಿಲ್ಲಾಗದೆ – ಕಲಿತವನಾಗಲಿಲ್ಲವಲ್ಲವೆ ? ನೆಲನಂ-ರಾಜ್ಯವನ್ನು, ಸೋಲಲ್ಕೆ-ಸೋಲುವುದಕ್ಕೆ. ದೊರೆಯೆ-ತಕ್ಕುದೆ, ಉಚಿತವೆ : ದೇಶ್ವು-ದೇಶವನ್ನು, ವಲ್ಕಲ ವಸನಕ್ಕೆ–ನಾರು ಮಡಿಗೆ, ಅಂತ್ರದು–ಒದ್ದುದು, ಪೆಂಪೇ–ಹಿರಿಮೆಯೇ ?

೫೫. ನನ್ನಿಗೆ–ಸತ್ಯಕ್ಕಾಗಿ, ದಾಯಿಗಂಗೆ–ದಾಯಾದಿಗೆ, ಎಳೆಯಂ-ಭೂಮಿಯನ್ನು, ಒಪ್ಪಿಸಿದೆಂ–ಒಪ್ಪಿಸಿ ಬಿಟ್ಟೆನು, ಗಡಿಂ–ಅಲ್ಲವೇನಿ, ಎಂಬಮಾತುಗಳ್-ಎನ್ನುವ ಮಾತುಗಳು, ನಿನ್ನವು–ನಿನ್ನವು, ನೀನು ಹೇಳುವ ಮಾತುಗಳು ; ಕೂರದರ್–ಪ್ರೀತಿಸದವರು, ವೈರಿಗಳು, ನೆಲನಂ–ರಾಜ್ಯವನ್ನು, ಒಟ್ಟಜೆಯಿಂ–ಪರಾಕ್ರಮದಿಂದ, ಕೊಳೆ–

ಕಿತ್ತು ಕೊಳ್ಳಲು, ಕೊಟ್ಟು–ಒಪ್ಪಿಸಿ, ಮುಟ್ಟುಗೆಟ್ಟು–ಮನೆಯ ಸಲಕರಣೆಗಳನ್ನು ನೀಗಿಕೊಂಡು, ಎಂದರೆ ನಿರುಪಾಯನಾಗಿ, ಇನ್ನುಂ–ಇನ್ನೂ, ಅರಣ್ಯದೊಳ್–ಕಾಡಿನಲ್ಲಿ, ಯಮನಂದನಂ–ಧರ್ಮರಾಜನು, ನಮೆದಪಂ–ನವೆಯುತ್ತಿದ್ದಾನೆ, ಎಂಬ, ಬನ್ನಮುಂ-ಅವಮಾನವೂ, ಮುನ್ನಮೆ ಸೋಂಕೆ-ಮೊದಲೇ ನಮ್ಮನ್ನು ಸೋಕಲು, ಎಲ್ಲರ ಪೇಳ್ವಮಾತುಗಳ್-ಎಲ್ಲರು ಹೇಳುವ ಮಾತುಗಳು, ಕಣ್ಮಲಿವ-ಕಣ್ಣು ಕೆರಳಿಸುವ, ಮಾತುಗಳ್–ಮಾತುಗಳಾಗಿವೆ. ಇಲ್ಲಿ ಒಟ್ಟಜೆ, ಮುಟ್ಟುಗಿಡು-ಇವಕ್ಕೆ ಕೊಟ್ಟಿರುವ ಅರ್ಥಗಳಿಗೆ ಖಚಿತವಾದ ನೈಘಂಟುಕ ಆಧಾರಗಳಾಗಲಿ ಪ್ರಯೋಗಾಧಾರಗಳಾಗಲಿ ಆವಶ್ಯಕ.

೫೬. ಕೃಷ್ಣೆಯ ಮುಡಿಯಂ ಪಿಡಿದೆಳೆವಲ್ಲಿಯೆ–ದ್ರೌಪದಿಯ ತುರುಬನ್ನು ಹಿಡಿದೆಳೆದಾಗಲೆ, ನಲಿಸಂದ–ಚೆನ್ನಾಗಿ ಪ್ರಸಿದ್ಧವಾದ, ಇರ್ಪತ್ತೊಂದು ತಲೆವರೆಗಂ–ಇಪ್ಪತ್ತೊಂದು ತಲೆಗಳವರೆಗೂ, ನಮಗೆ, ಪರಿಭವಂ–ತಿರಸ್ಕಾರ, ಸೋಲು; ಕೌರವರುಂ–ಕೌರವರು ಕೂಡ, ನಮ್ಮ ಬೀರಮುಂ–ನಮ್ಮ ಶೌರ್ಯವನ್ನು, ತಲೆ ಪಿಡಿದರ್–ಸೆರೆಹಿಡಿದುಕೊಂಡರು, ತಲೆಯಿಂದ ಹಿಡಿದುಕೊಂಡರು. ಇಲ್ಲಿ 'ಕೃಷ್ಣೆಯ ಮುಡಿಯುಂ ಪಿಡಿದೆಳೆವಲ್ಲಿಯೆ' ಎಂಬ ಪದ್ಯ ಭಾಗ ಪದ್ಯದ ಎರಡು ವಾಕ್ಯಗಳಿಗೂ ದೇಹಲೀದೀಪನ್ಯಾಯದಂತೆ ಅನ್ವಯಿಸುತ್ತದೆ; ಬಾಟ್ಲೆಪಿಡಿ ಎಂಬುದರೊಡನೆ 'ತಲೆವಿಡಿ'ಯನ್ನು ಹೋಲಿಸಬಹುದು.

೫೭. ಮಲೆ ಮಲೆದು–ಅತಿಉದ್ಧತನಾಗಿ, ಉರ್ಕಿಸೊರ್ಕಿ–ಉಬ್ಬಿ ಮದವೇರಿ, ಸಭೆಯೊಳ್–ಸಭೆಯಲ್ಲಿ, ಕುಲಪಾಂಸುಲಂ–ಕುಲಕ್ಕೆ ದೂಳಾದ ಎಂದರೆ ಕುಲಕಳಂಕನಾದ ದುಶ್ಶಾಸನನು, ಈ ಶಿರೀಷ ಕೋಮಲೆಯ–ಬಾಗೆಯ ಹೂವಿನಂತೆ ಲಲಿತಳಾದ ಈ ದ್ರೌಪದಿಯ, ವಿಲೋಲ ನೀಲಕಬರೀಭರಮುಂ–ತೂಗಾಡುತ್ತಿರುವ ಕಪ್ಪಾದ ಕೇಶಪಾಶವನ್ನು, ತೆಗೆವಾಗಳ್–ಎಳೆವಾಗ, ಅಲ್ಲಿ ಕೆಯ್ಯಲೆ ಸದೆದಂತೆ–ಅಲ್ಲಿ ಕೈಯಲ್ಲೇ ಹೊಡೆದ ಹಾಗೆ, ಬೆರಲಚ್ಚುಗಳ್–ಬೆರಳಿನ ಗುರುತುಗಳು, ಪತ್ತಿ–ಅಂಟಿಕೊಂಡು, ಅಚ್ಚಿಱಿದಂತೆ–ಮುದ್ರಿಸಿದ ಹಾಗೆ, ಕೊಂಕುಗಳ್–ಗುಂಗುರುಗಳು, ತಲೆನವಿರೊಂದಿ–ತಲೆ ಕೂದಲನ್ನು ಸೇರಿ, ನಮ್ಮ ಬೀರಮುಂ-ನಮ್ಮ ಶೌರ್ಯವನ್ನು, ಮೂದಲಿಸುವಂತೆವೊಲ್–ಹೀಯಾಳಿಸುವ ಹಾಗೆ, ಇರ್ದುವು–ಇವೆ.

೫೮. ಅಸಿತೇಂದೀವರ ಲೋಲಲೋಚನೆಯಂ-ಕನ್ನೈದಿಲೆಯ ವಿಲಾಸವನ್ನುಳ್ಳ ಕಣ್ಣುಗಳುಳ್ಳ ದ್ರೌಪದಿಯನ್ನು, ಅಂದು, ಅಂತು, ಆ ಸಭಾಮಧ್ಯದೊಳ್–ಆ ಸಭೆಯ ನಡುವೆ, ಪಸುವಂ ಪೊಡೆವವೋಲೆ–ಹಸುವನ್ನು ಹೊಡೆದಂತೆ, ಪೊಡೆಯುಂ–ಹೊಡೆದರೂ, ಅದಂ ಕಂಡು-ಅದನ್ನು ನೋಡಿ, ಅಂತೆ–ಹಾಗೆಯೇ, ಪಲ್ಗರ್ಚಿ–ಹಲ್ಲನ್ನು ಕಚ್ಚಿಕೊಂಡು, ನಿನ್ನಯ ನನ್ನಿಗೆ–ನಿನ್ನ ಸತ್ಯಕ್ಕಾಗಿ, ಸೈರಿಸಿದೆಂ–ಸಹಿಸಿಕೊಂಡೆನು, ಇನ್ನೆವರಂ–ಇದುವರೆಗೂ; ಆ ದು....ಪಾನಮುಂ: ಆ ದುಶ್ಶಾಸನ–ಆ ದುಶ್ಶಾಸನನ, ಉರಃಸ್ಥಲ–ಎದೆಯ ಪ್ರದೇಶದ, ಉಷ್ಣ–ಬಿಸಿಯಾದ, ಅಸೃಗ್ಜಲ ಪಾನಮುಂ–ರಕ್ತವೆಂಬ

ನೀರಿನ ಕುಡಿತವನ್ನು, ಬಯಸಿ–ಅಪೇಕ್ಷಿಸಿ, ಬಾಯ್ ತೇರ್ರ್ಪೆ–ಬಾಯಿ ತವಕ ಪಡುತ್ತಿರಲು ; ಸೈತಿರ್ಪೆನೇ–ಸುಮ್ಮನೆ ಇರುತ್ತೇನೆಯೇ? ಇಲ್ಲಿ 'ತೇರ್ರೈಸು'ವಿನ ಅರ್ಥ–ಅನಿರ್ದಿಷ್ಟ, ಚಪ್ಪರಿಸು ಎಂದು ಪಂ.ಭಾ.ಕೋ; ಇದರ ಭಾವನಾಮ ತೇರಯ್ಕೆ; "ಅಚ್ಚವಣ್ಪೇಱಿದ ದಾಳಿಂಬಂ ತದುಪ್ಯಾನದೊಳೊದವಿಸುಗುಂ ಬಾಯ್ಗೆ ತೇರಯ್ಕೆ ಯುರ್ವಂ" ಎಂದು ಅಗ್ಗಳನ ಪ್ರಯೋಗ (೧೦–೫೪).

**ವಚನ**: ತಳರಲ್ ಬಗೆದ–ಹೊರಡಲು ಯೋಚಿಸಿದ; ಮಸಗಿದ–ಕೆರಳಿದ; ಮಾಣಿಸುವಂತೆ–ನಿಲ್ಲಿಸುವ ಹಾಗೆ;

**೫೯.** ವ್ಯಾಸನ ಆಗಮನ: ಕನಕ....ವಳಯಂ: ಕನಕ ಪಿಸಂಗ–ಹೊಂಬಣ್ಣ ಕೆಂಪುಕಪ್ಪು ಬೆರಸಿದ ಬಣ್ಣದ, ತುಂಗ–ಎತ್ತರವಾದ, ಜಟಿಕಾವಳಯಂ–ಜಟೆಯ ಸಮೂಹವು, ಕುಡುಮಿಂಚಿನ–ಕೊಂಕುಮಿಂಚಿನ, ಓಳಿಯಂ–ಸಾಲನ್ನು, ನೆನೆಯಿಸೆ–ನೆನಪಿಗೆ ತಂದುಕೊಡಲು, ನೀಲ ನೀರದ ತನುಚ್ಛವಿ-ನೀಲಮೇಘದಂಥ ದೇಹಕಾಂತಿ, ಭಸ್ಮ ರಜೋವಿಲಿಪ್ತಂ–ವಿಭೂತಿಯ ದೂಳಿನಿಂದ ಬಳಿಯಲ್ಪಟ್ಟದ್ದು, ಅಂಜನಗಿರಿಯಂ-ಕಾಡಿಗೆ ಬೆಟ್ಟವನ್ನು, ಅಂಜನಾದ್ರಿಯನ್ನು, ಶರಜ್ಜಳಧರಂ–ಶರತ್ಕಾಲದ ಮೋಡ, ಕವಿದಂತಿರೆ-ಮುಚ್ಚಿಕೊಂಡಿರುವ ಹಾಗೆ, ಚೆಲ್ವನಾಳ್ದು-ಚೆಲುವನ್ನುಹೊಂದಿ, ಭೋಂಕನೆ-ಬೇಗನೆ, ನಭದಿಂದಂ-ಆಕಾಶದಿಂದ, ವೃದ್ಧಪರಾಶರಾತ್ಮಜಂ–ವೃದ್ಧಪರಾಶರನ ಮಗ ವ್ಯಾಸ, ಅಂದು, ಅಲ್ಲಿಗೆ, ಇೞಿದಂ–ಇಳಿದನು.

**ವಚನ**: ಪಟ್ಟಕ–ಹಾಸುಮಣೆ; ಲಲಾಟಪಟ್ಟಂ–ಹಣೆಯ ಪ್ರದೇಶವುಳ್ಳವನು; ಕರ್ಚಿ–ತೊಳೆದು; ಉತ್ತಮಾಂಗದೊಳ್–ತಲೆಯಲ್ಲಿ; ತಳೆದುಕೊಂಡಿರ್ದಾಗಳ್–ಚಿಮುಕಿಸಿಕೊಂಡಿದ್ದಾಗ; ಸಾಯಸಂಗಳ್ಗೆ–ಶ್ರಮಕಷ್ಟಗಳಿಗೆ; ಮನ್ಯುಮಿಕ್ಕು–ದುಃಖವು ಅತಿಶಯವಾಗಿ; ಕಣ್ಣನೀರಂ ನೆಗಪೆ–ಕಣ್ಣೀರನ್ನು ಸುರಿಸಲು; ಸಾಯಸ < (ಸಂ.) ಸಹಾಯಾಸ.

**೬೦.** ಮುನೀಶ್ವರಾ–ಋಷಿಶ್ರೇಷ್ಠನೇ, ಭವಚ್ಚರಣ ಪದ್ಮನಿರೀಕ್ಷಣದಿಂ-ನಿನ್ನ ಪಾದಕಮಲಗಳ ದರ್ಶನದಿಂದ, ಈಗಳ್–ಈಗ, ಎಮ್ಮ ವನವಾಸ ಪರಿಶ್ರಮಂ–ನಮ್ಮ ಅರಣ್ಯವಾಸದ ಆಯಾಸ, ನೀಗಿದುದು–ಕಳೆದುಹೋಯಿತು; ಆ ಸಾಗರ ಮೇಖಳಾ ವೃತಧರಿತ್ರಿಯಂ–ಆ ಕಡಲೆಂಬ ಒಡ್ಯಾಣದಿಂದ ಸುತ್ತುವರಿಯಲ್ಪಟ್ಟ ಭೂಮಿಯನ್ನು, ಈಗಳ್–ಈಗ, ಆಳ್ದೆವು–ಆಳಿದವರಾದೆವು; ಎಮ್ಮ ಹೃದ್ರೋಗಂ–ನಮ್ಮ ಹೃದಯದ ಬೇನೆ, ಈಗಳ್–ಈಗ, ಅಡಂಗಿತು–ಶಮನವಾಯಿತು; ಈಗಳ್–ಈಗ, ಅನೇಕ ಮಂಗಳ ಪರಂಪರೆಗಳ್–ಅನೇಕವಾದ ಶುಭಗಳ ಪರಂಪರೆಗಳು, ದೊರೆಕೊಂಡುವು–ಉಂಟಾದುವು; ಏನಾಗದೊ ಪೇೞ್–ಏನುತಾನೇ ಆಗುವುದಿಲ್ಲ, ಹೇಳು.

**೬೧.** ಆಪತ್ಪಯೋಧಿಯೊಳಗೆ–ಆಪತ್ತುಗಳೆಂಬ ಸಾಗರದಲ್ಲಿ, ಅತ್ಯಾಪತ್ತಿಂದೆ-ಅತಿಯಾದ ಅಪಾಯಗಳಿಂದ, ಅಳ್ಕಿಮುೞ್ಕಿ–ಶಕ್ತಿಗುಂದಿ ಮುಳುಗಿ. ನವೆವ–ನವೆದು ಹೋಗುತ್ತಿರುವ, ಎಮಗೆ–ನಮಗೆ, ಪಾಪಹರ-ಪಾಪವನ್ನು ಹೋಗಲಾಡಿಸುವವನೇ,

ನೀಮೆ–ನೀವೇ, ಶರಣ್–ಆಶ್ರಯ ; ಬಗೆದು–ಆಲೋಚಿಸಿ, ಎಮಗೆ–ನಮಗೆ, ಆಪತ್ಪ್ರತಿಕಾರಮಾವುದು – ಆಪತ್ತುಗಳ ನಿವಾರಣೆಯಾವುದೆಂಬುದನ್ನು, ಈಗಳೆ – ಈಗಲೇ, ಬೆಸಸಿಂ–ಅಪ್ಪಣೆಮಾಡಿರಿ.

**ವಚನ :** ಆಮುಂ–ನಾವೂ ; ಅಂತೆಂಪೆ–ಹಾಗೆಂದೇ, ಬಂದೆಪೆಂದು–ಬಂದೆವು ಎಂದು.

೬೨. ಉಂತೆ–ಸುಮ್ಮನೆ, ಸುರರ್ಗೆ-ದೇವತೆಗಳಿಗೆ, ಅಮೃತಮಂ-ಅಮೃತವನ್ನು, ಕಳಾಂತರದಿಂದೆ–ಷೋಡಶ ಕಲೆಗಳಿಂದ, ಇತ್ತು–ಕೊಟ್ಟು, ಅಸಿಯನಾದ–ಕೃಶನಾದ, ಚಂದ್ರನವೊಲ್–ಚಂದ್ರನಂತೆ, ಭೂಭರಮಂ–ರಾಜ್ಯವನ್ನು, ನನ್ನಿಗೆ–ಸತ್ಯಕ್ಕಾಗಿ, ದಾಯಿಗರ್ಗೆ–ದಾಯಾದಿಗಳಿಗೆ, ಇರದೆ ಇತ್ತು–ಇರದೆ ಕೊಟ್ಟು, ಎಡರೊತ್ತೆ-ವಿಘ್ನಗಳು ಆಮುಕುತ್ತಿರಲು, ಆಕ್ರಮಿಸಲು, ನೀನೆ ಧನ್ಯನಯ್-ನೀನೇ ಧನ್ಯನಾಗಿರುವೆ, ಅಲ್ತೇ–ಅಲ್ಲವೇ?

೬೩. ಕೂಸುತನದೊಳಾದೊಡಂ–ಮಗುವುತನದಿಂದಲಾದರೂ, ನೀಂ ಬೇಱೆ ಮಗೆ–ನೀನು ನಮಗೆ ಬೇರೆಯೇ, ಸುಯೋಧನನೇಂ ಬೇಱೆಯೆ–ದುರ್ಯೋಧನನು ಏನು ಬೇರೆಯೆ? ಇನ್ನೇನೆಂಬುದೊ–ಇನ್ನೇನನ್ನು ಹೇಳುವುದೋ ; ಅಯ್ವರೊಳಂ–ನಿಮ್ಮ ಅಯ್ದು ಜನರಲ್ಲಿ, ಪಂಬಲ್–ನನ್ನ ಹಂಬಲ, ಪಿರಿದು–ಹಿರಿದು ; ನಿಮ್ಮೊಳ್–ನಿಮ್ಮಲ್ಲಿ, ಗುಣಪಕ್ಷಪಾತಮುಪ್ಪುದು–ಗುಣಕ್ಕೆ ಪಕ್ಷಪಾತವಾಗುತ್ತಿದೆ, ಎಂದರೆ ನಿಮ್ಮ ಗುಣಕ್ಕೆ ನನ್ನ ಮೆಚ್ಚಿಗೆ.

**ವಚನ :** ವರ್ತನಮುಂ–ನಡೆವಳಿಕೆಯೂ, ಮೋಹಮನುಂಟು ಮಾಡೆ–ಪ್ರೀತಿಯನ್ನುಂಟು ಮಾಡಲು ;

೬೪. ಪನ್ನೆರಡು ವರುಷದವಧಿಯುಂ–ಹನ್ನೆರಡು ವರ್ಷಗಳ ಗಡುವೂ, ಇನ್ನೆಱೆಯಲ್ ಬಂದುದು–ಇನ್ನು ಪೂರ್ತಿಯಾಗಲು ಬಂತು ; ಅಹಿತಂ–ವೈರಿ, ಇಳೆಯಂ–ರಾಜ್ಯವನ್ನು, ಕುಡನ್–ಕೊಡನು ; ಕಾಳೆಗಂ–ಯುದ್ಧವು, ಆಸನ್ನಂ–ಸಮೀಪಗತವಾಗಿದೆ ; ಪನ್ನಗಕೇತನನ–ಸರ್ಪಧ್ವಜನ, ದುರ್ಯೋಧನನ, ಚಲದ-ಛಲದ, ಕಲಿತನದ–ಪರಾಕ್ರಮದ, ಅಳವಂ–ಪ್ರಮಾಣವನ್ನು, ಅಱಿಯಿರೆ–ನೀವು ತಿಳಿಯಿರಾ?

೬೫. ಪರಶುರಾಮನಂ-ಪರಶುರಾಮನನ್ನು, ಅಂಜಿಸಿದ- ಹೆದರಿಸಿದ, ಬೀರಕ್ಕೆ–ಪ್ರತಾಪಕ್ಕೆ, ಆಗರಮಾದ-ಆಕರವಾದ, ನದೀಜಂ-ಭೀಷ್ಮನು, ಏ ದೊರೆಯಂ-(ಇತರರಿಗೆ) ಸಮಾನನೇ? ಎಂದರೆ ಮೀರಿದವನು ಎಂದರ್ಥ ; ಕುಂಭ ಪ್ರೋದ್ಭವಂ–ದ್ರೋಣನು ಏ ದೊರೆಯಂ ಗಳ–ಏನು ಸಮಾನನೇ ದಿಟವಾಗಿಯೂ? ಆತನ ಪುತ್ರಂ–ಅವನ ಮಗನಾದ ಅಶ್ವತ್ಥಾಮನು, ಏ ದೊರೆಯಂ–ಏನು ಸಮಾನನೇ? ಕೃಪಂ–ಕೃಪಾಚಾರ್ಯನು, ಏ ದೊರೆಯಂ–ಏನು ಸಮಾನನೇ? ಅಂತು, ಆ, ಪಾಱಿಯೊಳ್–ಕ್ರಮದಲ್ಲಿ, ಧರ್ಮದಲ್ಲಿ, ಅಂಕದ–ಹೆಸರುವಾಸಿಯಾದ, ಕರ್ಣನ್–ಕರ್ಣನು, ಏ ದೊರೆಯಂ–ಏನು

ಸಮಾನನೇ? ಇಂತಿವರ್–ಹೀಗೆ ಇವರು, ಒರ್ಬರಿನೊರ್ಬರ್–ಒಬ್ಬರಿಗಿಂತ ಒಬ್ಬರು, ಗರ್ವಿತರ್–ದರ್ಪಿಷ್ಠರಾದವರು, ಅಗ್ಗಳಂ–ಶ್ರೇಷ್ಠರಾದವರು, ಅಲ್ಲರೇ–ಅಲ್ಲದವರೇ; "ನಭಭಮಂಸಸಲಂಗಮುಮೊಪ್ಪಲ್ ಪೇೞ್ವಪರಾ ಅನವದ್ಯಮಂ"

೬೭. ಅವರ್ಗಳ–ಆ ಭೀಷ್ಮಾದಿಗಳ, ಮುಳಿಸುಗಳುಂ–ಕೋಪಗಳೂ, ಮುಳಿದು ತುಡುವ–ಮುಳಿದು ಬಿಲ್ಲಿನಲ್ಲಿ ತೊಡುವ, ದಿವ್ಯೇಷುಗಳುಂ–ದಿವ್ಯಾಸ್ತ್ರಗಳೂ, ಪ್ರಳಯ ದುರಿ–ಪ್ರಳಯಾಗ್ನಿ, ಕಾಳಕೂಟದ ಗುಳಿಗೆ–ಕಾಳಕೂಟವೆಂಬ ನಂಜಿನ ಗುಳಿಗೆ, ಪುರಾಂತಕ ಲಲಾಟನೇತ್ರಾನಳನ–ಶಿವನ ಹಣೆಗಣ್ಣಿನ ಅಗ್ನಿಯು, ಒಂದಳವಿಗಂ–ಒಂದು ಪ್ರಮಾಣಕ್ಕಿಂತ, ಅಗ್ಗಳಂ–ಅತಿಶಯವಾದದ್ದು,

**ವಚನ.** ಎಯ್ದಿಸಿ ಬರ್ಪುದು–ತಲಪಿಸಿ ಬರುವುದು; ಪಯೋಧರಪಥಕ್ಕೆ–ಗಗನಮಾರ್ಗಕ್ಕೆ; ಒಗೆದಂ–ನೆಗೆದನು; ಬೆಸಕೇಳ್ವೆಂ–ಅನುಜ್ಞೆಯನ್ನು ಕೇಳುತ್ತೇನೆ.

೬೮. ಮೆಯ್ಸೊಕಮಂ–ದೇಹದ ಸುಖವನ್ನು, ಬಗೆಯದೆ–ಆಲೋಚಿಸದೆ, ಪಗೆವರ–ಹಗೆಗಳ, ಕಡುವೆರ್ಚ್ಚಂ–ಅತಿಶಯವಾದ ಹೆಚ್ಚಳವನ್ನು, ಬಗೆ–ಚಿಂತನೆ ಮಾಡು; ಎನ್ನ ಪೂಣ್ಬ ಪೂಣ್ಕೆಯುಂ–ನಾನು ಶಪಥಮಾಡಿದ ಪ್ರತಿಜ್ಞೆಯನ್ನು, ಬಗೆ–ಚಿಂತಿಸು; ಮುನಿಯ ಮಂತ್ರಪದಮಂ–ಋಷಿಯು ಕೊಟ್ಟ ಮಂತ್ರಾಕ್ಷರಗಳನ್ನು, ಬಗೆ–ಭಾವಿಸು; ಪಾರ್ಥಾ–ಅರ್ಜುನನೇ, ನಿನ್ನ ಬಗೆದ–ನೀನು ಚಿಂತಿಸಿದ, ಬಗೆಯೊಳ್–ರೀತಿಯಲ್ಲಿ, ಕೂಡುಗೆ–ಸೇರಲಿ, ಸಿದ್ಧಿಯಾಗಲಿ.

**ವಚನ:** ಮನಪೆಜಕಂ–ಮನಸ್ಸಿನ ಪ್ರೀತಿ; ಪರಿಯೆ–ಓಡಲು;

೬೯. ಬಳ್ವಳ ನೀಳ್ದ–ತುಂಬ ದೀರ್ಘವಾದ, ಕಣ್ಮಲರ–ಹೂವಿನಂತಿರುವ ಕಣ್ಣುಗಳ, ತಳ್ತ–ಸೇರಿದ, ಎಮೆಯಿಂ–ರೆಪ್ಪೆಗಳಿಂದ, ಕರೆಗಣ್ಮೆ–ಉಕ್ಕಿ, ಬೆಳ್ಗಡಲ್ಗಳ್–ಬಿಳಿಯಕಾಂತಿಯೆಂಬ ಕಡಲುಗಳು, ಪರಿಯಲ್ಕಂ–ಹರಿಯುವುದಕ್ಕೂ, ಆಟಿಸಿದೊಡೆ–ಬಯಸಿದರೆ, ಒಯ್ಯನೆ–ಮೆಲ್ಲಗೆ, ಮಂಗಳ ಭಂಗ ಭೀತಿಯುಂ–ಶುಭವು ಹಾಳಾಗುವ ಹೆದರಿಕೆಯನ್ನು, ತಳ್ವದೆ–ತಡಮಾಡದೆ, ಮಾಡೆ–ಮಾಡಲು, ಬಾಷ್ಪ ಜಳಮಂ ಕಳೆದು–ಕಣ್ಣೀರನ್ನು ಒರಸಿ ತೆಗೆದು, ಅಪ್ಪುಜನೀಯೆ–ಚುಂಬನವನ್ನು ಕೊಡಲು, ಸಂಬಳಂ ಗೊಳ್ವವೊಲ್–ಬುತ್ತಿಯನ್ನು ಕಟ್ಟಿ ತೆಗೆದುಕೊಳ್ಳುವ ಹಾಗೆ, ಆ ತಳೋದರಿಯು–ಆ ಕೃಶಾಂಗಿಯಾದ ದ್ರೌಪದಿಯು, ಚಿತ್ತಮಂ–ಮನಸ್ಸನ್ನು, ಅರ್ಜುನಂ–ಅರ್ಜುನನು, ಇೞ್ಕುಳಿಗೊಂಡಂ–ಎಳೆದುಕೊಂಡನು. (ಸಂ) ಶಂಬಲ < ಸಂಬಳ; ಬಳ್ವಳ=(ತ)ವಳ್ (ಅತಿಶಯ)+ವಳ್–ವಳ್ವಳ್, ವಳ್ವಳಂ. ಕರೆಯುಂ–ದಡವನ್ನು+ಕಣ್ಮು, ಕಣ್ಮು–ತೊಳೆ=ಕರೆಗಣ್ಮು, ಎಂಬುದರಿಂದ ತುಂಬು ಪ್ರವಾಹ ಉಕ್ಕೇರುವುದು ಎಂದಾಗುತ್ತದೆ.

**ವಚನ:** ಯಾತ್ರೋದ್ಯುಕ್ತನಾಗಿ-ಯಾತ್ರೆ ಹೊರಡುವ ಕೆಲಸದಲ್ಲಿ ತೊಡಗಿದವನಾಗಿ; ಪೆಗಲನೇಱು–ಹೆಗಲನ್ನು ಹತ್ತಿ.

**೭೦.** ಶರತ್ಕಾಲದ ವರ್ಣನೆ:-ಘನಾಗಮಂ-ಮೇಘಗಳು ಬರುವುದು, ಮೊದಲ್ಗಿಡೆ–ಮೂಲದಲ್ಲಿ ನಿಂತುಹೋಗಲು, ಶರದಾಗಮಂ–ಶರತ್ಕಾಲದ ಬರವು, ಸಮಸ್ತ ಮಹೀ

ವಿಭಾಗಮುಂ–ಸಕಲ ಭೂಮಂಡಲವನ್ನು, ನೆಱೆ ಪರ್ವೆ–ಪೂರ್ತಿಯಾಗಿ ಹರಡಲು, ಕಡವಿನ ಕಂಪಡಂಗಿದುದು–ಕದಂಬ ಪುಷ್ಪಗಳ ಕಂಪು ಅಡಗಿತು; ಜಾದಿಯ ಕಂಪೊದ ವಿತ್ತು – ಜಾಜಿ ಹೂವಿನ ಸುಗಂಧವುಂಟಾಯಿತು; ಸೋಗೆಯುರ್ಕು – ನವಿಲಿನ ವಿಜೃಂಭಣೆ, ಉಡುಗಿದುದು – ಕುಗ್ಗಿತು, ಅಂಚೆಯುರ್ಕು – ಹಂಸಗಳ ಉಬ್ಬಾಟ, ಪೊಸತಾಯ್ತು–ಹೊಸದಾಯಿತು; ಮುಗಿಲ್ಗಳ ಕರ್ಪು–ಮೋಡಗಳ ಕರಿಬಣ್ಣ, ಪೀನಂ–ವಿಶೇಷವಾಗಿ, ಓಗಡಿಸಿದುದು–ಹಿಂಜರಿದು ಹೋಯಿತು; ಇಂದುಮಂಡಲದ–ಚಂದ್ರ ಬಿಂಬದ, ಕರ್ಪೆಸೆದತ್ತು–ಕಪ್ಪುಮಚ್ಚೆ ಶೋಭಿಸಿತು; (ಸಂ) ಅಪಕೃಷ್ಟ>(ಪ್ರಾ) ಓಕ್ಕಡ್ಡ>ಓಗಡ+ಇಸು=ಓಗಡಿಸು.

೨೦. ಅಳಿ–ದುಂಬಿಗಳು, ಬಿರಿದಿರ್ದ–ಅರಳಿದ್ದ, ಜಾದಿಯೊಳೆ–ಜಾಜಿಹೂವಿನಲ್ಲಿಯೆ, ಪಲ್ಮೊರೆಯುತ್ತಿರೆ-ಜೇಂಕರಿಸುತ್ತಿರಲು; ಹಂಸೆ-ಹಂಸಪಕ್ಷಿ, ಪೂತ ಪೂಗೊಳದೊಳೆ–ಹೂವುಬಿಟ್ಟ ಹೂವಿನ ಕೊಳಗಳಲ್ಲಿಯೇ, ರಾಗಿಸುತ್ತಿರೆ–ನಲಿಯುತ್ತಿರಲು; ಶುಕಾವಳಿ–ಗಿಣಿಗಳ ಸಮೂಹ, ಬಂಧುರ ಗಂಧಶಾಳಿ ಸಂಕುಳದೊಳೆ–ರಮ್ಯವಾದ ಸುಗಂಧದ ಬತ್ತದ ತೆನೆಗಳಲ್ಲಿಯೆ, ಪಾಯ್ದುವಾಯ್ದು–ನುಗ್ಗಿನುಗ್ಗಿ, ನಲಿಯುತ್ತಿರೆ–ಸಂತೋಷಪಡುತ್ತಿರಲು, ಸಾರೆ ಚಕೋರಂ–ಸಮೀಪದ ಚಕೋರಪಕ್ಷಿ, ಇಂದು ಮಂಡಳಗಳಿತಾಮೃತಾಸವಮಂ–ಚಂದ್ರಬಿಂಬದಿಂದ ಸುರಿಯುವ ಅಮೃತವೆಂಬ ಮಧುವನ್ನು, ಉಂಡು, ಉಸಿರುತ್ತಿರೆ–ಶಬ್ದಮಾಡುತ್ತಿರಲು, ಶಾರದಂ–ಶರತ್ಕಾಲವು, ಚೆಲ್ವು–ಸುಂದರವಾಗಿದೆ.

೨೧. ಪುಳಿಯೊಳ್–ಹುಳಿನೀರಿನಲ್ಲಿ, ಕರ್ಚಿದ–ತೊಳೆದ, ಬಾಳ–ಕತ್ತಿಯ, ಬಣ್ಣಮನೆ–ನೀಲಿ ಬಣ್ಣವನ್ನೇ, ಪೋಲ್ವ–ಹೋಲುವ, ಆಕಾಶಂ–ಆಕಾಶವು; ಆಕಾಶ ಮಂಡಳಮಂ–ಆಕಾಶ ಪ್ರದೇಶವನ್ನು, ಪರ್ವಿದ ಬೆಳ್ಮುಗಿಲ್–ಹಬ್ಬಿದ ಬಿಳಿ ಮೋಡ; ಮುಗಿಲ ಬೆಳ್ಪು-ಮೋಡಗಳ ಬಿಳುಪು, ಒಳ್ಪೊಕ್ಕು-ಒಳಹೊಕ್ಕು, ತಳ್ಪೊಯ್ಯೆ-ತಟ್ಟಲು, ಬಳ್ಪಳ–ಅತಿಶಯವಾಗಿ, ನೀಳ್ದಿರ್ದ–ದೀರ್ಘವಾಗಿರುವ, ದಿಶಾಳಿ–ದಿಕ್ಕುಗಳ ಸಮೂಹ; ಶಾಳಿವನಗಂಧಾಂಧ-ಬತ್ತದ ಗದ್ದೆಯ ಸುಗಂಧದಿಂದ ಸೊಕ್ಕಿದ, ದ್ವಿರೇಫಾಳಿ-ದುಂಬಿಗಳ ಸಮೂಹ; ಕಣ್ಗೊಳಿಸುತ್ತೆ–ಕಣ್ಣನ್ನು ಆಕರ್ಷಿಸುತ್ತ, ಶರದಂ–ಶರತ್ಕಾಲ, ಲೋಕಕ್ಕೆ ಕಣ್‌ಬರ್ಪಿನಂ-ಲೋಕಕ್ಕೆ ಕಣ್ಣು ಬರುತ್ತಿರಲು, ಒರ್ಮೆಯೆ–ಕೂಡಲೇ, ಅಂದು–ಆ ದಿವಸ, ಆಗ, ಬಂದುದು – ಬಂತು. ಇಲ್ಲಿ ಮುಕ್ತಪದ ಗ್ರಹಣಾಲಂಕಾರವಿದೆ. "ಪುಳಿಯೊಳ್ ಕರ್ಚಿದ ಬಾಳಬಣ್ಣಂ" ಎಂಬ ಪ್ರತಿಮೆಯನ್ನು 'ಹರ್ಷಚರಿತೆ'ಯ 'ಧೌತಾಸಿನಿಭ ನಭಸಿ' ಎಂಬುದರೊಡನೆ ಹೋಲಿಸಿ. ಶರತ್ಕಾಲವರ್ಣನೆಯ ಈ ಮೂರು ಪದ್ಯಗಳು ನೈಸರ್ಗಿಕ ಸೌಂದರ್ಯದಿಂದ ಹೃದ್ಯವಾಗಿವೆ; ವಿಗ್ರಹವನ್ನು ಮಾಡಿ ಕೊನೆಯಲ್ಲಿ ಅದರ ಕಣ್ಣುಗಳನ್ನು ಬಿಡಿಸಿದಾಗ ಅದು ಸಚೇತನವಾಗುವ ಹಾಗೆ ಶರತ್ಕಾಲ ಲೋಕದ ಕಣ್ಣಾಗಿ ಸಪ್ರಾಣಿಸಿತು.

**ವಚನ:** ಬರವಿಂಗೆ–ಆಗಮನಕ್ಕೆ; ಉತ್ಕಂಠಿತ ಹೃದಯನಾಗಿ–ವಿಹ್ವಲವಾದ

ಮನಸ್ಸುಳ್ಳವನಾಗಿ ; ನೀರದಂಗಳ್–ಮೋಡಗಳು ; ತೆರಳ್ದು–ಹೋಗಿ, ಒಟ್ಟಿ–ರಾಶಿಯಾಗಿ ; ನೀಹಾರಗಿರಿಯಂ–ಹಿಮವತ್ಪರ್ವತವನ್ನು ;

೭೨. ವಿದಳ....ಧವಳಂ :–ವಿದಳತ್ – ಬಿರಿಯುತ್ತಿರುವ, ಕುಂದ – ಕುಂದ ಪುಷ್ಪದಂತೆ, ಶಶಾಂಕ–ಚಂದ್ರನಂತೆ, ಶಂಖ–ಶಂಖದಂತೆ, ಧವಳಂ–ಬೆಳ್ಳಗಿರುವ ; ಗಂಧೇಭ....ಕಂದರಂ : ಗಂಧೇಭ–ಸೊಕ್ಕಾನೆಗಳ, ದಾನಾಂಬು–ಮದಜಲದಿಂದ, ಪೂರ್ಣ–ತುಂಬಿದ, ದರೀ–ದರಿಗಳಿಂದ ಕೂಡಿದ, ಸುಂದರ–ರಮ್ಯವಾದ, ಕಂದರಂ–ಕಣಿವೆಗಳನ್ನುಳ್ಳ ; ಮೃಗ....ಗುಹಂ : ಮೃಗಪತಿ–ಸಿಂಹದ, ಪ್ರಧ್ವಾನ–ಅತಿಶಯವಾದ ನಾದದಿಂದ, ಗರ್ಜತ್ – ಗರ್ಜನೆಮಾಡುತ್ತಿರುವ, ಗುಹಂ – ಗುಹೆಗಳನ್ನುಳ್ಳ, ಮದಿರೋ....ಗೀತಂ : ಮದಿರೋನ್ಮತ್ತ–ಮದ್ಯದಿಂದ ಅಮಲೇರಿದ, ನಿಳಿಂಪ-ದೇವತೆಗಳ, ಕಿಂಪುರುಷ–ಕಿಂಪುರುಷರ, ಕಾಂತಾ–ಸ್ತ್ರೀಯರಿಂದ, ಆರಬ್ಧ–ಆರಂಭಿಸಲ್ಪಟ್ಟಿರುವ, ಸಂಗೀತಂ–ಸಂಗೀತವನ್ನುಳ್ಳ ; ಸುರಸಿದ್ಧ ದಂಪತಿ ರತಿ ಶ್ರೀರಮ್ಯ–ದೇವತೆಗಳ ಸಿದ್ಧರ ದಂಪತಿಗಳ ರತಿಕ್ರೀಡೆಯ ಸಿರಿಯಿಂದ ರಮಣೀಯವಾಗಿರುವ, ಹೈಮಾಚಳಂ–ಹಿಮವತ್ಪರ್ವತವು, ಒಪ್ಪಿದುದಲ್ತೇ–ಸೊಗಸಾಗಿರುವುದಲ್ಲವೇ ?

೭೩. ಲಳಿತೋತ್ಸವ ಧ್ವಜಾಂಶುಕ ವಿಳಸನಮಂ–ಲಲಿತವಾದ ಉತ್ಸವ ಸೂಚಕ ಬಾವುಟದ ವಸ್ತ್ರದ ವಿಲಾಸವನ್ನು ; ಮುಂದೆ–ಎದುರಿಗೆ, ನಿನಗೆ, ತೋರ್ಪಂತಿರೆ–ತೋರಿಸುವಂತೆ, ಹಿಮಾಚಳ ಶಿಖರದ ಮೇಲೆ–ಹಿಮವತ್ಪರ್ವತದ ಶಿಖರದ ಮೇಲೆ, ಪಾಯ್ವ–ಹರಿಯುವ, ಗಂಗಾಸ್ರೋತಂ–ಗಂಗೆಯ ಪ್ರವಾಹವು, ಕಣ್ಗೊಳಿಸಿರ್ದುದು–ಕಣ್ಣುಗಳಿಗೆ ಸೊಗಸಾಗಿದೆ, ನೋಡ–ನೋಡು.

**ವಚನ :** ಮಹೀಧರಮಂ–ಬೆಟ್ಟವನ್ನು ;

೭೪. ಕೈಲಾಸದ ವರ್ಣನೆ : ಇದು ಕೈಲಾಸಂ-ಇದು ಕೈಲಾಸಪರ್ವತ ! ಭವಾನೀ ಧವನ ನೆಲೆ–ಪಾರ್ವತೀ ರಮಣನ ವಾಸಸ್ಥಾನ. ಇದಱೊಳ್–ಇದರಲ್ಲಿ, ದಕ್ಷಾಧ್ವರ ಧ್ವಂಸಕನ-ದಕ್ಷಯಜ್ಞವನ್ನು ನಾಶಮಾಡಿದ ಶಿವನ, ಸೊಸಲಕಣ್-ಹಣೆಗಣ್ಣು, ಮನೋ ಜಾತನಂ–ಮನ್ಮಥನನ್ನು, ಬೂದಿಮಾಡಿತ್ತು–ಬೂದಿಮಾಡಿತು ; ಆತನೊಳ್–ಆ ಶಿವನಲ್ಲಿ, ತನ್ನ ದೋರ್ಗರ್ವದ–ತನ್ನ ಬಾಹುಬಲದ ಹೆಮ್ಮೆಯ, ಅಗುರ್ವಂ–ಭಯಂಕರತೆಯನ್ನು, ಪ್ರಾಕಟಂಮಾಡುವ-ಪ್ರಕಟವಾಗಿ ತೋರಿಸುವ, ಬಗೆಯೊಳ್–ಮನಸ್ಸಿನಲ್ಲಿ, ಇದಂ-ಇದನ್ನು, ಪತ್ತಿ–ಅಂಟಿಕೊಂಡು, ಕಿಱುತ್ತಿ-ಕಿತ್ತು ಆಕ್ರಮಿಸಿ, ಪೊತ್ತೆತ್ತಿದೊಡೆ–ಹೊತ್ತು ಮೇಲಕ್ಕೆತ್ತಿದರೆ, ನೀಳಕಂಠಂ–ಶಿವನು, ಮೆಚ್ಚಿ, ಲಂಕಾಧಿಪತಿಗೆ–ರಾವಣನಿಗೆ, ರಾಗದಿಂ-ಸಂತೋಷದಿಂದ, ಬರಮಂ-ವರವನ್ನು, ಇತ್ತಂ-ಕೊಟ್ಟನು.

೭೫. ಶಿವ ಪಾರ್ವತಿಯರಿಗೆ ಇನಿಯ ಜಗಳ : ತೊಱೆಯೆಂಬ ಮಾತಂ–ನದಿಯೆಂಬ ಮಾತನ್ನು, ತೊಱೆ–ಬಿಟ್ಟುಬಿಡು, ಅನಿತಿಲ್ಲದೊಡೆ–ಅಷ್ಟಿಲ್ಲದೆ ಹೋದರೆ, ಆಂ–ನಾನು, ತೊಱೆವೆಂದಲ್–ನಿಶ್ಚಯವಾಗಿಯೂ ನಿನ್ನನ್ನು ಬಿಡುತ್ತೇನೆ, ಎಂದೊಡೆ-ಎಂದು ಹೇಳಿದರೆ, ಆ ತೊಱೆಯೊಳೆ ಪೋಯ್ತು ಸೂರುಳೆನೆ–ಆ ನದಿಯ ಜೊತೆಯಲ್ಲೇ

ಹೋಯಿತು ನಿನ್ನ ಪ್ರತಿಜ್ಞೆ ಎನ್ನಲು, ಸೂರುಳವೇವುವೊ-ಪ್ರತಿಜ್ಞೆಯದೇನೋ, ನಂಬೆನ್-ನಂಬೆನು, ಎಂಬುದುಂ-ಎನ್ನುತ್ತಲು, ಕಜ್ಜಿಗೊರಲಾತಂ-ನೀಲಕಂಠನಾದ ಶಿವನು, ಆತ್ಮ-ತನ್ನ, ವಿಟತತ್ವಮಂ-ವಿಟವಿದ್ಯೆಯನ್ನು, ಉಂಟೊಡೆತಾಗಿ ಮಾಡಿ-ಹೌದು, ಇದೆಯೆಂಬುದನ್ನಾಗಿಮಾಡಿ, ಬಾಂದೊಱೆಯನೆ ಪೊತ್ತು-ಆಕಾಶಗಂಗೆಯನ್ನೇ ಧರಿಸಿ, ಗೌರಿಗೆ-ಪಾರ್ವತಿಗಾಗಿ, ಈ ಪ್ರದೇಶದೊಳ್-ಈ ಎಡೆಯಲ್ಲಿ, ಕವಲ್ದೊಱೆ ಗೆಯ್ಸಿದಂ-ಕವಲಾಗಿ ಒಡೆದ ನದಿಯನ್ನುಂಟುಮಾಡಿದನು. ಈ ಪದ್ಯ ಸುಂದರವಾದದ್ದು. ಲೋಕಕ್ಕೆ ತಂದೆತಾಯಿಗಳಾದ ಶಿವಪಾರ್ವತಿಯರ ಕಲಹಕೇಳಿ ಇಲ್ಲಿದೆ; ಪಾರ್ವತಿಗೆ ಗಂಗೆಯಮೇಲೆ ಸವತಿಮಾತ್ಸರ್ಯ; ಅವಳನ್ನು ಬಿಡು, ಇಲ್ಲದಿದ್ದರೆ ನಾನು ನಿನ್ನನು ಬಿಡುತ್ತೇನೆ ಎನ್ನುವಳು; ಆಗ ಶಿವ ನಿನ್ನ ಶಪಥ ಆಗಲೇ ನದಿಯು ಸಮೇತ ಹೊರಟು ಹೋಯಿತು ಎನ್ನಲು ಪಾರ್ವತಿ ನಂಬುವುದಿಲ್ಲ; ಆದಕ್ಕಾಗಿ ಎಂದರೆ ಅವಳನ್ನು ನಂಬಿಸುವುದಕ್ಕಾಗಿ, ದೇವಗಂಗೆಯನ್ನು ಜಟೆಯಲ್ಲೇ ಮರೆಮಾಡಿ ಒಂದೆರಡು ಕವಲು ಹೊಳೆಗಳನ್ನು ಶಿವ ಕೆಳಕ್ಕೆ ಬಿಡುತ್ತಾನೆ. ಅಂಥ ಸ್ಥಳ ಈ ಹಿಮವತ್ಪರ್ವತ. ಉಂಟೊಡೆತು = ಉಂಟು + ಒಡೆತು < ಒಡೆಯುದು-ಉಳ್ಳದ್ದು.

ವಚನ: ಶೈಲದ-ಬೆಟ್ಟದ, ಎಲ್ಲೆಡೆಗಳುಮಂ-ಎಲ್ಲಾ ಪ್ರದೇಶಗಳನ್ನೂ.

೭೬. ಇಂದ್ರಕೀಲದ ವರ್ಣನೆ: ಸಾಳ....ಭೀಳಮಂ: ಸಾಳ-ತೇಗದಮರ, ತಮಾಳ-ಹೊಂಗೆಯ, ಕಾನನ-ಕಾಡಿನ, ಭರ-ಸಮ್ಮರ್ದದಿಂದ, ಉದ್ಧತ-ಗರ್ವಿಷ್ಠವಾದ, ಸಿಂಧುರ-ಆನೆಗಳ, ಕಂಠ-ಕೊರಳಿನ, ಗರ್ಜನ-ಘೀಳಿಡುವಿಕೆಯಿಂದ, ಅಭೀಳಮಂ-ಭಯಂಕರವಾದ; ಅಂಬ....ದೋಳಮಂ: ಅಂಬರೇಚರ-ಖೇಚರರ, ವಧೂ-ಕಾಂತೆಯರ, ಕರಪಲ್ಲವ-ಚಿಗುರಿನಂತಿರುವ ಕೈಗಳಿಂದ, ಸಂಚಳತ್-ಅಲುಗಾಡುತ್ತಿರುವ, ಲತಾ-ಬಳ್ಳಿಗಳ, ಆಂದೋಳಮಂ-ಉಯ್ಯಾಲೆಯನ್ನುಳ್ಳ; ಆಶ್ರಿತಾದ್ರಿನದ ಕೂಳಮಂ-ಆಶ್ರಯಿಸಿದ ಬೆಟ್ಟದ ನದಿಯ ತೀರವನ್ನುಳ್ಳ; ಅತ್ಯ....ತ್ಕೀಳಮಂ: ಅತಿ-ಹೆಚ್ಚಾಗಿ, ಅಧರೀಕೃತ-ಕೀಳುಮಾಡಲ್ಪಟ್ಟ, ಅನ್ಯ-ಇತರ, ಕುತ್ಕೀಳಮಂ-ಬೆಟ್ಟಗಳನ್ನುಳ್ಳ; ಇಂದು....ಲೀಳಮಂ: ಇಂದುಕಾಂತ - ಚಂದ್ರಕಾಂತಶಿಲೆಯ, ಸು-ಚೆನ್ನಾಗಿರುವ, ಲೀಳಮಂ-ಲೀಲೆಯನ್ನುಳ್ಳ, ಇಂದ್ರಕೀಳಮಂ-ಇಂದ್ರಕೀಲವೆಂಬ ಪರ್ವತವನ್ನು, ಎಯ್ದಿದಂ-ಸೇರಿದನು (ಅರ್ಜುನನು). ಪದ್ಯದ ಬಂಧ ಇಂಪಾಗಿದೆ.

೭೭. ಕಮಳಾಂತರ್ಗತ ಗಂಧಬಂಧು-ಕಮಲದಲ್ಲಿರುವ ಸುಗಂಧಕ್ಕೆ ನಂಟನಾದ ಗಾಳಿ, ನಯದಿಂ-ಮೃದುವಾಗಿ, ಬಂದು, ಅಪ್ಪಿಕೊಳ್ವಂತೆ-ತಬ್ಬಿಕೊಳ್ಳುವಹಾಗೆ, ಮನಂಗೊಂಡಿರೆ-ಮನವನ್ನು ಸೆಳೆದಿರಲು, ತೀಡೆ-ಸೋಂಕಲು, ಬೀಸಲು; ಭೃಂಗರುತಿಗಳ್-ದುಂಬಿಗಳ ನಾದವು, ಮಾಂಗಲ್ಯಗೇಯಂಗಳ-ಮಂಗಳಕರವಾದ ಗೀತೆಗಳ, ಅಂದಮಂ-ಸೊಗಸನ್ನು, ಅಂದು-ಆಗ, ಈಯೆ-ಕೊಡಲು; ಮಡಲ್ತು-ಹಬ್ಬಿ, ಪೂತ ಹೂಬಿಟ್ಟ, ಲತೆಗಳ್-ಬಳ್ಳಿಗಳು, ಕೆಯ್ಗೆಯ್ದು-ಸಿಂಗರಿಸಿಕೊಂಡು, ಅರ್ಘ್ಯಮಂ ಈವಂತೆವೊಲ್-ಕೈನೀರನ್ನು ಕೊಡುವಹಾಗೆ, ಪೂನೀಡ[ಲ್]-ಹೂವನ್ನು ಕೊಡಲು,

ಅದ್ರಿ-ಬೆಟ್ಟ, ಹರಿಗಂಗೆ–ಅರ್ಜುನನಿಗೆ, ಇಷ್ಟಾರ್ಥ ಸಂಸಿದ್ಧಿಯಂ–ಅಭಿಲಾಷೆಯ ಪೂರೈಕೆಯನ್ನು, ಈವಂತೆ ಪೊಲಾದುದು–ಕೊಡುವಂತೆ ಆಯಿತು. ಶ್ರೀಹರ್ಷಕೃತ ನಾಗಾನಂದ ನಾಟಕದ ೧–೧೧ನೆಯ ಪದ್ಯದೊಡನೆ ಹೋಲಿಸಿ.

**ವಚನ :** ಇಂದ್ರಸುತನಂ–ಅರ್ಜುನನನ್ನು ; ಪರಂತಪಂ–ಶತ್ರುಗಳನ್ನು ಸುಡುವವನು.

**೭೮.** ಕರ್ಪೂರ ಕಾಳಾಗರು ಬಹುಳರಜಂ–ಕರ್ಪೂರದ ಕರಿಯಗರುವಿನ ವಿಶೇಷವಾದ ದೂಳು, ಭಸಿತಂ–ಬೂದಿ ; ಕಲ್ಪವೃಕ್ಷ ಪ್ರಸವಂ–ಕಲ್ಪವೃಕ್ಷದಿಂದ ಹುಟ್ಟಿದ್ದು, ವಲ್ಕಲಂ–ನಾರುಮಡಿ ; ಕನಕ ಕಮಳನಾಳೋತ್ಕರಂ-ಹೊಂದಾವರೆಯ ದಂಟಿನ ನೂಲಿನ ಸಮೂಹದ, ಯಜ್ಞೋಪವೀತಂ–ಜನಿವಾರ ; ನಿಚ್ಚನಿಚ್ಚಂ–ದಿನದಿನವೂ, ಪೊಸತು–ಹೊಸದು, ಎಂಬಂತಾಗೆ–ಎಂಬಹಾಗೆ ಆಗಲು, ಉದ್ಯದ್ಭಕ್ತಿ ಭಾರಾನತ ವನವನಿತಾ ವೃಂದಂ-ಅತಿಶಯವಾದ ಭಕ್ತಿಯ ಭಾರದಿಂದ ಬಾಗಿದ ಅರಣ್ಯಾಭಿಮಾನಿ ದೇವತಾ ಸ್ತ್ರೀಯರ ಸಮೂಹ, ಪಾರ್ಥಂಗೆ–ಅರ್ಜುನನಿಗೆ, ಒಸೆದು–ಸಂತೋಷಿಸಿ, ತುಡಲುಡಲ್ – ತೊಡುವುದಕ್ಕೂ ಉಡುವುದಕ್ಕೂ, ಪೂಸಲುಂ – ಬಳಿದುಕೊಳ್ಳುವುದಕ್ಕೂ, ಸಾಲ್ಪಿನಂ–ಸಾಕಾಗುತ್ತಿರಲು, ಸಾಧಿಸಿತು–ಒದಗಿಸಿಕೊಟ್ಟಿತು.

**೭೯.** ಅದಿರದ ಚಿತ್ತಂ – ಸ್ತಿಮಿತವಾದ ಬುದ್ಧಿ, ಅಳ್ಕದ ಮನಂ – ಹೆದರದ, ಬಳಲದ ಮನ ; ಬಗೆಗೊಳ್ಳದ – ಮನವನ್ನು ಆಕ್ರಮಿಸದ, ಮೋಹ – ಪ್ರೀತಿ ; ಎತ್ತಿಕಟ್ಟಿದ ಜಡೆ – ಎತ್ತಿಕಟ್ಟಿರುವ ಜಟೆ ; ತೊಟ್ಟ–ಧರಿಸಿದ, ರತ್ನಕವಚಂ–ರತ್ನಖಚಿತವಾದ ಕವಚ ; ಕೊರಲೊಳ್–ಕೊರಳಿನಲ್ಲಿ, ಸಲೆ ಕೋದ-ಚೆನ್ನಾಗಿ ಪೋಣಿಸಿದ, ಬಿಲ್ – ಬಿಲ್ಲು ; ಪ್ರಯತ್ನದೆ – ಕಷ್ಟದಿಂದ, ಬಿಗಿದಿರ್ದ – ಕಟ್ಟಿದ, ಎರಟಿಪ್ಪೊಣೆ–ಎರಡು ಬತ್ತಳಿಕೆಗಳು ; ಮಿಸುಪ್ಪ – ಹೊಳೆಯುತ್ತಿರುವ, ಅಸಿಖೇಟಕಂ – ಕತ್ತಿ ಗುರಾಣಿಗಳು ; ಇಂತಿವು–ಹೀಗೆ ಇವು, ಒಂದುಗುಂದದೆ–ಒಂದೂ ಕಡಮೆಯಾಗದೆ, ನಿಲೆ–ನೆಲಸಿರಲು, ನೋಟ್ಪ–ನೋಡುವ, ನೋಟಕರ್ಗೆ–ಪ್ರೇಕ್ಷಕರಿಗೆ, ಅರ್ಜುನಂ –ಅರ್ಜುನನು, ಸೌಮ್ಯಭಯಂಕರನ್ – ಸೌಮ್ಯನಾಗಿಯೂ ಭಯಂಕರನಾಗಿಯೂ, ಆದಂ–ಆದನು, ಕಂಡನು.

**ವಚನ :** ತಪನಪ್ರಭಂ-ಸೂರ್ಯನ ತೇಜಸುಳ್ಳವನು ; ತಗುಳ್ದೊಡೆ-ಆರಂಭಿಸಿದರೆ,

**೮೦.** ಇಂದ್ರ ತನೂಜ ತಪಃ ಪ್ರಭಾವದಿಂ–ಅರ್ಜುನನ ತಪಸ್ಸಿನ ಶಕ್ತಿಯಿಂದ, ತತ್ಕಿಶೋರಕೇಸರಿ–ಆ ಸಿಂಹದ ಮರಿಗಳು, ಕರಿಣಿಯ–ಹೆಣ್ಣಾನೆಗಳ, ಸೀಯನಪ್ಪ–ಸಿಹಿಯಾಗಿರುವ, ಮೊಲೆವಾಲ್ಗೆ–ಕೆಚ್ಚಲ ಹಾಲಿಗೆ, ತಗುಳ್ದುದು–ಹಿಂದೆ ಹಿಂಬಾಲಿಸಿ ಹೋದುವು ; ಕರಿಪೋತಂ–ಆನೆಯ ಮರಿಗಳು, ಅಪ್ಪುಂಡುಗರ್ಚಿ – ಕೆಳದುಟಿಯನ್ನು ಕಚ್ಚಿಕೊಂಡು, ಹರಿಪೋತಮುಂ–ಸಿಂಹದ ಮರಿಗಳನ್ನು, ಬೆದಱುತುಂ–ಬೆದರಿಸುತ್ತ, ಕೇಸರಿಣಿಯ – ಸಿಂಹಿಣಿಯ, ಕೆಚ್ಚಲಂ – ಮೊಲೆಗಳನ್ನು, ತುಡುಕುತುಂ – ಹಿಡಿದುಕೊಳ್ಳುತ್ತ, ಪರಿದತ್ತು–ಓಡಿದವು ; ಕುರಂಗ ಯೂಥದೊಳ್–ಜಿಂಕೆಗಳ ಹಿಂಡಿನಲ್ಲಿ, ಅಂದು–ಆಗ, ಪೆರ್ಬುಲಿಗಳ್–ಹೆಬ್ಬುಲಿಗಳು, ಬೆರಸಿದುವು–ಸೇರಿಕೊಂಡುವು.

**ವಚನ :** ಕಂದರದೊಳ್–ಕಣಿವೆಯಲ್ಲಿ ; ಶಿಖಿಗಳಿಂ–ಅಗ್ನಿಗಳಿಂದ ; ಬೆಂದಸುಲಿಯಂತೆ–ಸುಟ್ಟ ಹಗ್ಗದಂತೆ ; ಏತರ್ಕಂ ಮುಟ್ಟಲ್ಲದೆ–ಯಾವುದಕ್ಕೂ ಜೀಡವಾಗದೆ, ಮುಟ್ಟುಗಿಡೆ–ನಿಷ್ಪ್ರಯೋಜಕವಾಗಲು ; ಹೃತ್ಕಂಪ–ಎದೆಯ ನಡುಕ ; ಸಂಕೆಯೊಳ್–ಅಂಜಿಕೆಯಲ್ಲಿ ; ತಪೋವಿಘಾತಂ – ತಪಸ್ಸಿಗೆ ವಿಘ್ನಗಳನ್ನು ; ಮಾಡಿಂ–ಮಾಡಿರಿ ; ನೆಚ್ಚಿನಚ್ಚರಸೆಯರುಮಂ–ನಂಬಿಕೆಯ ಅಪ್ಸರ ಸ್ತ್ರೀಯರನ್ನೂ ; ಪೇಟ್ದಾಗಳ್–ಆಜ್ಞೆ ಮಾಡಿದಾಗ.

೬೧. ವನರುಹ ಗರ್ಭನೆಂಬವನ–ತಾವರೆಯಲ್ಲಿ ಹುಟ್ಟಿದವನು ಎನ್ನುವವನ ಎಂದರೆ ಬ್ರಹ್ಮನ, ಮುನ್ನಿನ–ಪೂರ್ವಕಾಲದಲ್ಲಿ, ಗೆಯ್ದ–ಮಾಡಿದ, ತಪಂ–ತಪಸ್ಸು, ತಿಲೋತ್ತಮಾಂಗನೆಯಿಂ–ತಿಲೋತ್ತಮೆಯೆಂಬ ದೇವಗಣಿಕೆಯಿಂದ, ಅದು, ಅಂತುಟಾದುದು–ಹಾಗೆ ಆಯಿತು, ಎನೆ–ಎನ್ನಲು, ಎಂದರೆ, ಬ್ರಹ್ಮನ ತಪಸ್ಸು ನಷ್ಟವಾಗಿ ಸುತ್ತಲೂ ನರ್ತಿಸುತ್ತಾ ತಿರುಗುತ್ತಿದ್ದ ತಿಲೋತ್ತಮೆಯನ್ನು ನೋಡಲು ನಾಲ್ಕು ಮುಖಗಳನ್ನು ಪಡೆದವನಾದನು ಎನ್ನಲು ; ಮತ್ತಿನ–ಉಳಿದ, ಬೂತು ತಪಂಗಳ್–ಪ್ರಾಣಿಗಳ ತಪಸ್ಸುಗಳು, ಎಮ್ಮಪುರ್ವಿನ–ನಮ್ಮ ಹುಬ್ಬಿನ, ಕಡೆಯ–ಕೊನೆಯ, ಒಂದು ಜರ್ವಿನೊಳೆ–ಒಂದು ಅಲುಗಾಟದಲ್ಲೇ, ತೀರ್ವುವು–ಮುಗಿದುಹೋಗುತ್ತವೆ, ಅಲ್ಲದೆ, ದೇವ–ಪ್ರಭುವೇ, ಈಗಳ್–ಈಗ, ಮನಸಿಜಂ–ಮನ್ಮಥನು, ಬೆಂಬಲಂ–ಪ್ರೋತ್ಸಾಹಕ, ಆಱು ಋತುವುಂ ನೆರವು–ಆರು ಋತುಗಳೂ ಸಹಾಯಕ, ಎಂದೊಡೆ–ಎಂದರೆ, ಸೋಲದಿರ್ಪರಾರ್–ಮೋಹಕ್ಕೆ ಒಳಗಾಗಿ ಸೋಲದಿರುವವರು ಯಾರು ?

**ವಚನ :** ಪುರಂದರನ – ಇಂದ್ರನ ; ಪೂಣ್ದು – ಪ್ರತಿಜ್ಞೆ ಮಾಡಿ ; ಅವತರಿಸಿ–ಇಳಿದು ; ಪುಳಿನ–ಮರಳು ; ಇಡಿದು–ತುಂಬಿ ; ಎಡೆಗೊಳೆ–ಅವಕಾಶವನ್ನು ಪಡೆಯಲು; ಅಮರ್ದಿನೊಳಂ – ಅಮೃತದಲ್ಲಿಯೂ ; ಉಂತೆ–ಸುಮ್ಮನೆ ; ಪೊಡರ್ವ–ಸ್ಫುರಿಸುವ ; ಪೊಡರ್ಪುಮಂ – ಚಲನೆಯನ್ನೂ ; ಬೆಳರ್ವಾಯ್ಗಳ್ಗೆ – ಬಿಳಿದಾದ ಬಾಯಿಗಳಿಗೆ, ತನಿಗೆತ್ತುಮಂ–ಹೊಸದಾದ ಅದಿರಾಟವನ್ನು ; ನಿಡಿಯಲರ್ಗಣ್ಗಳ್ಗೆ–ದೀರ್ಘವಾದ ಹೂವಿನಂತಿರುವ ಕಣ್ಣುಗಳಿಗೆ ; ಮಱಮಱಿಪ – ಕದಡಿದ, (ಕೆಂಪಾದ), ತೊದಳಿಸುವ–ತೊದಲು ನುಡಿವ ; ಎಕ್ಕೆಯಿಂ–ಒಂದೇಕಾಲದಲ್ಲಿ ; ನೆಱೆಯೆಕೆಯ್ಗೆಯ್ದು – ಪೂರ್ಣವಾಗಿ ಸಿಂಗರಿಸಿಕೊಂಡು ; ಮಱಮಱಿಸಿತೆಂದು ಕಣ್ಕದಡಿದ ಭಾವಂ (ಶಮದ)

೬೨. ಆಱುಂ ಋತುಗಳ ಪೂಗಳುಂ–ಆರು ಋತುಗಳ ಹೂವುಗಳೂ, ಆಱುಂ ಋತುಗಳ–ಆರು ಋತುಗಳ, ಪೊದಳ್ದ–ವ್ಯಾಪಿಸಿದ, ಚೆಲ್ವುಗಳುಂ–ಸೊಗಸುಗಳೂ ; ಅಣಂ ಬೇಱಲ್ಲದೆ–ಸ್ವಲ್ಪವೂ ಬೇರೆಬೇರೆಯಾಗಿರದೆ, ಒಂದು ಸೂೞ್–ಒಂದೇ ಬಾರಿಗೆ, ನೆಲದೊಳಂ ಗಗನದೊಳಂ–ನೆಲದಲ್ಲೂ ಆಕಾಶದಲ್ಲೂ, ಒಡನೊಡನೆ–ಜೊತೆಜೊತೆಯಾಗಿ ಮೆಯ್ದೋಱಿದುವು–ಕಾಣಿಸಿಕೊಂಡುವು, ಪ್ರಕಟವಾದುವು.

೬೩. ಮೆಯ್ದೋಱಿದೊಡೆ–ಕಾಣಿಸಿಕೊಂಡರೆ, ಅವಱೊಡನೆಯೆ–ಆ ಋತುಗಳ ಸಮೇತವಾಗಿಯೇ, ಮೆಯ್ದೋಱಲ್ ಬಗೆದು–ಕಾಣಿಸಿಕೊಳ್ಳಬೇಕೆಂದು ಭಾವಿಸಿ,

ಅನಂಗಜಂಗಮಲತೆಗಳ್-ಮನ್ಮಥನ ಸಂಚಾರೀ ಲತೆಗಳು, ಮೆಯ್ದೋಱುವಂತೆ-ಕಾಣಿಸಿ ಕೊಳ್ಳುವ ಹಾಗೆ, ಅಮರ ಗಣಿಕೆಯರ್-ಅಪ್ಸರಸ್ತ್ರೀಯರು, ವಂದು-ಬಂದು, ಆಗಳ್-ಆಗ, ಮೆಲ್ಲನೆ-ಮೃದುವಾಗಿ, ಮೆಯ್ದೋಱಿದರ್-ಕಾಣಿಸಿಕೊಂಡರು.

೬೪. ಸಮದಗಜಗಮನೆಯರ್ – ಮದಿಸಿದ ಆನೆಯ ನಡಗೆಯುಳ್ಳವರು, ಮುಗಿಲಮೇಲೆ–ಮೋಡಗಳ ಮೇಲೆ, ನಡೆಪಾಡುವಾಕೆಗಳ್–ನಡೆದಾಡುವವರು, ಆದ ದೇವಗಣಿಕೆಯರು, ಧರಾಗಮನಂ–ಭೂಮಿಗೆ ಬಂದದ್ದು ಅಥವಾ ನೆಲದ ಮೇಲೆ ನಡೆಯುವುದು, ತಮಗೆ, ಪೊಸತಪ್ಪುದಱಿಂ–ಹೊಸದಾಗಿರುವುದರಿಂದ, ಅಮರ್ದಿರೆ–ನೆಲದಲ್ಲಿ ಪಾದಗಳು ಸಿಲುಕಿರಲು, ನಡೆನಡೆದು–ನಡೆದೂ ನಡೆದೂ, ನಡೆಯಲಾಱದೆ–ನಡೆಯಲಸಮರ್ಥರಾಗಿ, ಸುೞಿದರ್–ಸುತ್ತಾಡಿದರು. ನಡೆಪು < ನಡೆ + ಪು.

೬೫. ಮುಡಿಯ–ತುರುಬಿನ, ಕುಚಯುಗದ–ಇರ್ಮೊಲೆಗಳ, ಜಘನದ–ಪಿರ್ರೆಗಳ, ಕಡುವಿಣ್ಪಿಂ-ಅತಿಶಯವಾದ ಭಾರದಿಂದ, ಮೆಲ್ಲಡಿಗಳ್–ಅವರ ಮೃದು ಪಾದಗಳು, ಮಣಲೊಳ್–ಮರಳಿನಲ್ಲಿ, ಅೞ್ದುಬರೆ–ಮುಳುಗಲು, ಎಂದರೆ ಹೂಳಿ ಹೋಗಲು, ನಡೆಯದ–ನಡೆಯದಿರುವ, ಬೇವಸಮಂ–ಆಯಾಸವನ್ನು, ತಾಂ–ತಾವು, ನಡೆಯಿಸುವಂತೆ–ಓಡಾಡಿಸುವ ಹಾಗೆ, ಅವರ್ಗಳ್–ಅವರು, ಒಯ್ಯನೊಯ್ಯನೆ–ಮೆಲ್ಲ ಮೆಲ್ಲಗೆ, ನಡೆದರ್–ನಡೆದರು.

೬೬. ಮುಡಿಯಂ–ತಲೆನವಿರ ಗಂಟನ್ನು, ಸೋಗೆಯೆಗೆತ್ತು–ಹೆಣ್ಣು ನವಿಲೆಂದೇ ಭಾವಿಸಿ, ಸೋಗೆ–ಗಂಡು ನವಿಲು; ನಡೆಯಂ–ನಡಗೆಯನ್ನು, ಪೆಣ್ಣಂಚೆಗೆತ್ತು–ಹೆಣ್ಣು ಹಂಸವೆಂದೇ ಭಾವಿಸಿ, ಅಂಚೆ–ಗಂಡು ಹಂಸ; ಮೆಲ್ನುಡಿಯಂ–ಮೃದುವಾದ ಮಾತನ್ನು, ಕೋಗಿಲೆಗೆತ್ತು–ಹೆಣ್ಣು ಕೋಗಿಲೆಯೆಂದೇ ಭಾವಿಸಿ, ಕೋಗಿಲೆ–ಗಂಡು ಕೋಗಿಲೆ; ಘನೋತ್ತುಂಗ ಸ್ತನದ್ವಂದ್ವದಿಟ್ಟೆಡೆಯಂ–ದಪ್ಪವೂ ಎತ್ತರವೂ ಆದ ಅವಳ ಮೊಲೆಗಳ ಸಮ್ಮರ್ದವನ್ನು, ಕೋಕವೆ ಗೆತ್ತು–ಚಕ್ರವಾಕಿಯೆಂದೇ ಭಾವಿಸಿ, ಕೋಕವ್–ಚಕ್ರವಾಕ; ಅಳಕಾನೀಕಂಗಳಂ–ಮುಂಗುರುಳ ಸಾಲುಗಳನ್ನು, ಸೊರ್ಕಿದಾಱಡಿ ಗೆತ್ತು–ಸೊಕ್ಕಿದ ಹೆಣ್ಣುದುಂಬಿಯೆಂದೇ ಭಾವಿಸಿ, ಆಱಡಿ–ಗಂಡುದುಂಬಿ; ಸುತ್ತುತುಂಬರೆ–ಆ ಅಪ್ಸರೆಯರನ್ನು ಬಳಸಿಕೊಂಡು ಬರಲು, ಆಕೆಗಳ್–ಅವರು, ಬನಂ–ವನವು, ಬರ್ಪಂತೆ–ಬರುವ ಹಾಗೆ, ಬಂದು,

**ವಚನ :** ನರೇಂದ್ರತಾಪಸನಂ–ರಾಜ ತಪಸ್ವಿಯಾದ ಅರ್ಜುನನನ್ನು; ಸೋಲಿಸ ಲೆಂದು–ಮೋಹಿಸಲೆಂದು; ತಾಮೆ ಸೋಲ್ತು–ತಾವೇ ಮೋಹಿಸಿ.

೬೭. ಊರ್ವಸಿಯ ನೃತ್ಯ : ಮುಗಮುಗಿಸುತ್ತುಮಿರ್ಪ–ಗಮಗಮಿಸುತ್ತಿರುವ, ಮೃಗನಾಭಿಯ–ಕಸ್ತೂರಿಯ, ನೀರ್ದಳಿವಲ್ಲಿ–ನೀರನ್ನು ಚಿಮುಕಿಸುವಾಗ, ಕಂಪನಾಳ್ದು–ಕಂಪನ್ನು ಹೊಂದಿ, ಉಗುೞ್ದು–ಹೊರಕ್ಕೆ ಸೂಸಿ, ಅಲರುತ್ತುಮಿರ್ಪ ಪದದೊಳ್–ಅರಳುತ್ತಿರುವ ಸಮಯದಲ್ಲಿ, ಪದವಟ್ಟು–ಹದವನ್ನು ಹೊಂದಿ, ಪೊದಳ್ದು–ಅಗಲವಾಗಿ, ತೋರಮಲ್ಲಿಗೆಯ–ದಪ್ಪ ಮಲ್ಲಿಗೆಯ, ತುಱುಂಬು–ತುರುಬು, ರಾಹು, ತವೆ–ಚೆನ್ನಾಗಿ,

ನುಂಗಿದ, ಚಂದ್ರನಂ–ಚಂದ್ರನನ್ನು. ಒಯ್ಯನೊಯ್ಯನೆ–ಮೆಲ್ಲ ಮೆಲ್ಲಗೆ, ಅಂದು–ಆಗ, ಉಗುಬ್ಬಿವೊಲ್–ಉಗುಳುವ ಹಾಗೆ, ಒಪ್ಪಿರಲ್–ಸೊಗಸಾಗಿರಲು, ಬಲದೊಳ್–ಬಲಗಡೆಯಲ್ಲಿ, ಉರ್ವಸಿ–ಊರ್ವಸಿಯು, ದೇಸಿಗೆ–ದೇಸಿನೃತ್ಯಕ್ಕಿಂತಲೂ, ದೇಸಿಯಾಡಿದಳ್–ಹೆಚ್ಚು ದೇಸಿಯುಳ್ಳ ನೃತ್ಯವನ್ನಾಡಿದಳು. ಇದು ಬಲು ಸೊಗಸಾದ ಪದ್ಯ; ತುರುಬಿನ ಮೇಲೆ ದುಂಡುಮಲ್ಲಿಗೆ ಸರ ಕುಳಿತಿರುವುದು ಚಂದ್ರಗ್ರಹಣ ಸ್ವಲ್ಪ ಸ್ವಲ್ಪವಾಗಿ ಬಿಡುತ್ತ ಬರುವಾಗ ಕಾಣಿಸುವ ಚಂದ್ರನಿಗೆ ಸಮಾನವಾಗಿದೆ ಚಿತ್ರ. ಸುಂದರ.

೮೮. ಮೇನಕೆಯ ಗಾನ: ಪದಕೊರಲ್–ಹದವಾದ ಶಾರೀರ, ಇಂಪಂ–ಇಂಪನ್ನು, ಅಪ್ಪುಕೆಯೆ–ಒಪ್ಪಿಕೊಳ್ಳಲು, ಕೊಂಕು–ವಕ್ರತೆ, ನಯಂ–ನುಣುಪು, ಗಮಕಂಗಳಿಂ–ಗಮಕಗಳಿಂದ, ಪೊ[ಡ]ರ್-ಸ್ಫುರಣೆ, ಕೊದಳ್–ಮಧುರವಾದ ಮಾತು, ಎೞೆದಿಕ್ಕಿದಂತೆ–ತಂತಿ ಎಳೆದಹಾಗೆ, ಸುತಿಯೊಳ್–ಶ್ರುತಿಯಲ್ಲಿ, ಸಮವಾಗಿರೆ–ಸಮಾನವಾಗಿರಲು, ಜಾಣನಾಂತು–ಚಮತ್ಕಾರವನ್ನು ಹೊಂದಿ, ಮೆಚ್ಚಿದ ತೆಱದೆ–ಮೆಚ್ಚಿದ ರೀತಿಯಿಂದ, ಆಸೆವಟ್ಟು–ಬಯಸಿ, ಅಲಸದೆ–ಆಯಾಸಗೊಳ್ಳದೆ,ಎತ್ತಿದವೊಲ್–ರಾಗವನ್ನು ಎತ್ತಿ ಕೊಂಡಹಾಗೆ, ದೊರೆವೆತ್ತು–ಸಮತೆಯನ್ನು ಪಡೆದು, ದೂಱದ–ತೆಗಳಿದ, ಆಱದ–ಸಮಾಧಾನಗೊಂಡ, ದನಿ–ಸ್ವರ, ಮುಟ್ಟೆ–ಎದೆಯನ್ನು ಮುಟ್ಟಲು, ಸರಸ್ವತಿ ಬಾಯ್ಬಿಱಿದಂತೆ–ಸರಸ್ವತಿ ಬಾಯಿತೆರೆದ ಹಾಗೆ, ಮೇನಕೆ, ಪಾಡಿದಳ್–ಹಾಡಿದಳು–ಇಲ್ಲಿ ಕೊಂಕು, ನಯ, ಗಮಕ–ಎಂಬ ಸಂಗೀತ ಪರಿಭಾಷೆಯ ಶಬ್ದಗಳಿವೆ; ಅವುಗಳ ಅರ್ಥ ಆ ಶಾಸ್ತ್ರವನ್ನು ನೋಡಿ ತಿಳಿಯಬೇಕು.

೮೯. ನಡು – ಸೊಂಟವು, ನಡುಗಲ್ಕೆ–ನಡುಗಲು, ಪುರ್ವು–ಹುಬ್ಬುಗಳು, ಪೊಡರಲ್ಕೆ–ಕಂಪಿಸಲು, ಕುರುಳ್–ಮುಂಗುರುಳುಗಳು, ಮಿಳಿರಲ್ಕೆ–ಅಲುಗಾಡಲು, ಬಾಯ್–ಬಾಯಿ, ಬೆಡಂಗಿಡಿದು – ಚೆಲುವಿನಿಂದ ತುಂಬಿ, ಎಳಸಲ್–ಬಯಸಲು, ತೆರಳ್ದು–ದುಂಡಾಗಿ, ತುಡುಕಲ್ಕೆ–ಹಿಡಿದುಕೊಳ್ಳುವುದಕ್ಕೆ, ತಗುಳ್ದುದು–ಅಟ್ಟಿಬಂತು, ಪಾಡಿದೀನೆವದಿಂ–ಹಾಡಿದ ಈ ನೆಪದಿಂದ, ಈಕೆ–ಇವಳು, ಕೆಂದಂ–ಪ್ರೇಮ ರತಿಯನ್ನು, ಕನ್ನಡಿಪಳೊ–ಪ್ರತಿಬಿಂಬಿಸುತ್ತಿದ್ದಾಳೆಯೋ, ಎಂಬಿನೆಗಂ–ಎನ್ನುತ್ತಿರಲು, ದನಿಯಿಂಪು–ಧ್ವನಿಯ ಇಂಪು, ಬೀಣೆಯಂ–ವೀಣೆಯನ್ನು, ಮಿಡಿದವೊಲಾಗೆ–ಮಿಟಿದ ಹಾಗಾಗಲು, ಗಾನದೊಳೊಡಂಬಡೆ – ಸಂಗೀತದಲ್ಲಿ ಹುದುವಾಗಿರಲು, ಮೇನಕೆ, ಮುಂದೆ, ಪಾಡಿದಳ್–ಹಾಡಿದಳು.

೯೦. ಒದವಿದ–ಉಂಟಾದ, ಕೆತ್ತ–ಗುತ್ತನಾಗಿರುವ, ಕಂಕಣದ–ಬಳೆಗಳ, ಪುರ್ವಿನ–ಹುಬ್ಬುಗಳ, ಜರ್ವು–ಅದಿರಾಟವು, ಲಯಕ್ಕೆ–ತಾಳದ ಲಯಕ್ಕೆ, ಲಕ್ಕಲೆಕ್ಕದ–ಲಕ್ಷಸಂಖ್ಯೆಯ, ಗತಿ–ಗತಿಯನ್ನುಳ್ಳ, ನಾಟಕಾಭಿನಯಮಾಯ್ತೆನೆ–ನೃತ್ಯಾಭಿನಯವಾಯಿತೆನ್ನಲು, ಗೇಯದೊಳ್–ಗೀತದಲ್ಲಿ, ಈಕೆ–ಇವಳು, ಸೊರ್ಕನಿಕ್ಕಿದಳ್–ಸೊಕ್ಕುಂಟುಮಾಡುವ ವಸ್ತುವನ್ನು, ಎಂದರೆ ಕಿಣ್ವವನ್ನು ಹಾಕಿದಳು, ಎನೆ–ಎನ್ನಲು, ಕಳ್ಗೆ–ಮದ್ಯಕ್ಕೆ, ಚಕ್ಕಣವೆನಿಪ್ಪುದು–ಚಾಕಣವೆನಿಸಿಕೊಳ್ಳುವುದು, ಸಾಗೆನಿಸಲ್ಕೆ–

ಸಾಗು (?) ಎನ್ನಿಸಿಕೊಳ್ಳಲು, ಸಾಲ್ವ–ಸಾಕಾಗುವ, ಸಗ್ಗದ–ಸ್ವರ್ಗದ, ಪೊಸದೇಸಿಯ–ಹೊಸದಾದ ದೇಸಿರಾಗಗಳ, ಓಳಿಗಳಂ–ಸಮೂಹಗಳನ್ನು, ಒರ್ವಳ್–ಒಬ್ಬ ಅಪ್ಸರೆ, ಒಜೀಲ್ದು–ರಾಗಿಸಿ, ನೆಜಲ್ದು–ಸ್ತಿಮಿತಳಾಗಿ, ಪಾಡಿದಳ್–ಹಾಡಿದಳು. ಕೆತ್ತ < ಕಿಱು. ವ್ಯವಧಾನೇ–ನಡುವೆ ಬರು, ಮುಚ್ಚು; ಸೊರ್ಕು–ಹೆಂಡ ಹುಳಿಯಾಗಿ ಮದ್ಯಸಾರವಾಗಿ ಸುವ ಪದಾರ್ಥ, ಕಿಣ್ವ; ಸಾಗು ಇದರ ಅರ್ಥ ಚಿಂತನೀಯ; ಸಾಗು ಎಂದರೆ ಸಾಯುತ್ತದೆ ಎಂಬರ್ಥ; ಹಳಗನ್ನಡದಲ್ಲಿ ಸಾಗುಂ ಎಂದಿರಬೇಕು: ಈ ಅರ್ಥದ ಅನ್ವಯ ಪ್ರಕೃತ ಸಂದರ್ಭಕ್ಕೆ ಆಗಲಾರದು; 'ಸಾವಗಿಸಲ್ಕೆ' ಎಂದು ಪಾಠವಿದ್ದಿರ ಬಹುದೆ; ಆಗ ಸರಿಮಾಡು, ಸ್ಥಿತುಮಾಡು ಎಂಬರ್ಥವಾಗುತ್ತದೆ; ಇಲ್ಲವೆ ಸಾಲ್ಗುಂ (=ಸಾಕು) ಎಂದು ಬಿಡಿಸಬಹುದು.

೯೧. ತಿಲೋತ್ತಮೆಯ ನಾಟ್ಯ: ಆಡದ–ಕುಣಿಯದ, ಮೆಯ್ಗಳಿಲ್ಲ–ದೇಹ ಗಳಿಲ್ಲ, ನಿಡುಮೆಯ್ಗಳುಂ–ದೀರ್ಘದೇಹಗಳು ಕೂಡ, ಆಡಿದುವು–ಕುಣಿದುವು; ಅಂತೆ–ಹಾಗೆಯೇ, ಮೆಟ್ಟುವಳ್–ಪಾದವಿನ್ಯಾಸಮಾಡಿ ಕುಣಿಯುತ್ತಾಳೆ; ನೋಡಿದರೆಲ್ಲರಂ–ಎಲ್ಲಾ ಪ್ರೇಕ್ಷಕರನ್ನೂ, ಪಿಡಿದು–ಹಿಡಿದು, ಮೆಟ್ಟಿದಳ್–ತುಳಿದಳು; ದೇಸಿ–ದೇಸಿನೃತ್ಯ, ಇಟ್ಟಳವಾಯ್ತು – ರಮಣೀಯವಾಯಿತು; ಆರ್ಗಂ – ಯಾರಿಗೂ, ಕೆಯ್ಗೂಡಿದು ದಿಲ್ಲಂ – ಕೈವಶವಾಗಲಿಲ್ಲ, ಎನೆ – ಎನ್ನಲು, ವಿಸ್ಮಯಮಾಗಿರೆ – ಆಶ್ಚರಿಯಾಗಿರಲು, ತನ್ನ ಮುಂದೆ ಬಂದು. ಆಡಿದಳ್ – ನಾಟ್ಯಮಾಡಿದವಳಾದ, ಆ ತಿಳೋತ್ತಮೆ ಯನ್–ಆ ತಿಲೋತ್ತಮೆಯನ್ನು, ನರೇಂದ್ರ ತಾಪಸಂ–ಅರ್ಜುನನು, ಒಲ್ದನುಮಿಲ್ಲ–ಒಲಿದವನು ಕೂಡ ಆಗಲಿಲ್ಲ.

ನೃತ್ಯಗಾನ ವರ್ಣನೆಯ ಈ ಐದು ಪದ್ಯಗಳು ಪಂಪನ ಸ್ವಾನುಭವದ ಅಭಿವ್ಯಕ್ತಿ ಯೆಂದು ತೋರುತ್ತದೆ; ಅರಿಕೇಸರಿಯ ಆಸ್ಥಾನದಲ್ಲಿ ನೃತ್ಯ ಗಾನ ಗೋಷ್ಠಿಗಳನ್ನು ಅವನು ಬಹುವಾಗಿ ನೋಡಿದ್ದಿರಬಹುದು.

**ವಚನ**: ಎಡೆಯಾಡಿಯುಂ–ನಡು ನಡುವೆ ನರ್ತಿಸಿಯೂ; ಮನಂಗೊಳೆ ಪಾಡಿಯುಂ–ಮನವನ್ನು ಅಪಹರಿಸುವ ಹಾಗೆ ಹಾಡಿಯೂ; ತಾಮೆ ಸೋಲ್ತು–ತಾವೇ ಮೋಹಿಸಿ, ಎಯ್ದೆವಂದು–ಹತ್ತಿರಕ್ಕೆ ಬಂದು.

೯೨. ಬೂದಿ ಜೆಡೆ ಲಕ್ಷಣಂ-ವಿಭೂತಿಯ ಮತ್ತು ಜಟೆಯ ಲಕ್ಷಣಗಳು, ತಪಕೆ-ತಪಸ್ಸಿಗೆ, ಆದುವು–ಆಗುತ್ತವೆ; ಎರಜಿತ್ತೊಣೆ–ಎರಡು ಬತ್ತಳಿಕೆ, ಶರಾಸನಂ–ಬಿಲ್ಲು, ಕವಚಂ–ಕವಚವು, ಇವು–ಇವುಗಳು, ಎಂತು-ಹೇಗೆ, ಆದುವೊ-ತಪಸ್ಸಿಗೆ ಆಗುತ್ತವೋ? ನಿನ್ನ ತಪದ ಪಾಂಗು – ನಿನ್ನ ತಪಸ್ಸಿನ ರೀತಿ, ಮುತ್ತುಂಮೆಣಸಂ - ಮುತ್ತುಗಳನ್ನೂ ಮೆಣಸನ್ನೂ, ಕೋದಂತುಟೆ–ಪೋಣಿಸಿದ ಹಾಗೆಯೇ. ಎಂತು ಗಡಾ–ಹೇಗೆ ದಿಟ ವಾಗಿಯೂ? ತಪಸ್ಸು, ಅದಕ್ಕೆ ವ್ಯತಿರಿಕ್ತವಾದವೇಷ – ಇವೆರಡೂ ಹೇಗೆ ಹೊಂದಿ ಕೊಳ್ಳುತ್ತವೆ?

೯೩. ಗಾವಿಲ–ದಡ್ಡನೇ, ಕಡುತಪದಿಂದೆ–ತೀವ್ರ ತಪಸ್ಸಿನಿಂದ, ನಿನ್ನ ಪಡೆಪು–

ನಿನ್ನ ಸಿದ್ಧಿ, ಆವುದೊ–ಯಾವುದೋ? ಸಗ್ಗಮಲ್ತೆ–ಸ್ವರ್ಗವಲ್ಲವೆ? ಪೋ–ಹೋಗು, ಮೂರ್ಖ, ನುಡಿಯವೊ–ಮಾತಾಡಬೇಡವೋ! ಸಗ್ಗದಫಲಂ–ಸ್ವರ್ಗದ ಪ್ರಯೋಜನ, ಸುಖಮಲ್ತೆ – ಸುಖವಲ್ಲವೇ? ಸುಖಕ್ಕೆ, ಒಡಂಬಡದವರ್ – ಒಪ್ಪದವರು, ಆರೊ–ಯಾರೋ, ಪೇೞ್–ಹೇಳು; ಪೆಂಡಿರೊಳಗೆ–ಸ್ತ್ರೀಯರಲ್ಲಿ, ಆರ್ಪೆಜಿರ್–ಇತರರು ಯಾರುಂಟು? ಆಮೆ ದಲ್–ನಾವೇ ಅಲ್ಲವೆ? ಆಮೆ ಬಂದು ಕಾಲ್ಪಿಡಿದಪೆವು–ನಾವೇ ಬಂದು ಕಾಲನ್ನು ಹಿಡಿಯುತ್ತಿದ್ದೇವೆ; ಇಂಬುಕೆಯ್ವೊಡೆ–ಆಶ್ರಯಿಸಬೇಕಾದರೆ, ಇವು–ನಿನ್ನ ಪಾದಗಳು, ಮೆಲ್ಲಡಿಗಳ್‌ಗಡ–ಮೃದುವಾದ ಪಾದಗಳಲ್ಲವೆ? ಬೂದಿಯಂ–ಮೈಗೆ ಬಳಿದುಕೊಂಡಿರುವ ಬೂದಿಯನ್ನು, ಕರ್ಚು–ತೊಳೆದುಕೋ.

ಪಡೆಪು < ಪಡೆ + ಪು—ಪಡೆಯುವಿಕೆ, ಲಾಭ, ಸಿದ್ಧಿ;

೯೪. ಕೋಕಿಳ....ರವಂ: ಕೋಕಿಳಕುಳ–ಕೋಗಿಲೆಗಳ ಸಮೂಹದ, ಗಳ–ಕೊರಳಿನ, ನಿನದ–ಧ್ವನಿಯಿಂದ, ಆಕುಳ–ವ್ಯಾಪ್ತವಾದ, ರವಂ–ನಾದವು, ಆಗಳುಂ–ಯಾವಾಗಲೂ, ಇಂಪಂ–ಇಂಪನ್ನು, ಪಡೆದುದು–ಪಡೆಯಿತು; ನೋಡ–ನೋಡು, ಈಕೆಗಳ–ಈ ಅಪ್ಸರೆಯರ, ಚಳಿತ ಲುಳಿತ ಭ್ರೂಕುಟಿಯೇ–ಅಲುಗಾಡುವ, ಕೊಂಕಾಗಿರುವ ಹುಬ್ಬುಗಳ ತುದಿಗಳೇ, ಪರಮಸುಖದ–ಅತಿಶಯವಾದ ಸುಖದ, ಕೋಟಿಯಂ–ತುತ್ತತುದಿಯನ್ನು, ಈಗುಂ–ಕೊಡುತ್ತದೆ.

ವಚನ: ಅಳಿಪಿನ–ಪ್ರೇಮದ, ಲಲ್ಲೆಯ–ಮುದ್ದಿನ; ಜೆಲ್ಲದ–ಚಲ್ಲಾಟದ; ಪುರುಡಿನ–ಸ್ಪರ್ಧೆಯ, ಮುಳಿಸಿನ–ಕೋಪದ, ನೆವದ–ನೆವವನುಳ್ಳ; ಪಡೆಮಾತುಗಳಂ–ಕೆಂಡುಕೇಳಿದ ಮಾತುಗಳನ್ನು; ಚಳಿಯಿಸಲಾಜದೆ–ಕದಲಿಸಲಸಮರ್ಥರಾಗಿ; ಅೞ್ಚಿಗಂಗೊಂಡಂತೆ–ವ್ಯಥಿತರಾದ ಹಾಗೆ; ಏವಮಂ–ಅಸಮಾಧಾನವನ್ನು, ಕೆಯ್ಕೊಂಡು–ಹೊಂದಿ; ಸೀಂತಂತೆ – ಸೀನುಬಂದ ಹಾಗೆ; ಧರಾಮರವೇಷದೊಳ್ – ಬ್ರಾಹ್ಮಣನ ವೇಷದಲ್ಲಿ.

೯೫. ಶೌರ್ಯಾಭಿಮಾನಕ್ಕೆ-ಪ್ರತಾಪದ ಆತ್ಮಗೌರವಕ್ಕೆ, ಕಣಿಯಂ-ಗಣಿಯಾದ; ಎಡಱದ–ವಕ್ರವಾದ, ರಿಪುಸೈನ್ಯಕ್ಕೆ–ಶತ್ರುಸೈನ್ಯಗಳಿಗೆ, ಸಂಗ್ರಾಮದೊಳ್–ಯುದ್ಧದಲ್ಲಿ, ಬಲ್ಕಣಿಯಂ–ಶೂರನಾದ; ಕಲ್ಹಾರ....ವಂಶಕ್ಕೆ; ಕಲ್ಹಾರ–ಕಲ್ಹಾರ ಪುಷ್ಪದಂತೆ, ಸಾರಾಮೃತ–ಸಾರವಾದ ಅಮೃತದಂತೆ, ಶಶಿ–ಚಂದ್ರನಂತೆ, ವಿಶದ–ಸ್ವಚ್ಛವಾದ, ಆತ್ಮೀಯ ವಂಶಕ್ಕೆ–ತನ್ನ ಕುಲಕ್ಕೆ, ಚೂಡಾಮಣಿಯಂ–ತಲೆರತ್ನವಾಗಿರುವ, ತೀವ್ರ ಪ್ರತಾಪ ದ್ಯುಮಣಿಯಂ-ತೀಕ್ಷ್ಣವಾದ ಪ್ರತಾಪದಲ್ಲಿ ಸೂರ್ಯನಂತಿರುವ, ಎಱೆದ-ಜೇಡಿದ, ಅರ್ಥಿ ವ್ರಜಂಗಳ್ಗೆ–ಯಾಚಕರ ಸಮೂಹಗಳಿಗೆ, ಚಿಂತಾಮಣಿಯಂ–ಬೇಡಿದ್ದನ್ನೆಲ್ಲ ಕೊಡುವ ಚಿಂತಾರತ್ನದಂತಿರುವ, ಸಾಮಂತ ಚೂಡಾಮಣಿಯಂ–ಸಾಮಂತ ರಾಜರಲ್ಲಿ ಶ್ರೇಷ್ಠನಾದ ಅರ್ಜುನನನ್ನು, ಸುರೇಂದ್ರಂ–ಇಂದ್ರನು, ಅಣಿಯರಂ–ವಿಶೇಷವಾಗಿ, ಬಂದು, ಕಂಡಂ – ನೋಡಿದನು. ಬಲ್ಕಣಿ – ಬಲವಾದ ತೊಡಕುಳ್ಳವನು ಎಂದು ಪಂಭಾಕೋ; ಇದಕ್ಕೆ ಶೂರ ಎಂದು ಅರ್ಥೈಸಿ ರಾ. ನರಸಿಂಹಾಚಾರ್ಯರು ಪ್ರಶ್ನಚಿಹ್ನೆ

ಹಾಕಿದ್ದಾರೆ (ಶಾಪಮಂ. ೫೨); ಇಲ್ಲಿ ಪ್ರಶ್ನೆ ಅನಾವಶ್ಯಕವೆಂದು ತೋರುತ್ತದೆ; ಬಲ್–ಶಕ್ತಿಗೆ, ಕಣಿ–ಗಣಿ; ಆದ್ದರಿಂದ ಶೂರ; "ಫಣಿರಾಜಂ ಬಾರಿಯಿಟ್ಟಟ್ಟಿ ದೊಡನುದಿನದಿಂ ಬರ್ಪ ಸರ್ಪಂಗಳಂ ಬಲ್ಗಣಿ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಲಯ ಗಿರಿಯೊಳಿರ್ಪಂ" ಎಂಬ ಪ್ರಯೋಗಾಂತರವುಂಟು; ಕುಮಾರವ್ಯಾಸನು 'ಬಲುಕಣಿ' ಎಂಬ ರೂಪದಲ್ಲಿ ಈ ಶಬ್ದವನ್ನು ಹಲವುಬಾರಿ ಪ್ರಯೋಗಿಸಿರುವನು "ಬಲುಕಣಿಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ" (೭–೩–೩೭), ತಮಿಳಿನಲ್ಲಿ ವಲ್=ಬಲ್ ನಾಮಪದ. "ಎಡಜು–ವಕ್ರಭಾವೇ ದಾರಿದ್ರ್ಯೇಚ"

ಸಪ್ತಮಾಶ್ವಾಸಂ ಸಂಪೂರ್ಣಂ



## ಅಷ್ಟಮಾಶ್ವಾಸಂ

೧. ಶ್ರೀಯಂ–ರಾಜ್ಯಲಕ್ಷ್ಮಿಯನ್ನು, ಭುಜಬಳದಿಂ–ಬಾಹುಬಲದಿಂದ, ನಿರ್ದಾಯಾದ್ಯಂ – ದಾಯಾದಿಗಳಿಲ್ಲದಂತೆ, ಮಾಳ್ಪಬಗೆಯಿಂ – ಮಾಡುವ ಮನಸ್ಸಿನಿಂದ, ಅವಿಕಳ–ಕುಂದಿಲ್ಲದ, ನಿಯಮಶ್ರೀಯಂ–ಯತಿಧರ್ಮದ ನಿಯಮ ಲಕ್ಷ್ಮಿಯನ್ನು, ಅಳವಡಿಸಿ–ಸರಿಯಾಗಿ ಸೇರಿಸಿ, ನಿಂದ–ತಪಸ್ಸಿನಲ್ಲಿ ನಿಂತುಕೊಂಡಿರುವ, ಧರಾಯುವತೀಶನಂ–ಭೂಮಿಯೆಂಬ ಯುವತಿಗೆ ಒಡೆಯನಾದ, ಉದಾತ್ತನಾರಾಯಣನಂ–ಅರ್ಜುನನನ್ನು.

೨. ಕಂಡು–ನೋಡಿ, ನಿಜತನಯನ–ತನ್ನಮಗನ, ಆಳವು–ಪರಾಕ್ರಮ, ಎರ್ದೆಗೊಂಡಿರೆ–ಹೃದ್ಯವಾಗಿರಲು, ಮುದು ಪಾರ್ವನಾಗಿ–ಮುದುಕ ಬ್ರಾಹ್ಮಣನಾಗಿ, ಮೆಲ್ಲನೆ ಸಾರ್ವ–ಮೆಲ್ಲಗೆ ಹತ್ತಿರಕ್ಕೆ ಬರುವ, ಆಖಂಡಳನಂ–ಇಂದ್ರನನ್ನು, ಕಾಣಲೊಡಂ–ಕಂಡಕೂಡಲೇ, ಗಾಂಡಿವಿಗೆ–ಅರ್ಜುನನಿಗೆ, ಅಶ್ರುಜಲಂಗಳ್–ಕಣ್ಣೀರುಗಳು, ಇರದೆ–ಬಿಡದೆ, ಉರ್ಚಿ–ಚಿಮ್ಮಿ, ಪಾಯ್ದುವು–ಹರಿದುವು.

**ವಚನ:** ಪೊಱಪೊಣ್ಮುವ–ಹೊರಕ್ಕೆ ಚಿಮ್ಮುವ; ವಲ್ಕಲ–ನಾರುಬಟ್ಟೆ;

೩. ನೀನಾರ್ಗೆ–ನೀನು ಯಾರು ಅಥವಾ ಯಾರಿಗೆ ಸಂಬಂಧಪಟ್ಟವನು, ನಿನ್ನ ಪೆಸರೇನ್–ನಿನ್ನ ಹೆಸರೇನು? ಈ ನಿಯಮಕ್ಕೆ–ಈ ತಪೋನಿಯಮಕ್ಕೆ, ಮೆಯ್ಯಂ–ಶರೀರವನ್ನು, ಎಂತು ಒಡ್ಡಿದೆ–ಹೇಗೆ ಸೇರಿಸಿದೆ?; ಇದು ದಲ್ ತಾನಾಶ್ಚರ್ಯಂ–ಇದು ನಿಶ್ಚಯವಾಗಿಯೂ ಆಶ್ಚರ್ಯ; ಇದೇನು ಅಜ್ಞಾನಿಯವೊಲ್–ಅಜ್ಞಾನಿಯ ಹಾಗೆ, ಇದೇನು? ತಪಕ್ಕೆ–ತಪಸ್ಸಿಗೆ, ಬಿಲ್ಲುಂ ಅಂಬುಂ ದೊರೆಯೇ–ಬಿಲ್ಲುಬಾಣಗಳು ಸಮಾನವೇ, ತಕ್ಕವೇ?

೪. ನಿನ್ನೆಂದಂತುಟೆ–ನೀನು ಹೇಳಿದಹಾಗೆಯೇ; ಎನ್ನಿರವು–ನನ್ನಸ್ಥಿತಿ, ಮೋಕ್ಷಕ್ಕೆ–ಮುಕ್ತಿಸಾಧನೆಗೆ, ಅಘಟಮಾನಂ–ಹೊಂದಿಕೊಳ್ಳತಕ್ಕುದಲ್ಲ; ಐಹಿಕದ ತೊಡರ್ಪು–ಇಹಲೋಕದ ಬಂಧನ, ಎನ್ನಿರವಿನೊಳುಂಟು–ನನ್ನ ಸ್ಥಿತಿಯಲ್ಲಿ ಇದೆ; ಅಱಪದೆ–ತಿಳಿಸದೆ, ನಿನ್ನಂ–ನಿನ್ನನ್ನು, ಪುಸಿಯಾಡಿ–ಸುಳ್ಳುಹೇಳಿ, ಕಾಡಲ್–ಕಾಡುವುದು, ಎನಗೆ–ನನಗೆ, ಏಂ ದೊರೆಯೇ–ಏನು ಯೋಗ್ಯವೇ? ಅಲ್ಲ ಎಂದು ಭಾವ.

೫. ನಿನಗಂ ಪೇೞ್ವೊಡೆ–ನಿನಗೂ ಹೇಳುವುದಾದರೆ, ಪಾಂಡುರಾಜ ತನಯಂ–ಪಾಂಡುರಾಜನ ಮಗ; ಗಾಂಡೀವಿಯೆಂ–ನಾನು ಗಾಂಡೀವಿಯಾಗಿದ್ದೇನೆ. (ಅರ್ಜುನ); ನೆಲಂ-ರಾಜ್ಯವು, ಜೂದಿನೊಳ್-ಜೂಜಿನಲ್ಲಿ, ದಾಯಿಗಂಗೆ-ದಾಯಾದಿ ದುರ್ಯೋಧನನಿಗೆ, ಒತ್ತೆವೋಗೆ–ಒತ್ತೆಯಾಗಿ ಹೋಗಲು, ಬನಮಂ ಪೊಕ್ಕು–ಕಾಡನ್ನು ಹೊಕ್ಕು, ಅಣ್ಣನೆಂದ–ಅಣ್ಣನು ಹೇಳಿದ, ಒಂದು ಮಾತಂ–ಒಂದು ಮಾತನ್ನು, ಅಣಂ ಮೀಱದೆ–ಕೊಂಚವೂ ಉಲ್ಲಂಘಿಸದೆ, ನಿಂದು–ನಿಂತು, ಶಂಕರನಂ–ಶಿವನನ್ನು, ನೀಂ ಆರಾಧಿಸು–ನೀನು ಸಾಧಿಸು. ಎಂದಿಂತಿದಂ–ಎಂದು ಹೀಗೆ ಇದನ್ನು, ಮುನಿ ಪಾರಾಶರಂ–ಋಷಿವೇದ

ವ್ಯಾಸನು, ಒಲ್ದುಪೇೞ್ದು-ಪ್ರೀತಿಸಿ ಅನುಜ್ಞೆ ಮಾಡಲು, ಹರಬರ್ಪನ್ನಂ-ಶಿವನು ಬರು ವವರೆಗೆ, ತಪಂಗೆಯ್ವುಪೆಂ-ತಪಸ್ಸನ್ನು ಮಾಡುತ್ತೇನೆ.

'ಹರಂಬರ್ಪನ್ನಂ' ಎನ್ನುವುದಕ್ಕೆ ಪ್ರತಿಯಾಗಿ 'ಹರಬರ್ಪನ್ನಂ' ಎಂದು ಪ್ರಕೃತಿ ಪ್ರಯೋಗವಿದೆ.

೬. ಸ್ಫುರಿತ ತಪೋಮಯಾನಳನಿಂ-ಪ್ರಕಾಶಮಾನವಾದ ತಪಸ್ಸೆಂಬ ಅಗ್ನಿ ಯಿಂದ, ನೆಗೞ್ದೀ ಗಿರೀಂದ್ರ ಕಂದರದೊಳಗೆ-ಪ್ರಸಿದ್ಧವಾದ ಈ ಪರ್ವತದ ಕಣಿವೆ ಯಲ್ಲಿ, ಈಯೊಡಲಂ-ಈ ದೇಹವನ್ನು, ಇಂತೆ-ಹೀಗೆಯೇ, ದಲ್-ದಿಟವಾಗಿಯೂ, ಕರಗಿಪೆಂ-ಕರಗಿಸುತ್ತೇನೆ, ಪೆಱತೇಂ-ಬೇರೇನು, ಪಡೆಮಾತೊ-ಸುದ್ದಿಯೋ, ಮೇಣ್- ಅಥವಾ, ಪುರಂದರಂ-ಶಿವನು, ಒಸೆದಿತ್ತದೊಂದು ಬರದಿಂದೆ-ಪ್ರೀತಿಸಿ ಕೊಟ್ಟ ಒಂದು ವರದಿಂದ, ಉೞದೆ-ಬಿಡದೆ, ಎನ್ನ-ನನ್ನ, ವಿರೋಧಿ ವರ್ಗಮಂ-ಶತ್ರು ಸಮೂಹವನ್ನು, ಕರಗಿಪೆಂ-ಕರಗಿಸುತ್ತೇನೆ, ಅಲ್ಲದೆ ಇಲ್ಲಿ-ಅಲ್ಲವೆ ಈ ಸಮಯದಲ್ಲಿ, ದ್ವಿಜೋತ್ತಮಾ- ಬ್ರಾಹ್ಮಣ ಶ್ರೇಷ್ಠನೇ, ಸೆರಗಂ ಬೆರಗಂ ಬಗೆಯೆಂ-ಅಪಾಯವನ್ನಾಗಲಿ ಉಪಾಯವ ನ್ನಾಗಲಿ ಎಣಿಸೆನು. ಪುರಂದರ-ಇಂದ್ರ, ಶಿವ ಎರಡೂ ಅರ್ಥಗಳುಂಟು ; ಸೆರಗು= (ತೆ)ಸೆರಗು-ಅಪಾಯ, ಕೇಡು ; ಬೆರಗು=(ತ) ವೆರವು-ಉಪಾಯ.

೭. ಎನೆಯೆನೆ-ಎನ್ನಲೆನ್ನಲು, ರತ್ನರಶ್ಮಿಜಟಿಳಂ – ರತ್ನಗಳ ಕಿರಣಗಳಿಂದ ಹೆಣೆದುಕೊಂಡಿರುವ, ಮಕುಟಂ-ಕಿರೀಟ, ಮಣಿಕುಂಡಳಂ-ರತ್ನಕುಂಡಲ, ಕನತ್ಕನಕ ಪಿಶಂಗ ದೇಹರುಚಿ-ಹೊಳೆಯುವ ಚಿನ್ನದಂತೆ ಕೆಂಪುಹೊಂಬಣ್ಣ ಮಿಶ್ರವಾದ ಮೈ ಕಾಂತಿ, ನೀಳ ಸರೋಜ ವನಂಗಳ್-ಕನ್ನೈದಿಲೆಯ ವನಗಳು, ಉಳ್ಳನಿತುಂ- ಇರುವಷ್ಟೂ, ಅಲರ್ವವೊಲ್-ಅರಳುವ ಹಾಗೆ, ಪೊಳೆವ ಕಣ್ಗಳುಂ-ಹೊಳೆಯುವ ಸಹಸ್ರ ನೇತ್ರಗಳು-ಇವೆಲ್ಲ, ವಿಕ್ರಮಾರ್ಜುನನ ಮನಕ್ಕೆ-ಅರ್ಜುನನ ಮನಸ್ಸಿಗೆ, ಅೞ್ಕಱನೀಯೆ-ಪ್ರೀತಿಯನ್ನುಂಟುಮಾಡಲು, ಇಳಾಮರಂ-ಬ್ರಾಹ್ಮಣನು, ಅಂದು- ಆಗ, ಅಮರೇಂದ್ರ ರೂಪಮಂ-ಇಂದ್ರನ ಆಕಾರವನ್ನು, ತೋಱಿದಂ-ತೋಱಿಸಿದನು.

**ವಚನ :** ಮನದೞ್ಕಱಂ ತೋಱಲೆಂದು-ಮನಸ್ಸಿನ ಪ್ರೀತಿಯನ್ನು ತೋರ ಬೇಕೆಂದು ;

೮. ಅರಿನೃಪರಂ-ವೈರಿ ರಾಜರನ್ನು, ಸಾಧಿಸುವೊಡಂ-ಗೆಲ್ಲುವ ಪಕ್ಷದಲ್ಲಿ, ಅಸ್ತ್ರಚಯಮುಂ-ಬಾಣಗಳ ಸಮೂಹವನ್ನು, ಸಾಧಿಸುವೊಡಂ-ಪಡೆಯುವ ಪಕ್ಷದಲ್ಲಿ, ಇನ್ನುಂ-ಇನ್ನು ಕೂಡ, ತಪೋಗ್ನಿಯಿಂದೆ-ತಪಸ್ಸೆಂಬ ಅಗ್ನಿಯಿಂದ, ತನುವಂ-ದೇಹ ವನ್ನು, ಬಾಧಿಸು-ಹಿಂಸಿಸು, ದಂಡಿಸು ; ಮಗನೆ-ಮಗನೇ, ನೀಂ-ನೀನು, ದುರಿತಹರನಂ ಹರನಂ-ಪಾಪವನ್ನು ಹೋಗಲಾಡಿಸುವ ಶಿವನನ್ನು, ಆರಾಧಿಸು-ಸೇವಿಸು.

೯. ಎಂದು-ಎಂದು ಹೇಳಿ, ತಿರೋಹಿತನಾಗಿ-ಅದೃಶ್ಯನಾಗಿ, ಪುರಂದರನುಂ- ಇಂದ್ರನೂ, ಪೋದಂ-ಹೋದನು ; ಇತ್ತ-ಇತ್ತ ಕಡೆ, ತಪದೊಳ್-ತಪಸ್ಸಿನಲ್ಲಿ, ನರಂ- ಅರ್ಜುನ, ಇಂತೊಂದಿ ನಿಲೆ-ಹೀಗೆ ಸೇರಿ ನಿಲ್ಲಲು, ತಪದ ಬಿಸುಪಿಂ-ತಪಸ್ಸಿನ ಬೇಗೆ

ಯಿಂದ, ವನದೊಳುಳ್ಳ–ವನದಲ್ಲಿರುವ, ತಪಸಿಯರ–ತಪಸ್ವಿಗಳ ; ತಪಂ–ತಪಸ್ಸು, ಬೆಂದು–ಸೀದು, ಅೞಿದುದು–ನಾಶವಾಯಿತು.

೧೦. ನರೇಂದ್ರ ತಾಪಸನ – ಅರ್ಜುನನ, ತಪೋಮಯೂಖಾವಳಿಗಳ್ – ತಪಸ್ಸಿನ ಕಿರಣಗಳ ಶ್ರೇಣಿ, ಪಗಲ್–ಹಗಲು, ಖರಕರಕಿರಣಾವಳಿಯಂ–ಸೂರ್ಯಕಿರಣಗಳ ಸಮೂಹವನ್ನು, ಪರಿದು–ಓಡಿ, ಎೞ್ಬಿಟ್ಟಿದುವು–ಎಬ್ಬಿಸಿ ಓಡಿಸಿದುವು ; ಇರುಳ್–ರಾತ್ರಿ, ಶಶಿರುಚಿಯಂ–ಚಂದ್ರನ ಕಾಂತಿಯನ್ನು, ಪರಿಭವಿಸಿ–ತಿರಸ್ಕರಿಸಿ, ನಭಮಂ–ಆಕಾಶವನ್ನು, ಅಡರ್ದುವು–ಹತ್ತಿದುವು.

**ವಚನ :** ತಪಸ್ತಪನ–ತಪಸ್ಸೆಂಬ ಸೂರ್ಯನ ; ವಿಪುಳ ಮರೀಚಿಗಳ್–ಅನೇಕ ರಶ್ಮಿಗಳು, ತಪೋವಿಘಾತಮಂ–ತಪಸ್ಸಿಗೆ ಹಾನಿಯನ್ನು ; ತಳ್ತಿರ್ದ–ಸೇರಿ ಇದ್ದ ; ಬಾಳೇಂದು ಚೂಡಾಮಣಿಗೆ–ಶಿವನಿಗೆ ;

೧೧. ಆವನೆಂದಱಿಯಲ್ಕೆ ಬಾರದು-ಯಾರು ಎಂದು ತಿಳಿಯುವುದಾಗುವುದಿಲ್ಲ; ಅಪೂರ್ವಂ–ಅಪರೂಪನಾದ, ಒರ್ವಂ–ಒಬ್ಬನು, ಅರಾತಿ ವಿದ್ರಾವಣಂ–ಶತ್ರುಗಳನ್ನು ಓಡಿಸುವವನು, ತಪಕೆಂದು–ತಪಸ್ಸಿಗೆ ಎಂದು, ನಿಂದೊಡೆ– ನಿಂತುಕೊಂಡರೆ, ತತ್ತಪೋಮಯ ಪಾವಕಂ–ಆ ತಪಸ್ಸಿನಿಂದ ತುಂಬಿದ ಅಗ್ನಿ, ದಾವ ಪಾವಕನಂತೆವೋಲ್–ಕಾಳ್ಕಿಚ್ಚಿನ ಹಾಗೆ, ಸುಡೆ–ಸುಡಲು, ಎಮ್ಮ–ನಮ್ಮ, ತಪಂಗಳ್–ತಪಸ್ಸುಗಳು, ಬೆಂದುವು–ಸುಟ್ಟುಹೋದುವು ; ಇನ್ನಾವ–ಇನ್ನು ಯಾವ, ಶೈಲದೊಳ್–ಬೆಟ್ಟದಲ್ಲಿ ; ಇರ್ಪೆವು–ಇರುವೆವು, ಇರೋಣ, ತ್ರಿಪುರಾಂತಕಾ–ಶಿವನೇ, ನೀಂ-ನೀನು, ಇರ್ಪ–ನಾವು ಇರಬೇಕಾದ, ಎಡೆವೇೞ–ಪ್ರದೇಶವನ್ನು ಸೂಚಿಸು. "ಮಲ್ಲಿಕಾಯುತ ಮಾಲೆಯಪ್ಪುದು ರಂಸಜಂಜಭರಂ ಬರಲ್"

೧೨. ಆರೋಪಿತ ಚಾಪಂ–ಹೆದೆಯೇರಿಸಿದ ಬಿಲ್ಲುಳ್ಳ, ಸಂಧಾರಿತ ಕವಚಂ–ಧರಿಸಿದ ಕವಚವುಳ್ಳ, ಧೃತೋಗ್ರಶರಧಿ ಯುಗಂ–ಬೆನ್ನಿನಲ್ಲಿ ಹೊತ್ತಿರುವ ಎರಡು ಭಯಂಕರ ಬತ್ತಳಿಕೆಗಳನ್ನುಳ್ಳ, ಅವಂ–ಆ ಅರ್ಜುನನು, ಅವನು, ತಾಂ–ತಾನು, ಆರಂದಮಲ್ಲ–ಯಾರ ರೀತಿಯವನೂ ಅಲ್ಲ ; ತ್ರಿಪುರಾರೀ–ಶಿವನೇ, ಕೇಳ್–ಕೇಳು, ತ್ರಿಪುರಮಿಸುವ–ತ್ರಿಪುರಕ್ಕೆ ಬಾಣಸಂಧಾನ ಮಾಡುವ, ನಿನ್ನನ್ನೆ–ನಿನ್ನನ್ನೇ, ಪೋಲ್ವಂ–ಹೋಲುತ್ತಾನೆ.

**ವಚನ :** ಅಱಿಯಲೆಂದು–ತಿಳಿಯುವುದಕ್ಕಾಗಿ.

೧೩. ಅಭವಂ–ಶಿವನು, ಧ್ಯಾನದೊಳ್–ಧ್ಯಾನದಲ್ಲಿ, ನೆಱೆದು–ಪೂರ್ಣವಾಗಿ, ಇನಿಸಾನುಮಂ–ಒಂದು ಸ್ವಲ್ಪ, ಕಣ್ಗಳಂ–ಕಣ್ಣುಗಳನ್ನು, ಅರೆಮುಚ್ಚಿ–ಅರ್ಧಮುಚ್ಚಿ, ನಿಶ್ಚಳಿತಂ–ಸ್ತಿಮಿತನಾಗಿ, ತಾನಿರ್ದ–ತಾನು ಇದ್ದು, ಮಱೆದು ಕೆಂದಿದ–ಮೈಮರೆತು ಮಲಗಿದ, ಮೀನಂ–ಮೀನನ್ನು, ತಳ್ತು–ಹೊಂದಿ, ಆಡದಿರ್ದ–ಅಲುಗಾಡದೆ ಇದ್ದ, ಮಡುವಂ ಪೋಲ್ತಂ–ಮಡುವನ್ನು ಹೋಲಿದನು. "ಸುಪ್ತಮೀನಮಿವಹ್ರದಃ" ಎಂಬ ಕಾಳಿದಾಸನ ಉಪಮೆಯನ್ನು ನೆನೆಯಬಹುದು.

**ವಚನ:** ಬೆರಲಂ ಮಿಡಿದು–ಬೆರಳನ್ನು ಚಿಟುಕಿಸಿ; ಪುಯ್ಯಲಂ–ಹೋರಾಟ ವನ್ನು; ಏನಾನು[ಮೆ]ಡಂಬುಡಂಮಾಡಿ–ಏನಾದರೂ ಕೀಟಲೆಯನ್ನು ಮಾಡಿ; ಇಲ್ಲಿ 'ಎಡಂಬಡಂ' ಎಂದು ಪಾಠವಿರಬೇಕು.

**೧೪.** ಶಂಭು – ಶಿವನು, ವನಚರನಾಗಿ – ಬೇಡರವನಾಗಿ, ಗಿರಿಜಾತೆಯಂ– ಪಾರ್ವತಿಯನ್ನು, ಓತು – ಪ್ರೀತಿಸಿ, ಪುಳಿಂದಿಮಾಡಿ – ಬೇಡಿತಿಯನ್ನಾಗಿ ಮಾಡಿ, ನಚ್ಚಿನ ಗುಹನಂ–ನಂಬಿಕೆಯ ಷಣ್ಮುಖನನ್ನು, ಕಿರಾತ ಬಲನಾಯಕನಾಗಿರೆ ಮಾಡಿ– ಬೇಡರ ಸೈನ್ಯದ ನಾಯಕನನ್ನಾಗಿ ಮಾಡಿ, ಭೂತಮುಳ್ಳನಿತುಮಂ-ಇರುವಷ್ಟು ಮರುಳು ಗಳನ್ನೂ, ಬೇಡವಡೆಮಾಡಿ-ಬೇಡರ ಪಡೆಯನ್ನಾಗಿ ಮಾಡಿ, ಯುಗಾಂತ ಪಯೋಧರಾಳಿ- ಪ್ರಳಯ ಕಾಲದ ಮೇಘ ಸಮೂಹ, ಭೋಂಕನೆ–ಬೇಗನೆ, ಕವಿಪಂದದಿಂ–ಮುಚ್ಚಿ ಕೊಳ್ಳುವ ಹಾಗೆ, ಮೃಗಯಾ ನಿಧಾನಮಂ–ಬೇಟೆಗೆ ಆಕರವಾದ, ಆ ಬನಮಂ–ಆ ಕಾಡನ್ನು, ಕವಿದಂ–ಮುಚ್ಚಿದನು, ಮುತ್ತಿದನು.

**ವಚನ:** ಆ ಕಳಕಳಕ್ಕೆ–ಆ ಕೋಲಾಹಲಕ್ಕೆ; ಏವಯಿಸಿ-ಅಸಮಾಧಾನಪಟ್ಟು, ಕೋಪಿಸಿ; ವರಾಹರೂಪದ–ಹಂದಿಯಾಕಾರದ.

**೧೫.** ಪೊರಳೆ–ಹೊರಳಲು, ವಾರಿಧಿಗಳ್ – ಸಮುದ್ರಗಳು, ಕಲಂಕಿದುವು– ಕದಡಿದುವು; ಮೆಯ್ಯಂ–ಮೈಯನ್ನು, ಉರ್ದೆ–ಉಜ್ಜಲು, ಉದಗ್ರ–ಅತಿ ಎತ್ತರವಾದ, ಮಂದರಂ–ಮಂದರಪರ್ವತ, ಅದು, ಅಂದು ಅಲುಗಿತ್ತು–ಅಳ್ಳಾಡಿತು; ಬಾಯ್ಗೆಯೆ– ಡುರುಕೆಂದು ಕೂಗಿದರೆ, ದಿಗ್ಗಜಂ–ದಿಕ್ಕಿನಾನೆಗಳು, ಪೆಜಗಿಟ್ಟುವು–ಹಿಂದಕ್ಕೆ ಸರಿದುವು; ಅಂತರದೆ–ನಡುವೆ, ತೊಟ್ಟನೆ–ಬೇಗನೆ, ದಾಡೆಗುಟ್ಟೆ–ಕೋರೆಹಲ್ಲುಗಳನ್ನು ಕಡಿಯಲು, ತಾರಗೆಗಳ್–ನಕ್ಷತ್ರಗಳು, ಕಟಿಲ್ದು–ಸಡಿಲವಾಗಿ, ನಭಂಬೆರಸು–ಆಕಾಶ ಸಮೇತವಾಗಿ, ಬಿಬ್ದುವು–ಕೆಳಕ್ಕೆ ಬಿದ್ದುವು; ದೈತ್ಯವರಾಹನಾ–ರಾಕ್ಷಸಹಂದಿಯ, ಪೆಂಪಿದೇಂ– ಹಿರಿಮೆ ಏನು, ಪಿರಿದಾಯ್ತೊ–ಅತಿಶಯವಾಯಿತೋ!

**ವಚನ:** ಮುರಾಂತಕನುಮಂ–ವಿಷ್ಣುವನ್ನೂ, ಇ[ಳಿ]ಸಿ–ತಿರಸ್ಕರಿಸಿ; ಕಪ್ಪಂ ಗವಿಯುಮಾಗೆ–ಮುಚ್ಚುವ ಮುಚ್ಚಳವಾಗಲು; ಕೃತಕ ಕಿರಾತಂ–ಮಾಟದ ಬೇಡ; ತನ್ನತ್ತ ಮೊಗದೆ–ತನ್ನ ಕಡೆಗಭಿಮುಖವಾಗಿ; ಅಕ್ಷೂಣ ಬಾಣಧಿ–ಕೊರತೆಯಿಲ್ಲದೆ ಎಂದರೆ ಅಕ್ಷಯವಾದ ಬತ್ತಳಿಕೆಯಿಂದ; ಕಪ್ಪಂಗವಿ<ಕಪ್ಪುವ–ಆವರಿಸುವ, ಮುತ್ತಿ ಕೊಳ್ಳುವ, ಮುಚ್ಚುವ+ಕವಿ–ಮುಚ್ಚಳ; (ತ,ತೆ,ಮ) ಕಪ್ಪು–ಮೂಡಿಕೊಳ್ಳುದಲ್; ಕವಿ–ಮುಚ್ಚಳ; "ಕವಿ ಪೊಜಗಿರೆ ಕೀಲ್ತೊಳಗಿರಲವಿರಳಮಾ ತುರಗ ಬಳಮೊ ನೃಪ ಮಂದಿರಮೊ"; ಪಂಪಭಾ ೧೨–೨೦ಗ ನೋಡಿ.

**೧೬.** ತೆಗೆದೆಚ್ಚ–ಹೆದೆಯನ್ನು ಎಳೆದು ಪ್ರಯೋಗಮಾಡಿದ, ಅರ್ಜುನನ, ಅಂಬು – ಬಾಣ, ತುದಿಯಿಂ – ತುದಿಯಿಂದ, ಬಾಲಂಬರಂ – ಬಾಲದವರೆಗೆ, ತೀವೆ– ವ್ಯಾಪಿಸಲು, ಸೌಳಗೆ–ಸೌಳೆಂದು (ಸೀಳುವ ಧ್ವನಿ), ಪೋಪಂತಿರೆ–ಹೋಗುವಹಾಗೆ, ಎಂದರೆ ಸೀಳಿಹೋಗುವಂತೆ, ಪಂದಿ–ಹಂದಿ, ನೋಡ–ನೋಡು, ಸಂಬಳಿಗೆ ವೋಯ್ತು–

ಸಂಪುಟವಾಗಿ ಹೋಯಿತು ಎಂದರೆ ಪೈಯಲ್ಲೇ ಅಡಗಿತು, ಎಂಬನ್ನೆಗಂ-ಎನ್ನುತ್ತಿರಲು, ಕೊಂಡುದು—ನಾಟಿತು ; ಒಯ್ಯನೆ—ಮೆಲ್ಲಗೆ, ಪಾರ್ದು—ನೋಡಿ, ಎಚ್ಚ—ಪ್ರಯೋಗಿಸಿದ, ವೃಷಾಂಕನ—ಶಿವನ, ಅಂಬು—ಬಾಣ, ತನುವಂ—ಮೈಯನ್ನು, ಪಚ್ಚಂತೆ—ವಿಭಾಗಿಸಿದ ಹಾಗೆ, ತೊಟ್ಟನೆ—ಬೇಗನೆ, ವೈಮಾನಿಕ ಕೋಟಿಗೆ—ವಿಮಾನಸ್ಥರಾಗಿ ನೋಡುತ್ತಿದ್ದ ದೇವತೆಗಳ ನೆರವಿಗೆ, ಅಂದು, ಪಿರಿದೊಂದುತ್ಸಾಹಂ—ಹಿರಿದಾದ ಉತ್ಸಾಹವೊಂದು, ಅಪ್ಪನ್ನೆಗಂ—ಆಗತ್ತಿರಲು. ಕೊಂಡತ್ತು—ಕತ್ತರಿಸಿತು, ಸಂಬಳಿಗೆ < ಸಂ. ಸಂಪುಟಿಕಾ.

**ವಚನ :** ವರಾಹಾರುಣಜಲಧಾರಾರುಣಮಾಗಿರ್ದ-ಹಂದಿಯ ರಕ್ತಧಾರೆಯಿಂದ ಕೆಂಪಾಗಿದ್ದ ; ಆತ್ಮೀಯ ಬಾಣಮಂ—ತನ್ನ ಬಾಣವನ್ನು ; ಬಾಣಧಿಯೊಳ್—ಬತ್ತಳಿಕೆ ಯಲ್ಲಿ ; ಪ್ರಕ್ಷಾಳನಂಗೆಯ್ದು — ತೊಳೆದುಕೊಂಡು ; ಮಗುಳ್ದು—ಪುನಃ ; ಏಕಪಾದ ತಪದೊಳ್—ಒಂಟೀಪಾದದ ಮೇಲೆ ನಿಂತು ಮಾಡುವ ತಪಸ್ಸಿನಲ್ಲಿ ; ಗೀರ್ವಾಣ ನಾಥಾತ್ಮಜನಲ್ಲಿಗೆ—ಇಂದ್ರನ ಮಗನಾದ ಅರ್ಜುನನಲ್ಲಿಗೆ ; ಅಹಿಭೂಷಣಂ—ಶಿವನು.

೧೭. ಗೊರವರೆ—ತಪಸ್ವಿಗಳೇ, ತಪಕ್ಕೆ—ತಪಸ್ಸಿಗೆ, ಬೂದಿಯುಂ ಜಡೆಯುಂ—ಬೂದಿಯೂ ಜಟೆಯೂ, ಅಕ್ಕೆ—ಆಗಲಿ ; ತನುತ್ರಂ—ಕವಚ, ಈ ಭಯಂಕರ ಧನು—ಈ ಭಯಪ್ರದವಾದ ಬಿಲ್ಲು, ಖಡ್ಗಂ—ಕತ್ತಿ, ಅತ್ತಪರಂ—ಗುರಾಣಿ, ಇಂತೆರಡುಂ ದೊಣೆ—ಹೀಗೆ ಎರಡೂ ಬತ್ತಳಿಕೆಗಳು, ತೀವಿದಂಬು—ತುಂಬಿದ ಬಾಣಗಳೂ, ಇವುಗಳ ಒಂದಿರವು—ಒಂದು ಸ್ಥಿತಿ, ತಪಕ್ಕಿದೆಂತುಟೋ—ತಪಸ್ಸಿಗೆ ಇವು ಹೇಗೋ? ತಪಂಗಳು ಮಿಲ್ಲ—ತಪಸ್ಸುಗಳು ಕೂಡ ಇಲ್ಲ ; ಅವು ಉಳ್ಳೊಡೆ—ಅವು ಇರುವ ಪಕ್ಷದಲ್ಲಿ, ಈಗಳ್—ಈಗ, ಎಮ್ಮರಸರ-ನಮ್ಮ ಪ್ರಭುವಿನ, ನಚ್ಚಿನ-ನಂಬಿಕೆಯ, ಎಚ್ಚಶರಮಂ—ಬಿಟ್ಟ ಬಾಣ ವನ್ನು, ಸೆರಗಿಲ್ಲದೆ—ಭಯವಿಲ್ಲದೆ, ಕೊಂಡುಬರ್ಪಿರೇ—ತೆಗೆದುಕೊಂಡು ಬರುತ್ತೀರೋ?

೧೮. ಅಱಿಯದೆ—ತಿಳಿಯದೆ, ತಂದೊಡಮೇನ್—ತಂದರೆ ಏನು ; ಎಮ್ಮ ಱಿಯಂಗೆ—ನಮ್ಮ ಅರಸನಿಗೆ, ಅದಂ—ಅದನ್ನು, ಎಮ್ಮಕೆಯ್ಯೊಳ್—ನಮ್ಮಕೈಯಲ್ಲಿ, ಅಟ್ಟಂ—ಕಳಿಸಿಕೊಡಿರಿ ; ನೀಂ—ನೀವು, ಇಂತು—ಹೀಗೆ, ಅಱಿಯುತ್ತುಂ—ತಿಳಿಯುತ್ತ ಎಂದರೆ ತಿಳಿದವರಾಗಿದ್ದು, ಪೆಱರ—ಇತರರ, ಒಡವೆಯಂ—ಸ್ವತ್ತನ್ನು, ಉಱಿ—ಹೊಂದಿ, ಸೆಱೆವಿಡಿದಿರ್ಪಿರ್—ಸೆರೆಹಿಡಿದಿದ್ದೀರಿ, ಇನ್ನರ್—ಇಂಥವರು, ಉರ್ವಿಯೊಳ್—ಭೂಮಿ ಯಲ್ಲಿ, ಒಳರೇ—ಉಂಟೇ?

**ವಚನ :** ಕಿರಾತದೂತಂ—ಬೇಡನ ದೂತ ; ಅತಿಕ್ರಮಿಸಿ—ಮೀರಿ ;

೧೯. ಬೇಡಂಗೆ — ಬೇಡರವನಿಗೆ, ಮೃಗಮಂ — ಪ್ರಾಣಿಯನ್ನು, ಇಸಲ್ಕೆ—ಪ್ರಯೋಗಿಸಲು, ದಸಿಕು ಒಂದು—ಒಂದು ಮೊಳೆ, ದೊರೆಯಕ್ಕುಂ—ಸಾಟಿಯಾಗುತ್ತದೆ ; ಈ ಜಗಂಗಳಂ—ಈ ಲೋಕಗಳನ್ನು. ಅಳ್ಳಾಡಿಸುವ—ಅಲ್ಲಾಡುವಂತೆ ಮಾಡುವ. ಮದೀಯ—ನನ್ನ, ಉಗ್ರಾಸ್ತ್ರಂ—ಭಯಂಕರವಾದ ಬಾಣ. ಪೆಸರ್ಗೊಳಲ್—ಹೆಸರು ಹೇಳುವುದಕ್ಕೆಕೂಡ. ತನಗೆ, ದೊರೆಯೇ ಏಂ—ಸಮಾನವೇ ಏನು? ಖಳಂ—ದುಷ್ಟನು. ಅಳವಱಿಯಂ—ತನ್ನ ಅಳತೆಯನ್ನು, ಯೋಗ್ಯತೆಯನ್ನು. ತಿಳಿಯಂ—ತಿಳಿಯನು.

೨೦. ಏಱಸೆ–ಕಲಹವನ್ನೇ, ಸೂಱಗೊಂಡು–ಹಿಡಿದುಕೊಂಡು, ನುಡಿವೀ ನುಡಿಯಲ್ಲದೆ - ನುಡಿಯುವ ಈ ಮಾತು ಅಲ್ಲದೆ; ಮತ್ತಂ – ತಿರುಗಿಯೂ, ಆಸನಂ ದೋಱುವ – ಉಪೇಕ್ಷೆಯನ್ನು ತೋರಿಸುವ, ಬಲ್ಪುದೋಱುವ – ಶಕ್ತಿಪ್ರದರ್ಶನ ಮಾಡುವ, ಎರ್ದೆದೋಱುವ–ಧೈರ್ಯವನ್ನು ತೋರಿಸುವ, ಕಯ್ಪಿಸರಂಗಳ್–ಕಹಿಯಾದ ಮಾತುಗಳು, ಎಮ್ಮಂ-ನಮ್ಮನ್ನು, ಉಂತೆ-ಸುಮ್ಮನೆ, ಏಱವು-ಆಡರವು, ಹತ್ತಲಾರವು; ಬೇಡ–ಬೇಡವೋ! ಬೇಡ–ಬೇಡನೇ, ಬೇಡದಿರು–ಬಾಣವನ್ನು ಕೇಳಬೇಡ; ಚಲಂ ಬೆರಸು–ಛಲದೊಡನೆ ಕೂಡಿ, ಅಂಬನಂಬನ್–ಬಾಣ ಬಾಣವನ್ನು, ಇನ್ಕಾಱುತೆ– ಇನ್ನು ಕಕ್ಕುತ್ತ, ಮೋದಲಾಟಿಪೊಡೆ–ಹೊಡೆಯಲು ಬಯಸುವುದಾದರೆ, ಎಂದರೆ ಯುದ್ಧಮಾಡಲು ಮನಸ್ಸಿದ್ದರೆ, ನಿನ್ನನಾಳ್ದನಂ–ನಿನಗೆ ಪ್ರಭುವಾದವನನ್ನು, ನೀಂ– ನೀನು, ಬರವೇೞ್ಪುದು–ಬರುವಂತೆ ಹೇಳುವುದು. ಆಸನಂ-ಷಾಡ್ಗುಣ್ಯಗಳಲ್ಲಿ ಒಂದು; 'ಉಪೇಕ್ಷಣಮಾಸನಂ' ಎಂದು ಕೌಟಿಲ್ಯ; ಕಯ್ಪಿ =(ತ) ಕಪ್ಪು;

**ವಚನ :** ಬಗ್ಗಿಸಿದೊಡೆ–ಗದರಿಸಿದರೆ, ಬೈದರೆ; ಆ ಮಾೞ್ಕೆಯೊಳ್–ಆ ರೀತಿ ಯಲ್ಲೇ; ಪೊಣರ್ಚಲ್ ಬಗೆದು-ಗಂಟಿಕ್ಕಲು, ಸೇರಿಸಲು, ಆಲೋಚಿಸಿ; ಒಡ್ಡಿದಾಗಳ್- ಚಾಚಿದಾಗ; ಸೆರಗಿಲ್ಲದೆ–ಅಂಜಿಕೆಯಿಲ್ಲದೆ;

೨೧. ಚತುರ್ಬಲಂ–ಚತುರಂಗ ಸೈನ್ಯ, ಕೆದಱೆ–ಚೆದರಲು, ತಳ್ತದಟಿಂ– ಸೇರಿದ ಸೈನ್ಯ, ಬೆದಱೆ–ಬೆದರಲು, ಘಟಾಳಿ–ಆನೆಗಳ ಗುಂಪು, ಕೆಡೆದು–ಬಿದ್ದು, ಅೞ್ಗಿ ತಟ್ಟಿ–ನಾಶವಾಗಿ ಕುಗ್ಗಿ, ಮಾಣದೆ–ನಿಲ್ಲದೆ, ಪೆಱಗಿಟ್ಟು–ಹಿಂಜರಿದು, ಬಾಯ್ವಿಡೆ– ಕೂಗಿಕೊಳ್ಳಲು; ಗುಣಾರ್ಣವನಂಬು – ಅರ್ಜುನನ ಬಾಣ, ಲಕ್ಕಲಿಕ್ಕದೆ – ಲಕ್ಷ, ಸಂಖ್ಯೆಯಿಂದ, ಕೊಳೆ–ನಾಟಲು, ಚಾತುರಂಗ ಬಲಂ–ನಾಲ್ಕುಬಗೆ ಸೈನ್ಯಗಳು, ಅಂತು–ಹಾಗೆ, ಅೞಿದು–ನಾಶವಾಗಿ, ಅೞ್ಗೆ–ಕುಸಿಯಲು, ಹರ–ಶಿವನು, ಕನಲ್ದು ನಲ್ದು – ಅತಿಯಾಗಿ ಕೆರಳಿ, ಮಾಣದೆ – ಬಿಡದೆ, ಪಾರ್ಥನೊಳ್ – ಅರ್ಜುನನೊಡನೆ, ದಿಗಿಭಂ–ದಿಗ್ದಂತಿ, ದಿಗಿಭದೊಳ್–ದಿಗ್ದಂತಿಯೊಡನೆ, ಪೆಣೆವಂತೆ–ಹೆಣೆದುಕೊಳ್ಳುವ ಹಾಗೆ, ಪೆಣೆದಂ–ಹೆಣೆದುಕೊಂಡನು, ಹೋರಾಡಿದನು.

**ವಚನ :** ಶೂನ್ಯಹಸ್ತದೊಳ್-ಬರಿಗೈಯಲ್ಲಿ, ನಿರಾಯುಧರಾಗಿ; ಪಲವುಂಗಾಯ ದೊಳಂ-ಹಲವು ಪಟ್ಟುಗಳಲ್ಲಿ; ಆಯಂದಪ್ಪದೆ-ಸಾಮರ್ಥ್ಯತಪ್ಪಿಹೋಗದೆ; ಸಂತರ್ಪಿನಂ= ಸಲ್ತರ್ಪಿನಂ–ಸಲ್ಲುತ್ತಿರಲು, ಕಳೆದುಹೋಗುತ್ತಿರಲು, ; ಪೋರೆ–ಹೋರಾಡಲು : ಇಲ್ಲಿಂದ ಮುಂದಕ್ಕೆ 'ತಮ್ಮಂನೋೞ್ಪಂತೆ' ಎಂದು ಪಾಠವಿದೆ; (ಗ)ದಲ್ಲಿ ಪಾಠಾಂತರ 'ಕಮಂ' ಎಂದಿದೆ. 'ಅಂಬರತಳದೊಳ [ದ್ವಂಕಮಂ] ನೋೞ್ಪಂತೆ' ಎಂದು ಕವಿಪಾಠವಿದ್ದಿರ ಬಹುದು. ದೇವತೆಗಳೆಲ್ಲ ಆಕಾಶದಲ್ಲಿದ್ದು, ಅಂಕಮಂ – ದ್ವಂದ್ವಯುದ್ಧವನ್ನು, ನೋೞ್ಪಂತೆ–ನೋಡುವಂತೆ ಎಂದರ್ಥವಾಗುತ್ತದೆ,

೨೨. ಅಭವಂ–ಶಿವನು, ಪಾರ್ಥನಂ–ಅರ್ಜುನನನ್ನು, ಇಕ್ಕಿದಂ–ಬೀಳಿಸಿದನು; ಅರ್ಜುನಂ–ಅರ್ಜುನನು, ಆ ತ್ರಿಪುರಹರನಂ–ಆ ಶಿವನನ್ನು, ಇಕ್ಕಿದಂ–ಬೀಳಿಸಿದನು,

ಎನೆ–ಎನ್ನಲು, ಗೆಲ್ಲಕ್ಕೆ–ವಿಜಯಕ್ಕೆ, ಮುಡಿಗಿಕ್ಕುವಂತೆವೊಲ್–ಮುಡಿಗೆ ಹಾಕುವ ಹಾಗೆ ಎಂದರೆ ಸವಾಲುಮಾಡುವ ಹಾಗೆ, ಹರಿಗಂ–ಅರ್ಜುನ, ಹರನಂ–ಶಿವನನ್ನು, ನೆಲದೊಳ್–ನೆಲದಲ್ಲಿ, ಅವಯವದೆ–ಶ್ರಮವಿಲ್ಲದೆ, ಇಕ್ಕಿದಂ–ಕೆಡವಿದನು

**ವಚನ :** ನೆಲಕ್ಕಿಕ್ಕಿ–ನೆಲದ ಮೇಲೆ ಬೀಳಿಸಿ.

**೨೩.** ಪೊಱಕಣ್ಗಂ–ಹೊರಕ್ಕೆ ಕಾಣುವ ಕಣ್ಣುಗಳಿಗಿಂತ, ಮುನ್ನಂ–ಮುಂಚೆಯೇ, ತಾಂ–ತಾನು, ಮಱಸಿದ–ಮರೆಮಾಡಿದ್ದ, ನೊಸಲ ಒಂದು ಕಣ್ಣುಂ–ಹಣೆಯ ಕಣ್ಣೊಂದು, ನೊಸಲಿಂ–ಹಣೆಯಿಂದ, ಪೊಱಮಟ್ಟಂತಿರೆ–ಹೊರಗೆ ಬಂದ ಹಾಗಾಗಿರಲು, ರುದ್ರಂ–ಶಿವನು, ಹರಿಗಂಗೆ–ಅರ್ಜುನನಿಗೆ, ಅಗ್ಗಳಗಣ್ಣಂ–ಶ್ರೇಷ್ಠವಾದ ಕಣ್ಣನ್ನು, ಎಱಕದೆ–ಪ್ರೀತಿಯಿಂದ, ತೋಱದಂ–ತೋರಿಸಿದನು.

**೨೪.** ಉರದೊಳ್–ಎದೆಯಲ್ಲಿ, ಫಣಿ–ಸರ್ಪ ; ಕರದೊಳ್–ಕೈಯಲ್ಲಿ, ಬಿಲ್–ಬಿಲ್ಲು; ಶಿರದೊಳ್–ತಲೆಯಲ್ಲಿ, ತೊಱೆ–ಗಂಗಾನದಿ; ತೊಱೆಯ ಕೆಲದೊಳ್–ನದಿಯ ಪಕ್ಕದಲ್ಲಿ, ಪೆಱೆ–ಅರ್ಧಚಂದ್ರ ; ಎಸೆದಿರೆ–ಶೋಭಿಸಿರಲು, ಮುಂಗೊರಲೊಳ್–ಕೊರಳ ಮುಂಭಾಗದಲ್ಲಿ, ಕಱೆ–ಕಪ್ಪು, ಮಱೆಯಿಲ್ಲದೆ–ಪ್ರಕಟವಾಗಿ, ದೊರೆಕೊಳೆ–ಉಂಟಾಗಲು, ಮೃಡನಡಿಗೆ–ಶಿವನ ಪಾದಕ್ಕೆ, ಹರಿಗಂ–ಅರ್ಜುನ, ಆಗಳ್–ಆಗ, ಎಱಗಿದಂ–ಬಾಗಿದನು, ನಮಸ್ಕರಿಸಿದನು.

**೨೫.** ನೀನಪ್ಪುದಂ–ನೀನು ಶಿವನಾಗಿರುವುದನ್ನು, ಅಣಂ–ಸ್ವಲ್ಪವೂ, ಅಱಿಯದೆ–ತಿಳಿಯದೆ; ದಾನವ....ಪದಂಗೆ; ದಾನವ–ರಾಕ್ಷಸರು, ಮಾನವ–ಮನುಷ್ಯರು ಸುರೇಂದ್ರ–ಇಂದ್ರನು, ಇವರ, ಮಣಿಮಕುಟತಟ–ರತ್ನಖಚಿತವಾದ ಕಿರೀಟ ಪ್ರದೇಶ ಗಳಿಂದ, ವ್ಯಾಸ–ಆವರಿಸಲ್ಪಟ್ಟ, ಪದಂಗೆ–ಪಾದಗಳುಳ್ಳ ಶಿವನಿಗೆ, ಆ ನೆಗಟ್ಟುದಂ–ಆಗೋ ಮಾಡಿದ್ದನ್ನು, ಆನ್–ನಾನು, ಏತಱೊಳ್–ಯಾವುದರಲ್ಲಿ, ಎಂತು ನೀಗುವೆಂ–ಹೇಗೆ ಕಳೆಯುವೆನು, ನೀಂ–ನೀನು, ಬೆಸಸಾ–ಅಪ್ಪಣೆಮಾಡು ; ಶಿವನೆಂದು ತಿಳಿಯದೆ ಅವನಿಗೆ ಮಾಡಿದ ಅಪಚಾರವನ್ನು ಹೇಗೆ ನೀಗುವುದು ಎಂಬುದನ್ನು ತಿಳಿಸು ಎಂದು ತಾತ್ಪರ್ಯ.

**ವಚನ :** ವಿನಮಿತೋತ್ತಮಾಂಗನಾಗಿ–ಬಾಗಿದ ಶಿರವುಳ್ಳವನಾಗಿ ; ನಿಮ್ಮಡಿ–ನಿಮ್ಮ ಪಾದ ;

**೨೬.** ಕ್ಲೇಶದ ಫಳಂ–ಕ್ಲೇಶದಿಂದ, ಕಷ್ಟದಿಂದ ಬರುವ ಲಾಭ, ಎರ್ದೆಗೊಳ್ಳದೆ–ಹೃದ್ಯವಾಗದೆ ಇರುತ್ತದೆಯೆ? ಈಶಂ–ಶಿವನು, ಮನವೊಸೆದು–ಮನದಲ್ಲಿ ಪ್ರೀತಿಸಿ, ನೆಗಟ್ಟಿ–ಪ್ರಸಿದ್ಧವಾದ, ದಿವ್ಯಾಸ್ತ್ರಮುಂ–ದಿವ್ಯಾಸ್ತ್ರವಾದ, ಆ ಪಾಶುಪತಾಸ್ತ್ರಮುಂ–ಆ ಪಾಶುಪತಾಸ್ತ್ರವನ್ನು, ಇತ್ತು–ಕೊಟ್ಟು, ಹರಿಗಂ–ಅರ್ಜುನ, ವಿನಾಶಿತರಿಪುವಕ್ಕೆ–ನಾಶಮಾಡಲ್ಪಟ್ಟ ಹಗೆಗಳನ್ನುಳ್ಳವನಾಗಲಿ, ದಯೆಯಿಂ–ಕರುಣೆಯಿಂದ, ಎಂದಂ–ಹೇಳಿದನು, ಆಶೀರ್ವದಿಸಿದನು.

**ವಚನ :** ತೆಲ್ಲಂಟಿಯೆಂದು–ಬಳುವಳಿಯೆಂದು ; ಏಗೆಯ್ವತೆಱನುಮನಱಿಯದೆ–ಏನುಮಾಡಬೇಕೆಂಬ ರೀತಿಯನ್ನು ತಿಳಿಯದೆ; ಪರಿಶ್ರಮಂ–ಆಯಾಸ; ಅಷ್ಟ ಶೋಭೆಯಂ ಮಾಡಿಸಿ–ತಳಿರು ತೋರಣಾದಿಗಳನ್ನು ಕಟ್ಟಿಸಿ.

೨೭. ಅಂದು–ಆ ದಿನ, ಅಮರಾವತೀಪುರದ ವಾರಸ್ತ್ರೀಯರ್–ಅಮರಾವತೀ ನಗರದ ದೇವ ವೇಶ್ಯೆಯರು, ಪರಿತಂದು–ಓಡಿಬಂದು, ಈತನೇ ನರಂ–ಇವನೇ ಅರ್ಜುನ, ಆ ಖಾಂಡವಮೆಲ್ಲಮುಂ-ಆ ಖಾಂಡವ ವನವನ್ನೆಲ್ಲ, ಶಿಖಿಗೆ–ಅಗ್ನಿಗೆ, ಉಣಲ್-ಉಣ್ಣಲು, ಕೊಟ್ಟಾತಂ–ಕೊಟ್ಟವನು ! ಈಗಳ್–ಈಗ, ಮಹೇಶ್ವರನಂ–ಶಿವನನ್ನು, ಮೆಚ್ಚಿಸಿ–ಮೆಚ್ಚುವಂತೆ ಮಾಡಿ, ಮಿಕ್ಕ-ಅತಿಶಯವಾದ, ಪಾಶುಪತಮಂ–ಪಾಶುಪತಾಸ್ತ್ರವನ್ನು, ಪೆತ್ತಾತನೇ–ಪಡೆದವನೇ ! ಸಾಹಸಂ–ಸಾಹಸವುಳ್ಳವನು, ಪಿರಿದುಂ ಚೆಲ್ವನುಮಪ್ಪಂ–ಹೆಚ್ಚು ಸುಂದರನಾಗಿಯೂ ಇರುವವನು ! ಎಂದು, ಮನದೊಳ್-ಮನಸ್ಸಿನಲ್ಲಿ, ಸೋಲ್ತು-ಸೋತು, ಮೋಹಿಸಿ, ಅಱ್ಕಱಿಂ–ಪ್ರೇಮದಿಂದ, ನೋಡಿದರ್–ನೋಡಿದರು.

**ವಚನ :** ಚೆಲ್ಲಂಬೆರಸು-ಚಲ್ಲಾಟದೊಡನೆ; ಸೂಸುವ–ಎರಚುವ; ವಾಸವ ಸ್ತ್ರೀಯರ–ಇಂದ್ರನ ವನಿತೆಯರ, ಮುಖಾಬ್ಜಾಸವ ಸಂಬಂಧಿಗಳಪ್ಪ–ಮುಖ ಕಮಲದ ಮಧುವಿನ ಸಂಪರ್ಕವನ್ನುಳ್ಳ ; ಸೇಸೆಗೊಳ್ವಂತೆ–ಮಂತ್ರಾಕ್ಷತೆಯನ್ನು ಸ್ವೀಕರಿಸುವಂತೆ; ಅವಧ್ಯರುಂ–ಕೊಲ್ಲಲಸಾಧ್ಯರಾದವರೂ ; ವಿವಿಧಾಸ್ತ್ರಗರ್ಭಮಪ್ಪ–ನಾನಾ ತೆರನಾದ ಬಾಣಗಳಿಂದ ತುಂಬಿದ.

೨೮. ದನುಜಾನೀಕದ ನಿಂದ–ರಾಕ್ಷಸರ ಸೈನ್ಯವು ನಿಂತುಕೊಂಡಿರುವ, ಒಂದು ನೆಲೆಯಂ–ಒಂದು ಶಿಬಿರವನ್ನು, ಮುಟ್ಟೆತ್ತಿ–ಸಮೀಪಿಸಿ, ಮಾದೇವನಿತ್ತ–ಶಿವನು ಕೊಟ್ಟ, ನಿಜೋಗ್ರಾಸ್ತ್ರದೆ–ತನ್ನ ಭಯಂಕರ ಬಾಣದಿಂದ, ದೈತ್ಯರೆಂಬ–ರಾಕ್ಷಸರೆಂಬ, ಪೆಸರಿಲ್ಲ–ಹೆಸರು ಇಲ್ಲ. ಎಂಬಂತುಟಂ–ಎಂಬ ಅಷ್ಟನ್ನು ಮಾಡಿ, ಬಂದು, ಎನಿತಾನುಂ–ಎಷ್ಟೋ, ಮಹಿಮಾಗುಣಕ್ಕೆ–ಮಹಾತ್ಮ್ಯೆಗೆ, ಕಣಿಯಾಗಿರ್ದ–ಆಕರವಾಗಿದ್ದ, ಒಂದು ಪೆಂಪಿಂದಂ–ಒಂದು ಹಿರಿಮೆಯಿಂದ, ಇಂದ್ರನೊಳ್–ಇಂದ್ರನಲ್ಲಿ, ಅರ್ಧಾಸನಮೇಱಿದ-ಸಿಂಹಾಸನಾರ್ಧವನ್ನು ಹತ್ತಿದ, ಒಳ್ಪು–ಸೌಭಾಗ್ಯವು, ಹರಿಗಂಗೆ–ಅರ್ಜುನನಿಗೆ, ಅಕ್ಕುಂ–ಆಗುತ್ತದೆ; ಪೆಱಂಗೆ–ಬೇರೆಯವನಿಗೆ, ಅಕ್ಕುಮೇ–ಆಗುತ್ತದೆಯೇ ?

**ವಚನ :** ಗಂಡ ಗಾಡಿಗಂ–ಪುರುಷ ಸೌಂದರ್ಯಕ್ಕೂ ; ಏಕಾಂತದೊಳ್–ರಹಸ್ಯದಲ್ಲಿ, ಮೇಲೆ ಬಿೞ್ದೊಡೆ–ಮೇಲೆ ಬಿದ್ದರೆ.

೨೯. ಎಂದು ಪುರಂದರನರಸಿಯುಯರ್–ಎಂದು ನೀನು ಇಂದ್ರನ ರಾಣಿಯಾಗಿರುವೆಯೋ, ಅಂದು–ಆಗ, ದಲ್–ದಿಟವಾಗಿಯೂ, ಎನಗೆ–ನನಗೆ, ಅಬ್ಬೆಯೇ–ತಾಯಿಯೇ, ತೊದಳ್ನುಡಿಯದೆ–ಸುಳ್ಳಾಡದೆ, ಪೋಗು–ಹೋಗು, ಎಂದೊಡೆ–ಎಂದರೆ, ಅದೊಂದಬ್ದದೊಳ್–ಆ ಒಂದು ವರ್ಷದಲ್ಲಿ, ಬೃಹಂದಳೆಯಾಗು–ನಪುಂಸಕನಾಗು, ಎಂದು, ಮುನಿದು–ಕೆರಳಿ, ಶಾಪವನಿತ್ತಳ್–ಶಾಪವನ್ನು ಕೊಟ್ಟಳು. ವ್ಯಾಸಭಾರತದಲ್ಲಿ ಶಾಪವನ್ನು ಕೊಟ್ಟವಳು ಊರ್ವಶಿ; ಇಲ್ಲಿ ರಂಭೆ; "ರಂಭೆಯ ಶಾಪಮೊ ತನ್ನ ಪಾಪಮೊ" ಎಂದು ರನ್ನನೂ ಹೇಳುತ್ತಾನೆ.

**ವಚನ :** ಅಣ್ಣನ ನನ್ನಿಯ ವರ್ಷಾವಧಿಯೊಳಂ–ಅಣ್ಣನ ಸತ್ಯಪ್ರತಿಜ್ಞೆಯ ಅಜ್ಞಾತ ವರ್ಷದ ಅವಧಿಯಲ್ಲಿ ; ಶೌಚ-ಶುಚಿತ್ವ ; ವಿಕ್ರಾಂತ ತುಂಗನ ತಡೆಮುಪರ್ಕೆ–ಅರ್ಜುನನು ತಡಮಾಡಿದುದಕ್ಕೆ ;

೩೦. ನೆಗೞ್ದ ಪಾರಾಶರಂ–ಪ್ರಸಿದ್ಧನಾದ ವೇದವ್ಯಾಸನು, ಆ ದಿವ್ಯಾಸ್ತ್ರಂಗಳಂ–ಆ ದಿವ್ಯ ಬಾಣಗಳನ್ನು, ಸಾಧಿಸಲೆ–ಸಾಧಿಸಬೇಕೆಂದೇ, ಪೇೞೆ–ಹೇಳಲು, ಮುನ್ನಂ–ಮೊದಲು, ಸಂದಿಂದ್ರಕೀಲಕ್ಕೆ–ಪ್ರಸಿದ್ಧವಾದ ಇಂದ್ರಕೀಲ ಪರ್ವತಕ್ಕೆ, ಪೋದಂ–ಹೋದನು ; ಅದೇನಾದುದೋ–ಅದೇನಾಯಿತೋ, ಅದನಱಿವಂ–ಅದನ್ನು ತಿಳಿಯೋಣ, ಕಾರ್ಯಸಿದ್ಧಿ ಪ್ರಾದುರ್ಭಾವಕ್ಕೆ–ಕಾರ್ಯವು ಸಫಲವಾಗುವುದಕ್ಕೆ, ಪಲವು–ಹಲವು, ವಿಘ್ನಂ–ಅಡ್ಡಿಗಳು, ಒಳವು–ಉಂಟು ; ಅಱಿಯಲ್–ತಿಳಿಯಲು, ಬರ್ಕುಮೇ ಬರುವುದೇ, ಬಾರದು–ಬರುವುದಿಲ್ಲ ; ಅಲ್ಲಿಂ–ಆ ಇಂದ್ರಕೀಲದಿಂದ, ವಿಕ್ರಾಂತ ತುಂಗಂ–ಅರ್ಜುನ, ಪೋದಂ ಗಡ–ಹೋದನಲ್ಲವೆ? ಅದನಱಿಯಲ್ಕಾಗದು–ಅದನ್ನು ಎಂದರೆ ಎಲ್ಲಿಗೆ ಎಂಬುದನ್ನು ತಿಳಿಯಲಾಗದು ; ಇನ್ನೆಲ್ಲಿ ಕಾಣ್ಬಂ–ಇನ್ನೆಲ್ಲಿ ನೋಡೋಣ.

**ವಚನ :** ಧನದನ ಕೊಳದೊಳಗಣ–ಕುಬೇರನ ಸರೋವರದಲ್ಲಿನ ; ಕನಕ ಕಮಲಂಗಳಂ–ಹೊಂದಾವರೆಗಳನ್ನು.

೩೧. ಪ್ರಕಟಿತ ಸಾಹಸಂ–ಪ್ರದರ್ಶಿಸಿದ ಪರಾಕ್ರಮವುಳ್ಳ ಭೀಮನು ಅಱುವತ್ತು ಕೋಟಿ ಧನದಾನುಚರರಂ–ಅರುವತ್ತು ಕೋಟಿ ಕುಬೇರನ ಭಟರನ್ನು, ಅತಿರೌದ್ರ ಭಯಾನಕಮಾಗೆ–ಬಹುಕ್ರೂರವೂ ಭಯಪ್ರದವೂ ಆಗಿರುವಂತೆ, ಕೊಂದು ಸೌಗಂಧಿಕ–ಸುಗಂಧದಿಂದ ಕೂಡಿದ, ಕಾಂಚನ ಕಮಲ ಹರಣ ಪರಿಣತಂ–ಹೊಂದಾವರೆಗಳನ್ನು ಅಪಹರಿಸುವುದರಲ್ಲಿ ಪ್ರೌಢನು, ಆದಂ–ಆದನು.

**ವಚನ :** ಸೀಳ್ದು ಸಿಱುಂಬುಳಾಡಿ–ಸೀಳಿ ಚೆಲ್ಲಾಪಿಲ್ಲಿ ಮಾಡಿ ; ಅಲ್ಲಿಂ ತಳರ್ದು–ಅಲ್ಲಿಂದ ಹೊರಟು ; ಬಟ್ಟೆಯ ಕಣ್ಣೊಳ್–ದಾರಿಯ ಎದುರಿಗೆ, ಅಡ್ಡಂಬಿಟ್ಟಿರ್ದ–ಅಡ್ಡವಾಗಿ ಬಿದ್ದಿದ್ದ ; ವೃದ್ಧವಾನರನಂ–ಮುದಿಕಪಿಯನ್ನು ; ಇಲ್ಲಿ ಸೀಱುಂಬುಳಾಡು ಎಂದಿರಬೇಕು ; ಸೀಱುಂಬುಳ್ ಎಂದು ಸೂಸಾಟಂ ; ' ಬಟ್ಟೆಯ ಕಣ್ಣೊಳ್, ಎಂಬುದು ನುಡಿಗಟ್ಟು ; "ಊರಪೊಱವೊಟಿಲ ಪೊಲದೊಳ್ ಬಟ್ಟೆಯ ಕಣ್ಣೊಳ್ ರಾತ್ರಿ ಪ್ರತಿಮೆನಿಂದೊರ್" ಎಂದು ಪ್ರಯೋಗಾಂತರವಿದೆ.

೩೨. ತೊಲಗು ಎನೆ–ತೊಲಗು ಎನ್ನಲು, ಬಟ್ಟೆಯಿಂ–ದಾರಿಯಿಂದ, ತೊಲಗಲಾಱೆನ್–ಹೋಗಲಾರೆನು, ಅಶಕ್ತನೆಂ–ಶಕ್ತಿಯಿಲ್ಲದವನಾಗಿದ್ದೇನೆ, ಆರ್ಪೊಡೆ–ಸಾಧ್ಯವಾದರೆ, ಎನ್ನಂ–ನನ್ನನ್ನು, ಇಂ–ಇನ್ನು, ತೊಲಗಿಸಿ ಪೋಗು ನೀಂ–ನೀನು ತೊಲಗಿಸಿ ಹೋಗು, ಎನೆ–ಎನ್ನಲು, ವೃಕೋದರಂ–ಭೀಮನು, ಒಯ್ಯನೆ–ಮೃದುವಾಗಿ ನಕ್ಕು, ಬಾಲಮಂ–ಬಾಲವನ್ನು, ಸಲೆಮುರಿದು–ಚೆನ್ನಾಗಿ ತಿರಿಚಿ, ಎತ್ತಲಾಟಿಸೆ–ಎತ್ತಲು ಬಯಸಲು, ಧರಿತ್ರಿಗೆ–ನೆಲಕ್ಕೆ, ಕೀಲಿಸಿದಂತುಟಾಗೆ–ಬೆಸೆದಂತಾಗಿರಲು, ದೋರ್ವಲದ–ಬಹುಬಲದ, ಪೊಡರ್ಪು–ಚೈತನ್ಯವು, ಕೆಟ್ಟು–ಹಾಳಾಗಿ, ಮರುತ್ಸುತಂ–ಭೀಮನು, ಮರುತ್ಸುತನಂ–ಆಂಜನೇಯನನ್ನು, ನಡೆ ನೋಡಿ–ನಾಟಿಕೊಳ್ಳುವ ಹಾಗೆ ನೋಡಿ,

೩೩. ನೀನೆಮ್ಮಣ್ಣನೆ–ನೀನು ನನ್ನ ಅಣ್ಣನೆ? ವಲಂ–ದಿಟವಾಗಿಯೂ, ವಂಶದ

ವಾನರನಲ್ಲಯ್-ನಮ್ಮ ಕುಲದ ವಾನರನಲ್ಲವೆ? ಮಹಾಬಲ – ಮಹಾಬಲಶಾಲಿಯೇ, ಏಕೆ, ಈ ನಗದೊಳ್–ಈ ಬೆಟ್ಟದಲ್ಲಿ, ಇರ್ದೆ-ಇರುವೆ, ಪೇಳಿರ್ ಎನೆ–ಹೇಳು ಎನ್ನಲು, ತದ್ವಾನರಂ–ಆ ಮರ್ಕಟವು, ಅಚ್ಚಿರ್ತು ನೋಡಿ–ಪ್ರೀತಿಸಿ ನೋಡಿ, ಭೀಮಸೆಂಬಂ–ಭೀಮನೆಂಬುವನು, ನೀನೇ–ನೀನೆಯೋ?

**ವಚನ :** ಅಪ್ಪೆನೆಂದೊಡೆ–ಆಗಿರುವೆನು ಎಂದರೆ : ನಿಮ್ಮಣ್ಣನಪ್ಪಣುವನೆನ್–ನಿಮ್ಮಣ್ಣನಾದ ಹನುಮಂತನಾಗಿದ್ದೇನೆ ; ಪೊಡೆವಟ್ಟ–ನಮಸ್ಕರಿಸಿದ, ಪರಸಿ–ಹರಸಿ.

**೩೪.** ಎನ್ನಂತಪ್ಪ- ನನ್ನಂಥ, ಒಡವುಟ್ಟಿದರ್–ಸಹೋದರರು, ಇಂ–ಇನ್ನು, ನಿನಗೆ, ಒಳರಾಗಲ್ – ಉಂಟಾಗಿರಲು, ಅಹಿತರ್ – ವೈರಿಗಳು, ನಿನ್ನಂ–ನಿನ್ನನ್ನು, ಇದಿರಾಂಪರೆ–ಎದುರಿಸುವರೇ, ಪೇಟರ್–ಹೇಳು ; ಪಗೆವರ-ಹಗೆಗಳ, ಬೇರೊಳ್–ಬೇರಿನಲ್ಲಿ, ಬೆನ್ನೀರಂ ಪೊಯ್ದು–ಬಿಸಿನೀರನ್ನು ಹೊಯ್ದು, ನಿನಗೆ, ಧರೆಯಂ–ಭೂಮಿಯನ್ನು, ಮಾಚಿಪ್ಪೆಂ–ಮಾಡುವೆನು. ನಿನಗೆ ರಾಜ್ಯವನ್ನು ಗೆದ್ದುಕೊಡುತ್ತೇನೆ ಎಂದು ತಾತ್ಪರ್ಯ.

**೩೫.** ಬೆಸನಂ–ಕಾರ್ಯವನ್ನು, ಪೂಣ್ದು-ಕೈಕೊಂಡು, ಪ್ರತಿಜ್ಞೆಮಾಡಿ, ಕಡಂಗಿ–ಉತ್ಸಾಹಿಸಿ, ಕಡಲಂ–ಸಾಗರವನ್ನು, ಪಾಯ್ದು–ದಾಟಿ, ಮುಂ-ಮೊದಲು, ಪೂಣ್ದರಂ–ಸಿಕ್ಕಿಕೊಂಡವರನ್ನು, ಕೊಂದು, ಲಂಕೆಯಂ–ಲಂಕಾನಗರವನ್ನು, ಸಮಂತು–ಚೆನ್ನಾಗಿ, ಆಗಡೆ-ಆಗಲೇ, ಪೊಕ್ಕು–ಹೊಕ್ಕು, ಬನಮಂ–ವನವನ್ನು, ಅಟಂಪು-ಮೇಲೆ ಹಾಯ್ದು, ಉರ್ಕಿ–ಉಬ್ಬಿ, ಕಿಟ್ಟಿಕ್ಕಿ – ಕಿತ್ತುಹಾಕಿ, ಸೀತೆಗೆ, ಸಂತಸಮಂ–ಸಂತೋಷವನ್ನು, ಮಾಡಿ, ಪೊಟಿಲಂ–ಲಂಕೆಯನ್ನು, ಸುಟ್ಟು, ಕಾಳಾನಳಂಗಿತ್ತು-ಪ್ರಳಯಾಗ್ನಿಗೆ ಆಹುತಿ ಮಾಡಿ, ಬೇವಸಮಂ–ದುಃಖವನ್ನು, ರಾಮನಿಂ-ರಾಮನಿಂದ, ಉಯ್ದು–ತೆಗೆದು ಹಾಕಿದ, ನೀಂ ಬರೆಗಂ–ನಿನ್ನವರೆಗೂ, ಆ ಕೌರವರ್–ಆ ಕೌರವರ್, ಏನ್ ಗಂಡರೇ–ಏನು ಶೂರರೇ?

**೩೬.** ಎನಗೆ ದಯೆಗೆಯ್ವುದೊಂದನೆ–ನನಗೆ ನೀನು ಒಂದನ್ನು ಮಾತ್ರ ಕರುಣಿಸುವುದು ; ವಿಜಯಂಗೆ-ಅರ್ಜುನನಿಗೆ, ಮೊನೆಯೊಳ್–ಯುದ್ಧದಲ್ಲಿ, ವಿಜಯಮಾಗಿರೆ–ಜಯವಾಗಿ ಇರಲು, ನೀನುಂ–ನೀನೂ, ಆತನ–ಅವನ, ಕೇತನದೊಳ್–ಧ್ವಜದಲ್ಲಿ, ಫಣಿಕೇತನನ-ದುರ್ಯೋಧನನ, ಬಲಕ್ಕೆ-ಸೈನ್ಯಕ್ಕೆ, ಉತ್ಪಾತಕೇತುವಪ್ಪುದೆ–ಅಪಶಕುನದ, ವಿನಾಶದ ಕೇತು ಗ್ರಹವಾಗಿರುವುದೆ, ಸಾಲ್ಗುಂ–ಸಾಕು.

**ವಚನ :** ಅದೇವಿರಿದು – ಅದೇನು ದೊಡ್ಡದು ; ಅಣುವಂ–ಹನುಮಂತನು ; ಪಾರುತ್ತಿರ್ಪನ್ನೆಗಂ–ನಿರೀಕ್ಷಿಸುತ್ತಿರಲು; ಇಟ್ಟುಳಿಗೊಂಡು-ಆಕರ್ಷಿಸಿ, ಎಳೆದುಕೊಂಡು. ಮರೀಚಿಗಳಿಂದಂ–ಕಿರಣಗಳಿಂದ ; ತದೀಯ–ಅವರ ; ಬಟಿಯಂ–ಅನಂತರ ;

**೩೭.** ಮುಸಕಂ–ರಭಸ, ಕಾಯ್ಪು–ಕೋಪ, ಜವಂ–ವೇಗ ಇವು, ಜವಂಗಂ–ಯಮನಿಗೂ, ಇದಿರೊಳ್–ಎದುರಿನಲ್ಲಿ, ನೋಡಲ್ಕೆ–ನೋಡುವುದಕ್ಕೆ ಅಗುರ್ವಾಗೆ–ಭಯಂಕರವಾಗಲು, ಮಾಂದಿಸಿಂ – ತಡೆಯಿರಿ, ಈ ವಂದುದು–ಇಗೋ ಬಂತು,

ಕೊಂದುದು–ಕೊಂದಿತು, ಎಂದು, ವಿಪ್ರರ್-ಬ್ರಾಹ್ಮಣರು, ಭಯದಿಂ–ಹೆದರಿಕೆಯಿಂದ, ತೆರಳ್ದು–ಗುಂಪಾಗಿ, ಓಡೆ–ಓಡಲು ; ತಾಪಸರಂ–ತಪಸ್ವಿಗಳನ್ನು, ಜೆರ್ಜಿಸಿ–ಹೆದರಿಸಿ, ತೂಳ್ದಿ–ತಳ್ಳಿ, ಜೇಳ್ವರಣಿಯುಂ–ಅಗ್ನಿಗೆ ಆಹುತಿಯಾಗಿ ಅರ್ಪಿಸುವ ಸಮಿತ್ತುಗಳನ್ನು, ಕೊಂಡು–ತೆಗೆದುಕೊಂಡು ; ಆಶ್ರಮಕ್ಕೆ, ಇಂತು–ಹೀಗೆ, ಜೇವಸಮಂ–ಸಂಕಟವನ್ನು, ಮತ್ತೇಭವಿಕ್ರೀಡಿತಂ–ಮದಿಸಿದಾನೆಯ ಆಟದ, ಒಂದು ವಿಭವಂ–ಒಂದು ವೈಭವ, ಮಾಡುವುದಾಯ್ತು–ಉಂಟುಮಾಡುವುದಾಯಿತು. ಇಲ್ಲಿ ಜೇಳ್ವರಣಿ=ಜೇಳ್ವ ಅರಣಿ ; ಹವಿ ಪ್ರದಾನ ಮಾಡುವ, ಅಗ್ನಿಯನ್ನು ಉತ್ಪತ್ತಿ ಮಾಡುವ ಕಡೆಗೋಲು ; ಈ ಕಡೆ ಗೋಲನ್ನು ಅಗ್ನಿಗೆ ಆಹುತಿಯಾಗಿ ಕೊಡುವುದಿಲ್ಲವಾದ್ದರಿಂದ [ಜೇಬ್ಪ] ಎಂಬ ಪಾಠ ವಿರಬೇಕು ; ಬೇಕಾಗುವ, ಅವಶ್ಯಕವಾದ ಎಂದರ್ಥವಾಗುತ್ತದೆ. ಇಲ್ಲಿ ಮುದ್ರಾಲಂ ಕಾರವಿದೆ.

**ವಚನ** : ಗಂಧ ಸಿಂಧುರದ–ಮದೋದಕದ ಸೊಗಡನ್ನುಳ್ಳ ಆನೆಯ ; ಕೈಗೆ ಪೋದ–ಕೈಯಲ್ಲಿ ಸಿಕ್ಕಿಕಳೆದು ಹೋದ, ಅರಣಿಯುಂ–ಮಂಥನ ಕಾಷ್ಠಗಳನ್ನು ; ಇಷ್ಟಿ ವಿಘ್ನಂಗಳಂ–ಯಜ್ಞಕ್ಕೆ ಅಡಚಣೆಗಳನ್ನು ; ಕಾಳಕಾಳಸ್ವರೂಪಮಂ-ಪ್ರಳಯ ಕಾಲದ ಯಮನ ಆಕಾರವನ್ನು ; ಬಟೆಯಂ–ಮಾರ್ಗವನ್ನು ; ನಿರ್ವಂದದಿಂ–ನಿರ್ಬಂಧದಿಂದ, ಬಲಾತ್ಕಾರವಾಗಿ ; ತಗುಳ್ವುದುಂ–ಅಟ್ಟಿಕೊಂಡು ಹೋಗುತ್ತಲು ; ಘರ್ಮಕಿರಣ–ಸೂರ್ಯನಿಂದ ; ಕೂಜತ್–ಶಬ್ದಮಾಡುತ್ತಿರುವ ; ರಜಃಕಷಾಯ–ದೂಳಿನ ಒಗರಿನಿಂದ ; ಅಳಿ ಪಟಳ–ದುಂಬಿಗಳ ಸಮೂಹ ; ತೀಡುವ–ಬೀಸುವ ; ನೀರದೆಸೆಯುಂ–ನೀರಿರುವ ದಿಕ್ಕನ್ನು ;

**೩೮.** ಬಕ....ರಮ್ಯಂ : ಬಕ–ಬಕಪಕ್ಷಿ, ಕಲಹಂಸ–ಹಂಸಪಕ್ಷಿ, ಬಲಾಕ–ಬೆಳ್ಳಕ್ಕಿ, ಇವುಗಳ, ಪ್ರಕರ–ಸಮೂಹದ, ಮೃದುಕ್ವಣಿತ–ಮೃದುವಾದ ಶಬ್ದಗಳಿಂದ, ರಮ್ಯಂ–ಸುಂದರವಾದ, ಪರಿವಿಕಸಿತ....ಜಳಂ : ಪರಿವಿಕಸಿತ–ಚೆನ್ನಾಗಿ ಅರಳಿದ, ಕನಕ ಕಂಜ–ಹೊಂದಾವರೆಯ, ಕಿಂಜಲ್ಕಪುಂಜ–ಕೇಸರಗಳ ರಾಶಿಯಿಂದ, ಪಿಂಜರಿತ–ಹಳದಿ ಕೆಂಪು ಮಿಶ್ರವಾದ ಬಣ್ಣವನ್ನುಳ್ಳ, ಜಳಂ – ನೀರನ್ನುಳ್ಳ, ಕೊಳಂ – ಸರೋವರ, ಇದಿರೊಳ್–ಎದುರಿನಲ್ಲಿ, ತೋಱಿತ್ತು–ಕಾಣಿಸಿತು.

**ವಚನ** : ಸಾರ್ಚಿ–ಸೇರಿಸಿ ; ಅಂಜಲಿ ಪುಟಮಂ–ಬೊಗಸೆಯನ್ನು ;

**೩೯.** ತೋಯಜ ಷಂಡಮನಿದಂ – ಈ ಸರೋವರವನ್ನು, ಆನ್–ನಾನು, ಆಯತಿಯಿಂ–ವೈಭವದಿಂದ, ಕಾವೆಂ–ಕಾಪಾಡುತ್ತಿದ್ದೇನೆ; ಎಲೆ ಕೌಂತೇಯ–ಎಲೆ ಸಹದೇವನೇ, ಎನ್ನ ಮಾತಿಂಗೆ–ನನ್ನ ಮಾತಿಗೆ, ಮಱುಮಾತನಿತ್ತು–ಪ್ರತ್ಯುತ್ತರವನ್ನು ಹೇಳಿ, ಮದೀಯ-ನನ್ನ, ಸರೋವರದ, ತೋಯಮಂ–ನೀರನ್ನು, ಕುಡಿ, ಕೊಂಡುಯ್–ತೆಗೆದುಕೊಂಡು ಹೋಗು.

**ವಚನ** : ನೀರಱಿಕ್ಕೆ–ನೀರಡಿಕೆ ; ಪೋಪಿನಂ–ಹೋಗುತ್ತಿರಲು ; ಪದ್ಮಪತ್ರೌಘಂಗಳಿಂ–ತಾವರೆಯೆಲೆಯ ಸಮೂಹಗಳಿಂದ ; ಉಮ್ಮಳಿಸಿ–ವ್ಯಥೆಪಟ್ಟು ; ಸಹದೇವನ ಪೋದ–ಸಹದೇವನು ಹೋದ ;

೪೦. ತಾನುಂ–ತಾನು ಕೂಡ (ನಕುಲನು ಕೂಡ), ಅನತರಿಪು–ಅಧೀನರಾದ ಶತ್ರುಗಳುಳ್ಳವನು, ಸರೋಜ ಷಂಡಮಂ–ಕೊಳವನ್ನು, ಪೊಕ್ಕು–ಹೊಕ್ಕು, ದಿವ್ಯ ವಚನಮನದಂ – ಆ ದೇವತಾ ವಾಕ್ಯವನ್ನು, ಅಂತೆ – ಹಾಗೆಯೇ ಎಂದರೆ ಸಹದೇವನ ಹಾಗೆ, ಏನುಂ ಬಗೆಯದೆ–ಏನೂ ಲೆಕ್ಕಿಸದೆ, ಅಜ್ಞಾನತೆಯಿಂ–ಅಜ್ಞಾನದಿಂದ, ಕುಡಿದು, ನಂಜುಗುಡಿದರಂತಿರೆ–ವಿಷಪಾನಮಾಡಿದವರಂತೆ, ಕೆಡೆದಂ–ಬಿದ್ದನು.

**ವಚನ:** ಬರವುಮಂ–ಬರುವುದನ್ನು; ಶಂಕಾಕುಳಿತ ಚಿತ್ತನಾಗಿ–ಭಯದಿಂದ ವಿಕಳವಾದ ಮನವುಳ್ಳವನಾಗಿ; ಅಚೇತನರಾಗಿ–ಪ್ರಾಣರಹಿತರಾಗಿ;

೪೧. ಅರಿಭೂಪಾನೀಕ ಭಯಂಕರನುಂ–ಶತ್ರುರಾಜರ ಸೈನ್ಯಕ್ಕೆ ಭಯಕಾರಕನಾದ ಅರ್ಜುನನು ಕೂಡ, ಆ ಕಮಳಾಕರಮಂ-ಆ ಸರೋವರವನ್ನು, ಪೊಕ್ಕು–ಹೊಕ್ಕು, ಆಕಾಶಧ್ವನಿಯಂ–ಆಕಾಶ ಭಾಷಿತವನ್ನು, ಉಜದೆ–ಲಕ್ಷ್ಯಮಾಡದೆ, ಕುಡಿದಂ ಗಡಂ–ನೀರನ್ನು ಕುಡಿದನಲ್ಲವೆ; ಏಕೆಂದಱಿಯೆಂ–ಏಕೆಂದು ತಿಳಿಯೆನು. ಬಱಲ್ದು–ಶಕ್ತಿಗುಂದಿ, ಧರೆಯೊಳ್–ನೆಲದಮೇಲೆ, ಜೋಲ್ದಂ–ಜೋತು ಬಿದ್ದನು.

**ವಚನ:** ಭಗ್ನಮನನಾಗಿ–ಕೆಟ್ಟುಹೋದ ಮನಸ್ಸುಳ್ಳವನಾಗಿ; ಪುಂಡರೀಕ ಷಂಡೋಪಾಂತದೊಳ್–ಸರೋವರದ ಸಮೀಪದಲ್ಲಿ; ಅನುಜರುಮಂ–ತಮ್ಮಂದಿರನ್ನು; ಉಪದ್ರವಮಲ್ಲಂ–ಕೇಡಲ್ಲ;

೪೨. ಬಿಡದೆ – ಅವಕಾಶವನ್ನು ಕೊಡದೆ, ಕಡುಕೆಯ್ದು – ತೀವ್ರತೆಯನ್ನು ತೋರಿಸಿದ, ದಿವ್ಯದ–ದೇವತೆಯ, ನುಡಿಗೆ–ಮಾತಿಗೆ, ಕಿವುಡುಗೇಳ್ದು–ಕಿವುಡು ಕೇಳಿ, ಎಂದರೆ ಕಿವಿಗೆ ಹಾಕಿಕೊಳ್ಳದೆ, ಭೀಮಂ–ಭೀಮನು, ನೀರಂ–ನೀರನ್ನು, ಕುಡಿದು, ಪಿಡಿದ ಗದೆವೆರಸು–ಹಿಡಿದ ಗದೆಸಮೇತವಾಗಿ, ಗಿರಿ-ಬೆಟ್ಟ, ಶಿಖರದೊಡನೆ-ಶಿಖರ ಸಮೇತವಾಗಿ, ಕೆಡೆವಂತಾಗಳ್–ಬೀಳುವಂತೆ, ಆಗ, ಭೋಂಕನೆ-ಕೂಡಲೇ, ಕೆಡೆದಂ-ಬಿದ್ದನು.

**ವಚನ:** ವಾತಾಹತಿಯಿಂ–ಗಾಳಿಯ ಹೊಡೆತದಿಂದ; ಪದದೊಳ್–ಸಮಯದಲ್ಲಿ; ಬೆಸದೊಳ್–ಕಾರ್ಯದಲ್ಲಿ, ಅಪ್ಪಣೆಯಲ್ಲಿ; ಅಭಿಚಾರಮಾಗೆ–ಶೂನ್ಯ ಮಾಟಗಳಾಗಲು; ಬೇಳ್ವ-ಬಲಿಕೊಡುವ, ಬೇಳ್ವಿಯ-ಯಜ್ಞದ; ಉರುಳಿ-ಚೆಂಡು; ಕೃತಾಂತನಂತೆ-ಯಮನ ಹಾಗೆ; ಕತ್ತಿಗೆಯುಂ ಬೆರಸು-ಕಠಾರಿ ಸಮೇತವಾಗಿ; ಉಗ್ರದೇವತೆ-ಭಯಂಕರ ದೇವತೆ; ಬಾಪ್ಪು–ಭೇಷ್; ಬಱ್ದೆಂದು–ಬದುಕಿದೆ ಎಂದು; ಸಾರ್ವಾಗಳ್–ಹತ್ತಿರಕ್ಕೆ ಬರುವಾಗ;

೪೩. ಎಲೆ ಪಿಱತಿನಿ-ಎಲೆ ಮಾಂಸಭಕ್ಷಕಳೇ, ಪಿಶಾಚಿಯೇ, ಪೋ–ಹೋಗು, ಮುಟ್ಟದೆ ತೊಲಗು; ಈ ನಾಲ್ವರ್ಕಳಸುವಂ–ಈ ನಾಲ್ಕು ಜನರ ಪ್ರಾಣಗಳನ್ನು, ಅವರ್ಗಳ-ಅವರ, ಮೆಯ್ಯಿಂ ತೊಲಗಿಸಿ-ಮೈಯಿಂದ ಹೋಗುವಂತೆ ಮಾಡಿ; ಮುನ್ನಮೆ–ಮೊದಲೇ, ಕಾದಿರ್ದ-ಕಾವಲಿದ್ದ; ಅಲಂಘ್ಯಬಲನೆನಿಸಿದೆನಗೆ-ಮೀರಲಾಗದ ಶಕ್ತಿಯುಳ್ಳವನು ಎನಿಸಿದ ನನಗೆ ನೀನ್–ನೀನು, ಅಗ್ಗಳಮೇ–ಹೆಚ್ಚೇ?

**ವಚನ:** ಜಾತಿದೇವತೆಯಪ್ಪೊಡೆ–ಶ್ರೇಷ್ಠ ವರ್ಗದ ದೇವತೆಯಾಗಿದ್ದರೆ; ಕೆಯ್ಗೆವಂದರ್–ವಶವಾದರು, ಕೈಗೆ ಸಿಕ್ಕಿದರು; ಆ ಬೆಸಂ–ಆ ಕೆಲಸ;

೪೪. ಕನಕನ ಜೇಳ್ವೆ–ಕನಕನ ಯಜ್ಞ, ಕನಕನಂ–ಕನಕನನ್ನು, ತಗುಳ್ದುದು–ಬೆನ್ನಂಟಿತು, ಎಂಬೊಂದು ಮಾತು–ಎಂಬ ಒಂದು ನಾಣ್ಣುಡಿ, ಧರೆಗೆಸೆಯೆ–ಲೋಕದಲ್ಲಿ ಪ್ರಚುರವಾಗಲು, ಸುಯೋಧನನ ಪುರೋಹಿತನಪ್ಪ–ದುರ್‍ಯೋಧನನ ಪುರೋಹಿತನಾದ, ಆ ಕನಕಸ್ವಾಮಿಯುನೆ–ಆ ಕನಕನನ್ನೇ, ಮುನಿದು–ಕೆರಳಿ, ಕೀರ್ತಿಗೆ–ಕೃತ್ತಿಗೆಯೆಂಬ ದೇವತೆ, ತಿಂದಳ್–ತಿಂದಳು.

**ವಚನ:** ಕೃತಾಂತ ನಂದನಂ–ಧರ್ಮರಾಜನು ;

೪೫. ಪೋದರಂ–ಹೋದವರನ್ನು, ಒಡಗೊಂಡು ಬರಲ್–ಕೂಡೆ ಕರೆತರಲು, ಪೋದರುಂ–ಹೋದವರು ಕೂಡ, ಆ ಪೋದ ಪೋಗೆ ಪೋದರ್–ಆ ಹೋದ ಹೋಗನ್ನೇ ಹೋದರು ; ಎಂದರೆ ಹೋದವರ ಹಿಂದೆಯೇ ಹೊರಟು ಹೋದರು : ತಡೆಯಲ್–ತಡಮಾಡಲು, ಪೋದವರ್–ಹೋದವರು, ಅಲ್ತು–ಅಲ್ಲ ; ಎಂದು, ಮನಃಖೇದಂ ಬೆರಸು–ಮನಸ್ಸಿನ ದುಃಖದಿಂದ ಕೂಡಿ. ಅಬ್ಜಾಕರಮಂ–ಸರೋವರವನ್ನು, ಎಯ್ದೆ ವಂದನ್–ಸಮೀಪಿಸಿದನು.

**ವಚನ:** ಬಱಸಿಡಿಲ್ – ಮಳೆಯಿಲ್ಲದ ಬರಿಸಿಡಿಲು ; ಶಾಲತರುಗಳ್–ಸಾಲ ವೃಕ್ಷಗಳು ; ಬೆಕ್ಕಸಂ ಬಟ್ಟು–ಆಶ್ಚರ್ಯವನ್ನು ಹೊಂದಿ.

೪೬. ಆರಿಂದಂ–ಯಾರಿಂದ, ಇದು–ಈ ಸ್ಥಿತಿ, ಇವರ್ಗೆ–ಇವರಿಗೆ, ಆಯ್ತು–ಆಯಿತು ; ಎಂಪಾರಯ್ವೆಂ–ಎಂದು ವಿಚಾರಮಾಡುತ್ತೇನೆ, ಬೞಿಯಂ–ಅನಂತರ, ಆದೊಡೇನಾಯ್ತು–ಆದರೆ ಏನಾಯಿತು ; ಎಂದು, ಅಂಭೋರುಹ ರಜಃಪಟಾವೃತ ವಾರಿಯಂ–ತಾವರೆಯ ಧೂಳೆಂಬ ಬಟ್ಟೆಯಿಂದ ಮುಚ್ಚಿದ ನೀರನ್ನು, ಆ ನೃಪತಿ–ಆ ರಾಜರು, ಕುಡಿಯಲ್–ಕುಡಿಯಲು, ಒಡರಿಸಿದಾಗಳ್–ತೊಡಗಿದಾಗ.

೪೭. ಮರುಳಾಗದೆ – ಭ್ರಾಂತನಾಗದೆ, ಎನ್ನನುಡಿಗೆ – ನನ್ನ ಮಾತಿಗೆ, ಉತ್ತರಮಂ ಮುನ್ನಿತ್ತು–ಉತ್ತರವನ್ನು ಮೊದಲು ಕೊಟ್ಟು, ಕುಡಿಯೆ–ಕುಡಿಯಲು, ನಿನಗೆ, ಕಜ್ಜಂ–ಕಾರ್ಯವು, ಉತ್ತರಿಸುಗುಂ–ಏಳ್ಗೆಯಾಗುತ್ತದೆ ; ಅಂತಲ್ಲದೆ–ಹಾಗಲ್ಲದೆ, ಇವಂದಿರಂತೆ–ಇವರ ಹಾಗೆ, ನೀಂ–ನೀನು, ಉಂತೆ–ವ್ಯರ್ಥವಾಗಿ, ಅರಸಾ–ರಾಜನೇ, ಮೂರ್ಖನಾಗದಿರ್–ದಡ್ಡನಾಗದಿರು.

**ವಚನ:** ದಿವ್ಯಂ–ದೇವತೆ ; ಅದಱ ಬೆಸಗೊಂಡುದರ್ಕೆಲ್ಲಂ–ಅದು ಕೇಳಿದ್ದಕ್ಕೆಲ್ಲ; ಮಱುಮಾತುಗುಡುವುದುಂ- ಉತ್ತರವನ್ನು ಹೇಳುತ್ತಲು ;

೪೮. ಕನಕನ ಜೇಳ್ವೆಯಿಂದೊಗೆದ–ಕನಕನ ಬಲಿ ಪ್ರದಾನದಿಂದ ಹುಟ್ಟಿದ, ಕೀರ್ತಿಗೆಯಿಂ–ಕೃತ್ತಿಕೆಯಿಂದ, ನಿನಗಪ್ಪಪಾಯಮುಂ–ನಿನಗೆ ಆಗುವ ಕೇಡನ್ನು, ನೆನೆದು ಮದೇಭರೂಪಮನೆ ತೋಱಿ–ಮದಗಜದ ಆಕಾರವನ್ನೆ ತೋರಿಸಿ. ನಿಜಾಶ್ರಮದಿಂದ, ಗಲ್ಚಿ–ನಿನ್ನ ಆಶ್ರಮದಿಂದ ಅಗಲಿಸಿ, ನಿನ್ನನುಜರಂ–ನಿನ್ನ ತಮ್ಮಂದಿರನ್ನು, ಈ ಉಪಾಯ ದೊಳ್–ಈ ಉಪಾಯದಲ್ಲೇ, ಕೀರ್ತಿಗೆಯೊಡ್ಡಿಸೆ–ಕೃತ್ತಿಕೆಗೆ ಪ್ರತೀಕಾರಮಾಡಿ, ಕಾದೆಂ–ರಕ್ಷಿಸಿದೆನು ; ಆಂ ಕೃತಾಂತನೆಂ–ನಾನು ಯಮನಾಗಿದ್ದೇನೆ ; ಅಮ್ಮ–ಅಪ್ಪ,

ನೀಂ–ನೀನು, ಮಗನಯ್–ಮಗನಾಗಿದ್ದೀಯ, ಇಂ ಪೆಱತೇನ್–ಇನ್ನು ಬೇರೇನು? ನಿನಗುತ್ತರೋತ್ತರಂ–ನಿನಗೆ ಅಭಿವೃದ್ಧಿಯಾಗಲಿ.

**ವಚನ:** ಮಱಕೆಂದಿದರಂ–ನೈಮರೆತು ನಿದ್ರಿಸಿದವರನ್ನು, ಅರಣಿಯಂ–ಬೆಂಕಿ ಕಡೆಯುವ ಕೋಲನ್ನು

**೪೯.** ಉಗ್ರವಿರೋಧಿ ಜನಕ್ಕೆ–ಭಯಂಕರರಾದ ಶತ್ರುಜನರಿಗೆ, ಮಿೞ್ತುಗಳ್–ಮೃತ್ಯುಗಳು, ನೆಱೆವವೊಲ್ – ಪೂರ್ಣವಾಗುವಂತೆ, ಪನ್ನೆರಡ್ಬರಿಸಂ – ಹನ್ನೆರಡು ವರ್ಷಗಳು, ನೆಱೆದುವು–ತುಂಬಿದುವು, ಅಱದು–ಮರೆಯಾಗಿ, ಇನ್–ಇನ್ನು. ನಮಗೆ, ಅಬ್ದಮನೊಂದಂ–ಒಂದು ವರ್ಷವನ್ನು, ಇರಲಾಗದು–ಇರಲಾಗುವುದಿಲ್ಲ, ಇರ್ದೊಡೆ–ಅಡಗದೆ ಇದ್ದ ಪಕ್ಷದಲ್ಲಿ, ಏತಱ ಪಡೆಮಾತೊ–ಏನು ಸುದ್ದಿಯೋ. ಮತ್ತಂ–ತಿರುಗಿಯೂ, ಮನಂಮಱುಗೆ–ಮನಸ್ಸು ದುಃಖಪಡುತ್ತಿರಲು, ಪನ್ನೆರಡಬ್ದಮಂ–ಹನ್ನೆರಡು ವರ್ಷಗಳನ್ನು, ಬನಂಗಳೊಳ್–ಕಾಡುಗಳಲ್ಲಿ, ನುಡಿದ ನನ್ನಿಗೆ–ಕೊಟ್ಟ ಸತ್ಯಭಾಷೆಗಾಗಿ; ಇರವೇೞ್ಪುದು – ಇರಬೇಕಾಗುತ್ತದೆ; ಇದರ್ಕೆ– ಇದಕ್ಕೆ, ಕಜ್ಜಮಂ – ಕಾರ್ಯವನ್ನು, ವೇೞಿಂ–ಹೇಳಿರಿ.

**೫೦.** ನಮಗೆ, ಇನ್ನುಂ–ಇನ್ನುಕೂಡ, ಅಪವಾದಂ–ನಿಂದೆ ಅಥವಾ ದೂರು, ಪೆಱತೊಂದುಂ–ಬೇರೊಂದು, ಇಲ್ಲ; ಪೊಕ್ಕಿರಲ್ಕೆ–ಹೊಕ್ಕು ಇರುವುದಕ್ಕೆ, ಮತ್ಸ್ಯಪುರಂ–ಮತ್ಸ್ಯನಗರ, ಇಂಬು–ಆಶ್ರಯ; ಶತ್ರುಗೆ–ನಮ್ಮ ವೈರಿಗೆ, ಮತ್ಸ್ಯಂ–ಮತ್ಸ್ಯದೇಶದ ರಾಜ, ಶತ್ರು–ಹಗೆ; ಅದಱಿಂದೆ–ಆದ್ದರಿಂದ, ಅಜ್ಞಾತವಾಸಕ್ಕೆ–ಅಜ್ಞಾತವಾಗಿ ವಾಸಮಾಡುವುದಕ್ಕೆ, ಚಿಂತಿಪೊಡೆ–ಆಲೋಚಿಸಿದರೆ, ಇನ್–ಇನ್ನು, ಅನ್ನವು–ಅಂಥವು, ತಾಣಮಿಲ್ಲ–ಎಡೆಯಿಲ್ಲ, ಅದಱಿಂ–ಆದ್ದರಿಂದ, ಉಂತೆ–ಸುಮ್ಮನೆ, ಆರ್ಗಪ್ಪೊಡಂ–ಯಾರಿಗಾದರೂ, ಮಿಕ್ಕ–ಮೀರಿದ, ರೂಪ ಪರಾವರ್ತನದಿಂ–ರೂಪವನ್ನು ಮಾರ್ಪಡಿಸಿಕೊಳ್ಳುವುದರಿಂದ, ವಿರಾಟಪುರಮಂ–ವಿರಾಟ ನಗರವನ್ನು. ಪೊಕ್ಕಿರ್ದು–ಹೊಕ್ಕಿದ್ದು, ಅದಂ–ಆ ಒಂದು ವರ್ಷವನ್ನು, ಅಜ್ಞಾತವಾಸವನ್ನು, ನೀಗೆಮೇ–ಕಳೆಯಲಾರೆವೇ? "ರೂಪಪರಾವರ್ತನ ವಿದ್ಯೆಯಿಂ ತುರಗರೂಪಾದಂ ಚರಂ ಖೇಚರಂ" ಎಂಬುದರಿಂದ ರೂಪಪರಾವರ್ತನವೆಂಬುದೊಂದು ವಿದ್ಯೆ ಇದೆ ಎಂಬುದು ಜೈನಪುರಾಣಗಳಿಂದ ತಿಳಿಯುತ್ತದೆ; ಇಲ್ಲಿ ಜೈನಪುರಾಣ ಪ್ರಭಾವವನ್ನು ನೋಡಬಹುದು.

**ವಚನ:** ನಿಶ್ಚಿತಕಾರ್ಯಮನನುಷ್ಠಿಸೆ–ಮಾಡಬೇಕಾದ ಕೆಲಸವನ್ನು ಮಾಡಲು; ಬಲ್ಲಂದದೊಳ್–ತಿಳಿದ ರೀತಿಯಲ್ಲಿ; ಪಾಂಚಾಳಿವೆರಸು–ದ್ರೌಪದೀ ಸಮೇತರಾಗಿ; ಜಗುನೆಯಂ ಪಾಯ್ದು–ಯಮುನಾ ನದಿಯನ್ನು ದಾಟಿ; ಮೂಡಮೊಗದೆ–ಪೂರ್ವಾಭಿಮುಖವಾಗಿ;

**೫೧.** ಇಂಚೆಯ – ಹಂಸೆಯ, ಪಸವಿನ – ಕ್ಷಾಮದ, ಬಱಿದ – ಬರಗಾಲದ, ಕಳಿಂಚಿನ–ಮೋಸದ (?), ಡಾವರದ–ಕ್ಷೋಭೆಯ, ಬಾಧೆಯಿಲ್ಲದ–ತೊಂದರೆಯಿಲ್ಲದ, ಪದದೊಳ್–ಸಮಯದಲ್ಲಿ, ಮುಂಚಿದೆ–ಮುಂಪಾಗದೆ, ಪಿಂಚಿದೆ–ಹಿಂಪಾಗದೆ ಎಂದರೆ

ಸಕಾಲದಲ್ಲಿ, ಬಳೆದು–ವೃದ್ಧಿಯಾಗಿ, ವಿರಿಂಚಿಯ–ಬ್ರಹ್ಮನ, ಕೈಪಿಡಿವೊಲ್–ಕನ್ನಡಿಯಂತೆ, ಆ ನಾಡ–ಆ ದೇಶದ, ಊರ್ಗಳ್–ಊರುಗಳು, ಆದುವು. ಪಸವು<ಸಂ ಪ್ರಸಭ–ರಭಸ, ಬಲಾತ್ಕಾರ; ಆದರೆ ಕ್ಷಾಮ ಎಂಬರ್ಥದಲ್ಲಿ ಪ್ರಯೋಗವಿದೆ; 'ಪನ್ನೆರಡು ವರ್ಷಂಬರೆಗಮಿಾ ನಾಡೊಳನಾವೃಷ್ಟಿಯಾಗಿ ಮಹಾರೌದ್ರಪಸವಮಕ್ಕುಂ'; 'ಆನಾಡೊಳ್ ಮಾನಸರ್ ಮಾನಸರಂ ತಿಂಬಂತುಟಪ್ಪ ಮಹಾಘೋರಂ ಪಸವಾದೊಡೆ'; 'ಬಡಗನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ಪೇೞೆ.' ಕಳಿಂಚು: 'ನಿನ್ನಂತಪ್ಪ ಪುರುಷನಂ ದೊರೆಕೊಳಿಸಿ ಕಳಿಂಚುಮಾಡಿ ಕಳಿದ ದುರ್ವಿದಗ್ಧವಿಧಾತ್ರಂಗೆ ಮುನಿಪೆನಾಂ' ಎಂದು ಆರ್ಥನೇಮಿ ಪ್ರಯೋಗ(೩–೨೭೫). ಇದರ ಅರ್ಥ ಅನಿರ್ದಿಷ್ಟ,

**ವಚನ:** ನಾಡಾಡಿಯಲ್ಲದೆ–ಸಾಧಾರಣವಾಗಿಯಲ್ಲದೆ, ಅಸಾಧಾರಣವಾಗಿ,

**೫೨.** ಧ್ವನದಳಿಕುಳಾಕುಳೀಕೃತವನಂಗಳಿಂದೆ–ಮೊರೆಯುತ್ತಿರುವ ದುಂಬಿಗಳ ಸಮೂಹದಿಂದ ಹಿಡಿಸಲ್ಪಟ್ಟ ತೋಟಗಳಿಂದಲೂ, ಎಸೆವ–ಸೊಗಸುವ, ಪದ್ಮಷಂಡಂಗಳ–ತಾವರೆಗಳ ಸಮೂಹಗಳ, ಚೆಲ್ಪಿನೊಳಂ–ಸೊಗಸಿನಲ್ಲಿಯೂ, ಕಣ್ಣಂ ಮನಮುಮಂ–ಕಣ್ಣುಗಳನ್ನೂ ಮನಸ್ಸನ್ನೂ, ಅಸುವಿಸುವ–ಪ್ರೀತಿಯನ್ನುಂಟುಮಾಡುವ, ವಿರಾಟಪುರಮಂ–ವಿರಾಟನಗರವನ್ನು, ಅವರ್ಗಳ್–ಪಾಂಡವರು, ಎಯ್ದಿದರ್–ಸೇರಿದರು.

**ವಚನ:** ಪಿತೃವನದ–ಶ್ಮಶಾನದ; ಶಮಿಾವೃಕ್ಷದ ಮೇಲೆ–ಬನ್ನಿಮರದ ಮೇಲೆ; ನೇಲ್ಗಟ್ಟಿ–ನೇಲುವಹಾಗೆ ಕಟ್ಟಿ; ಅವಜಮೇಲೆ–ಆಯುಧಗಳ ಮೇಲೆ, ಒಟ್ಟಿ–ರಾಶಿ ಹಾಕಿ; ಪರೆದು–ಚೆದರಿ; ಧರಾಮರ ವೇಷದೊಳ್–ಬ್ರಾಹ್ಮಣ ವೇಷದಲ್ಲಿ: ಪೊೞ್ತು–ಹೊತ್ತು; ನೆತ್ತಮನಾಡುವಂ–ಪಗಡೆಯಾಡುತ್ತಾನೆ.

**೫೩.** ಕನವರಿಸೆ–ಕನಸಿನಲ್ಲಿ ಹೇಳಲು, ಎನಗೆ–ನನಗೆ, ನಾಲ್ಕುವೇದಮುಂ–ನಾಲ್ಕು ವೇದಗಳೂ, ಮುಖೋದ್ಗತಂ–ಬಾಯಲ್ಲಿಯೇ ಇವೆ; ಅದಲ್ಲದೆ–ಅದು ಅಲ್ಲದೆ, ಎಂದರೆ ಮತ್ತೆ, ನೃಪತಿ–ದೊರೆಯೇ, ಆಱಂಗದಮಾತು–ಆರು ವೇದಾಂಗಗಳ ವಿಷಯ ಕೂಡ, ಅನಿತೆ–ಅಷ್ಟೇ; ಗಡ–ಅಲ್ಲವೆ? ನಿನಗೆ, ಆಳಾಗಲ್ಕೆ–ಸೇವೆ ಮಾಡುವುದಕ್ಕೆ, ಬಂದೆಂ–ಬಂದೆನು: ಕಂಕಭಟ್ಟನೆನ್–ನಾನು ಕಂಕಭಟ್ಟ, ಎಂಬೆಂ–ಎನ್ನುತ್ತೇನೆ.

**ವಚನ:** ಭವ್ಯಾಕಾರಮುಮಂ–ಮಂಗಳಕರವಾದ ಆಕಾರವನ್ನೂ; ಕರಂ–ವಿಶೇಷವಾಗಿ, ಮನದೆಗೊಂಡು–ಮನಸ್ಸಿನಲ್ಲಿ ಮೆಚ್ಚಿ; ಜೋನವೇಳಿಗೆಯುಂ–ಊಟದ ಪೆಟ್ಟಿಗೆಯನ್ನು; ಸಟ್ಟುಗಮುಮಂ – ಸೌಟನ್ನೂ; ನಿನ್ನ ಬಿನ್ನಾಣಮೇನ್ – ನಿನ್ನ ವಿದ್ಯೆಯೇನು?

**೫೪.** ಎನ್ನಟ್ಟ – ನಾನು ಅಡುಗೆಮಾಡಿದ, ಅಡುಗೆಯಂ – ಅಡಿಗೆಯನ್ನು, ಉಂಡೊಡೆ–ಊಟ ಮಾಡಿದರೆ, ಬಿನ್ನಣಮೇನರಸ–ರಾಜನೇ, ಬಿನ್ನಾಣ ಏನು? ನರೆಗಳಾಗವು–ನರೆಕೂದಲುಗಳಾಗುವುದಿಲ್ಲ. ಎಂದರೆ ಮುಪ್ಪು ಬರುವುದಿಲ್ಲ; ಸವಿಯೊಳ್–ರುಚಿಯಲ್ಲಿ, ನಿನ್ನಂ–ನಿನ್ನನ್ನು. ಮೆಚ್ಚಿಪೆಂ–ಮೆಚ್ಚಿಸುತ್ತೇನೆ. ಎಡಱಿದೊಡೆ–ವಕ್ರ

ಬಂದರೆ, ಎನ್ನರೊಳಂ – ಎಂಥವರಲ್ಲೂ, ಮಲ್ಲಂ – ಜಟ್ಟಿಯು ; ಒರ್ವ – ಒಬ್ಬ, ವಲ್ಲಲನೆಂಬೆಂ–ವಲ್ಲಲ ಎಂಬ ಹೆಸರಿನವನಾಗಿದ್ದೇನೆ.

**ವಚನ :** ನಿನ್ನನಾಳ್ವೆಂ-ನಿನ್ನನ್ನು ಆಳಾಗಿಸಿಕೊಳ್ಳುತ್ತೇನೆ ; ಬಾಣಸಿನ ಕರಣಕ್ಕೆ-ಅಡಿಗೆಮನೆಯ ಕಾರ್ಯಕ್ಕೆ ; ನಿರೂಪಣಂಗೆಯ್ದಂ–ಆಜ್ಞೆ ಮಾಡಿದನು ; ಅಂಕವಣಿಯುಂ–ಕುದುರೆಯ ರಿಕಾಪನ್ನೂ ; ಬಾಳುಂ–ಶಕ್ತಿಯನ್ನೂ, ಬಾರುಂ–ಚರ್ಮದ ಪಟ್ಟಿಯನ್ನೂ ಎಂದರೆ ಲಗಾಮನ್ನೂ, ಚಮ್ಮಟಿಗೆಯುಮಂ–ಚಾವಟಿಯನ್ನೂ ; ಕೀೞಾಳಿಂ–ಕಡಮೆ ದರ್ಜೆಯ ಸೇವಕನಿಂದ ; ತಿರ್ದಲುಂ–ಶಿಕ್ಷಿಸಲೂ, ಪಳಗಿಸಲೂ, ಮಾಸಾಡಿಯಾಗಿರ್ದಂ–ದೊಡ್ಡ ಅಶ್ವಾರೋಹಿಯಾಗಿದ್ದನು, ಮಹಾಸಾದಿ(ಸಂ) > ಮಾಸಾದಿ ; ಗೋಮಂಡಳಾಧ್ಯಕ್ಷಂ–ಗೋವಿನ ಹಿಂಡುಗಳ ಮುಖ್ಯಾಧಿಕಾರಿ.

**೫೫.** ವಿಕ್ರಮದಿಂ–ಪರಾಕ್ರಮದಿಂದ, ಎಳೆಯಂ–ಭೂಮಿಯನ್ನು. ತರಲ್–ತರುವುದಕ್ಕಾಗಿ. ಮುನ್–ಪೂರ್ವಕಾಲದಲ್ಲಿ, ಮಹಿಧರಂ–ವಿಷ್ಣುವು, ಪಂದಿಯಾದಂತೆ–ವರಾಹಾವತಾರವನ್ನು ಮಾಡಿದಹಾಗೆ, ಸೋಲ್ವೆಳೆಯಂ-ಜೂಜಿನಲ್ಲಿ ಹೋದ ರಾಜ್ಯವನ್ನು, ದಾಯಿಗರಂ – ದಾಯಾದಿಗಳನ್ನು. ಆದ – ಉಂಟಾದ, ಏವದಿಂ – ಹಗೆತನದಿಂದ. ಪಡಲ್ವಡಿಸಿ–ಕೆಡರಿ ಬೀಳಿಸಿ, ಕೊಂಡು–ಆಕ್ರಮಿಸಿಕೊಂಡು. ಆಳಲ್ಕಂ–ಆಳುವುದಕ್ಕೂ, ಮುಳಿಸಿಂ-ಕೋಪದಿಂದ. ರಂಭೆಯ ಕೊಟ್ಟ-ರಂಭೆಯು ಕೊಟ್ಟ. ಶಾಪಮಂ–ಶಾಪವನ್ನು, ನೀಗಲ್ಕಂ-ಕಳೆಯುವುದಕ್ಕಾಗಿಯೂ. ಆಗಳ್–ಆಗ, ಆತ್ಮಕಾರ್ಯ ವಶದಿಂ–ಸ್ವಕಾರ್ಯಕ್ಕೆ ಅಧೀನನಾಗಿ. ಮತ್ಸ್ಯನಾ–ವಿರಾಟರಾಜನ, ಶುದ್ಧಾಂತದೊಳ್-ಅಂತಃಪುರದಲ್ಲಿ. ನರಂ–ಅರ್ಜುನನು. ಬೃಹಂದಳೆಯಾದಂ–ಬೃಹಂದಳೆಯೆಂಬ ಹೆಸರಿನ ನಪುಂಸಕನಾದನು.

**ವಚನ :** ಜ್ಯಾಘಾತದೊಳ್–ಹೆದೆಯ ಏಟಿನಿಂದ ; ಇಂದ್ರನೀಲಂಗಳಂ–ಇಂದ್ರನೀಲವೆಂಬ ಮಣಿಗಳನ್ನು. ಅಡಸಿದಂತಿರ್ದ–ತೆತ್ತಿಸಿದ ಹಾಗಿದ್ದ ; ಕರ್ಪಂ–ಕಪ್ಪನ್ನು ; ತೀವೆತೊಟ್ಟ–ತುಂಬುವ ಹಾಗೆ ಧರಿಸಿದ. ಪಲವುಂ ಪಾತ್ರಂಗಳಂ–ಹಲವು ನರ್ತಕಿಯರನ್ನು ; ಕಬಂಧ ಪಾತ್ರಂಗಳಂ–ಆಟ್ಟೆಯೆಂಬ ನರ್ತಕರನ್ನು ; ಆಡಿಸುವುದಂ–ಕುಣಿಸುವುದನ್ನು ; ರೂಪುಗರೆದು–ರೂಪನ್ನು ಮರೆಸಿಕೊಂಡು ; ನೀನಾರ್ಗೆ–ನೀನು ಯಾರು ? ಏನೆಂಬೆ–ಹೆಸರೇನು ?

**೫೬.** ನವಮೃಗಮದ ಪರಿಮಳಮುಮಂ-ಹೊಸದಾದ ಕಸ್ತೂರಿಯ ಕಂಪನ್ನೂ, ಇವು ಮಸುಳಿಪುವು–ಇವು ಕಂದಿಸುತ್ತವೆ, ಎನಿಪ–ಎನ್ನಿಸಿಕೊಳ್ಳುವ, ವಿವಿಧ ಗಂಧಂಗಳಂ–ನಾನಾ ಬಗೆಯಾದ ಗಂಧಗಳನ್ನು, ಅಂ–ನಾನು. ಆವಯವದೊಳ್–ಶ್ರಮವಿಲ್ಲದೆ, ಸುಲಭವಾಗಿ, ಮಾಡುವ, ಘಟ್ಟಿವಳ್ತಿಯೆಂ–ಸುಗಂಧವನ್ನು ತೇಯುವವಳಾಗಿದ್ದೇನೆ ; ದೇವಿ–ರಾಣಿಯೇ. ಗಂಡವಳ್ತಿಯೆನಲ್ಲೆಂ–ಗಂಡನನ್ನುಳ್ಳವಳಾಗಿಲ್ಲದಿದ್ದೇನೆ.

**೫೭.** ಪೆಸರೊಳ್ – ಹೆಸರಿನಲ್ಲಿ, ಸೈರಂಧ್ರಿಯೆಂ – ಸೈರಂಧ್ರಿಯಾಗಿದ್ದೇನೆ ; ಅಱಿವೆಸನದ–ಹೀನಕಾರ್ಯಗಳ, ದೆಸೆಯುನಱಿಯೆಂ–ದಿಕ್ಕನ್ನು ಎಂದರೆ ಗೊಡವೆಯನ್ನು ತಿಳಿಯೆನು, ಎನಗೆ–ನನಗೆ, ಗಂಧರ್ವರ–ಗಂಧರ್ವರೆಂಬ ದೇವತೆಗಳ. ಕಾಪು–ರಕ್ಷಣೆ,

ಅಸದಳಮುಂಟು–ವಿಶೇಷವಾಗಿ ಇದೆ, ಇರಿಸುವೊಡೆ–ಇರಿಸಿಕೊಳ್ಳುವ ಪಕ್ಷದಲ್ಲಿ, ಆಂಬೆಸಕೆಯ್ವೆಂ–ನಾನು ಸೇವೆ ಮಾಡುತ್ತೇನೆ; ನಿನ್ನ–ನೀನು, ಬೆಸಸಿದಂದದೊಳ್–ಹೇಳಿದ ರೀತಿಯಲ್ಲಿ, ಇರ್ಪೆಂ–ಇರುತ್ತೇನೆ. ಈ ಪದ್ಯದಲ್ಲಿ ಐದು ವಾಕ್ಯಗಳಿವೆ.

**ವಚನ:** ಆವಗಂ–ಎಲ್ಲಕಾಲವೂ, ಅಣುಗೆಯಾಗಿ–ಪ್ರೀತಿಗೆ ಆಸ್ಪದಳಾಗಿ; ಸಿಗ್ಗಾಗಿ–ತಿರಸ್ಕೃತವಾಗಿ, ಸಂಕೋಚಪಟ್ಟವನಾಗಿ; ಪೇೞ್ದಾಗಳ್–ನಿಯಮಿಸಿದಾಗ.

**೫೮.** ಕಲಿ ವಿಷಖರ್ಪರಂ–ಶೂರನಾದ ವಿಷಖರ್ಪರನೆಂಬ ಮಲ್ಲ, ಪರ್ಪರಿಕೆ ಗಿಡದೆ–ಕರ್ಕಶತೆ ಕೆಡದೆ, ಇದಿರಾಂತೊಡೆ–ಎದುರಿಸಿದರೆ, ವಲಲಂ–ಭೀಮನು, ಆಂತು–ಪ್ರತಿಭಟಿಸಿ, ತಳಮಂ–ಅಂಗೈಯನ್ನು, ಮಾರ್ಪೊಸೆದು–ಪ್ರತಿಯಾಗಿ ನೆಲದಲ್ಲಿ ಉಜ್ಜಿ, ತಳ್ತು–ಸೇರಿ, ಕಣ್ತಿರಿತರ್ಪಿನೆಗಂ–ಕಣ್ಣುಗಳು ತಿರುಗುವಂತಾಗಲು, ಅಪ್ಪಂಕಿ–ಒತ್ತಿ, ಸಿಂಹನಾದದಿಂ–ಸಿಂಹಗರ್ಜನೆಯಿಂದ, ಆರ್ದಂ–ಕೂಗಿದನು.

**ವಚನ:** ಒಡವುಟ್ಟಿದಂ–ಸಹೋದರನು; ಇಱಿದೋಡಿಸಿ–ಹೊಡೆದೋಡಿಸಿ.

**೫೯.** ಇಲ್ಲಿಂದ ಕೀಚಕೋಪಾಖ್ಯಾನ: ತೋಳಮೊತ್ತಮೊದಲೊಳ್–ತೋಳುಗಳ ಮೇಲ್ಭಾಗದಲ್ಲಿ, ಬುಡದಲ್ಲಿ, ಪೊಗರ್ವಟ್ಟು–ಕಾಂತಿಯನ್ನು ಹೊಂದಿ, ಎಸೆವ–ಸೊಗಸಾಗಿರುವ, ಒಂದು ನುಣ್ಪು–ಒಂದು ನುಣುಪು, ಸೊಗಯಿಸೆ–ಶೋಭಿಸಲು; ಸಾವಗಿಸುವ–ಸರಿಯಾಗಿ ಹೊದ್ದುಕೊಳ್ಳುವ, ಮೇಲುದಂ–ಮೇಲು ಸೀರೆಯನ್ನು, ಮೊಲೆಗಳ್–ಮೊಲೆಗಳು, ಅಳ್ಳಿಱಿಯುತ್ತಿರೆ–ನಡುಗಿಸುತ್ತಿರಲು; ಘರ್ಮಬಿಂದುಗಳ್–ಬಿಸಿದಾದ ಬಿಂದುಗಳು ಎಂದರೆ ಬೆವರ ಹನಿಗಳು, ಪೊಣ್ಮೆ–ತಲೆದೋರಲು; ಅಲರಂಬುವೋಲ್–ಹೂವಿನ ಬಾಣಗಳಂತೆ, ಪಾಟಲ ಲೋಲ ವಿಲೋಚನಂ–ನಸುಗೆಂಪಾದ, ಚಂಚಲವಾದ ಕಣ್ಣುಗಳು, ಎಂದರೆ ನೋಟ, ಎಳಸಿ–ವ್ಯಾಪಿಸಿ, ಮನಂಬುಗೆ–ಮನವನ್ನು ಹೊಗಲು, ಆಕರ್ಷಿಸಲು: ನಳಿತೋಳ–ಕೋಮಲವಾದ ತೋಳುಗಳ, ಕೋಳೆಸೆಯೆ–ಹಿಡಿತವು ಸೊಗಸಾಗಲು, ಘಟ್ಟಿಮಗುಳ್ಚುವ–ಗಂಧವನ್ನು ಅರೆಯುವಾಗ ಮೇಲು ಕೆಳಗು ಮಾಡುವ, ಘಟ್ಟಿವಳ್ತಿಯಂ–ಗಂಧ ಅರೆಯುವವಳನ್ನು, ಸೈರಂಧ್ರಿಯನ್ನು

**ವಚನ:** ಭೋಂಕನೆ–ಅನಿರೀಕ್ಷಿತವಾಗಿ, ಕಂಡು–ನೋಡಿ; ಯಾಚಕನಂತೆ–ತಿರುಪೆಯುವನ ಹಾಗೆ; ಕರಮೆ–ವಿಶೇಷವಾಗಿಯೆ, ನಾಣ್ಗೆಟ್ಟು – ನಾಚಿಕೆ ಕೆಟ್ಟು, ಮನಂಗಾಪಱದು–ಮನಸ್ಸಿನ ಹತೋಟಿ (ರಕ್ಷಣೆ) ಹಾಳಾಗಿ; ಆಳಿಪಿ–ಆಸೆಪಟ್ಟು;

**೬೦.** ಮಱಿದುಂಬಿ–ದುಂಬಿಯ ಮರಿಗಳು, ಮುತ್ತುಗಳಂ–ಮುತ್ತುಗಳನ್ನು; ಕಾಱುವಂತಿರೆ–ಕಕ್ಕುವ ಹಾಗೆ, ಬೆಮರ್–ಬೆವರು, ಕುರುಳ್ವಿಡಿದು–ಮುಂಗುರುಳುಗಳನ್ನು ಅನುಸರಿಸಿ, ಸುರಿಯೆ–ಸುರಿಯಲು; ನಳಿತೋಳ–ಕೋಮಲವಾದ ತೋಳುಗಳ, ಬಳ್ವಳಿಕೆ–ಚೆಲ್ವಿನತಿಶಯವು, ಕಣ್ಗೊಳೆ–ಕಣ್ಣುಗಳನ್ನು ಸೆಳೆಯಲು; ಘಟ್ಟಿಮಗುಳ್ಚುವ–ಗಂಧ ತೇಯುವ, ಅಂದಮಲ್ತು–ಅಂದವಲ್ಲ, ಎನ್ನೆರ್ದೆಯಂ–ನನ್ನ ಎದೆಯನ್ನು, ಅರೆದು, ಮಗುಳ್ಚುವಂದಮೆ ದಲ್–ಕೀಳುಮೇಲು ಮಾಡುವ ರೀತಿಯೇ ದಿಟವಾಗಿಯೂ; ಪೆಱತೇನ್–ಬೇರೇನು? ಈ ಮೃಗೋದ್ಭವದ–ಈ ಕಸ್ತೂರಿಯ, ಕಂಪುಮಂ–ಸುವಾಸನೆ

ಯನ್ನೂ, ಈಕೆಯ-ಇವಳ, ಸುಯ್ಯ-ಉಸಿರ್ಗಾಳಿಯ. ಕಂಪುಮಂ-ಸುಗಂಧವನ್ನೂ, ಅದೆಂತು – ಅದು ಹೇಗೆ, ಪರಿಕಿಪೆಂ – ಪರೀಕ್ಷಿಸುತ್ತೇನೆ. ಪೇಟ್ – ಹೇಳು. ಎಂದರೆ ಕಸ್ತೂರಿಯ ಕಂಪಿಗೂ ಉಸಿರಿನ ಕಂಪಿಗೂ ವ್ಯತ್ಯಾಸವನ್ನು ಹೇಗೆ ಕಾಣುವುದು ಎಂದು ತಾತ್ಪರ್ಯ, ವ್ಯತ್ಯಾಸವೇ ಇಲ್ಲವಲ್ಲ !

**೬೧.** ವಿಲೋಲೇಕ್ಷಣೆಯಾ–ತರಳನೇತ್ರೆಯ, ಕಟಾಕ್ಷ ಈಕ್ಷಣಂ–ಕಡೆಗಣ್ಣಿನ ನೋಟ, ಇದೆ–ಇದೇ, ಮದನಭವನಂ–ಮನ್ಮಥನ ಮನೆಯಾಗಿದೆ; ಇಂತು ಇದೆ–ಹೀಗೆ ಇದೇ. ಮದನಾಮೃತಂ – ಕಾಮಾಮೃತವಾಗಿದೆ; ಇದುವೆ – ಇದೇ. ಮದನ ಸಾಯಕಂ – ಕಾಮನ ಬಾಣವಾಗಿದೆ; ಪೋ–ಹೋಗು. ಇದೆ – ಇದೇ. ಮದನ ಮಹೋತ್ಸವ ಪದಂ–ರತ್ಯುತ್ಸವದ ಸ್ಥಾನವಾಗಿದೆ. ಎನಿಸಿದುದು–ಎನ್ನಿಸಿತು.

**೬೨.** ಮಾಸಿದರೂಪು–ಮಾಸಿರುವ ರೂಪವು. ನೋಟ್ಪೊಡೆ–ನೋಡಿದರೆ. ಆರೆ ಮಾಸಿದ-ಅರ್ಧ ಮಾಸಿದ. ಚಿತ್ರದ ಪೆಣ್ಣ-ಚಿತ್ರದ ಸ್ತ್ರೀಯ. ರೂಪುಮಂ-ರೂಪವನ್ನೂ, ಮಾಸಿಸೆ–ಮಾಸುವಂತೆ ಮಾಡಲು. ನಾಡೆ–ಚೆನ್ನಾಗಿ. ಮಾಸದಿಕೆಯಂ–ಮಾಸದಿರುವಿಕೆಯನ್ನು; ಪಡೆದಪ್ಪುದು–ಪಡೆಯುತ್ತಿದೆ; ಕಂಡ ಕಣ್ಗಳೊಳ್–ನೋಡಿದ ಕಣ್ಣುಗಳಲ್ಲಿ. ಸೂಸುವ ಮಾಟ್ಕೆಯಿಂ-ತುಂಬಿ ತುಳುಕುವ ರೀತಿಯಿಂದ. ಅಂದಂ–ಸೊಗಸು. ಪೊಜಗೆ ಪೊಣ್ಮುವುದು–ಹೊರಕ್ಕೆ ಹೊಮ್ಮುತ್ತದೆ; ಕಾಯ್ಪು–ಕೆರಳಿ. ಕೆಯ್ವೀಸುವ–ಕೈಬೀಸಿ ಸಮರ ಸೂಚನೆ ಕೊಡುವ. ಕಾವನ–ಕಾಮನ. ಅಂದಂ–ರೀತಿ. ಅದೆಂತೊ–ಅದು ಹೇಗೊ! ಇವಳ್–ಇವಳು. ಏಂ ಕುಲನಾರಿಯೋ–ಏನು ಕುಲಸ್ತ್ರೀಯೋ, ವಾರನಾರಿಯೋ–ಏನು ವೇಶ್ಯೆಯೋ! ಇಲ್ಲಿ 'ಮಾಸದಿಕೆ' ಎಂಬ ಪಾಠ 'ಮಾಸ[ರಿ]ಕೆ'ಯಾಗಿರಬಹುದು; ಮಾಧುರ್ಯ > ಮಾದರ; ಮಾದರ + ಇಕೆ = ಮಾದರಿಕೆ = ಮಾಸರಿಕೆ.

**೬೩.** ಆವಳಪ್ಪೊಡಮಕ್ಕೆ – ಯಾವಳಾದರೂ ಆಗಿರಲಿ; ಪೋ – ಹೋಗು, ತಲೆಯಿಂದೆ ಪೋದೊಡಂ–ತಲೆ ಇವತ್ತೇ ಹೋದರೂ. ಇಂದೆ–ಇವತ್ತೇ. ಮಾದೇವಂ–ಮಹಾದೇವನು. ಶಿವನು. ಆರ್ತು–ಸಮರ್ಥನಾಗಿ. ಎಡೆಗೊಂಡೊಡಂ–ನಡುವೆ ಬಂದರೂ. ಇಂದೆ–ಇವತ್ತೇ. ಲಯಂ–ವಿನಾಶವು. ಬರ್ಪೊಡಂ–ಬರುವುದಾದರೂ. ಎನ್ನುರಂ–ನನ್ನ ಎದೆ, ತೀವಿ–ತುಂಬಿ. ತಳ್ತು–ಸೇರಿ. ಇವಳೀ ಕುಚಾಗ್ರಮಂ–ಇವಳ ಈ ಕುಚಗಳ ತುದಿಯನ್ನು, ಅಕ್ಕಜದಿಂದ – ಪ್ರೇಮದಿಂದ. ಅಮರ್ದಪ್ಪಿ – ಗಾಢವಾಗಿ ಆಲಿಂಗಿಸಿ, ಪೋಗು – ಹೋಗು, ಆವುಪಾಯದೊಳಾದೊಡಂ – ಯಾವ ಉಪಾಯದಿಂದಲಾದರೂ. ಈಕೆಯೊಳ್–ಇವಳಲ್ಲಿ. ನೆರೆದಲ್ಲದೆ–ಕೂಡಿಯಲ್ಲದೆ. ಇರೆಂ–ಇರೆನು.

**ವಚನ :** ಅನಂಗಮತ್ತ ಮಾತಂಗ ಕೋಳಾಹಳೀ ಕೃತಾಂತರಂಗನಾಗಿ–ಮನ್ಮಥನೆಂಬ ಸೊಕ್ಕಾನೆಯಿಂದ ಗಲಭೆಗೊಳಗಾದ ಮನಸ್ಸುಳ್ಳವನಾಗಿ; ಸೋಲ್ತಕಣ್ಣ ಅದು–ಮೋಹವಶವಾದ ಕಣ್ಣನ್ನು ತಿಳಿದು; ಮಚ್ಚುಂ–ಮೆಚ್ಚು; ಜೇಟಮುಗ್ಗಳಿಸೆ–ಪ್ರೀತಿ ಹೆಚ್ಚಾಗಲು; ವಿಲೇಪನಂಗಳಂ – ಸುಗಂಧಗಳನ್ನು; ಉಪರೋಧಕ್ಕೆ – ಒತ್ತಾಯಕ್ಕೆ; ಆಜಿದೆ – ತಡೆಯಲಸಮರ್ಥಳಾಗಿ, ಪಡುವನೆಯುಂ – ಕಾಡುಬುದ್ಧಿಯನ್ನು, ಕೆಟ್ಟ ಮನಸ್ಸನ್ನು.

೬೪. ಸ್ಮರನ-ಮನ್ಮಥನ, ಅರಲಂಬು-ಹೂಗಣೆ, ಕೈಬರ್ದುಕಿ ಬರ್ಪವೊಲ್-ಕೈಯಿಂದ ತಪ್ಪಿಸಿಕೊಂಡು ಬರುವ ಹಾಗೆ, ಒಯ್ಯನೆ-ಮೆಲ್ಲನೆ, ಬಂದು, ಸಿಂದ, ಸುಂದರಿಯಂ - ಸುಂದರಿಯನ್ನು, ಸಿಂಹಬಳಂ - ಕೀಚಕನು, ಒಜಲ್ಲು - ಸ್ನೇಹದಿಂದ ಕೂಡಿ, ಅಂತೆ ಇರು-ಎಲ್ಲಿ ಹಾಗೆಯೇ ಇರು, ಮಾಸಿಡೆಯಾದೆ-ಮಾಸಿದವಳಾಗಿರುವೆ ಯಲ್ಲ, ಮೇಣ್-ಮತ್ತು, ಉಡಲ್‌ತರಿಪೆನೆ-ಉಟ್ಟುಕೊಳ್ಳುವುದಕ್ಕೆ ವಸ್ತ್ರಗಳನ್ನು ತರಿಸಲೆ, ತಂಬುಲಂಬಿಡಿ-ಇದೋ ತಾಂಬೂಲವನ್ನು ತೆಗೆದುಕೊ, ಮುನ್ನಂ-ಮೊದಲು, ಮನೋಜ ಶಿಖಾಳಿಗಳ್-ಕಾಮನ ಜ್ವಾಲೆಗಳ ಸಮೂಹಗಳು, ಅಜ್ಪಿ-ಸುಡಲು, ಎನ್ನ-ನನ್ನ, ಉರಿವೆರ್ದೆ-ಉರಿವ ಎದೆಯು, ಅಂಬುಜಲೋಲಲೋಚನೇ-ಕಮಲದಂತೆ ವಿಲಾಸವುಳ್ಳ ಕಣ್ಣಿನವಳೇ, ನಿನ್ನಂ ಕಂಡು-ನಿನ್ನನ್ನು ನೋಡಿ, ಇನಿಸು-ಒಂದಿಷ್ಟು, ಆಱಿದುದು-ಶಮನವಾಯಿತು. ಬರ್ದುಕು < ಬಿಚ್ಚುಂಕು-ಬಿಡಲ್ಪಡು, "ಪುಲಿಯ ಬಾಯಿಂ ಬರ್ದುಂಕಿದಂ" ಎಂಬಂತೆ.

೬೫. ಪರೆದ ಕುರುಳ್-ಚೆದರಿದ ಮುಂಗುರುಳುಗಳು, ಅಲುಗೆ-ಅಲುಗಾಡಲು, ಘಟ್ಟಿಯಂ-ಗಂಧವನ್ನು, ಅರೆಯುತ್ತುಂ-ತೇಯುತ್ತ, ನಾಣ್ಚಿ-ನಾಚಿ, ಎನ್ನಂ-ನನ್ನನ್ನು ತೆಗೆದು ನೋಟ್ಪುದುಂ-ಆಕರ್ಷಿಸಿ ನೋಡುತ್ತಲು, ನಿನ್ನ-ನೀನು, ನೋಡಿದ ನೋಟಂ-ನನ್ನನ್ನು ನೋಡಿದ ದೃಷ್ಟಿ, ಸ್ಮರಕುಳಿಕಾಗ್ನಿಯೆ-ಮನ್ಮಥನೆಂಬ ಸರ್ಪದ ವಿಷಾಗ್ನಿಯೆ, ಕೊಂಡಂತಿರೆ-ಸುಟ್ಟಂತೆ, ಕೊಂಡುದು-ಸುಟ್ಟಿತು, ನೋಡ-ನೋಡು.

೬೬. ನಿನ್ನೊಂದು ಕಂದಿದ ಮೆಯ್-ನಿನ್ನ ಮಾಸಿದ ಮೈ, ಎನ್ನಯ ತೋಳೊಳ್-ನನ್ನ ತೋಳುಗಳಲ್ಲಿ, ಒಂದಿ-ಸೇರಿ, ಮದನಾಸ್ತ್ರಂ-ಮನ್ಮಥನ ಬಾಣ, ಕರಸಾಣೆಗಾಣಿಸಿದುದು-ತೀಕ್ಷ್ಣವಾದ ಸಾಣೆಗೆ ಇಡಲ್ಪಟ್ಟಿತು, ಎಂಬಂತಾಗೆ-ಎನ್ನುವ ಹಾಗಾಗಲು, ನೀಂ-ನೀನು, ಸಿರಿಯಂ-ಲಕ್ಷ್ಮಿಯನ್ನು, ನನ್ನ ಐಶ್ವರ್ಯವನ್ನೆಲ್ಲ, ಉಯ್ದು-ತೆಗೆದುಕೊಂಡು ಹೋಗಿ, ತೊಟ್ಟಾಳ್ದು-ತೊತ್ತುಮಾಡಿ ಆಳಿ, ರಾಗದಿಂ-ಸಂತೋಷ ದಿಂದ, ಎನ್ನೊಳ್-ನನ್ನಲ್ಲಿ, ಸುಕಮಿರ್ಪುದು-ಸುಖವಾಗಿ ಇರುವುದು, ಎನ್ನ-ನನ್ನ ನುಡಿಯಂ-ಮಾತನ್ನು, ನೀಂ ಕೇಳ್ದುಂ-ನೀನು ಕೇಳಿಯೂ, ಒಂದಂಚೆಯಂ-ಒಂದು ವಸ್ತ್ರವನ್ನು, ಪೊದೆಯೊಂದಂಚೆಯಂ-ಹೊದೆವ ಒಂದು ವಸ್ತ್ರವನ್ನು, ಉಟ್ಟ-ಧರಿಸಿದ, ನಿನ್ನಿರವು-ನಿನ್ನ ಸ್ಥಿತಿ, ಅಂಭೋಜ ಪತ್ರೇಕ್ಷಣೇ-ಕಮಲನಯನೆಯೇ. ಇದೇನ್-ಇದೇನು? (ಸಂ) ಖರಶಾಣಾ > ಕರಸಾಣೆ.

೬೭. ಬಿಗಿದೊಗೆದ-ಬಿಗಿದುಕೊಂಡು ಚಿಮ್ಮುತ್ತಿರುವ, ನಿನ್ನ ಮೊಲೆಗಳ-ನಿನ್ನ ಕುಚಗಳ, ಮೃಗಮದದ-ಕಸ್ತೂರಿಯ, ಪುಳಿಂಚುಗಳ್-ಗುಳ್ಳೆಗಳು, ಪಗಿಲ್ತಿರಲ್ ಅಂಟಿಕೊಂಡಿರಲು, ಎಡೆಯಾದ-ತೆರಪಾದ. ಅಗಲುರಮಂ-ವಿಶಾಲವಾದ ಎದೆಯನ್ನು, ಎನಗೆ-ನನಗೆ, ಪಡೆದ-ಉಂಟುಮಾಡಿದ, ಅಜಂ-ಬ್ರಹ್ಮನು, ಎಲೆಗೆ-ಎಲೇ, ನಿನ್ನಂ-ನಿನ್ನನ್ನು, ಎನಗೆಯೆ-ನನಗಾಗಿಯೆ, ಪಡೆದಂ-ಸೃಷ್ಟಿಸಿದನು; ಒಗಸುಗಮಲ್ತು-ಆಶ್ಚರ್ಯ ವಲ್ಲ. ಪುಳಿಂಚು=ಪುಳಿಚು-ಬೊಬ್ಬೆ, ಬೊಕ್ಕೆ, ಗುಳ್ಳೆ: ಕಡುಗಾಯ್ದುಗ್ರಾತ ಪಜ್ವಾಳಿಗೆ ಮಿಗೆ ಪುಳಿಚೇಟಲ್ಕೆ ಬೆಂಬೆಂದು-ಎಂದು ಪ್ರಯೋಗಾಂತರವುಂಟು.

೬೮. ಎನಗೆ–ನನಗೆ, ಅರಸಿಯಾಣೆ–ರಾಣಿಯಾದ ಸುದೇಷ್ಣೆಯ ಆಣೆ; ನಿನ್ನೊಡನೆ–ನಿನ್ನ ಜೊತೆಯಲ್ಲಿ, ಎನಗೆ–ನನಗೆ, ಏಗೆಟ್ಟಪುದು – ಏನು ಕೆಡುತ್ತದೆ, ನಷ್ಟವಾಗುತ್ತದೆ, ಇದು, ಎಂದು, ಜಱೋಡಾಡಲ್–ಅಪಹಾಸ್ಯ ಮಾಡುವುದಕ್ಕಾಗಿ, ಕೆಮ್ಮನೆ–ಸುಮ್ಮನೆ, ನುಡಿದೊಡೆ–ಹೇಳಿದರೆ, ಕಣ್ಗಂ–ಕಣ್ಣಿಗೂ, ಮನಕ್ಕೆ–ಮನಸ್ಸಿಗೂ, ಮಂದಿರ್ದ–ಮೆಚ್ಚಿಕೆಯಾಗಿರುವ, ನಿನ್ನೊಳ್–ನಿನ್ನಲ್ಲಿ, ಎನಗೆ–ನನಗೆ, ಎರಡುಂಟೇ–ಕಪಟವುಂಟೇ, ಸುಳ್ಳು ಇದೆಯೇ.

೬೯. ಬಾಯಬಱಿದು – ಬಾಯಿ ಸೋಲುವಂತೆ, ಎನಿತೆಱೆದೊಡಂ – ಎಷ್ಟು ಬೇಡಿದರೂ, ಹಾ ಎನ್ನೆಯು–ಅಯ್ಯೋ ಎಂದು ಹೇಳೆಯ ? ಕರಮೆ ಮಱುಗಿ- ವಿಶೇಷವಾಗಿ ವ್ಯಥೆಪಟ್ಟು, ಮೆಯ್ವಿಡಿದು–ದೇಹ ಸಮೇತನಾಗಿದ್ದು, ಉರಿವ–ಉರಿಯುತ್ತಿರುವ, ಎನ್ನ–ನನ್ನ, ಈ ಎದೆಯಂ–ಈ ಹೃದಯವನ್ನು, ಅಱಿಸಲ್–ಸಮಾಧಾನಪಡಿಸಲು, ನೀಂ–ನೀನು, ಬಾಯೊಳ್–ನಿನ್ನ ಬಾಯಲ್ಲಿ, ತಂಬುಲಮನಪ್ಪೊಡಂ-ತಾಂಬೂಲ ವನ್ನಾದರೂ, ದಯೆಗೆಯ್ವೋ–ದಯಮಾಡಿ ಕೊಡುವೆಯೋ ?

**ವಚನ:** ಎನಿತಾನುಂ ತೆಱದ–ಎಷ್ಟೋ ಬಗೆಯಾದ; ಲಲ್ಲೆಯಿಂ-ಲಲ್ಲೆಮಾತು ಗಳಿಂದ; ಅಳಿಪಂ ತೋಱಿ–ಆಸೆಯನ್ನು ತೋರಿಸಿ; ಬಾಯಬಱಿದು–ಬಾಯಿ ಸೋಲು ವಂತೆ ಹರಟೆ; ತನ್ನ ನುಡಿಗಳ–ತನ್ನ ಮಾತುಗಳ; ಅಳಿಪು–ಅಭಿಲಾಷೆಯು; ಇಳಿ ವೋಗೆ–ತಿರಸ್ಕೃತವಾಗಲು,

೭೦. ಎನ್ನೊಳ್–ನನ್ನಲ್ಲಿ, ಇಂತಪ್ಪ–ಇಂಥ, ಅಳಿಪಿನ–ದುರಾಶೆಯ, ನುಡಿಯಂ–ಮಾತುಗಳನ್ನು, ನುಡಿಯಲ್ವೇಡ–ಹೇಳಬೇಡ; ನಿನ್ನ ಮಾತಿಂಗೆ–ನಿನ್ನ ಮಾತುಗಳಿಗೆ, ಚೀಃ–ಚೀ, ಮೆಚ್ಚಿಡುವಂತಪ್ಪಾಕೆಯಲ್ಲೆಂ–ಮೋಸಹೋಗುವವಳಲ್ಲ ನಾನು; ಬಿಡು ಗಡ–ನನ್ನನ್ನು ಬಿಡೋ; ಬಿಡದಂದು–ಬಿಡದಿದ್ದಾಗ, ಎನ್ನ ಗಂಧರ್ವರಿಂದಂ–ನನಗೆ ರಕ್ಷಣೆಯಾಗಿರುವ ಗಂಧರ್ವರಿಂದ, ಮಡಿವಯ್–ಸಾಯುತ್ತೀಯೆ; ನೀಂ–ನೀನು; ಎಂದೊಡೆ-ಎಂದರೆ, ಅಂತಪ್ಪೊಡೆ-ಹಾಗಾದರೆ, ಬಿಡೆಂ–ಬಿಡೆನು; ಎನಗಂ–ನನಗೆ ಕೂಡ, ಮೋಗುವೇೞ್ದಪ್ಪೆಯಲ್ಲ–ಮೋಸದ ಮಾತುಗಳನ್ನು ಹೇಳುತ್ತಿರುವೆಯಲ್ಲ; ಅರ್ಪೊಡೆ–ಶಕ್ತರಾಗಿದ್ದರೆ, ನಿನ್ನಂ ಕಾವ ಗಂಧರ್ವರೆ–ನಿನ್ನನ್ನು ರಕ್ಷಿಸುವ ಗಂಧರ್ವರೇ, ಬಿಡಿಸುಗೆ–ಬಿಡಿಸಲಿ, ಪೋಗು-ಹೋಗು, ಎಂದು, ದುರಾತ್ಮಂ-ದುಷ್ಟನಾದ ಕೀಚಕನು, ಪೊಯ್ದಂ–ಹೊಡೆದನು. ಮೋಗು < ಮ್ರೋಕು (ತೆ) < ಮೆಱುಕು (ತ)–ಸಾರಿಸು, ಲೇಪಿಸು, ಗಿಲೀಟುಮಾಡು, ವಂಚಿಸು.

**ವಚನ:** ಬಱಬಂ-ಬರಿದಾದವನು, ನಿಸ್ಸಹಾಯನಾದವನು; ಪೊಯಿಲ್ವೆತ್ತಂತೆ–ಏಟು ತಿಂದಹಾಗೆ; ಪರಿಭವಾನಲನಿಂ–ಅವಮಾನದ ಅಗ್ನಿಯಿಂದ; ಕಾಯ್ಪಿನೊಳ್–ಕೋಪದಲ್ಲಿ, ಪಿಡುಗಿ–ಸಿಡಿಲಂತೆ ಸಿಡಿದು; ತಳೋದರಿ–ದ್ರೌಪದಿ; ವೃಕೋದರನಲ್ಲಿಗೆ–ಭೀಮನ ಬಳಿಗೆ.

೭೧. ಪೆಱನ–ಬೇರೆಯವನ, ಇತರರ, ಇಕ್ಕುಂಗೂೞೊಳಂ–ಹಾಕುವ ಅನ್ನದಲ್ಲೂ,

ಕೀೞುಲೊಳಂ–ಸೇವಕರಿರುವ ಕೀಳಾದ ಮನೆಯಲ್ಲೂ, ಅಳವಿಗೆಟ್ಟಿರ್ಪ–ಅಂತಸ್ತು ಕೆಟ್ಟಿರುವ, ನಿಮ್ಮಿರ್ಪುದರ್ಕಂ–ನೀವು ಇರುವ ಸ್ಥಿತಿಗೂ, ಮಱುಗುತ್ತಿರ್ಪಳ್ಗೆ ಎನಗೆ–ವ್ಯಥೆಪಡುತ್ತಿರುವ ನನಗೆ. ನೋಡ–ನೋಡು. ಆದ ಅೞಲಂ–ಉಂಟಾದ ದುಃಖವನ್ನು ; ಕಣ್ಸೋಲದಿಂ-ಮೋಹದಿಂದ, ಕೀಚಕಂ-ಕೀಚಕನು, ಬಂದು, ಉಜದೆ-ಇರದೆ, ಎನ್ನಂ-ನನ್ನನ್ನು, ಕಾಡಿ-ಹಿಂಸಿಸಿ, ಕೈಗೆಲ್ದು–ಕೈಯಿಂದ ಗೆದ್ದು, ಹೊಡೆದು, ಉಗಿದಂ–ಎಳೆದಾಡಿದನು; ಅವನ, ಅದು, ಬಂದು, ಉರ್ಕಂ–ಕೊಬ್ಬನ್ನು, ಏವೇೞ್ವೆಂ–ಏನೆಂದು ಹೇಳುವೆನು, ಇಂ–ಇನ್ನು, ನೀಂ–ನೀನು, ಅಱಿವಯೆ–ಬಲ್ಲೆ; ಪೂಣ್ದು–ಸುತ್ತಿಕೊಂಡಿರುವ, ಎನ್ನದು–ನನ್ನ, ಒಂದಂ ಪರಿಭವನಿದಂ–ಈ ಒಂದು ಅವಮಾನವನ್ನು, ಭೀಮಸೇನಾ–ಭೀಮಸೇ, ನೀಂ ನೀಗು–ನೀನು ತೊಲಗಿಸು. (ತ) ಪೂಣ್–ಶೂಟ್‌ನ್ನು ಕೊಳ್ಳದಲ್, ಬಳಸು, ಸುತ್ತುವರಿ.

**ವಚನ :** ಏವದೊಳ್–ಕೋಪದಲ್ಲಿ.

೭೨. ಎನಗೆ–ನನಗೆ, ಮುಳಿಸೆಂಬುದು–ಕೋಪವೆನ್ನುವುದು, ಆ ಕೌರವರೊಳೆ–ಆ ಕೌರವರಲ್ಲಿಯೇ, ಪಿರಿದು–ಹಿರಿದು, ಆ ಬಲಿದ ಬಯಕೆಯುಂ–ಆ ಬಲಿತ ಅಭಿಲಾಷೆಯನ್ನು, ಮಾದುರದೊಳ್–ಮಹಾಯುದ್ಧದಲ್ಲಿ, ಕಳೆವಂತು-ಕಳೆಯುವ ಹಾಗೆ (ಬಯಕೆ ಹಿಂಗುವಂತೆ); ಅನ್ನೆಗಂ–ಅದುವರೆಗೆ, ಅಬ್ಜದಳಾಕ್ಷೀ–ಕಮಲನೇತ್ರೆಯೇ, ನಿನ್ನೊಂದು ಮುಳಿಸಂ–ನೀನು ಕಾರಣವಾಗಿ ಉಂಟಾಗಿರುವ ಕೋಪವನ್ನು, ಇವನೊಳ್-ಇವನಲ್ಲಿ (ಕೀಚಕನಲ್ಲಿ), ಕಳೆವೆಂ–ಕಳೆಯುತ್ತೇನೆ.

**ವಚನ :** ಸಂಕೇತ ನಿಕೇತನಂ ಮಾಡಿ–ಸೂಚಿಸಿದ ಮನೆಯನ್ನಾಗಿ ಮಾಡಿ; ನೇಸರ್ಪಡಲೊಡಂ–ಸೂರ್ಯ ಮುಳುಗಿದ ಕೂಡಲೇ; ಆ ಪೊೞ್ತಿಂಗೆ–ಆ ಹೊತ್ತಿಗೆ ವರಿಸು–ಬರಿಸು ; ಕೞುಪಲ್–ಕಳುಹಿಸಿಕೊಡಲು ;

೭೩. ಮಱುದಿವಸಂ–ಮಾರನೆಯ ದಿನ, ಲತಾಲಲಿತೆ–ಲತೆಯಂತೆ ಕೋಮಲವಾದ ದ್ರೌಪದಿ, ಕೀಚಕನಲ್ಲಿಗೆ–ಕೀಚಕನ ಬಳಿಗೆ, ಕಾಮನೊಂದು ಕೈಸೆಱೆಯೆನಿಪ–ಮನ್ಮಥನ ಒಂದು ಬಂದಿಯೆನಿಸುವ, ಅಂಗರಾಗಮಂ–ಲೇಪನವನ್ನು, ಇಳೇಶ್ವರವಲ್ಲಭೆ–ವಿರಾಟನ ರಾಣಿ ಸುದೇಷ್ಣೆ, ಅಟ್ಟಲ್–ಕಳಿಸಿಕೊಡಲು, ಉಯ್ದೊಡೆ–ದ್ರೌಪದಿ ತೆಗೆದುಕೊಂಡು ಹೋದರೆ, ಆನ್ ಅಱಿಯದೆ–ನಾನು ತಿಳಿಯದೆ, ನಿನ್ನೆ–ನಿನ್ನಿನ ದಿನ, ನೋಯಿಸಿದೆಂ–ನೋವುಂಟುಮಾಡಿದೆನು, ಇಂದು–ಈ ದಿನ, ಎನಗೆ–ನನಗೆ, ಎಂಬುದಂ–ಹೇಳುವುದನ್ನು, ಎಂಬುದು–ಹೇಳುವುದು, ಎಂದು, ಕೀಚಕ, ಕಾಲ್ಗೆಱಗಿದೊಡೆ–ಕಾಲಿಗೆ ಬಿದ್ದರೆ, ಒಳ್ಳಿತಾಗೆ–ಒಳ್ಳೆಯದಾಗಲು, ನಿನಗೆ, ಇನಿತೊಂದು–ಇಷ್ಟೊಂದು, ಒಲವು–ಪ್ರೀತಿ, ಉಳ್ಳೊಡೆ–ಇರುವ ಪಕ್ಷದಲ್ಲಿ, ಒಲ್ಲೆನೇ–ನಾನು ಒಪ್ಪೆನೇ? ಒಪ್ಪುತ್ತೇನೆ ಎಂದು ಭಾವ.

**ವಚನ :** ಕುಱುಪುವೇೞ್ದು–ಗುರುತುಹೇಳಿ, ಸಂಕೇತಮಾಡಿ ; ತದ್ವೃತ್ತಕಮಂ–ಆ ಸಮಾಚಾರವನ್ನು; ಕಲಿಗಂಟಿಕ್ಕಿ-ವೀರಕಾಸೆಯುಗಂಟನ್ನು ಹಾಕಿ ; ಗಂಡುಡೆಯುಮಂ-

ಗಂಡಸಿನ ಉಡುಪನ್ನೂ; ಮೇಲುದಂ–ಮೇಲು ಹೊದಿಕೆಯನ್ನು; ಗುಣಣೆಯು–ನೃತ್ಯ ಶಾಲೆಯ, ನಾಟಕಶಾಲೆಯ. "ಮನವೊಲ್ದು ತನ್ನ ಗುಣಣೆಯ ಮನೆಯಂ ಗಜಗಮನೆ ಪೊಕ್ಕು" ಎಂದು ಶಾಂತಿನಾಥನ ಪ್ರಯೋಗ. ಗುಣಣೆ<ಸಂ. ಗುಣನೀ, ಗುಣನಿಕಾ–ನೃತ್ಯ, ನಾಟ್ಯ.

**೨೪.** ಸಿಂಗಬಲಸೆಂಬ-ಸಿಂಹಬಲ(=ಕೀಚಕ ಸೇನ್ಯದ, ಸಿಂಗಮಂ-ಸಿಂಹವನ್ನು, ಅಸಿಧೇನು ಕಿರಣಕೇಸರಮಾಲಾಸಂಗತಮಂ–ಕಠಾರಿಯ ಕಿರಣಗಳೆಂಬ ಕೇಸರಗಳ ಮಾಲೆಯಿಂದ ಕೂಡಿರುವುದನ್ನು, ಅಡಸಿ–ಹಿಡಿದು, ನುಂಗಲ್–ನುಂಗುವುದಕ್ಕೆ, ಸಂಗತಬಲಂ–ಶಕ್ತಿಯನ್ನುಳ್ಳ ಭೀಮನು, ಒಂದು, ಶರಭಮಿರ್ಪಂತೆ–ಶರಭವೆಂಬ ಮೃಗವಿರುವಹಾಗೆ, ಇರ್ದಂ–ಇದ್ದನು.

**ವಚನ** : ಪಾಣ್ಬಂ–ಜಾರನು.

**೨೫.** ಅಚ್ಚಿಗದಿಂದೆ – ವ್ಯಥೆಯಿಂದ, ಅಬಲ್ದು–ದುಃಖಿಸಿ, ಇನಂ–ಸೂರ್ಯನು, ಅಡಂಗದ–ಮುಳುಗದ, ಬೇಸಜಿಯೊಳ್–ಬೇಸರದಲ್ಲಿ, ಅಂತೆ–ಹಾಗೆಯೇ, ನೀರೊಳಂ–ನೀರಲ್ಲಿಯೂ, ಕಿಚ್ಚಿನೊಳಂ–ಉರಿಯಲ್ಲೂ, ಪೊರಳ್ದು–ಹೊರಳಾಡಿ, ಪಗಲ್–ಹಗಲು, ಅಂದು–ಆಗ, ಇರುಳಾದೊಡೆ–ರಾತ್ರಿಯಾದರೆ, ರಾಜ್ಯಮಾದವೊಲ್–ರಾಜ್ಯ ಬಂದ ಹಾಗೆ, ಪೆರ್ಚಿ–ಹೆಚ್ಚಿ, ಮನಕ್ಕೆ–ಮನಸ್ಸಿಗೆ, ಬಿಚ್ಚತಿಕೆವಂದಿರೆ–ವಿಸ್ತರತೆಯುಂಟಾಗಿರಲು, ನಾಟಕ ಶಾಲೆವೊಕ್ಕು–ನೃತ್ಯಶಾಲೆಯನ್ನು ಹೊಕ್ಕು, ವಿದ್ಯುಚ್ಚಪಳಂ–ಮಿಂಚಿನಂತೆ ಚಪಲನಾದ ಕೀಚಕನು, ಮನೋಜಪರಿತಾಪದಿಂ–ಕಾಮ ಸಂತಾಪದಿಂದ, ಭೀಮನಂ–ಭೀಮನನ್ನು, ಓಸಳೆಗೆತ್ತು–ಪ್ರಿಯೆಯೆಂದೇ ಭಾವಿಸಿ,

**೨೬.** ನುಡಿಯುದೆ–ಮಾತಾಡದೆ, ಕೆಮ್ಮನಿರ್ಪ–ಸುಮ್ಮನಿರುವ, ಇರವು–ಸ್ಥಿತಿ, ಇದು, ಆವುದು ಕಾರಣಂ–ಯಾವ ಕಾರಣದಿಂದ; ಈ ಮೊಗಂಗುಡದ–ಈ ಮುಖವನ್ನು ಕೊಡದ, ತೋರಿಸದ, ಇರವು–ಇರುವಿಕೆ, ಆವುದು–ಯಾವುದು; ಇಂತು–ಹೀಗೆ, ಮಾನಸರ್–ಮನುಷ್ಯರು, ಕಣ್ಬಡಿಗರಪ್ಪರೆ–ಮೋಸಗಾರರಾಗುತ್ತಾರೆಯೆ? ಅಪ್ಪರ್–ಆಗುವರು, ಎಂದು, ಮೆಚ್ಚಿಡೆ ನುಡಿದು–ಗಿಲೀಟು ಮಾತಾಡಿ, ಎಯ್ದೆವಂದು–ಹತ್ತಿರ ಬಂದು, ಮುಸುಕಂ ತೆಗೆದಾಗಡೆ–ಮುಸುಕನ್ನು ತೆಗೆದಾಗಲೇ, ಬಲ್ಪಡಿಗಂ–ಬಲು ದಾಂಡಿಗನಾದ ಭೀಮನು, ಮೇಲೆವಾಯ್ದು–ಮೇಲೆ ನುಗ್ಗಿ, ಬಲ್ಪಡಿಗನಂ–ಬಲು ದಾಂಡಿಗನಾದ ಕೀಚಕನನ್ನು, ಅಮುಂಕಿ – ಅಮುಕಿ, ಪಿಡಿದು – ಹಿಡಿದುಕೊಂಡು, ಒರ್ಮೆಯೆ–ಒಂದೇ ಸಲಕ್ಕೆ, ಮಲ್ಲಯುದ್ಧದೊಳ್–ಮಲ್ಲಗಾಳಗದಲ್ಲಿ,

**ವಚನ :** ಪೋರ್ದು – ಹೋರಾಡಿ, ಮಲ್ಲಾಮಲ್ಲಿಯಾಗೆ – ದ್ವಂದ್ವಯುದ್ಧವಾಗಲು, ಪಲವುಂ ಗಾಯಂಗಳೊಳ್-ಹಲವು ತೆರನಾದ ಪಟ್ಟುಗಳಲ್ಲಿ; ಆಯಂಬಟ್ಟದೆ-ಶಕ್ತಿಗುಂದದೆ, ಸಂತರ್ಪಿನಂ–ಸಲ್ಲರ್ಪಿನಂ, ಸಲ್ಲುತ್ತಿರಲು; ಬಳಿಯ ಪೇಜಂ–ಬಳಿಯ ಹೇರನ್ನು; ಅಗುರ್ವು–ಭಯ; ಪರ್ವೆ–ಹಬ್ಬಲು; ಗುಣಣೆಯ ಕಂಭಂಗಳೊಳಂ–ನೃತ್ಯ ಶಾಲೆಯ ಕಂಭಗಳಲ್ಲಿಯೂ; ಕೇರ್ಗಳೊಳಂ–ಗೋಡೆಗಳಲ್ಲಿಯೂ; ಆಸ್ಫೋಟಿಸಿ–ಸಿಡಿಯುವಂತೆ ಮಾಡಿ; ತಾಟಿಸಿದಾಗಳ್–ಸಂಘಟ್ಟಿಸಿದಾಗ.

೭೭. ಬಿಸುನೆತ್ತರ್–ಬಿಸಿರಕ್ತ, ನೆಣಂ–ಕೊಬ್ಬು, ಅಡಗು–ಮಾಂಸ, ಎಲ್ವು–ಎಲುಬು, ಸಮಸ್ತಂ–ಎಲ್ಲವೂ, ಸುರಿಯೆ–ಸುರಿಯಲು, ಕೈಗೆ–ಕೈಯಲ್ಲಿ, ತೊವಲುಳಿಯಲ್–ತೊಗಲು ಮಾತ್ರ ಉಳಿಯಲು, ಕೀಚಕನಾ–ಕೀಚಕನ, ತನು–ದೇಹವು, ತೀವಿದ – ತುಂಬಿದ, ಗುಳ್ಳಿಯ – ಉಬ್ಬುವಿಕೆಯುಳ್ಳ, ಪಸುಂಬೆಯಂ – ಹಸಿಬೆ ಚೀಲವನ್ನು, ಸೋರ್ಚಿದಂತೆ–ಸೋರಿಹೋಗವ ಹಾಗೆ ಮಾಡಿದಂತೆ, ಅಗುರ್ವಿಸಿದುದು–ಭಯಂಕರವಾಯಿತು.

೭೮. ಆಂ-ನಾನು, ಜಗದೊಳ್-ಲೋಕದಲ್ಲಿ, ಬಲಸ್ಥನೆಂ-ಬಲಶಾಲಿಯಾಗಿದ್ದೇನೆ, ಎನಗೆ–ನನಗೆ, ಇದಿರ್ಚುವರಾರ್–ಪ್ರತಿಭಟಿಸುವರು ಯಾರು, ಎಂದು, ಸೋಲದಿಂ–ಮೋಹದಿಂದ, ಕಂಜದಳಾಕ್ಷಿಯಂ–ತಾವರೆಕಣ್ಣೆಯನ್ನು, ದ್ರೌಪದಿಯನ್ನು, ಖಳಂ–ದುಷ್ಟನು, ಪಿಡಿದಂ–ಹಿಡಿದನು, ಎಂಬ, ಅೞಲಿಂದಂ–ದುಃಖದಿಂದ, ಅತ್ತಂ ಇತ್ತಂ–ಅತ್ತಲೂ ಇತ್ತಲೂ, ಜವಂ - ಯಮನು, ಒಕ್ಕಲಿಕ್ಕಿದೊಡೆ – ಒಕ್ಕಣೆಮಾಡಿದರೆ, ನಾಟಕಶಾಲೆಯೊಳ್–ನೃತ್ಯಶಾಲೆಯಲ್ಲಿ, ಸೂಸಿದ–ಚೆಲ್ಲಾಡಿದ, ಖಂಡದ–ಮಾಂಸದ, ಇಂಡೆಗಳ್–ರಾಶಿಗಳು, ರಕ್ತಪುಷ್ಪಾಂಜಲಿಗೆಯ್ದ–ಕೆಂಪು ಹೂಗಳನ್ನು ಎರಚಿದ, ಮಾೞ್ಕೆವೊಲ್–ರೀತಿಯ ಹಾಗೆ, ಇರ್ದುವು–ಇದ್ದುವು.

ವಚನ: ಸಂಧಿ ಸಂಧಿಯೊಳ್–ಕೀಲುಕೀಲುಗಳಲ್ಲಿ; ಅಶ್ರಮದೊಳೆ–ಸುಲಭವಾಗಿಯೇ; ಬಾಣಸುಗೆಯ್ದು–ಅಡಿಗೆಯನ್ನುಮಾಡಿ;

೭೯. ಗಂಧರ್ವ ವನಿತೆಯೆಂ – ನಾನು ಗಂಧರ್ವನ ಹೆಂಡತಿಯಾಗಿದ್ದೇನೆ, ನಿರ್ಬಂಧಂ ಬೇಡ–ಒತ್ತಾಯ ಬೇಡ, ಆಳಿಪೆ–ಆಸೆಮಾಡಲು, ಸಾವೆಯೆನೆ–ಸಾಯುವೆ ಎನ್ನಲು, ಮಾಣದೆ–ಬಿಡದೆ, ಕಾಮಾಂಧಂ–ಕಾಮದಿಂದ ಕುರುಡನಾದ, ಕೀಚಕಂ–ಕೀಚಕನು, ಆಟಿಸಿ–ಬಯಸಿ, ಎನಗೆ–ನನಗೆ, ದೂಱಪ್ಪಿನೆಗಂ–ಅಪವಾದ ಉಂಟಾಗುತ್ತಿರಲು, ಗಂಧರ್ವರಿಂ–ಗಂಧರ್ವರಿಂದ; ಅೞಿದಂ–ನಾಶವಾದನು.

ವಚನ: ಗಗ್ಗರಿಗೊಳ್ವ ಸರಮಂ – ದುಃಖದ ಅಸ್ಪಷ್ಟತೆಯಿಂದ ಕೂಡಿದ ಧ್ವನಿಯನ್ನು; ಡಾಮರ ಡಾಕಿನಿಯಿಂದೆ–ಕ್ಷೋಭೆಗೊಳಿಸುವ ಪಿಶಾಚಿಯಿಂದ; ಸಂಸ್ಕರಿಸಲ್ವೇೞ್ಕುಮೆಂದು–ದಹನಾದಿ ಕ್ರಿಯೆಗಳನ್ನು ಮಾಡಬೇಕೆಂದು; ಕಳಕಳಮಂ–ಗದ್ದಲವನ್ನು; ರೂಪುಗರೆದು-ರೂಪನ್ನು ಮರೆಸಿಕೊಂಡು; ಆಸ್ಫಾಲನಂಗೆಯ್ದು-ಅಪ್ಪಳಿಸಿತಟ್ಟಿ; ಗಗ್ಗರಿಕೆ < ಸಂ. ಗದ್ಗದಿಕಾ–ಅವ್ಯಕ್ತಕಥನ.

೮೦. ನಿಮಗಂ–ನಿಮಗೆ ಕೂಡ, ವನಿತಾ ಹೇತುವೆ–ಸ್ತ್ರೀ ನಿಮಿತ್ತವೇ, ಕೇತುವಾಯ್ತು–ಕೇತುಗ್ರಹವಾಯಿತು; ಗಾಂಧರ್ವರಿಂದೆ–ಗಂಧರ್ವರಿಂದ, ಇಂದು–ಈದಿನ, ನಿಮ್ಮ ನಿಷೇಕಂ–ನಿಮ್ಮ ಪ್ರಸ್ತದ ಒಸಗೆಯು ಎಂದರೆ ನಿಮಗೆ ತಕ್ಕಶಾಸ್ತಿಯು ಅಥವಾ ಶಿಕ್ಷೆಯು, ನೆಱೆದತ್ತು-ಪೂರ್ಣವಾಯಿತು; ಸತ್ತಿರ್–ಸತ್ತಿರಿ, ಎನುತುಂ–ಎನ್ನುತ್ತ, ಪೊಕ್ಕು–ಹೊಕ್ಕು, ನುಗ್ಗಿ, ಕಾಳಾಂಬುದ ಧ್ವನಿಯಿಂ–ಪ್ರಳಯಕಾಲದ ಮೋಡಗಳ ಧ್ವನಿಯಿಂದ, ಆರ್ದು–ಗರ್ಜಿಸಿ, ಬಾೞೆಯ ಚೆಲ್ವನಪ್ಪ ಬನಮಂ–ಬಾಳೆಯ ಸೊಗಸಾದ

ತೋಟವನ್ನು, ಕಾಡಾನೆ ಪೊಯ್ದಂತೆ–ಕಾಡಾನೆ ಧ್ವಂಸಮಾಡಿದ ಹಾಗೆ, ಪೊಯ್ದು–ಹೊಡೆದು, ಇನಿಸುಂ-ಸ್ವಲ್ಪವೂ, ಮಾಣದೆ-ಬಿಡದೆ, ನೀಚಕೀಚಕನಿಕಾಯ ಧ್ವಂಸಮಂ-ನೀಚರಾದ ಕೀಚಕರ ಸಮೂಹದ ವಿನಾಶವನ್ನು, ಮಾಡಿದಂ – ಮಾಡಿದನು, ನಿಸೇಕಮಾಡು ಎಂಬುದು ಒಂದು ನುಡಿಗಟ್ಟು ; ಹೊಡೆ, ಶಾಸ್ತಿಮಾಡು ಎಂದರ್ಥ.

**ವಚನ :** ಆಳವಿಗಱಿಯೆ–ಆಳತೆಮಿೞಿ, ಕೊರ್ವಿದ-ಕೊಬ್ಬಿದ ; ಕೋಪ ದವ ದಹನ ಜ್ವಾಲಾಸಹಸ್ರಂಗಳಿಂ–ಕೋಪವೆಂಬ ಕಾಳ್ಕಿಚ್ಚಿನ ಸಾವಿರಾರು ಜ್ವಾಲೆಗಳಿಂದ; ಅಱ್ಕಿಮೆಟ್ಟಿದಂತೆ–ಹಾಳಾಗಿ ಸಾರಿಸಿದಂತೆ; ಪಡೆಮಾತಂ–ಸಮಾಚಾರವನ್ನು.

೮೧. ಕೀಚಕ ಬಲಂ – ಕೀಚಕರ ಸೈನ್ಯ, ಗಂಧರ್ವರಿಂದೆ – ಗಂಧರ್ವರಿಂದ, ಇಂದು–ಈದಿನ, ಪಡಲಿಟ್ಟಂತೆವೊಲಾಯ್ತು–ಚೆಲ್ಲಾಪಿಲ್ಲಿಯಾಯಿತು; ಇಂದಿರುಳ್–ಈ ರಾತ್ರಿ, ಸಂಗಡಮಿಱ್ತುವಾಯ್ತು–ಸಾಮೂಹಿಕ ಮರಣವುಂಟಾಯಿತು, ಏಂ ಗಡ–ಏನು ಅಲ್ಲವೆ? ಪೆಱವೆಣ್ಗೆ–ಪರಸ್ತ್ರೀಗೆ, ಒಲ್ದಂಗೆ–ಒಲಿದವನಿಗೆ, ಏನಾಗದು–ಏನು ತಾನೇ ಆಗುವುದಿಲ್ಲ; ಇಂದು- ಈದಿನ, ಮತ್ಸ್ಯನೊಂದು ಬಲಗೆಯ್-ವಿರಾಟನ ಬಲಗೈಯೊಂದು, ಉಡಿದತ್ತಾಗದೆ–ಮುರಿದುಹೊಯಿತಲ್ಲವೆ ; ಎಂದು, ಅಕ್ಕಟಾ–ಅಯ್ಯೊ, ಎಂಬುದು–ಎಂಬುದನ್ನು ಕೂಡ, ನುಡಿಯಲ್ಕೆ-ಹೇಳುವುದಕ್ಕೆ; ಆರ್ತರುಂ-ಸಮರ್ಥರಾದವರು ಕೂಡ, ಇಲ್ಲ, ಪಾರದರದೊಳ್-ಹಾದರದಲ್ಲಿ, ಸತ್ತಂಗೆ–ಸತ್ತವನಿಗಾಗಿ, ಅಱಲ್ವನ್ನರ್-ದುಃಖಿಸು ವಂಥವರು, ಆರ್–ಯಾರು? ಸಂಗಡಮಿಱ್ತು <ಸಂ. ಸಂಘಾತ ಮೃತ್ಯು, ಪಾರದರ– <ಸಂ. ಪಾರದಾರ.

೮೨. ರಾವಣನುಂ–ರಾವಣನು ಕೂಡ, ಸೀತಾದೇವಿಗೆ, ಸೋಲ್ತು–ಮೋಹಿಸಿ, ಅದಱ ಫಲಮಂ–ಅದರ ಲಾಭವನ್ನು, ಎಯ್ದಿದಂಗಡ–ಪಡೆದನಲ್ಲವೆ? ಇವಂ–ಈ ಕೀಚಕ, ಆ ರಾವಣನಿಂ–ಆ ರಾವಣನಿಗಿಂತ, ಪಿರಿಯನೆ–ದೊಡ್ಡವನೆ? ಪೇಳ್-ಹೇಳು ; ಶುಚಿಯಲ್ಲದವನ–ಶೌಚಗುಣವಿಲ್ಲದವನ, ಗಂಡುಂ–ಪೌರುಷವೂ, ತೊಂಡುಂ–ತುಂಟ ತನವೂ, ಏವುದೋ–ಯಾವುದೋ?

**ವಚನ :** ಗುಜುಗುಜುಗೊಂಡು–ಪಿಸುಪಿಸು ಮಾತಾಡುತ್ತ ; ಪಡೆಮಾತನೆ–ಸಮಾಚಾರವನ್ನೇ; ಪೇಡಿ ಸತ್ತಂತೆ-ಹೇಡಿಸತ್ತಹಾಗೆ ; ಮೂಗೞ್ತಿಯನೞ್ತು-ಸದ್ದಿಲ್ಲದ ಅಳುವನ್ನು ಅತ್ತು ; ಕೆಮ್ಮನಿರ್ದಳ್–ಸುಮ್ಮನಿದ್ದಳು, ಗೂಢ ಪ್ರಣಿಧಿಗಳ್–ಗೂಢಚಾರರು ; ಜಲಕ್ಕನಱಿದು–ವಿಶದವಾಗಿ ತಿಳಿದು ; ನಾಗಪುರಕ್ಕೆವಂದು–ಹಸ್ತಿನಾವತಿಗೆ ಬಂದು.

೮೩. ಇಲ್ಲಿಂದ ಗೋಗ್ರಹಣ ಪ್ರಸಂಗ : ಗುಡಿಗಂ-ಧ್ವಜಾರೋಹಣಕ್ಕೂ, ಬದ್ದವಣಕ್ಕಂ–ಮಂಗಳವಾದ್ಯಗಳ ಬಜಾವಣೆಗೂ,–ಅಪ್ಪ–ತಕ್ಕುದಾಗಿರುವ, ಪಡೆ ಮಾತು–ಸುದ್ದಿ ! ಏ ಮಾತ್ರ–ಏನು ಸುದ್ದಿ ! ಇದಂ–ಕೇಳ್ದೊಡೆ–ಇದನ್ನು ಕೇಳಿದರೆ, ಈಗಳೆ–ಈಗಲೇ, ಮೆಚ್ಚೀಯಲೆವೇಱ್ಪುದು–ಬಹುಮಾನವನ್ನು ಕೊಡಲೇ ಬೇಕಾಗು ತ್ತದೆ; ನಿಮ್ಮಡಿಯೊಳ್–ನಿಮ್ಮ ಪಾದಗಳಲ್ಲಿ ಎಯ್ದೆ–ಚೆನ್ನಾಗಿ, ಪರಮದ್ರೋಹರ್ಕ

ಳಾಗಿರ್ದು–ಪರಮದ್ರೋಹಿಗಳಾಗಿದ್ದು, ಪೋಗದೆ–ಹೋಗದೆ; ಕಾಡುತಿರ್ದ–ಹಿಂಸಿಸು ತ್ತಿದ್ದ, ಸುಭಟರ್ಕಳ್–ಶೂರರಾದ, ನೂರ್ವರುಂ–ನೂರು ಜನರೂ, ಕೀಚಕರ್– ಕೀಚಕನ ತಮ್ಮಂದಿರು, ದೇವರಪೊಂದು ಪುಣ್ಯ ಬಲದಿಂದೆ-ಪ್ರಭುಗಳ ಒಂದು ಪುಣ್ಯದ ಬಲದಿಂದ, ಗಂಧರ್ವಯುದ್ಧಾಗ್ರದೊಳ್–ಗಂಧರ್ವರೊಡನೆ ಆದ ಯುದ್ಧಮುಖದಲ್ಲಿ, ಮಡಿದರ್–ಸತ್ತುಹೋದರು.

**ವಚನ :** ಮಂಡಲಂ–ದೇಶ ; ಗೋಮಂಡಲದಂತೆ–ಹಸುವಿನ ಹಿಂಡಿನ ಹಾಗೆ; ಹೇಳಾಸಾಧ್ಯಮಾಗಿ–ಆಟದಲ್ಲಿ ಜಯಿಸುವಷ್ಟು ಸುಲಭಸಾಧ್ಯವಾಗಿ; ಕೈಸಾರ್ಗುಂ– ಕೈವಶವಾಗುತ್ತದೆ.

**೮೪.** ಇದು–ಈ ಸುದ್ದಿ, ದಲ್-ದಿಟವಾಗಿಯೂ, ಚೋದ್ಯಂ–ಆಶ್ಚರ್ಯಕರ, ಅತರ್ಕ್ಯಂ–ತರ್ಕಿಸಲಾಗದ್ದು, ಅದ್ಭುತಂ–ಅದ್ಭುತವಾದದ್ದು, ಅಸಂಭಾವ್ಯಂ–ಎಂದೂ ನಡೆಯಲಾಗದ್ದು. ವಿಚಾರಕ್ಕೆ ಬಾರದುದು–ವಿಚಾರಮಾಡುವುದಕ್ಕೆ ಆಗದಿರುವುದು, ಎಂತೆಂದೊಡೆ–ಹೇಗೆಂದರೆ, ಸಂದ ಸಿಂಹಬಲನಂ-ಪ್ರಸಿದ್ಧನಾದ ಕೀಚಕನನ್ನು, ಭೀಮನಲ್ಲ ದವರ್–ಭೀಮಸೇನನಲ್ಲದವರು, ಕೊಲ್ವನ್ನರ್–ಕೊಲ್ಲುವಂಥವರು, ಆರ್–ಯಾರು ? ಕೀಚಕ ಭೀಮ ಶಲ್ಯ ಬಲದೇವರ್ಕಳ್–ಕೀಚಕ ಭೀಮ ಶಲ್ಯ ಬಲರಾಮರು, ತೋಳ್ವಲ ದೊಳ್ – ಬಾಹುಬಲದಲ್ಲಿ, ಸಮಾನರ್ಕಳಪ್ಪುದಱಿಂ – ಸಮಾನರಾಗಿರುವುದರಿಂದ ಈ ವಿಕ್ರಾಂತಮುಂ – ಈ ಪರಾಕ್ರಮವೂ, ಗರ್ವಮುಂ–ಗರ್ವವೂ, ಪೆಱಂಗಂ–ಬೇರೆ ಯವನಿಗೆ ಕೂಡ, ಅರಿದು–ಅಸಾಧ್ಯ, ಅಪರೂಪ.

**ವಚನ :** ಆಗಲೆವೇಳ್ಕುಂ-ಆಗಲೇಬೇಕು.

**೮೫.** ಪರಿಭವದ–ಅಪಮಾನದ, ಒಂದು ತುತ್ತತುದಿ–ಒಂದು ಪರಾಕಾಷ್ಠತೆ, ಕೃಷ್ಣೆಯ – ದ್ರೌಪದಿಯ, ಬನ್ನದೊಳಾಗೆ – ಕೇಡಿನಲ್ಲುಂಟಾಗಲು ; ಜೂದಿನೊಳ್– ಜೂಜಿನಲ್ಲಿ, ಪೊಱಸಬೀವಂತೆ–ಪಾರಿವಾಳವು ನಾಶಮಾಡುವಂತೆ, ತಮ್ಮರಸುಗೆಟ್ಟು– ತಮ್ಮ ದೊರೆತನ ಹಾಳಾಗಿ, ಕಟಿಲ್ದು–ಶಿಥಿಲರಾಗಿ, ಎರ್ದೆಗೆಟ್ಟು–ಧೈರ್ಯನೀಗಿ ಹೋಗಿ; ಅರಣ್ಯದೊಳ್ – ಕಾಡಿನಲ್ಲಿ, ತಿರಿತರುತಿರ್ದ – ಅಲೆದಾಡುತ್ತಿದ್ದ, ಕಣ್ಬಡಿಗರ್– ಮೋಸಗಾರರು. ಇನ್–ಇನ್ನು, ಮಗುಟ್ದುಂ-ಮತ್ತೆಯೂ ಬಿಱುತೋಡಿ–ಹೆದರಿ ಓಡಿ ಹೋಗಿ, ಬೇಡರೊಳ್–ಬೇಡರಲ್ಲಿ, ನೆರೆದಿರಲಲ್ಲದೆ–ಕೂಡಿ ಇರಬೇಕಲ್ಲದೆ, ಒಡ್ಡಯಿಸಿ– ಒಟ್ಟಾಗಿ, ರಾಜ್ಯದೊಳ್ – ತಮ್ಮ ರಾಜ್ಯದಲ್ಲಿ, ನೆರೆಯಲ್ಕೆ – ಸೇರುವುದಕ್ಕೆ, ಏಂ ತೀರ್ಗುಮೋ-ಏನು ತೀರುತ್ತದೋ, ಸಾಧ್ಯವಾಗುತ್ತದೋ? ಈ ಪದ್ಯದಲ್ಲಿ ರೇಫಱಕಾರಗಳ ಮಿಶ್ರ ಪ್ರಾಸವಿದೆ. ಪಾರಿವಾಳವು ವಿನಾಶಕಾರಕಪಕ್ಷಿ ಎಂಬ ನಂಬಿಕೆ ಇತ್ತು; “ಭರತಾನ್ವಯರಾಜಭವನ ರಾಜಕಪೋತಂ” ಎಂಬ ರನ್ನನ ಪ್ರಯೋಗವನ್ನು ನೋಡಿ.

**ವಚನ :** ಅಮರಾಪಗಾನಂದನಂ–ದೇವನದಿಯಾದ ಗಂಗೆಯ ಮಗ, ಭೀಷ್ಮ.

**೮೬.** ರಸೆಯೊಳ್-ಭೂಮಿಯಲ್ಲಿ, ಕಾಲಾಗ್ನಿರುದ್ರಂ-ಲಯಕಾಲದ ಅಗ್ನಿಯೆಂಬ

ರುದ್ರನು, ಜಲಶಯನದೊಳ್ – ನೀರಹಾಸಿಗೆಯಲ್ಲಿ, ಅಂಭೋಜನಾಭಂ – ವಿಷ್ಣುವು, ಪೊದಳ್ದ–ವ್ಯಾಪಿಸಿದ, ಆಗಸದಿಂ–ಆಕಾಶದಿಂದ, ಸುತ್ತಿರ್ದ–ಬಳಸಿರುವ, ಅಜಾಂಡೋದರದೊಳ್ – ಬ್ರಹ್ಮಾಂಡದ ಗರ್ಭದಲ್ಲಿ, ಅಜಂ – ಬ್ರಹ್ಮನು, ಅಡಂಗಿರ್ಪವೊಲ್–ಅಡಗಿರುವಹಾಗೆ, ಪಾಂಡವರ್ – ಪಾಂಡವರು, ಕಾನನದೊಳ್ – ಕಾಡಿನಲ್ಲಿ, ಕಾರಣಕ್ಕೊಂದು–ಒಂದು ಕಾರಣಕ್ಕಾಗಿ, ಒಸೆದು–ಒಲಿದು. ಇರ್ದರ್–ಇದ್ದರು, ಅವರ್–ಅವರು, ಇರದೆ–ಕಾಡಿನಲ್ಲಿರದೆ, ನನ್ನಿಯಂ–ಸತ್ಯವನ್ನು, ತಪ್ಪೆಯುಂ–ತಪ್ಪಲೂ, ಸಪ್ತಸಮುದ್ರಂ–ಏಳು ಕಡಲುಗಳು, ಮೇರೆಯಂ–ಎಲ್ಲೆಯನ್ನು, ತಪ್ಪೆಯುಂ–ತಪ್ಪಲೂ, ರಾಜರಾಜಾ–ದುರ್ಯೋಧನನೇ, ಬಿಗುರ್ತು–ಬೆದರಿಸಿ. ಆಂಪವರ್–ಎದುರಿಸುವವರು, ಒಳರೇ–ಇರುವರೇ ?

೮೭. ದ್ರೋಣನ ಮಾತು : ಕೃತಶಾಸ್ತ್ರರ್ – ಕಲಿತಶಾಸ್ತ್ರವನ್ನುಳ್ಳವರು, ಧೃತಶಸ್ತ್ರರ್ – ಆಯುಧಗಳನ್ನು ಧರಿಸಿದವರು, ಅಪ್ರತಿಹತಪ್ರಾಗಲ್ಭ್ಯರ್ – ಪ್ರತಿಭಟನೆಯಿಲ್ಲದ ಪ್ರೌಢಿಮೆಯುಳ್ಳವರು ಆದ, ಪೃಥಾಸುತರ್–ಪಾಂಡವರು, ಉದ್ಯೋಗಮನೆತ್ತಿಕೊಳ್ವ-ಕಾರ್ಯಾರಂಭವನ್ನು ಮಾಡುವ, ದಿವಸಂ–ದಿವಸವು, ಸಾರ್ಚಿತ್ತು–ಹತ್ತಿರಕ್ಕೆ ಬಂತು ; ಕಾಲಾವಧಿಸ್ಥಿತಿಯುಂ–ಕಾಲದ ಅವಧಿ ಎಂದರೆ ಹನ್ನೆರಡು ವರ್ಷಗಳ ಗಡುವಿನ ನಿಲವು ಕೂಡ, ಬಂದುದು–ಉಂಟಾಯಿತು, ಇದರ್ಕೆ–ಇದಕ್ಕೆ, ಮಾಣ್ದಿರದೆ–ನಿಂದು ಇರದೆ, ಮಂತ್ರಾವಾಸದೊಳ್–ಮಂತ್ರಾಲೋಚನೆಯ ಮನೆಯಲ್ಲಿ, ಈಗಡೆ–ಈಗಲೇ, ಮಂತ್ರನಿಶ್ಚಿತನಾಗು–ನಿಶ್ಚಿತವಾದ ಆಲೋಚನೆಯುಳ್ಳವನಾಗು ; ಕಾದಿದಲ್ಲದೆ-ಯುದ್ಧಮಾಡಿಯಲ್ಲದೆ, ಇಳೆಯಂ-ಭೂಮಿಯನ್ನು, ನೀನೆಂತುಂ–ನೀನು ಹೇಗೂ, ಏನ್ ಇತ್ತಪಯ್–ಏನುಕೊಡುತ್ತೀಯಾ ?.

೮೮. ಕರ್ಣನ ಮಾತು : ಸಾಮಮಂ–ಸಾಮೋಪಾಯವನ್ನು, ಬಗೆಯದೆ–ಆಲೋಚಿಸದೆ, ಭೇದಮಂ – ಭೇದೋಪಾಯವನ್ನು, ಬಿಸುಟು – ಬಿಟ್ಟು, ಉದಗ್ರದಾನಮಂ–ಶ್ರೇಷ್ಠವಾದ ದಾನೋಪಾಯವನ್ನು, ಒಲ್ಲದೆ–ಒಪ್ಪದೆ, ದಂಡಮಂ–ದಂಡೋಪಾಯವನ್ನು, ನೆಗಳದೆ–ಮಾಡದೆ, ನಿನಗೆ ಮಾಡಿದ–ನಿನಗೆ ದ್ರೋಹ ಮಾಡಿದ, ಅಕೃತ್ಯರಂ–ಅಕೃತಜ್ಞರನ್ನು, ಅಂತು–ಹಾಗೆ, ಮಾಣ್ಬುದು–ಬಿಡುವುದು, ಏ ಬಗೆ–ಏನು ಆಲೋಚನೆ? ಪಗೆ–ದ್ವೇಷವು, ನೀಗೆಯುಂ–ತೊಲಗಲೂ, ಮುಳಿಸು ಪೋಗೆಯುಂ–ಕೋಪವು ಪರಿಹಾರವಾಗಲೂ, ಆಯತಿ–ಪರಾಕ್ರಮವು, ಪೆರ್ಚೆಯುಂ–ಹೆಚ್ಚಲೂ, ಜಗಂ–ಲೋಕ, ಪೊಗಳೆಯುಂ–ಹೊಗಳಲೂ, ಆಂತರಾತಿನೃಪರಂ–ಎದುರಾದ ಶತ್ರುರಾಜರನ್ನು, ಅಹೀಂದ್ರಕೇತನಾ–ದುರ್ಯೋಧನನೇ, ತಪೆ–ನಾಶವಾಗುವ ಹಾಗೆ, ಕೊಲ್ವುದು–ಕೊಲ್ಲುವುದು.

ವಚನ : ಮನದೊಳಾದ ಕಜ್ಜಮಂ–ಮನಸಿನಲ್ಲಿ ಆಲೋಚಿಸಿದ ಕಾರ್ಯವನ್ನು

೮೯. ಇರ್ದೆಡೆಯಂ–ಪಾಂಡವರಿದ್ದ ಸ್ಥಳವನ್ನು, ಅಱಿಯಲವೇೞ್ಪುದು–

ತಿಳಿಯಲೇಬೇಕು, ಅವರಂ–ಅವರನ್ನು, ಇರ್ದೆಡೆಯಿಂ ತೆಗೆದು–ಇದ್ದ ಸ್ಥಳದಿಂದ ತೆಗೆದು, ಆಜಿರಂಗದೊಳ್–ಯುದ್ಧರಂಗದಲ್ಲಿ, ನಿಱಿಸಲೆವೇೞ್ಪುದು–ಸ್ಥಾಪಿಸಲೇಬೇಕು, ಅವರ್–ಅವರು, ಇರ್ಪೆಡೆಯುಂ–ಇರುವ ಸ್ಥಳವೂ, ವಿರಾಟನಿರ್ಪ–ವಿರಾಟರಾಜನಿರುವ, ಆಱುಕೆಯ ಪಟ್ಟಣಂ–ಪ್ರಸಿದ್ಧವಾದ ಪಟ್ಟಣ; ನಮಗೆ, ಇದೇ ಪಿರಿದಪ್ಪುದು–ಏನು ದೊಡ್ಡದಾಗುತ್ತದೆ; ನಾಂ–ನಾವು, ತೞ್ಪದೆ–ತಡಮಾಡದೆ, ಎಯ್ದಿ–ಹೋಗಿ, ತುಱುವನೆ–ಗೋವುಗಳನ್ನೇ, ಕೊಳ್ವಂ–ಹಿಡಿಯೋಣ; ಅಂತು–ಹಾಗೆ, ತುಱುಗೊಂಡೊಡೆ–ಗೋವುಗಳನ್ನು ಆಕ್ರಮಿಸಿಕೊಂಡರೆ, ಪಾಂಡವರ್–ಪಾಂಡವರು, ಇರ್ಪ–ಸುಮ್ಮನಿರುವ, ಗಂಡರೇ–ಶೂರರೇ?

**ವಚನ:** ಪಿರಿದುಂ ಆಗ್ರಹಂ ಬೆರಸು–ಹಿರಿದಾದ ಹಠದೊಡನೆ ಕೂಡಿ; ದಾಯಿಗಂ–ದಾಯಾದಿ; ವೇೞ್ಪು–ಪೇೞ್ಪು, ನಿಯಮಿಸಿ; ತುಱುವಂ ಕೊಳಿಸಿದಾಗಳ್–ಗೋವುಗಳನ್ನು ಹಿಡಿಸಿದಾಗ

೯೦. ವಿರಾಟಂ – ವಿರಾಟರಾಜನು, ಆತ್ಮತನೂಜನಂ–ತನ್ನ ಮಗನಾದ, ಉತ್ತರನಂ–ಉತ್ತರನನ್ನು, ಕರೆದು, ಆ ಪೊಱಲ್ಗೆ–ಆ ನಗರಕ್ಕೆ, ಕಾಪಿರಿಸಿ–ರಕ್ಷಣೆಯಾಗಿಟ್ಟು, ಧರಾತಳಂ–ಭೂತಲವೇ, ತಳರ್ವವೊಲ್–ನಡೆಯುವಂತೆ, ನಡೆಪಾಗಳೆ–ದಂಡೆತ್ತಿ ನಡೆಪಾಗಲೇ, ಪಾಂಡುಪುತ್ರರಯ್ವರುಂ–ಐದುಜನ ಪಾಂಡವರೂ, ಇದು–ಈ ಗೋಗ್ರಹಣ, ನಮ್ಮನಾರಯಲೆ–ನಮ್ಮನ್ನು ಕಂಡುಹಿಡಿಯಬೇಕೆಂದೇ, ವೈರಿಯ ಮಾಡಿದ–ಹಗೆ ದುರ್ಯೋಧನನು ಮಾಡಿದ, ಗೊಡ್ಡಂ–ಚೇಷ್ಟೆ, ಇಲ್ಲಿ, ಮಾಣ್ಬರಲ್–ತಡೆದಿರಲು, ಅಣಂ–ಸ್ವಲ್ಪವೂ, ಆಗ–ಆಗದು; ಪೂಣ್ದವಧಿಯುಂ–ಪ್ರತಿಜ್ಞೆಮಾಡಿದ ಗಡುವುಕೂಡ, ನೆಱೆದತ್ತು–ತುಂಬಿತು, ಕಡಂಗಿ–ಉತ್ಸಾಹಪಟ್ಟು, ಕಾದುವಂ–ಯುದ್ಧಮಾಡೋಣ.

**ವಚನ:** ಪೆಱಗಣ ಕಾಪಿಂಗೆ–ಹಿಂದಿನ ರಕ್ಷಣೆಗೆ; ಸೈನ್ಯವೆಲ್ಲ ಹೋದಮೇಲೆ ರಾಜಧಾನಿಯ ರಕ್ಷಣೆಗೆ ಹಿಂದುಳಿದ ಸೈನ್ಯ.

೯೧. ಕಡಲ–ಕಡಲಿನ, ಪೊದಳ್ದ–ವ್ಯಾಪಿಸಿದ, ಪೆರ್ದೆರೆಗಳ್–ದೊಡ್ಡ ಅಲೆಗಳು, ಎಯ್ದೆ–ಚೆನ್ನಾಗಿ, ಕುಲಾದ್ರಿಗಳೊಳ್–ಕುಲಪರ್ವತಗಳಲ್ಲಿ, ಪಳಂಚಿ–ತಾಗಿ, ತೂಳ್ದು–ಹಿನ್ನುಗ್ಗಿ, ಮರಲ್ದವೊಲ್–ಮರಳಿದಂತೆ, ಪಾಯಿಸಿದ–ಮುಂದೆ ನುಗ್ಗಿದ, ಉಗ್ರರಥಂಗಳ್–ಭಯಂಕರವಾದ ರಥಗಳು, ಕೆಡೆಯೆ–ಬೀಳಲು, ಅಱ್ಗಿ–ಹಾಳಾಗಿ, ತಳ್ತಡಿಗಿಡೆ–ಸೇರಿಕೊಂಡಿರುವ ತಳಭಾಗವು ನಾಶವಾಗಲು, ಪಾಯ್ವರಾತಿನೃಪರಂ–ನುಗ್ಗಿದ ಶತ್ರುರಾಜರನ್ನು, ತಱಿದು–ಕತ್ತರಿಸಿ, ಇರದೆ–ಬಿಡದೆ, ಆ ಸುಶರ್ಮನಂ–ಆ ಸುಶರ್ಮನನ್ನು, ಅಂತು–ಎದುರಿಸಿ, ಪಿಡಿದು–ಹಿಡಿದುಕೊಂಡು, ನೆಗೞ್ತೆಯಂ–ಕೀರ್ತಿಯನ್ನು, ಪಡೆದು–ಹೊಂದಿ, ಸಾಹಸದಿಂ–ಪ್ರತಾಪದಿಂದ, ತುಱುವಂ–ಗೋವುಗಳನ್ನು, ಮಗುೞ್ಚಿದರ್–ಹಿಂದಿರುಗಿಸಿದರು.

**ವಚನ:** ಸಮಸ್ತ ಸಾಧನಂ ಬೆರಸು–ಸಕಲ ಸೈನ್ಯಸಮೇತನಾಗಿ

**೯೨.** ಉತ್ತರ ಗೋಗ್ರಹಂ–ಉತ್ತರದಿಕ್ಕಿನ ಗೋವುಗಳನ್ನು ಹಿಡಿಯುವುದು, ಪಿರಿದುಮಾಗ್ರಹಮುಂ–ಹಿರಿದಾದ ಕೋಪವನ್ನು, ಮನದೊಳ್–ಮನಸ್ಸಿನಲ್ಲಿ, ತಗುಳ್ಚೆ–ಅಂಟುವ ಹಾಗೆ ಮಾಡಲು, ದಿಗ್ಭಿತ್ತಿವಿಭೇದಿ–ದಿಕ್ಕಿನ ಗೋಡೆಗಳನ್ನು ಭೇದಿಸುವ, ಕದನಾನಕರಾವಂ–ರಣಭೇರಿಗಳ ಶಬ್ದ, ಪೆರ್ಚೆ–ಹೆಚ್ಚಲು, ಚಾರುವೀರ ಭಟಕೋಟಿಗೆ–ಸುಂದರರಾದ ಶೂರಸೈನಿಕರನೇಕರಿಗೆ, ಅಗುರ್ವಿನ–ಭಯದ, ಉರ್ವು–ಅತಿಶಯವು, ಪರ್ವುತ್ತಿರೆ–ಹಬ್ಬುತ್ತಿರಲು, ರಾಗರಸಂ–ಸಂತೋಷದ ರಸ, ಪ್ರೊದಳ್ದು–ವ್ಯಾಪಿಸಿ, ತುಳ್ಕುತ್ತಿರೆ–ಹೊರಸೂಸುತ್ತಿರಲು, ಬಂದು, ವಿಭು–ಪ್ರಭು ದುರ್ಯೋಧನ, ವಿರಾಟನಾ–ವಿರಾಟರಾಜನ, ಗೋಕುಲಮುಂ–ತುರುಗಳ ಹಿಂಡನ್ನು, ಮುತ್ತಿ–ಆಕ್ರಮಿಸಿ, ಮೊಗೆದಂ–ತುಂಬಿಕೊಂಡನು ಎಂದರೆ ಸೆರೆಹಿಡಿದನು.

**೯೩.** ಪಸರಿಸಿ–ಹರಡಿ, ಪೊಕ್ಕು–ಹೊಕ್ಕು, ಕೂಕಿಱಿದು–ಮೇಲಕ್ಕೆ ಹಾರಿ, ಕಾದುವ–ಹೋರಾಡುವ, ಬಲ್ಲಣಿಗಳ್–ಶಕ್ತಿಯುಕ್ತವಾದ ಕಾಲಾಳುಗಳ ಸಾಲುಗಳು, ಪಳಂಚೆ–ತಾಗಲು, ಪಾಯಿಸುವ–ಮುನ್ನುಗ್ಗಿಸುವ, ದಱಿಕ್ಕೆ–ಸೈನ್ಯಕ್ಕೆ, ಅಗುರ್ವೆಸೆಯೆ–ಭಯವುಂಟಾಗಲು, ನೂಂಕಿದ–ಮುಂದೆ ತಳ್ಳಿದ, ಬಲ್ಲಣಿಗೆ–ಬಲವಾದ ಕಾಲಾಳಿನ ಸಾಲಿಗೆ, ಎತ್ತಂ–ಎಲ್ಲೆಲ್ಲಿಯೂ, ಎಯ್ದೆ–ಹೋಗುವಂತೆ, ಚೋದಿಸುವ–ಮುಂದೆ ಹಾಯಿಸುವ, ರಥಕ್ಕೆ–ರಥಗಳಿಗೆ, ಪೆಳ್ಪಳಿಸದೆ–ಹೆದರದೆ, ಒರ್ವರಿನೊರ್ವರೆ–ಒಬ್ಬರಿಗಿಂತ ಒಬ್ಬರೇ, ಮಿಕ್ಕು–ಮೀರಿ, ಪಾರ್ದು–ನೋಡಿ, ಸಾರ್ದು–ಸಮೀಪಿಸಿ, ತುಱುಗಾಱರ್–ದನಗಾಹಿಗಳು, ಇಸೆ–ಬಾಣಗಳನ್ನು ಪ್ರಯೋಗಿಸಲು, ಅಂದಿನಿಸು–ಅಂದು ಸ್ವಲ್ಪ, ಅದೊಂದು ಕಾಳಗಂ – ಅದೊಂದು ಯುದ್ಧ, ಬಲ್ಪಲನಾದುದು – ಬಲು ಅತಿಶಯವಾಯಿತು. ಕೂಕಿಱು < ಕೂಂಕು–ಉತ್ಸರ್ಪಣೇ + ಇಱು; ಬಲ್ಲಣಿ < ಬಲ್ಲಿತ್ತು + ಅಣಿ–ಕಾಲಾಳು, ಸಾಲು: ಬಲ್ಪಲಂ–ಆಧಿಕ್ಯ, ಅತಿಶಯ; ಗೆಲಲೆನಗೆ ರಿಪುಬಲಂ ಬಲ್ಪಲಮಾದೊಡೆ ಸಿಂಹನಾದಮುಂ ಪಾಟಿಪ್ಪೆಂ (ಪಂಪರಾ. ೯–೯೭); ಭವದೀಯ ಪ್ರಸಾದದಿನೆನಗೆ ಬಲ್ಪಲಮುಪ್ಪ ಬವರಮಿಲ್ಲ (ಅದೇ ೯–೧೧೪ ಗ) ಪೆಳ್ಪಳಿಸೆ = ಬೆಳ್ಪಳಿಸೆ = ಬೆಬ್ಬಳಿಸೆ–ಭಯ; ಅಂಬಿಕೆ ಬೆರ್ಚಿ ಬೆಳ್ಪಳಿಸೆ (ಶಮದ ೭೧–೧)

**೯೪.** ಮಚ್ಚರದಿಂ – ಮಾತ್ಸರ್ಯದಿಂದ, ಒರ್ವರೊರ್ವರಂ–ಒಬ್ಬರೊಬ್ಬರನ್ನು, ಉಚ್ಚಳಿಸಿ–ಹಾರಿಸಿ, ತಗುಳ್ದು–ಅಟ್ಟಿ, ಗೋವರ್–ಗೋಪಾಲರು, ಆರ್ದು–ಗರ್ಜನೆ ಮಾಡಿ, ಇಸೆ–ಬಾಣಪ್ರಯೋಗಮಾಡಲು, ನಚ್ಚಿನ–ನಂಬಿಕೆಯ, ಕಾಂಭೋಜವಾಜಿಗಳ್–ಕಾಂಭೋಜ ದೇಶದ ಕುದುರೆಗಳು, ಕೆಲವು, ಆಗಳ್–ಆಗ, ಕೇಱಂ–ಬಾಯ ಕಬ್ಬಿಣದ ತುಂಡನ್ನು; ಕರ್ಚಿ – ಕಚ್ಚಿ, ಪುಡಿಯೊಳ್ – ಧೂಳಿನಲ್ಲಿ, ಪೊರಳ್ದುವು–ಹೊರಳಿದುವು.

**ವಚನ:** ಒಡಂಬಟ್ಟಂತೆ–ಒಪ್ಪಿದಹಾಗೆ; ಎಡಗಲಿಸಿ–ಮೀರಿ; ಅಟಿಗಾಳೆಗದೊಳ್–ಅಲ್ಪಯುದ್ಧದಲ್ಲಿ, ಹೀನಯುದ್ಧದಲ್ಲಿ.

**೯೫.** ತುಱು ಪರಿವಾಗಳ್–ಹಸುಗಳು ಓಡುವಾಗ, ಎಮ್ಮಪೆಣನಂ–ನಮ್ಮ

ಹೆಣವನ್ನು, ತುಱುಿದುಂ ಪರಿಗುಂ–ತುಳಿದೂ ಓಡುತ್ತವೆ, ದಲ್–ದಿಟವಾಗಿಯೂ, ಎಂದು ; ಚೀ–ಚೀ, ತುಱುಗೋಳ್–ದನಗಳನ್ನು ಹಿಡಿಯಲು, ಬಾಱಿಸೆಂದು–ನಾವು ಬದುಕುವುದಿಲ್ಲವೆಂದು, ತುಱುಗೋಳೊಳ್–ಗೋಗ್ರಹಣದಲ್ಲೇ, ಸಾವುದು–ಸಾಯುವುದು. ಸೈಪಿದೆಂದು–ಪುಣ್ಯವಿದೆಂದು, ಪಾಯ್ದು–ಹಾಯ್ದು, ಅಱಿಕೆಯ ಗೋವರ್–ಪ್ರಸಿದ್ಧರಾದ ಗೋಪಾಲರು, ಅಣ್ಮೆ–ಪೌರುಷವನ್ನು ತೋರಿಸಿ, ಬರೆ – ಬರಲು, ಘೋಟಿಯಿಲರ್–ರಾವುತರು, ಪಾಯಿಸಿ–ಕುದುರೆಗಳನ್ನು ನುಗ್ಗಿಸಿ, ತಗಳ್ದು–ಬೆನ್ನಟ್ಟಿ, ತತ್ತಱದಱಿ ದಿಕ್ಕಿ – ಚೂರಾಗಿ ಕತ್ತರಿಸಿಹಾಕಿ, ದೇಗುಲಕೆ – ದೇವಾಲಯಕ್ಕೆ, ಪೆರ್ಮರನಂ–ಹೆಮ್ಮರವನ್ನು, ಕಡಿವಂತೆ–ಕತ್ತರಿಸುವ ಹಾಗೆ, ಮಾಡಿದರ್–ಮಾಡಿದರು. ಹಿಂದಿನ ಕಾಲದಲ್ಲಿ ದೇವಾಲಯಗಳನ್ನು ಮರದಿಂದ ಕಟ್ಟುತ್ತಿದ್ದರು ; ಇದಕ್ಕೆ ದಾರುಕರ್ಮವೆಂದು ಹೆಸರು ; ಇದಕ್ಕಾಗಿ ಹೆಮ್ಮರವನ್ನು ಕಡಿದು ಅದನ್ನು ಅಳತೆಗೆ ತಕ್ಕಂತೆ ತುಂಡುತುಂಡಾಗಿ ಮಾಡಬೇಕಾಗಿತ್ತು. ಹಾಗೆ ಗೋವಳರನ್ನು ಕತ್ತರಿಸಿದರು ಎಂದು ಭಾವ.

**ವಚನ :** ಮನದೊಳಾದೇಪಂ – ಮನಸ್ಸಿನಲ್ಲುಂಟಾದ ದ್ವೇಷ, ಕೋಪ ; ಪೋಗಿಂಗೆ–ಹೋದುದಕ್ಕೆ ;

೯೬. ಪೆಱಗಣ ಕಾಪಂ-ಹಿಂದಿನ ರಕ್ಷಣೆಯನ್ನು ಎಂದರೆ ರಾಜಧಾನಿಯ ರಕ್ಷಣಾಭಾರವನ್ನು, ಎನ್ನನೆ–ನನ್ನನ್ನೇ, ಪೂಣಿಸಿ- ಪೇರಿಸಿ, ವಹಿಸಿ, ಮಹೀಪತಿ–ರಾಜ, ಪೋದಂ–ಹೋದನು ; ಗಡಂ–ಅಲ್ಲವೇ? ತುಱುಗೋಳ್–ಗೋಗ್ರಹಣವನ್ನು ಮಾಡಲು. ಮಾಣೆಂ–ನಿಲ್ಲೆನು ; ಎನ್ನಿದಿರ್ಗೆ–ನನ್ನ ಎದುರಿಗೆ, ರಾವಣಕೋಟಿಯುಂ–ಕೋಟ್ಯಂತರ ರಾವಣರು, ಆಂತುಮೇಂ–ಪ್ರತಿಭಟಿಸಿದರೇನು, ಗೆಲಲ್ ನೆಱಿಗುಮೆ–ಗೆಲ್ಲಲು ಸಮರ್ಥರಾಗುವರೆ? ಇಂ ಎನಗೆ ಸಾರಥಿಯಪ್ಪನಂ – ಇನ್ನು ನನಗೆ ಸಾರಥಿಯಾಗುವವನನ್ನು, ಈಗಳೆ–ಈಗಲೇ, ತನ್ನಿಂ–ತನ್ನಿರಿ, ಎಂದು, ವಿರಾಟನಂದನಂ–ಉತ್ತರಕುಮಾರನು, ಪೊಚ್ಚಱಿಸೆ–ಸ್ಫುರಣೆಯನ್ನು ತೋರಿಸಲು ಎಂದರೆ ವಿಜೃಂಭಿಸಲು, ಅದೆಲ್ಲಮಂ–ಅದೆಲ್ಲವನ್ನೂ, ಆಗಡೆ–ಆಗಲೇ, ವಿಕ್ರಮಾರ್ಜುನಂ–ಅರ್ಜುನನು ; ಕೇಳ್ದು – ಕೇಳಿ, (ತ) ಪೂಣ್–ಮೇಲ್ಕೊಳ್ಳುದಲ್ ;

**ವಚನ :** ಆಪೊೞ್ತು ಪೊೞ್ತಾಗೆ–ಆ ಹೊತ್ತೆ ಹೊತ್ತಾಗಲು ; ಬೞಿಯನಟ್ಟಿ–ದೂತನನ್ನು ಕಳುಹಿಸಿ.

೯೭. ಮತ್ಸ್ಯಸುತನುತ್ತರನಂ – ಮತ್ಸ್ಯರಾಜನ ಮಗನಾದ ಉತ್ತರನಿಗೆ, ಸಾರಥಿಮಾಡು–ನನ್ನನ್ನು ಸಾರಥಿಯನ್ನಾಗಿ ಮಾಡು ; ತದರಾತಿ ಸೈನ್ಯ ಕೂಪಾರದ–ಆ ಶತ್ರುಸೈನ್ಯವೆಂಬ ಸಮುದ್ರದ, ಪಾರಮಂ–ಆಚೆಯ ತೀರವನ್ನು, ತಡೆಯದೆ–ವಿಳಂಬವಾಗದೆ, ಎಯ್ದುವೆಂ–ಸೇರುತ್ತೇನೆ, ಎಂಬುದುಂ–ಎಂದು ಹೇಳುತ್ತಲು, ಪಂಕೇರುಹವಕ್ತ್ರೆ-ದ್ರೌಪದಿ, ಅಂತೆ, ಬಂದು, ಮತ್ಸ್ಯಸುತನಂ-ಉತ್ತರನಿಗೆ, ನುಡಿದಳ್-ಹೇಳಿದಳು ; ನಿನಗೆ, ಆಜಿರಂಗದೊಳ್ – ಯುದ್ಧರಂಗದಲ್ಲಿ, ಸಾರಥಿಯಪ್ಪೊಡೆ – ಸಾರಥಿಯಾಗುವು

ದಾದರೆ, ಶಿಖಂಡಿಯೆ–ಬೃಹಂದಳೆಯೆ, ಅಪ್ಪುದು–ಆಗುತ್ತದೆ; ನಿನ್ನೊರೆಗೆ–ನಿನ್ನ ಸಮಾನಕ್ಕೆ, ಉಂತೆ–ಸುಮ್ಮನೆ, ಗಂಡರಾರ್–ಶೂರರು ಯಾರು? ಉತ್ತರನಂ, ಮತ್ಸ್ಯ ಸುತನಂ–ಎಂಬೆಡೆಗಳಲ್ಲಿರುವ ದ್ವಿತೀಯಾವಿಭಕ್ತಿ ಚತುರ್ಥಿಯ ಅರ್ಥದಲ್ಲಿ ಬಂದಿದೆ.

**ವಚನ:** ಉತ್ತರೆಯೆನೆ–ಉತ್ತರೆಯನ್ನೇ, ಬಟ್ಟಿಯನಟ್ಟಿ–ದೂತಿಯನ್ನಾಗಿ ಕಳುಹಿಸಿ.

**೯೮.** ಸಾರಥಿಯಪ್ಪೊಡೆ – ಸಾರಥಿಯಾಗುವುದಾದರೆ, ಎನಗೀತನೆ – ನನಗೆ ಇವನೇ, ಅಪ್ಪಂ–ಆಗುತ್ತಾನೆ; ಪೋ–ಹೋಗು, ಪೆಜರ್–ಇತರರು. ಏವರ್-ಯಾರು? ಇನ್ ನೆರಂ ಬಾರೆಂ-ಇನ್ನು ಸಹಾಯವನ್ನು ನಿರೀಕ್ಷಿಸೆನು, ಎನುತ್ತೆ ಎಂದು ಹೇಳುತ್ತ, ತನ್ನ ರಥಮಂ ತರವೇೞ್ದು–ತನ್ನ ರಥವನ್ನು ತರುವಂತೆ ಹೇಳಿ, ಎಯ್ದೆ–ಹೊರಡಲು, ಘೋರಕಾಂತಾರಮಂ–ಭಯಂಕರವಾದ ಅಡವಿಯನ್ನು. ಒಂದು ಜೇಗೆ–ಒಂದು ಕಿಚ್ಚು, ಪರಿವಂತು–ಆವರಿಸುವ ಹಾಗೆ, ಅಂಕದ–ಪ್ರಸಿದ್ಧನಾದ, ಬೃಹಂಪಳೆ-ಬೃಹಂದಳೆಯು, ಚೋದಿಸೆ–ಪ್ರೇರಿಸಲು, ಚೋದ್ಯಮಪ್ಪಿನಂ–ಆಶ್ಚರ್ಯವುಂಟಾಗುತ್ತಿರಲು. ವೈರಿಕಾಂತಾರ ಮನಟ್ಟಿಲ್–ಶತ್ರುಗಳೆಂಬ ಅಡವಿಯನ್ನು ಸುಡಲು. ರಥಂ–ರಥವು, ಪರಿದತ್ತು–ಓಡಿತು, ದೌಡಾಯಿಸಿತು.

**ವಚನ:** ಕಿಱಿದಂತರಂ–ಸ್ವಲ್ಪದೂರ, ಪೋಗೆ ಪೋಗೆ–ಹೋಗುತ್ತಲು.

**೯೯.** ಕರಿಘಟೆ–ಆನೆಯ ಸೈನ್ಯ, ನೀಳಮೇಘ ಘಟೆಯಂತೆ–ಕರ್ಮೋಡಗಳ ಸಮೂಹದಂತೆ; ತುರಂಗದಳಂ–ಕುದುರೆಯ ಸೈನ್ಯ, ಸಮುದ್ರದೊಳ್–ಕಡಲಿನಲ್ಲಿ, ತರತರದಿಂದೆ–ಸಾಲುಸಾಲಾಗಿ, ಎೞ್ವ–ಏಳುವ, ತೆರೆಯಂತೆ–ಅಲೆಗಳ ಹಾಗೆ; ರಥಂ–ರಥಗಳು, ಮಹಾ ಮಕರಂಗಳಂತೆ–ಮಹಾ ಮೀನುಗಳಂತೆ; ಅಗುರ್ವರಿ-ಭಯಂಕರವಾದ ಉರಿಯಂತೆ, ಪರಿಯುತ್ತುಮಿರ್ಪ – ಪರಿದುಬರುತ್ತಿರುವ, ಅಣಿ – ಕಾಲಾಳುಸೈನ್ಯ, ಬೃಹದ್ಬಡಬಾನಳನಂತೆ– ದೊಡ್ಡ ಬಡಬಾಗ್ನಿಯ, ಹಾಗೆ; ತೋಱೆ–ಕಾಣಲು, ಸುಯೋಧನ ಸೈನ್ಯಸಾಗರಂ–ದುರ್ಯೋಧನನ ಸೇನಾ ಸಮುದ್ರವು, ಉತ್ತರನ ಕಣ್ಗೆ– ಉತ್ತರನ ಕಣ್ಣುಗಳಿಗೆ, ಭೀಕರತರಮಾದುದು–ಅತಿ ಭಯಂಕರವಾಯಿತು.

**ವಚನ:** ಒತ್ತರಮೆತ್ತಿದಂತೆ-ಒಟ್ಟಿಗೆ, ಒಂದೇಸಲ ಆಕ್ರಮಿಸಿದಂತೆ, ಒತ್ತರ ಮೆತ್ತಿದಂತೆ ಪೆಜಗಾಗೆ ಕೃಪಾದಿಗಳ್ (ಶಮದ ೧೮-೫) ಎಂದು ಇನ್ನೊಂದು ಪ್ರಯೋಗ: (ತ) ಒರುತರಂ–ಒಂದೇ ತಡವೆ; ಬೆಗಡುಗೊಂಡು–ಭಯವನ್ನು ಹೊಂದಿ.

**೧೦೦.** ನೋಡಲ್–ನೋಡುವುದಕ್ಕೆ, ಅಳುಂಬಮೆಂಬೊಡೆ–ಅಸಾಧ್ಯವೆಂದರೆ, ಇದಂ–ಈ ಸೈನ್ಯವನ್ನು, ಆಂತು–ಎದುರಿಸಿ, ಇಱಿದುಂ–ಘಾತಿಸಿ, ತವಿಪನ್ನರ್– ನಾಶಮಾಡುವವನು, ಆರ್-ಯಾರು? ಎಂದು, ವಿರಾಟಸೂನು-ಉತ್ತರನು, ನಾಣ್ಗೆಡೆ– ನಾಚಿಕೆ ಹೊರಟುಹೋಗಲು. ರಥದಿಂದಿೞಿದು–ರಥದಿಂದ ಇಳಿದು. ಓಡಿದೊಡೆ–ಓಡಿದರೆ, ಎಯ್ದೆ–ಚೆನ್ನಾಗಿ, ಪೂಣ್ದು–ಪ್ರತಿಜ್ಞೆಮಾಡಿ, ಜೆರ್ಚಿ–ಬೆದರಿ. ಓಡೆ–ಓಡಲು, ಕಿರೀಟಿ– ಅರ್ಜುನ, ತನ್ನಂ–ತನ್ನನ್ನು, ಅಱಿಪುತ್ತ–ತಿಳಿಸುತ್ತ, ಶಮಿದ್ರುಮದಲ್ಲಿಗೆ–ಬನ್ನಿಯ

ಮರವಿದ್ದಲ್ಲಿಗೆ, ಆತನಂ-ಅವನನ್ನು, ನೀಡಿರದೆ-ತಡಮಾಡದೆ, ಉಯ್ದು-ಕರೆದುಕೊಂಡು ಹೋಗಿ, ಆತನಿಂ-ಅವನಿಂದ, ಅಲ್ಲಿಯ-ಅಲ್ಲಿನ, ಕೈದುವೆಲ್ಲಮಂ-ಆಯುಧಗಳೆಲ್ಲವನ್ನೂ, ನೀಡಿಸಿದಂ-ನೀಡುವಂತೆ ಮಾಡಿದನು, ಉತ್ತರನ ಓಟದಂತೆ ಇಲ್ಲಿಯ ಪದ್ಯಗಳ ಓಟ.

**ವಚನ :** ಶರಾಸನ-ಬಿಲ್ಲು, ಶರಧಿ-ಬತ್ತಳಿಕೆ, ತನುತ್ರ-ಕವಚ ; ಆವಗಂ ಕೊಳ್ವಂತೆ-ಪೂರ್ತಿಯಾಗಿ ತೆಗೆದುಕೊಳ್ಳುವಂತೆ ;

೧೦೧. ಪಿಣಿಲಂ-ಹೆರಳನ್ನು, ಬಿಡೆ-ಬಿಚ್ಚಲು, ಕುರುಧ್ವಜಿನಿ-ಕೌರವ ಸೈನ್ಯ ತೊಟ್ಟನೆ-ಬೇಗನೆ, ಆಶ್ಚರ್ಯದಿಂದ, ಬಾಯನೆ ಬಿಟ್ಟುದು-ಬಾಯನ್ನೇ ತೆರೆಯಿತು, ಅಂದು-ಆಗ, ಗಂಡುಡೆಯುಡೆ-ಪುರುಷನ ಉಡುಪನ್ನು ಧರಿಸಲು, ಗಂಡುಗೆಟ್ಟುದು-ಪೌರುಷವನ್ನು ನೀಗಿಕೊಂಡಿತು ; ನೆಗಟ್ತೆಯ-ಪ್ರಸಿದ್ಧವಾದ, ಗಾಂಡಿವಮಂ-ಗಾಂಡೀವವನ್ನು, ತಗುಳ್ದು-ಹಿಡಿದು, ಜೇವೊಡೆಯೆ-ಟಂಕಾರಮಾಡಲು, ಸಿಡಿಲ್-ಸಿಡಿಲು, ಸಿಡಿಲ್ದು-ಸಿಡಿಲಿ, ಪೊಡೆವಂತೆವೊಲಾಯ್ತು - ಹೊಡೆಯುವಹಾಗೆ ಆಯಿತು ; ಎನೆ - ಎನ್ನಲು, ರಥಮನೇಱಲೊಡಂ-ರಥವನ್ನು ಹತ್ತಿದಕೂಡಲೇ, ಪಡೆಮೆಚ್ಚೆಗಂಡನಾ-ಅರ್ಜುನನ, ಗಂಡಗಾಡಿ - ಪೌರುಷಯುಕ್ತವಾದ ಸೌಂದರ್ಯವು, ನೂರ್ಮಡಿ - ನೂರರಷ್ಟು, ಮಿಗಿಲಾದುದು-ಅತಿಶಯವಾಯಿತು.

**ವಚನ :** ಬರವಿಂಗೆ-ಆಗಮನಕ್ಕೆ, ಅಳ್ಕಿ-ಹೆದರಿ ; ಸೊಡರಂತೆ-ದೀಪದಹಾಗೆ.

೧೦೨. ನನ್ನಿಗೆ-ಸತ್ಯಕ್ಕಾಗಿ, ಅವಧಿಯ-ಗಡುವಿನ, ಲೆಕ್ಕಮಂ-ಎಣಿಕೆಯನ್ನು, ನೆಱಪಿ-ಪೂರ್ಣಮಾಡಿ, ಮಾಣದೆ-ಬಿಡದೆ, ಕಾದಲೆಂದು-ಯುದ್ಧಮಾಡಬೇಕೆಂದು, ಬಂದವನಿವನ್-ಬಂದ ಇವನು, ಅರ್ಜುನಂ-ಅರ್ಜುನ ; ತೊಡರ್ದು-ಸಿಕ್ಕಿ, ನಿಲ್ಲದೆ-ನಿಂತುಕೊಳ್ಳದೆ, ಗೋನಿವಹಮಂ - ಗೋಗಳ ಸಮೂಹವನ್ನು, ನೀಂ - ನೀನು, ಒಡಗೊಂಡು-ಕೂಡಿಕೊಂಡು, ಪೋಗು-ಹೋಗು ; ಅಂಗರಾಜ-ಕರ್ಣ, ದ್ರುಪ, ಕುಂಭಭವ-ದ್ರೋಣ, ಪ್ರಮುಖ-ಇವರೇ ಮೊದಲಾದ, ಪ್ರವೀರರೆಂಬ-ಅತಿಶಯ ವೀರರೆನ್ನುವ, ಇವರ್‌ವೆರಸು-ಇವರೊಡನೆ ಕೂಡಿ, ಈ ಎಡೆಯೊಳ್-ಈ ಸ್ಥಳದಲ್ಲಿ, ಕದನತ್ರಿಣೇತ್ರನಂ - ಅರ್ಜುನನನ್ನು, ಆನ್ - ನಾನು, ಇನಿಸಂ - ಸ್ವಲ್ಪ, ಆಂಪೆಂ - ಎದುರಿಸುತ್ತೇನೆ.

**ವಚನ :** ಆಕುಳಂ ಬೆರಸು-ಗಾಬರಿಯಿಂದ ಕೂಡಿ, ಮುಟ್ಟೆವಂದು-ಹತ್ತಿರಕ್ಕೆ ಬಂದು.

೧೦೩. ಪಗೆ ತೀರ್ಗುಂ-ಹಗೆ ತೀರುತ್ತದೆ, ಬಗೆ ತೀರ್ಗುಂ-ಇಷ್ಟವು ನೆರವೇರುತ್ತದೆ, ಆ ಕುರುಕುಳ ಪ್ರಖ್ಯಾತನಂ-ಆ ಕೌರವ ವಂಶದಲ್ಲಿ ಪ್ರಸಿದ್ಧನಾದ ದುರ್ಯೋಧನನನ್ನು, ಕಾದಿ-ಯುದ್ಧಮಾಡಿ, ತೊಟ್ಟಗೆ-ಶೀಘ್ರವಾಗಿ, ಗೋವೃಂದಮಂ-ದನಗಳ ಹಿಂಡನ್ನು, ಆಂ-ನಾನು; ಮಗುಟ್ಚಿದಪೆಂ-ಹಿಂದಿರುಗಿಸುತ್ತೇನೆ, ಎಂದು, ಆರ್ದು-ಗರ್ಜಿಸಿ, ಎಚ್ಚು - ಬಾಣಪ್ರಯೋಗಮಾಡಿ, ತನ್ನ, ಅಂಕದ - ಹೆಸರನ್ನುಳ್ಳ, ಅಂಬುಗಳೊಳ್-ಬಾಣಗಳಲ್ಲಿ, ಒಂದೊಂದಱಲ್-ಒಂದೊಂದರಲ್ಲೂ, ಒಂದು, ಲಕ್ಕ

ಬಲಂ–ಲಕ್ಷ ಸೈನ್ಯ, ಅಂದು–ಆ ದಿನ, ಆಱ್ಕಾಡೆ–ನಾಶವಾಗಲು, ದುರ್ಯೋಧನಂ–ದುರ್ಯೋಧನನು, ಮಿಗೆ ಸೋಲ್ತು – ವಿಶೇಷವಾಗಿ ಸೋತುಹೋಗಿ, ಓಡೆ–ಪರಾರಿಯಾಗಲು, ವಿದ್ವಿಷ್ಟ ವಿದ್ರಾವಣಂ–ಅರ್ಜುನ, ತುಱುವಂ–ಗೋವುಗಳನ್ನು, ಮಗುಚ್ಚಿದಂ–ಹಿಂದಿರುಗಿಸಿದನು.

೧೦೪. ಅದಟರ – ಶೂರರ, ಚೆನ್ನಪೊಂಗರ–ವೀರರ, ಸಬಂಗಳ – ಹೆಣಗಳ, ತೊೞ್ತುೞಿಯೊಳ್-ತುಳಿದಾಟದಲ್ಲಿ, ತೊಡಂಕಿ-ಸಿಕ್ಕಿಕೊಂಡು, ನಿಲ್ಲದೆ-ನಿಂತುಕೊಳ್ಳದೆ, ಪೊಱಮಟ್ಟು–ಹೊರಹೊರಟು, ತಮ್ಮ ಮನದೊಳ್–ತಮ್ಮ ಮನಸ್ಸಿನಲ್ಲಿ, ಮಿಗೆ–ಹೆಚ್ಚಾಗಿ, ಬೆಚ್ಚಿಸಿದಂತೆ–ಹೆದರಿದಂತೆ, ತೋಱುವ–ಕಾಣಿಸುವ, ಅಗ್ಗದ-ತುದಿಯುಳ್ಳ, ನಿಡುಗೋಡು – ನೀಳವಾದ ಕೊಂಬುಗಳೂ, ಮೋಡುಂ – ಹಿಣಿಲೂ, ಅಮರುತ್ತುಂ–ಸೇರಿಕೊಳ್ಳುತ್ತ, ಇಱುಂಕಿದ–ಅಮುಕಿದ, ಕೆಚ್ಚಲ್–ಕೆಚ್ಚಲು, ಎತ್ತಂ–ಎಲ್ಲೆಲ್ಲಿಯೂ, ಎತ್ತಿದ–ಎತ್ತಿರುವ, ಕುಡಿವಾಲಂ -ಬಾಲದ ಕೊನೆಗಳು, ಅಂದು ಎಸೆಯೆ–ಶೋಭಿಸಲು, ಕರ್ಬಸುಗಳ್ – ಕಪ್ಪಾದಹಸುಗಳು, ಆಜಿಯೊಳ್ – ಯುದ್ಧದಲ್ಲಿ, ಪರಿಗೊಂಡುವು–ಓಡಿದುವು, ಓಟಕಿತ್ತುವು.

**ವಚನ :** ಅರೆದು–ತೇದು, ಸದೆದು–ತದಿಕಿ.

೧೦೫. ಪೞುವಟ್ಟೆಯಂ-ಕಾಡಿನ ಜಾಡನ್ನು, ತಗುಳ್ದು-ಅನುಸರಿಸಿ, ಅಳುರ್ವ–ವ್ಯಾಪಿಸುವ, ಬೇಗೆವೊಲ್–ಕಿಚ್ಚಿನ ಹಾಗೆ, ಎಚ್ಚ ಶರಾಳಿಗಳ್–ಪ್ರಯೋಗಿಸಿದ ಬಾಣಗಳ ಸಾಲುಗಳು, ಭೞಿಲ್ ಭೞಿಲೆನೆ–ಭಳ ಭಳ ಎಂದು, ಪಾಯೆ–ನುಗ್ಗಲು, ಪಾಯ್ವ–ಹರಿಯುವ, ಬಿಸುನೆತ್ತರ–ಬಿಸಿರಕ್ತದ, ಸುಟ್ಟುರಿ–ಸುಂಟರಗಾಳಿ, ಚಾತುರಂಗಮಂ–ಚತುರಂಗ ಸೈನ್ಯವನ್ನು, ಕೞಕುೞಮಾಗೆ–ಅಸ್ತವ್ಯಸ್ತವಾಗಲು, ಪೇೞಿಪೆಸರಿಲ್ಲ–ಹೇಳುವುದಕ್ಕೆ ಹೆಸರಿಲ್ಲ, ಎನೆ–ಎನ್ನಲು, ತೇರಸೆಯ್ದು–ತೇರನ್ನು ಚೆನ್ನಾಗಿ, ಪಾಯಿಸಿ–ಹರಿಯಿಸಿ, ಅಮ್ಮನ ಗಂಧವಾರಣಂ–ಅಪ್ಪನ ಸೊಕ್ಕಾನೆ (ಅರ್ಜುನ), ವೈರಿಬಲಮೆಲ್ಲಮುಂ–ಶತ್ರುಸೈನ್ಯವನ್ನೆಲ್ಲ, ತೊತ್ತುೞದುೞದತ್ತು–ತುಳಿದು ತುಳಿದು ತುಳಿಯಿತು, "ಕೞಕುೞಮೆಂದು ತಾಣಬಾಗುಳತೆ", "ಕೞಕುೞಮಾಗೆ ಪಂಚಳನ ಬಲ್ಪಡೆ, ಪಂಚಳನಶ್ವಸಂಕುಳಂ ಕೞಕುೞಮಾಗೆ" ಎಂದು ರನ್ನನ ಪ್ರಯೋಗ (ಅಜಿಪು).

೧೦೬. ಕುರುಬಲದೊಳ್–ಕೌರವನ ಸೈನ್ಯದಲ್ಲಿ, ಕರಂ ನೆಗಳ್ದ–ವಿಶೇಷವಾಗಿ ಪ್ರಸಿದ್ಧರಾದ, ಬೀರರ–ವೀರರ, ಚೆನ್ನರ-ಚೆಲುವಾಗಿರುವವರ, ಸಂದ-ಹೆಸರುವಾಸಿಯಾದ, ಚೆನ್ನಪೊಂಗರ–ಶೂರರ, ತಲೆ–ತಲೆಗಳು, ತಾೞಪಣ್–ತಾಳೆಯ ಹಣ್ಣು, ಕೆದಱದಂತೆ–ಚದರಿರುವಂತೆ, ನಿರಂತರಂ–ಎಡೆಬಿಡದೆ, ಆಜಿರಂಗದೊಳ್–ಯುದ್ಧರಂಗದಲ್ಲಿ, ಪರೆದಿರೆ–ಚೆದರಿರಲು, ಲೋಹಿತಾಂಬುಧಿಯೊಳ್–ರಕ್ತದ ಕಡಲಿನಲ್ಲಿ, ಆನೆಗಳ, ಅಟ್ಟೆಗಳ್–ದೇಹಗಳು, ಆಡೆ–ಆಡಲು, ನೋಡಲ್–ನೋಡಲು, ಅಚ್ಚರಿಯುಂ–ಆಶ್ಚರ್ಯವೂ, ಅಗುರ್ವುಂ–ಭಯವೂ, ಅದ್ಭುತಮುಂ–ಅದ್ಭುತವೂ, ಕದನತ್ರಿಣೇತ್ರನಾ–ಅರ್ಜುನನ, ರಣಂ–ಕಾಳಗ, ಆಯ್ತು–ಆಯಿತು.

**ವಚನ :** ಅಂಗರಾಜಂ-ಕರ್ಣ, ರಾಜರಾಜನ ನಡಪಿದುದುಮಂ-ದುರ್ಯೋಧನನನು ಸಾಕಿ ಸಲಹಿದ್ದನ್ನೂ, ಬಲ್ಲಾಳ್ತನಮುಮಂ-ಪರಾಕ್ರಮವನ್ನೂ ; ಅರ್ಣವನಿನಾದದಿಂದೆ-ಸಮುದ್ರ ಘೋಷದಿಂದ, ಆರುತ್ತಂ-ಗರ್ಜಿಸುತ್ತ ;

೧೦೭, ಗೋಗ್ರಹಣದಲ್ಲಿಯೆ-ಗೋಗ್ರಹಣ ಪ್ರಸಂಗದಲ್ಲಿಯೇ, ಭಾರತಂ-ಭಾರತ ಯುದ್ಧವು, ಸವೆದುದು-ಮುಗಿದುಹೋಯಿತು, ಪೋಗು-ಹೋಗು, ಎಂಬ ಮಾತಂ-ಎನ್ನುವ ಮಾತನ್ನು, ಅಂದು, ಅಮರನರೋರಗರ್-ದೇವತೆಗಳು ಮನುಷ್ಯರು ನಾಗರುಗಳು, ನುಡಿಯೆ-ಹೇಳಲು, ರೌದ್ರಶರಂಗಳಿಂ-ಭೀಕರ ಬಾಣಗಳಿಂದ, ಎಚ್ಚು-ಪ್ರಯೋಗಿಸಿ, ಯುದ್ಧದೊಳ್-ಕಾಳಗದಲ್ಲಿ, ಸಮಸಮನಾಗಿ-ಸರಿಸಮನಾಗಿ, ಕಾದಿದೊಡೆ-ಹೋರಾಡಿದರೆ, ಕರ್ಣನ, ವಕ್ಷಮನೆಚ್ಚು-ಎದೆಯನ್ನು ಘಾತಿಸಿ, ಗರ್ವಮಂ-ಅಹಂಕಾರವನ್ನು, ಸವೆಯಿಸಿ-ಸವೆದು ಹೋಗುವ ಹಾಗೆ ಮಾಡಿ, ನರಂ-ಅರ್ಜುನ, ಒಂದೆ ವಿಕರ್ಣದಿಂ-ಒಂದೇ ಬಾಣದಿಂದ, ಅಂಕದ-ಹೆಸರುವಾಸಿಯಾದ, ವಿಕರ್ಣನಂ-ಕರ್ಣನ ಮಗ ವಿಕರ್ಣನನ್ನು, ಕೊಂದಂ-ಕೊಂದನು.

೧೦೮, ತಕ್ಕಿನ-ಯೋಗ್ಯತೆಯನ್ನುಳ್ಳ, ಕುಂಭಸಂಭವ-ದ್ರೋಣ, ನದೀಜ-ಭೀಷ್ಮ, ಕೃಪಪ್ರಮುಖ ಪ್ರವೀರರ್-ಕೃಪನೇ ಮುಂತಾದ ಶ್ರೇಷ್ಠವೀರರು, ಎಕ್ಕೆಕ್ಕೆಯಿಂ-ಒಟ್ಟೊಟ್ಟಾಗಿ, ಒರ್ವರೊರ್ವರೆ-ಒಬ್ಬೊಬ್ಬರೆ, ಬೆಗುರ್ತು-ಬೆದರಿಸಿ, ಅಂತು-ಎದುರಿಸಿ, ನಿಶಾತಬಾಣಜಾಲಕ್ಕೆ-(ಅರ್ಜುನನ) ಹರಿತವಾದ ಬಾಣಗಣಕ್ಕೆ, ಸಿಡಿಲ್ದು-ಸಿಡಿದು ಹೋಗಿ, ಜೋಲ್ದು-ಜೋತುಬಿದ್ದು, ಸೆರಗಂಬಗೆದು-ಅಪಾಯವೆಂದು ಭಾವಿಸಿ, ಒಂದು ಪೊಟ್ತುಂ-ಒಂದು ಹಗಲೂ, ಕದನ ತ್ರಿಣೇತ್ರನಾ-ಅರ್ಜುನನ, ಒಂದಿಕ್ಕಂ-ಒಂದು ಹೊಡೆತವನ್ನೂ, ಇದಿರ್ಚಲಾಱದೆ-ಎದುರಿಸಲಸಮರ್ಥರಾಗಿ, ಮನಂಗಲಿಗಳ್-ಮನಸ್ಸಿನಲ್ಲಿಯೇ ಶೂರರಾದವರು, ಓಡಿದರ್-ಓಡಿಹೋದರು.

೧೦೯. ಮನದೊಳ್-ಮನಸ್ಸಿನಲ್ಲಿ, ಕರುಣಿಸಿ-ಕರುಣೆಪಟ್ಟು, ಬೀರರಂ-ವೀರರನ್ನು, ಸಂಮೋಹನಾಸ್ತ್ರದಿಂದೆ-ಸಂಮೋಹನವೆಂಬ ಬಾಣದಿಂದ, ಎಚ್ಚು-ಹೊಡೆದು, ಬೀರದ-ಶೌರ್ಯದ, ಶಾಸನಮನೆ-ಶಾಸನವನ್ನೇ, ನಿಱಿಸುವ-ಸ್ಥಾಪಿಸುವ, ಬಗೆಯಿಂದೆ-ಮನಸ್ಸಿನಿಂದ, ಅನಿಬರ-ಅವರೆಲ್ಲರ, ಪಟವಿಗೆಯಂ-ಧ್ವಜಗಳನ್ನು, ಹರಿಗಂ-ಅರ್ಜುನ, ಏಟಿದುಕೊಂಡಂ-ಕಿತ್ತುಕೊಂಡನು.

**ವಚನ :** ಶಶಿವಿಶದ-ಚಂದ್ರನಂತೆ ಬೆಳ್ಳಗಿರುವ, ಯಶಃಪಟಂಗಳಂ-ಕೀರ್ತಿಯೆಂಬ ವಸ್ತ್ರಗಳನ್ನು, ನನ್ನಿಪಟಂಗೊಳ್ವಂತೆ-ಸತ್ಯದಶಾಸನ ಪಟ್ಟವನ್ನು ಸ್ವೀಕರಿಸುವಂತೆ, ಧ್ವಜಪಟಂಗಳಂ-ಬಾವುಟಗಳ ಬಟ್ಟೆಗಳನ್ನು ; ಗೆಲ್ಲಂಗೊಂಡು-ಜಯವನ್ನು ಪಡೆದು.

೧೧೦. ಸೂಸುವ ಸೇಸೆ-ಚೆಲ್ಲುವ ಮಂತ್ರಾಕ್ಷತೆಗಳು, ಬೀಸುವ, ಚಳಚ್ಚಮರೀರುಹಂ-ಚಲಿಸುತ್ತಿರುವ ಚಾಮರಗಳು, ಎಕ್ಕೆಯಿಂ-ಒಟ್ಟಿಗೆ, ರಣಾಯಾಸಪರಿಶ್ರಮಾಂಬುಲವಮುಂ-ಯುದ್ಧಾಯಾಸದಿಂದುಂಟಾದ ಬೆವರುನೀರಿನ ಕಣಗಳನ್ನು, ತವೆ-ಪ್ರೀತಿಯಾಗುವಂತೆ, ಪೀರೆ-ಹೀರಲು, ಪುರಾಂಗನಾಮುಖಾಬ್ಜಾಸವ ಗಂಧದೊಳ್-ಪುರ

ಸ್ತ್ರೀಯರ ಮುಖ ಕಮಲಗಳ ಮಧುವಿನ ಸುಗಂಧದಲ್ಲಿ, ಬೆರಸಿದೊಂದೆಲರ್-ಬೆರೆತ ಗಾಳಿಯೊಂದು, ಒಯ್ಯನೆ-ಮೆಲ್ಲಗೆ, ತೀಡೆ-ಸೋಕಲು, ಗುಣಾರ್ಣವಂ-ಅರ್ಜುನ, ಆ ವಾಸವನಂತೆ-ಆ ಇಂದ್ರನಹಾಗೆ, ಮತ್ಸ್ಯಮಹಿಪಾಳಕ ಮಂದಿರಮಂ-ವಿರಾಟರಾಜನ ಅರಮನೆಯನ್ನು, ಪೊಕ್ಕಂ-ಪ್ರವೇಶಿಸಿದನು.

ಅಷ್ಟಮಾಶ್ವಾಸಂ ಸಂಪೂರ್ಣಂ

## ನವಮಾಶ್ವಾಸಂ

೧. ಶ್ರೀಗೆ–ಐಶ್ವರ್ಯಕ್ಕೆ, ನೆಗಱ್ತೆಗೆ–ಕೀರ್ತಿಗೆ, ವೀರಶ್ರೀಗೆ–ಜಯಲಕ್ಷ್ಮಿಗೆ, ಆಗರಮಪ್ಪೆನೆಂಬ – ಮನೆಯಾಗುತ್ತೇನೆಂಬ, ಆಶ್ರಯವಾಗುತ್ತೇನೆಂಬ, ಕಳಕಳ ವಿಜಯೋದ್ಯೋಗದೊಳೆ–ಸಡಗರ ಸಹಿತವಾದ ಗೆಲ್ಲುವ ಕಾರ್ಯದಲ್ಲೇ, ನೆಗೞ್ಪೆನೆಂಬ–ಆಚರಿಸುತ್ತೇನೆನ್ನುವ, ಉದ್ಯೋಗಿಗೆ–ಕಾರ್ಯಶೀಲನಾದವನಿಗೆ, ಮಲೆವ–ಔದ್ಧತ್ಯದಿಂದ ನಡೆಯುವ, ಅನ್ಯನೃಪತಿಮಂಡಳಂ–ಶತ್ರುರಾಜರ ಪ್ರದೇಶವು, ಒಳವೇ–ಉಂಟೇ? ಇಲ್ಲವೆಂದು ತಾತ್ಪರ್ಯ, ಕಳಕಳ, ಕಲಕಲ–ಗದ್ದಲ, ಅಬ್ಬರ, ಹಕ್ಕಿಗಳ ಚಿಲಿಪಿಲಿ ಎಂಬುದು ವಾಚ್ಯಾರ್ಥ. ನೆಗೞ್–ಉದ್ಯೋಗೇ ಖ್ಯಾತೌ ಸಕ್ರೇಚ.

೨. ಎಂದು–ಎಂಬುದಾಗಿ, ಜಗಜ್ಜನಂ–ಲೋಕದಜನ, ಆಳವಂ–ಪ್ರತಾಪವನ್ನು, ಅಗುಂದಲೆಯಾಗಿ–ಅತಿಶಯವಾಗಿ, ಅಡರೆ–ಏರುತ್ತಿರಲು, ಬಿಡದೆ, ಪೊಗೞುತ್ತಿರೆ–ಹೊಗಳುತ್ತಿರಲು, ಕುಂದೇಂದುಯಶಂ–ಕುಂದಪುಷ್ಪದಂತೆ, ಚಂದ್ರನಂತೆ ಬೆಳ್ಳಗಿರುವ ಕೀರ್ತಿಯನ್ನುಳ್ಳ ಅರ್ಜುನನು, ರಥದಿಂದಿೞಿತಂದು-ರಥದಿಂದ ಇಳಿದುಬಂದು, ಅಗ್ರಜನ್ಮ ಪದ ಸರಸಿಜದೊಳ್-ಅಣ್ಣನ ಪಾದಕಮಲದಲ್ಲಿ, ಎಱಗಿದಂ-ನಮಸ್ಕರಿಸಿದನು. ಅಗುಂದಲೆ ಯೆಂದು ಪಿರಿದು ; < ಆಗು + ದಲೆ–ಆಗುವಿಕೆ, ಏಳ್ಗೆಯಾಗುವಿಕೆ. ವೃದ್ಧಿ, ಅತಿಶಯ.

೩. ಅಜಮಗನ-ಧರ್ಮಪುತ್ರನ, ಪವನತನಯನ-ಭೀಮನ, ನೆಱೆದ-ತುಂಬಿದ ಆಶೀರ್ವಚನಶತಮನಾಂತು–ನೂರು ಆಶೀರ್ವಾದಗಳನ್ನು ಪಡೆದು, ಅನುನಯದಿಂದೆ–ಪ್ರೀತಿಯಿಂದ, ಎಱಗಿದ – ನಮಸ್ಕರಿಸಿದ, ಅವಳರುಮಂ – ನಕುಲಸಹದೇವರನ್ನೂ (ಅವಳಿಗಳನ್ನೂ), ಅಲ್ಕಱಿಂ–ಪ್ರೀತಿಯಿಂದ, ಒಱಲ್ದು–ಒಲಿದು, ತೆಗೆದಪ್ಪಿ-ಬರಸೆಳೆದು ಅಪ್ಪಿಕೊಂಡು, ನಲ್ವರಕೆಗಳಿಂ–ಒಳ್ಳೆಯ ಹರಕೆಗಳಿಂದ, ಪರಸೆ–ಹರಸಲು,

೪. ಚಲಚಲದಿಂ–ಸ್ಥಿರವಾದ ಉದ್ದೇಶದಿಂದ, ಉಱದೆ–ಇಿರದೆ, ಬಿಡದೆ, ಪಗೆವರ ತಲೆಗಳಂ–ಹಗೆಗಳ ತಲೆಗಳನ್ನು, ಅರಿದರಿದು ಬಂದು–ಕತ್ತರಿಸಿ ಕತ್ತರಿಸಿ ಬಂದು, ಪಾಂಡುತನೂಜರ್ – ಪಾಂಡುಕುಮಾರರು, ತಲೆದೋಱಿರೆ – ಕಾಣಿಸಿಕೊಂಡಿರಲು, ಮತ್ಸ್ಯಂಗೆ–ವಿರಾಟನಿಗೆ, ರಾಗಂ–ಸಂತೋಷವು, ಆಗಳ್–ಆಗ, ಅಗುಂದಲೆಯುಂ–ಹಿರಿದೂ, ಪೊಂಪುೞಿಯುಂ–ಅತಿಶಯವೂ, ಆಯ್ತು–ಆಯಿತು. ಪೊಂಪುೞಿಯೆಂದು ಪೆರ್ಚುಗೆ; ಈಚಿನ ಕನ್ನಡದಲ್ಲಿ ಇದಕ್ಕೆ ರೋಮಾಂಚ ಎಂಬರ್ಥವಾಗಿದೆ, "ಪುಳಕ ಕ್ಕೊಪ್ಪಿರೆ ಪೊಂಪುಳಿಯೆನಿಪ್ಪ ಪೆಸರಕ್ಕು" (ಕಬ್ಬಿಕೈ. ೩೦) ; ಪೊಂಪುೞಿ > ಹೊಂಪುಳಿ ಎಂಬ ರೂಪವೂ ಉಂಟು; ಒಗುಮಿಗೆಯ ಹರುಷದಲಿ ಹೊಂಪುಳಿಯೋದನಾ ಭೀಷ್ಮ (ಕುವ್ಯಾಭಾ ೬–೮–೧೩).

೫. ಗುಡಿಯಂ ಕಟ್ಟಿಸಿ–ಬಾವುಟಗಳನ್ನು ಬಿಗಿಯಿಸಿ, ಬದ್ದವಣಮಂ–ಮಂಗಳ ವಾದ್ಯವನ್ನು, ಪೊಯ್ಸಿ-ಹೊಡೆಯಿಸಿ, ಪ್ರಾಣಕ್ಕಂ-ಜೀವಕ್ಕೂ, ಅರ್ಥಕ್ಕಂ-ಐಶ್ವರ್ಯಕ್ಕೂ, ಇಂ–ಇನ್ನು, ಎಡಱತೇನ್–ವಕ್ರತೆಯೇನು, ಏತಱೊಳ್–ಯಾವುದರಲ್ಲಿ, ಅಪ್ಪುದು–

ಆಗುತ್ತದೆ, ಎಂದು–ಎಂದುಹೇಳಿ, ಕುರುಡಂ–ಕುರುಡನು, ಕಣ್ಬೆತ್ತವೋಲ್–ಕಣ್ಣನ್ನು ಪಡೆದ ಹಾಗೆ, ರಾಗದಿಂದೆ–ಸಂತೋಷದಿಂದ, ಒಡೆಯಂ ತಾಂ – ರಾಜನಾದ ತಾನು, ಬಗೆದು–ಯೋಚಿಸಿ, ಉಳ್ಳಸಾರಧನಮಂ–ಇರುವ ಉತ್ಕೃಷ್ಟವಾದ ದ್ರವ್ಯವನ್ನು, ಮುಂದಿಟ್ಟು – ಮುಂದೆ ಇರಿಸಿ, ಮತ್ಸ್ಯಮಹೀಶಂ – ವಿರಾಟರಾಜನು, ತತ್ಪಾಂಡು, ಪುತ್ರರ್ಕಳಾ–ಆ ಪಾಂಡುಕುಮಾರರ, ಮನದೊಳ್–ಮನಸ್ಸಿನಲ್ಲಿ, ಅಂದು–ಆ ದಿನ, ಅತಿಪ್ರೀತಿಯಂ–ಹೆಚ್ಚು ಪ್ರೀತಿಯನ್ನು, ಪಡೆದಂ–ಉಂಟುಮಾಡಿದನು.

೬. ಕೇಳಿರೆ–ಕೇಳಿರೇ, ಕಂಕಭಟ್ಟನೆ, ಯುಧಿಷ್ಠಿರಂ–ಧರ್ಮರಾಜನು ; ಆ ವಲಲಂ – ಆ ಬಾಣಸಿಗ, ವೃಕೋದರಂ – ಭೀಮನು ; ಆ ಬಾಳೆಯರಂ ದಲಾಡಿಪ ಬೃಹಂದಳೆ–ಆ ಬಾಲೆಯರನ್ನು ಚೆನ್ನಾಗಿ ಕುಣಿಸುವ ಬೃಹಂದಳೆಯು, ಫಲ್ಗುಣಂ– ಅರ್ಜುನ, ಅಂಕದ–ಹೆಸರು ವಾಸಿಯಾದ, ಅಶ್ವಗೋಪಾಲಕರೆಂಬರ್–ಕುದುರೆ ಮತ್ತು ಗೋವುಗಳ ರಕ್ಷಕರೆಂಬವರು, ಆ ನಕುಲನುಂ ಸಹದೇವನುಂ ಆದರ್–ಆ ನಕುಲನೂ ಸಹದೇವನೂ ಆದರು ; ಮಹೀಪಾಲರೊಳ್–ರಾಜರಲ್ಲಿ, ಆದ–ಉಂಟಾದ, ಕಾರ್ಯ ಗತಿಗಳ್–ಕಾರ್ಯಗಳ ಪರಿಣಾಮ, ಬಗೆಯಲ್ಕೆ–ಯೋಚನೆಮಾಡಲು, ಏಂ ಬಹು ಪ್ರಕಾರಮೋ–ಏನು ಬಹುರೀತಿಗಳನ್ನುಳ್ಳದ್ದೋ?.

ವಚನ : ಪುರಜನಾಳಾಪಂಗಳ್–ಪಟ್ಟಣಿಗರ ಮಾತುಗಳು; ನೆಗೞೆ– ಉಂಟಾಗಲು ; ಕೃಷ್ಣೆಗೆ–ದ್ರೌಪದಿಗೆ ; ಎಱಗಿ–ಬಾಗಿ ; ಪೊಡೆವಡೆ–ನಮಸ್ಕರಿಸಲು ; ಅವನತ ಮಣಿಮಕುಟಂ–ಬಾಗಿದ ರತ್ನಖಚಿತವಾದ ಕಿರೀಟವುಳ್ಳವನು, ಬಿನ್ನಪಂಗೆಯ್ದಂ –ಬಿನ್ನಹಮಾಡಿದನು:

೭. ನೃಪ ನೀಂ–ರಾಜನೇ, ನೀನು, ಉೞಿದಾವ ಮಂಡಲದೊಳಂ–ಬೇರೆಯಾವ ದೇಶದಲ್ಲಿಯೂ,ಇರದೆ, ಇಲ್ಲಿ–ಈ ದೇಶದಲ್ಲಿ, ದಯೆಯಿಂದಂ–ಕರುಣೆಯಿಂದ, ಬಂದಿರೆ– ಬಂದು ಇರಲು, ಎನ್ನ ಮೆಱೆವ–ನಾನು ತೋರಿಸುವ, ಆಳ್ವೆಸನ್–ಸೇವಾಕಾರ್ಯ, ದೊರೆವೆತ್ತುದು–ಸಮಾನತೆ ಪಡೆಯಿತು, ತಕ್ಕುದಾಯಿತು ; ಎನ್ನ ತನೂಜೆಗೆ ಅಂಕದುತ್ತರೆಗೆ–ನನ್ನ ಮಗಳಾದ ಪ್ರಸಿದ್ಧಳಾದ ಉತ್ತರೆಗೆ, ಅಭಿಮನ್ಯುಗೆ–ಅಭಿಮನ್ಯುವಿಗೆ, ಇನ್–ಇನ್ನು, ವಿವಾಹಮಂಗಳಮಂ–ಮದುವೆಯ ಮಂಗಳಕಾರ್ಯವನ್ನು, ಮಾಲ್ಪುದು– ಮಾಡುವುದು ; ಉತ್ತರೋತ್ತರಮೆನೆ–ಶ್ರೇಯಸ್ಸು ಎನ್ನಲು, ಮಾಡು; ಯಮರಾಜ ನಂದನಾ–ಧರ್ಮಪುತ್ರನೇ, ನಿನ್ನ ದಯೆಯಿಂ– ನಿನ್ನ ಪ್ರಸಾದದಿಂದ, ಮೆಱೆವೆಂ– ಮೆರೆಯುತ್ತೇನೆ-

ವಚನ : ಅಂತೆಗೆಯ್ವೆಂ–ಹಾಗೆಯೇ ಮಾಡುತ್ತೇನೆ, ನಣ್ಪುಗಳ್–ಸಂಟತನಗಳು ಬಾಂಧವ್ಯಗಳು ; ತಗುಳ್ದು–ಅನುಸರಿಸಿ ; ಅವ್ಯವಚ್ಛಿನ್ನವಾಗಿ–ನಡುವೆ ಬಿಟ್ಟುಹೋಗದೆ, ಎಡೆಬಿಡದೆ ; ದೊರೆಯ – ಸಮಾನತೆಯ ; ಚಾಣೂರಾರಿಯಂ – ಶ್ರೀಕೃಷ್ಣನನ್ನು, ಬಟ್ಟಿಯನಟ್ಟಿ–ದೂತನನ್ನು ಕಳುಹಿಸಿ ; ಬರವಱಿದು–ಬರವನ್ನು, ಆಗಮನವನ್ನು, ತಿಳಿದು ; ಇದಿರ್ವೋಗಿ–ಎದುರಿಗೆ ಹೋಗಿ, ಎದುರುಗೊಂಡು.

೮. ಮುರರಿಪು–ಕೃಷ್ಣನು, ಧರ್ಮನಂದನ–ಧರ್ಮರಾಜನ, ಪದಾಬ್ಜಯುಗಕ್ಕೆ–ಎರಡು ಪಾದಕಮಲಗಳಿಗೆ, ಮರುತ್ಸುವಾದಿಗಳ್–ಭೀಮಸೇ ಮುಂತಾದವರು, ಹರಿಚರಣಾಂಬುಜಕ್ಕೆ–ಕೃಷ್ಣನ ಪಾದಕಮಲಗಳಿಗೆ, ಎಱಗೆ–ನಮಸ್ಕರಿಸಲು, ಉತ್ಸವದಿಂದೆ–ಒಸಗೆಯಿಂದ, ಅಭಿಮನ್ಯು–ಅಭಿಮನ್ಯುವು, ತಮ್ಮುಮೈವರ–ತಮ್ಮ ಐವರ, ಲಲಿತಾಂಘ್ರಿಪದ್ಮನಿವಹಕ್ಕೆ–ಕೋಮಲವಾದ ಪಾದಪದ್ಮಗಳ ಸಮೂಹಕ್ಕೆ, ಎಱಗುತ್ತಿರೆ–ನಮಸ್ಕರಿಸುತ್ತಿರಲು, ತನ್ಮುಖಾಬ್ಜದೊಳ್–ಅವರ ಮುಖಕಮಲಗಳಲ್ಲಿ, ಪರಕೆಗಳ್–ಆಶೀರ್ವಾದಗಳು, ಪಂಕಜದಿಂ–ತಾವರೆಯಿಂದ, ಮಕರಂದದಂತೆವೋಲ್–ಹೂವಿನ ರಸದಹಾಗೆ, ಉಣ್ಮಿ–ಚಿಮ್ಮಿ, ಪೊಣ್ಮಿದುವು–ಹೊಮ್ಮಿದುವು.

**ವಚನ** : ಮಂದರಧರನುಂ–ಶ್ರೀಕೃಷ್ಣನೂ; ಒಂದೊರ್ವರಂ–ಒಬ್ಬೊಬ್ಬರನ್ನು; ಇದು ಓರೊರ್ವರಂ ಎಂದಿರಬೇಕು, ಆದರೆ ಪಂಪನು ಹೀಗೆ ಪ್ರಯೋಗಮಾಡುವುದುಂಟು; ಒಂದೊಂದಱಲ್, ನೋಡಿ (ಪಂಪಭಾ ೮-೧೧೩) ; ಅಗಲ್ದಿಂಬೞಿಯಂ–ಅಗಲಿದ ಅನಂತರ; ಅನ್ಯೋನ್ಯ ನಿವೇದನಂ ಗೆಯ್ದು–ಪರಸ್ಪರ ತಿಳಿಯಪಡಿಸಿ, ಅಪಗತ–ಹೊರಟು ಹೋದ ;

೯. ವಾರಿಧಿ ಘೋಷದಂತೆ–ಕಡಲಿನ ಅಬ್ಬರದಂತೆ, ಎಸೆವ–ಶಬ್ದಮಾಡುವ, ತೂರ್ಯರವಂಗಳಿಂ–ವಾದ್ಯಧ್ವನಿಗಳಿಂದ, ಬಿಯಂ–ಖರ್ಚುವೆಚ್ಚಕ್ಕೆ, ಮೇರುವ ಪೊನ್–ಮೇರುಪರ್ವತದ ಚಿನ್ನ, ಅಣಂ–ಸ್ವಲ್ಪವೂ, ನೆಱೆಯದು–ಸಾಕಾಗದು, ಎಂಬಿನಂ–ಎನ್ನುತ್ತಿರಲು, ಇಟ್ಟಳಮಾಗೆ–ಅತಿಶಯವಾಗಲು. ವಾರನಾರೀರಮಣೀಯನೃತ್ತಂ–ವೇಶ್ಯೆಯರ ಸುಂದರವಾದ ನಾಟ್ಯವು, ಅಮರುತ್ತಿರೆ–ಕೂಡಿರಲು, ಸಂದವಿರಾಟಂ–ಪ್ರಸಿದ್ಧನಾದ ವಿರಾಟರಾಜನು, ಕೆಯ್ನೀರೆಱೆದು–ದಾನೋದಕವನ್ನು ಹೊಯ್ದು, ಈಯೆ–ದಾನವಾಗಿ ಕೊಡಲು, ಅಭಿಮನ್ಯುಗಂ–ಅಭಿಮನ್ಯುವಿಗೂ, ಉತ್ತರೆಗಂ–ಉತ್ತರೆಗೂ ವಿವಾಹಮುಂ–ಮದುವೆಯನ್ನು. ಗೆಯ್ದರ್–ಮಾಡಿದರು. ಇಲ್ಲಿ ಬಿಯಂ ಎಂಬೆಡೆ ಇರುವ ಪ್ರಥಮೆಗೆ ಚತುರ್ಥಿಯ ಅರ್ಥವಿರುವಂತೆ ತೋರುತ್ತದೆ; 'ಇಟ್ಟಳಂ'ಗೆ ನೈಘಂಟುಕಾರ್ಥ ಸಮೂಹ ಎಂದು, ತಮಿಳಿನಲ್ಲಿಯೂ ಇದೇ ಅರ್ಥವಿದೆ; ಇಲ್ಲಿ ಅಧಿಕ, ಅತಿಶಯ ಎಂಬ ಲಕ್ಷಣಾರ್ಥವನ್ನು ಸ್ವೀಕರಿಸಿದೆ.

**ವಚನ** : ನೆರಪುವಂತೆ–ಸೇರಿಸುವಹಾಗೆ, ನೆರಪಿ–ಸೇರಿಸಿ.

೧೦. ಮಲೆಪರ್–ಪರ್ವತಗಳ ರಾಜರು, ಮಂಡಳಿಕರ್–ಸಾಮಂತರು, ಕಱುಂಬರ್–ಅಸೂಯಾಪರರು, ಅದಟರ್–ಶೂರರು, ವೀರರ್ಕಳುಂ–ಪ್ರತಾಪಿಗಳೂ, ತಮ್ಮ, ಬಾಬ್ದಲೆಯುಂ–ಬದುಕಿದ ತಲೆಯನ್ನು ಎಂದರೆ ಸೆರೆಯನ್ನು, ಬೇಡಿದ–ಬಯಸಿದ, ವಸ್ತುವಾಹನಮುಮಂ–ವಸ್ತುವನ್ನೂ, ವಾಹನಗಳನ್ನೂ, ಮುಂದಿಟ್ಟು–ಎದುರಿನಲ್ಲಿಟ್ಟು, ಮೂವಿಟ್ಟಿಯ–ಮೂರುಬಗೆಯಾದ ವಿಷ್ಟಿಕರ್ಮದ, ಒಕ್ಕಲವೊಲ್–ಸೇವಕರಂತೆ, ಇಂ ಬೆಸಕೆಯ್ಯೆ–ಇನ್ನು ಸೇವೆಮಾಡಲು, ಕುಂತೀಸುತರ್–ಪಾಂಡವರು, ಸಂತಮಿರುತಂ – ಕ್ಷೇಮವಾಗಿ ಇರುತ್ತ, ದಾಯಿಗರ್ – ದಾಯಾದಿಗಳು, ಧರೆಯನಾಳ್ದು–

ರಾಜ್ಯವನ್ನು ಪಡೆದು, ಅಂದು-ಆಗ, ಅ.್ದರ್-ತಮ್ಮನ್ನು ಮುಳುಗಿಸಿದರು, ಎಂಬ–ಎನ್ನುವ, ಏವದಿಂ-ಕೋಪದಿಂದ, ತಮ್ಮ. ತೋಳ್ವಲಮಂ–ತೋಳಿನ ಶಕ್ತಿಯನ್ನು, ನಚ್ಚರೆ–ನಂಬರೇ ; ಪಾಂಡವರು ತಮ್ಮ ಬಾಹುಬಲವನ್ನು ನಂಬಿಹರು.

ಇಲ್ಲಿ 'ಮಲೆಪರ್ ಮಂಡಳಿಕರ್ ಕಜುಂಬರಡಟರ್ ವೀರರ್ಕಳುಂ'–ಎಂಬಲ್ಲಿ ಕೊನೆಯ ಸಮುಚ್ಚಯ ಉಂ ಅನ್ನು ಅನ್ವಯಿಸುವಾಗ ಮಲೆಪರ್ ಮುಂತಾದ ಪ್ರಥಮಾಂತಗಳಿಗೆಲ್ಲ ಸೇರಿಸಬೇಕು, ಒಂದಕ್ಕೆ ಮಾತ್ರ ಉಂ ಅನ್ನು ಸೇರಿಸಿ ಉಳಿದುವಕ್ಕೆ ಸೇರಿಸದಿರುವುದು ದೋಷವೆನ್ನುತ್ತಾನೆ ಕವಿರಾಜಮಾರ್ಗಕಾರ, (೧–೧೩೦,೧೩೧); ಕಜುಂಬರ್ ಎಂಬ ಶಬ್ದ ಕುಜುಂಬರ್ (–ಸಣ್ಣ ಪುಟ್ಟ ರಾಜರು, ಕೋಟೆ ರಕ್ಷಕರು) ಎಂದಿರಬಹುದೇನೊ ?

**ವಚನ** : ಪ್ರೂಣ್ಬ–ಪ್ರತಿಜ್ಞೆಮಾಡಿದ ; ಉಮ್ಮಳಿಸಿ–ವ್ಯಥೆಪಟ್ಟು ; ಕೆಮ್ಮಗೆ–ಸುಮ್ಮನೆ ; ಶ್ವೇತಕೃಷ್ಣಕಾರಕಂ–ಬಿಳಿದನ್ನು ಕರಿದಾಗಿ ಮಾಡುವವನು ; ಎಂದರೆ ಮೋಸಗಾರ, ಪನ್ನಗಶಯನನಂ–ಕೃಷ್ಣನನ್ನು ; ಮನಃಪವನ ವೇಗದಿಂ–ಮನಸ್ಸಿನ ಗಾಳಿಯ ವೇಗದಿಂದ ; ದುಗ್ಧಾಬ್ಧಿ–ಹಾಲ್ಗಡಲಿನ ; ಧವಳ–ಬೆಳ್ಳಗಿರುವ ; ಮಧುಮಥನನಂ–ಮಧುಸೂದನನನ್ನು, ಕೃಷ್ಣನನ್ನು, ಎತ್ತಲಣ್ಮದೆ–ಎಬ್ಬಿಸಲು ಪ್ರಯತ್ನಿಸದೆ, ಉಸಿರದೆ–ಮಾತಾಡದೆ, ಬಲಿಬಂಧನನ–ಶ್ರೀ ಕೃಷ್ಣನ.

೧೧. ಪವಡಿಸಿದ–ಮಲಗಿದ್ದ, ಅನಂತನ್–ಶ್ರೀಕೃಷ್ಣನು, ಒಸೆದು–ಸಂತೋಷಿಸಿ, ಉಪ್ಪವಡಿಸಿ–ಮೇಲಕ್ಕೆದ್ದು, ತನ್ನೆರಡುಮಡಿಯಂ–ತನ್ನ ಎರಡು ಪಾದಗಳನ್ನು, ಒತ್ತುತ್ತಿರ್ದ – ಅಮುಕುತ್ತಿದ್ದ, ಆಹವವಿಜಯಿಯಪ್ಪ – ಯುದ್ಧದಲ್ಲಿ ಗೆದ್ದವನಾದ, ವಿಜಯನನೆ–ಅರ್ಜುನನನ್ನೇ, ಮುಂ ಕಂಡು–ಮೊದಲು ನೋಡಿ, ಬಳಿಕೆ–ಆಮೇಲೆ, ನೃಪನಂ ಕಂಡಂ–ದುರ್ಯೋಧನನನ್ನು ನೋಡಿದನು.

**ವಚನ** : ಬಂದಂದಮುಮಂ–ಬಂದ ರೀತಿಯನ್ನೂ, ಮನೆವಾರ್ತೆಯುಂ–ಗೃಹ ಕೃತ್ಯವನ್ನು ; ಕೆಯ್ಕೊಂಡು–ಸ್ವೀಕರಿಸಿ ;

೧೨. ಇರ್ವರುಂ–ನೀವಿಬ್ಬರೂ, ಎನಗೆ–ನನಗೆ, ಮನ್ನಣೆಗೆ–ಮರ್ಯಾದೆಗೆ. ಓರನ್ನರೆ–ಸಮಾನರಾದಂಥವರೇ ; ವಿಜಯನನೆ ಮುನ್ನೆ ಕಂಡುದರಿಂದೆ–ಅರ್ಜುನನನ್ನೇ ಮೊದಲು ನೋಡಿದ್ದರಿಂದ, ಆಂ–ನಾನು, ಎನ್ನಂ–ನನ್ನನ್ನು , ಕೊಟ್ಟೆಂ–ಕೊಟ್ಟೆನು ; ಪನ್ನಗಕೇತನ–ದುರ್ಯೋಧನನೇ, ನಿನಗಂ–ನಿನಗೂ, ಚತುರ್ಬಲಂಗಳನಿತ್ತೆಂ–ನನ್ನ ನಾಲ್ಕು ತೆರನಾದ ಸೈನ್ಯಗಳನ್ನು ಕೊಟ್ಟೆನು.

**ವಚನ** : ಮಜ್ಜನ ಭೋಜನಾದಿಗಳೊಳ್–ಸ್ನಾನ ಊಟ ಮುಂತಾದವುಗಳಲ್ಲಿ; ಮಱುದಿವಸಂ–ಮಾರನೆಯ ದಿನ ; ಮಂತ್ರಶಾಲೆಯಂ–ಆಲೋಚನಾಮಂದಿರವನ್ನು.

೧೩. ಇಂದ್ರಿಯಂಗಳ್–ಕಣ್ಣು ಕಿವಿ ಮುಂತಾದ ಪಂಚೇಂದ್ರಿಯಗಳು. ಪ್ರಿಯವಿಷಯಕಾಂಕ್ಷೆಯಿಂದೆ – ತಮಗೆ ಪ್ರಿಯವಾದ ವಸ್ತುಗಳ ಅಪೇಕ್ಷೆಯಿಂದ, ಮನಮುಂ–ಮನಸ್ಸನ್ನು, ಎಯ್ದೆ–ಚೆನ್ನಾಗಿ, ಎಂತು–ಹೇಗೆ, ಆಶ್ರಯಿಸುಗುಂ–ಅವಲಂಬಿ

ಸುತ್ತಪ್ರೊ, ಅಂತು-ಹಾಗೆ, ಅಯನಯಪರರ್ ಅಯ್ವರುಂ-ಶುಭಕರವಾದ ವಿಧಿಗಳಲ್ಲೂ ನೀತಿಯಲ್ಲೂ ಆಸಕ್ತರಾದ ಆ ಐವರೂ, ವಿಷಯಕಾಂಕ್ಷೆಯಿಂ-ರಾಜ್ಯಾಭಿಲಾಷೆಯಿಂದ, ಮುರರಿಪುವಂ-ಶ್ರೀಕೃಷ್ಣನನ್ನು, ಆಶ್ರಯಿಸಿರ್ದರ್-ಅವಲಂಬಿಸಿದ್ದರು.

೧೪. ಧರ್ಮತನಯಂ-ಧರ್ಮಪುತ್ರನು, ಲೋಕಕ್ಕೆ-ಲೋಕದ ಜನರಿಗೆ, ಅರ್ಥಶಾಸ್ತ್ರದ ಟೀಕು-ಅರ್ಥಶಾಸ್ತ್ರದ, ರಾಜನೀತಿಶಾಸ್ತ್ರದ ವ್ಯಾಖ್ಯಾನ, ಎನಿಸಿದ-ಎನ್ನಿಸಿಕೊಂಡ, ತನ್ನನುಡಿ-ತನ್ನ ಮಾತು, ಮನಂಗೊಳಿಸೆ-ಮನವನ್ನು ಅಪಹರಿಸಲು ಎಂದರೆ ರಮಣೀಯವಾಗಲು, ವಳತ್ಕ್ರೋಕನದ ಜಠರನಂ-ಬಿರಿದ ತಾವರೆಯನ್ನು ಹೊಕ್ಕುಳಲ್ಲಿ ಉಳ್ಳ ಶ್ರೀ ಕೃಷ್ಣನನ್ನು, ನಿರ್ವ್ಯಾಕುಳಂ-ಏನೂ ಕ್ಲೇಶವಿಲ್ಲದೆ, ಇಂತೆಂದು-ಹೀಗೆಂದು, ನುಡಿದಂ-ಹೇಳಿದನು.

೧೫. ರಸೆಯೊಳಟ್ಟುದಂ-ಪಾತಾಳದಲ್ಲಿ ಮುಳುಗಿದ್ದುದನ್ನು, ಎಳೆ(ಯಂ)-ಭೂಮಿಯನ್ನು, ಭುಜಬಳದಿಂ – ತೋಳ್ಬಲದಿಂದ,ಮುನ್ನೆ – ಹಿಂದಿನಕಾಲದಲ್ಲಿ, ಎತ್ತಿದಂತೆ – ಉದ್ಧರಿಸಿದಹಾಗೆ, ವಿಷಯಾಂಬುಧಿಯೊಳ್ – ಇಂದ್ರಿಯ ಭೋಗವೆಂಬ ಸಮುದ್ರದಲ್ಲಿ ಅಥವಾ ರಾಜ್ಯವೆಂಬ ಕಡಲಿನಲ್ಲಿ, ಮುೞುಗಿರ್ದ-ಮುಳುಗಿ ಇದ್ದ, ಎಮ್ಮಯ್ವರುಮಂ-ನಮ್ಮ ಐದು ಜನರನ್ನೂ, ಬಲಿಹರ-ಬಲಿಧ್ವಂಸಿಯಾದ ಕೃಷ್ಣನೇ, ಪಿಡಿದು ಎತ್ತಲೆಂದು-ಹಿಡಿದು ಎತ್ತಬೇಕೆಂದು, ಬರವಂ-ಬರುವಿಕೆಯನ್ನು, ಬಂದೈ-ಬಂದಿರುವೆ.

೧೬. ಜಗತೀತ್ರಯಮುಮಂ-ಮೂರು ಲೋಕಗಳನ್ನೂ, ಬಸಿಱೊಳ್-ಹೊಟ್ಟೆಯಲ್ಲಿ, ಒಸೆದು-ಪ್ರೀತಿಸಿ, ಇಟ್ಟು, ಓರಂತೆ-ಕ್ರಮವಾಗಿ, ಕಾದ-ರಕ್ಷಿಸಿದ, ಪೆಂಪಿನ-ಹಿರಿಮೆಯುಳ್ಳ, ನಿಮ್ಮ, ಈ ಬಸಿಱಂ-ಈ ಒಳಗನ್ನು, ಅಂತರಂಗವನ್ನು, ಪೊಕ್ಕ-ಹೊಕ್ಕ, ಎಮ್ಮಯ್ವರಂ-ನಮ್ಮ ಐವರನ್ನೂ, ಅಸುರಕುಳಾಂತಕ-ಕೃಷ್ಣನೇ, ಕಡಂಗಿ-ಉತ್ಸಾಹಿಸಿ, ಕಾವುದು-ರಕ್ಷಿಸುವುದು, ಪಿರಿದೇ-ದೊಡ್ಡದೇ? ಅಲ್ಲವೆಂದು ಭಾವ.

೧೭. ಎನ್ನ ನನ್ನಿಯ ಪೆಂಪು-ನನ್ನ ಸತ್ಯದ ಹಿರಿಮೆ, ನಿನ್ನ ಮಹತ್ವದಿಂದಮೆ-ನಿನ್ನ ಮಹಿಮೆಯಿಂದಲೇ, ಸಂದುದು-ಪ್ರಸಿದ್ಧವಾಯಿತು; ಅದು ಎಂತು ಎನ್ನ-ಅದು ಹೇಗೆ ಎಂದು ಕೇಳುವೆಯೊ? ; ಪನ್ನಗಕೇತನಂಗೆ-ದುರ್ಯೋಧನನಿಗೆ, ಧರಾವಿಭಾಗ ಮನಿತ್ತು-ಭೂಭಾಗವನ್ನು ಒಪ್ಪಿಸಿ, ಸಂಪನ್ನಯೋಗನಿಯೋಗದಿಂದಂ-ಸುಪುಷ್ಟವಾದ ಯೋಗಾಭ್ಯಾಸದಿಂದ, ಅರಣ್ಯದೊಳ್-ಕಾಡಿನಲ್ಲಿ, ನೆಲಸಿರ್ದು-ವಾಸಿಸಿದ್ದು, ಉಣಲ್-ಉಣ್ಣುವುದಕ್ಕೆ, ಬನ್ನ ಮಿಲ್ಲದೆ-ಕೊರತೆಯಿಲ್ಲದೆ, ಬಾೞ್ವುದು-ಬದುಕುವುದು, ಪುೞುವಾನಸಂಗೆ-ಹುಳುವಿನಂಥವನಾದ ನನಗೆ, ಮನುಷ್ಯಕೀಟಕ್ಕೆ, ಅಕ್ಕುಮೇ-ಆಗುತ್ತದೆಯೇ, ಏನ್-ಏನು?

**ವಚನ :** ಈ ಸೂೞು-ಈಸಲ, ಈಬಾರಿ ; ಒಂದು[ಎ]ಡಂಬಡಿಲ್ಲದೆ-ಒಂದೂ ಎಡವಟ್ಟಿಲ್ಲದೆ, ಅಸಮಾಧಾನಕರವಾದ ಒಂದು ಕಾರ್ಯವೂ ಇಲ್ಲದೆ, ನಿಷ್ಕಾರಣವಾಗಿ ;

ನೆವಂಮಾಡಿ-ನೆಪವಾಗಿ ಮಾಡಿಕೊಂಡು, ಪಾಪಕರ್ಮನ-ಪಾಪಕರ್ಮನು ; ಅನುಪಮಂ-ಯುದ್ಧ ; ಅನುಬಲದೊಳಂ-ಸಹಾಯದಲ್ಲೂ ; ಇಂಬುವಂದುದು-ಅನುಕೂಲವಾಯಿತು ; ಎಡಂಬಡು ; ನಡೆಯಿಲ್ಲದ ಕಜ್ಜಮನಕ್ಕೆಡಂಬಡಂ ಮಾಡುಗುಮು...ಯಂ ಮಾಡುಗುಮೇ-ಎಂದು ರನ್ನನ ಪ್ರಯೋಗ (ಅಜಿತ).

೧೮. ಕಾದದೆ – ಯುದ್ಧಮಾಡದೆ, ಪನ್ನಗಧ್ವಜಂ – ದುರ್ಯೋಧನ, ಇಳಾತಳಮಂ-ಭೂಪ್ರದೇಶವನ್ನು, ರಾಜ್ಯವನ್ನು, ಕುಡಂ-ಕೊಡನು, ಆನುಂ-ನಾನುಕೂಡ, ಇರ್ಪುದುಂ-(ಸುಮ್ಮನೆ)ಇರುವುದೂ, ಸೋದರರ್-ಸಹೋದರರು, ಎಂದು-ಎಂಬುದಾಗಿ ನಾಣ್ಚಿ-ಸಂಕೋಚಪಟ್ಟುಕೊಂಡು, ಸೆಡೆದು-ಸೆಡೆತುಕೊಂಡು, ಇರ್ದಪೆನ್-ಇದ್ದೇನೆ ; ಇರ್ದೊಡೆ-ಹಾಗೆ ಇದ್ದರೆ, ಅವಸ್ತು ಭೂತನೆಂದು-ಏನೂ ಆಸ್ತಿ ಇಲ್ಲದವನೆಂದು, ಅಲ್ಪನೆಂದು, ಅವಮೆ-ವಿಶೇಷವಾಗಿಯೆ, ಭೂತಳಂ-ಲೋಕವು, ಪಳಿಯೆ-ನಿಂದಿಸಲು, ತೇಜಮೆ-ತೇಜಸ್ಸೇ, ಕೆಟ್ಟಪುದು-ಕೆಡುತ್ತದೆ ; ಪದ್ಮೋದರ-ಕೃಷ್ಣನೇ, ಇಂತು ಇದರ್ಕೆ-ಹೀಗೆ ಇದಕ್ಕೆ, ಕಜ್ಜಮಂ-ಕಾರ್ಯವನ್ನು, ದಿವ್ಯಚಿತ್ತದಿಂ-ದಿವ್ಯವಾದ ನಿನ್ನ ಮನಸ್ಸಿನಲ್ಲಿ, ಬಗೆದು-ಆಲೋಚಿಸಿ, ನೀನೆ ಪೇಱ್-ನೀನೇ ಹೇಳು.

**ವಚನ**: ಅಂಬುಜೋದರಂ-ಕೃಷ್ಣ ; ನೀರಡಕಲುಂ-ನೀರನ್ನು ತುಂಬಲೂ ; ಸೊಡರಿಡಲುಂ-ದೀಪವನ್ನು ಇಡಲೂ ; ಕಜ್ಜಂ ಬೇೞ್ವುದು=ಕಜ್ಜಮಂ+ಪೇೞ್ವುದು-ಕಾರ್ಯವನ್ನು ಹೇಳುವುದು.

೧೯. ಬೆಸಂ-ಕೆಲಸವು, ಆರ್-ಯಾರು, ಕೊಂಡವೊಲ್-ಯಾವ ಉದ್ದೇಶದಿಂದ ಮಾಡಲು ಎತ್ತಿಕೊಂಡರೋ ಆ ಉದ್ದೇಶ ನೆರವೇರುವಂತೆ, ಅಕ್ಕುಂ-ಆಗುತ್ತದೆ? ಒಂದೆ ನಯಮಂ ಕೇಳ್-ಒಂದೇ ನೀತಿಯನ್ನು ಕೇಳು; ನಿನ್ನ ಮುಂದೀಗಳಾನುಸಿರ್ದಪ್ಪೆಂ-ನಿನ್ನ ಎದುರಿಗೆ ಈಗ ನಾನು ಹೇಳುತ್ತೇನೆ ; ಸಲೆ ಮೆಲ್ಪು ಬಲ್ಪನಱಗುಂ-ಮೃದು ಸ್ವಭಾವ ಗಡುಸಿನ ಸ್ವಭಾವವನ್ನು ಕೆಡಿಸುತ್ತದೆ (Non-violence kills violence) ; ಕೈವಾರಮುಂ ಕೂಡೆ ಕೂರಿಸುಗುಂ-ಹೊಗಳಿಕೆಯೂ ಕೂಡಲೇ ಒಲಿಸುತ್ತದೆ, ನಿಕ್ಕುವಮಪ್ಪ-ನಿಜವಾಗಿರುವ, ಕಾರಣದಿಂ-ಕಾರಣದಿಂದ, ಇಂತು-ಹೀಗೆ, ಈ ಸಾಮಮಂ-ಈ ಸಾಮೋಪಾಯವನ್ನು, ಮುಂ-ಮೊದಲು, ಪ್ರಯೋಗಿಸದೆ-ಆಚರಿಸದೆ, ಏಕೆಟ್ಟಪುದು-ಏನು ನಷ್ಟವಾಗುತ್ತದೆ, ಎಂದು-ಎಂಬುದಾಗಿ, ದಂಡಮನೆ-ದಂಡೋಪಾಯವನ್ನೇ, ಮುಂ-ಮೊದಲು, ಮುಂತಿಕ್ಕುವಂ-ಎದುರಿಗೆ ಒಡ್ಡುವವನು, ಮಂತ್ರಿಯೇ-ಮಂತ್ರಿಯೇನು? ಅಲ್ಲ.

೨೦. ಮುಂ-ಪೂರ್ವಕಾಲದಲ್ಲಿ, ವಾಮನರೂಪದಿಂದಮೆ-ವಾಮನನ ಆಕಾರದಿಂದಲೇ, ಬಲಿಯುಂ – ಬಲಿಚಕ್ರವರ್ತಿಯನ್ನು, ಭೂರಿಭೂತಲಮಂ – ವಿಶಾಲವಾದ ಭೂಮಂಡಲವನ್ನು, ಬೇಡಿದೆಂ-ಯಾಚಿಸಿದೆನು, ವಲಂ-ಅಲ್ಲವೆ? ಎನಗೆ-ನನಗೆ, ಕುಂದು-ಕೊರತೆಯು, ಆಯ್ತೆ-ಆಯಿತೇ? ಇಳೆಯಂ-ಭೂಮಿಯನ್ನು, ಕೊಂಡೆಂ-ತೆಗೆದುಕೊಂಡೆನು ; ದೈತ್ಯನಂ-ರಾಕ್ಷಸನನ್ನು, ಇನ್ನುಂ-ಇನ್ನೂ, ರಸಾತಲದೊಳ್-ಪಾತಾಳ

ದಲ್ಲಿ, ಕಟ್ಟಿಟ್ಟೆಂ-ಕಟ್ಟಿ ಹಾಕಿಪ್ಪೇನೆ: ಅಂತೆ-ಹಾಗೆಯೇ, ನೀನುಂ-ನೀನು ಕೂಡ, ಇಳೆಯಂ-ಭೂಮಿಯನ್ನು, ಮುಂ-ಮೊದಲು, ಬೇಡಿ-ಬಯಸಿ, ಅಟ್ಟಿಟ್ಟಿ-ದೂತನನ್ನು ಕಳುಹಿಸಲು, ಆತಂ-ಅವನು; ದುರ್ಯೋಧನ, ಮಾರ್ಮಲೆದು-ಪ್ರತಿಯಾಗಿ ಉದ್ಧತ ನಾಗಿ, ಕಂಡದಿರ್ದೊಡೆ-ಕೊಡದೆ ಇದ್ದರೆ, ಅಂದು-ಆಗ, ಲೋಕಂ-ಲೋಕದ ಜನ, ಗುಣಂಗೊಳ್ವಿನಂ-ಗುಣ ಗ್ರಹಣವನ್ನು ಮಾಡುತ್ತಿರಲು, ನೀಂ-ನೀನು, ಇಱಿಯು-ಯುದ್ಧಮಾಡು.

**ವಚನ:** ಪುಂಡರಥರನ-ಕೃಷ್ಣನ; ಕಿಸಿಸಿ-ಕೆರಳಿ; ಕಿಂಕಿರಿವೋಗಿ-ಅಸಹನೆ ಯನ್ನು ಹೊಂದಿ, ದ್ವೇಷದಿಂದ ಕೂಡಿ; (ತೆಲುಗು) ಕಿಂಕಿರಿ, ಕಿಂಕಿರಿಪಡು, ಕಿಂಕಿರಿ ಪಾಟು-ಕೋಪ, ಅಸಹನೆ, ದ್ವೇಷ.

೨೧. ಅಜಾತ-ಹುಟ್ಟಿಲ್ಲದವನೇ, ಕೃಷ್ಣನೇ, ನಿಜಮತಮಂ-ನಿನ್ನ ಅಭಿಪ್ರಾಯ ವನ್ನು, ಮೀಱಲ್ಕೆ-ಮೀರುವುದಕ್ಕೆ, ಎನಗೆ-ನನಗೆ, ದೊರೆಯಲ್ಲಂ-ಸರಿಯಲ್ಲ; ಅಲ್ಲ ದಿರ್ದೊಡಂ-ಸರಿಯಲ್ಲದಿದ್ದರೂ, ಅಹಿಧ್ವಜಂ-ಸರ್ಪಧ್ವಜನಾದ ದುರ್ಯೋಧನನು, ಓವದೆ-ಕಾಪಾಡದೆ, ಮುನ್ನೆ-ಮೊದಲು, ನೆಗಟ್ಟಿ-ಮಾಡಿದ, ದುಶ್ಚರಿತಂಗಳ್-ಕೆಟ್ಟ ಕೆಲಸಗಳು, ಎನ್ನಿಂದೆ-ನನ್ನಿಂದ, ಅಜನಿಸಿ-ತಿರಸ್ಕರಿಸುವಂತೆ, ನುಡಿಯಿಸಿದುವು-ಮಾತಾಡಿಸಿದುವು. ಇಲ್ಲಿ ಅಜನಿಸು ಶಬ್ದಕ್ಕೆ ಅರ್ಥ ಸ್ಪಷ್ಟ ಅನಿರ್ದಿಷ್ಟ. ರೂಪಂ ಸ್ಮರಾಕಾರಮನಜನಿಸೆ, ಸಮುದ್ರಘೋಷಮನಜನಿಸುವ-ಎಂಬ ಬೇರೆ ಪ್ರಯೋಗಗಳಲ್ಲಿ ಕೀಳ್ಮಾಡು, ಕಡೆಗಣಿಸು, ತಿರಸ್ಕರಿಸು ಎಂಬರ್ಥಗಳೆಂದು ಊಹಿಸಬಹುದು.

೨೨. ಆ ಲಾಕ್ಷಾಗೃಹದಾಹಮೊಂದೆ-ಆ ಅರಗಿನ ಮನೆಯಲ್ಲಿ ಸುಡುವುದು ಒಂದೆಯೇ, ವಿಷಸಂಯುಕ್ತಾನ್ನಮಂತೊಂದೆ - ವಿಷದಿಂದ ಕೂಡಿದ ಆಹಾರವನ್ನು ಊಡುವುದು ಒಂದೆಯೇ; ಪಾಂಚಾಳೀ ನಿಗ್ರಹಮೊಂದೆ-ದ್ರೌಪದಿಯನ್ನು ಅವಮಾನ ಮಾಡಿದ್ದು ಒಂದೆಯೇ; ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ-ಮೋಸದ ವಿಧಾನದಿಂದ ಗೆದ್ದಿರುವ ಆ ಜೂಜು ಒಂದೆಯೇ; ಶಾರ್ದೂಲಾಭೀಲ ವನಂಗಳೊಳ್-ಹುಲಿಗಳಿಂದ ಭಯಂಕರವಾದ ಕಾಡುಗಳಲ್ಲಿ, ತಿರಿಸಿದ-ಅಲೆದಾಡಿಸಿದ, ಈ ಯುರ್ಜ ಒಂದೆ-ಈ ಕೊಬ್ಬು, ಅಹಂಕಾರ ಒಂದೆಯೋ? ಲೆಕ್ಕಂಗೊಳಲ್-ಒಂದೇ ಎರಡೇ ಎಂದು ಲೆಕ್ಕ ಮಾಡಲು, ಕಾಲಂ ಸಾಲದೆ-ಕಾಲವು ಸಾಕಾಗುವುದಿಲ್ಲವಲ್ಲ; ಕಂಡುಂ-ನೋಡಿಯೂ, ಉಂಡುಂ ಅನುಭವಿಸಿಯೂ, ಎಮಗೆ-ನಮಗೆ, ಇನ್-ಇನ್ನು, ಆತಂಗಳೊಳ್-ಆ ಕೌರವರಲ್ಲಿ, ಪಾಟಿಯೇ-ಧರ್ಮವೇ, ಕ್ರಮವೇ?

೨೩. ಜಟಮುಟಿಸಿಕೊಂಡು-ಸಡಗರದಿಂದ ಕೂಡಿ, ನಿಮ್ಮ-ನೀವು, ಕೌರವರ್ಕಳೊಳ್-ಕೌರವರಲ್ಲಿ, ಈ ಘಟೆಯಿಸುವ-ಇಗೋ ಉಂಟುಮಾಡಲಿರುವ, ಈ ಸಂಧಿ-ಈ ಸಂಧಿಕಾರ್ಯವು, ಘಟಿತ....ಸಂಧಿವೊಲ್; ಘಟಿತ-ಸೇರಿರುವ, ಜರಾಸಂಧ-ಜರಾಸಂಧನ, ಉರಸ್ತಟ-ಎದೆಯ ಪ್ರದೇಶದ, ಸಂಧಿವೊಲ್-ಜೋಡಣೆಯ ಹಾಗೆ, ಒಂದೆಪ್ರೊಬ್ಬಿಱಕೊಳ್-ಒಂದೇ ಹಗಲಲ್ಲಿ, ಎನ್ನಿಂ-ನನ್ನಿಂದ, ವಿಘಟಿಸದೇ-ಭಿನ್ನ ವಾಗುವುದಿಲ್ಲವೆ, ಮುರಿದುಹೋಗದೆ;

ಇಲ್ಲಿ ಜಟಮಟಿಸಿಕೊಳ್ ಎಂಬದರ ಅರ್ಥವಿಚಾರಣೀಯ; ಜಟಮಟಶಬ್ದದಿಂದ ಬಂದಿರುವ ಜಟಮಟಿಕರ್ ಎಂಬುದಕ್ಕೆ, "ಪಟವಿದೆ ಸಾಲ್ಗುಮನ್ಯಭವವಲ್ಲಭನಂ ಪಟವಿದ್ಯೆಯೆತ್ತಲುಂ ಜಟಮಟಿಕರ್ಕಳಂ ತೊಡರೆ ಸುತ್ತಲುಂ" ಎಂದು ಪ್ರಯೋಗವಿದೆ. (ಆದಿಪು ೩-೪೫); ಈ ಪದ್ಯಕ್ಕೆ ಸಂವಾದಿಯಾದ ಪದ್ಯ ಜಿನಸೇನರ ಪೂರ್ವಪುರಾಣದಲ್ಲಿ "ಕ್ವಚಿತ್ಕಿಂಚಿನ್ನಿಗೂಢಾಂತಃ ಪ್ರಕೃತಂ ಚಿತ್ರರಂಜನಂ ತದ್ಪ್ರಜಾದಾಯ ಧೂರ್ತಾನಾಂ ಮನಸ್ಸಂಮೋಹಕಾರಣಂ (೬-೧೭೧); ಇಲ್ಲಿರುವ ಧೂರ್ತಾನಾಂ ಎಂಬುದು ಜಟಮಟಿಕರ್ ಎಂಬುದಕ್ಕೆ ಸಮಾನಾರ್ಥಕವಾಗಿರಬಹುದು, ಮೋಸಗಾರ, ವಂಚಕ, ನಟನೆಮಾಡುವವನು ಎಂಬರ್ಥ ಜಟಮಟಿಕ ಶಬ್ದಕ್ಕಿರಬಹುದು. ಪ್ರಕೃತ ಪದ್ಯಕ್ಕೆ ಈ ಅರ್ಥ ಹೊಂದಲಾರದೇನೋ? ಜಟಮಟಿಸು > ಜಟಮಟ + ಇಸು; ಜಟಮಟಿಕ < ಜಟಮಟ + ಇಕ.

೨೪. ಒರ್ವನ-ಒಬ್ಬನ. (ದುಶ್ಯಾಸನನ) [ಉ]ಳ್ಗರುಳಂ-ಒಳಕರುಳನ್ನು, ಉರ್ವಿಗೆ-ನೆಲಕ್ಕೆ (ಬೀಳುವಂತೆ), ತೋಡುವೆಂ-ಬಗಿಯುತ್ತೇನೆ; ನೆತ್ತರಂ-ರಕ್ತವನ್ನು, ಎಯ್ದೆ ಪೀರ್ದು-ಚೆನ್ನಾಗಿ ಹೀರಿ, ಪಿರ್ಯಾಡುವೆಂ-ಔತಣ ಮಾಡುತ್ತೇನೆ; ಒರ್ವನ-ಒಬ್ಬನ (ದುರ್ಯೋಧನನ), ಊರುಗಳಂ-ತೊಡೆಗಳನ್ನು, ಎನ್ನ-ನನ್ನ, ಗದಾಶನಿಘಾತದಿಂದೆ-ಗದೆಯೆಂಬ ಸಿಡಿಲಿನ ಹೊಡೆತದಿಂದ, ನುಗ್ಗಾಡುವೆಂ-ನುಗ್ಗಿಬಿಡುತ್ತೇನೆ. ಚೂರಾಗಿಸುತ್ತೇನೆ; ಎಂದು-ಎಂಬುದಾಗಿ, ಲೋಕಮಱಿಯುತ್ತಿರೆ-ಲೋಕವೆಲ್ಲ ತಿಳಿಯುತ್ತಿರಲು, ಪೂಣ್ದು-ಪ್ರತಿಜ್ಞೆ ಮಾಡಿದ, ಎನಗೆ-ನನಗೆ, ಅಂತೆ-ಹಾಗೆ, ಸಂತಸಂ ಮಾಡದೆ-ಸಂತೋಷವನ್ನು ಮಾಡದೆ, ಸಂಧಿಮಾಡಿ-ರಾಜಿಮಾಡಿಕೊಂಡು, ಕುರುಪುತ್ರರೊಳ್-ಕೌರವರಲ್ಲಿ, ಎನ್ನನ್ನೆ-ನನ್ನನ್ನೇ, ಜೋಡುಮಾೞ್ಪಿರೇ-ಜೋಡಿಯಾಗಿಸುತ್ತೀರಾ?

**ವಚನ**: ಮಸಗಿದ-ವಿಜೃಂಭಿಸಿದ; ಮದಾಂಧಗಂಧ ಸಿಂಧುರದಂತೆ-ಮದದಿಂದ ಕಣ್ಕಾಣದ ಸೊಕ್ಕಾನೆಯಂತೆ,

**೨೫.** ಬಕ........ರ್ಕಳಂ: ಬಕ, ಕಿರ್ಮೀರ, ಜಟಾಸುರ, ಉದ್ಧತ-ಗರ್ವಿಷ್ಠರಾದ, ಜರಾಸಂಧರ್ಕಳಂ-ಜರಾಸಂಧರನ್ನೂ, ಸಂದ-ಪ್ರಸಿದ್ಧರಾದ, ನೂರ್ವರುಮಂ ಕೀಚಕರಂ-ನೂರು ಜನ ಕೀಚಕರನ್ನೂ, ಪಡಲ್ವಡಿಸಿದ-ಬೀಳುವಂತೆ ಮಾಡಿದ, ಕೊಂದ; ತ್ವಚ್ಚಂಡದೋರ್ದಂಡಂ-ನಿನ್ನ ತೀಕ್ಷ್ಣವಾದ ಬಾಹುದಂಡಗಳು- ಉಗ್ರ... ಕರಮಂ: ಉಗ್ರಭಯಂಕರರಾದ,ಕುರುಕ್ಷ್ಮಾಜ-ಕುರುರಾಜರೆಂಬ,ಮಹೀರುಹ-ಮರಗಳ,ಪ್ರಕರಮಂ ಸಮೂಹವನ್ನು, ಮತ್ತೇಭವಿಕ್ರೀಡಿತಕ್ಕೆ-ಸೊಕ್ಕಾನೆಯ ಕೇಳಿಗೆ, ಕರಂ-ವಿಶೇಷವಾಗಿ, ಪೋಲ್ಗೆಗೆವಂದು-ಹೋಲಿಕೆಗೆ ಬಂದು, ಭೀಮ-ಭೀಮಸೇನನೇ, ರಣದೊಳ್-ಯುದ್ಧದಲ್ಲಿ ನುಗ್ಗಾಡದೆ-ನುಗ್ಗು ನುರಿಮಾಡದೆ, ಪೋಕುಮೇ-ಹೋಗುತ್ತದೆಯೇ, ಏಂ-ಏನು?

ಇಲ್ಲಿ ವೃತ್ತದ ಹೆಸರು 'ಮತ್ತೇಭವಿಕ್ರೀಡಿತ' ಎಂಬುದನ್ನು ಪದ್ಯದಲ್ಲೇ ಹೇಳಿರುವುದರಿಂದ ಇದು ಮುದ್ರಾಲಂಕಾರ.

**ವಚನ**: ಅಱೆ ನುಡಿದು-ಸಮಾಧಾನವಾಗುವಂತೆ ಮಾತಾಡಿ, ನಿಶ್ಚಿತಕಾರ್ಯಮಂ-ನಿಶ್ಚಯಿಸಲ್ಪಟ್ಟ ಕಾರ್ಯವನ್ನು; ಅನುಷ್ಠಿಸಲೆಂದು-ಮಾಡಬೇಕೆಂದು.

೨೬. ಅವನೀನಾಥನ–ರಾಜನಾದ ದುರ್ಯೋಧನನು, ಗೆಯ್ದು–ಮಾಡಿದ, ಪೊಲ್ಲಮೆಗಂ–ಕೇಡಿಗೂ, ಎನ್ನ–ನನ್ನ, ಒಳ್ಪಿಂಗಂ–ಒಳ್ಳೆಯತನಕ್ಕೂ, ನೀಂ–ನೀನು: ಸಕ್ಕಿಯಾಗಿ – ಸಾಕ್ಷಿಯಾಗಿ, ಅವನ್ – ಅವನು. ಈವಂತುಟಂ – ಕೊಡುವಷ್ಟನ್ನು, ಈಯದಂತುಟಂ–ಕೊಡದಿರುವಷ್ಟನ್ನು, ಅದಂ–ಅದನ್ನು, ನೀಂ–ನೀನು, ಬಲ್ಲಂತೆ–ತಿಳಿದಹಾಗೆ, ಕಾಲ್ಗುತ್ತಿ–ಕಾಲಿನಿಂದ ಕುಕ್ಕಿ ಎಂದರೆ ಜಿದಕಿ, ಪರೀಕ್ಷಿಸಿ; ನೋಡು; ಅವನೀ ಭಾಗದೊಳ್–ಭೂಭಾಗದಲ್ಲಿ, ಎನ್ನಭಾಗಮುಂ–ನನ್ನ ಪಾಲನ್ನು, ಅದಂ–ಅದನ್ನು, ತಾನ್-ಅವನು, ಈಯದಿರ್ದಾಗಳ್-ಕೊಡದೆ ಇದ್ದಾಗ, ಎನ್ನ-ನನ್ನ,ಅವನೀ ರಕ್ಷಣದಕ್ಷ ದಕ್ಷಿಣ ಭುಜಸ್ತಂಭಂ–ಭೂಮಿಯನ್ನು ರಕ್ಷಿಸುವುದರಲ್ಲಿ ಸಮರ್ಥವಾದ ಕಂಬದಂತಿರುವ ಬಲಭುಜವು, ಕೊಲಲ್–ಕೊಲ್ಲಲು, ಸಾಲದೇ–ಸಾಕಾಗದೇ? ಸಾಕು ಎಂಬ ಭಾವ.

**ವಚನ:** ರಾಜರಾಜನಲ್ಲಿಗೆ–ದುರ್ಯೋಧನನಲ್ಲಿಗೆ ; ನಿರ್ವ್ಯಾಜದಿಂ–ನಿಷ್ಕಪಟತೆಯಿಂದ; ಅಜಿತನನೆ–ಕೃಷ್ಣನನ್ನೇ: ಅಸುರ ವಿಜಯಿಯುಂ–ರಾಕ್ಷಸರನ್ನು ಗೆದ್ದವ, ಕೃಷ್ಣನು ಕೂಡ; ಕತಿಪಯ – ಕೆಲವು; ಮದಗಜೇಂದ್ರಪುರಮಂ – ಹಸ್ತಿನಾವತೀ ನಗರವನ್ನು.

೨೭. ತುರಂಗಮ ಹೇಷಿತ ಘೋಷದೊಳ್–ಕುದುರೆಗಳ ಹೇಷಾರವದಲ್ಲಿ, ಪೊದಳ್ದು–ಬೆರಸಿ, ವ್ಯಾಪಿಸಿ, ಮದಗಜಬೃಂಹಿತ ಧ್ವನಿ–ಸೊಕ್ಕಾನೆಗಳ ಘೀಂಕಾರ ಶಬ್ದ, ಒದವೆ- ಉಂಟಾಗಲು ; ಗಭೀರಧೀರ ಮುರಜಧ್ವನಿ–ಮದ್ದಲೆಗಳ ಗಾಢವೂ ಸ್ಥಿರವೂ ಆದ ನಾದವು, ಯೌವನ ಮತ್ತಕಾಮಿನೀ ಮೃದುಪದನೂಪುರಕ್ವಣಿತದೊಳ್–ಪ್ರಾಯದಿಂದ ಮದಿಸಿದ ಸ್ತ್ರೀಯರ ಮೃದುವಾದ ಪಾದಗಳ ಅಂದಿಗೆಯ ಶಬ್ದದಲ್ಲಿ, ಪೆಣೆದು–ಹೆಣೆದುಕೊಂಡು, ಒಂದಿರೆ–ಬೆರಸಿರಲು, ಪೊಟಿಲ್–ಪಟ್ಟಣವು, ಸುರಾದ್ರಿ–ಮಂದರ ಪರ್ವತದಿಂದ, ಮಥಿತ–ಕಡೆಯಲ್ಪಟ್ಟ, ಅಂಬುಧಿ–ಸಮುದ್ರದಲ್ಲಿ, ಜಾತ-ಹುಟ್ಟಿದ, ನಿನಾದ–ಶಬ್ದದ, ಶಂಕೆಯಂ–ಸಂದೇಹವನ್ನು, ಚಕ್ರಿಗೆ–ಶ್ರೀ ಕೃಷ್ಣನಿಗೆ ಉಂಟುಮಾಡಿದುದು–ಉಂಟುಮಾಡಿತು.

**ವಚನ:** ನಾಗಪುರಮಂ – ಆದಿಶೇಷನ ನಗರವಾದ ಭೋಗಾವತಿಯನ್ನು ; ಇಳಿಸುವ–ಕಡೆಗಣಿಸುವ ; ನಾಗಪುರಮಂ–ಹಸ್ತಿನಾವತಿಯನ್ನು ; ನಾಗಶಯನಂ–ಶ್ರೀ ಕೃಷ್ಣನು ; ವರೆ–ಬರಲು ; ಕುಶಲವಾರ್ತೆಯಂ–ಕ್ಷೇಮಸಮಾಚಾರವನ್ನು : ಅಜನಂ–ಕೃಷ್ಣನನ್ನು.

೨೮. ತೀವಿದ ಮಜ್ಜನದಿಂ–ತುಂಬಿದ ಸ್ನಾನದಿಂದ, ಎಂದರೆ ಪುಷ್ಕಲವಾದ ಸ್ನಾನದಿಂದ ; ಸದ್ಭಾವದಿಂ–ಒಳ್ಳೆಯ ಮನಸ್ಸಿನಿಂದ, ಒಸೆದು–ಪ್ರೀತಿಸಿ, ಎತ್ತಿದ–ಬಡಿಸಿದ, ಒಂದು ಬೋನದೊಳಂ–ಒಂದು ಭೋಜನದಲ್ಲಿಯೂ, ನಾನಾ ವಿಧದ–ನಾನಾ ಬಗೆಯಾದ, ಪಡೆಪಿನೊಳ್–ಇಷ್ಟಾರ್ಥಗಳಲ್ಲಿ, ಹರಿಗೆ–ಕೃಷ್ಣನಿಗೆ, ಪಥಪರಿಶ್ರಮವೆಲ್ಲಂ–ಮಾರ್ಗಾಯಾಸವೆಲ್ಲ, ಅವಗಂ–ಪೂರ್ತಿಯಾಗಿ, ಆಱಿದುದು–ಶಮನವಾಯಿತು.

**ವಚನ** :- ಉಚಿತ ಪ್ರತಿಪತ್ತಿಗಳಿಂ-ಯೋಗ್ಯಮರ್ಯಾದೆಗಳಿಂದ ; ಉಜಡೆ-ಇರದೆ ; ಮಣಿ ......ಸೀನನುಂ : ಮಣಿಮಯೂಖ-ರತ್ನಗಳ ಕಿರಣಗಳಿಂದ, ವಿಜೃಂಭಮಾಣ-ಮೆರೆಯುತ್ತಿರುವ, ಆಖಂಡಳ-ಇಂದ್ರನ, ವಿಳಂಬಿತ-ಉದ್ದವಾದ, ಆಭೀಳ-ಭಯಂಕರವಾದ, ಕೋದಂಡ-ಬಿಲ್ಲಿನ, ವಿಳಾಸವಿಭ್ರಮ-ಸೊಗಸಿನ ಆಧಿಕ್ಯದಿಂದಕೂಡಿದ, ಸಿಂಹಾಸನಾ-ಸಿಂಹಾಸನದಲ್ಲಿ, ಆಸೀನನುಂ-ಕುಳಿತಿರುವವನೂ : ಪ್ರಮದಾ-ಸ್ತ್ರೀಯರ, ಹಸ್ತ-ಕೈಗಳಲ್ಲಿ, ವಿನ್ಯಸ್ತ-ಇಡಲ್ಪಟ್ಟ, ವಾಮಕ್ರಮ ಕಮಳನುಂ-ಎಡಪಾದದ ಕಮಲವುಳ್ಳವನೂ ; ಅನ........ಸ್ಥಳನುಂ ; ಅನವರತಸ್ಫುರಿತ-ಯಾವಾಗಲೂ ಹೊಳೆಯುತ್ತಿರುವ, ತಾರಕಾಕಾರ-ನಕ್ಷತ್ರದ ಆಕಾರವನ್ನುಳ್ಳ, ಮುಕ್ತಾಭರಣ-ಮುತ್ತಿನ ತೊಡಿಗೆಗಳ, ಕಿರಣ-ಕಿರಣಗಳ, ನಿಕರ-ಸಮೂಹದಿಂದ, ವಿಳಸಿತ-ಪ್ರಕಾಶಮಾನವಾದ, ಉರಸ್ಥಳನುಂ-ಎದೆಯ ಪ್ರದೇಶವುಳ್ಳವನೂ ; ಮಂಜರೀಜಾಳಪಲ್ಲವಿತ-ಗೊಂಚಲಿನ ಸಮೂಹದಿಂದ ಚಿಗುರಿದ ; ಎಡೆವಱಿಯದೆ-ನಡುವೆ ವಿಚ್ಛೇದವಾಗದೆ ; ಪ್ರತಿಪತ್ತಿಗಳಂ-ಗೌರವ ಮರ್ಯಾದೆಗಳನ್ನು: ಇಕ್ಕಿದ-ಹಾಕಿದ, ಲೋಹಾಸನಂಗಳೊಳಂ-ಲೋಹಾಸನಗಳಲ್ಲಿಯೂ ; ಲೋಹಾಸನ-ಒಂದು ಬಗೆಯಾದ ಪೀಠ ; ಪಂಚಭಿಃ ಸಪ್ತಭಿರ್ವಾಪಿ ನವಭಿರ್ಲೋಹಜೈಃಪದೈಃ, ಲೋಹಪಟ್ಟಕೃತಾಧಾರೈ ರ್ಲೋಹಜಾಲಕ ಮೂರ್ಧನಿ || ಛದಿಕಾ ಪಟ್ಟಗರ್ಭಸ್ಥಂ ಕಾರ್ಪಾಸೇನ ವಿಮಿಶ್ರಿತಂ, ಲೋಹಾಸನಮಿದಂ ಪ್ರೋಕ್ತಂ” ಎಂದು ಇದರ ವರ್ಣನೆ ; ಐದು, ಏಳು ಅಥವಾ ಒಂಬತ್ತು ಕಾಲುಗಳುಳ್ಳ, ಲೋಹದ ಹಲಗೆಯ ಆಸನವನ್ನುಳ್ಳ, ಮೇಲುಗಡೆ ಲೋಹದ ಜಾಲರಿಯನ್ನುಳ್ಳ, ಹತ್ತಿ ಮತ್ತು ರೇಷ್ಮೆಯಿಂದ ತುಂಬಿದ ಮೆತ್ತೆಯನ್ನುಳ್ಳ, ಒಳ್ಳೆ ಹೊದಿಕೆಯನ್ನುಳ್ಳ ಆಸನ ; “ಆತನುಂ ಪಿರಿಯ ಲೋಹಾಸನಮೇಱಿ” (ವಡ್ಡಾ. ೭. ೧೩) ; ಪುಳಿನದ ಲೋಹಾಸನಂಗಳೊಳ್ ನೆರ್ಮಿರ್ದರ್ (ಆದಿಪು ೧೧-೩೬) ; ನಿಜಸಭಾಭ್ಯಂತರ ಲೋಹಾಸನಾರೂಢಂ (ಸುಕುಮಾ ೪-೨೩೧)-ಎಂಬಿವು ಇತರ ಪ್ರಯೋಗಗಳು ; ಬೊಂದರಿಗೆಯೊಳಂ-ಮೆತ್ತೆ, ತಿವಾಸಿ (ಪಂಪಭಾ, ಕೋಶ) ಎಂದು ಅರ್ಥ ಹೇಳಿದೆ ; ಪಂಪಭಾ ೪-೪೩ರಲ್ಲೂ ಚಿನ್ನದ ಬೊಂದರಿಗೆ ಎಂದಿದೆ; ಇದು ಬಹುಶಃ ಚೀನದ-ರೇಷ್ಮೆಯ ಎಂಬುವುದಕ್ಕೆ ಅಪಪಾಠವಿರಬೇಕು ; ಪಂಪಭಾ ೧೪-೨೪ರಲ್ಲಿ ‘ಸಾರ್ಚಿದ ಲೋಹಾಸನದೊಳಮರ್ಚಿದ ಬೊಂದರಿಗೆ’ ಎಂದಿರುವುದರಿಂದ ಲೋಹಾಸನಕ್ಕೆ ಹಾಕಿದ ಬೊಂದರಿಗೆ ಎಂದರೆ, ಮೆತ್ತೆ, ತಿವಾಸಿ ಎಂಬರ್ಥ ತಕ್ಕುದಾಗಿದೆ ; ಆದಿಪು ೧೧-೭೮ರಲ್ಲಿ “ಮಲಂಗಿದರ್ ಪೊಳೆವ ತಳಿರ ಬೊಂದರಿಗೆಗಳೊಳ್” ಎಂಬಲ್ಲಿ ಚಿಗುರಿನಿಂದ ಮಾಡಿದ ಮೆತ್ತೆ ಎಂದರ್ಥವಾಗುತ್ತದೆ ; ಎಡೆಯಱಿದು-ಅವರವರಿಗೆ ತಕ್ಕ ಸ್ಥಾನವನ್ನು ತಿಳಿದು ; ಅಣುಗಾಳ್-ಪ್ರೀತಿಗೆ ಆಸ್ಪದನಾದ ಮನುಷ್ಯ, ಆಪ್ತ ;

**೨೯.** ನನೆಯಂಬಂ – ಮನ್ಮಥನು, ಮಸೆದನ್ನರಪ್ಪ – ಸಾಣೆ ಹಿಡಿದಂಥವರಾದ, ಪಲರೊಳ್ವೆಂಡಿರ್ – ಹಲವರು ಉತ್ತಮ ಸ್ತ್ರೀಯರು, ಮನಂಗೊಂಡು – ಮನಸ್ಸನ್ನು ಅಪಹರಿಸಿ, ಒಜಿಲ್ವಿನಂ – ಸ್ನೇಹಭಾವವನ್ನು ತೋರಿಸುತ್ತಿರಲು, ಪಾಡೆ – ಹಾಡಲು,

ಜೇನಮುೞಿ ಕೊಂಡಂತಪ್ಪ–ಜೇನಿನ ಮಳೆ ಸುರಿದಹಾಗಿರುವ, ಗೇಯಂ–ಸಂಗೀತವು ; ಎತ್ತಂ ಕೊಳೆ – ಎಲ್ಲೆಲ್ಲಿಯೂ ವ್ಯಾಪಿಸಲು, ಮನಕ್ಕೆ–ಮನಸ್ಸಿಗೆ, ನೆಲಕ್ಕೆ–ಆಸ್ಥಾನ ಭೂಮಿಗೆ, ಇಟ್ಟಳವಾಗೆ – ರಮಣೀಯವಾಗಲು, ಸಂದ ರಥಿಕರ್ - ಪ್ರಸಿದ್ಧರಾದ ರಥಾರೋಹಕರು, ಕಣ್ಗೊಳ್ಪಿನಂ - ಕಣ್ಣನ್ನು ಸೆಳೆಯುತ್ತಿರಲು, ತತ್ಸುಯೋಧನನ– ಆ ದುರ್ಯೋಧನನ, ಒಡ್ಡೋಲಗಂ–ಆಸ್ಥಾನ ಸಭೆಯು, ಇಂದ್ರನ, ಓಲಗಮುಮಂ– ಆಸ್ಥಾನವನ್ನೂ, ಕೀೞ್ಮಾಡಿ-ಕಡೆಗಣಿಸಿ, ಕಣ್ಗೊಪ್ಪುಗುಂ-ಕಣ್ಣಿಗೆ ಶೋಭಾಕರವಾಗಿದೆ.

ವಚನ : ಮುನ್ನಮೆ–ಮೊದಲೇ ; ಪಡಿಯಱಂ–ದ್ವಾರಪಾಲಕನು.

೩೦. ಲೋಕಗುರು–ಲೋಕಕ್ಕೆ ಗುರುವಾದ, ಶಂಕಚಕ್ರಗದಾಕರಂ–ಶಂಖಚಕ್ರ ಗದೆಗಳನ್ನು ಕೈಯಲ್ಲಿ ಉಳ್ಳ, ಅತಿಶಯಚತುರ್ಭುಜಂ–ಅತಿಶಯವಾದ ನಾಲ್ಕು ತೋಳು ಗಳನ್ನುಳ್ಳ ಶ್ರೀಕೃಷ್ಣನು, ಜನಜನಿತ ವ್ಯಾಕುಳದೆ–ಎಲ್ಲರಿಗೂ ತಿಳಿದ, ಪ್ರಸಿದ್ಧವಾದ ಹಂಬಲದಿಂದ, ಬಂದನೆಂದೊಡೆ – ಬಂದನೆಂದರೆ, ಇನ್ – ಇನ್ನು, ಲೋಕದೊಳ್– ಲೋಕದಲ್ಲಿ, ಎನ್ನ – ನನ್ನ, ದೊರೆಗೆ – ಸಾಟಿಗೆ, ಪಿರಿಯರುಂ – ದೊಡ್ಡವರಾದವರೂ, ಒಳರೇ–ಇದ್ದಾರೆಯೇ?

ವಚನ : ತನ್ನಬೆಸಸನೆ ಪಾರ್ದು–ತನ್ನ ಅಪ್ಪಣೆಯನ್ನೇ ಎದುರು ನೋಡುತ್ತ, ಮಹಾ ಪ್ರತೀಹಾರನ–ಮಹಾದ್ವಾರಪಾಲಕನ ;

೩೧. ಬರವೇೞ್ ಎಂಬುದುಂ–ಬರಲುಹೇಳು ಎನ್ನುತ್ತಲೂ, ಅಂಜನಾಚಲದ ವೊಲ್–ಅಂಜನದ ಪರ್ವತದಹಾಗೆ, ಕಣ್ಗೊಪ್ಪಿ ಬರ್ಪ–ಕಣ್ಣಿಗೆ ಸೊಗಸಾಗುವಂತೆ ಬರುವ, ಅಂಬುಜೋದರನಂ – ಶ್ರೀಕೃಷ್ಣನನ್ನು, ಮೆಲ್ಲನೆ ನೋಡಿ – ಮೆಲ್ಲನೆ ನೋಡಿ, ಮೈಯಲಸಿದಂತೆ – ದೇಹಾಯಾಸವಾದಹಾಗೆ, ಕೇಸರಿಪೀಠಾಗ್ರದಿಂ -- ಸಿಂಹಾಸನದ ಮೇಲಿಂದ, ಎಂತಾನುಂ-ಹೇಗಾದರೂ, ಎೞ್ದು–ಎದ್ದು ನಿಂತು, ಅಪ್ಪಿಕೊಂಡು–ಆಲಿಂಗಿಸಿ, ಪೊಡೆವಟ್ಟು – ನಮಸ್ಕರಿಸಿ, ಉಚ್ಚಾಸೀನನಾಗಿ – ಎತ್ತರವಾದ ಪೀಠದಮೇಲೆ ಕುಳಿತವನಾಗಿ, ಇರವೇೞ್ದು–ಇರುವಂತೆ ಹೇಳಿ, ಅರ್ಘ್ಯಮನಿತ್ತು-ಪೂಜೆಯನ್ನು ಮಾಡಿ, ದುರ್ಯೋಧನಂ–ದುರ್ಯೋಧನನು, ಅನಂತರಮೆ–ಆಮೇಲೆಯೇ, ಆ ಬಳಿಕವೇ, ತಾಂ– ತಾನು, ಕುಳ್ಳಿರ್ದು–ಕುಳಿತುಕೊಂಡು ಇದ್ದು.

ವಚನ : ಮಧುಕೈಟಭಾರಾತಿಯ–ಮಧುಕೈಟಭರೆಂಬ ರಾಕ್ಷಸರ ವೈರಿಯಾದ ಶ್ರೀಕೃಷ್ಣನ.

೩೨. ಕಂಸಾರಿ–ಶ್ರೀಕೃಷ್ಣನೇ, ನೀಂಬರೆ–ನೀನು ಬರಲು, ಸಂಸಾರದೊಳ್– ಲೋಕಜೀವನದಲ್ಲಿ ಅಥವಾ ಪ್ರಪಂಚದಲ್ಲಿ, ಇನ್–ಇನ್ನು, ಎನ್ನವೊಲ್–ನನ್ನ ಹಾಗೆ, ಸೈಪಂ–ಪುಣ್ಯವನ್ನು, ಪಡೆದರ್–ಪಡೆದವರು, ಒಳರೇ–ಇದ್ದಾರೆಯೇ? ಪೆಱತೇಂ– ಬೇರೇನು? ಆಂ–ನಾನು, ಯುಷ್ಮತ್ಪಾದ ಪಾಂಸುಗಳಿಂದೆ–ನಿನ್ನಪಾದಗಳ ದೂಳಿನಿಂದ, ಪವಿತ್ರಗಾತ್ರನೆನ್ ಆದೆಂ–ಪವಿತ್ರವಾದ ದೇಹವುಳ್ಳವನಾದೆನು.

೩೩. ಬಂದ ಬರವು–ನೀವು ಇಲ್ಲಿಗೆ ಬಂದಿರುವುದು, ನಿಮ್ಮ ಆಗಮನ, ಆವುದು–

ಯಾವುದು ಎಂದರೆ ನೀವು ಇಲ್ಲಿಗೆ ಏತಕ್ಕಾಗಿ ಬಂದಿದ್ದೀರಿ; ಇದು-ನಿಮ್ಮ ಬರವು, ಬಿಸವಂದಂ-ಆಶ್ಚರ್ಯ; ಬೆಸನಾವುದು-ಏನು ಕಾರ್ಯ?; ಆವ ಬೆಸನಂ ಬೆಸಸಲ್ ಬಂದಿರ್-ಯಾವ ಕಾರ್ಯವನ್ನು ಅಪ್ಪಣೆಮಾಡಲು ಬಂದಿದ್ದೀರಿ; ಈಗಳ್-ಈಗ, ಎನಗಂ-ನನಗೆ ಕೂಡ, ಬರವಿನೊಳ್-ಆಗಮನದಲ್ಲಿ, ಅಗುಂದಲೆಯಾಯ್ತು-ಹೆಚ್ಚಳವುಂಟಾಯಿತು, ಎಂಬುದು-ಎನ್ನುತ್ತಲೂ.

೩೪. ಆ ಸಭೆಯೊಳ್ ಆ ಆಸ್ಥಾನದಲ್ಲಿ, ಹರಿ-ಶ್ರೀ ಕೃಷ್ಣನು, ಕರವಿನ್ಯಾಸಂಗಳ್-ಕೈಯ ಅಭಿನಯಗಳು, ನುಡಿಯಂ-ಮಾತನ್ನು, ಅಡಕುವಂತಿರೆ-ಅಡಕವಾಗಿಡುವಂತೆ ಇರಲು, ದಂತಪ್ರಭೆಗಳ್-ಹಲ್ಲುಗಳ ಕಾಂತಿ, ಹಾಸುಂಪೊಕ್ಕುಂ ಪರೆದು-ಹಾಸುಹೊಕ್ಕಾಗಿ ಹರಡಿ, ಸಭಾಸದನಂ-ಸಭಾಮಂದಿರ, ತೊಳಗಿಬೆಳಗೆ-ಪ್ರಕಾಶಮಾನವಾಗಲು, ನುಡಿದಂ-ಮಾತಾಡಿದನು.

೩೫. ಅಯ ನಯ ಪರಾಕ್ರಮೋಪಾಶ್ರಯಂಗಳಂ: ಅಯ-ಶುಭಕರವಾದ ವಿಧಿಗೂ, ನಯ-ನೀತಿಗೂ, ಪರಾಕ್ರಮ-ಪ್ರತಾಪಕ್ಕೂ, ಉಪಾಶ್ರಯಂಗಳಂ-ಅವಲಂಬನವಾಗಿರುವುವುಗಳನ್ನು, ಶ್ರೀಗೆ-ರಾಜ್ಯಲಕ್ಷ್ಮಿಗೆ, ಆಡಪ್ಪವಮಾಡಿದ-ಆಶ್ರಯವಾಗಿಮಾಡಿದ, ನಿನ್ನ, ಇಂದ್ರಿಯ ಜಯಮೆ-ಇಂದ್ರಿಯಗಳನ್ನು ಗೆದ್ದಿರುವುದೇ, ಲೋಕತ್ರಯದಿಂ-ಮೂರು ಲೋಕಗಳಿಂದ, ಕೂಡೆ-ಕೂಡಲೇ, ಇಂತು-ಹೀಗೆ, ಪೊಗಳಿಸಿದುದು-ಹೊಗಳುವ ಹಾಗೆ ಮಾಡಿತು; ಇಂತು-ಹೀಗೆ, ಪಿರಿಯರುಂ ಹಿರಿಯರಾದವರೂ, ಒಳರೇ-ಇರುವರೆ?

೩೬. ಉನ್ನತನೆ ಆಗಿಯುಂ-ಉದಾತ್ತನೇ ಆಗಿದ್ದರೂ, ನುಡಿ-ಮಾತು, ನನ್ನಿಯಂ-ಸತ್ಯವನ್ನು, ಅಳವು-ಶಕ್ತಿ, ಅಣ್ಮಂ-ಪೌರುಷವನ್ನು, ಅಱಿವು-ಜ್ಞಾನವು, ವಿನಯಮಂ-ನಮ್ರತೆಯನ್ನು ಅದಂ-ವಿಶೇಷವಾಗಿ, ಮನ್ನಣೆ-ಮರ್ಯಾದೆಯು, ಗುರುಜನಮಂ-ಹಿರಿಯರನ್ನೂ ಗುರುಗಳನ್ನೂ, ನೆಱೆ-ಪೂರ್ಣವಾಗಿ, ಮನ್ನಿಸಿದುದು-ಗೌರವಿಸಿತು; ಪಿರಿಯ ಸಿರಿಯೊಳ್-ಹಿರಿದಾದ ಐಶ್ವರ್ಯದಲ್ಲಿ, ಏಂ ಸುಜನತೆಯೋ-ಏನು ಸೌಜನ್ಯವೋ

೩೭. ಕುವಳಯ ಬಾಂಧವಂ-ಚಂದ್ರನು, ಕುವಳಯಮಂ-ಭೂಮಿಯನ್ನು, ಬೆಳಗಿ-ಪ್ರಕಾಶಿಸುವಂತೆ ಮಾಡಿ, ಕುವಳಯಂ-ನೈದಿಲೆ ಹೂವುಗಳು; ಪೊಱಗು ಎನೆ-ಹೊರಗು ಎನ್ನಲು ಎಂದರೆ ಚಂದ್ರನಕಾಂತಿ ಭೂಮಿಯಲ್ಲೆಲ್ಲ ವ್ಯಾಪಿಸಿ ನೈದಿಲೆಯನ್ನು ಮಾತ್ರ ಸೋಕುವುದಿಲ್ಲ ಎನ್ನಲು, ನೃಪತೀ-ದುರ್ಯೋಧನನೇ, ಪಾಂಡವರೆ-ಪಾಂಡವರೇ; ಪೊಱಗಾಗೆ-ಹೊರಗಾಗಲು, ನಿನಗೆ, ಈ ಕುವಳಯಪತಿ-ಈ ಭೂಮಿಗೆ ರಾಜ, ಎಂಬ, ಪೆಂಪು-ಹಿರಿಮೆ; ಒಡಂಬಡೆ-ಒಪ್ಪಿತವೆ?. ಎಂದರೆ ಒಪ್ಪಲಾಗಲಾರದು.

೩೮. ಮನಕತದಿಂದೆ-ಮನಃಕ್ಷತದಿಂದ, ಮನದನೋವಿನಿಂದ, ಒಂದೊರ್ವರಂ-ಒಬ್ಬೊಬ್ಬರನ್ನು, ಇನಿಸಂ-ಇಂದಿಷ್ಟನ್ನು, ಅಗಲ್ದಿರ್ದಿರ್-ಅಗಲಿದ್ದೀರಿ; ಇನಿಸೆ-ಇಷ್ಟೇ: ನಿಮಗಂ ತಮಗಂ-ನಿಮಗೂ ಅವರಿಗೂ, ಮುನಿಸುಂಟೆ ಕೋಪವಿದೆಯೆ,? ಇಲ್ಲ; ಕುರುರಾಜಾ-ದುರ್ಯೋಧನನೇ, ಕಾಯ್ದು ಬೆನ್ನೀರ್-ಕುದಿದ ಬಿಸಿನೀರು, ಮನೆಸುಡದು-

ಮನೆಯನ್ನು ಸುಡುವುದಿಲ್ಲ; ಎಂಬೊಂದು ನುಡಿಯಪ್ಪೋಲ್–ಎಂಬ ಒಂದು ನಾಣ್ಣುಡಿಯಂತೆ, ಅಲ್ಲವೇ ?

೩೯. ಈ ಪದ್ಯದಲ್ಲಿ ಸ್ವಲ್ಪ ಪಾಠಕ್ಲೇಶವಿದೆ. ಡಂಗಂ(ಗಳ್) ಎಂದು ತಿದ್ದಿಕೊಳ್ಳಬೇಕು ; ಕುರುಕುಳಾಂಬರ ಭಾನೂ–ಕೌರವ ವಂಶವೆಂಬ ಆಕಾಶಕ್ಕೆ ಸೂರ್ಯನಾದ ದುರ್ಯೋಧನನೇ, ಪಾಂಡವರಂ-ಪಾಂಡವರನ್ನು, ಗೆಡೆಗೊಳೆ-ಸ್ನೇಹಿತರನ್ನಾಗಿ ಸ್ವೀಕರಿಸಲು, ನಿನಗೆ, ಪೊಂಗುವ–ಉಕ್ಕುವ, ಉಬ್ಬುವ, ಕುದಿಯುವ: ಮಲೆಪರ–ಪರ್ವತರಾಜರ, ಮಲೆಗಳ–ಬೆಟ್ಟಗಳಲ್ಲಿರುವ, ಡಂಗಂ(ಗಳ್)–ಸುಂಕದ ಕಟ್ಟೆಗಳು, ಕಾವಲು ಕಟ್ಟೆಗಳು; ಮಲೆವ–ಔದ್ಧತ್ಯದಿಂದ ವರ್ತಿಸುವ, ಮಂಡಲಂಗಳ್–ದೇಶಗಳು. ಪ್ರತ್ಯಂತಂಗಳ್–ಗಡಿಯಲ್ಲಿರುವ ಪ್ರದೇಶಗಳು, ಎನಲ್–ಎನ್ನಲು, ಒಳವೇ–ಇರುವುದೇ? ಡಂಗ < (ಸಂ)ದ್ರಂಗ; (ಶಬ್ದವಿಹಾರ : ಡಂಗಹಾಕು–ಎಂದರೇನು, ಎಂಬ ಲೇಖನವನ್ನು ನೋಡಿ)

೪೦. ಪಟ್ಟದ–ರಾಜ್ಯಪಟ್ಟಕ್ಕೆ, ಮೊದಲಿಗರ್–ಮೊದಲು ಅರ್ಹರಾದವರು; ಆಜಿಗೆ–ಯುದ್ಧಕ್ಕೆ, ಜೆಟ್ಟಿಗರ್ ಶೂರರು; ಅವರ್–ಅವರು, ಎಂದುಂ–ಯಾವಾಗಲೂ, ಆಳ್ವ–ಪಾಲಿಸುವ, ಮುನ್ನಿನ ನೆಲನಂ–ಮುಂಚಿನ ರಾಜ್ಯವನ್ನು ಕೊಟ್ಟು, ಬೞಿಯಟ್ಟು-ದೂತರನ್ನು ಕಳುಹಿಸು, ನಿನಗೆ ಒಡವುಟ್ಟಿದರ್-ನಿನ್ನ ಸಹೋದರರು, ಆ ದೊರೆಯರಾಗೆ-ಅಂಥವರಾಗಲು ಎಂದರೆ ಅಂಥ ಯೋಗ್ಯತೆಯುಳ್ಳವರಾಗಲು, ತೀರದುದು–ಅಸಾಧ್ಯವಾದದ್ದು, ಉಂಟೇ–ಇದೆಯೋ?

೪೧. ಎಮಗೆ–ನಮಗೆ, ಮುನ್ನಿನ ನೆಲನಂ–ಮೊದಲಿದ್ದ ರಾಜ್ಯವನ್ನು, ಕುಡುಗೆ–ಕೊಡಲಿ, ಎಂದು,ಎನ್ನರ್–ಹೇಳರು; ದಾಯಿಗರೆಂ–ದಾಯಾದಿಗಳಾಗಿದ್ದೇವೆ, ಎನ್ನರ್–ಎಂದು ಹೇಳರು; ಅಂತಲ್ತು ಇಂತಲ್ತು–ಹಾಗಲ್ಲ, ಹೀಗಲ್ಲ, ಎನ್ನರ್–ಎಂದು ಹೇಳರು; ಕರುಣಿಸಿ–ಕೃಪೆಯಿಟ್ಟು, ದಯೆಯಿಂದೆ–ದಯೆಯಿಂದ, ಇನ್-ಇನ್ನು, ಇತ್ತುದೆ–ಕೊಟ್ಟದ್ದೇ, ಸಾಲ್ಗುಂ–ಸಾಕು, ಎಂಬರ್–ಎಂದು ಹೇಳುತ್ತಾರೆ; ಎಂಬುದನೆಂಬರ್–ನೀನು ಹೇಳಿದ್ದನ್ನು ಹೇಳುತ್ತಾರೆ.

೪೨. ಕರಿ ...ಟವಿಯೊಳ್ : ಕರಿಕಳಭ-ಆನೆಗಳ, ಪ್ರಚಂಡ-ತೀಕ್ಷ್ಣವಾದ, ಮೃಗರಾಜ ಕಿಶೋರ-ಸಿಂಹದ ಮರಿಗಳ, ಕಠೋರ-ಕರ್ಕಶವಾದ, ಘೋರ-ಭಯಂಕರವಾದ, ಹೂಂಕರಣ–ಹೂಂ ಎಂಬ ಅಬ್ಬರದಿಂದ, ಭಯಂಕರ–ಭಯವನ್ನುಂಟುಮಾಡುವ, ಅಟವಿಯೊಳ್–ಕಾಡುಗಳಲ್ಲಿ, ಇನ್ನೆವರಂ–ಇದುವರೆಗೂ, ನೆಲಸಿರ್ದ–ವಾಸಿಸುತ್ತಿದ್ದ, ನೇಡೆ-ಆಯಾಸವು, ನೀಂ–ನೀನು, ಕರುಣಿಸಿದಾಗಳಲ್ಲದೆ–ದಯೆಯನ್ನು ತೋರಿಸಿದಾಗಲ್ಲದೆ, ಅವರ್ಗೆ–ಆ ಪಾಂಡವರಿಗೆ, ಆಱದು–ಶಮನವಾಗುವುದಿಲ್ಲ; ಕೆಮ್ಮಗೆ–ಸುಮ್ಮನೆ, ನಾಡ–ಸುಳ್ಳುಗಾರರಾದ, ಚಲ್ಲವತ್ತರ–ನಂಬಿಸಿ ಹೊಟ್ಟೆಹೊರೆಯುವವರ. ನುಡಿಗೊಳ್ಳದಿರ್–ಮಾತುಗಳನ್ನು ಕೇಳಬೇಡ; ನಿನಗೆ, ಪಾಂಡವರಪ್ಪುದಂ-ಪಾಂಡವರು ಆಗುವುದನ್ನು, ಆರುಂ–ಯಾರೂ, ಅಪ್ಪರೇ–ಆಗುವರೇ, ಎಂದರೆ ನಿನ್ನ ಕಷ್ಟ ಸುಖಕ್ಕೆ ಪಾಂಡವರು ಪಾಲುಗಾರರಾಗುವಂತೆ ಬೇರೆಯಾರಾದರೂ ಆಗುತ್ತಾರೆಯೇ; ಇಲ್ಲ, ಇಲ್ಲಿ 'ನಾಡ'

ಎಂಬುದರ ಅರ್ಥ ಚಿಂತನೀಯ "ನಾಱಿನುಡಿ ತುಂಬು ಕಳ್ಳನೊಳಂಟು" ಎಂಬ ವಾಕ್ಯದಂತೆ ನಾಱಿ ಎಂದರೆ ವಂಚಕ, ಕಪಟಿ; ನಾಡ>ನಾಱ; 'ಇವಾ ನಾಡ ಜೂದಿಂಗೆ' ಎಂಬ ರನ್ನನ ಪ್ರಯೋಗವನ್ನು ನೋಡಬಹುದು: ನಾಡಜೂದು-ಕಪಟದ್ಯೂತ; ಚಲ್ಲವತ್ತನೆಂದು ನಂಬಿಸಿ ಱಿಂಬವಂ.

೪೩. ಅವರ್ಗೆ-ಪಾಂಡವರಿಗೆ, ಒಂದುಂ-ಒಂದೂ, ಒಡಂಬಡುಂ-ಒಪ್ಪಿಗೆಯೂ ಅಥವಾ ಸಮಾಧಾನವೂ, ಪೊರೆಯುಂ-ರಕ್ಷಣೆಯೂ. ಇಲ್ಲ, ಎಂಬುದಂ-ಎನ್ನುವುದನ್ನು, ಎಯ್ದೆ-ಚೆನ್ನಾಗಿ, ನಂಬಿ, ಪೆಱತೇ ಪಡೆಮಾತೊ-ಬೇರೇನು ಮಾತೋ, ನಾಡಂ ದಯೆಗೆಯ್ದು ನೀಂ ಕುಡುವಿನಂ-ರಾಜ್ಯವನ್ನು ದಯಮಾಡಿ ನೀನು ಕೊಡುತ್ತಿರಲು, ಒಳ್ಪುನಿಲೆ-ನಿನ್ನ ಒಳ್ಳೆಯತನ ಶಾಶ್ವತವಾಗಿರಲು, ಕಂಚಿ-ಕಂಚಿಯೆಂಬ. ನೆಗೞ್ತೆಯ ವಾರಣಾಸಿ-ಪ್ರಸಿದ್ಧವಾದ ವಾರಣಾಸಿಯೆಂಬ, ಕಾಕಂದಿ-ಕಾಕಂದಿಯೆಂಬ, ಕುರುಸ್ಥಳಂ-ಕುರುಸ್ಥಳವೆಂಬ, ವರವೃಕಸ್ಥಳಂ-ಶ್ರೇಷ್ಠವಾದ ವೃಕಸ್ಥಳವೆಂಬ, ಅಯ್ದು ಜಾಡಮುಂ-ಐದು ಗ್ರಾಮಗಳನ್ನು, ಇವಂ-ಇವನ್ನು, ಅವರ್ಗೆ-ಆ ಪಾಂಡವರಿಗೆ, ಪಳ್ಳಿರಲ್ಕೆ ಎಂದು-ಹಾಸಿಗೆಯಲ್ಲಿರುವುದಕ್ಕೆ ಎಂದು, ಮಲಗಿರುವುದಕ್ಕೆ ಎಂದು, ಈವುದು-ಕೊಡುವುದು ಪಳ್ಳಿ-(ತ) ಪಳ್ಳಿ-ಹಾಸಿಗೆ, ಶಯನ. ನಿದ್ದೆ, ಪ್ರಾಣಿಗಳು ನಿದ್ರಿಸುವ ಎಡೆ.

ವಚನ: ಕ್ರೋಧಾನಲೋದ್ದೀಪಿತ-ಕೋಪವೆಂಬ ಅಗ್ನಿಯಿಂದ ಉರಿಯುತ್ತಿರುವ; ಶೌರ್ಯಮದಾಡಂಬರದೊಳ್-ಪ್ರತಾಪದ ಸೊಕ್ಕಿನ ಉಬ್ಬರದಲ್ಲಿ; ಅಂಬರಂಬರಂ-ಆಕಾಶದವರೆಗೆ.

೪೪. ದುರ್ಯೋಧನನ ಮಾತು: ಗೋಪ್ರಗಾಡ-ದನವನ್ನು ಕಾಯುವ, ಕಿಱಿಯಂದಿನ-ನಿನ್ನ ಬಾಲ್ಯದ, ಗೋವಿಕೆ-ದನಗಾಹಿತನ, ತೊಲಗದೆ-ಹೋಗದೆ; ನಿನ್ನ ಚಿತ್ತದೊಳ್-ನಿನ್ನ ಮನಸ್ಸಿನಲ್ಲಿ, ನೆಲಸಿದುದಕ್ಕುಂ-ಶಾಶ್ವತವಾಗಿ ಇರುವಂಥದ್ದಾಗಿದೆ, ಅಗ್ಗಳದ-ಅಧಿಕವಾದ, ವೈಷ್ಣವ ಮೋಹಮೆ-ವಿಷ್ಣು ಭಕ್ತರ ಎಂದರೆ ಪಾಂಡವರ ಮೇಲಿನ ಮಮಕಾರವೇ; ನಿನ್ನ ಮೆಯ್ಯೊಳ್-ನಿನ್ನ ದೇಹದಲ್ಲಿ, ಜಡಧಿ ಸಂಗತಿಯಿಂ-ಸಮುದ್ರದ ಸಹವಾಸದಿಂದ ಅಥವಾ ಜಡಬುದ್ಧಿಯುಳ್ಳವರ ಸಾಹಚರ್ಯದಿಂದ, ಜಡಬುದ್ಧಿ-ಜಡಬುದ್ಧಿಯು, ಅಗ್ಗಲಿಸಿದುದಕ್ಕುಂ-ಅತಿಶಯವಾದದ್ದಾಗಿದೆ, ಬುದ್ಧಿಯಂ-ಬುದ್ಧಿಯನ್ನು, ತೊಲಗಿಸಿತಕ್ಕುಂ-ಹೋಗಾಡಿಸಿದ್ದಾಗಿದೆ; ಅಲ್ಲದೊಡೆ-ಅಲ್ಲದಿದ್ದರೆ, ನೀಂ-ನೀನು, ಇನಿತಂ-ಇಷ್ಟು, ಪಳಾಳಮುಂ-ಜಳ್ಳು ಮಾತುಗಳನ್ನು, ನುಡಿವಯ್-ಹೇಳುತ್ತೀಯ?

೪೫. ಪಱಿಪಟ್ಟ-ಕತ್ತರಿಸಿ ಹೋದ ಎಂದರೆ ಸಂಬಂಧ ಕಡಿದುಹೋದ, ಪಗೆವರಂ-ಹಗೆಗಳನ್ನು. ನೆಱೆ-ಪೂರ್ಣವಾಗಿ, ಪಱಿಪಡಲ್-ಕತ್ತರಿಸಿ ಬೀಳುವುದಕ್ಕೆ ಎಂದರೆ ನಾಶವಾಗುವುದಕ್ಕೆ, ಅಣಂ-ಸ್ವಲ್ಪವೂ, ಈಯದೆ-ಅವಕಾಶವನ್ನು ಕೊಡದೆ, ಅವರಂ-ಪಾಂಡವರನ್ನು, ಅವರ್ಗಳ-ಅವರ, ಬಾೞ್ಕೆಯೊಳ್-ಸಂಪತ್ತಿನಲ್ಲಿ, ಏಳ್ಗೆಯ ಸ್ಥಿತಿಯಲ್ಲಿ, ನಿಱಿಸಲ್-ಸ್ಥಾಪಿಸಲು, ಬಗೆದಯ್-ಮನಸ್ಸು ಮಾಡಿದೆ; ನಿನ್ನ ಪೇೞ್ದ

ಧರ್ಮಶ್ರವಣಂ–ನೀನು ಹೇಳಿದ ಧರ್ಮದ ಕೇಳಿಕೆ, ಆಲಾಪ, ಕರಂ–ವಿಶೇಷವಾಗಿ, ಎನಗೆ–ನನಗೆ, ಉಜಿಡೆ–ಹೊಂದದೆ, ಇರ್ಕುಮೆ–ಇರುವುದೆ? ಇಲ್ಲಿ ಬಾೞ್–ಜೀವಿಕೆಯ ಸಾಧನ, ಸಂಪತ್ತು, ಉಛ್ರಾಯಸ್ಥಿತಿ ಎಂಬರ್ಥಗಳಿವೆ, ಪಾೞ್(ತ) ; ಅವರ ಪಾಯಿಗಂ ಶಾಸ್ತ್ರಂಗಳಂ ಬಲ್ಲೋಂಗಂ ಮಂತ್ರಿಪದವಿಯುಂ ಬಾೞುಮಂ ಪ್ರತಿಪತ್ತಿಯುಮಂ ಕೊಟ್ಟುದಂ (ವಡ್ಡಾ ೨–೨೫), ನಿಮ್ಮ ತಂದೆಯ ಮಂತ್ರಿಪದಮಂ ಬಾೞುಮಂ ಕೈಕೊಳ್ಳಿಮೆಂದು (ಅದೇ. ೪–೨೪), ಎಂಬುವು ಇತರ ಪ್ರಯೋಗಗಳು ; ವೃತ್ತಿ ಎಂದೂ ಅರ್ಥವಾಗಬಹುದು.

೪೬. ಭಾಗಮುಂ–ರಾಜ್ಯದ ಭಾಗವನ್ನು, ಆಸೆಪಟ್ಟು–ಆಸೆಯನ್ನು ಹೊಂದಿ, ಅಳಿಪಿ–ಬಯಸಿ, ಬೇಡುದು–ಬೇಡುವುದು, ನಿನ್ನಯ–ನಿನ್ನ, ಕಲ್ತ್ರ–ಕಲತ್ರ, ವಿದ್ಯೆ ; ಅಣ್ಣ–ಅಣ್ಣನೇ, ನೀನ್–ನೀನು, ಆಗಳುಂ–ಯಾವಾಗಲೂ, ಬೇಡಿದಪೆ–ಬೇಡುತ್ತೀಯೆ, ಎನಗೆ–ನನಗೆ, ಈಗಳ್–ಈಗ, ಇಳಾಲತಾಂಗಿ–ಭೂಮಿಯೆಂಬ ಸ್ತ್ರೀ, ಸಜ್ಜನದಂತೆ–ಕುಲವಧುವಿನ ಹಾಗೆ, ಎಕ್ಕಬಾಗೆ–ಒಂದೇ ಭಾಗವುಳ್ಳವಳು ಎಂದರೆ ಏಕಭೋಗ್ಯಳಾದವಳು, ನೋಡ–ನೋಡು ; ಪುದುವಲ್ಲಳ್–ಇನ್ನೊಬ್ಬನ ಜೊತೆಗೂಡಿ ಇರುವವಳಲ್ಲ, ಅದೆಂತೆನೆ–ಅದು ಹೇಗೆಂದರೆ, ಮುನ್ನ–ಮೊದಲು, ನೂಲ ತೋಡಾಗದೆ–ಹರಿದ ನೂಲಿನಂತೆ ತಿರುಗಿ ಸೇರದೆ, ಕೆಟ್ಟುವೋದವರಂ–ಹಾಳಾದವರನ್ನು, ಇನ್–ಇನ್ನುಮೇಲೆ, ಮಗುೞ್ದುಂ–ಮತ್ತೆಯೂ, ತಿರುಗಿಯೂ, ನಿಜಿಸಂತು–ಸ್ಥಾಪಿಸುವಹಾಗೆ, ಬೆಳ್ಳನೇ–ದಡ್ಡನೇ? ಅಲ್ಲ. ಅಳಿಪು–ಲೋಲತ್ವೇ (ಆಶಿಸು, ಬಯಸು) ;

೪೭. ಗೋವುಳಿಗನಪ್ಪಂ–ಗೋವುಗಳಲ್ಲಿಯೇ ಜೀವಿಸುವವನು, ಎಂದರೆ ದನಗಾಹಿಯಾದವನು (ನೀನು), ವಿಜಿಗೀಷುತ್ವದೊಳ್–ಜಯಿಸಬೇಕೆಂಬ ಅಪೇಕ್ಷೆಯುಳ್ಳವನ ತನದಲ್ಲಿ, ಜಯಶಾಲಿಯಾಗುವುದರಲ್ಲಿ, ಒಂದಿ–ಸೇರಿ, ಮತ್ಸ್ಯನಾಳಾಗಿ–ವಿರಾಟನ ಸೇವಕನಾಗಿ, ವಾರಿಜನಾಭಂ–ಕಮಲನಾಭನು, ಹರಿ–ವಿಷ್ಣು, ಎಂಬ–ಎನ್ನುವ, ದೊಡ್ಡಿವೆಸರಂ–ದೊಡ್ಡ ಹೆಸರನ್ನು, ಪೊತ್ತಿರ್ದ–ಹೊತ್ತುಕೊಂಡಿರುವ, ನೀಂ–ನೀನು, ಮಂತ್ರಿಯಾಗೆ–ಮಂತ್ರಿಯಾಗಲು, ಆ ಗಂಡರ್–ಆ ಶೂರರಾದ ಪಾಂಡವರು, ಜಯೋದ್ಯೋಗಮನೆತ್ತಿಕೊಂಡು–ಯುದ್ಧದಲ್ಲಿ ಗೆಲ್ಲುವ ಕಾರ್ಯವನ್ನು ಕೈಕೊಂಡು, ಈ ಗಂಡರಂ–ಈ ಶೂರರಾದ ಕೌರವರನ್ನು. ಒಟ್ಟಜೆಯಿಂದೆ–ಪರಾಕ್ರಮದಿಂದ, ಅಂಜಿಸಿ–ಹೆದರಿಸಿ, ರಣದೊಳ್–ಯುದ್ಧದಲ್ಲಿ, ನೆಟ್ಟನೆ–ನೇರಾಗಿ, ಭೂಭಾಗಮುಂ–ಭೂಮಿಯ ಭಾಗವನ್ನು, ಸಮಂತು–ಚೆನ್ನಾಗಿ, ಕೊಳ್ಳದೆ–ತೆಗೆದುಕೊಳ್ಳದೆ, ಇರ್ಪರೇ–ಇರುತ್ತೀರಾ? ದುರ್ಯೋಧನನ ಮಾತುಗಳಲ್ಲಿ ವ್ಯಂಗ್ಯ, ಕಟಕಿ, ತಿರಸ್ಕಾರ, ಗರ್ವ, ಮಾತ್ಸರ್ಯ, ಪರಿಹಾಸ–ಇವೇ ಮುಂತಾದ ಭಾವಗಳು ತುಂಬಿವೆ. ಗೋವುಳಿಗ > ಗೋವು + ಉಳಿಗ ; ದೊಡ್ಡಿವೆಸರ್ > ದೊಡ್ಡಿತು + ಪೆಸರ್, 'ಮತ್ಸ್ಯನಾಳಾಗಿ' ಎಂಬುದಕ್ಕೆ 'ಮರ್ತ್ಯನಾಳಾಗಿ' ಎಂದು ಸೂಚಿತವಾಗಿರುವ ಪಾಠ(ವ) ಗಮನಾರ್ಹ, ಹಾಗೆಯೇ 'ಇರ್ಪರೆ' ಎಂಬುದೂ.

೪೮. ಪುಸಿಯೆನೆ–ಸುಳ್ಳು ಎನ್ನಲು, ಸಾಮಮುಂ–ಸಾಮೋಪಾಯವನ್ನು, ನುಡಿವ–

ಹೇಳಿ, ಭೇದಮುಂ-ಭೇದೋಪಾಯವನ್ನು, ಉಂಟೊಡೆತಾಗಿ ಮಾಡಿ-ಉಂಟು, ಇದೆ ಎಂಬಂತೆ ಪ್ರಯೋಗಿಸಿ, ಛಿದ್ರಿಸಲ್-ಭೇದಿಸಲು, ಒಳಪೊಕ್ಕು-ಒಳಕ್ಕೆ ಹೊಕ್ಕು, ಮಿಕ್ಕು-ಮಿತಿಮೀರಿ. ನೆಗಟ್ಟಿ-ಕಾರ್ಯಮಾಡಿದ, ಉಗ್ರವಿರೋಧಿಗಳ್-ಭಯಂಕರ ವೈರಿಗಳಾದ, ತಾವು-ಅವರು, ಆ ಪಾಂಡವರು, ಎತ್ತಂ-ಎಲ್ಲೆಲ್ಲೂ, ಎಯ್ದೆ-ಚೆನ್ನಾಗಿ ಬಂಚಿಸಿ-ವಂಚನೆ ಮಾಡಿ, ಪೊಱಗಣ್ಗೆ – ಹೊರಗಡೆಗೆ, ಪೊರನೋಟಕ್ಕೆ, ಸಂಪ್ಪ ರಿಸೆ-ಋಜುವಾದವರು, ಸತ್ಯವಂತರು ಎನ್ನಲು, ತವೆ-ನಾಶವಾಗುವಂತೆ, ಒಳಗಂ ತೋಡಿ-ಒಳಭಾಗವನ್ನು ಅಗೆದು, ತಿಂದು-ಕಬಳಿಸಿ, ರಕ್ಕಸಿಯರ-ರಾಕ್ಷಸಿಯರು, ಕಂಡ-ನೋಡಿದ, ಕುಂಬಳದ-ಕುಂಬಳಕಾಯಿಯ, ಮಾಱ್ಕೆವೊಲ್-ಮಾಟದಂತೆ, ಅಗಿರೆ-ಆಗಿರಲು, ಮಾಡದಿರ್ಪಿರೇ, ಮಾಡದೆ ಇರುತ್ತೀರಾ? ಒಡೆತು < ಒಡೆಯುದು- ಉಳ್ಳುದು; ಕುಂಬಳದ ಹಣ್ಣು ಹೊರನೋಟಕ್ಕೆ ಚೆನ್ನಾಗಿದ್ದರೂ ಒಳಗೆಲ್ಲಾ ಕೊಳೆತಿರುವುದುಂಟು, ಇದಕ್ಕೆ ಕಾರಣ ರಾಕ್ಷಸಿಯ ದೃಷ್ಟಿ ತಾಕಿದೆಯೆಂಬುದು, ಇದು ಒಂದು ನಂಬಿಕೆ ಆ ಕಾಲದ್ದು. ಹೀಗೆಯೇ ಪಾಂಡವರು (ಕೃಷ್ಣನ ಸಮೇತವಾಗಿ) ಹೊರಗೆ ನೇರಾದವರು ಎಂದು ಕಂಡು ಬಂದರೂ ಒಳಗೊಳಗೇ ವಿನಾಶಕಾರಿಗಳು ಎಂದು ಭಾವ.

**ವಚನ:** ಒಂದೆ ಗರುಡಿಯೊಳ್-ಒಂದೇ ವ್ಯಾಯಾಮ ಶಾಲೆಯಲ್ಲಿ, ಓದಿದ-ಕಲಿತ, ಮಾನಸರೆವು-ಮನುಷ್ಯರಾಗಿದ್ದೇವೆ, ನಿಮ್ಮಡಿ-ನಿಮ್ಮ ಪಾದಗಳು ಎಂದರೆ, ನಿಮ್ಮಂಥ ಮಹಿಮರು; ಕಿಮ್ಮನೆ-ಸುಮ್ಮನೆ, ಬೞಲಿಸಲ್ವೇಡ-ಆಯಾಸ ಪಡಿಸಬೇಡಿರಿ; ಬಟ್ಟೆಯಿನೆ-ದಾರಿಯಿಂದಲೇ, ಬಿಜಯಂಗೆಯ್ಯಿಂ-ಬಿಜಯಮಾಡಿರಿ, ತೊಲಗಿ ಹೋಗಿರಿ: ಅಂತಕನಂತೆ – ಯಮನಹಾಗೆ, ಮಾಮಸಕಂ ಮಸಗಿ – ಮಹಾಕೋಪದಿಂದ ಕೆರಳಿ; ಮಸಗು ವಿಜೃಂಭಣೇ; ಇದರ ಭಾವನಾಮ ಮಸಕ.

**೪೯.** ಶ್ರೀ ಕೃಷ್ಣನ ಮಾತು: ಸೀತೆಯ-ಸೀತಾದೇವಿಯ, ದೂಸಱಿಂದೆ-ಕಾರಣದಿಂದ, ಅೞಿದ-ನಾಶವಾದ, ರಾವಣನಂತಿರೆ-ರಾವಣನ ಹಾಗೆ, ನೀನುಂ-ನೀನು ಕೂಡ, ಈಗಳ್-ಈಗ, ಸೀತೆಯ-ಉತ್ತ ನೆಲದ ಎಂದರೆ ನಾಡಿನ, ದೂಸಱಿಂದೆ-ಕಾರಣದಿಂದ, ಅೞಿಯಲ್-ನಾಶವಾಗಲು, ಆಟಿಸಿದ್ದೈ-ಬಯಸಿದೆ, ನಿನಗೆ, ಅಂತು-ಹಾಗೆ, ಸೀತೆ-ನಾಡು, ನೆಲವು, ಭೂಮಿದೇವಿಯು, ಸೀತೆಯೇ-ತಂಪಾದವಳೇ? ಅಥವಾ ಸೀತೆ-ಭೂಮಿಯು, ಸೀತೆಯೇ-ಸೀತಾದೇವಿಯೇ ಆಗಿದ್ದಾಳೆ; ಕಡಂಗಿ-ಉತ್ಸಾಹಿಸಿ, ಕಾಯ್ದು-ಕೋಪಿಸಿ, ಕಡೆಗಣ್ಚಿದಳ್ ಅಪ್ಪೊಡೆ-(ಭೂಮಿದೇವಿ ನಿನ್ನನ್ನು) ತಿರಸ್ಕರಿಸಿದವಳಾದರೆ, ಧಾತ್ರನಿಂ-ವಿಧಿಯಿಂದ, ಪಾಂಡವರ ಕೆಯ್ಯೊಳೆ-ಪಾಂಡವರ ಕೈಯಿಂದಲೇ, ನಿನ್ನ, ನಿಸೇಕಂ-ಮದುವೆ, ಪ್ರಸ್ತ, ಶಾಸ್ತಿ, ಆಗದೇ-ಆಗುವುದಿಲ್ಲವೆ? ತೊಡಳ್ವಾತಿನೋಳೇನೊ-ಅಸ್ಪಷ್ಟವಾದ ಮಾತುಗಳಿಂದ ಏನು ಪ್ರಯೋಜನ? ದುರ್ಯೋಧನ, ನಿನಗೆ ತಕ್ಕ ಶಾಸ್ತಿ ಆಗದೇ ಇರುವುದೇ, ಪಾಂಡವರಿಂದ ಎಂದು ಭಾವ.

**೫೦.** ಪಾಂಡವರೊಳ್-ಪಾಂಡವರಲ್ಲಿ, ಕಡುಕೆಯ್ದು – ತೀವ್ರತೆಯನ್ನು ತೋರಿಸಿ, ಅಂತು-ಎದುರಿಸಿ, ಇಱಿಯಲ್-ಯುದ್ಧ ಮಾಡಲು, ನೆ[ಱೆ]ವನ್ನರ್-

ಸಮರ್ಥರಾದಂಥವರು, ಆರ್ – ಯಾರು? ಇಂತಿದೇತರ್ಕೆ – ಹೀಗೆ ಇದು ಏತಕ್ಕೆ, ಬಿಗುರ್ತುರ್ಪೈ-ಹೆದರಿಸುತ್ತೀಯ? ನೆಲನಂ–ಭೂಮಿಯನ್ನು, ಒಪ್ಪಿಸಿ-ಅರ್ಪಿಸಿ, ತಪ್ಪದೆ-ತಪ್ಪುಮಾಡದೆ, ಬಾೞ್ವೆಂ–ಬದುಕುತ್ತೇನೆ, ಎನ್ನದೆ–ಎಂದು ಹೇಳದೆ, ಈ ಯುಕ್ತಿನೊಳ್–ಈ ಉದ್ಧತ ತನದಲ್ಲಿ, ನಿಂದು–ಎದುರಾಗಿ ನಿಂತು, ಸೆಣಸಲ್–ಮಾತ್ಸರ್ಯದಿಂದ ಹೋರಾಡಲು, ಎಂತು ಹೇಗೆ, ಬಗೆ ಬಂದುದು–ಮನಸ್ಸು ಬಂತು? ನಿನ್ನ ಮೆಯ್ಯ ನೆತ್ತರ್–ನಿನ್ನ ಮೈಯಿನ ರಕ್ತ, ಕುದಿದುರ್ಕೆ–ಕುದಿದು ಉಕ್ಕಿ, ಸಾವ ಬಗೆಯಿಂ–ಸಾಯುವ ಇಚ್ಛೆಯಿಂದ, ಸೆಣಸಲ್–ಯುದ್ಧಮಾಡಲು, ಬಗೆ–ಮನಸ್ಸು, ಬಂದುದು ಆಗದೇ–ಬಂದದ್ದಾಗಲಿಲ್ಲವೇ, ಬಂತಲ್ಲವೇ? ಬಿಗುರ್ತು ಎಂಬಲ್ಲಿನ ಬಿಗುರ್ ಧಾತುವನ್ನು ಪ್ರೇರಣಾರ್ಥದಲ್ಲಿ ಬಳಸಿದೆ, 'ಎಂತು ಬಿಗುರ್ತು ಬೀರರನೆ ಕೊಂದಪಿರ್'–ಎಂದು ಪ್ರಯೋಗ ಹಿಂದೆಯೇ ಬಂದಿದೆ.

೫೧. ಯುಧಿಷ್ಠಿರನಂ–ಧರ್ಮರಾಜನನ್ನು, ಮುಳಿಯಿಸಿ–ಕೆರಳಿಸಿ, ಬರ್ದುಂಕಲಾದನುಂ–ಜೀವಿಸಲು ಸಮರ್ಥನಾದವನೂ, ಒಳನೆ–ಇರುವನೆ? ಅವುಳರ–ಅವಳಿಗಳಾದ ನಕುಲ ಸಹದೇವರ, ಅಳವು–ಪ್ರತಾಪ, ಎಂಬುದು, ಭೂ ಭುವನ ಪ್ರಸಿದ್ಧಂ–ಭೂಲೋಕದಲ್ಲಿ ಪ್ರಸಿದ್ಧವಾದದ್ದು; ಅವರಿಜಾಯೆ – ಅವರು ಯುದ್ಧಮಾಡಲು, ಪೆಳಜುೞವು–ಹೆದರೆವು, ಎಂಬ-ಎನ್ನುವ, ಅರಿನೃಪ ಬಲಂಗಳ್–ಶತ್ರು ಸೈನ್ಯಗಳು, ಒಳರೇ–ಉಂಟೇ? ಇಲ್ಲ,

೫೨. ಭೀಮಸೇನಂ–ಭೀಮಸೇನನು, ಗದೆಗೊಳೆ–ಗದಾಯುಧವನ್ನು ಹಿಡಿಯಲು, ಇದಿರಾಂತು–ಎದುರಿಸಿ ನಿಂತು, ಬರ್ದುಂಕುವ–ಜೀವಿಸುವ ಅಥವಾ ತಪ್ಪಿಸಿಕೊಳ್ಳುವ, ವೈರಿಭೂಭುಜ ಧ್ವಜಿನಿಗಳ್–ಶತ್ರು ರಾಜರ ಸೇನೆಗಳು, ಇಲ್ಲದು–ಇಲ್ಲ; ಅಲ್ಲದೆಯುಂ-ಅಲ್ಲದೆ ಮತ್ತೆ, ಈ ಯುವರಾಜನ–ಈ ದುಶ್ಶಾಸನನ, ನೆತ್ತರಂ–ರಕ್ತವನ್ನು, ಕುರುಧ್ವಜಿನಿಯೆ – ಕೌರವನ ಸೈನ್ಯವೇ, ನೋಡೆ – ನೋಡಲು, ಪೀರ್ದು – ಹೀರಿ, ಭವದೂರುಯುಗಂಗಳಂ–ನಿನ್ನ ಎರಡು ತೊಡೆಗಳನ್ನು, ಆಜಿರಂಗದೊಳ್–ಯುದ್ಧರಂಗದಲ್ಲಿ, ಗಿಜಿಗಿಜಿ ಮಾಡಲೆಂದು–ಅಜಿಗುಜಿಮಾಡಬೇಕೆಂದು, ಅವನ ಪೂಣ್ದುದು–ಅವನು ಪ್ರತಿಜ್ಞೆ ಮಾಡಿದುದು, ನಿಕ್ಕುವಂ ಆಗದೆ–ನಿಜವಾಗದೆ, ಇರ್ಕುಮೇ–ಇರುತ್ತದೆಯೇ?

**ವಚನ:** ರಾಜಸೂಯ ವ್ಯತಿಕರದೊಳ್-ರಾಜಸೂಯ ಯಾಗದ ಸಂದರ್ಭದಲ್ಲಿ; ಕಪ್ಪಂ ಗೊಂಡ–ಕಪ್ಪವನ್ನು ತೆಗೆದುಕೊಂಡ; ವಿಕ್ರಮಮುಮಂ–ಶೌರ್ಯವನ್ನೂ; ಕಾಪಿನ ದೇವರ್–ಕಾಪಿನ ಎಂದರೆ ರಕ್ಷಣೆಯ ದೇವತೆಗಳು; ಒಂದು ಪೊೞ್ತುಂ ಅಗಲದ–ಒಂದು ಹೊತ್ತೂ ಬಿಡದ; ಆಳವಿಯ–ಪ್ರಮಾಣದ; ಅನಲಂಗೆ–ಅಗ್ನಿಗೆ; ಊಡಿ–ತಿನ್ನಿಸಿ; ಅಳವುಮಂ – ಪರಾಕ್ರಮವನ್ನೂ; ಅವಯವದೊಳ್ – ಶ್ರಮವಿಲ್ಲದೆ, ಸುಲಭವಾಗಿ; ಪಾರ್ವರ ಪಿಳ್ಳೆಯ-ಬ್ರಾಹ್ಮಣ ಹುಡುಗನ; ಅಳ್ಕದ-ಹೆದರದ; ಸೂಕರನಂ-ಹಂದಿಯನ್ನು; ಒಂದೆ ಸೂೞ್–ಒಂದೇ ಬಾರಿಗೆ, ಅಂಬಿನೊಳೆೞ್ಚು–ಬಾಣದಿಂದ ಹೊಡೆದು, ಗಂಡ ಗರ್ವಮುಮಂ- ಪೌರುಷದ ಹೆಮ್ಮೆಯನ್ನು, ಪಗೆವರಪ್ಪ–ಹಗೆಗಳಾದ, ಪಡಲ್ವಡಿಸಿದ–

ಚೆಲ್ಲಾಪಿಲ್ಲಿಯಾಗಿ ಕೆದರಿ ಬೀಳಿಸಿದ; ತಳರದೆ–ಚಲಿಸದೆ, ಪೆಱಗಿಕ್ಕಿ–ಹಿಂದಿಟ್ಟು ಕೊಂಡು, ಕಾದ–ರಕ್ಷಿಸಿದ, ಗೊಜ್ಜಿಗನೆಂಬ ಸಕಳ ಚಕ್ರವರ್ತಿ– ಗೋವಿಂದನೆಂಬ ಚಕ್ರವರ್ತಿ, ಮರಲಿಱಿದು–ಒಮ್ಮೆಟ್ಟುವಂತೆ ಹೊಡೆದು, ಅತಿವರ್ತಿಯಾಗಿ–ಹದ್ದು ಮೀರಿದವನಾಗಿ; ಮಾರ್ಮಲೆವ-ಪ್ರತಿಭಟಿಸುವ; ನಿಱಿಸಿದ–ಸ್ಥಾಪಿಸಿದ; ಓರಂತು-ಕ್ರಮವಾಗಿ; ತೋಳ್ವಲ ಮುಮಂ–ಬಾಹುಬಲವನ್ನೂ, ಅದಿರೆವಂದು–ನಡುಗುವಂತೆ ಬಂದು; ಅಂಕಕಾಱನಂ– ಮಲ್ಲಯುದ್ಧಮಾಡುವ ಜಟ್ಟಿಯನ್ನು; ವೈರಿಗಜಘಟಾವಿಘಟನನ– ಶತ್ರುಗಳ ಆನೆ ಸೈನ್ಯವನ್ನು ಮರ್ದಿಸುವವನ; ಅಡಟುಮಂ–ಶೌರ್ಯವನ್ನೂ, ಮೇಗಿಲ್ಲದ–ಉತ್ತಮವಾದು ದಿಲ್ಲದ, ಬಲ್ಲಾಳ್ತನಮುಮಂ-ಅತಿಶಯವಾದ ಪೌರುಷವನ್ನು, ಸೆಣಸಲ್–ಮತ್ಸರಿಸಿ ಹೋರಾಡಲು. ಇಲ್ಲಿರುವ ಪೂರ್ವ ವೃತ್ತಾಂತಗಳು,

(1) ಜವನನವಯವದೊಳ್‌ಗೆಲ್ದು ಪಾರ್ವರ ಪಿಳ್ಳೆಯ ಪೋದಜೀವಮಂ ಅರ್ಜುನ ತಂದದ್ದು : ಈ ಕಥೆ ೬-೨ ರಲ್ಲಿಯೂ ಬಂದಿದೆ; ಇದು ಯಾವ ಕಥೆ ಯೆಂಬುದು ಸ್ಪಷ್ಟವಾಗಿಲ್ಲ. ಶ್ರೀ ಕೃಷ್ಣ ಬಲರಾಮರು ತಮ್ಮ ಗುರುವಾದ ಸಾಂದೀಪಿನಿಯ ಸತ್ತ ಮಗನನ್ನು ಯಮಲೋಕದಿಂದ ತಂದು ಗುರುದಕ್ಷಿಣೆಯಾಗಿ ಒಪ್ಪಿಸಿದ ಕಥೆ ( ಭಾಗವತ ೧೦-೪೫ ) ಹೇಳಿದೆ ; ಕನ್ನಡ ಭಾಗವತದಲ್ಲೂ ಈ ಕಥೆ ಬರುತ್ತದೆ (೧೦-೪೧ ) ಆದರೆ ಇಲ್ಲಿ ಅರ್ಜುನನ ಪ್ರಸ್ತಾಪವಿಲ್ಲ. ಇನ್ನೊಂದು ಕಥೆ ಸಂಸ್ಕೃತ ಭಾಗವತದಲ್ಲೂ ( ೧೦–೮೯ ), ಕನ್ನಡ ಭಾಗವತದಲ್ಲೂ ( ೧೦–೮೯) ಇದೆ. ಕೃಷ್ಣನು ಒಂದು ಸಲ ಅಶ್ವಮೇಧಯಾಗವನ್ನು ಮಾಡುತ್ತಾನೆ; ಇತರ ರಾಜರು ಬಂದಂತೆಯೇ ಪಾಂಡವರು ಕೂಡ ಅಲ್ಲಿಗೆ ಬಂದಿರುತ್ತಾರೆ. ಯಾಗ ಮುಗಿದಮೇಲೆ ಶ್ರೀಕೃಷ್ಣನು ಆಸ್ಥಾನದಲ್ಲಿರುವಾಗ ಒಬ್ಬ ಬ್ರಾಹ್ಮಣ ಕೈಯಲ್ಲಿ ಹುಲ್ಲನ್ನು ಹಿಡಿದುಕೊಂಡು ರಾಜದ್ವಾರದ ಮುಂದೆ ಬಿದ್ದು ಗೋಳಾಡುತ್ತಾ ನೃಪಕುಲದ ದೋಷ ದಿಂದ ನನ್ನ ಪುತ್ರರು ಸತ್ತರು ಎಂದು ಮೊರೆಯಿಟ್ಟನು. ಕೃಷ್ಣನ ಅಪ್ಪಣೆಯಂತೆ ಅರ್ಜುನ ಹೊರಕ್ಕೆ ಬಂದು ಬ್ರಾಹ್ಮಣನನ್ನು ಕಂಡನು. ವಿಚಾರವೇನೆಂದು ಅರ್ಜುನ ಕೇಳಿದಾಗ ಬ್ರಾಹ್ಮಣ‘ನನ್ನ ಹೆಂಡತಿ ಸೂತಿಕಾಗೃಹದಲ್ಲಿ ಮಕ್ಕಳನ್ನು ಹೆರುತ್ತಾಳೆ,ಆದರೆ ಏನಾಗುತ್ತದೋ ತಿಳಿಯೆ, ಮಕ್ಕಳ ಮುಖವನ್ನು ನೋಡುವ ಭಾಗ್ಯ ನನಗಿಲ್ಲ’ಎಂದು ಹೇಳಿದನು. ಆಗ ಅರ್ಜುನ ‘ನೀನು ಹೆದರಬೇಡ, ನಾನು ನಿನ್ನ ಮಕ್ಕಳನ್ನು ಬದುಕಿಸು ತ್ತೇನೆ, ನಡೆ ನಿನ್ನ ಮನೆಗೆ ಹೋಗೋಣ ಎಂದು ಹೇಳಿ ಕೃಷ್ಣನಿಗೆ ಈ ವಿಷಯವನ್ನು ತಿಳಿಸಿದಾಗ ಅವನು ಮಕ್ಕಳನ್ನು ಬದುಕಿಸುವುದು ನಿನ್ನ ಕೈಯಲ್ಲಿ ಅಸಾಧ್ಯ ಎಂದು ಬಿಟ್ಟನು. ಅರ್ಜುನ ಮಾತು ಕೊಟ್ಟಿದ್ದೇನೆ, ನಡೆಸಲೇ ಬೇಕು ಎಂದು ಹೊರಡಲನುವಾದನು. ರಥಾರೂಢನಾಗಿ ಅವನು ಬ್ರಾಹ್ಮಣನ ಮನೆಗೆ ಬಂದನು. ಬ್ರಾಹ್ಮಣನ ಹೆಂಡತಿಗೆ ಪ್ರಸವಕಾಲವಾಗಿತ್ತು. ಆಗ ಅರ್ಜುನ ಆ ಮನೆಯ ಸುತ್ತಲೂ ಬಾಣದ ಪಂಜರವನ್ನು ಬಿಗಿದು ದಿಗ್ಬಂಧನ ಮಾಡಿದ. ಹುಟ್ಟಿದ ಮಗು ಹೇಗೋ ಮಾಯವಾಯಿತು, ಪಂಜರ ಇದ್ದ ಹಾಗೆಯೇ ಇತ್ತು, ಅರ್ಜುನನಿಗೆ ಆಶ್ಚರ್ಯವಾಯಿತು. ಬ್ರಾಹ್ಮಣ ನಿನ್ನ ಕೈಲಿ ಏನಾಗುತ್ತದೆ ಎಂದು ಅರ್ಜುನನನ್ನು ಮೂದಲಿಸಿದನು. ಆಗ

ಅರ್ಜುನ ನನ್ನ ಸಾಹಸವನ್ನು ನೋಡು ಎಂದು ಹೇಳುತ್ತ ಹೊರಟು ಸ್ವರ್ಗ ಮರ್ತ್ಯ ಪಾತಾಳ ಲೋಕಗಳನ್ನೆಲ್ಲ ಹುಡುಕಾಡಿದನು. ಎಲ್ಲಿಯೂ ಆ ಮಗು ಕಾಣಲಿಲ್ಲ. ಅಗ್ನಿ ಪ್ರವೇಶ ಮಾಡುತ್ತೇನೆ ಎಂದು ಅರ್ಜುನ ಸಿದ್ಧನಾದಾಗ ಶ್ರೀಕೃಷ್ಣ 'ಬೇಡ ಬೇಡ, ಬಾಲಕನನ್ನು ನಿನಗೆ ತೋರಿಸಿಕೊಡುತ್ತೇನೆ' ಎಂದು ಸಮಾಧಾನ ಪಡಿಸಿ, ಅರ್ಜುನ ನೊಡನೆ ರಥವನ್ನೇರಿ ಪಡುವ ದಿಕ್ಕಿಗೆ ಪ್ರಯಾಣ ಮಾಡಿದನು. ಭಯಂಕರ ಕತ್ತಲೆ ಮುಂದಾಯಿತು. ಸುದರ್ಶನ ಚಕ್ರದಿಂದ ಕತ್ತಲೆಯನ್ನು ತೊಲಗಿಸಿ ಕೃಷ್ಣ ವಿಷ್ಣು ಲೋಕಕ್ಕೆ ಬಂದನು. ಅಲ್ಲಿನ ತೇಜಸ್ಸು ಕಣ್ಣು ಕೋರೈಸಿತು. ಅರ್ಜುನನಿಗೆ ಕೃಷ್ಣ ದಿವ್ಯ ದೃಷ್ಟಿಯನ್ನು ಕೊಟ್ಟನು. ಅವನಿಗೆ ವಿಷ್ಣುಪದ ಗೋಚರವಾಯಿತು. ಅಲ್ಲಿ ಆ ಬ್ರಾಹ್ಮಣ ಬಾಲಕರೆಲ್ಲರೂ ಇದ್ದರು. ಪುಣ್ಯಮೂರ್ತಿಗಳಾದ ನಿಮ್ಮನ್ನು ನೋಡ ಬೇಕೆಂದು ನಾನು ದ್ವಿಜ ಬಾಲಕರನ್ನು ಇಲ್ಲಿಗೆ ತಂದೆ ಎಂದು ಪರಮಾತ್ಮನು ಹೇಳಿ ಆ ಬಾಲಕರನ್ನು ಕೃಷ್ಣಾರ್ಜುನರೊಡನೆ ಕಳಿಸಿಕೊಟ್ಟನು. ಅವರನ್ನು ಅರ್ಜುನ ಬ್ರಾಹ್ಮಣನಿಗೆ ಕೊಟ್ಟು ಸಂತಸವುಂಟುಮಾಡಿದನು. ಈ ಕಥೆಯಲ್ಲಿ ಅರ್ಜುನ ಯಮನನ್ನು ಗೆದ್ದ ವಿಷಯವಿಲ್ಲ. ಪುತ್ರರನ್ನು ಎಂದು ಇಲ್ಲಿದ್ದರೆ ಪಂಪನು 'ಪಾರ್ವರ ಪಿಳ್ಳೆ' ಎಂದು ಒಬ್ಬ ಮಗನನ್ನು ಹೇಳಿದ್ದಾನೆ. ಮೊದಲನೆಯ ಕಥೆಯಲ್ಲಿ ಕಾಣುವ ಯಮ ಪರಾಭವವನ್ನೂ ಏಕಪುತ್ರತೆಯನ್ನೂ ಎರಡನೆಯ ಕಥೆಯಲ್ಲಿ ಪಂಪನು ಸೇರಿಸಿರುವನೆಂದು ತೋರುತ್ತದೆ.

(2) ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ: ವಿಜಯಾದಿತ್ಯನು ಚಾಲುಕ್ಯ ವಂಶದ ರಾಜ. ಇವನಿಗೆ ಬಿಜ್ಜ ಎಂಬ ಹೆಸರೂ ಉಂಟು. ಗೋವಿಂದರಾಜನು ರಾಷ್ಟ್ರ ಕೂಟ ಚಕ್ರವರ್ತಿ, ನಾಲ್ವಡಿಗೋವಿಂದ; ಈ ಚಕ್ರವರ್ತಿಗೆ ವಿಜಯಾದಿತ್ಯನ ಮೇಲೆ ಕೋಪವುಂಟಾಯಿತು; ಕಾರಣ ಬಿಜ್ಜನು ಪದ್ಮಾರ್ಯನೆಂಬವನನ್ನು ಕೊಂದು ಅನೇಕ ಸಾಮಂತರನ್ನೂ ದಂಡನಾಯಕರನ್ನೂ. ಅಶ್ವಗಜ ಘಟೆಗಳನ್ನೂ ನಾಶ ಮಾಡಿದ್ದು. ಬಿಜ್ಜನು IIನೆಯ ಅರಿಕೇಸರಿಯ ರಕ್ಷಣೆಯನ್ನು ಬೇಡಿ ಅವನಿಗೆ ಶರಣಾದನು. ಅರಿಕೇಸರಿ ಅವನನ್ನು ರಕ್ಷಿಸಿದನು. ನಾಲ್ವಡಿ ಗೋವಿಂದರಾಜನ ಆಳ್ವಿಕೆಯ ಕೊನೆಯ ವರ್ಷ ಕ್ರಿ. ಶ. ೯೩೪. ಈ ಘಟನೆ ಸುಮಾರು ಅದೇ ವರ್ಷದಲ್ಲಿ ನಡೆದಿರಬಹುದು. ಈ ವಿಷಯವಾಗಿ ವೇಮುಲವಾಡ ಶಾಸನದಲ್ಲಿ "ಸಾಮನ್ತಾನ್ ದಂಡಮುಖ್ಯಾನ್ ನಿಜಭುಜ ಪರಿಘಾನ್ ಪ್ರಸ್ಫುರದ್ಖಂಡಧಾರಾ। ನ್ನೀರಾಂ ಘೋರಾಶಿಮಗ್ನಾಂ ಸ್ತುರಗಕರಿ ಘಟಾಪತ್ತಿ ಸಂಪತ್ತಿಯುಕ್ತಾನ್॥ ಕೃತ್ವಾ ಪದ್ಮಾರ್ಯ್ಯಮಾರ್ಯ್ಯಂ ಸ್ವಜನ ಪರಿಜನೈಸ್ಸನ್ನಿಹ-ತ್ಯಾಜಿರಂಗೇ। ಕ್ರುದ್ಧೇ ಗೋವಿಂದ ರಾಜೇ ಶರಣಮುಪಗತೋ ರಕ್ಷಿತೋ ಯೇನ ಬಿಜ್ಜಃ॥ ಎಂಬ ಪದ್ಯವಿದೆ. ಚಳುಕ್ಯ ಬಿಜ್ಜನು ಒಬ್ಬ ಸಾಮಂತ ರಾಜನಿದ್ದಿರಬಹುದು, ಪದ್ಮಾರ್ಯನು ಯಾರೋ ಚರಿತ್ರೆಗೆ ತಿಳಿಯದು. ಅರಿಕೇಸರಿ ಬಿಜ್ಜನನ್ನು ರಕ್ಷಿಸುವ ಕಾರ್ಯದಲ್ಲಿ ಅವನ ಮೇಲೆ ದಂಡನ್ನು ಕಳಿಸಿದನು. ಗೊಜ್ಜಿಗ (=ಗೋವಿಂದ) ಎಂಬ ಚಕ್ರವರ್ತಿ, ಈ ಸೈನ್ಯವನ್ನು ಅರಿಕೇಸರಿ ಸೋಲಿಸಿದನು.

(3) ಬದ್ದೆಗ ದೇವಂಗೆ ಸಕಳಸಾಮ್ರಾಜ್ಯಮನೋರಂತು ಮಾಡಿ: ನಾಲ್ಪಡಿ ಗೋವಿಂದನೆಂಬ ರಾಷ್ಟ್ರಕೂಟ ಚಕ್ರವರ್ತಿ (೯೩೦–೯೩೬) ಸ್ತ್ರೀಲೋಲನಾಗಿದ್ದು ಅಸಮರ್ಥನಾದ ಆಡಳಿತಗಾರನಾಗಿದ್ದನು. ಇವನ ಚಿಕ್ಕಪ್ಪ ಬದ್ದೆಗ ದೇವ ಅಥವಾ ಮೂರನೆಯ ಅಮೋಘವರ್ಷ. ಅರಿಕೇಸರಿ ಚಕ್ರವರ್ತಿಯಾದ ಗೋವಿಂದರಾಜನನ್ನು ಸಿಂಹಾಸನದಿಂದ ತಳ್ಳಿ ಅವನ ಚಿಕ್ಕಪ್ಪನಾಗಿದ್ದ ಬದ್ದೆಗ ದೇವನನ್ನು ರಾಜನನ್ನಾಗಿ ಸ್ಥಾಪಿಸಿದನು. ಇವನು ೯೩೬–೯೩೯ರವಗೆ ಆಳಿದನು. ಅರಿಕೇಸರಿ ಸಾಮಂತರಾಜನಾಗಿದ್ದರೂ ಚಕ್ರವರ್ತಿಯಮೇಲೆ ಕೈಮಾಡಿ ಅವನನ್ನು ಪದಚ್ಯುತನನ್ನಾಗಿ ಮಾಡಿ ತನ್ನನ್ನು ನಂಬಿದ ಬದ್ದೆಗ ದೇವನನ್ನು ಚಕ್ರವರ್ತಿ ಪದವಿಯಲ್ಲಿ ಸ್ಥಾಪಿಸಿದ್ದು ಅವನ ಶಕ್ತಿ ಪ್ರಭಾವಗಳನ್ನು ತೋರಿಸುತ್ತದೆ.

(4) ಕಕ್ಕಲನ ತಮ್ಮನಪ್ಪ ಬಪ್ಪುವ: ಈ ಕಕ್ಕಲನೂ ಅವನ ತಮ್ಮನಾದ ಬಪ್ಪುವನೂ ಯಾರೋ ತಿಳಿಯದು. ಅಪ್ರಕಟಿತವಾಗಿರುವ ಒಂದು ಶಿಲಾಹಾರರ ಶಾಸನದಲ್ಲಿ ಒಬ್ಬ ಕರ್ಕರನನ್ನು ಮೂರನೆಯ ಅಮೋಘವರ್ಷನು ಸೋಲಿಸಿದನೆಂದು ಕೆ. ಎ. ನೀಲಕಂಠಶಾಸ್ತ್ರೀ ಅವರು ಹೇಳುತ್ತಾರೆ. (Journal of the Madras University XV, No2, p 124); ಈ ಕರ್ಕನೇ ಕಕ್ಕಲನಿರಬೇಕೆಂದು ಅವರ ಅಬಿಪ್ರಾಯ.

೫೩. ದಶಕಂಧರಂ–ರಾವಣನು, ಆಡಿಪಾಡಿ–ಕುಣಿದು ಹಾಡಿ, ನೆಟ್ಟನೆ–ನೇರಾಗಿ, ಬೂತು–ಬಡಪ್ರಾಣಿ. ಕೊಳ್ವತೆಱದಿಂ–ತೆಗೆದುಕೊಂಡ ರೀತಿಯಿಂದ, ಬರಂಗಳಂ–ವರಗಳನ್ನು, ಈಶ್ವರನಲ್ಲಿ–ಶಿವನಿಂದ, ನಾಣ್ಗೆಟ್ಟಿರೆ–ನಾಚಿಕೆ ಕೇಡಾಗಲು, ಕೊಂಡನಲ್ಲದೆ–ತೆಗೆದುಕೊಂಡನಲ್ಲದೆ, ಒಟ್ಟಜೆಯಿಂದ–ಪರಾಕ್ರಮದಿಂದ, ಕೊಂಡನೆ–ತೆಗೆದುಕೊಂಡನೆ? ಪೇೞಿಂ–ಹೇಳಿರಿ; ಎನುತುಂ–ಎಂದು ಹೇಳುತ್ತಾ, ವಿಜಯಂ–ಅರ್ಜುನ, ನೆಲಕಿಕ್ಕಿ–ಶಿವನನ್ನು ನೆಲಕ್ಕೆ ಬೀಳಿಸಿ, ಗಂಟಲಂಮೆಟ್ಟದೆ–ಗಂಟಲನ್ನು ತುಳಿಯದೆ, ಇಂದ್ರಕೀಲದೊಳ್–ಇಂದ್ರಕೀಲ ಪರ್ವತದಲ್ಲಿ, ಹರನ ಪಾಶುಪತಾಸ್ತ್ರಮಂ–ಶಿವನ ಪಾಶುಪತವೆಂಬ ಬಾಣವನ್ನು, ಕೊಂಡನೆ–ತೆಗೆದುಕೊಂಡನೆ? ಎಂದರೆ ಶಿವನಗಂಟಲನ್ನು ಮೆಟ್ಟಿ ಅರ್ಜುನ ಪಾಶುಪತವನ್ನು ಪಡೆದನು; ರಾವಣನಾದರೆ ಆಡಿಹಾಡಿ ಶಿವನಿಂದ ವರಗಳನ್ನು ಪಡೆದನು. ಆದ್ದರಿಂದ ಅರ್ಜುನ ರಾವಣನಿಗಿಂತ ಪರಾಕ್ರಮಿ.

೫೪. ಪೊಂಗಿ–ಉಕ್ಕಿ, ಕಡಂಗಿ–ಉತ್ಸಾಹಿಸಿ, ಬೀರದೊಳೆ ಬೀಗುವ–ಶೌರ್ಯದಲ್ಲಿ ಗರ್ವಪಡುವ, ನಿನ್ನಣುಗಾಳ್–ನಿನ್ನ ಪ್ರೀತಿಗೆ ಆಸ್ಪದರಾದವರೇ, ನೋಡೆ–ನೋಡುತ್ತಿರಲು; ನಿನ್ನಂಗನೆಯರ್–ನಿನ್ನ ಸ್ತ್ರೀಯರು, ತೊವಲ್ಗೊಳೆ–ಕೈಯಲ್ಲಿ ಚಿಗುರನ್ನು ಹಿಡಿದಿರಲು (ಅಪಾಯದಲ್ಲಿ ರಕ್ಷಣೆ ಬೇಡ ಬಂದವರು ಕೈಯಲ್ಲಿ ಚಿಗುರನ್ನು ಹಿಡಿಯುವುದು ಪದ್ಧತಿ), ಭಯಂಗೊಳೆ–ಹೆದರಿರಲು, ಚಿತ್ರಾಂಗದಂ–ಚಿತ್ರಾಂಗದನೆಂಬ ಗಂಧರ್ವ, ಕೋಡಗಗಟ್ಟುಕಟ್ಟಿ–ಕಪಿಯನ್ನು ಕಟ್ಟುವಹಾಗೆ ಕಟ್ಟಿ, ನಿನ್ನಂ–ನಿನ್ನನ್ನು, ಉಯ್ಯೆ–ತೆಗೆದುಕೊಂಡು ಹೋಗಲು, ಎಡೆಮಾಡದೆ–ತಡಮಾಡದೆ, ಅಸುಂಗೊಳೆ–

ಪ್ರಾಣವನ್ನು ಸೆಳೆಯುವಂತೆ, ಕಾದಿ ತಂದ ವೀರಂಗೆ–ಯುದ್ಧಮಾಡಿ ತೆಗೆದುಕೊಂಡು ಬಂದ ವೀರನಾದ, ಅರಿಗಂಗೆ–ಅರ್ಜುನನಿಗೆ, ಸುಯೋಧನಾ–ದುರ್ಯೋಧನನೇ, ನೀಂ–ನೀನು, ಮಲೆದು–ಗರ್ವಿಸಿ, ನಿಲ್ವುದು–ಎದುರಿಗೆ ನಿಲ್ಲುವುದು, ಪಾಟಿವಲಂ–ಕ್ರಮವಲ್ಲವೆ, ಧರ್ಮವಲ್ಲವೇ? ಅಲ್ಲ, "ಬೀಗು–ಹರ್ಷಭಾವೇ, ಸ್ಥೈರ್ಯೇಚ"; ಅಣುಗಾಳ್: ಅಣುಗಾಳ್ ಕಾರ್ಯದ ಶೌರ್ಯದಾಳ್ ವಿಜಯದಾಳ್ ಎಂದು ಪ್ರಯೋಗಾಂತರ; ತೊವಲ್–ಎಳದಳಿರು[ತ. ತುಪ್ಪಲ್, (ಮ). ತೋಲ್], ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದು ಬ್ರಹ್ಮಣ್ಯಂ ಭೋ ಎಂದೆಱುತ್ತುಂ (ವಡ್ಡಾ ೩೩–೨); ನೀನವಧಾರಿಸೆಂದು ತೊವಲಂ ಮುಂದಿಕ್ಕಿದಂ ಭೂಪನಾ (ಸುಕುಮಾ ೨–೪೨).

೫೫. ನಿನ್ನಂ–ನಿನ್ನನ್ನು, ಕುರುರಾಜ–ದುರ್ಯೋಧನನೇ, ಗಂಧರ್ವರುಯ್ವಂದು–ಗಂಧರ್ವ ಸೆರೆ ಹಿಡಿದು ತೆಗೆದುಕೊಂಡು ಹೋಗುವಾಗ, ಗುರುವಿಲ್ಲಾ–ಗುರುವಾದ ದ್ರೋಣನು ಇಲ್ಲ, ಕರ್ಣನಿಲ್ಲಾ–ಕರ್ಣನು ಇಲ್ಲ; ಗುರುವಿನ ಮಗನಿಲ್ಲಾ–ಗುರುಪುತ್ರನಾದ ಅಶ್ವತ್ಥಾಮನು ಇಲ್ಲ; ಕೃಪಾಚಾರ್ಯನಿಲ್ಲಾ–ಕೃಪಾಚಾರ್ಯನು ಇಲ್ಲ; ನಿನ್ನ ಇನಿಬರೊಳ್ ತಮ್ಮಂದಿರೊಳ್–ನಿನ್ನ ಇಷ್ಟುಜನ ತಮ್ಮಂದಿರಲ್ಲಿ, ಆರ್ಇಲ್ಲ–ಯಾರೂ ಇಲ್ಲ; ಗಾಂಗೇಯನಿಲ್ಲಾ – ಭೀಷ್ಮನು ಇಲ್ಲ; ಮರುಳೇ–ತಿಳಿಗೇಡಿಯೇ, ಗಾಂಡೀವಿ–ಅರ್ಜುನನು, ಆರ್–ಯಾವನು, ಎಂದು, ಇಳಿಸಿ ನುಡಿವೆ–ಕಡೆಗಣಿಸಿ ಮಾತಾಡುವೆ; ನೆರೆದ ಕುರುಬಲಂ–ಸೇರಿದ ಕುರುಸೈನ್ಯ, ಕರುವಿಟ್ಟಂತೆ–ಎರಕ ಹೊಯ್ದಂತೆ; ಇರ್ದುದಲ್ಲಾ–ಇದ್ದಿತಲ್ಲವೆ; ತಂದವಂ–ನಿನ್ನನ್ನು ಬಿಡಿಸಿ ತಂದವನು, ಪಾರ್ಥನಲ್ಲಾ–ಅರ್ಜುನನಲ್ಲವೆ? "ಕರುವಿಡು–ಲೇಪ್ಯಕರಣೇ" ಇಲ್ಲಾ = ಇಲ್ಲಂಗಡ.

೫೬. ಅಮೋಘಂ–ವ್ಯರ್ಥವಿಲ್ಲದೆ, ಬವರಂಗೆಯ್ವಂ – ಯುದ್ಧಮಾಡೋಣ, ಎಂಬ ಬಗೆಯಿಂ–ಎಂಬ ಮನಸ್ಸಿನಿಂದ, ನೀಮೆಲ್ಲಂ–ನೀವೆಲ್ಲರೂ, ಆದಂ ರಣೋತ್ಸವದಿಂ–ಅತಿಶಯವಾದ ಯುದ್ಧಾಸಕ್ತಿಯಿಂದ, ನಿನ್ನೆಯೆ – ನಿನ್ನೆಯ ದಿವಸವೇ, ಪೋದ–ನಡೆದ, ಕಳೆದ, ಗೋಗ್ರಹಣದಂದು–ತುರುಗಳನ್ನು ಸೆರೆಹಿಡಿಯುವಾಗ, ಏನಾದಿರ್–ಏನಾದಿರಿ? ಅಂತು–ಹಾಗೆ, ಆ, ಪರಾಭವಮಂ–ಸೋಲನ್ನು, ಚೀ–ಛೀ, ಮಱೆದಿರ್ದಿರ್ ಅಪ್ಪೊಡೆ–ನೀವು ಮರೆತು ಇದ್ದ ಪಕ್ಷದಲ್ಲಿ, ಆದೇನ್–ಆದೇನು, ಏಪೋದುದು–ಏನು ಹೋಯಿತು, ಇನ್ನುಂ–ಮತ್ತೆಯೂ, ಗುಣಾರ್ಣವನಿಂ–ಅರ್ಜುನನಿಂದ, ಮಹಾಗಾಂಡೀವ ನಿರ್ಘೋಷಮಂ–ಗಾಂಡೀವದ ಮಹಾಟಂಕಾರನಾದವನ್ನು, ನಾಳೆಯೆ–ನಾಳೆಯದಿನವೇ, ಕೇಳದೆ–ಕಿವಿಯಾರ ಕೇಳದೆ, ಇರ್ಪಿರೆ–ಇರುತ್ತೀರಾ?

೫೭. ಈ ಪದ್ಯದಲ್ಲಿ ಶ್ರೀಕೃಷ್ಣ ಬರಲಿರುವ ಯುದ್ಧದ ಭೀಕರ ಚಿತ್ರವನ್ನು ಕೊಡುತ್ತಾನೆ: ಸುರಿವ–ಸುರಿಯುವ, ಸರಲ್–ಬಾಣಗಳು; ನರಳ್ವ ಭಟರ್–ನರಳುವ ಯೋಧರು; ಎತ್ತಮುರುಳ್ವದಟಿಂ–ಎಲ್ಲೆಲ್ಲೂ ಉರುಳಿ ಬೀಳುವ ಸೈನ್ಯ; ಪೊರಳ್ವ ಸಿಂಧುರ ಘಟೆ–ಹೊರಳಾಡುವ ಆನೆಗಳ ಸಮೂಹ; ಬರ್ಪನೆತ್ತರ ಕಡಲ್–ಹರಿದು ಬರುವ ರಕ್ತದ ಸಮುದ್ರ; ಕುಣಿವಟ್ಟೆಗಳ್–ಕುಣಿದಾಡುವ ಮುಂಡಗಳು,

ಆಜಿಯೊಳ್–ಯುದ್ಧದಲ್ಲಿ, ಭಯಂಕರತರಮಪ್ಪಿನಂ–ಅತಿಭಯಂಕರವಾಗುತ್ತಿರಲು, ಪಗೆವರ–ಹಗೆಗಳ, ಒಕ್ಕಲೊಳ್–ಮನೆಗಳಲ್ಲಿ, ಓವೆನಲ್–ಓ ಎಂದು ಕೂಗಲು, ಒರ್ವರ್ ಇಲ್ಲದಂತಿರೆ–ಒಬ್ಬರೂ ಇಲ್ಲದಿರುವ ಹಾಗೆ, ತವೆ–ನಾಶವಾಗುವ ಹಾಗೆ, ಕೊಲ್ಗುಂ – ಕೊಲ್ಲುತ್ತಾನೆ. ಅಂತುಂ – ಹಾಗೆಯೂ, ಅರಿಕೇಸರಿಗೆ – ಅರ್ಜುನನಿಗೆ, ಅಂತು–ಎದುರಾಗಿ, ಬರ್ದುಂಕಲಕ್ಕುಮೇ – ಬದುಕಲಾಗುತ್ತದೆಯೇ, ತಪ್ಪಿಸಿಕೊಳ್ಳಲಾಗುತ್ತದೆಯೇ?

**ವಚನ**: ಕಾಳನೀಳ ಮೇಘದಂತು–ಪ್ರಳಯಕಾಲದ ಕರಿಮೋಡಗಳ ಹಾಗೆ, ಮಸಗಿ–ವಿಜೃಂಭಿಸಿ; ಅಸುರಕುಳವಿಳಯಕೇತುಗೆ – ಶ್ರೀಕೃಷ್ಣನಿಗೆ, ಫಣಿಕೇತು–ದುರ್ಯೋಧನ; ತಳಮುಳಿಸಿ–ತಳಮಳವೆಂದು ಕೋಪದಿಂದ ಕುದಿದು; ಕಣ್ಗಾಣದೆ–ಕಣ್ಣು ಕಾಣದೆ, ವಿವೇಕ ಶೂನ್ಯನಾಗಿ.

**೫೮.** ಎೞ್ತಿರ್ಪೋಗು–ಏಳು, ತೊಲಗಿಹೋಗು; ದೂತನಪ್ಪನ–ದೂತನಾಗಿರುವವನ, ಬೆಪ್ಪಿನ–ಬೇಡುವವನ, ನುಡಿಗೇಳ್ದು–ಮಾತನ್ನು ಕೇಳಿ, ಮುಳಿಯಲಾಗದು–ಕೋಪಮಾಡಿಕೊಳ್ಳಲಾಗುವುದಿಲ್ಲ; ನೀನುಂ-ನೀನು ಕೂಡ, ಪೆಟ್ಟಪ್ಪು-ವೋಸಹೋಗಿ, ವಿದುರನೆಂಬ–ವಿದುರನೆನ್ನುವ, ಈ ತೊೞ್ತುಟ್ಟಿಯ–ಈ ತೊತ್ತಿಗೆ ಹುಟ್ಟಿದವನ. ಮನೆಯ ಕೂೞ್–ಮನೆಯ ಅನ್ನವೇ, ನುಡಿಯಿಸೆ–ಮಾತಾಡಿಸಲು, ನುಡಿದಯ್–ಮಾತಾಡಿದೆ, ಇಲ್ಲಿ ಎೞ್ತಿರ್ಪೋಗು, ಜೇಪ್ಪಿನ– ಎಂದು ಪಾಠಗಳಿರಬಹುದು.

**ವಚನ**; ಅತಿಕುಪಿತ–ಅತಿಯಾಗಿ ಕೆರಳಿದ.

**೫೯.** ಭೀಮಸೇನಂ–ಭೀಮನು, ಕಡುಮುಳಿದು–ತೀವ್ರವಾಗಿ ಕೆರಳಿ, ನಿನ್ನ ತೊಡೆಗಳನುಡಿವೆಡೆಯೊಳ್–ನಿನ್ನತೊಡೆಗಳನ್ನು ಮುರಿಯುವ ಸಮಯದಲ್ಲಿ, ಆ ಪಡದೊಳ್–ಆ ಹೊತ್ತಿನಲ್ಲಿ, ಅಥವಾ ಆಪತ್ತಿನಲ್ಲಿ, ಆಂ–ನಾನು, ಇದಂ–ಇದನ್ನು, ಈ ಬಿಲ್ಲನ್ನು, ಪಿಡಿಯಲ್ವೇಡಿಂದು–ಹಿಡಿಯಬೇಕೆಂದು, ಇರ್ದೆಂ–ಇದ್ದೆನು; ಪಿಡಿಯೆಂ–ಹಿಡಿಯೆನು, ಪೋಗು–ಹೋಗು, ಎಂದು, ಸಭೆಯೊಳ್–ಸಭೆಯಲ್ಲಿ, ಬಿಲ್ಲಂ–ಬಿಲ್ಲನ್ನು. ಉಡಿದಂ–ಮುರಿದನು, ವಿದುರ ತನ್ನ ಬಿಲ್ಲನ್ನು ಮುರಿದ ವೃತ್ತ ವ್ಯಾಸಭಾರತದಲಿಲ್ಲ; ಕುಮಾರವ್ಯಾಸನ ಭಾರತದಲ್ಲಿದೆ (೫–೮–೬೭), ಪಂಪನ ಮಾತುಗಳನ್ನೇ ಇಲ್ಲಿ ಕಾಣಬಹುದು.

**ವಚನ**; ವಿಚ್ಛಿದುರ–ಒಡೆದುಹೋದ, ಮುರಿದ; ಬಾಳಂಕಿೞ್ತು–ಕತ್ತಿಯನ್ನು ಒರೆಯಿಂದ ಸೆಳೆದು; ಏವದಿಂ–ಕೋಪದಿಂದ; ನೋಳವಿನಂತೆ–ನೋಣದಹಾಗೆ; ಉರುಳ್ತರೆ–ಉರುಳಿಬರಲು; ಪಾಯ್ದು–ನುಗ್ಗಿ.

**೬೦.** ಮುರಾಂತಕಂ–ಶ್ರೀಕೃಷ್ಣನು, ಸ್ವಪ್ಷವದಿಂ-ತನ್ನ ವಿಷ್ಣುಮಾಯೆಯಿಂದ, ಇರ್ಪರಂ–ಸಭೆಯಲ್ಲಿದ್ದವರನ್ನು, ನೆಱೆಯೆ – ಪೂರ್ಣವಾಗಿ, ಮೋಹಿಸಿ – ಮೂರ್ಛೆಗೊಳಿಸಿ, ನೆಲನೆಲ್ಲಮುಂ–ಭೂಮಿಯನ್ನೆಲ್ಲ, ಮೂಱಡಿಮಾಡಿದಂದು–ಮೂರು ಹೆಜ್ಜೆಗಳಲ್ಲಿ ಅಳೆದಾಗ, ಆ ಬಲಿಗೆ–ಆ ಬಲಿಚಕ್ರವರ್ತಿಗೆ, ಆದ–ಉಂಟಾದ, ರೂಪಮುಂ–ಬೃಹದ್ರೂಪವನ್ನು, ತೋಱಿದಂ–ತೋರಿಸಿದನು; ಈ ಜಗತ್ರಯಮುಂ–ಈ ಮೂರು

ಲೋಕಗಳನ್ನು. ಒರ್ಮೆಯೆ–ಒಂದೇಬಾರಿಗೆ. ನುಂಗುವ. ಕಾಲರೂಪಮುಂ–ಪ್ರಳಯದ ಆಕಾರವನ್ನು. ಯಮನ ರೂಪವನ್ನು. ಒರ್ಮೆಯೆ–ಒಂದೇಸಲಕ್ಕೆ. ವಿಶ್ವರೂಪಮುಂ–ಅನಂತಾದ್ಭುತರೂಪವನ್ನು, ತೋಱಿದಂ–ತೋರಿಸಿದನು,

**ವಚನ** : ವರದನಾಗಿ–ವರವನ್ನು ಕೊಟ್ಟವನಾಗಿ ; ತನಗೆ ಮಾಡಿ–ತನ್ನ ಪಕ್ಷ ವನ್ನಾಗಿ ಮಾಡಿಕೊಂಡು ;

**೬೧.** ಗುರುಕೃಪಶಲ್ಯ ಸಿಂಧುಸುತರಪ್ಪೊಡೆ–ದ್ರೋಣಕೃಪಶಲ್ಯಭೀಷ್ಮರಾದರೆ, ನಮ್ಮಯ–ನಮ್ಮ. ಪಕ್ಷಂ–ಕಡೆಯವರು ಎಂದರೆ ನಮಗೆ ಸೇರಿದವರು ; ಗುರುಸುತಂ–ಅಶ್ವತ್ಥಾಮನು, ಈಗಳ್–ಈಗ, ಎಮ್ಮೊಳ್–ನಮ್ಮಲ್ಲಿ, ಒಂದಿದಂ–ಸೇರಿದನು ; ಅಖಿಳಾಸ್ತ್ರವಿಶಾರದನಪ್ಪನುಂ–ಎಲ್ಲಾ ಬಗೆಯಾದ ಆಯುಧಗಳಲ್ಲೂ ನಿಪುಣನಾದವನೂ, ಗೆಲಲ್ಕೆ ಅರಿಯನುಂ–ಜಯಿಸಲಸಾಧ್ಯನೂ, ಒಂದಿಬಾರದನುಂ–ನಮ್ಮೊಡನೆ ಕೂಡಿ ಬರದವನೂ, ಅಂಕದ–ಪ್ರಸಿದ್ಧನಾದ, ಕರ್ಣನೆ–ಕರ್ಣನೇ ; ಸಮಸ್ತಧಾತ್ರಿಯೊಳ್–ಈ ಸಮಸ್ತ ಭೂಮಿಯಲ್ಲಿ, ಆತನಿಂ–ಅವನಿಂದ, ಬೀರಂ–ಪ್ರತಾಪವು, ಉರಿವರಿದತ್ತು–ಉರಿಯಂತೆ ಉಲ್ಬಣವಾಯಿತು ; ಅವನಿಂದೆ–ಆತನಿಂದ, ಚಾಗಂ–ದಾನವು, ಎಸೆದತ್ತು–ಪ್ರಕಾಶಿಸಿತು.

**೬೨.** ಎಂತೆನೆ–ಹೇಗೆಂದರೆ, ವಜ್ರಿ–ಇಂದ್ರನು, ವಜ್ರಕವಚಕ್ಕೆ–ತನ್ನ ಸಹಜ ವಾದ ವಜ್ರಾಂಗಿಗೆ, ನಿಜೋಜ್ವಲ ಕುಂಡಲಕ್ಕೆ–ತನ್ನ ಪ್ರಕಾಶಮಾನವಾದ ಕರ್ಣ ಕುಂಡಲಗಳಿಗೆ, ಕೈಯಾಂತೊಡೆ–ಕೊಡು ಎಂದು ಕೈಯನ್ನು ಚಾಚಿದರೆ, ಪಾಂಡು ಪುತ್ರರನೆ–ಪಾಂಡವರನ್ನೇ, ಕಾದು–ರಕ್ಷಿಸಿ, ಎರೆವಂದು–ಬೇಡಲುಬಂದು, ಉಗಿವಂ ದಲ್–ಛೇದಿಸುತ್ತಾನೆ ನಿಜವಾಗಿಯೂ, ಎಂದು–ಎಂಬುದಾಗಿ, ಮಂತಣದಿಂದೆ–ವಿವೇಕದ ಮಾತುಗಳಿಂದ, ಇನಂ–ಸೂರ್ಯನು, ಬಾರಿಸೆಯುಂ–ತಡೆದರು ಕೂಡ, ಎಂದುದ ನೆನ್ನದೆ–ಹೇಳಿದ್ದನ್ನು ಹೇಳದೆ ಎಂದರೆ ಒಪ್ಪದೆ, ಮೀಱಿ–ಉಲ್ಲಂಘಿಸಿ, ಒಡಲೊಳ್ ತೊಡರ್ದ ತನುತ್ರಮುಂ–ಮೈಗೆ ಅಂಟಿಕೊಂಡಿದ್ದ ಆ ವಜ್ರಕವಚವನ್ನು, ಬಿಡೆ ನೇರ್ದು–ಸುಲಿದು ಬರುವಹಾಗೆ ಕತ್ತರಿಸಿ, ಜಸಕ್ಕೆ ನೋಂತು–ಕೀರ್ತಿಗೆ ವ್ರತಹಿಡಿದು, ಎಂದರೆ ಕೀರ್ತಿಗಾಗಿ ಸಂಕಲ್ಪಿಸಿ, ಓರಂತು–ಕ್ರಮವಾಗಿ, ಕೊಟ್ಟಂ–ದಾನಮಾಡಿದನು. ಎಂದರೆ ಮೊದಲು ಕವಚವನ್ನೂ, ಅನಂತರ ಕುಂಡಲಗಳನ್ನೂ ದಾನವಾಗಿ ಕೊಟ್ಟನು ಎಂದು ತಾತ್ಪರ್ಯ ; ಎರೆವಂದು < ಎರೆಯಲ್ + ಬಂದು ;

**೬೩.** ಬೇಡಿದರ್ಗೆ–ಯಾಚಕರಿಗೆ, ಬರಮಂ–ವರವನ್ನು, ಈವ–ಕೊಡುವ, ದೇವನೆ–ದೇವತೆಯಾದ ಇಂದ್ರನೇ, ವಲಂ–ದಿಟವಾಗಿಯೂ, ನಾಣ್ಗೆಟ್ಟುಬಂದು–ನಾಚಿಕೆಯನ್ನು ಕಳೆದುಕೊಂಡುಬಂದು, ಎನ್ನಂ–ನನ್ನನ್ನು, ಇಂತು–ಹೀಗೆ, ಎರೆದಂ–ಬೇಡಿದನು ; ಬರ್ದರೊಳ್–ಬಾಳಿದವರಲ್ಲಿ, ಆನೆ–ನಾನೇ, ಬರ್ದನ್–ಬಾಳಿದವನು, ಎನುತುಂ–ಎಂದು ಹೇಳುತ್ತ. ನೇರ್ದಲ್ಲಿ–ಕತ್ತರಿಸುವಾಗ, ಕೆನ್ನೆತ್ತರುಂ–ಕೆಂಪುರಕ್ತವೂ; ಬಿರಿಕಂಡಂಗಳೆ–ಸೀಳಿದ ಮಾಂಸಖಂಡಗಳೇ, ಬೀಱಲುಣ್ಮೆ–ಧಾರೆಯಾಗಿ

ಸುರಿಯುತ್ತಿರಲು, ಮನದ–ಮನಸ್ಸಿನ, ಒಂದು ಅಣ್ಮು–ಒಂದು ಶಕ್ತಿ, ಇಟ್ಟಳಂ–ಅತಿಶಯವಾಗಿ, ಪೊಣ್ಮೆ–ತಲೆದೋರಲು, ಆ ಕರ್ಣನಾ ಕವಚಂಗೊಂಡಂದಂ–ಆ ಕರ್ಣನ ಕವಚವನ್ನು ತೆಗೆದುಕೊಂಡ ರೀತಿ, ನೋಡೆ–ನೋಡಲು, ವೀರರಸಕ್ಕೆ–ಶೌರ್ಯರಸಕ್ಕೆ, ಆಗರವಾಯ್ತು–ಮನೆಯಾಯಿತು, ಬೀೞ್ > ಬೀೞಲ್ ; ಬೀಳುವಿಕೆ ಎಂಬರ್ಥದ ಭಾವನಾಮ ; “ ನೇರ್–ಕೃಂತನೇ ”

**ವಚನ :** ನೆತ್ತರ್ ಪಸಪಸ ಪನಿಯೆ–ರಕ್ತ ಪಸಪಸ ಎಂದು ತೊಟ್ಟಿಡಲು ; ತಿದಿಯುಗಿವಂತೆ–ಚರ್ಮವನ್ನು ಸುಲಿಯುವಹಾಗೆ ; ಉಗಿದು–ಸೀಳಿ ; ಭೇದಿಸಿದಪ್ಪೆಂ–ಭೇದೋಪಾಯದಿಂದ ಛಿದ್ರಿಸುತ್ತೇನೆ : ಚೊಚ್ಚಿಲ ಮಗನಪ್ಪ–ಮೊದಲ ಮಗನಾದ ; ಸೂರ್ಯಸೂನುವಂ–ಕರ್ಣನನ್ನು : ರಥಾಂಗಧರಂ–ಚಕ್ರಪಾಣಿ, ಕೃಷ್ಣ : ಕಿಱಿದಂತರಂ–ಸ್ವಲ್ಪದೂರ ; ಕಳಿಪಿ – ಕಳಿಸಿಕೊಟ್ಟು, ಮಗುೞ್ವಿ – ಹಿಂದಿರುಗುವೆ ; ಪೋಪಂ–ಹೋಗೋಣ ;

**೬೪** ಕೃಷ್ಣನು ಕರ್ಣನನ್ನು ಭೇದಿಸಿ ಅಧೀರನನ್ನಾಗಿ ಮಾಡಿದ್ದು : ಕರ್ಣ–ಕರ್ಣನೇ, ಭೇದಿಸಲೆಂದೆ–ಮನಸ್ಸನ್ನು ಒಡೆಯಬೇಕೆಂದೇ, ನುಡಿದರ್–ಮಾತಾಡಿದರು, ಎನ್ನದಿರ್–ಎಂದು ಹೇಳದೆ ಇರು ; ಒಯ್ಯನೆ–ಮೆಲ್ಲಗೆ, ಸಮಾಧಾನದಿಂದ, ಕೇಳ–ಕೇಳು ; ನಿನ್ನಾದಿಯೊಳ್–ನಿನ್ನ ಮೊದಲಲ್ಲಿ, ಹುಟ್ಟಿನಲ್ಲಿ, ಅಬ್ಬೆ–ತಾಯಿ, ಕೊಂತಿ–ಕುಂತಿ ; ನಿನಗೆ ಅಮ್ಮಂ–ನಿನಗೆ ತಂದೆ. ಅಹರ್ಪತಿ–ಸೂರ್ಯನು ; ಪಾಂಡುನಂದನರ್–ಪಾಂಡವರು, ಸೋದರರ್ – ಒಡಹುಟ್ಟಿದವರು ; ಆಂ – ನಾನು, ಎಯ್ದೆ – ಚೆನ್ನಾಗಿ, ಮಯ್ದುನನೆಂ–ಮೈದುನನಾಗಿದ್ದೇನೆ : ಪೆಱತೇಂ ಪಱೆಮಾತೋ–ಬೇರೇನು ವಿಚಾರವೋ, ಸುದ್ದಿಯೋ, ನಿನ್ನ ದೀವೇದಿನಿ – ಈ ಭೂಮಿ ನಿನ್ನದು, ಪಟ್ಟಮುಂ ನಿನತೆ – ರಾಜ್ಯಪಟ್ಟವು ಕೂಡ ನಿನ್ನದೇ, ನೀನಿರೆ–ನೀನು ಇರುವಾಗ, ಮತ್ತೆ ಪೆಱರ್–ಮತ್ತೆ ಇತರರು, ನರೇಂದ್ರರೇ–ರಾಜರೇ? ಅಲ್ಲ. ಈ ಪದ್ಯದಲ್ಲಿ ಹತ್ತು ಸಣ್ಣ ಸಣ್ಣ ವಾಕ್ಯಗಳಿವೆ. ಇವು ಒಂದಾದಮೇಲೊಂದು ಉಸಿರುಬಿಡುವುದಕ್ಕೆ ಕೂಡ ಅವಕಾಶವಿಲ್ಲದಂತೆ ಬಂದು, ಕರ್ಣನ ಆಶ್ಚರ್ಯ ಹರ್ಷವಿಷಾದಗಳನ್ನು ಕಲಕಿ ವೆಗ್ಗಳಿಸುತ್ತ ಬೀಸುತ್ತವೆ, ಅನಿರೀಕ್ಷಿತವಾಗಿ ಕರ್ಣನ ಮನವನ್ನು ಅಪ್ಪಳಿಸುತ್ತವೆ.

**೬೫.** ಉತ್ತುಂಗಸ್ತನಿ–ಎತ್ತರವಾದ ಮೊಲೆಯುಳ್ಳವಳು, ಎಂದರೆ ಹೊಸಪ್ರಾಯದಲ್ಲಿರುವ ಕುಂತಿ, ಕೆಯ್ಯಡೆಯೆಂದು–ನ್ಯಾಸವೆಂದು, ರಕ್ಷಣೆಂಪುವಸ್ತುವೆಂದು, ಗಂಗೆಗೆ–ಗಂಗಾದೇವಿಗೆ, ಕೊಟ್ಟು ಪೋಗೆ–ಕೊಟ್ಟು ಹೋಗಲು, ಸೂತಂ–ಬೆಸ್ತರ ಕುಲದವನಾದ ಸೂತಸಂಭವನು, ಕಂಡು–ನೋಡಿ, ಆತ್ಮಾಂಗನೆಗೆ–ತನ್ನ ಹೆಂಡತಿಯಾದ, ರಾಧೆಗೆ–ರಾಧೆಯೆಂಬವಳಿಗೆ, ಇತ್ತು – ಕೊಟ್ಟು, ಮನಂಗೊಳೆ – ಮನಸ್ಸನ್ನು ಮೆಚ್ಚಿಸಲು, ರಾಧೇಯನೆನಿಸಿ–ರಾಧೇಯ ಎನ್ನಿಸಿಕೊಂಡು, ಸೂತಜನಾದಯ್–ಸೂತ ಪುತ್ರನಾದೆ.

**೬೬.** ನಿನ್ನುತ್ಪತ್ತಿಯಂ – ನಿನ್ನ ಜನ್ಮವನ್ನು, ಇಂತೆಂದು – ಹೀಗೆ ಎಂದು, ಎನ್ನರುಂ – ಎಂಥವರೂ. ಅಣಂ – ಸ್ವಲ್ಪವೂ, ಅಱಿಯರ್ – ತಿಳಿಯರು : ಆಂ ಅಱಿ

ವೆಂ–ನಾನು ತಿಳಿದಿದ್ದೇನೆ; ಸಹದೇವಂ–ಸಹದೇವನು, ಪನ್ನಗಕೇತು–ದುರ್ಯೋಧನನು, ದಿನೇಶಂ–ಸೂರ್ಯನು, ನಿನ್ನಂಬಿಕೆ ಕುಂತಿ–ನಿನ್ನ ತಾಯಿಯಾದ ಕುಂತಿ, ಇಂತಿವರ್–ಹೀಗೆ ಇವರು, ನೆಱೆ–ಚೆನ್ನಾಗಿ, ಬಲ್ಲರ್–ತಿಳಿದಿದ್ದಾರೆ.

**ವಚನ :** ಏತಱೊಳ್–ಯಾವುದರಲ್ಲಿ; ಪೊಡೆವಟ್ಟು–ನಮಸ್ಕರಿಸಿ; ಮುನ್ನಂ–ಮೊದಲು; ಏಱಲ್ ತರಿಸಿದೊಡೆ–ಹತ್ತುವುದಕ್ಕೆ ಪೀಠವನ್ನು ತರಿಸಿದರೆ; ಏವಯಿಸಿ–ಅಸಮಾಧಾನಹೊಂದಿ, ಕುಪಿತನಾಗಿ; ಪೋಗಲ್ವೇೞ್ದು–ಹೋಗುವಂತೆ ಹೇಳಿ.

೬೭. ಆಸಿರೆ–ನಾನು ಇರಲು, ಇರುವಾಗ, ನೀಂ–ನೀವು, ವಿಶಾಂಗುಲಿಗಂ–ಜಿಸ್ತ್ರರವನಾದ ಕರ್ಣನಿಗೆ, ಇದೇಕೆ – ಇದೇತಕ್ಕೆ, ದಯಿಗೆಯ್ದಿರೋ – (ಕುಳ್ಳಿರಲು ಮೊದಲು ಪೀಠವನ್ನು ಕೊಟ್ಟು) ದಯೆತೋರಿಸಿರಿದಿರೋ! ಪೇೞಿಂ–ಹೇಳಿರಿ, ಎಂದ ಆ ನರನಾಥನಂ–ಎಂದ ಆ ದುರ್ಯೋಧನನನ್ನು, ತನ್ಮುನಿ–ಆ ಸತ್ಯಂತಪನೆಂಬ ಋಷಿ, ತಿಳಿಪೆ–ತಿಳಿಯಹೇಳಲು, ಭೂಭುಜಂ–ದುರ್ಯೋಧನ, ಎಯ್ದೆ–ಚೆನ್ನಾಗಿ, ನಂಬಿ–ನಂಬಿಕೊಂಡು, ಕಾನೀನ–ಕರ್ಣನೇ, ಒಯ್ಯನೆ–ಮೆಲ್ಲಗೆ, ಮುಳಿಸ್ಸೊಳೆ – ಮುಳ್ಳಿನಿಂದಲೇ, ಮುಳ್ಳಂ–ಮುಳ್ಳನ್ನು. ಸಮಂತು–ಚೆನ್ನಾಗಿ, ಪಾಟಿಸುವೆಂ–ಕೀಳುತ್ತೇನೆ, ಎಂದು–ಎಂಬುದಾಗಿ, ತಾಂ–ತಾನು, ಈ ನಯದಿಂದೆ–ಈ ನೀತಿಯಿಂದ, ಪೆರ್ಚಿ–ಉಬ್ಬಿ, ಪೊರೆದು–ನಿನ್ನನ್ನು ಕಾಪಾಡಿ, ಅಂದು – ಆ ದಿನ, ಅಚ್ಚಿಱಿಸೊಳ್ – ಪ್ರೀತಿಯಲ್ಲಿ, ಒಡನುಂಡನಲ್ಲನೇ – ಜೊತೆಗೂಡಿ ಊಟಮಾಡಿದನಲ್ಲವೇ? ಕರ್ಣನಿಗೆ ಲಭಿಸಿದ ದುರ್ಯೋಧನ ಮೈತ್ರಿಗೆ ಕಾರಣ ದುರ್ಯೋಧನನ ಸ್ವಾರ್ಥಚಿಂತನೆಯೆಂಬಂಶವನ್ನು ಇಲ್ಲಿ ಕವಿ ಬಹುನಯವಾಗಿ ನಿರೂಪಿಸಿದ್ದಾನೆ.

೬೮. ಕೃಷ್ಣನ ಮಾತಿನಿಂದ ಕರ್ಣನ ಮೇಲೆ ಆದ ಪರಿಣಾಮ ; ಎನೆ ಎನೆ–ಎನ್ನಲೆನ್ನಲು, ಬಾಷ್ಪವಾರಿ – ಕಣ್ಣೀರು, ಪುಳಕಂಬೆರಸು – ರೋಮಾಂಚದೊಡನೆ, ಒರ್ಮೆಯೆ–ಒಂದೇ ಬಾರಿ, ಪೊಣ್ಮೆ–ಹೊಮ್ಮಲು, ನೆಗೞ್ತೆ ಪೊಗೞ್ತೆಯನಾಂಪಿನಂ–ನನ್ನ ಕಾರ್ಯ ಹೊಗಳಿಕೆಯನ್ನು ಪಡೆಯುತ್ತಿರಲು, ಮುನ್ನೆ ನೀವಿದನೆನಗೇಕೆ ಪೇೞ್ದಿರೋ–ಮೊದಲೇ ನೀವು ಇದನ್ನು ನನಗೆ ಏಕೆ ಹೇಳಿದಿರೋ : ಸುಯೋಧನಂ–ದುರ್ಯೋಧನ, ಎನಗೆ ಒಳ್ಳಿಕೆಯ್ದು–ನನಗೆ ಒಳ್ಳಿಯದನ್ನು ಮಾಡಿದ. ಕೃತಮಂ–ಉಪಕಾರವನ್ನು, ಪೆಱಗಿಕ್ಕಿ–ಹಿಂದಿರಿಸಿ ಎಂದರೆ ಅವಜ್ಞೆಮಾಡಿ, ನೆಗೞ್ತೆ ಮಾಸೆ–ನನ್ನ ಕೀರ್ತಿ ಮಾಸುತ್ತಿರಲು, ನಣ್ಪಿನ ನೆವದಿಂದೆ–ನಂಟತನದ ನೆಪದಿಂದ, ಆನ್–ನಾನು, ಪಾಂಡವರಂ–ಪಾಂಡವರನ್ನು, ಒಳಪೊಕ್ಕೊಡೆ–ಒಳಗೆ ಸೇರಿದರೆ ಎಂದರೆ ಅವರೊಡನೆ ಒಂದಾದರೆ, ನೀಮೆ–ನೀವೇ, ಪೇಸಿರೇ–ಅಸಹ್ಯಪಟ್ಟುಕೊಳ್ಳುವುದಿಲ್ಲವೇ? ದುರ್ಯೋಧನನಿಗೆ ಕೃತಘ್ನನಾಗಿ ಪಾಂಡವರೊಡನೆ ನಾನು ಸೇರಿಕೊಂಡರೆ ನೀವು ಕೂಡ ನನ್ನ ವಿಷಯದಲ್ಲಿ ಹೇಸುವಂತಾಗುತ್ತದೆ. 'ನೀಮೆ' ಎಂಬ ಮಾತು ಧ್ವನಿಮಯವಾಗಿದೆ.

೬೯. ಕರ್ಣನ ಸ್ನೇಹದ, ಸ್ವಾಮಿಭಕ್ತಿಯ ಪರಾಕಾಷ್ಠತೆಯ ಚಿತ್ರ ಈ ಪದ್ಯದಲ್ಲಿದೆ. ಇದರಿಂದ ಸಹೃದಯ ಪ್ರತಿಭೆಗೆ ಒಂದು ಇಡಿ ದೃಶ್ಯವೇ ಕಾಣಿಸುತ್ತದೆ.

ದುರ್ಯೋಧನನ ಅಂತಃಪುರದಲ್ಲಿ ಅವನ ರಾಣಿ ಭಾನುಮತಿ ಕರ್ಣನೊಡನೆ ಪಗಡೆ ಯಾಡುತ್ತಿದ್ದಾಳೆ; ದುರ್ಯೋಧನ ಅವರಿಬ್ಬರ ಆಟವನ್ನು ನೋಡುತ್ತಿದ್ದಾನೆ. ಭಾನುಮತಿ ತನ್ನ ಮುತ್ತಿನ ಹಾರವನ್ನು ಆಟಕ್ಕೆ ಪಣವಾಗಿ ಒಡ್ಡಿರುತ್ತಾಳೆ. ಅವಳು ಸೋತಳು ಆಟದಲ್ಲಿ, ಪಣವನ್ನು ಕೊಡದೆ ಅವಳು ಎದ್ದು ಹೋಗುವುದರಲ್ಲಿದ್ದಾಗ ಕರ್ಣ ಅವಳ ಮುತ್ತಿನ ಹಾರಕ್ಕೆ ಕೈ ಚಾಚಿದ. ಅದು ಹರಿದುಹೋಗಿ ಬಿಡಿಮುತ್ತುಗಳು ಸುರಿದು ದಿಕ್ಕಾಪಾಲಾಗಿ ಚೆದರಿಹೋದುವು. ಆಗ ಕರ್ಣನಿಗೆ ತಾನೇನು ಮಾಡಿದೆನೆಂಬ ಅರಿವುಂಟಾಗಿ ಹೆದರಿಕೆಯಿಂದ ನಡುಗುತ್ತಿರುವಲ್ಲಿ ಹತ್ತಿರಿದ್ದ ದುರ್ಯೋಧನ ಸ್ವಲ್ಪವೂ ಕೋಪಿಸಿಕೊಳ್ಳದೆ 'ಕರ್ಣ, ಮುತ್ತುಗಳನ್ನು ಆರಿಸಿಕೊಡಲೆ' ಎಂದು ಹೇಳುವನು. ಇಂಥ ಸ್ವಾಮಿಯನ್ನು ನಾನು ಬಿಟ್ಟುಬಂದರೆ, ನಾನು ಯಾರಿಗೂ ಬೇಡವಾದವ ನಾಗುತ್ತೇನೆ ಎಂದು ಕೃಷ್ಣನಿಗೆ ಕರ್ಣ ಹೇಳುವನು.

ಭಾನುಮತಿ–ದುರ್ಯೋಧನನ ರಾಣಿ ಭಾನುಮತಿಯು, ನೆತ್ತಮನಾಡಿ–ಕರ್ಣ ನೊಡನೆ ಪಗಡೆಯನ್ನಾಡಿ, ಸೋಲ್ತೊಡೆ–ಸೋತರೆ, ಸೋಲಮಂ–ಸೋತುದನ್ನು ಎಂದರೆ ಪಣವನ್ನು, ಈವುದು–ಕೊಡುವುದು, ಎಂದು–ಎಂಬುದಾಗಿ, ಕಾಡುತ್ತಿರೆ–ಕಾಡುತ್ತ ಇರಲು, ಲಂಬಣಂ ಪಱಿಯೆ–ಹಾರ ಹರಿದುಹೋಗಲು, ಮುತ್ತಿನ ಕೇಡನೆ–ಮುತ್ತುಗಳ ಹಾನಿಯನ್ನೇ; ನೋಡಿ ನೋಡಿ – ನೋಡುತ್ತ, ನೋಡುತ್ತ, ಬಳ್ಕುತ್ತಿರೆ – ಕರ್ಣ ನಡುಗುತ್ತಿರಲು, ಏವಮಿಲ್ಲದೆ – ಅಸಮಾಧಾನವಿಲ್ಲದೆ ಎಂದರೆ ಪ್ರಸನ್ನಚಿತ್ತನಾಗಿ, ಇವಂ–ಈ ಮುತ್ತುಗಳನ್ನು, ಆಯ್ದುದೋ–ಆರಿಸಿಕೊಡುವುದೋ, ತಪ್ಪದೆ–ತಪ್ಪಿಲ್ಲದೆ, ಪೇೞಿಂ–ಹೇಳಿರಿ, ಎಂಬ–ಎಂದು ಹೇಳುವ, ಭೂಪೋತ್ತಮನಂ–ರಾಜಶ್ರೇಷ್ಠನಾದ ದುರ್ಯೋಧನನನ್ನು, ಬಿಸುಟ್ಟು–ತೊರೆದು, ನಿಮ್ಮೊಳೆ ಪೊಕ್ಕೊಡೆ–ನಿಮ್ಮಲ್ಲಿಯೇ ನಾನು ಹೊಕ್ಕರೆ, ಎಂದರೆ ಸೇರಿಕೊಂಡರೆ, ಬೇಡನಲ್ಲೆನೇ–ಯಾರಿಗೂ ಬೇಡವಾದವ ನಲ್ಲವೇ; ಅಥವಾ ಕಿರಾತನಾಗುತ್ತೇನಲ್ಲವೇ ?

ಕರ್ಣನ ಸ್ನೇಹದ ಭವ್ಯತೆಯನ್ನು ಇದಕ್ಕಿಂತ ಮಿಗಿಲಾಗಿ ವರ್ಣಿಸುವುದು ಕಷ್ಟ, ಪಂಪನಿಗೆ ತನ್ನ ಪೋಷಕ ಅರಿಕೇಸರಿ ರಾಜನಲ್ಲಿದ್ದ ಆತ್ಮೀಯ ಸ್ನೇಹದ ಸ್ವಾನುಭವ ಇಲ್ಲಿ ಆದರ್ಶೀಕೃತವಾಗಿರುವಂತೆ ತೋರುತ್ತದೆ. ಇದು ಅಪೂರ್ವವೂ ಅದ್ಭುತ ರಮಣೀಯವೂ ಆಗಿರುವ ಪ್ರತಿಭಾವ್ಯಾಪಾರ. ಚಿಂತಿಸಿದಷ್ಟು ಬೆಳೆಯುತ್ತ ಹೋಗುತ್ತದೆ. ಈ ಪದ್ಯದ ಭಾವವಲ್ಲರಿ ಇದರ ವಿಚಾರವಾಗಿ ವಿದ್ವಾಂಸರಲ್ಲಿ ಕೊಂಚ ಚರ್ಚೆ ನಡೆದಿದೆ. ಪಂಪನ ಅನಂತರ ಬಂದ ತಮಿಳು ಕವಿ ವಿಲ್ಲಿಪುತ್ತೂರನ ಭಾರತದಲ್ಲಿ (ಕಾಲ ಸು ೧೩೨೫) ಈ ಪದ್ಯವನ್ನು ಹೋಲುವ ಪದ್ಯವೊಂದಿದೆಯೆಂದು ಬಲ್ಲವರು ಹೇಳುತ್ತಾರೆ.

**ವಚನ :** ಒಡಂಬಡದುದಂ – ಒಪ್ಪದೆ ಇರುವುದನ್ನು ; ಮಗುೞ್ವೇೞ್ದು – ಹಿಂದಿರುಗಲು ಹೇಳಿ ! ಆತ್ಮಾಲಯಕ್ಕೆ–ತನ್ನ ಮನೆಗೆ.

**೨೦.** ಕರ್ಣನ ಧರ್ಮಸಂಕಟ : ಕುರುಪತಿಗೆ–ದುರ್ಯೋಧನನಿಗೆ, ದೈವಬಲಂ–

ಸಮರ್ಥರಾದಂಥವರು, ಆರ್ – ಯಾರು? ಇಂತಿದೇತರ್ಕೆ – ಹೀಗೆ ಇದು ಏತಕ್ಕೆ, ಬಿಗುರ್ತಪ್ಪೆ-ಹೆದರಿಸುತ್ತೀಯ? ನೆಲನಂ–ಭೂಮಿಯನ್ನು, ಒಪ್ಪಿಸಿ-ಅರ್ಪಿಸಿ, ತಪ್ಪದೆ-ತಪ್ಪುಮಾಡದೆ, ಬಾೞ್ವೆಂ–ಬದುಕುತ್ತೇನೆ, ಎನ್ನದೆ–ಎಂದು ಹೇಳದೆ, ಈ ಯುಕ್ತಿನೊಳ್–ಈ ಉದ್ಧತ ತನದಲ್ಲಿ, ನಿಂದು–ಎದುರಾಗಿ ನಿಂತು, ಸೆಣಸಲ್–ಮಾತ್ಸರ್ಯದಿಂದ ಹೋರಾಡಲು, ಎಂತು ಹೇಗೆ, ಬಗೆ ಬಂದುದು–ಮನಸ್ಸು ಬಂತು? ನಿನ್ನ ಮೆಯ್ಯ ನೆತ್ತರ್–ನಿನ್ನ ಮೈಯಿನ ರಕ್ತ, ಕುದಿದುರ್ಕಿ–ಕುದಿದು ಉಕ್ಕಿ, ಸಾವ ಬಗೆಯಿಂ–ಸಾಯುವ ಇಚ್ಛೆಯಿಂದ, ಸೆಣಸಲ್–ಯುದ್ಧಮಾಡಲು, ಬಗೆ–ಮನಸ್ಸು, ಬಂದುದು ಆಗದೇ–ಬಂದದ್ದಾಗಲಿಲ್ಲವೇ, ಬಂತಲ್ಲವೇ? ಬಿಗುರ್ತು ಎಂಬಲ್ಲಿನ ಬಿಗುರ್ ಧಾತುವನ್ನು ಪ್ರೇರಣಾರ್ಥದಲ್ಲಿ ಬಳಸಿದೆ, 'ಎಂತು ಬಿಗುರ್ತು ಬೀರರನೆ ಕೊಂದಪಿರ್'–ಎಂದು ಪ್ರಯೋಗ ಹಿಂದೆಯೇ ಬಂದಿದೆ.

೫೧. ಯುಧಿಷ್ಠಿರನಂ-ಧರ್ಮರಾಜನನ್ನು, ಮುಳಿಯಿಸಿ–ಕೆರಳಿಸಿ, ಬರ್ದುಂಕಲಾದನುಂ–ಜೀವಿಸಲು ಸಮರ್ಥನಾದವನೂ, ಒಳನೆ–ಇರುವನೆ? ಅಮಳರ–ಅವಳಿಗಳಾದ ನಕುಲ ಸಹದೇವರ, ಅಳವು–ಪ್ರತಾಪ, ಎಂಬುದು, ಭೂ ಭುವನ ಪ್ರಸಿದ್ಧಂ–ಭೂಲೋಕದಲ್ಲಿ ಪ್ರಸಿದ್ಧವಾದದ್ದು; ಅವರಿಱಿಯೆ – ಅವರು ಯುದ್ಧಮಾಡಲು, ಪೆಳಱೆವು–ಹೆದರೆವು, ಎಂಬ-ಎನ್ನುವ, ಅರಿನೃಪ ಬಲಂಗಳ್–ಶತ್ರು ಸೈನ್ಯಗಳು, ಒಳರೇ–ಉಂಟೇ? ಇಲ್ಲ,

೫೨. ಭೀಮಸೇನಂ–ಭೀಮಸೇನನು, ಗದೆಗೊಳೆ–ಗದಾಯುಧವನ್ನು ಹಿಡಿಯಲು, ಇದಿರಾಂತು–ಎದುರಿಸಿ ನಿಂತು, ಬರ್ದುಂಕುವ–ಜೀವಿಸುವ ಅಥವಾ ತಪ್ಪಿಸಿಕೊಳ್ಳುವ, ವೈರಿಭೂಭುಜ ಧ್ವಜಿನಿಗಳ್–ಶತ್ರು ರಾಜರ ಸೇನೆಗಳು, ಇಲ್ಲದು–ಇಲ್ಲ; ಅಲ್ಲದೆಯುಂ-ಅಲ್ಲದೆ ಮತ್ತೆ, ಈ ಯುವರಾಜನ–ಈ ದುಶ್ಶಾಸನನ, ನೆತ್ತರಂ–ರಕ್ತವನ್ನು, ಕುರುಧ್ವಜಿನಿಯೆ – ಕೌರವನ ಸೈನ್ಯವೇ, ನೋಡೆ – ನೋಡಲು, ಪೀರ್ದು – ಹೀರಿ, ಭವದೂರುಯುಗಂಗಳಂ–ನಿನ್ನ ಎರಡು ತೊಡೆಗಳನ್ನು, ಆಜಿರಂಗದೊಳ್–ಯುದ್ಧರಂಗದಲ್ಲಿ, ಗಿಜಿಗಿಜಿ ಮಾಡಲೆಂದು–ಅಜಿಗುಜಿಮಾಡಬೇಕೆಂದು, ಅವನ ಪೂಣ್ದುದು–ಅವನು ಪ್ರತಿಜ್ಞೆ ಮಾಡಿದುದು, ನಿಕ್ಕುವಂ ಆಗದೆ–ನಿಜವಾಗದೆ, ಇರ್ಕುಮೇ–ಇರುತ್ತದೆಯೇ?

**ವಚನ :** ರಾಜಸೂಯ ವ್ಯತಿಕರದೊಳ್-ರಾಜಸೂಯ ಯಾಗದ ಸಂದರ್ಭದಲ್ಲಿ; ಕಪ್ಪಂ ಗೊಂಡ–ಕಪ್ಪವನ್ನು ತೆಗೆದುಕೊಂಡ; ವಿಕ್ರಮಮುಮಂ–ಶೌರ್ಯವನ್ನೂ; ಕಾಪಿನ ದೇವರ್–ಕಾಪಿನ ಎಂದರೆ ರಕ್ಷಣೆಯ ದೇವತೆಗಳು; ಒಂದು ಪೊೞ್ತುಂ ಅಗಲದ–ಒಂದು ಹೊತ್ತೂ ಬಿಡದ; ಅಳವಿಯ–ಪ್ರಮಾಣದ; ಅನಲಂಗೆ–ಅಗ್ನಿಗೆ; ಊಡಿ–ತಿನ್ನಿಸಿ; ಅಳವುಮಂ – ಪರಾಕ್ರಮವನ್ನೂ; ಅವಯವದೊಳ್ – ಶ್ರಮವಿಲ್ಲದೆ, ಸುಲಭವಾಗಿ; ಪಾರ್ವರ ಪಿಳ್ಳೆಯ-ಬ್ರಾಹ್ಮಣ ಹುಡುಗನ; ಅಳ್ಕದ-ಹೆದರದ; ಸೂಕರನಂ-ಹಂದಿಯನ್ನು; ಒಂದೆ ಸೂೞ್–ಒಂದೇ ಬಾರಿಗೆ, ಅಂಬಿನೊಳೆಚ್ಚು–ಬಾಣದಿಂದ ಹೊಡೆದು, ಗಂಡಗರ್ವಮುಮಂ- ಪೌರುಷದ ಹೆಮ್ಮೆಯನ್ನು, ಪಗೆವರಪ್ಪ–ಹಗೆಗಳಾದ, ಪಡಲ್ಪಡಿಸಿದ–

ಚೆಲ್ಲಾಪಿಲ್ಲಿಯಾಗಿ ಕೆದರಿ ಬೀಳಿಸಿದ; ತಳರದೆ–ಚಲಿಸದೆ, ಪೆಱಗಿಕ್ಕಿ–ಹಿಂದಿಟ್ಟುಕೊಂಡು, ಕಾದ–ರಕ್ಷಿಸಿದ, ಗೊಜ್ಜಿಗನೆಂಬ ಸಕಳ ಚಕ್ರವರ್ತಿ– ಗೋವಿಂದನೆಂಬ ಚಕ್ರವರ್ತಿ, ಮರಲಿಱಿದು–ಒಮ್ಮೆ ಮೆಟ್ಟುವಂತೆ ಹೊಡೆದು, ಅತಿವರ್ತಿಯಾಗಿ–ಪಟ್ಟು ಸಿಸಾರಿದವನಾಗಿ; ಪೂರ್ವಾರ್ಜಿತ–ಪ್ರತಿಭಟಿಸುವ; ನಿಱಿಸಿದ–ಸ್ಥಾಪಿಸಿದ; ಓರಂತು–ಕ್ರಮವಾಗಿ: ತೋಳ್ವಲ ಮುಮಂ–ಬಾಹುಬಲವನ್ನೂ, ಅದಿರಿವಂತು–ನಡುಗುವಂತೆ ಬಂದು; ಅಂಕಕಾಱನಂ– ಮಲ್ಲಯುದ್ಧಮಾಡುವ ಜಟ್ಟಿಯನ್ನು; ವೈರಿಗಜಘಟಾವಿಘಟನನ– ಶತ್ರುಗಳ ಆನೆ ಸೈನ್ಯವನ್ನು ಮರ್ದಿಸುವವನ; ಅದಟುಮಂ–ಶೌರ್ಯವನ್ನೂ, ಮೇಗಿಲ್ಲದ–ಉತ್ತಮವಾದು ದಿಲ್ಲದ, ಬಲ್ಲಾಳ್ತನಮುಮಂ–ಅತಿಶಯವಾದ ಪೌರುಷವನ್ನು, ಸೆಣಸಲ್–ಮತ್ಸರಿಸಿ ಹೋರಾಡಲು. ಇಲ್ಲಿರುವ ಪೂರ್ವ ವೃತ್ತಾಂತಗಳು,

(1) ಜವನನವಯವದೊಳ್‌ಗೆಲ್ದು ಪಾರ್ವರ ಪಿಳ್ಳೆಯ ಪ್ರೋದಜೀವಮಂ ಅರ್ಜುನ ತಂದಪ್ಪು: ಈ ಕಥೆ ೬-೨ ರಲ್ಲಿಯೂ ಬಂದಿದೆ; ಇದು ಯಾವ ಕಥೆ ಯೆಂಬುದು ಸ್ಪಷ್ಟವಾಗಿಲ್ಲ. ಶ್ರೀ ಕೃಷ್ಣ ಬಲರಾಮರು ತಮ್ಮ ಗುರುವಾದ ಸಾಂದೀಪಿನಿಯ ಸತ್ತ ಮಗನನ್ನು ಯಮಲೋಕದಿಂದ ತಂದು ಗುರುದಕ್ಷಿಣೆಯಾಗಿ ಒಪ್ಪಿಸಿದ ಕಥೆ (ಭಾಗವತ ೧೦-೪೫) ಹೇಳಿದೆ; ಕನ್ನಡ ಭಾಗವತದಲ್ಲೂ ಈ ಕಥೆ ಬರುತ್ತದೆ (೧೦-೪೧) ಆದರೆ ಇಲ್ಲಿ ಅರ್ಜುನನ ಪ್ರಸ್ತಾಪವಿಲ್ಲ. ಇನ್ನೊಂದು ಕಥೆ ಸಂಸ್ಕೃತ ಭಾಗವತದಲ್ಲೂ (೧೦–೮೯), ಕನ್ನಡ ಭಾಗವತದಲ್ಲೂ (೧೦– ೯೯) ಇದೆ. ಕೃಷ್ಣನು ಒಂದು ಸಲ ಅಶ್ವಮೇಧಯಾಗವನ್ನು ಮಾಡುತ್ತಾನೆ; ಇತರ ರಾಜರು ಬಂದಂತೆಯೇ ಪಾಂಡವರು ಕೂಡ ಅಲ್ಲಿಗೆ ಬಂದಿರುತ್ತಾರೆ. ಯಾಗ ಮುಗಿದಮೇಲೆ ಶ್ರೀಕೃಷ್ಣನು ಆಸ್ಥಾನದಲ್ಲಿರುವಾಗ ಒಬ್ಬ ಬ್ರಾಹ್ಮಣ ಕೈಯಲ್ಲಿ ಹುಲ್ಲನ್ನು ಹಿಡಿದುಕೊಂಡು ರಾಜದ್ವಾರದ ಮುಂದೆ ಬಿದ್ದು ಗೋಳಾಡುತ್ತಾ ನೃಪಕುಲದ ದೋಷ ದಿಂದ ನನ್ನ ಪುತ್ರರು ಸತ್ತರು ಎಂದು ಮೊರೆಯಿಟ್ಟನು. ಕೃಷ್ಣನ ಅಪ್ಪಣೆಯಂತೆ ಅರ್ಜುನ ಹೊರಕ್ಕೆ ಬಂದು ಬ್ರಾಹ್ಮಣನನ್ನು ಕಂಡನು. ವಿಚಾರವೇನೆಂದು ಅರ್ಜುನ ಕೇಳಿದಾಗ ಬ್ರಾಹ್ಮಣ'ನನ್ನ ಹೆಂಡತಿ ಸೂತಿಕಾಗೃಹದಲ್ಲಿ ಮಕ್ಕಳನ್ನು ಹೆರುತ್ತಾಳೆ,ಆದರೆ ಏನಾಗುತ್ತದೋ ತಿಳಿಯೆ, ಮಕ್ಕಳ ಮುಖವನ್ನು ನೋಡುವ ಭಾಗ್ಯ ನನಗಿಲ್ಲ'ಎಂದು ಹೇಳಿದನು. ಆಗ ಅರ್ಜುನ 'ನೀನು ಹೆದರಬೇಡ, ನಾನು ನಿನ್ನ ಮಕ್ಕಳನ್ನು ಬದುಕಿಸು ತ್ತೇನೆ, ನಡೆ ನಿನ್ನ ಮನೆಗೆ ಹೋಗೋಣ ಎಂದು ಹೇಳಿ ಕೃಷ್ಣನಿಗೆ ಈ ವಿಷಯವನ್ನು ತಿಳಿಸಿದಾಗ ಅವನು ಮಕ್ಕಳನ್ನು ಬದುಕಿಸುವುದು ನಿನ್ನ ಕೈಯಲ್ಲಿ ಅಸಾಧ್ಯ ಎಂದು ಬಿಟ್ಟನು. ಅರ್ಜುನ ಮಾತು ಕೊಟ್ಟಿದ್ದೇನೆ, ನಡೆಸಲೇ ಬೇಕು ಎಂದು ಹೊರಡಲನುವಾದನು. ರಥಾರೂಢನಾಗಿ ಅವನು ಬ್ರಾಹ್ಮಣನ ಮನೆಗೆ ಬಂದನು. ಬ್ರಾಹ್ಮಣನ ಹೆಂಡತಿಗೆ ಪ್ರಸವಕಾಲವಾಗಿತ್ತು. ಆಗ ಅರ್ಜುನ ಆ ಮನೆಯ ಸುತ್ತಲೂ ಬಾಣದ ಪಂಜರವನ್ನು ಬಿಗಿದು ದಿಗ್ಬಂಧನ ಮಾಡಿದ. ಹುಟ್ಟಿದ ಮಗು ಹೇಗೋ ಮಾಯವಾಯಿತು, ಪಂಜರ ಇದ್ದ ಹಾಗೆಯೇ ಇತ್ತು, ಅರ್ಜುನನಿಗೆ ಆಶ್ಚರ್ಯವಾಯಿತು. ಬ್ರಾಹ್ಮಣ ನಿನ್ನ ಕೈಲಿ ಏನಾಗುತ್ತದೆ ಎಂದು ಅರ್ಜುನನನ್ನು ಮೂದಲಿಸಿದನು. ಆಗ

ಅರ್ಜುನ ನನ್ನ ಸಾಹಸವನ್ನು ನೋಡು ಎಂದು ಹೇಳುತ್ತ ಹೊರಟು ಸ್ವರ್ಗ ಮರ್ತ್ಯ ಪಾತಾಳ ಲೋಕಗಳನ್ನೆಲ್ಲ ಹುಡುಕಾಡಿದನು. ಎಲ್ಲಿಯೂ ಆ ಮಗು ಕಾಣಲಿಲ್ಲ. ಅಗ್ನಿ ಪ್ರವೇಶ ಮಾಡುತ್ತೇನೆ ಎಂದು ಅರ್ಜುನ ಸಿದ್ಧನಾದಾಗ ಶ್ರೀಕೃಷ್ಣ 'ಬೇಡ ಬೇಡ, ಬಾಲಕನನ್ನು ನಿನಗೆ ತೋರಿಸಿಕೊಡುತ್ತೇನೆ' ಎಂದು ಸಮಾಧಾನ ಪಡಿಸಿ, ಅರ್ಜುನ ನೊಡನೆ ರಥವನ್ನೇರಿ ಪಡುವ ದಿಕ್ಕಿಗೆ ಪ್ರಯಾಣ ಮಾಡಿದನು. ಭಯಂಕರ ಕತ್ತಲೆ ಮುಂದಾಯಿತು. ಸುದರ್ಶನ ಚಕ್ರದಿಂದ ಕತ್ತಲೆಯನ್ನು ತೊಲಗಿಸಿ ಕೃಷ್ಣ ವಿಷ್ಣು ಲೋಕಕ್ಕೆ ಬಂದನು. ಅಲ್ಲಿನ ತೇಜಸ್ಸು ಕಣ್ಣು ಕೋರೈಸಿತು. ಅರ್ಜುನನಿಗೆ ಕೃಷ್ಣ ದಿವ್ಯ ದೃಷ್ಟಿಯನ್ನು ಕೊಟ್ಟನು. ಅವನಿಗೆ ವಿಷ್ಣುಪದ ಗೋಚರವಾಯಿತು. ಅಲ್ಲಿ ಆ ಬ್ರಾಹ್ಮಣ ಬಾಲಕರೆಲ್ಲರೂ ಇದ್ದರು. ಪುಣ್ಯಮೂರ್ತಿಗಳಾದ ನಿಮ್ಮನ್ನು ನೋಡ ಬೇಕೆಂದು ನಾನು ದ್ವಿಜ ಬಾಲಕರನ್ನು ಇಲ್ಲಿಗೆ ತಂದೆ ಎಂದು ಪರಮಾತ್ಮನು ಹೇಳಿ ಆ ಬಾಲಕರನ್ನು ಕೃಷ್ಣಾರ್ಜುನರೊಡನೆ ಕಳಿಸಿಕೊಟ್ಟನು. ಅವರನ್ನು ಅರ್ಜುನ ಬ್ರಾಹ್ಮಣನಿಗೆ ಕೊಟ್ಟು ಸಂತಸವುಂಟುಮಾಡಿದನು. ಈ ಕಥೆಯಲ್ಲಿ ಅರ್ಜುನ ಯಮನನ್ನು ಗೆದ್ದ ವಿಷಯವಿಲ್ಲ. ಪುತ್ರರನ್ನು ಎಂದು ಇಲ್ಲಿದ್ದರೆ ಪಂಪನು 'ಪಾರ್ವರ ಪಿಳ್ಳೆ' ಎಂದು ಒಬ್ಬ ಮಗನನ್ನು ಹೇಳಿದ್ದಾನೆ. ಮೊದಲನೆಯ ಕಥೆಯಲ್ಲಿ ಕಾಣುವ ಯಮ ಪರಾಭವವನ್ನೂ ಏಕಪುತ್ರತೆಯನ್ನೂ ಎರಡನೆಯ ಕಥೆಯಲ್ಲಿ ಪಂಪನು ಸೇರಿಸಿರುವನೆಂದು ತೋರುತ್ತದೆ.

(2) ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ: ವಿಜಯಾದಿತ್ಯನು ಚಾಲುಕ್ಯ ವಂಶದ ರಾಜ. ಇವನಿಗೆ ಬಿಜ್ಜ ಎಂಬ ಹೆಸರೂ ಉಂಟು. ಗೋವಿಂದರಾಜನು ರಾಷ್ಟ್ರ ಕೂಟ ಚಕ್ರವರ್ತಿ, ನಾಲ್ವಡಿಗೋವಿಂದ; ಈ ಚಕ್ರವರ್ತಿಗೆ ವಿಜಯಾದಿತ್ಯನ ಮೇಲೆ ಕೋಪವುಂಟಾಯಿತು; ಕಾರಣ ಬಿಜ್ಜನು ಪದ್ಮಾಕ್ಷ್ಯನೆಂಬವನನ್ನು ಕೊಂದು ಅನೇಕ ಸಾಮಂತರನ್ನೂ ದಂಡನಾಯಕರನ್ನೂ ಅಶ್ವಗಜ ಘಟಿಗಳನ್ನೂ ನಾಶ ಮಾಡಿದ್ದು. ಬಿಜ್ಜನು IIನೆಯ ಅರಿಕೇಸರಿಯ ರಕ್ಷಣೆಯನ್ನು ಬೇಡಿ ಅವನಿಗೆ ಶರಣಾದನು. ಅರಿಕೇಸರಿ ಅವನನ್ನು ರಕ್ಷಿಸಿದನು. ನಾಲ್ವಡಿ ಗೋವಿಂದರಾಜನ ಆಳ್ವಿಕೆಯ ಕೊನೆಯ ವರ್ಷ ಕ್ರಿ. ಶ. ೯೩೪. ಈ ಘಟನೆ ಸುಮಾರು ಅದೇ ವರ್ಷದಲ್ಲಿ ನಡೆದಿರಬಹುದು. ಈ ವಿಷಯವಾಗಿ ವೇಮುಲವಾಡ ಶಾಸನದಲ್ಲಿ "ಸಾಮನ್ತಾನ್ ದಂಡಮುಖ್ಯಾನ್ ನಿಜಭುಜ ಪರಿಘಾನ್ ಪ್ರಸ್ಫುರದ್ದಂಡಧಾರಾ। ನ್ನೀರಾಂ ಘೋರಾಶಿವಾಗ್ನಾಂ ಸ್ಫುರಗಕರಿ ಘಟಾಪತ್ತಿ ಸಂಪತ್ತಿಯುಕ್ತಾನ್ ॥ ಕೃತ್ವಾ ಪದ್ಮಾಕ್ಷ್ಯರ್ಯಮಾರ್ಯ್ಯಂ ಸ್ವಜನ ಪರಿಜನೈಸ್ಸನ್ನಿಹ-ತ್ಯಾಜಿರಂಗೇ। ಕ್ರುದ್ಧೇ ಗೋವಿಂದ ರಾಜೇ ಶರಣಮುಪಗತೋ ರಕ್ಷಿತೋ ಯೇನ ಬಿಜ್ಜಃ॥ ಎಂಬ ಪದ್ಯವಿದೆ. ಚಳುಕ್ಯ ಬಿಜ್ಜನು ಒಬ್ಬ ಸಾಮಂತ ರಾಜನಿದ್ದಿರಬಹುದು, ಪದ್ಮಾಕ್ಷ್ಯನು ಯಾರೋ ಚರಿತ್ರೆಗೆ ತಿಳಿಯದು. ಅರಿಕೇಸರಿ ಬಿಜ್ಜನನ್ನು ರಕ್ಷಿಸುವ ಕಾರ್ಯದಲ್ಲಿ ಅವನ ಮೇಲೆ ದಂಡನ್ನು ಕಳಿಸಿದನು. ಗೊಜ್ಜಿಗ (=ಗೋವಿಂದ) ಎಂಬ ಚಕ್ರವರ್ತಿ, ಈ ಸೈನ್ಯವನ್ನು ಅರಿಕೇಸರಿ ಸೋಲಿಸಿದನು.

(3) ಬದ್ದೆಗ ದೇವಂಗೆ ಸಕಳಸಾಮ್ರಾಜ್ಯಮನೋರಂತು ಮಾಡಿ: ನಾಲ್ಕನೆಯ ಗೋವಿಂದನೆಂಬ ರಾಷ್ಟ್ರಕೂಟ ಚಕ್ರವರ್ತಿ (೯೧೯–೯೩೪) ಸ್ತ್ರೀಲೋಲನಾಗಿದ್ದು ಅಸಮರ್ಥನಾದ ಆಡಳಿತಗಾರನಾಗಿದ್ದನು. ಇವನ ಚಿಕ್ಕಪ್ಪ ಬದ್ದೆಗ ದೇವ ಅಥವಾ ಮೂರನೆಯ ಅಮೋಘವರ್ಷ. ಅರಿಕೇಸರಿ ಚಕ್ರವರ್ತಿಯಾದ ಗೋವಿಂದರಾಜನನ್ನು ಸಿಂಹಾಸನದಿಂದ ತಳ್ಳಿ ಅವನ ಚಿಕ್ಕಪ್ಪನಾಗಿದ್ದ ಬದ್ದೆಗ ದೇವನನ್ನು ರಾಜನನ್ನಾಗಿ ಸ್ಥಾಪಿಸಿದನು. ಇವನು ೯೩೬–೯೩೯ರವರೆಗೆ ಆಳಿದನು. ಅರಿಕೇಸರಿ ಸಾಮಂತರಾಜನಾಗಿದ್ದರೂ ಚಕ್ರವರ್ತಿಯಮೇಲೆ ಕೈಮಾಡಿ ಅವನನ್ನು ಪದಚ್ಯುತನನ್ನಾಗಿ ಮಾಡಿ ತನ್ನನ್ನು ನಂಬಿದ ಬದ್ದೆಗ ದೇವನನ್ನು ಚಕ್ರವರ್ತಿ ಪದವಿಯಲ್ಲಿ ಸ್ಥಾಪಿಸಿದ್ದು ಅವನ ಶಕ್ತಿ ಪ್ರಭಾವಗಳನ್ನು ತೋರಿಸುತ್ತದೆ.

(4) ಕಕ್ಕಲನ ತಮ್ಮನಪ್ಪ ಬಪ್ಪುವ: ಈ ಕಕ್ಕಲನೂ ಅವನ ತಮ್ಮನಾದ ಬಪ್ಪುವನೂ ಯಾರೋ ತಿಳಿಯದು. ಅಪ್ರಕಟಿತವಾಗಿರುವ ಒಂದು ಶಿಲಾಹಾರರ ಶಾಸನದಲ್ಲಿ ಒಬ್ಬ ಕರ್ಕರನನ್ನು ಮೂರನೆಯ ಅಮೋಘವರ್ಷನು ಸೋಲಿಸಿದನೆಂದು ಕೆ. ಎ. ನೀಲಕಂಠಶಾಸ್ತ್ರೀ ಅವರು ಹೇಳುತ್ತಾರೆ. (Journal of the Madras University XV, No2, p 124); ಈ ಕರ್ಕನೇ ಕಕ್ಕಲನಿರಬೇಕೆಂದು ಅವರ ಅಬಿಪ್ರಾಯ.

**೫೩.** ದಶಕಂಧರಂ–ರಾವಣನು, ಆಡಿಪಾಡಿ–ಕುಣಿದು ಹಾಡಿ, ನೆಟ್ಟನೆ–ನೇರಾಗಿ, ಬೂತು–ಬಡಪ್ರಾಣಿ, ಕೊಳ್ವತೆಱದಿಂ–ತೆಗೆದುಕೊಂಡ ರೀತಿಯಿಂದ, ಬರಂಗಳಂ–ವರಗಳನ್ನು, ಈಶ್ವರನಲ್ಲಿ–ಶಿವನಿಂದ, ನಾಣ್ಗೆಟ್ಟಿರೆ–ನಾಚಿಕೆ ಕೇಡಾಗಲು, ಕೊಂಡನಲ್ಲದೆ–ತೆಗೆದುಕೊಂಡನಲ್ಲದೆ, ಒಟ್ಟಜೆಯಿಂದ–ಪರಾಕ್ರಮದಿಂದ, ಕೊಂಡನೆ–ತೆಗೆದುಕೊಂಡನೆ? ಪೇೞಿಂ–ಹೇಳಿರಿ; ಎನುತುಂ–ಎಂದು ಹೇಳುತ್ತಾ, ವಿಜಯಂ–ಅರ್ಜುನ, ನೆಲಕಿಕ್ಕಿ–ಶಿವನನ್ನು ನೆಲಕ್ಕೆ ಬೀಳಿಸಿ, ಗಂಟಲಂಮೆಟ್ಟಿದೆ–ಗಂಟಲನ್ನು ತುಳಿಯದೆ, ಇಂದ್ರಕೀಲದೊಳ್–ಇಂದ್ರಕೀಲ ಪರ್ವತದಲ್ಲಿ, ಹರನ ಪಾಶುಪತಾಸ್ತ್ರಮಂ–ಶಿವನ ಪಾಶುಪತವೆಂಬ ಬಾಣವನ್ನು, ಕೊಂಡನೆ–ತೆಗೆದುಕೊಂಡನೆ? ಎಂದರೆ ಶಿವನಗಂಟಲನ್ನು ಮೆಟ್ಟಿ ಅರ್ಜುನ ಪಾಶುಪತವನ್ನು ಪಡೆದನು; ರಾವಣನಾದರೆ ಆಡಿಹಾಡಿ ಶಿವನಿಂದ ವರಗಳನ್ನು ಪಡೆದನು. ಆದ್ದರಿಂದ ಅರ್ಜುನ ರಾವಣನಿಗಿಂತ ಪರಾಕ್ರಮಿ.

**೫೪.** ಪೊಂಗಿ–ಉಕ್ಕಿ, ಕಡಂಗಿ–ಉತ್ಸಾಹಿಸಿ, ಬೀರದೊಳೆ ಬೀಗುವ–ಶೌರ್ಯದಲ್ಲಿ ಗರ್ವಪಡುವ, ನಿನ್ನಣುಗಾಳ್–ನಿನ್ನ ಪ್ರೀತಿಗೆ ಆಸ್ಪದರಾದವರೇ, ನೋಡೆ–ನೋಡುತ್ತಿರಲು; ನಿನ್ನಂಗನೆಯರ್–ನಿನ್ನ ಸ್ತ್ರೀಯರು, ತೊವಲ್ಗೋಳೆ–ಕೈಯಲ್ಲಿ ಚಿಗುರನ್ನು, ಹಿಡಿದಿರಲು (ಅಪಾಯದಲ್ಲಿ ರಕ್ಷಣೆ ಬೇಡ ಬಂದವರು ಕೈಯಲ್ಲಿ ಚಿಗುರನ್ನು ಹಿಡಿಯುವುದು ಪದ್ಧತಿ), ಭಯಂಗೊಳೆ–ಹೆದರಿರಲು, ಚಿತ್ರಾಂಗದಂ–ಚಿತ್ರಾಂಗದನೆಂಬ ಗಂಧರ್ವ, ಕೋಡಗಗಟ್ಟುಕಟ್ಟಿ–ಕಪಿಯನ್ನು ಕಟ್ಟುವಹಾಗೆ ಕಟ್ಟಿ, ನಿನ್ನಂ–ನಿನ್ನನ್ನು, ಉಯ್ಯೆ–ತೆಗೆದುಕೊಂಡು ಹೋಗಲು, ಎಡೆಮಾಡದೆ–ತಡಮಾಡದೆ, ಅಸುಂಗೊಳೆ–

ಪ್ರಾಣವನ್ನು ಸೆಳೆಯುವಂತೆ, ಕಾದಿ ತಂದ ವೀರಂಗೆ–ಯುದ್ಧಮಾಡಿ ತೆಗೆದುಕೊಂಡು ಬಂದ ವೀರನಾದ, ಅರಿಗಂಗೆ–ಅರ್ಜುನನಿಗೆ, ಸುಯೋಧನಾ–ದುರ್ಯೋಧನನೇ, ನೀಂ–ನೀನು, ಮಲೆದು–ಗರ್ವಿಸಿ, ನಿಲ್ವುದು–ಎದುರಿಗೆ ನಿಲ್ಲುವುದು, ಪಾಟಿಪಲಂ–ಕ್ರಮವಲ್ಲವೆ, ಧರ್ಮವಲ್ಲವೇ? ಅಲ್ಲ, "ಬೀಗು–ಹರ್ಷಭಾವೇ, ಸ್ಥೌಲ್ಯೇಚ"; ಅಣುಗಾಳ್ : ಅಣುಗಾಳ್ ಕಾರ್ಯದ ಶೌರ್ಯದಾಳ್ ವಿಜಯದಾಳ್ ಎಂದು ಪ್ರಯೋಗಾಂತರ; ತೊವಲ್–ಎಳದಳಿರು[ತ. ಶುಪ್ಪಲ್, (ಮ). ತೋಲ್], ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದು ಬ್ರಹ್ಮಣ್ಯಂ ಭೋ ಎಂದಟುತ್ತುಂ (ಪಡ್ಮಾ ೩೩–೨); ನೀನವಧಾರಿಸೆಂದು ತೊವಲಂ ಮುಂದಿಕ್ಕಿದಂ ಭೂಪನಾ (ಸುಕುಮಾ ೨–೪೨).

೫೫. ನಿನ್ನಂ–ನಿನ್ನನ್ನು, ಕುರುರಾಜ–ದುರ್ಯೋಧನನೇ, ಗಂಧರ್ವರುಯ್ವಂದು–ಗಂಧರ್ವ ಸೆರೆ ಹಿಡಿದು ತೆಗೆದುಕೊಂಡು ಹೋಗುವಾಗ, ಗುರುವಿಲ್ಲಾ–ಗುರುವಾದ ದ್ರೋಣನು ಇಲ್ಲ, ಕರ್ಣನಿಲ್ಲಾ–ಕರ್ಣನು ಇಲ್ಲ; ಗುರುವಿನ ಮಗನಿಲ್ಲಾ–ಗುರುಪುತ್ರನಾದ ಅಶ್ವತ್ಥಾಮನು ಇಲ್ಲ; ಕೃಪಾಚಾರ್ಯನಿಲ್ಲಾ–ಕೃಪಾಚಾರ್ಯನು ಇಲ್ಲ; ನಿನ್ನ ಇನಿಬರೊಳ್ ತಮ್ಮಂದಿರೊಳ್–ನಿನ್ನ ಇಷ್ಟುಜನ ತಮ್ಮಂದಿರಲ್ಲಿ, ಆರ್ಇಲ್ಲ–ಯಾರೂ ಇಲ್ಲ; ಗಾಂಗೇಯನಿಲ್ಲಾ – ಭೀಷ್ಮನು ಇಲ್ಲ; ಮರುಳೇ–ತಿಳಿಗೇಡಿಯೇ, ಗಾಂಡೀವಿ–ಅರ್ಜುನನು, ಆರ್–ಯಾವನು, ಎಂದು, ಇಳಿಸಿ ನುಡಿವೆ–ಕಡೆಗಣಿಸಿ ಮಾತಾಡುವೆ; ನೆರೆದ ಕುರುಬಲಂ–ಸೇರಿದ ಕುರುಸೈನ್ಯ, ಕರುವಿಟ್ಟಂತೆ–ಎರಕಹೊಯ್ದಂತೆ; ಇರ್ದುದಲ್ಲಾ–ಇದ್ದಿತಲ್ಲವೆ; ತಂದವಂ–ನಿನ್ನನ್ನು ಬಿಡಿಸಿ ತಂದವನು, ಪಾರ್ಥನಲ್ಲಾ–ಅರ್ಜುನನಲ್ಲವೆ? "ಕರುವಿಡು–ಲೇಪ್ಯಕರಣೇ" ಇಲ್ಲಾ = ಇಲ್ಲಂಗಡ.

೫೬. ಅಮೋಘಂ–ವ್ಯರ್ಥವಿಲ್ಲದೆ, ಬವರಂಗೆಯ್ವಂ – ಯುದ್ಧಮಾಡೋಣ, ಎಂಬ ಬಗೆಯಿಂ–ಎಂಬ ಮನಸ್ಸಿನಿಂದ, ನೀಮೆಲ್ಲಂ–ನೀವೆಲ್ಲರೂ, ಆದಂ ರಣೋತ್ಸವದಿಂ–ಅತಿಶಯವಾದ ಯುದ್ಧಾಸಕ್ತಿಯಿಂದ, ನಿನ್ನೆಯೆ – ನಿನ್ನೆಯ ದಿವಸವೇ, ಪೋದ–ನಡೆದ, ಕಳೆದ, ಗೋಗ್ರಹಣದಂದು–ತುರುಗಳನ್ನು ಸೆರೆಹಿಡಿಯುವಾಗ, ಏನಾದಿರ್–ಏನಾದಿರಿ? ಅಂತು–ಹಾಗೆ, ಆ, ಪರಾಭವಮುಂ–ಸೋಲನ್ನು, ಚೀ–ಛೀ, ಮಱೆದಿರ್ದಿರ್ ಅಪ್ಪೊಡೆ–ನೀವು ಮರೆತು ಇದ್ದ ಪಕ್ಷದಲ್ಲಿ, ಅದೇನ್–ಅದೇನು, ಏಪೋದುದು–ಏನು ಹೋಯಿತು, ಇನ್ನುಂ–ಮತ್ತೆಯೂ, ಗುಣಾರ್ಣವನಿಂ–ಅರ್ಜುನನಿಂದ, ಮಹಾಗಾಂಡೀವ ನಿರ್ಘೋಷಮುಂ–ಗಾಂಡೀವದ ಮಹಾಟಂಕಾರನಾದವನ್ನು, ನಾಳೆಯೆ–ನಾಳೆಯ ದಿನವೇ, ಕೇಳದೆ–ಕಿವಿಯಾರ ಕೇಳದೆ, ಇರ್ಪಿರೆ–ಇರುತ್ತೀರಾ?

೫೭. ಈ ಪದ್ಯದಲ್ಲಿ ಶ್ರೀಕೃಷ್ಣ ಬರಲಿರುವ ಯುದ್ಧದ ಭೀಕರ ಚಿತ್ರವನ್ನು ಕೊಡುತ್ತಾನೆ : ಸುರಿವ–ಸುರಿಯುವ, ಸರಲ್–ಬಾಣಗಳು; ನರಲ್ವ ಭಟರ್–ನರಳುವ ಯೋಧರು; ಎತ್ತಮುರುಳ್ವಪಡೆಯಿಂ–ಎಲ್ಲೆಲ್ಲೂ ಉರುಳಿ ಬೀಳುವ ಸೈನ್ಯ; ಪೊರಳ್ವ ಸಿಂಧುರ ಘಟೆ–ಹೊರಳಾಡುವ ಆನೆಗಳ ಸಮೂಹ; ಬರ್ಪನೆತ್ತರ ಕಡಲ್–ಹರಿದು ಬರುವ ರಕ್ತದ ಸಮುದ್ರ; ಕುಣಿವಟ್ಟೆಗಳ್–ಕುಣಿದಾಡುವ ಮುಂಡಗಳು,

ಆಜಿಯೊಳ್–ಯುದ್ಧದಲ್ಲಿ, ಭಯಂಕರತರಮಪ್ಪಿನಂ–ಅತಿಭಯಂಕರವಾಗುತ್ತಿರಲು, ಪಗೆವರ–ಹಗೆಗಳ, ಒಕ್ಕಲೊಳ್–ಮನೆಗಳಲ್ಲಿ, ಓವೆನಲ್–ಓ ಎಂದು ಕೂಗಲು, ಒರ್ವರ್ ಇಲ್ಲದಂತಿರೆ–ಒಬ್ಬರೂ ಇಲ್ಲದಿರುವ ಹಾಗೆ, ತವೆ–ನಾಶವಾಗುವ ಹಾಗೆ, ಕೊಲ್ಗುಂ – ಕೊಲ್ಲುತ್ತಾನೆ. ಅಂತುಂ – ಹಾಗೆಯೂ, ಅರಿಕೇಸರಿಗೆ – ಅರ್ಜುನನಿಗೆ, ಆಂತು–ಎದುರಾಗಿ, ಬರ್ದುಂಕಲಕ್ಕುಮೇ – ಬದುಕಲಾಗುತ್ತದೆಯೇ, ತಪ್ಪಿಸಿಕೊಳ್ಳಲಾಗುತ್ತದೆಯೇ?

**ವಚನ**: ಕಾಳನೀಳ ಮೇಘದಂತು–ಪ್ರಳಯಕಾಲದ ಕರಿಮೋಡಗಳ ಹಾಗೆ, ಮಸಗಿ–ವಿಜೃಂಭಿಸಿ; ಅಸುರಕುಳವಿಳಯಕೇತುಗೆ – ಶ್ರೀಕೃಷ್ಣನಿಗೆ, ಫಣಿಕೇತು–ದುರ್ಯೋಧನ; ತಳಮುಳಿಸಿ–ತಳಮುಳವೆಂದು ಕೋಪದಿಂದ ಕುದಿದು; ಕಣ್ಗಾಣದೆ–ಕಣ್ಣು ಕಾಣದೆ, ವಿವೇಕ ಶೂನ್ಯನಾಗಿ.

**೫೮.** ಎೞ್ಪೋಗು–ಏಳು, ತೊಲಗಿಹೋಗು; ದೂತನಪ್ಪನ–ದೂತನಾಗಿರುವವನ, ಜೆಪ್ಪಿನ–ಬೇಡುವವನ, ನುಡಿಗೇಳ್ದು–ಮಾತನ್ನು ಕೇಳಿ, ಮುಳಿಯಲಾಗದು–ಕೋಪಮಾಡಿಕೊಳ್ಳಲಾಗುವುದಿಲ್ಲ; ನೀನುಂ-ನೀನು ಕೂಡ, ಪೆಟ್ಟುಪೋ-ಮೋಸಹೋಗಿ, ವಿದುರನೆಂಬ–ವಿದುರನೆನ್ನುವ, ಈ ತೊೞ್ತುಟ್ಟಿಯು–ಈ ತೊತ್ತಿಗೆ ಹುಟ್ಟಿದವನ. ಮನೆಯ ಕೂೞ್–ಮನೆಯ ಅನ್ನವೇ, ನುಡಿಯಿಸೆ–ಮಾತಾಡಿಸಲು, ನುಡಿದಯ್–ಮಾತಾಡಿದೆ, ಇಲ್ಲಿ ಎೞ್ಪೋಗು, ಜೆಪ್ಪಿನ– ಎಂದು ಪಾಠಗಳಿರಬಹುದು.

**ವಚನ**; ಅತಿಕುಪಿತ–ಅತಿಯಾಗಿ ಕೆರಳಿದ.

**೫೯.** ಭೀಮಸೇನಂ–ಭೀಮನು, ಕಡುಮುಳಿದು–ತೀವ್ರವಾಗಿ ಕೆರಳಿ, ನಿನ್ನ ತೊಡೆಗಳನುಡಿವೆಡೆಯೊಳ್–ನಿನ್ನ ತೊಡೆಗಳನ್ನು ಮುರಿಯುವ ಸಮಯದಲ್ಲಿ, ಆ ಪಡಪೊಳ್–ಆ ಹೊತ್ತಿನಲ್ಲಿ, ಅಥವಾ ಆಪತ್ತಿನಲ್ಲಿ, ಆಂ–ನಾನು, ಇದಂ–ಇದನ್ನು, ಈ ಬಿಲ್ಲನ್ನು, ಪಿಡಿಯಲ್ವೇಡಿಂದು–ಹಿಡಿಯಬೇಕೆಂದು, ಇರ್ದೆಂ–ಇದ್ದೆನು; ಪಿಡಿಯೆಂ–ಹಿಡಿಯೆನು, ಪೋಗು–ಹೋಗು, ಎಂದು, ಸಭೆಯೊಳ್–ಸಭೆಯಲ್ಲಿ, ಬಿಲ್ಲಂ–ಬಿಲ್ಲನ್ನು. ಉಡಿದಂ–ಮುರಿದನು, ವಿದುರ ತನ್ನ ಬಿಲ್ಲನ್ನು ಮುರಿದ ದೃಶ್ಯ ವ್ಯಾಸಭಾರತದಲ್ಲಿಲ್ಲ; ಕುಮಾರವ್ಯಾಸನ ಭಾರತದಲ್ಲಿದೆ (೫-೮-೬೭), ಪಂಪನ ಮಾತುಗಳನ್ನೇ ಇಲ್ಲಿ ಕಾಣಬಹುದು.

**ವಚನ**; ವಿಚ್ಛಿದುರ–ಒಡೆದುಹೋದ, ಮುರಿದ; ಬಾಳಂಕಿೞ್ತು–ಕತ್ತಿಯನ್ನು ಒರೆಯಿಂದ ಸೆಳೆದು; ಏವದಿಂ–ಕೋಪದಿಂದ; ನೋಳಪಿನಂತೆ–ನೋಡದಹಾಗೆ; ಉರುಳ್ತರೆ–ಉರುಳಿಬರಲು; ಪಾಯ್ದು–ನುಗ್ಗಿ.

**೬೦.** ಮುರಾಂತಕಂ–ಶ್ರೀಕೃಷ್ಣನು, ಸ್ವೈಷ್ಣವದಿಂ-ತನ್ನ ವಿಷ್ಣುಮಾಯೆಯಿಂದ, ಇರ್ದರಂ–ಸಭೆಯಲ್ಲಿದ್ದವರನ್ನು, ನಿಜೞಯು – ಪೂರ್ಣವಾಗಿ, ಮೋಹಿಸಿ – ಮೂರ್ಛೆಗೊಳಿಸಿ, ನೆಲನೆಲ್ಲಮುಂ–ಭೂಮಿಯನ್ನೆಲ್ಲ, ಮೂಜಡಿಮಾಡಿದಂದು–ಮೂರು ಹೆಜ್ಜೆಗಳಲ್ಲಿ ಅಳೆದಾಗ, ಆ ಬಲಿಗೆ–ಆ ಬಲಿಚಕ್ರವರ್ತಿಗೆ, ಅದ–ಉಂಟಾದ, ರೂಪಮಂ–ಬೃಹದ್ರೂಪವನ್ನು, ತೋಱಿದಂ–ತೋರಿಸಿದನು; ಈ ಜಗತ್ರಯಮುಂ–ಈ ಮೂರು

ಲೋಕಗಳನ್ನು. ಒರ್ಮೆಯೆ–ಒಂದೇ ಬಾರಿಗೆ. ನುಂಗುವ. ಕಾಳರೂಪಮುಂ–ಪ್ರಳಯದ ಆಕಾರವನ್ನು. ಯಮನ ರೂಪವನ್ನು. ಒರ್ಮೆಯೆ–ಒಂದೇಸಲಕ್ಕೆ, ವಿಶ್ವರೂಪಮುಂ–ಅನಂತಾದ್ಭುತರೂಪವನ್ನು, ತೋಱಿದಂ–ತೋರಿಸಿದನು,

**ವಚನ** : ವರದನಾಗಿ–ವರವನ್ನು ಕೊಟ್ಟವನಾಗಿ ; ತನಗೆ ಮಾಡಿ–ತನ್ನ ಪಕ್ಷವನ್ನಾಗಿ ಮಾಡಿಕೊಂಡು ;

೬೧. ಗುರುಕೃಪಶಲ್ಯ ಸಿಂಧುಸುತರಪ್ಪೊಡೆ–ದ್ರೋಣಕೃಪಶಲ್ಯಭೀಷ್ಮರಾದರೆ, ನಮ್ಮಯ–ನಮ್ಮ. ಪಕ್ಷಂ–ಕಡೆಯವರು ಎಂದರೆ ನಮಗೆ ಸೇರಿದವರು ; ಗುರುಸುತಂ–ಅಶ್ವತ್ಥಾಮನು, ಈಗಳ್–ಈಗ, ಎಮ್ಮೊಳ್–ನಮ್ಮಲ್ಲಿ, ಒಂದಿದಂ–ಸೇರಿದನು ; ಅಖಿಳಾಸ್ತ್ರವಿಶಾರದನಪ್ಪನುಂ–ಎಲ್ಲಾ ಬಗೆಯಾದ ಆಯುಧಗಳಲ್ಲೂ ನಿಪುಣನಾದವನೂ, ಗೆಲಲ್ಕೆ ಅರಿಯನುಂ–ಜಯಿಸಲಸಾಧ್ಯನೂ, ಒಂದಿಬಾರವನುಂ–ನಮ್ಮೊಡನೆ ಕೂಡಿಬರದವನೂ, ಅಂಕದ–ಪ್ರಸಿದ್ಧನಾದ, ಕರ್ಣನೆ–ಕರ್ಣನೇ ; ಸಮಸ್ತಧಾತ್ರಿಯೊಳ್–ಈ ಸಮಸ್ತ ಭೂಮಿಯಲ್ಲಿ, ಆತನಿಂ–ಅವನಿಂದ, ಬೀರಂ–ಪ್ರತಾಪವು, ಉರಿವರಿಪತ್ತು–ಉರಿಯಂತೆ ಉಲ್ಬಣವಾಯಿತು ; ಅವನಿಂದೆ–ಆತನಿಂದ, ಚಾಗಂ–ದಾನವು, ಎಸೆದತ್ತು–ಪ್ರಕಾಶಿಸಿತು.

೬೨. ಎಂತೆನೆ–ಹೇಗೆಂದರೆ, ವಜ್ರಿ–ಇಂದ್ರನು, ವಜ್ರಕವಚಕ್ಕೆ–ತನ್ನ ಸಹಜವಾದ ವಜ್ರಾಂಗಿಗೆ, ನಿಜೋಜ್ವಲ ಕುಂಡಲಕ್ಕೆ–ತನ್ನ ಪ್ರಕಾಶಮಾನವಾದ ಕರ್ಣಕುಂಡಲಗಳಿಗೆ, ಕೈಯಾಂತೊಡೆ–ಕೊಡು ಎಂದು ಕೈಯನ್ನು ಚಾಚಿದರೆ, ಪಾಂಡುಪುತ್ರರನೆ–ಪಾಂಡವರನ್ನೇ, ಕಾದು–ರಕ್ಷಿಸಿ, ಎರೆವಂದು–ಬೇಡಲುಬಂದು, ಉಗಿವಂದಲ್–ಛೇದಿಸುತ್ತಾನೆ ನಿಜವಾಗಿಯೂ, ಎಂದು–ಎಂಬುದಾಗಿ, ಮಂತಣದಿಂದೆ–ವಿವೇಕದ ಮಾತುಗಳಿಂದ, ಇನಂ–ಸೂರ್ಯನು, ಬಾರಿಸೆಯುಂ–ತಡೆದರು ಕೂಡ, ಎಂದುದನೆನ್ನದೆ–ಹೇಳಿದ್ದನ್ನು ಹೇಳದೆ ಎಂದರೆ ಒಪ್ಪದೆ, ಮಿಾಱಿ–ಉಲ್ಲಂಘಿಸಿ, ಒಡಲೊಳ್ ತೊಡರ್ದ ತನುತ್ರಮುಂ–ಮೈಗೆ ಅಂಟಿಕೊಂಡಿದ್ದ ಆ ವಜ್ರಕವಚವನ್ನು, ಬಿಡೆನೆಮರ್ದು–ಸುಲಿದು ಬರುವಹಾಗೆ ಕತ್ತರಿಸಿ, ಜಸಕ್ಕೆ ನೋಂತು–ಕೀರ್ತಿಗೆ ವ್ರತಹಿಡಿದು, ಎಂದರೆ ಕೀರ್ತಿಗಾಗಿ ಸಂಕಲ್ಪಿಸಿ, ಓರಂತು–ಕ್ರಮವಾಗಿ, ಕೊಟ್ಟಂ–ದಾನಮಾಡಿದನು. ಎಂದರೆ ಮೊದಲು ಕವಚವನ್ನೂ, ಅನಂತರ ಕುಂಡಲಗಳನ್ನೂ ದಾನವಾಗಿ ಕೊಟ್ಟನು ಎಂದು ತಾತ್ಪರ್ಯ ; ಎರೆವಂದು < ಎರೆಯಲ್ + ಬಂದು ;

೬೩. ಬೇಡಿದರ್ಗೆ–ಯಾಚಕರಿಗೆ, ಬರವಂ–ವರವನ್ನು, ಈವ–ಕೊಡುವ, ದೇವನೆ–ದೇವತೆಯಾದ ಇಂದ್ರನೇ, ವಲಂ–ದಿಟವಾಗಿಯೂ, ನಾಣ್ಗೆಟ್ಟುಬಂದು–ನಾಚಿಕೆಯನ್ನು ಕಳೆದುಕೊಂಡುಬಂದು, ಎನ್ನಂ–ನನ್ನನ್ನು, ಇಂತು–ಹೀಗೆ, ಎರೆದಂ–ಬೇಡಿದನು ; ಬರ್ದರೊಳ್–ಬಾಳಿದವರಲ್ಲಿ, ಆನೆ–ನಾನೇ, ಬರ್ದನ್–ಬಾಳಿದವನು, ಎನುತುಂ–ಎಂದು ಹೇಳುತ್ತ. ನೇರ್ಸಲ್ಲಿ–ಕತ್ತರಿಸುವಾಗ, ಕೆನ್ನೆತ್ತರುಂ–ಕೆಂಪುರಕ್ತವೂ; ಬಿರಿಕಂಡಂಗಳೆ–ಸೀಳಿದ ಮಾಂಸಖಂಡಗಳೇ, ಬೀಱಲುಣ್ಮೆ–ಧಾರೆಯಾಗಿ

ಸುರಿಯುತ್ತಿರಲು, ಮನದ–ಮನಸ್ಸಿನ, ಒಂದು ಅಣ್ಮು–ಒಂದು ಶಕ್ತಿ, ಇಟ್ಟಳಂ–ಅತಿಶಯವಾಗಿ, ಪೊಣ್ಮೆ–ತಲೆದೋರಲು, ಆ ಕರ್ಣನಾ ಕವಚಂಗೊಂಡಂದಂ–ಆ ಕರ್ಣನ ಕವಚವನ್ನು ತೆಗೆದುಕೊಂಡ ರೀತಿ, ನೋಡೆ–ನೋಡಲು, ವೀರರಸಕ್ಕೆ–ಶೌರ್ಯರಸಕ್ಕೆ, ಆಗರಮಾಯ್ತು–ಮನೆಯಾಯಿತು, ಬೀಜ್ > ಬೀಜಲ್ ; ಬೀಳುವಿಕೆ ಎಂಬರ್ಥದ ಭಾವನಾಮ ; " ನೇರ್–ಕೃಂತನೇ "

**ವಚನ :** ನೆತ್ತರ್ ಪನಪನ ಪನಿಯೆ–ರಕ್ತ ಪನಪನ ಎಂದು ತೊಟ್ಟಿಡಲು ; ತಿದಿಯುಗಿವಂತೆ–ಚರ್ಮವನ್ನು ಸುಲಿಯುವಹಾಗೆ ; ಉಗಿದು–ಸೀಳಿ ; ಭೇದಿಸಿದಪ್ಪೆಂ–ಭೇದೋಪಾಯದಿಂದ ಛಿದ್ರಿಸುತ್ತೇನೆ : ಚೊಚ್ಚಿಲ ಮಗನಪ್ಪ–ಮೊದಲ ಮಗನಾದ ; ಸೂರ್ಯಸೂನುವಂ–ಕರ್ಣನನ್ನು : ರಥಾಂಗಧರಂ–ಚಕ್ರಪಾಣಿ, ಕೃಷ್ಣ : ಕಿಱಿದಂತರಂ–ಸ್ವಲ್ಪದೂರ ; ಕಳಿಪಿ – ಕಳಿಸಿಕೊಟ್ಟು, ಮಗುೞ್ವಿ – ಹಿಂದಿರುಗುವೆ ; ಪೋಪಂ–ಹೋಗೋಣ ;

**೬೪** ಕೃಷ್ಣನು ಕರ್ಣನನ್ನು ಭೇದಿಸಿ ಅಧೀರನನ್ನಾಗಿ ಮಾಡಿದ್ದು : ಕರ್ಣ–ಕರ್ಣನೇ, ಭೇದಿಸಲೆಂದೆ–ಮನಸ್ಸನ್ನು ಒಡೆಯಬೇಕೆಂದೇ, ನುಡಿದರ್–ಮಾತಾಡಿದರು, ಎನ್ನದಿರ್–ಎಂದು ಹೇಳದೆ ಇರು ; ಒಯ್ಯನೆ–ಮೆಲ್ಲಗೆ, ಸಮಾಧಾನದಿಂದ, ಕೇಳ–ಕೇಳು ; ನಿನ್ನಾದಿಯೊಳ್–ನಿನ್ನ ಮೊದಲಲ್ಲಿ, ಹುಟ್ಟಿನಲ್ಲಿ, ಅಬ್ಬೆ–ತಾಯಿ, ಕೊಂತಿ–ಕುಂತಿ ; ನಿನಗೆ ಅಮ್ಮಂ–ನಿನಗೆ ತಂದೆ. ಅಹರ್ಪತಿ–ಸೂರ್ಯನು ; ಪಾಂಡುನಂದನರ್–ಪಾಂಡವರು, ಸೋದರರ್ – ಒಡಹುಟ್ಟಿದವರು ; ಆಂ – ನಾನು, ಎಯ್ದೆ – ಚೆನ್ನಾಗಿ, ಮುಯ್ದುನನೆಂ–ಮೈದುನನಾಗಿದ್ದೇನೆ : ಪೆಱತೇಂ ಪಱಮಾತೋ–ಬೇರೇನು ವಿಚಾರವೋ, ಸುದ್ದಿಯೋ, ನಿನ್ನದೀ ಮೇದಿನಿ – ಈ ಭೂಮಿ ನಿನ್ನದು, ಪಟ್ಟಮುಂ ನಿನತೆ – ರಾಜ್ಯ ಪಟ್ಟವು ಕೂಡ ನಿನ್ನದೇ, ನೀನಿರೆ–ನೀನು ಇರುವಾಗ, ಮತ್ತೆ ಪೆಱರ್–ಮತ್ತೆ ಇತರರು, ನರೇಂದ್ರರೇ–ರಾಜರೇ ? ಅಲ್ಲ. ಈ ಪದ್ಯದಲ್ಲಿ ಹತ್ತು ಸಣ್ಣ ಸಣ್ಣ ವಾಕ್ಯಗಳಿವೆ. ಇವು ಒಂದಾದಮೇಲೊಂದು ಉಸಿರುಬಿಡುವುದಕ್ಕೆ ಕೂಡ ಅವಕಾಶವಿಲ್ಲದಂತೆ ಬಂದು, ಕರ್ಣನ ಆಶ್ಚರ್ಯ ಹರ್ಷವಿಷಾದಗಳನ್ನು ಕಲಕಿ ಪೆಗ್ಗಳಿಸುತ್ತ ಬೀಸುತ್ತವೆ, ಅನಿರೀಕ್ಷಿತವಾಗಿ ಕರ್ಣನ ಮನವನ್ನು ಅಪ್ಪಳಿಸುತ್ತವೆ.

**೬೫.** ಉತ್ತುಂಗಸ್ತನಿ–ಎತ್ತರವಾದ ಮೊಲೆಯುಳ್ಳವಳು, ಎಂದರೆ ಹೊಸಪ್ರಾಯದಲ್ಲಿರುವ ಕುಂತಿ, ಕೆಯ್ಯೆಡೆಯೆಂದು–ನ್ಯಾಸವೆಂದು, ರಕ್ಷಣೆಗಿಡುವವಸ್ತುವೆಂದು, ಗಂಗೆಗೆ–ಗಂಗಾದೇವಿಗೆ, ಕೊಟ್ಟು ಪೋಗೆ–ಕೊಟ್ಟು ಹೋಗಲು, ಸೂತಂ–ಬೆಸ್ತರ ಕುಲದವನಾದ ಸೂತನೆಂಬವನು, ಕಂಡು–ನೋಡಿ, ಆತ್ಮಾಂಗನೆಗೆ–ತನ್ನ ಹೆಂಡತಿಯಾದ, ರಾಧೆಗೆ–ರಾಧೆಯೆಂಬವಳಿಗೆ, ಇತ್ತು – ಕೊಟ್ಟು, ಮನಂಗೊಳೆ – ಮನಸ್ಸನ್ನು ಮೆಚ್ಚಿಸಲು, ರಾಧೇಯನೆನಿಸಿ–ರಾಧೇಯ ಎನ್ನಿಸಿಕೊಂಡು, ಸೂತಜನಾದಯ್–ಸೂತ ಪುತ್ರನಾದೆ.

**೬೬.** ನಿನ್ನುತ್ಪತ್ತಿಯಂ – ನಿನ್ನ ಜನ್ಮವನ್ನು, ಇಂತೆಂದು – ಹೀಗೆ ಎಂದು, ಎನ್ನರುಂ – ಎಂಥವರೂ, ಅಣಂ – ಸ್ವಲ್ಪವೂ, ಅಱಿಯರ್ – ತಿಳಿಯರು : ಆಂ ಅಱಿ

ವೆಂ–ನಾನು ತಿಳಿದಿದ್ದೇನೆ; ಸಹದೇವಂ–ಸಹದೇವನು, ಪನ್ನಗಕೇತು–ದುರ್ಯೋಧನನು, ದಿನೇಶಂ–ಸೂರ್ಯನು, ನಿನ್ನಂಬಿಕೆ ಕುಂತಿ–ನಿನ್ನ ತಾಯಿಯಾದ ಕುಂತಿ, ಇಂತಿವರ್– ಈಗೆ ಇವರು, ನೆಱೆ–ಚೆನ್ನಾಗಿ, ಬಲ್ಲರ್–ತಿಳಿದಿದ್ದಾರೆ.

ವಚನ : ಏತಱೊಳ್–ಯಾವುದರಲ್ಲಿ; ಪೊಡೆವಟ್ಟು–ನಮಸ್ಕರಿಸಿ; ಮುನ್ನಂ– ಮೊದಲು; ಏಱಲ್ ತರಿಸಿದೊಡೆ–ಹತ್ತುವುದಕ್ಕೆ ಪೀಠವನ್ನು ತರಿಸಿದರೆ; ಏವಯಿಸಿ– ಅಸಮಾಧಾನಹೊಂದಿ, ಕುಪಿತನಾಗಿ; ಪೋಗಲ್ವೇೞ್ದು–ಹೋಗುವಂತೆ ಹೇಳಿ.

೬೭. ಆನಿರೆ–ನಾನು ಇರಲು, ಇರುವಾಗ, ನೀಂ–ನೀವು, ನಿಜಾಂಗುಲಿಗಂ– ಜೆಸ್ತ್ರರವನಾದ ಕರ್ಣನಿಗೆ, ಇದೇಕೆ – ಇದೇತಕ್ಕೆ, ದಯೆಗೆಯ್ದಿರೋ – (ಕುಳ್ಳಿರಲು ಮೊದಲು ಪೀಠವನ್ನು ಕೊಟ್ಟು) ದಯೆತೋರಿಸಿರಿದಿರೋ! ಪೇೞಿಂ–ಹೇಳಿರಿ, ಎಂದ ಆ ನರನಾಥನಂ–ಎಂದ ಆ ದುರ್ಯೋಧನನನ್ನು, ತನ್ಮುನಿ–ಆ ಸತ್ಯಂತಪನೆಂಬ ಋಷಿ, ತಿಳಿಪೆ–ತಿಳಿಯಹೇಳಲು, ಭೂಭುಜಂ–ದುರ್ಯೋಧನ, ಎಯ್ದೆ–ಚೆನ್ನಾಗಿ, ನಂಬಿ–ನಂಬಿ ಕೊಂಡು, ಕಾನೀನ–ಕರ್ಣನೇ, ಒಯ್ಯನೆ–ಮೆಲ್ಲಗೆ, ಮುಳ್ಳೊಳೆ – ಮುಳ್ಳಿನಿಂದಲೇ, ಮುಳ್ಳಂ–ಮುಳ್ಳನ್ನು. ಸಮಂತು–ಚೆನ್ನಾಗಿ, ಪಾಟಿಸುವೆಂ–ಕೀಳುತ್ತೇನೆ, ಎಂದು– ಎಂಬುದಾಗಿ, ತಾಂ–ತಾನು, ಈ ನಯದಿಂದೆ–ಈ ನೀತಿಯಿಂದ, ಪೆರ್ಚಿ–ಉಬ್ಬಿ, ಪೊರೆದು–ನಿನ್ನನ್ನು ಕಾಪಾಡಿ, ಅಂದು – ಆ ದಿನ, ಅೞ್ಕಱೊಳ್ – ಪ್ರೀತಿಯಲ್ಲಿ, ಒಡನುಂಡನಲ್ಲನೇ – ಜೊತೆಗೂಡಿ ಊಟಮಾಡಿದನಲ್ಲವೇ? ಕರ್ಣನಿಗೆ ಲಭಿಸಿದ ದುರ್ಯೋಧನ ಮೈತ್ರಿಗೆ ಕಾರಣ ದುರ್ಯೋಧನನ ಸ್ವಾರ್ಥಚಿಂತನೆಯೆಂಬಂಶವನ್ನು ಇಲ್ಲಿ ಕವಿ ಬಹುನಯವಾಗಿ ನಿರೂಪಿಸಿದ್ದಾನೆ.

೬೮. ಕೃಷ್ಣನ ಮಾತಿನಿಂದ ಕರ್ಣನ ಮೇಲೆ ಆದ ಪರಿಣಾಮ ; ಎನೆ ಎನೆ– ಎನ್ನಲೆನ್ನಲು, ಬಾಷ್ಪವಾರಿ – ಕಣ್ಣೀರು, ಪುಳಕಂಬೆರಸು – ರೋಮಾಂಚದೊಡನೆ, ಒರ್ಮೆಯೆ–ಒಂದೇ ಬಾರಿ, ಪೊಣ್ಮೆ–ಹೊಮ್ಮಲು, ನೆಗೞ್ತೆ ಪೊಗೞ್ತೆಯುನಾಂಪಿನಂ– ನನ್ನ ಕಾರ್ಯ ಹೊಗಳಿಕೆಯನ್ನು ಪಡೆಯುತ್ತಿರಲು, ಮುನ್ನೆ ನೀವಿದನೆನಗೇಕೆ ಪೇೞ್ದಿರೋ–ಮೊದಲೇ ನೀವು ಇದನ್ನು ನನಗೆ ಏಕೆ ಹೇಳಿದಿರೋ : ಸುಯೋಧನಂ– ದುರ್ಯೋಧನ, ಎನಗೆ ಒಳ್ಳಿಕೆಯ್ದು–ನನಗೆ ಒಳ್ಳೆಯದನ್ನು ಮಾಡಿದ. ಕೃತಮಂ– ಉಪಕಾರವನ್ನು, ಪೆಱಗಿಕ್ಕಿ–ಹಿಂದಿರಿಸಿ ಎಂದರೆ ಅವಜ್ಞೆಮಾಡಿ, ನೆಗೞ್ತೆ ಮಾಸೆ–ನನ್ನ ಕೀರ್ತಿ ಮಾಸುತ್ತಿರಲು, ನಣ್ಪಿನ ನೆವದಿಂದೆ–ನಂಟತನದ ನೆಪದಿಂದ, ಆನ್–ನಾನು, ಪಾಂಡವರಂ–ಪಾಂಡವರನ್ನು, ಒಳವೊಕ್ಕೊಡೆ–ಒಳಗೆ ಸೇರಿದರೆ ಎಂದರೆ ಅವರೊಡನೆ ಒಂದಾದರೆ, ನೀಮೆ–ನೀವೇ, ಪೇಸಿರೇ–ಅಸಹ್ಯಪಟ್ಟುಕೊಳ್ಳುವುದಿಲ್ಲವೇ? ದುರ್ಯೋಧನ ನಿಗೆ ಕೃತಘ್ನನಾಗಿ ಪಾಂಡವರೊಡನೆ ನಾನು ಸೇರಿಕೊಂಡರೆ ನೀವು ಕೂಡ ನನ್ನ ವಿಷಯದಲ್ಲಿ ಹೇಸುವಂತಾಗುತ್ತದೆ. 'ನೀಮೆ' ಎಂಬ ಮಾತು ಧ್ವನಿಮಯವಾಗಿದೆ.

೬೯. ಕರ್ಣನ ಸ್ನೇಹದ, ಸ್ವಾಮಿಭಕ್ತಿಯ ಪರಾಕಾಷ್ಠತೆಯ ಚಿತ್ರ ಈ ಪದ್ಯದಲ್ಲಿದೆ. ಇದರಿಂದ ಸಹೃದಯ ಪ್ರತಿಭೆಗೆ ಒಂದು ಇಡಿ ದೃಶ್ಯವೇ ಕಾಣಿಸುತ್ತದೆ.

ದುರ್ಯೋಧನನ ಅಂತಃಪುರದಲ್ಲಿ ಅವನ ರಾಣಿ ಭಾನುಮತಿ ಕರ್ಣನೊಡನೆ ಪಗಡೆ ಯಾಡುತ್ತಿದ್ದಾಳೆ; ದುರ್ಯೋಧನ ಅವರಿಬ್ಬರ ಆಟವನ್ನು ನೋಡುತ್ತಿದ್ದಾನೆ. ಭಾನುಮತಿ ತನ್ನ ಮುತ್ತಿನ ಹಾರವನ್ನು ಆಟಕ್ಕೆ ಪಣವಾಗಿ ಒಡ್ಡಿರುತ್ತಾಳೆ. ಅವಳು ಸೋತಳು ಆಟದಲ್ಲಿ, ಪಣವನ್ನು ಕೊಡದೆ ಅವಳು ಎದ್ದು ಹೋಗುವುದರಲ್ಲಿದ್ದಾಗ ಕರ್ಣ ಅವಳ ಮುತ್ತಿನ ಹಾರಕ್ಕೆ ಕೈ ಚಾಚಿದ. ಅದು ಹರಿದುಹೋಗಿ ಬಿಡಿಮುತ್ತುಗಳು ಸುರಿದು ದಿಕ್ಕಾಪಾಲಾಗಿ ಚೆದರಿಹೋದುವು. ಆಗ ಕರ್ಣನಿಗೆ ತಾನೇನು ಮಾಡಿದೆನೆಂಬ ಅರಿವುಂಟಾಗಿ ಹೆದರಿಕೆಯಿಂದ ನಡುಗುತ್ತಿರುವಲ್ಲಿ ಹತ್ತಿರಿದ್ದ ದುರ್ಯೋಧನ ಸ್ವಲ್ಪವೂ ಕೋಪಿಸಿಕೊಳ್ಳದೆ 'ಕರ್ಣ, ಮುತ್ತುಗಳನ್ನು ಆರಿಸಿಕೊಡಲೆ' ಎಂದು ಹೇಳುವನು. ಇಂಥ ಸ್ವಾಮಿಯನ್ನು ನಾನು ಬಿಟ್ಟುಬಂದರೆ, ನಾನು ಯಾರಿಗೂ ಬೇಡವಾದವ ನಾಗುತ್ತೇನೆ ಎಂದು ಕೃಷ್ಣನಿಗೆ ಕರ್ಣ ಹೇಳುವನು.

ಭಾನುಮತಿ–ದುರ್ಯೋಧನನ ರಾಣಿ ಭಾನುಮತಿಯು. ನೆತ್ತಮನಾಡಿ–ಕರ್ಣ ನೊಡನೆ ಪಗಡೆಯನ್ನಾಡಿ, ಸೋಲ್ತೊಡೆ–ಸೋತರೆ, ಸೋಲಮುಂ–ಸೋತುದನ್ನು ಎಂದರೆ ಪಣವನ್ನು, ಈವುದು–ಕೊಡುವುದು, ಎಂದು–ಎಂಬುದಾಗಿ, ಕಾಡುತ್ತಿರೆ–ಕಾಡುತ್ತ ಇರಲು, ಲಂಬಣಂ ಪಱಿಯೆ–ಹಾರ ಹರಿದುಹೋಗಲು, ಮುತ್ತಿನ ಕೇಡನೆ–ಮುತ್ತುಗಳ ಹಾನಿಯನ್ನೇ; ನೋಡಿ ನೋಡಿ – ನೋಡುತ್ತ, ನೋಡುತ್ತ, ಬಳ್ಕುತ್ತಿರೆ – ಕರ್ಣ ನಡುಗುತ್ತಿರಲು, ಏವಮಿಲ್ಲದೆ – ಅಸಮಾಧಾನವಿಲ್ಲದೆ ಎಂದರೆ ಪ್ರಸನ್ನಚಿತ್ತನಾಗಿ, ಇವಂ–ಈ ಮುತ್ತುಗಳನ್ನು, ಆಯ್ದುವುದೋ–ಆರಿಸಿಕೊಡುವುದೋ, ತಪ್ಪದೆ–ತಪ್ಪಿಲ್ಲದೆ, ಪೇೞಿಂ–ಹೇಳಿರಿ, ಎಂಬ–ಎಂದು ಹೇಳುವ, ಭೂಪೋತ್ತಮನಂ–ರಾಜಶ್ರೇಷ್ಠನಾದ ದುರ್ಯೋಧನನನ್ನು, ಬಿಸುಟ್ಟು–ತೊರೆದು, ನಿಮ್ಮೊಳೆ ಪೊಕ್ಕೊಡೆ–ನಿಮ್ಮಲ್ಲಿಯೇ ನಾನು ಹೊಕ್ಕರೆ, ಎಂದರೆ ಸೇರಿಕೊಂಡರೆ, ಬೇಡನಲ್ಲೆನೇ–ಯಾರಿಗೂ ಬೇಡವಾದವ ನಲ್ಲವೇ; ಅಥವಾ ಕಿರಾತನಾಗುತ್ತೇನಲ್ಲವೇ ?

ಕರ್ಣನ ಸ್ನೇಹದ ಭವ್ಯತೆಯನ್ನು ಇದಕ್ಕಿಂತ ಮಿಗಿಲಾಗಿ ವರ್ಣಿಸುವುದು ಕಷ್ಟ, ಪಂಪನಿಗೆ ತನ್ನ ಪೋಷಕ ಅರಿಕೇಸರಿ ರಾಜನಲ್ಲಿದ್ದ ಆತ್ಮೀಯ ಸ್ನೇಹದ ಸ್ವಾನುಭವ ಇಲ್ಲಿ ಆದರ್ಶೀಕೃತವಾಗಿರುವಂತೆ ತೋರುತ್ತದೆ. ಇದು ಅಪೂರ್ವವೂ ಅದ್ಭುತ ರಮಣೀಯವೂ ಆಗಿರುವ ಪ್ರತಿಭಾವ್ಯಾಪಾರ. ಚಿಂತಿಸಿದಷ್ಟು ಬೆಳೆಯುತ್ತ ಹೋಗುತ್ತದೆ. ಈ ಪದ್ಯದ ಭಾವವಲ್ಲರಿ ಇದರ ವಿಚಾರವಾಗಿ ವಿದ್ವಾಂಸರಲ್ಲಿ ಕೊಂಚ ಚರ್ಚೆ ನಡೆದಿದೆ. ಪಂಪನ ಅನಂತರ ಬಂದ ತಮಿಳು ಕವಿ ವಿಲ್ಲಿಪುತ್ತೂರನ ಭಾರತದಲ್ಲಿ (ಕಾಲ ಸು ೧೩೭೫) ಈ ಪದ್ಯವನ್ನು ಹೋಲುವ ಪದ್ಯವೊಂದಿದೆಯೆಂದು ಬಲ್ಲವರು ಹೇಳುತ್ತಾರೆ.

ವಚನ: ಒಡಂಬಡದುದಂ – ಒಪ್ಪದೆ ಇರುವುದನ್ನು; ಮಗುೞ್ವೇೞ್ದು– ಹಿಂದಿರುಗಲು ಹೇಳಿ! ಆತ್ಮಾಲಯಕ್ಕೆ–ತನ್ನ ಮನೆಗೆ.

೨೦. ಕರ್ಣನ ಧರ್ಮಸಂಕಟ: ಕುರುಪತಿಗೆ–ದುರ್ಯೋಧನನಿಗೆ, ದೈವಬಲಂ–

ವಿಧಿಯುಬಲ ಇಲ್ಲ. ಗುರು ಗುರುಪುತ್ರ ಸಿಂಧುಸುತರು–ದ್ರೋಣಾಶ್ವತ್ಥಾಮ ಭೀಷ್ಮರು, ಆಗಳುಂ – ಯಾವಾಗಲೂ, ಆಜಿಗೆ – ಯುದ್ಧಕ್ಕೆ, ಮೇಲ್ಮಲೆಗೆಪ್ಪರ್ – ಮೇಲುಮೇಲೆ ಹುರುಡನ್ನು ಮಾಡುತ್ತಾರೆ, ಎಂದರೆ ಮನಸ್ಸಿಟ್ಟು ಹೋರಾಡುವುದಿಲ್ಲ; ಅಜ್ಜಸುಂ–ಸ್ವಾಮಿಯಾದ ದುರ್ಯೋಧನನೂ, ಎನ್ನನೆ ನಚ್ಚಿ–ನನ್ನನ್ನೇ ನಂಬಿ, ಪೆರ್ಚಿ–ಉಬ್ಬಿ, ಮುಂ–ಮೊದಲು, ಪೊರೆದಂ–ಕಾಪಾಡಿದನು; ಇದಿರ್ಚಿ ಕಾದುವವರುಂ–ಎದುರಿಸಿ ಯುದ್ಧ ಮಾಡುವವರೂ, ಎನ್ನಯ ಸೋದರರ್–ನನ್ನ ಒಡಹುಟ್ಟಿದವರು; ನೋಡಿ, ಎಂತು–ಹೇಗೆ, ಕೊಕ್ಕರಿಸದೆ–ಹೇಸದೆ, ಕೊಲ್ವೆಂ–ಕೊಲ್ಲುತ್ತೇನೆ; ರಣರಂಗಭೂಮಿಯೊಳ್–ಯುದ್ಧ ಭೂಮಿಯಲ್ಲಿ. ಆಂ–ನಾನು, ಎನ್ನೊಡಲಂ–ನನ್ನ ದೇಹವನ್ನು, ತವಿಸೆಂ–ನಾಶಮಾಡುತ್ತೇನೆ.

೭೧. ಪಾಂಡವರಂ – ಪಾಂಡವರನ್ನು, ಸೋದರರೆಂದು – ಸಹೋದರರೆಂದು, ಅಱಿದೆಂ–ತಿಳಿದೆನು; ಎಂತು–ಹೇಗೆ, ಎನ್ನರಂ–ನನ್ನವರನ್ನು, ಕೊಲ್ವೆಂ–ಕೊಲ್ಲುವೆನು;? ಅೞ್ಕಱೊಳ್ – ಪ್ರೀತಿಯಲ್ಲಿ, ಎನ್ನಂ – ನನ್ನನ್ನು, ಪೊರೆದು – ಕಾಪಾಡಿ, ಎಯ್ದೆ–ಚೆನ್ನಾಗಿ, ನಂಬಿದ–ನೆಚ್ಚಿದ. ನೃಪಂಗೆ–ದೊರೆಗೆ, ಸುಯೋಧನನಿಗೆ, ಆಜಿಯೊಳ್–ಯುದ್ಧದಲ್ಲಿ, ಎಂತು–ಹೇಗೆ, ತಪ್ಪುವೆಂ–ತಪ್ಪುತ್ತೇನೆ;? ತಱಸಂದು–ನಿಶ್ಚಯಮಾಡಿ, ಉದ್ಧತವೈರಿ ಭೂಪಬಲದ–ಗರ್ವಿಷ್ಠರಾದ ಶತ್ರುರಾಜರ ಸೈನ್ಯದ, ಒಡ್ಡು–ಸಮೂಹ, ಅೞ್ಕಾಡೆ – ನಾಶವಾಗಲು, ಲೆಕ್ಕಕ್ಕೆ – ಗಣನೆಗೆ, ತಳ್ತಿಱಿದು – ಸಂಧಿಸಿ ಹೋರಾಡಿ, ಎನ್ನಾಳ್ದನಿಂ–ನನ್ನಸ್ವಾಮಿಗಿಂತ, ಮುಂಚೆ–ಮುಂಚಿತವಾಗಿ, ಕಟ್ಟಾಯಮಂ–ತೀವ್ರತರ ಸಾಮರ್ಥ್ಯವನ್ನು, ಕೈಕೊಂಡು–ಸ್ವೀಕರಿಸಿ, ನಿಱಿಸೆಂ–ಸ್ಥಾಪಿಸುತ್ತೇನೆ.

ವಚನ: ಮುಂತಪ್ಪ ಕಜ್ಜಮಂ – ಮುಂದಾಗುವ ಕಾರ್ಯವನ್ನು; ಬಗೆದು–ಆಲೋಚಿಸಿ; ಅವಾರ್ಯವೀರ್ಯಂ–ತಡೆಯಲಾಗದ ಪರಾಕ್ರಮವುಳ್ಳವನು; ಸೂರ್ಯದಿನದಂದು–ಭಾನುವಾರದಲ್ಲಿ; ಮಂದಾಕಿನಿಯುಂ ಮಿಾಯಲೆಂದು–ಗಂಗೆಯಲ್ಲಿ, ಸ್ನಾನ ಮಾಡಲೆಂದು: ದೇವಸವಳದ – ದೇವಮಾನದ?; ಒಟ್ಟಿ–ರಾಶಿಮಾಡಿ, ಬೆಟ್ಟಾಗೆ–ಬೆಟ್ಟದಂತಾಗಲು, ಪೂಜಿಸಿ–ಸೇರಿಸಿ, ರಾಶಿಮಾಡಿ.

೭೨. ಸೋರ್ವ–ಸುರಿಯುತ್ತಿರುವ, ವಸುಧಾರೆಯುಂ–ಚಿನ್ನದ ಮಳೆಯನ್ನೂ; ಕೆಯ್ಸಾರ್ವ–ಕೈಗೆಬರುವ. ನಿಧಾನಮುಮಂ–ನಿಧಿಯನ್ನೂ, ತನ್ನೀವಳವಿಂ–ತಾನು ದಾನ ಮಾಡುವ ಅಳತೆಯಿಂದ, ಇಳಿಸಿ–ಕಡೆಗಣಿಸಿ, ಪಾರ್ವಂಗಂ–ನಿರೀಕ್ಷಿಸುತ್ತಿರುವವನಿಗೂ, ಅಳಿಪಿ–ಆಸೆಪಟ್ಟು, ಬೇಡಿದ–ಯಾಚಿಸಿದ, ಪಾರ್ವಂಗಂ–ಬ್ರಾಹ್ಮಣನಿಗೂ, ಅಂಗ ಮಹೀಶಂ–ಕರ್ಣನು, ಪಿರಿದಂ–ಹಿರಿದಾದ ಐಶ್ವರ್ಯವನ್ನು, ಇತ್ತಂ–ದಾನವಾಗಿಕೊಟ್ಟನು.

ವಚನ: ಚಾಗಂಗೆಯ್ದು–ದಾನಮಾಡಿ; ಅಘಮರ್ಷಣ ಪೂರ್ವಕಂ–ಪಾಪ ನಿವಾರಕ ಮಂತ್ರೋಚ್ಚಾರಣೆಯಿಂದ, ಕನಕಪಾತ್ರದೊಳ್ – ಚಿನ್ನದ ಪಾತ್ರೆಯಲ್ಲಿ; ತೆೞ್ಕನೆ ತೀವಿದ–ಪೂರ್ತಿ ತುಂಬಿದ; ಕನಕ ಕಮಳಂಗಳಿಂ–ಹೊಂದಾವರೆಗಳಿಂದ; ನೀರಂ ಸೂಸಿ–ಅರ್ಘ್ಯವನ್ನು ಬಿಟ್ಟು, ಚೆಲ್ಲಿ; ತ್ರಿಃ ಪ್ರದಕ್ಷಿಣಂ–ಮೂರು ಬಾರಿ ಪ್ರದಕ್ಷಿಣೆ;

೭೩. ಸಂಗತ ತರಂಗಯುತೆಯುಂ–ಕೂಡಿರುವ ಅಲೆಗಳನ್ನುಳ್ಳ, ಮಂಗಳ, ಲಕ್ಷಣೆಯುಂ – ಮಂಗಳಕರವಾದ ಲಕ್ಷಣಗಳನ್ನುಳ್ಳ, ಗಂಗಾಂಗನೆಯುಂ – ಗಂಗಾದೇವಿಯನ್ನು, ಮುಂದೆ ನಿಂದ ಕುಂತಿಯುಂ–ಎದುರಿಗೆ ನಿಂತ ಕುಂತೀದೇವಿಯನ್ನು, ಆಗಳ್–ಆಗ, ಕಾಣ್ಬವೊಲ್–ನೋಡುವ ಹಾಗೆ; ಅಂಗನೃಪಂ–ಕರ್ಣ, ಅಂದು–ಆ ದಿನ, ಭೋಂಕನೆ–ಅನಿರೀಕ್ಷಿತವಾಗಿ, ಕಂಡಂ–ನೋಡಿದನು.

**ವಚನ :** ಎಱಕದಿಂ – ಪ್ರೀತಿಯಿಂದ; ಎಱಗಿ – ಬಾಗಿ ; ಪೊಡೆವಟ್ಟು – ನಮಸ್ಕರಿಸಿದ, ಅಱ್ಕಱಿಂದೆ–ಪ್ರೀತಿಯಿಂದ, ಪರಸಿ–ಹರಸಿ.

೭೪. ತೊರೆದ–ಸೋರಿಬಿಟ್ಟ, ಸುರಿಯುತ್ತಿರುವ, ಕುಚಯುಗಳಂ–ಎರಡು ಮೊಲೆಗಳು, ಅಂದು–ಆಗ, ಮೊಲೆವಾಲಂ–ಮೊಲೆಹಾಲನ್ನು, ಅಂಬಿರಿವಿಡೆ–ಧಾರಾಕಾರವಾಗಿ ಸುರಿಸುತ್ತಿರಲು, ಅಱ್ಕಱಿಂದಂ–ಪ್ರೇಮದಿಂದ, ಮೆಯ್ಯುಂಕುರಿಸೆ–ಮೈ ರೋಮಾಂಚ ಹೊಂದಲು, ಸುರಿವಶ್ರುಜಲಂ–ಸುರಿಯುತ್ತಿರುವ ಕಣ್ಣೀರು, ಉಬ್ಬರಿಸಿ–ವೆಗ್ಗಳವಾಗಿ, ಪೊನಲ್ – ಕಣ್ಣೀರ ಪ್ರವಾಹ; ಪೊನಲಂ – ಗಂಗೆಯ ಪ್ರವಾಹವನ್ನು, ಅಟ್ಟಿ–ಅಟ್ಟಿಸಿಕೊಂಡುಹೋಗಲು, ಆಗಳ್ – ಆಗ, ಜನನುತೆಗೆ – ಜನರಿಂದ ಹೊಗಳಲ್ಪಟ್ಟ, ಗಂಗಾದೇವಿಗೆ.

೭೫. ಆಗಳೆ ಮಗನಂ ಪೆತ್ತವೊಲಾಗಿ–ಆಗಲೇ ಮಗನನ್ನು ಹೆತ್ತವಳಂತಾಗಿ, ಲತಾಲಲಿತೆ–ಗಂಗಾದೇವಿ, ನೊಸಲ ಕಣ್ದೆತ್ತವೊಲ್–ಹಣೆಯಲ್ಲಿ ಕಣ್ಣನ್ನು ಪಡೆದಂತೆ, ಅಂತು ಆಗಡೆ–ಹಾಗೆ ಆಗಲೆ, ರಾಗಕ್ಕಾಗರಮಾಗೆ – ಸಂತೋಷಕ್ಕೆ ಮನೆಯಾಗಲು, ದಿನಾಧಿಪತನೂಜಂ–ಸೂರ್ಯನ ಮಗ ಕರ್ಣ, ಒಸೆದಿರ್ಪನೆಗಂ–ಸಂತೋಷಿಸುತ್ತಿರಲು.

**ವಚನ :** ದಿವ್ಯಮೂರ್ತಿಯುಂ – ದಿವ್ಯವಾದ ಆಕಾರವನ್ನು, ಕೈಕೊಂಡು–ತಾಳಿ, ಧರಿಸಿ.

೭೬. ಕೆಯ್ಯೆಡೆಯೆಂದು–ನ್ಯಾಸವೆಂದು, ಅಪ್ಪೈಸಿದ–ನನಗೆ ಒಪ್ಪಿಸಿದ, ನಿನ್ನ ಮಗನಂ–ನಿನ್ನಮಗನನ್ನು, ಈಗಳೆ–ಈಗಲೇ, ನಿನಗೆ, ಒಪ್ಪಿಸಿದೆಂ–ಒಪ್ಪಿಸಿಕೊಟ್ಟಿನು, ಎಂದು, ಅಪ್ಪೈಸಿ – ಅರ್ಪಿಸಿ, ಗಂಗೆ ಪೋಪುದುಂ – ಗಂಗಾದೇವಿ ಹೋಗುತ್ತಲು, ದಿನಪಂ–ಸೂರ್ಯ. ಒಪ್ಪುವ–ಶೋಭಿಸುವ, ನಿಜಬಿಂಬದೊಳಗಣಿಂದಂ–ತನ್ನ ಮಂಡಲದ ಒಳಗಡೆಯಿಂದ.

೭೭. ಪೊಱಮಟ್ಟು ಬರಲು–ಹೊರಕ್ಕೆ ಹೊರಟು ಬರಲು, ತನ್ನಡಿಗೆಱಗಿದ–ತನ್ನಪಾದಕ್ಕೆ ನಮಸ್ಕರಿಸಿದ, ನಿಜಸುತನಂ–ತನ್ನ ಮಗನನ್ನು, ಅಱ್ಕಱಿಂ–ಪ್ರೀತಿಯಿಂದ, ಪರಸಿ–ಹರಸಿ, ಮನಂ ಮಱುಗಿ – ಮನದಲ್ಲಿ ಸಂತಾಪಗೊಂಡು, ರವಿ – ಸೂರ್ಯನು, ನುಡಿದಂ–ಹೇಳಿದನು ; ಎನ್ನುಮನುಱದೆ – ನನ್ನನ್ನೂ ಲಕ್ಷಿಸದೆ, ಮರುಳ್ಮಗನೇ–ತಿಳಿಗೇಡಿಯಾದ ಮಗನೇ, ಹರಿಗೆ–ಇಂದ್ರನಿಗೆ, ಕವಚಮಂ–ವಜ್ರ ಕವಚವನ್ನು, ಇತ್ತೈ–ಕೊಟ್ಟೆ.

೭೮. ಅದಂ – ಅದನ್ನು, ನುಡಿಯೆಂ – ಹೇಳೆನು (ಈಗ), ಪಡೆಮಾತೇಂ–

ಜೇರೇನು ಮಾತು; ಹರಿಯ ಮತದಿಂ–ಕೃಷ್ಣನ ಅಭಿಪ್ರಾಯದಿಂದ, ನಿನ್ನಂಬಿಕೆ–ನಿನ್ನ ತಾಯಾದ, ಕೊಂತಿ–ಕುಂತಿಯು, ಸುತರಂ–ತನ್ನ ಮಕ್ಕಳನ್ನು, ಕಾಯಲ್ಕೆ–ರಕ್ಷಿಸುವುದಕ್ಕಾಗಿ, ಒಡರಿಸಿ–ತೊಡಗಿ, ಬಂದಳ್–ಬಂದಳು; ಎನಿತು ಲಲ್ಲೈಸಿದೊಡಂ–ಎಷ್ಟು ಲಲ್ಲೆಯ(ಪ್ರೀತಿಯ)ಮಾತುಗಳನ್ನಾಡಿದರೂ, ಪುರಿಗಣೆಯಂ–ನಿನ್ನಲ್ಲಿರುವ ದಿವ್ಯಾಸ್ತ್ರವನ್ನು, ಕುಡದಿರ್–ಕೊಡದೆ ಇರು, ಪುರಿಗಣೆ>ಹುರಿಗಣೆ(ಗದಾ. ೫–೨೩), ಇದರ ಸರಿಯಾದ ಅರ್ಥವೇನೆಂಬುದು ಚಿಂತನೀಯ; ಪುರಿ–ಎಂದರೇನು?

೭೯. ಎಂದು ಹೇಳಿ, ಅರವಿಂದ ಪ್ರಿಯಸಖಂ–ಸೂರ್ಯನು, ಅಂಬರ ತಳಮನಡರ್ವುದುಂ–ಆಕಾಶಕ್ಕೆ ಏರುತ್ತಲು, ಕೈಮುಗಿದು–ಕರ್ಣನು ನಮಸ್ಕರಿಸಿ, ಕುಂತಿಯುಂ–ಕುಂತಿಯನ್ನು, ಇಂತೆಂದಂ–ಹೀಗೆಂದನು, ಅಬ್ಬೆ–ತಾಯೇ, ಎನಗೆ ಸಯ್ಪು ಬರ್ಪಂತೆ–ನನಗೆ ಪುಣ್ಯಬರುವಹಾಗೆ, ಅದು ಏವಂದಿರ್ಪುದು–ಅದು ಏನು ನೀವು ಬಂದಿರುವುದು;

೮೦. ನಿಮ್ಮ ಕರುಣಾಬಲದಿಂ–ನಿಮ್ಮ ದಯಾಶಕ್ತಿಯಿಂದ, ನೀವೆನ್ನಂ–ನೀವು ನನ್ನನ್ನು, ಇಂದು–ಈ ದಿನ, ಮಗನ್–ಮಗನು, ಎಂಪುದಱಂ–ಎಂದುಹೇಳಿದ್ದರಿಂದ, ಚಲಮುಂ–ಛಲವೂ, ಚಾಗಮುಂ–ತ್ಯಾಗವೂ, ಅಳವುಂ–ಪ್ರಮಾಣವೂ ಎಂದರೆ ಯೋಗ್ಯತೆಯೂ, ಕಲಿತನಮುಂ–ಶೌರ್ಯವೂ, ಕುಲಮುಂ–ಸತ್ಕುಲವೂ, ಎನ್ನಯ–ನನ್ನ, ಮೆಯ್ಯೊಳ್–ದೇಹದಲ್ಲಿ, ಈಗಳ್–ಈಗ, ನೆಲಸಿದುವು–ಸೇರಿನಿಂತುವು.

೮೧. ಒಡಲಂ–ದೇಹವನ್ನೂ, ಪ್ರಾಣಮುಮಂ–ಪ್ರಾಣವನ್ನೂ, ತಾಯುಂ ತಂದೆಯುಂ–ತಾಯಿತಂದೆಗಳು, ಪಡೆದರ್–ಹಡೆದವರು; ಅವು–ಅವುಗಳು, ಅವರವು–ಅವರಿಗೆ ಸೇರಿದ್ದು: ಕೆಯ್ಯೆಡೆಯಂ–ನ್ಯಾಸವನ್ನು, ಕುಡುವುದು–ಕೊಡುವುದು, ಅರಿದಾಯ್ತೆ–ಅಸಾಧ್ಯವಾಯಿತೆ? ಇಲ್ಲ; ಎಂದರೆ ತಮಗೆ ಸೇರಿರುವ ಪದಾರ್ಥವನ್ನು ಇನ್ನೊಬ್ಬರಿಗೆ ನ್ಯಾಸವಾಗಿ ಕೊಡುವುದೇನೂ ಅಪೂರ್ವವಲ್ಲ; ನೀಂ–ನೀವು, ಎಡೆಮಡಗದೆ–ನಡುವೆ ಇಟ್ಟುಕೊಳ್ಳದೆ ಎಂದರೆ ಮುಚ್ಚಿಡದೆ, ವ್ಯಕ್ತವಾಗಿ, ಬೆಸೆಪ–ಹೇಳುವ, ತೊಬ್ತುವೆಸನಂ–ಸೇವೆ ಕೆಲಸವನ್ನು, ಎನಗೆ–ನನಗೆ, ಬೆಸಸಿಂ–ಅಪ್ಪಣೆ ಮಾಡಿರಿ.

೮೨. ಎಂಬುದುಂ–ಎಂದು ಹೇಳುತ್ತಲೂ, ಅಂಬಿಕೆ–ತಾಯಿಯಾದ ಕುಂತಿ, ಮನಂ ಬೆಳಱದೆ–ಮನಸ್ಸಿನಲ್ಲಿ ಹೆದರದೆ, ನೀನುಂ–ನೀನೂ, ಇತ್ತೆ–ಕೊಟ್ಟೆ, ಆನುಂ–ನಾನೂ, ಪೆತ್ತೆಂ–ಪಡೆದೆನು; ನಂಬಿದ ನಿನ್ನನುಜರ್–ನಿನ್ನನ್ನೇ, ನಂಬಿರುವ ನಿನ್ನ ತಮ್ಮಂದಿರು, ನಿನ್ನಂ ಬೆಸಕೆಯೆ–ನಿನ್ನನ್ನು ಸೇವಿಸುತ್ತಿರಲು, ಕಂದಾ–ಮಗುವೇ, ನೀನೇ, ನೆಲನನ್–ರಾಜ್ಯವನ್ನು, ಆಳ್ವುದು–ಆಳುವುದು. ಮನಂ ಬೆಳಱು<ಮನ+ಪೆಳಱು–"ಭಯೇ".

೮೩. ನಿನ್ನನುಜರ್–ನಿನ್ನ ತಮ್ಮಂದಿರು, ದುರ್ಯೋಧನನ ಒಲವಂ–ದುರ್ಯೋಧನನ ಪ್ರೀತಿಯನ್ನು, ಮುಂದುಗೆಯ್ದು–ಮುಂದಿಟ್ಟುಕೊಂಡು, ನಿನಗಪ್ಪರಸಂ–ನಿನಗೆ ಆಗಲಿರುವ ರಾಜತನಕ್ಕೆ, ಬೆಸಕೆಯ್ವರೆ–ಸೇವೆಮಾಡುವವರೇ ಆಗಿದ್ದಾರೆ; ಎರಟ್ಟಿ ಸೆಗಂ–ಉಭಯ ಪಕ್ಷಗಳಿಗೂ, ಕಿಸುರ್–ಅಸಹ್ಯಭಾವವು ಎಂದರೆ ಮಾತ್ಸರ್ಯವು, ಇನಿಸಾಗದು–

ಸ್ಪಲವೂ ಆಗುವುದಿಲ್ಲ, ಮಗನೆ–ಮಗನೇ, ನೀಂ–ನೀನು, ಒಡಂಬಡವೇೞ್ಕುಂ–ಒಪ್ಪಿಕೊಳ್ಳಬೇಕು. ಇಲ್ಲಿ ಅರಸಂ ಎಂಬುದು ದ್ವಿತೀಯಾಂತವಾಗಿದ್ದರೂ (ಅರಸು+ಅಂ) ಚತುರ್ಥ್ಯರ್ಥಯುಕ್ತವಾಗಿದೆ, "ಸಾರಥಿಮಾಡು ಮತ್ಸ್ಯಸುತಸುತ್ತರನಂ" ಎಂಬಲ್ಲಿರುವಂತೆ; ಅರಸ ಎಂಬುದರ ಭಾವನಾಮ ಅರಸು.

**ವಚನ**: ಮುಗುಳ್ನಗೆ ನಕ್ಕು–ಮಂದಸ್ಮಿತದಿಂದ ನಕ್ಕು; ಈ ನಗುವಿನ ಅರ್ಥವೇನಿರಬಹುದು? ಊಹಿಸಿದಷ್ಟು ಅದರ ಅರ್ಥ ಊರುತ್ತದೆ.

**೮೪.** ಭಯಮುಂ ಲೋಭಮುಮೆಂಬ–ಭಯವೂ ಅತ್ಯಾಸೆಯೂ ಎಂಬ, ತಮ್ಮಿತೆರಡುಂ–ತಾವೆರಡೂ, ಪಾಪಕ್ಕೆ ಪಕ್ಕಾಗೆ–ಪಾಪಕ್ಕೆ ಗುರಿಯಾಗಿರಲು, ಪಾಟಿಯುಮನೊಕ್ಕು–ಧರ್ಮ ಅಥವಾ ಕ್ರಮವನ್ನು ಬಿಟ್ಟು, ಆಳ್ದನ ಗೆಯ್ದು–ಸ್ವಾಮಿಯು ಮಾಡಿರುವ, ಸತ್ಕೃತಮುಮಂ–ಒಳ್ಳೆಯ ಉಪಕಾರವನ್ನೂ, ಪಿಂತಿಕ್ಕಿ–ಕಡೆಗಣಿಸಿ, ಜೋಳಕ್ಕೆ–ಅನ್ನಕ್ಕೆ ಎಂದರೆ ಅನ್ನದ ಋಣಕ್ಕೆ. ತಪ್ಪಿಯುಂ–ತಪ್ಪುಮಾಡಿಯೂ, ಇಂ–ಇನ್ನು, ಬಾೞ್ವುದೆ–ಜೀವಿಸುವುದೆ? ಅಬ್ಬೆ–ತಾಯಿಯೇ, ಈಯೊಡಲ್–ಈ ದೇಹ, ನಿಲ್ಲದಿಕೆ[ಯುಂ] ಪೂಣ್ದು–ಅಶಾಶ್ವತೆಯನ್ನು ಹೊತ್ತುಕೊಂಡು, ವಿಖ್ಯಾತ ಕೀರ್ತಿಯುವೋಲ್–ಪ್ರಸಿದ್ಧವಾದ ಯಶಸ್ಸಿನ ಹಾಗೆ, ಬಾೞ್ವಂತು–(ಶಾಶ್ವತವಾಗಿ) ಬಾಳುವಹಾಗೆ, ಎನಗೆ–ನನಗೆ, ಕಲ್ಪಾಂತರಸ್ಥಾಯಿಯೇ–ಕಲ್ಪಾಂತರಗಳವರೆಗೆ ನೆಲಸಿರುವಂಥದೇ, ಪೇೞಿಂ–ಹೇಳಿರಿ. ಎಂದರೆ ಕೀರ್ತಿ ಶಾಶ್ವತವಾಗಿ ನೆಲಸಿರುವಂತೆ ಈ ದೇಹ ಶಾಶ್ವತವಾಗಿದೆಯೇ, ನೀವೇ ಹೇಳಿರಿ ಎಂದು ತಾತ್ಪರ್ಯ. ಇಲ್ಲಿ ನಿಲ್ಲದಿಕೆಯೆಂಬುದು ಪ್ರತಿಷೇಧಾರ್ಥಕ ಭಾವನಾಮ; ನಿಲ್ಲದು+ಇಕೆ.

**೮೫.** ವಿಹಾಂಗುಲಿಗನೆನ್, ನಾನು ಬೆಸ್ತರವನಾಗಿದ್ದೇನೆ, ಆಗಿಯುಂ–ಆಗಿದ್ದರೂ, ಆಂ–ನಾನು, ಅಣಂ–ಸ್ವಲ್ಪವೂ, ಗುಣಮನೆ–ಗುಣವನ್ನೆ, ಬಿಸುಟೆನಿಲ್ಲ–ತೊರೆದವನಾಗಲಿಲ್ಲ; ನಿಮಗಂ–ನಿಮಗೂ, ಮಗನಾದಂಗೆ–ಮಗನಾದವನಿಗೆ, ಎನಗೆ–ನನಗೆ, ಬಿಸುಡಲಕ್ಕುಮೆ–ಬಿಡಲಾಗುತ್ತದೆಯೇ? ಇಲ್ಲ; ನೀಂ–ನೀವು, ಇನ್–ಇನ್ನುಮೇಲೆ, ಎನ್ನೆಡೆಯೊಳ್–ನನ್ನ ಎಡೆಯಲ್ಲಿ ಎಂದರೆ ನನ್ನ ವಿಷಯದಲ್ಲಿ. ಪಂಬಲನೆ–ಹಂಬಲವನ್ನೆ, ಬಿಸುಡಿಂಗಳ–ತೊರೆಯಿರಿ, ದಿಟವಾಗಿಯೂ. ನಾನು ಹೀನಕುಲದ ಬೆಸ್ತರವನೆಂದು ತಿಳಿದಿರುವಾಗಲೇ ನನ್ನ ಒಳ್ಳೆಯ ಗುಣಗಳನ್ನು ಬಿಡಲಿಲ್ಲ; ನಿಮಗೆ ಮಗನಾಗಿ ಸತ್ಕುಲಜನೆಂದು ನಾನು ತಿಳಿದಮೇಲೆ ಇನ್ನು ಸದ್ಗುಣಗಳನ್ನು ಬಿಡುವುದಾಗುತ್ತದೆಯೇ? ಇಲ್ಲ ಎಂದು ತಾತ್ಪರ್ಯ.

**ವಚನ**: ಭೋಂಕನೆ–ಅನಿರೀಕ್ಷಿತವಾಗಿ. ಬೇಗನೆ; ಎರ್ದೆಬಿಱಿದು–ಎದೆಬಿರಿದು,

**೮೬.** ಅೞಿದೆಂ–ಹಾಳಾದೆನು, ಅಯ್ಯೋ! ನೆಟ್ಟನೆ ಬೆಟ್ಟನಿಂತು ನುಡಿವಯ್–ನೇರಾಗಿ, ಬಿರುಸಾಗಿ ಹೀಗೆ ಮಾತಾಡುವೆ; ಕಂದ, ನೀಂ–ನೀನು. ಪೋಗು–ಹೋಗು; ಸೋಮವಂಶ–ಚಂದ್ರವಂಶವು, ಕೆಟ್ಟು, ಅೞಿದತ್ತಾಗದೆ–ನಾಶವಾದುದಾಗಲಿಲ್ಲವೇ? ಎನಗಿಂ–ನನಗೆ ಇನ್ನು, ಬಾೞ್ವಾಸೆ–ಬದುಕುವ ಆಸೆ, ಎಲ್ಲಿತ್ತೋ–ಎಲ್ಲಿದೆಯೋ,

ಮತ್ತಿಸ-ಉಳಿಪ, ಮಕ್ಕಳಾಸೆಯುಮಂ-ಮಕ್ಕಳ ಆಸೆಯನ್ನೂ, ಬಿಟ್ಟುಬಿಡೆಂ-ಬಿಟ್ಟುಬಿಟ್ಟಿದ್ದೇನೆ; ಎಂದವಳ್ಗೆ-ಎಂದು ಹೇಳಿದವಳಿಗೆ, ಕುಂತಿಗೆ, ಕರ್ಣಂ-ಕರ್ಣನು, ಶೋಕಾಗ್ನಿ-ದುಃಖಾಗ್ನಿ, ಪೊಂಪುಳಿವೋಗುತ್ತಿರೆ-ಅಧಿಕವಾಗುತ್ತಿರಲು, ಅಬ್ಬೆ-ತಾಯಿಯೇ, ಇನಿತು-ಇಷ್ಟು, ಚಿಂತಾಂತರಂ-ಬೇರೆ ಚಿಂತೆ, ಏಂ-ಏನು, ಪೇಳ್-ಹೇಳು, ಎಂದಂ-ಎಂದನು.

೮೭. ನರಂ-ಅರ್ಜುನನು, ಎಡೆ[ಗೋ]ದೊಡಂ-ನಡುವೆ ಪ್ರವೇಶಿಸಿಕೊಂಡು ಬಂದರೂ, ಎಂದರೆ ಯುದ್ಧದಲ್ಲಿ ಇದಿರಾದರೂ, ಪುರಿಗಣೆಯಂ-ದಿವ್ಯಾಸ್ತ್ರವನ್ನು, ಪಿಡಿಯೆಂ-ಹಿಡಿಯೆನು, ಇನ್-ಇನ್ನು, ಏರ್ದೊಡಂ-ಯುದ್ಧಮಾಡಿದರೂ, ಉಳಿದ ನಿನ್ನ ಮಕ್ಕಳಂ-ಉಳಿದ ನಿನ್ನ ಮಕ್ಕಳನ್ನು, ಅಱಿಯೆಂ-ನಾಶಮಾಡೆನು; ಪೆರ್ಜಸಮನೆ ಪಿಡಿದು-ಹಿರಿದಾದ ಕೀರ್ತಿಯನ್ನೇ ಹಿಡಿದುಕೊಂಡು, ಎನ್ನನೆ-ನನ್ನನ್ನೇ, ರಣದೊಳ್-ಯುದ್ಧದಲ್ಲಿ, ಅಱಿವೆಂ-ನಾಶಮಾಡುತ್ತೇನೆ: ಇರದೆ-(ಚಿಂತೆಯಿಂದ) ಇರದೆ, ಅಡಿಯೆತ್ತಿಂ-ಹೆಜ್ಜೆ ಎತ್ತಿರಿ, ಹೊರಡಿರಿ, ಎಡೆಗೋಡು < ಎಡೆ+ಕೋ-"ಸೂತ್ರ ಪ್ರವೇಶೇ". "ಎಡೆಗೋದಿರದಿರಿಮುದ್ದಂ ನುಡಿಯುದಿರಿಂ" ಎಂದು ಪಂಪನ ಆದಿಪುರಾಣ ಪ್ರಯೋಗ; ನಡುವೆಹೋಗು, ಪ್ರವೇಶಿಸು ಎಂದರ್ಥ.

**ವಚನ**; ವಿಸರ್ಜಿಸಿ-ಬಿಟ್ಟು ಕಳೆದು: ನನ್ನಿಯಂ-ಸತ್ಯವನ್ನು, ಆವರ್ಜಿಸಿ-ಎಳೆದುಕೊಂಡು; ರಾಧೇಯಂ-ಕರ್ಣನು; ಆಧೇಯಮಾಗಿ-ಆಶ್ರಯವಾಗಿ; ಕತಿಪಯ-ಕೆಲವು; ನಿಕಟವರ್ತಿಯಪ್ಪ-ಹತ್ತಿರ ಇರುವ; ದಿವಿಜಾಪಗಾ-ದೇವನದಿ, ಗಂಗೆ; ನೆಲಂ ಮೂರಿವಿಟ್ಟಂತೆ-ನೆಲದ ಜನರೆಲ್ಲ ಗುಂಪಾದಂತೆ, "ಮಾರಿಯ ಮೂರಿ ರಕ್ಕಸರ ಜಂಗುಳಿ" ಎಂದು ಪ್ರಯೋಗಾಂತರವುಂಟು; ಬಿಟ್ಟಿರ್ದ-ಬೀಡುಬಿಟ್ಟಿದ್ದ, ಅಜಾತ ಶತ್ರುವಂ-ಧರ್ಮರಾಜನನ್ನು, ಅವನತೋತ್ತಮಾಂಗನಾಗಿ-ಬಾಗಿದ ತಲೆಯುಳ್ಳವನಾಗಿ, ನಮಸ್ಕರಿಸಿದವನಾಗಿ.

೮೮. ಹಿಮಕೃದ್ವಂಶಜರಪ್ಪ-ಚಂದ್ರವಂಶದಲ್ಲಿ ಹುಟ್ಟಿದವರಾದ, ಪಾಂಡು ಸುತರಂ-ಪಾಂಡವರನ್ನು, ಕೈಕೊಂಡು-ಸ್ವೀಕರಿಸಿ, ನಿನ್ನ, ಅಯ್ದು ಬಾಡಮನಿತ್ತುಂ-ಐದು ಗ್ರಾಮಗಳನ್ನು ಕೊಟ್ಟು, ಸಡಪು-ಸಲಹು, ಎಂದು, ಎಂಬುದಾಗಿ, ಸಾಮಮನೆ-ಸಾಮೋಪಾಯವನ್ನೇ, ಮುಂ-ಮೊದಲು, ಮುಂತಿಟ್ಟೊಡೆ-ಎದುರಿಗಿಟ್ಟರೆ, ಆತಂ-ಆ ದುರ್ಯೋಧನ, ಪರಾಕ್ರಮಮುಂ ತೋಱಿ-ಶೌರ್ಯವನ್ನು ಪ್ರದರ್ಶಿಸಿ, ಪಿಡಿಲ್ದು-ಹಿಡಿದು, ಪಾಯ್ದು-ಮುನ್ನುಗ್ಗಿ, ಅಸುಂಗೊಳ್ವನ್ನೆಗಂ-ಪ್ರಾಣಾಪಹರಣ ಮಾಡುವಷ್ಟರಲ್ಲಿ, ಆಂ-ನಾನು, ವಿಶ್ವರೂಪಮುಂ-ನನ್ನ ಬೃಹದ್ರೂಪವನ್ನು, ತೋಱಿದೆಂ-ತೋರಿಸಿದೆನು; ಇಂ-ಇನ್ನು ಮೇಲೆ, ಕಡಂಗಿ-ಉತ್ಸಾಹಿಸಿ, ರಣದೊಳ್-ಯುದ್ಧದಲ್ಲಿ, ನಿನ್ನಾರ್ಪುಮಂ-ನಿನ್ನ ಸಾಮರ್ಥ್ಯವನ್ನೂ, ನೀಂ-ನೀನು, ತೋಱು-ತೋರಿಸು.

**ವಚನ**: ಎಂಬನ್ನೆಗಂ-ಎನ್ನುವಷ್ಟರಲ್ಲಿ; ಮರೀಚಿಮುಚ್ಛುರಿತ-ಕಿರಣಗಳಿಂದ ನುಣ್ಪೇರಿದ;

೮೯. ಅಟ್ಟಿದ–ಕಳಿಸಿದ, ನಿಮ್ಮ ಪೆರ್ಗಡೆ-ನಿಮ್ಮ ಹೆಗ್ಗಡೆ, ರಾಯಭಾರಿ, ಬರ್ದುಂಕಿದನೆಂಬುದಂ–ಪ್ರಾಣಸಹಿತವಾಗಿ ಬಂದನೆಂಬುದನ್ನು, ಇಂದ್ರಜಾಲಮಂ—ಮಾಯಾವಿದ್ಯೆಯನ್ನು, ತೊಟ್ಟನೆ–ಕೂಡಲೇ, ಬೇಗನೆ, ತೋಱಿ-ಬಂದು-ತೋರಿಸಿ ಬಂದು, ಬರ್ದುಕಾಡಿದಂ–ತಪ್ಪಿಸಿಕೊಂಡನು; ಇಂ–ಇನ್ನು, ಅಳಿಪಿಂದಂ–ರಾಜ್ಯದಾಸೆಯಿಂದ, ಅಟ್ಟುವ–ಕಳುಹಿಸುವ, ಅಟ್ಟಿಟ್ಟಿಗಳಂ-ದೂತರನ್ನು, ಬಿಸುಳ್ಪುದು–ಬಿಡುವುದು, ಎಮಗಂತಮಗಂ–ನಮಗೂ ಅವರಿಗೂ, ಮುಳಿಸಿಂದಂ–ಕೋಪದಿಂದ, ಈಗಳ್–ಈಗ, ಅಟ್ಟಿಟ್ಟಿಗಳ್–ದೂತಸಂದೇಶಗಳು, ಅಪ್ಪುವು–ಆಗುತ್ತವೆ; ಎಂದು ಎಂಬುದಾಗಿ, ಇದನೆ–ಇದನ್ನೇ, ದಲ್-ದಿಟವಾಗಿಯೂ, ಎಮ್ಮ ಭೂಭುಜಂ-ನಮ್ಮ ದೊರೆ ದುರ್ಯೋಧನ, ನುಡಿದಟ್ಟಿದಂ-ಹೇಳಿ ಕಳುಹಿಸಿದನು. ಬರ್ದುಕಾಡು–ತಪ್ಪಿಸಿಕೋ, ಎಂಬರ್ಥದಲ್ಲಿ, 'ಪಗೆಕೆಯ್ಗೆವಂದು ಬರ್ದುಕಾಡಿದ ಬಲ್ಕುಳಿಸಿಂ ವೃಕೋದರಂ', (ಪಂಪಭಾ ೧೦–೧೦೧) ಎಂಬ ಪ್ರಯೋಗವಿದೆ; ಅಟ್ಟಿಟ್ಟಿ <ಪ್ರಾ. ಅಟ್ಟಿಟ್ಟ-ಯಾತಃ ಗತಃ ಹೋದವನು ಎಂದರೆ ಪ್ರೇಷಿತನಾದವನು.

೯೦. ಬಳಸಂಪನ್ನರಂ–ಸೈನ್ಯಸಂಪತ್ತಿಯುಳ್ಳವರನ್ನು, ಆಸೆಗೆಯ್ಗೆ–ಅಪೇಕ್ಷಿಸಲಿ; ಚತುರಂಗಾನೀಕಮಂ–ಚತುರಂಗ ಸೈನ್ಯವನ್ನು, ಕೂಡಿ–ಸೇರಿ, ಕೊಳ್ಗುಳಮಂ–ಯುದ್ಧರಂಗವನ್ನೂ, ಗಂಡುಮಂ–ಪೌರುಷವನ್ನೂ, ಅಪ್ಪುಕೆಯ್ಗೆ-ಅಂಗೀಕರಿಸಲಿ, ಮನಮಂ–ಮನಸ್ಸನ್ನು, ಬಲ್ಲಿತ್ತುಮಾಳ್ಕೆ–ಗಟ್ಟಿಮಾಡಲಿ; ಎಂದು–ಎಂದೂ, ಅಂ–ನಾನು, ಎಳೆಯಂ-ಭೂಮಿಯನ್ನು, ಕಾದಿದೊಡಲ್ಲದೆ-ಯುದ್ಧಮಾಡಿದಲ್ಲದೆ, ಈಯೆಂ–ಕೊಡೆನು; ಅಱಿದಿರ್ಕೆ–(ಇದನ್ನು) ತಿಳಿದಿರಲಿ; ಎಂದು–ಎಂಬುದಾಗಿ, ಆ ಕುರುಕ್ಷೇತ್ರಮಂ–ಆ ಕುರುಕ್ಷೇತ್ರವನ್ನು, ಕಳನೇಱು—ಯುದ್ಧರಂಗವನ್ನಾಗಿ ಗೊತ್ತುಮಾಡಿ, ಅಟ್ಟಿದಂ–ಸುದ್ದಿಯನ್ನು ಕಳುಹಿಸ್ದಾನೆ ದುರ್ಯೋಧನ; ಅಣ್ಮಿಸಾಯಿಂ–ಹೋರಾಡಿ ಸಾಯಿರಿ; ನಿಮ್ಮ, ಒಂದು ಬಾೞ್ವಾಸೆಯುಂ–ಒಂದು ಬದುಕುವ ಆಸೆಯನ್ನು. ಉೞಿಯಿಂ–ಬಿಡಿರಿ. ಕಳನೇಱ್ >ಕಳನಂ + ಏಱ್.

ವಚನ: ವೃಕೋದರಂ–ಭೀಮನು; ಮುಳಿದು–ಕೆರಳಿ, ಆಸ್ಫೋಟಿಸಿ–ಹಿಡಿದು,

೯೧. ಎನಗಂ ತನಗಂ–ನನಗೂ ಅವನಿಗೂ (ದುರ್ಯೋಧನನಿಗೂ), ವಿಸಸನರಂಗಂ-ಯುದ್ಧರಂಗವು, ದೊರೆಯಪ್ಪುದು–ಸಾಟಿಯಾಗುತ್ತದೆ, ತಕ್ಕುದಾಗುತ್ತದೆ ತನ್ನೊಳಂ ಎನ್ನೊಳಂ-ಅವನಲ್ಲಿಯೂ ನನ್ನಲ್ಲಿಯೂ, ಕಾಯ್ಪುಂ-ಕೋಪವೂ, ಏವಮುಂ-ಮಾತ್ಸರ್ಯವೂ, ಪಸರಿಸಿ ಪರ್ವಿ–ವ್ಯಾಪಿಸಿ ಹಬ್ಬಿ, ಅದಿರ್ದುದು-ಅದು ಇದೆ; ಭೀಮನೆಂದೊಡೆ-ಭೀಮನು ಎಂದರೆ, ಆ ಪೆಸರನೆ ಕೇಳ್ದು-ಆ ಹೆಸರನ್ನೇ ಕೇಳಿ, ಸೈರಿಸದ-ಸಹಿಸಿಕೊಳ್ಳದ, ನಿನ್ನರಸಂ-ನಿನ್ನ ರಾಜ ದುರ್ಯೋಧನ, ಕಲಿಯಾಗಿ-ಶೂರನಾಗಿ, ನಾಳೆ-ನಾಳಿನ ದಿನ, ವೈರಿ....ಘಾತಮಂ: ವೈರಿಭೂಪ-ಶತ್ರುರಾಜರ, ರುಧಿರ-ರಕ್ತದಿಂದ, ಆರ್ದ್ರ–ಒದ್ದೆಯಾದ, ಮದೀಯ–ನನ್ನ, ಗದಾಭಿಘಾತಮಂ-ಗದೆಯ ಹೊಡೆತವನ್ನು, ಸೈರಿಸುಗುಮೆ–ತಾಳಿಕೊಳ್ಳುತ್ತಾನೆಯೆ? ಇಲ್ಲ.

ವಚನ : ಪರಾಕ್ರಮಧವಳಂ–ಅರ್ಜುನನು.

೯೨. ಕಱುಪುಂ-ಕೋಪವನ್ನೂ, ಕಾಯ್ಪುಮಂ-ತಾಪವನ್ನೂ, ಉಂಟುಮಾಡಿ–ಇರುವಂತೆಮಾಡಿ, ದ.ರ್ಯೋಧನಂ–ದುರ್ಯೋಧನನು, ತಾಗಿ–ಸಂಘಟ್ಟಿಸಿ, ತಳ್ತು ಜಿಡಿಂದಲ್ಲದೆ-ಸೇರಿ ಯುದ್ಧಮಾಡಿದಾಗಲ್ಲದೆ, ನೆಲನಂ–ರಾಜ್ಯವನ್ನು, ಕುಡಂ–ನಮ್ಮೊಡನೆ ಸೇರಿಸನು ಎಂದರೆ ಕೊಡನು ; ಆಜಿಭರಮುಂ–ಯುದ್ಧದ ಹೊರೆಯೂ, ಸಾರ್ಚಿತ್ತು–ಸಮೀಪಿಸಿದೆ; ಮುನ್ನಱುದಿಂಗಳ್–ಆಱು ತಿಂಗಳು ಮುಂಚಿತವಾಗಿಯೇ, ಅದೇನೆಂದು–ಅದು ಏನೆಂಬುದಾಗಿ, ಜಱುಚುತ್ತುಂ–ಅತ್ಯಾಲಾಪ ಮಾಡುತ್ತ. ಇರ್ಪುದೆ–ಇರುವುದೆ? ರಣಕ್ಕೆ–ಯುದ್ಧಕ್ಕೆ, ಆರ್–ಯಾರು, ಎನ್ನರ್–ಎಂಥವರು; ಈಗಳ್–ಈಗ, ಎಂ(ದ)ಱಿಯಲ್–ಎಂದು ತಿಳಿಯಲು, ಬರ್ಕುಮೆ–ಬರುತ್ತದೆಯೆ? ಕುರುಕ್ಷೇತ್ರದೊಳ್–ಕುರುಕ್ಷೇತ್ರದಲ್ಲಿ, ಬರ್ಕೆ–(ಕದನಕ್ಕೆ) ಬರಲಿ, ಬಂದೊಡೆ–ಬಂದರೆ, ಅಱಿಯಲಕ್ಕುಂ–ತಿಳಿವುದಾಗುತ್ತದೆ. ಕಱುಪ್ಪು–(ತ) ಕಱುಪು-ಕೋಪ? "ಜಱುಚು–ಬಹುಬಾಷಣೇ".

೯೩. ದುರ್ಯೋಧನಂ-ದುರ್ಯೋಧನನು, ತಳ್ತು ಜಿಯದೆ-ಎದುರಿಸಿ ಯುದ್ಧಮಾಡದೆ, ಎಳೆಯಂ–ಭೂಮಿಯನ್ನು. ಕುಡೆಂ–ಕೊಡೆನು, ಎಂದಟ್ಟಿ–ಎಂದು ದೂತನನ್ನು ಕಳುಹಿಸಿ, ಕಾದಲ್ಕಂ–ಯುದ್ಧಮಾಡುವುದಕ್ಕೂ, ಈಗಳ್–ಈಗ, ಕುರುಕ್ಷೇತ್ರಮಂ–ಕುರುಕ್ಷೇತ್ರವನ್ನು, ಕಳನಂ ಪೇೞ್ದಂ–ಯುದ್ಧರಂಗವನ್ನಾಗಿ ಗೊತ್ತುಮಾಡಿದನು ; ಎನೆ ಎನ್ನಲು, ತಡವಿನ್ನಾವುದು–ತಡವಿನ್ನೇನು, ಉಗ್ರಾಜಿಯೊಳ್-ಭಯಂಕರ ಯುದ್ಧದಲ್ಲಿ, ದೋರ್ವಳದಿಂದಂ–ಭುಜಬಲದಿಂದಂ, ತನ್ನ–ಅವನ, ಮಚ್ಚಂ–ಅಪೇಕ್ಷೆಯನ್ನು. ಸಲಿಸಿಯೆ–ಸಲ್ಲಿಸಿಯೇ, ನೆಲನಂ–ರಾಜ್ಯವನ್ನು, ಕೊಳ್ವೆನ್–ಕಸಿದುಕೊಳ್ಳುತ್ತೇನೆ, ಇಂ ತಳ್ವೆನ್–ಇನ್ನು ತಡಮಾಡೆನು ; ಎಮ್ಮೊಳ್-ನಮ್ಮಲ್ಲಿ, ಕಳನಂಬೇಡಿ-ಯುದ್ಧರಂಗವನ್ನು ಬಯಸಿ, ಎಯ್ದೆ–ಚೆನ್ನಾಗಿ, ಕೇ[ಳ್ದಂ]–ಕೇಳಿದನು ; ಬಗೆಯನಱಿಯಲಾಯ್ತು–ಅವನ ಇಚ್ಛೆಯನ್ನು ತಿಳಿಯಲಾಯಿತು ; ಎಱಿಂ–ಎಳಿರಿ, ಅಂತೆಂದೆ–ಹಾಗೆಂದೇ, ಪೇೞಿಂ–ಹೇಳಿರಿ ; ಕಳ[ನಂ]ಬೇಡೆಯ್ದೆ–ಎಂಬಲ್ಲಿ ಏನೋ ಪಾಠಕ್ಲೇಶವಿದೆ.

೯೪. ಧರ್ಮರಾಜನು ದಂಡೆತ್ತಿ ನಡೆಯುವುದು : ದೆಸೆಯಂ ಪೊತ್ತ–ದಿಕ್ಕುಗಳನ್ನು ಹೊತ್ತಿರುವ, ಮದೇಭರಾಜಿ–ಸೊಕ್ಕಾನೆಗಳ ಸಾಲು ಎಂದರೆ ದಿಗ್ದಂತಿಗಳು, ದೆಸೆಗೆಟ್ಟೋಡಲ್–ದಿಕ್ಕುಗೆಟ್ಟು ಓಡಲು (ಸೇನಾಭಾರ ಕಾರಣವಾಗಿ), ತಗುಳ್ದತ್ತು –ತೊಡಗಿದುವು; ಸಪ್ತಸಮುದ್ರಂ–ಏಳು ಸಾಗರಗಳು, ಕರೆಗಣ್ಮಿ–ಮೇರೆಯನ್ನು ಮೀರಿ, ತನ್ನವಧಿಯಂ-ತನ್ನ ಎಲ್ಲೆಯನ್ನು, ದಾಂಟಿತ್ತು–ದಾಟಿತು; ಅಜಾಂಡಂ–ಬ್ರಹ್ಮಾಂಡವು, ಸಿಡಿಲ್ದು–ಸಿಡಿದು, ಸಿಡಿಲ್ಪೊಯ್ದೊಡೆದ–ಸಿಡಿಲು ಹೊಡೆದು ಚೂರಾದ, ಒಂದು ತತ್ತಿಯವೊಲ್–ಒಂದು ಮೊಟ್ಟೆಯಂತೆ, ಆಯ್ತು–ಆಯಿತು, ಎಂಬ, ಒಂದು, ಪೊಸತಂ–ಹೊಸದಾದ, ಸಂದೇಹಮುಂ–ಶಂಕೆಯನ್ನು, ತತ್ಸನ್ನಾಹ ಭೇರೀರವಂ–ಆ ಸೈನ್ಯಸಿದ್ಧತೆಯ ಭೇರೀನಾದ, ಭೂಭುವನಕ್ಕೆ–ಭೂಲೋಕಕ್ಕೆ, ಮಾಡಿದುದು–ಉಂಟುಮಾಡಿತು.

೯೫. ಭೃಂಗಕುಳಾಕುಳೀಕೃತ ಕಟೋಪೇತಂಗಳ್–ದುಂಬಿಗಳ ಸಮೂಹದಿಂದ

ಪೀಡಿಸಲ್ಪಟ್ಟ ಕಪೋಲಗಳನ್ನುಳ್ಳ, ಕರಿಗಳ್–ಆನೆಗಳು, ಒಂಬತ್ತು ಸಾಸಿರಂ–ಒಂಬತ್ತು ಸಾವಿರ, ಅಂತು–ಹಾಗೆ, ಒಂದು ಗಜಕ್ಕೆ–ಒಂದಾನೆಗೆ, ನೂಱು ರಥಂ–ನೂರು ರಥಗಳು, ಅಂತಾಸ್ಯಂದನಕ್ಕೆ–ಹಾಗೆ ಆ ರಥಗಳಿಗೆ, ಒಂದಱೊಳ್–ಒಂದರಲ್ಲಿ, ನೂಱು–ನೂರು, ತುರಗಂ–ಕುದುರೆಗಳು; ಆನಿತುಂ–ಅಷ್ಟೂ, ತುರಂಗದ...ಂ–ಕುದುರೆಯ ಸೈನ್ಯದ, ಒಂದೊಂದಕ್ಕೆ–ಒಂದೊಂದು ಕುದುರೆಗೆ, ನೂಱಾಳ್–ನೂರು ಪದಾತಿಗಳು, ತಗುಳ್ದಿರೆ–ಸೇರಿಕೊಂಡಿರಲು, ಬಲ್ಲರ್–ತಿಳಿದವರು, ನಡೆನೋಡಿ–ನಾಟುವಂತೆ ನೋಡಿ ಎಂದರೆ ವಿಚಾರಿಸಿ, ಕೂಡೆ–ಕೂಡಲು, ಅಕ್ಷೋಹಿಣೀ ಸಂಖ್ಯೆಯಂ–ಅಕ್ಷೋಹಿಣಿ ಸೈನ್ಯದ ಲೆಕ್ಕವನ್ನು, ಪಡೆದತ್ತು–ಪಡೆಯಿತು. ಆನೆ ೯೦೦೦ ; ರಥ ೯೦೦೦ × ೧೦೦ ; ಕುದುರೆ ೯೦೦೦ × ೧೦೦ × ೧೦೦ ; ಪದಾತಿ ೯೦೦೦ × ೧೦೦ × ೧೦೦ × ೧೦೦ ; ಇವೆಲ್ಲಕ್ಕೂ ಸಂಖ್ಯೆ ಹಿಣಿ ಎಂದು ಹೆಸರು ; ಇದು ಪಂಪನು ಕೊಟ್ಟಿರುವ ಲೆಕ್ಕ ; ಬೇರೆಯವರು ಇತರ ಅಕ್ಷೋಗಳನ್ನು ಹೇಳುತ್ತಾರೆ (ಕಿಟಲ್, ಆಪ್ಟೆ ಇವರ ನಿಘಂಟುಗಳನ್ನು ನೋಡಿ.)

**ವಚನ**: ಪರಿಸಂಖ್ಯೆಯೊಳ್–ಲೆಕ್ಕದಲ್ಲಿ, ತಲೆಬಱಿವಱಿಯೆಂದು–ತಲೆಯೇ ಬಳುವಳಿಯೆಂಬುದಾಗಿ, ಕೂಸಂ ಕೊಟ್ಟ–ಮಗಳನ್ನು ಕೊಟ್ಟ, ಜಟ್ಟಿಗಂ–ಶೂರನು; ಮುಂಗೋಳೊಳ್-ಸೇನಾಮುಂಭಾಗದಲ್ಲಿ, ನಣ್ಪುಮಂ-ನಂಟತನವನ್ನೂ, ಪರಿಭವಮಂ-ಅವಮಾನವನ್ನು, ನೆಲಂ ಪೂರಿವಿಟ್ಟಂತೆ–ನೆಲ ಬಾಯಿ ತೆರದ ಹಾಗೆ, ಅಥವಾ ಲೋಕದ ಜನವೆಲ್ಲ ಗುಂಪು ಸೇರಿದಹಾಗೆ, ಬಲವಕ್ಕದೊಳ್–ಬಲ ಪಾರ್ಶ್ವದಲ್ಲಿ; ಎಡವಕ್ಕದೊಳ್–ಎಡದ ಪಕ್ಕದಲ್ಲಿ, ಉರುಳಿ ಮಾಡಿದಂತು–ಉಂಡೆಮಾಡಿದ ಹಾಗೆ, ಪಿಂಗೋಳೊಳ್–ಹಿಂದುಗಡೆಯ ಭಾಗದಲ್ಲಿ, ಕಿಱ್ತಿಟ್ಟು ಬರ್ಪಂತೆ–ಕಿತ್ತಿದ್ದು ಬರುವ ಹಾಗೆ, ಅಂಕದ–ಹೆಸರುವಾಸಿಯಾದ, ಪಗೆಗಂ–ಹಗೆತನಕ್ಕೆ, ಪಾಱಿಗಂ-ಧರ್ಮಕ್ಕೂ, ಪರಿಭವಕ್ಕಂ–ತಿರಸ್ಕಾರಕ್ಕೂ, ಪೞವೆಗಂ–ಹಳೆಯತನಕ್ಕೂ, ಎಂದರೆ ಬಹುಕಾಲದ ಸಂಬಂಧಕ್ಕೂ, ಪಾಗುಡಕ್ಕಂ–ಕಪ್ಪಕಾಣಿಕೆಗೂ, ಪಳಬಡ್ಡಕ್ಕಂ–ಲಾಭ ಅಥವಾ ಪ್ರಯೋಜನ ಪಡೆದುದಕ್ಕೂ, ಅಟ್ಟಟ್ಟಿಗಂ–ದೌತ್ಯಕ್ಕೂ, ಮಂಗಳವಸದನಂಗೊಂಡು–ಮಂಗಳಾಲಂಕಾರವನ್ನು ಮಾಡಿಕೊಂಡು, ವಿದ್ಯೋತವಾಗಿ–ಪ್ರಕಾಶಿಸುವುದಾಗಿ, ದಕ್ಷಿಣಾವರ್ತಮಪ್ಪ–ಬಲಗಡೆಯ ಸುಳಿಯನ್ನುಳ್ಳ, ಕೋಡು–ಆನೆಯ ಕೊಂಬು, ಪೇಱು–ಪೇರಿ, ಮುಖವಿಕ್ಷೇಪಣಂಗೆಯ್ದು–ಮುಖವನ್ನು ಅತ್ತ ಇತ್ತ ಕೊಡವಿ, ಘನಾಘನ ನಿನಾದ–ಮೋಡದ ಶಬ್ದ, ಗುಡುಗು; ಬೃಂಹಿತಂಗೆಯ್ದು–ಘೀಂಕಾರಮಾಡುವ, ಅಗುೞ್ದು–ಅಗೆದುತೋಡಿ, ಪರಿದು–ಕೆದರಿ, ಹೇಷಿತಂಗೆಯ್ದು–ಕೆನೆಯುವ; ಗಿಳಿಯ ಬಣ್ಣದ ಕುದರೆಗಳನ್ನು ಈ ಗದ್ಯದಲ್ಲೂ ಹೇಳಿದೆ; ಪಾಗುಡ < (ಸಂ) ಪ್ರಾಭೃತ ;

೯೬. ಅಂದು–ಆಗ, ಅನುಕೂಲ ಮಂದ ಪವನಂ–ಅನುಕೂಲವಾಗಿ ಮೆಲ್ಲಗೆ ಬೀಸುವ ಗಾಳಿ, ಎಸಗಿತ್ತು–ಚಲಿಸಿತ್ತು; ಇಂದ್ರವನದಿಂ–ಇಂದ್ರನ ಉದ್ಯಾನದಿಂದ, ಪೂದಂದಲ್–ಹೂವಿನ ತುಂತುರು ಮಳೆ, ಪೆಜ್ಜುಂಬಿಗಳ್–ದೊಡ್ಡ ದುಂಬಿಗಳು, ಮುತ್ತುತುಂ–ಮುತ್ತಿಕೊಳ್ಳುತ್ತ, ಮುಸುಱುತ್ತುಂ–ಕವಿದುಕೊಳ್ಳುತ್ತ, ಬರೆ–ಬರಲು,

ಬಂದುವು-ಬಂದಿತು; ದೇವ ದುಂದುಭಿ-ದೇವತೆಗಳ ಭೇರೀ (ನಾದ), ಅಂಭೋಧಿ-ಸಮುದ್ರವು; ಗರ್ಜಿಸುವಂತಾದುದು-ಗರ್ಜನೆ ಮಾಡುವಂತಾಯಿತು; ದಿಗಂತಂಗಳೊಳ್-ದಿಕ್ಕಿನ ಅಂಚುಗಳಲ್ಲಿ, ಜಯಜಯಧ್ವಾನಂ-ಜಯ ಜಯ ಎಂಬ ಧ್ವನಿ, ಅಚ್ಚರಿಯಪ್ಪಿನಂ-ಆಶ್ಚರ್ಯವುಂಟಾಗುತ್ತಿರಲು. ಜಯ ಪ್ರಾರಂಭಮಂ ಸೂಚಿಸುವಂತೆ-ಜಯೋದ್ಯೋಗವನ್ನು ಘೋಷಿಸುವಂತೆ, ಎಸೆದತ್ತು-ಶೋಭಿಸಿತು.

ವಚನ : ಆ ಪ್ರಸ್ತಾವದೊಳ್-ಆ ಸಮಯದಲ್ಲಿ

೯೭. ವಾತಸ್ಕಂ-ಕಡುಗಾಳಿಯಿಂದ, ದುರ್ಧರ-ಧರಿಸಲಸಾಧ್ಯವಾದ, ಗಂಧಸಿಂಧುರ-ಮದಿಸಿದ ಆನೆಗಳ, ಕಟ-ಕಪೋಲ ಪ್ರದೇಶದ, ಸ್ರೋತಃ-ಮದಧಾರೆಯನ್ನುಳ್ಳ, ಸಮುದ್ಯತ್-ಚಿಮ್ಮುತ್ತಿರುವ, ಮದವಾರಿ-ಮದೋದಕ ಸಮೂಹದ, ಇಂದಿಂದಿರ-ದುಂಬಿಗಳ, ಚಂಡ ತಾಂಡವ-ವೇಗವಾದ ಕುಣಿತದ, ಕಲ-ರಮಣೀಯ ನಾದದಿಂದ, ಸ್ವಾಭಾವಿಕ-ಸಹಜವಾದ, ಶ್ರೇಯಸಃ-ಶುಭವನ್ನುಳ್ಳ, ಕಿಂಚ-ಮತ್ತು, ಆಕಸ್ಮಿಕಪಾಂಸು-ಅಕಸ್ಮಾತ್ತಾಗಿ ಎದ್ದ ದೂಳನ್ನುಳ್ಳ, ಪಲ್ಲವ-ಆನೆಯ ಸೊಂಡಿಲಿನ ತುದಿಯ, ಜಲಸ್ಯಂದೀ-ನೀರ ಸುರಿತದಿಂದ, ಸದಾ ಸಿಂಧು-ಯಾವಾಗಲೂ ಹರಿಯುತ್ತಿರುವ ನದಿಯನ್ನುಳ್ಳ, ಪ್ರಿಯಗಳ್ಳ ಭೂಪತಿ-ಪ್ರಿಯಗಳ್ಳನೆಂಬ ಬಿರುದಿದ್ದ ಅರಿಕೇಸರಿ ರಾಜ, ಅಪ್ರಾಗೇಯಂ?, ಚಮೂಪ್ರಸ್ಥಾನಂ-ಸೇನಾ ಪ್ರಯಾಣವನ್ನು, ಆಚಕ್ಷತೇ-ನೋಡುತ್ತಾನೆ.

೯೮. ಅಂಬರಂ-ಆಕಾಶ, ಧ್ವಜಮಯಂ-ಬಾವುಟಗಳಿಂದ ತುಂಬಿದೆ; ಭುವನಂ-ಲೋಕ, ಗಜಮಯಂ-ಆನೆಗಳಿಂದ ತುಂಬಿದೆ; ಅಷ್ಟ ದಿಗ್ವಳಯಂ-ಎಂಟು ದಿಙ್ಮಂಡಲಗಳು, ಪ್ರಲಯ ಪ್ರಚಂಡ-ಪ್ರಳಯದಂತೆ ತೀಕ್ಷ್ಣವಾದ, ಭೂಭುಜಮಯಂ-ರಾಜರಿಂದ ತುಂಬಿದೆ; ಜಗತೀತಳಂ-ಭೂಪ್ರದೇಶವು, ಅಶ್ವಮಯಂ-ಕುದುರೆಗಳಿಂದ ತುಂಬಿದೆ; ಕಾಡು ಕೋಡುಂ-ಕಾಡೂ ಬೆಟ್ಟದ ಶಿಖರಗಳೂ, ರಥವ್ರಜಮಯಂ-ರಥಸಮೂಹದಿಂದ ತುಂಬಿದ್ದೂ, ಪದಾತಿಮಯಮುಂ-ಕಾಲಾಳುಗಳಿಂದ ತುಂಬಿದ್ದೂ, ನೆಱೆ-ಪೂರ್ಣವಾಗಿ, ಆದುದು-ಆಯಿತು; ಇಂ-ಇನ್ನು, ಜಗದೊಳ್-ಮೂರು ಲೋಕಗಳಲ್ಲಿ, ಈ ಬಲಮಂ-ಸೈನ್ಯವನ್ನು, ಅಂಪರ್-ಎದುರಿಸುವವರು, ಆರ್-ಯಾರು, ಎಂದು ಚತುರ್ಬಲಾರ್ಣವ-ಚತುರಂಗ ಸೈನ್ಯ ಸಮುದ್ರ, ಎನಿಸಿತ್ತು-ಎನ್ನಿಸಿತು.

೯೯. ಎಣಿಕೆಗೆ-ಲೆಕ್ಕಮಾಡುವುದಕ್ಕೆ, ಅಳುಂಬಮುಂ ಪಿರಿದುಮಾದ-ಅಧಿಕವೂ ಹಿರಿದೂ ಆದ, ಪದಾತಿ ವರೂಥ ವಾಜಿ ವಾರಣ ಬಲದಿಂದಂ-ಕಾಲಾಳು ರಥ ಕುದುರೆ ಆನೆಗಳ ಸೈನ್ಯದಿಂದ, ಧಾತ್ರಿಯ-ಭೂಮಿಯ, ಬಿಣ್ಪು-ಭಾರ, ಇರ್ಮಡಿಸೆ-ಎರಡು ಮಡಿಯಾಗಲು, ಎಸಗೆ-ನನಗೆ, ಎಂದಿನಂದದಲ್ತು-ಯಾವತ್ತಿನ ರೀತಿಯದಲ್ಲ, ಇದು ಅಣಕಂ-ಈ ಪೀಡೆ, ಹಿಂಸೆ; ಎಂದು-ಎಂದು ಹೇಳುತ್ತಾ, ಕಣ್ಣುಮುಚಿ-ಕಣ್ಣು ಹೊರಕ್ಕೆ ಬರಲು, ಪೆರ್ಬೆಡೆಯಿಂ-ದೊಡ್ಡ ಹೆಡೆಯಿಂದ, ಮಣಿ-ರತ್ನಗಳು, ಸೂಸೆ-ಚೆಲ್ಲಲು, ಬೇಸಱಿಂ-ಬೇಸರದಿಂದ, ಶೇಷಂ-ಆದಿಶೇಷನು, ಅಶೇಷಮಹೀ ವಿಭಾಗಮಂ-

ಸಮಸ್ತ ಭೂಮಿಭಾಗವನ್ನು, ಆನಲ್–ಧರಿಸಲು, ಉಮ್ಮಳಿಸಿ–ವ್ಯಥೆಪಟ್ಟು, ತಿಣುಕಿದಂ–ಮುಲುಗಿದನು, ಹೂಸಿದನು; ಇಲ್ಲಿ ಬರುವ ತುಮುಟಿರ್ ಎಂಬ ಧಾತುವಿನ ಅರ್ಥ ವಿಚಾರಣೀಯ; ಕಣ್ತುಮುಟ್ಟಿಪಿರ್ ಕುಸಿದಂತಕನಂತಮೆಯ್ದೆ ಮೆಟ್ಟಿರ್ ಪಸಪಸವಾಗಿ ಜೋಲ್ಪನಭಿಮನ್ಯು (ಪಂಪಭಾ. ೧೧–೧೦೪); ಮೊಳೆವುಲ್ಲಂ ಮೇದಿರ್ಪ್ಪಿಣೆ ತುಮುಟಿತೆ ಚಂದ್ರಪ (೪–೪೮); ಕೂರ್ಮಶಿರಂ ಪೊಱಪಾಯ್ದು ಕಣ್ತುಮುಟಿತ್ತೊಡ ವನಿತಾಗೆ ತನ್ನ ಭರದಿಂ ತಳರ್ದತ್ತು ನರೇಂದ್ರ ಸೈನಿಕಂ (ಮಲ್ಲಿಪು ೮–೧೪೦). ಕಿಬ್ಬಸಿತ್ತಿರ್ದಿಯುವೊಲಾನೆ ಕಣ್ತುಮುಟಿತಿರ್ದ ಮುಸುಂಬಿ (ಮಲ್ಲಿಪು ೧೦-೭೩) ಎಂದು ಮುಂತಾಗಿ ಕೆಲವು ಪ್ರಯೋಗಗಳಿವೆ.

**೧೦೦.** ಏಱಿದ–ಹತ್ತಿಕೊಂಡ, ಪೊನ್ನ–ಚಿನ್ನದ, ಪಣ್ಣುಗೆಯ–ಮಾಟದ, ಅಲಂಕಾರವನ್ನುಳ್ಳ, ಪೆರ್ವಿಡಿ–ದೊಡ್ಡ ಹೆಣ್ಣಾನೆ, ಕಟ್ಟಿದಿರಾಗೆ–ಅತಿ ಎದುರಾಗಿ ಬರಲು, ಮುಂದೆ ಬಂದು–ಎದುರಿಗೆ ಬಂದು, ಏಱಿದ–ಹತ್ತಿದ, ಚೆನ್ನಗನ್ನಡಿಯ–ಚೆಲುವಾದ ಕನ್ನಡಿಯನ್ನುಳ್ಳ, ಚೇಟಿಕೆ–ದಾಸಿಯು, ಬೀಸುವ ಕುಂಚಂ–ಬೀಸುವ ನವಿಲುಗರಿಯ ದೊಂದೆಯು, ಎಯ್ದೆ–ಚೆನ್ನಾಗಿ, ಮೆಯ್ತೋಱುವ–ಪ್ರಕಟಪಡಿಸುವ, ಗಾಡಿ–ಸೊಗಸು, ಕಾಂಚನದ ದಂಡದ–ಚಿನ್ನದ ಹಿಡಿಯನ್ನುಳ್ಳ, ಸೀಗುರಿ–ಒಂದುಬಗೆಯಾದ ಕೊಡೆಯು, ನೋಱಿತ್ತೊಡೆ–ನೋಡುವರೆ, ಆರುಮಂ–ಯಾರನ್ನಾದರೂ, ಮಾಱಿತ್ತು–ವಿಕ್ರಯಿಸಲು, ನಡೆತಂದ–ಬಂದ, ನರೇಂದ್ರಕಾಂತೆಯರ್–ರಾಜಸ್ತ್ರೀಯರು, ಮನೋಜನ–ಮನ್ಮಥನ, ಒಡ್ಡು–ಸೈನ್ಯವು, ಎನಿಸಿದರ್–ಎನಿಸಿಕೊಂಡರು.

**೧೦೧.** ಅಂತು–ಹಾಗೆ, ತಿರುವಿಂ–ಬಿಲ್ಲಿನ ಹಗ್ಗದಿಂದ, ಬರ್ದುಂಕಿದ–ತಪ್ಪಿಸಿಕೊಂಡು ಬಂದ, ಕಂತುವ–ಕಾಮನ, ನನೆಗಣೆಗಳಂತೆವೊಲ್–ಹೂವಿನ ಬಾಣಗಳ ಹಾಗೆ, ಆರೆಬರ್–ಕೆಲವರು, ಭೋಗಿಯರ್–ವಿಲಾಸಿನಿಯರು, ಪೊನ್ನಕಳಸದ–ಚಿನ್ನದ ಕಲಶವನ್ನುಳ್ಳ, ದಂತದ ಸಿವಿಗೆಗಳಂ–ದಂತದಿಂದ ಮಾಡಿದ ಪಲ್ಲಕ್ಕಿಗಳನ್ನು, ಏಱಿ–ಹತ್ತಿ, ಸಂತಸದೆ–ಸಂತೋಷದಿಂದ, ನಡೆತಂದರ್–ಬಂದರು.

**೧೦೨.** ತುರಗಂ–ಕುದುರೆಗಳು, ಪೊನ್ನಾಯೋಗಂಗಳಿಂ–ಚಿನ್ನದ ಅಲಂಕಾರಗಳಿಂದ, ಅಮರ್ದು–ಸೇರಿ, ಕೂಡಿ, ಅಱಿತ್ತಿಯಿಂ ನಡೆಯೆ–ಪ್ರೀತಿಯಿಂದ ನಡೆಯಲು, ಚಂಚತ್–ಚಲಿಸುತ್ತಿರುವ, ಪಿಂಛಾತ ಪತ್ರಮೆ–ನವಿಲು ಗರಿಯ ಕೊಡೆಯೇ, ನೆೞಲಂ–ನೆರಳನ್ನು, ಪಡೆಯೆ–ಉಂಟುಮಾಡಲು, ಕೂಡೆ–ಕೂಡಲೇ, ತಮ್ಮೊಡನೆ ಬರೆ–ತಮ್ಮ ಜೊತೆಯಲ್ಲಿ ಬರಲು, ಬಂದು, ಎತ್ತಂ–ಎಲ್ಲೆಲ್ಲೂ, ಪತ್ತೆಂಟು–ಹತ್ತೆಂಟು, ದೇಸೆ–ಚೆಲ್ವುಗಳು, ವಿಳಾಸದೊಳ್–ಸಿಂಗಾರದಲ್ಲಿ, ತೊಡರೆ–ಸೇರಲು, ವರ ಭೋಗಿನಿಯರ್–ಶ್ರೇಷ್ಠರಾದ ಭೋಗವನಿತೆಯರು, ಕಣ್ಗೊಪ್ಪಿರಲ್–ಕಣ್ಗೆಸೆದಿರಲು, ಜರಿತದಿಂ–ಬೇಗನೆ,ಬಂದರ್–ಬಂದರು "ಹರಿಣೀಂದಿನಿಪಾವೃತ್ತಂ ತೋಜಲ್ ನಸಂಮರಸಲಗಂ" ಹರಿಣೀ ಪ್ಲುತ ಎಂದು ಹೆಸರು.

**೧೦೩.** ಸಡಹುಡನಪ್ಪ–ಚಡಪಡಿಸುತ್ತಿರುವ (?), ಕಱುತ್ತ–ಹೇಸರಗತ್ತೆ,

ಕೊಡೆ–ಛತ್ರಿ, ಸಂತಸದಿಂ ಪೆಱಗೇಱಿಬರ್ಪ–ಸಂತೋಷದಿಂದ ಹಿಂದೆ ಕುಳಿತು ಬರುವ, ಕನ್ನಡಿವಿಡಿಪಾಕೆ–ಕನ್ನಡಿಯನ್ನು ಹಿಡಿದಿರುವವಳು, ಚಿನ್ನದ ಸವಗಂ–ಚಿನ್ನದಿಂದ ಮಾಡಿದ ಕವಚವು, ಅಪೂರ್ವದ–ಅಪರೂಪವಾದ; ಮೊಚ್ಚೆಯಂ–ಪಾದರಕ್ಷೆಯು, ಪವಣ್ಬಡೆದ–ಅಳವಟ್ಟ, ಸುವರ್ಣ ಹೊಂಬಣ್ಣದ, ಪಾರಿವದ–ಪಾರಿವಾಳದ ಬಣ್ಣದ, ಕುಪ್ಪಸವೊಪ್ಪೆ–ರವಿಕೆಗಳು ಸೊಗಸಾಗಿರಲು, ಬೆಡಂಗನಾಳ್ದು–ಬೆಡಗನ್ನು ಹೊಂದಿ, ಕಣ್ಗೆಡಜಡೆ–ನೋಟಕ್ಕೆ ದಾರಿದ್ರ್ಯವನ್ನುಂಟುಮಾಡದೆ, ಪೆಂಡವಾಸದ–ಅಂತಃಪುರದ, ವಿಳಾಸದ–ಸೊಗಸನ್ನುಳ್ಳ, ಸೂಳೆಯರ್–ದಾಸಿಯರು, ಒಪ್ಪಿ–ಸೊಗಸಾಗಿ, ತೋಱಿದರ್–ಕಾಣಿಸಿಕೊಂಡರು. ಇಲ್ಲಿ 'ಸಡಹುಡನಪ್ಪ' ಎಂಬುದರ ಅರ್ಥ ಖಚಿತವಿಲ್ಲ; ಚಿನ್ನದ ಎಂಬುದಕ್ಕೆ ಬದಲಾಗಿ ಚೀನದ (=ರೇಷ್ಮೆಯ) ಎಂಬ ಪಾಠವಿದ್ದಿರಬಹುದು; ಸವಗ, ಸವಂಗ<(ಸಂ) ಕವಚ;

೧೦೪. ನಡೆಯಲ್ ಬಂದು-ದಂಡೆತ್ತಿ ನಡೆಯಲು ಬಂದು, ಇಱಿಯಲ್ಕೆ-ಯುದ್ಧ ಮಾಡುವುದಕ್ಕೆ, ತಕ್ಕ–ಯೋಗ್ಯವಾದ, ತುರಗಂ–ಕುದುರೆ, ಘೋರೆಂದು–ಘೋರ್ ಎನ್ನುತ್ತ, ಬರ್ಪ–ಬರುವ, ಒಂದು, ಒಡಂಬಡು–ಒಪ್ಪಂದ, ಸೊಗಸು, ಬಂದೆತ್ತಿಸಿದು ದೊಂದು ಸತ್ತಿಗೆ–ಬಂದು ಎತ್ತಿ ಹಿಡಿಯಿಸಿದ ಒಂದು ಛತ್ರಿಯು, ಕರಂ–ವಿಶೇಷವಾಗಿ, ಮೆಯ್ವೆತ್ತ–ಸಾಕಾರವಾಗಿರುವ, ಮುಯ್ಪಾಗಂ-ಹೆಗಲಿನ ಭಾಗವು, ಆಗಡುಂ–ಯಾವಾಗಲೂ, ಆರ್ಗಂ–ಯಾರಿಗೂ, ಕುಡುತಿರ್ಪ–ಕೊಡುತ್ತಿರುವ, ಕಪ್ಪುರದ–ಪಚ್ಚಕರ್ಪೂರ ಮಿಶ್ರವಾದ, ಬಂಬಲ್ದಂಬುಲಂ–ಕಟ್ಟು ವೀಳೆಯವು, ಪಡೆಗೆಲ್ಲಂ–ಸೈನ್ಯಕ್ಕೆಲ್ಲ, ರಾಗಮಂ–ಸಂತೋಷವನ್ನು, ಪಡೆವನ್ನೆಗಂ–ಪಡೆಯುತ್ತಿರಲು, ಕೆಲರ್ ನಾಯಕರ್–ಕೆಲವರು ಸೇನಾನಾಯಕರು, ಅಂದು, ಎತ್ತಂ–ಎಲ್ಲೆಲ್ಲೂ, ನಡೆದರ್–ಹೊರಟರು. ಈ ಪದ್ಯದ ಅರ್ಥ ತಾತ್ಪರ್ಯಗಳು ವಿಶದವಾಗಿ ತಿಳಿಯುವಂತಿಲ್ಲ; ಪಾಠದೋಷವೊ?

**ವಚನ:** ಪದಿರ ಪಜಿಇಗಳಿಂದಂ–ಸಂಕೇತ ಸೂಚಕ ವಾದ್ಯ ಧ್ವನಿಗಳಿಂದ, ಅಗುರ್ವಾಗೆ–ಭಯಂಕರವಾಗಲು; ಒಲಿಗಲ್ಗಳ್ಗೆ–ಒಲೆಯ ಕಲ್ಲುಗಳಿಗೆ; ಗುಡಿಯ ಗೂಂಟಕ್ಕೆ–ಗೂಡಾರವನ್ನು ಹಾಕಲು ಬೇಕಾದ ಗೂಟಗಳಿಗೆ; ದಂಡಿಗೆಗೆ–ಪಲ್ಲಕ್ಕಿಗೆ; ವೇಣುವನಂಗಳುಂ–ಬಿದಿರಕಾಡುಗಳೂ; ಆನೆಕಂಬಕ್ಕೆ–ಆನೆಯನ್ನು ಕಟ್ಟುವ ಕಂಬಗಳಿಗೆ; ನೆಱಿಯವು–ಸಾಕಾಗವು; ಕಡಿತಮಿಕ್ಕಿದಂತಿರ್ದ–ಕಡಿತದಲ್ಲಿ ಬರೆದಂತಿದ್ದ, ಸಮಚತುರಶ್ರಂ–ಸಮಚೌಕವಾಗಿರುವ; ಪರಿಪ್ರಮಾಣಂ–ಸುತ್ತಳತೆಯನ್ನುಳ್ಳ; ಸೂೞ್ವರಂ–ಬಾರಿವರೆಗೂ; ನೀರಿೞಿಪಲುಂ–ಸ್ನಾನಮಾಡಿಸಲೂ; ನೀರ್ಗುಡಲುಂ ತರ್ಪಣಕೊಡಲೂ; ಪೆರ್ಮಡುಗಳ–ದೊಡ್ಡ ಸರೋವರಗಳ; ಎಡೆಯಱಿದು–ಯೋಗ್ಯವಾದ ಸ್ಥಳವನ್ನು ತಿಳಿದು; ಬೀಡಂ ಬಿಡಿಸಿ–ಪಾಳೆಯವನ್ನು ಬಿಡಿಸಿ;

೧೦೫. ಅಂಕದ ಕುರುಕ್ಷೇತ್ರಂ–ಪ್ರಸಿದ್ಧವಾದ ಕುರುಕ್ಷೇತ್ರವು, ಅದು, ಉರ್ವಿಗೆ–ಭೂಮಿಗೆ, ವೀರಕ್ಷೇತ್ರಂ–ವೀರರು ಹೋರಾಡುವ ಕ್ಷೇತ್ರ; ಮಹಾಕ್ರೂರಾರಾತಿಗಳ್–ಮಹಾಕ್ರೂರರಾದ ಶತ್ರುಗಳು, ಬಲಸ್ಥರ್–ಶಕ್ತಿವಂತರು; ಎನ್ನ–ನನ್ನ,

ದೋರ್ಬಲದ – ಭುಜಬಲದ, ಅಗುರ್ವಿಂದಂ – ಭೀಕರತೆಯಿಂದಲೂ, ತ್ರಿಲೋಕಕ್ಕೆ ಸಂಹಾರಂ ಮಾಡಿದ–ಮೂರುಲೋಕಗಳಿಗೆ ಲಯವುಂಟುಮಾಡಿದ, ಭೈರವ ಪ್ರಭಾವನ–ಭೈರವಸ್ವಾಮಿಯಾದ ರುದ್ರನ, ಒಂದಾಕಾರದಿಂ – ಒಂದು ರೂಪಿನಿಂದಲೂ, ವೈರಿ ಸಂಹಾರಂ–ವೈರಿಗಳ ಕೊಲೆಯನ್ನು, ಮಾಡದೆ ಮಾಣೆಂ-ಮಾಡದೆ ಬಿಡೆನು, ಎಂದು, ಹರಿಗಂ–ಅರ್ಜುನ, ಉತ್ಸಾಹಮಂ–ಆವೇಶವನ್ನು, ಕೈಕೊಂಡಂ–ಸ್ವೀಕರಿಸಿದನು.

ನವಮಾಶ್ವಾಸಂ ಸಂಪೂರ್ಣಂ

# ದಶಮಾಶ್ವಾಸಂ

೧. ಶ್ರೀನಾರೀವಲ್ಲಭಂ-ಐಶ್ವರ್ಯವೆಂಬ ಸ್ತ್ರೀಗೆ ಒಡೆಯನಾದ, ಅಭಿಮಾನಧನಂ-ಆತ್ಮಗೌರವವೆಂಬ ಧನವನ್ನುಳ್ಳ, ಹರಿಗಂ-ಅರ್ಜುನ, ಆ ಕುರುಕ್ಷೇತ್ರದೊಳ್-ಆ ಕುರು ರಣಾಂಗಣದಲ್ಲಿ, ಏನುಂಮಾಣದೆ-ಏನೂ ತಡಮಾಡದೆ, ಬಿಟ್ಟುದಂ-ಪಾಳೆಯ ಬಿಟ್ಟುದನ್ನು, ಅನೆಗಟ್ಟಿ ಸುಯೋಧನಂಗೆ-ಆ ಪ್ರಸಿದ್ಧನಾದ ದುರ್ಯೋಧನನಿಗೆ, ಚರರ್-ದೂತರು, ಅಱಿಪುವುದುಂ-ತಿಳಿಸುತ್ತಲು

೨. ಗುರು ಗುರುಸುತ ಕೃಪಾಂಗರಾಜರಂ-ದ್ರೋಣಾಶ್ವತ್ಥಾಮ ಕೃಪ ಕರ್ಣರನ್ನು, ಬರಿಸಿ-ಬರಮಾಡಿಕೊಂಡು, ಅವನಿಪಂ-ರಾಜ ದುರ್ಯೋಧನ, ನುಡಿದಂ-ಹೇಳಿದನು; ಪಾಂಡುಸುತರ-ಪಾಂಡವರ, ಮುನಿಸಿನ-ಕೋಪದ, ತಱಿಸಲಪಿನ-ನಿಶ್ಚಯದ, ಚಲದ-ಛಲದ, ಬಲದ, ಕಲಿತನದ-ಶೌರ್ಯದ, ಅಳವಂ-ಪ್ರಮಾಣವನ್ನು, ಅಳತೆಯನ್ನು, ಏಂ ಕೇಳ್ದಿರೆ-ಏನು ಕೇಳಿದಿರಾ!

೩. ಬಂದು, ಕುರುಕ್ಷೇತ್ರದೊಳ್-ಕುರುಕ್ಷೇತ್ರದಲ್ಲಿ, ಅಳವೊಂದಿರೆ-ಸಾಮರ್ಥ್ಯದಿಂದಿರಲು, ನಮ್ಮೊಳ್-ನಮ್ಮಲ್ಲಿ, ಮಿಗೆಕಡುಗಿ-ಮಿಗಿಲಾಗಿ ಉತ್ಸಾಹಿಸಿ. ತಳ್ತಿಱಿಯಲ್ಕೆಂದಾನುಂ-ತಾಗಿ ಯುದ್ಧ ಮಾಡುವುದಕ್ಕೆಂಬುದಾಗಿಯೂ, ಬಂದಿರ್ದರ್-ಬಂದಿದ್ದಾರೆ; ಇದೇಂ ದಾಯಿಗತನಮಂ-ಇದೇನು ದಾಯಾದಿತನವನ್ನು, ಎಮಗೆ, ನಮಗೆ, ಅವರ್-ಪಾಂಡವರು, ತೋಱಿದಪರ್-ತೋರಿಸುತ್ತಾರೆ!

೪. ಆ ಬಲಕ್ಕೆ-ಆ ಪಾಂಡವರ ಸೈನ್ಯಕ್ಕೆ, ಪಡೆವಳ್ಳಂ-ಸೇನಾಪತಿ, ದಲ್-ನಿಶ್ಚಯವಾಗಿಯೂ, ಆ ಧೃಷ್ಟದ್ಯುಮ್ನನೆಂಬ-ಆ ಧೃಷ್ಟದ್ಯುಮ್ನ ನೆನ್ನುವ, ಒಳ್ಳೆ-ನೀರು ಹಾವು, ಗಡಂ-ಅಲ್ಲವೇ; ಆ ಪಡೆಯೊಳ್-ಆ ಸೈನ್ಯದಲ್ಲಿ, ಗಂಡನುಂ-ಶೂರನೂ, ಆ ನೊಲಂ-ಆ ನೊಲಕ್ಕೆ ಸಮನಾದ, ದ್ರುಪದನುಂ-ದ್ರುಪದನೂ; ಪೇರೊಟ್ಟೆ-ಓರಿ ಪಾದ ಒಂಟೆ, ಆ ಮತ್ಸ್ಯನುಂ-ಆ ವಿರಾಟನೂ; ಅಂತು-ಹಾಗೆ, ಆ ಬಲಕಾಳ್ದಂಗಡ-ಆ ಸೈನ್ಯಕ್ಕೆ ಸ್ವಾಮಿ ಅಲ್ಲವೆ! ಧರ್ಮಜ್ಞನ್-ಧರ್ಮವನ್ನು ತಿಳಿದವನಾದ, ಆ ಧರ್ಮಜಂ-ಆ ಧರ್ಮರಾಜನು; ಏನಱಿಯಿರೇ-ಏನು ತಿಳಿಯಿರೇ, ನಾಯಕರೊಳ್ಳಿದರ್-ಒಳ್ಳೆಯ ಎಂದರೆ ಶೂರರಾದ ನಾಯಕರು, ಮತ್ಸೈನ್ಯದೊಳ್ ಕಾದಲ್ಕೆ-ನನ್ನ ಸೈನ್ಯದೊಡನೆ ಯುದ್ಧಮಾಡಲು, ಏಂ ನೆರೆದರೋ-ಏನು ಕೂಡಿಬಂದರೋ, ಗಡಂ-ದಿಟವಾಗಿಯೂ, ಇಲ್ಲಿ ಪಾಂಡವ ಸೈನ್ಯದ ವೀರರ ಬಗ್ಗೆ ದುರ್ಯೋಧನನ ತಿರಸ್ಕಾರವಿದೆ.

**ವಚನ:** ಕುಂಭಸಂಭವಂ-ದ್ರೋಣ.

೫. ಕುರುಭೂಮಿಯಂ-ಕುರುಕ್ಷೇತ್ರವನ್ನು, ಕಳವೇದಿಯಿಂ-ಯುದ್ಧರಂಗವನ್ನಾಗಿ ನಿಯಮಿಸಿವೆ; ಎಂದಂತೆ-ಹೇಳಿದಹಾಗೆ, ಕಳಕೆ-ಕಾಳಗದ ರಂಗಕ್ಕೆ, ಅವರ್ ವಂದಿರ್ದರ್-ಅವರು ಬಂದಿದ್ದಾರೆ; ದೋರ್ವಳ-ಬಾಹು ಬಲವನ್ನೂ, ಚಾತುರ್ವಳ-

ಚತುರಂಗ ಸೈನ್ಯವನ್ನೂ, ತತ್ಸುಹೃದ್ಬಳಮುಂ–ಅವರ ಸ್ನೇಹಿತರ ಶಕ್ತಿಯನ್ನೂ, ಇನ್ನು, ಏಗೇಳ್ದಪಯ್–ಏನೆಂದು ಕೇಳುತ್ತೀಯ ! ಪಾಂಡವರ್–ಪಾಂಡವರು, ಬಳಸಂಪನ್ನರ್–ಶಕ್ತಿಸಂಪನ್ನರಾದವರು : ಉದಗ್ರದೈವ ಬಳಸಂಪನ್ನರ್–ಶ್ರೇಷ್ಠವಾದ ದೈವಸಹಾಯ ಸಂಪತ್ತಿಯುಳ್ಳವರು ; ಇಂ–ಇನ್ನುಮುಂದೆ, ಮರುಳ್ತನಂ–ತಿಳಿಗೇಡಿತನದ ಮಾತು ಗಳನ್ನು, ಉಳಿ–ಬಿಟ್ಟುಬಿಡು, ಸುಯೋಧನಾ–ದುರ್ಯೋಧನನೇ, ಗಾಂಗೇಯರ–ಭೀಷ್ಮರು, ಪೇಳ್ದ–ಹೇಳಿದ, ಅದೊಂದು ತೆಜದಿಂ–ಅದೊಂದು ರೀತಿಯಿಂದ, ನೀಂ–ನೀನು, ಕಾದು–ಯುದ್ಧಮಾಡು. ಇಲ್ಲಿ ಱಳ ಕಾರಗಳ ಮಿಶ್ರಪ್ರಾಸವಿದೆ.

ವಚನ : ಆ ಮಾತಂ ಮನದೆ ಗೊಂಡು–ಆ ಮಾತನ್ನು ಮನದಲ್ಲಿ ಒಪ್ಪಿ ; ನಿಶಾಸಮಯದೊಳ್–ರಾತ್ರಿ ಹೊತ್ತಿನಲ್ಲಿ : ಕೈದೀವಿಗೆಗಳ–ಕೈದೀಪಗಳ ; ಕತಿಪಯ–ಕೆಲವು ; ರಾಜರಾಜಂ–ದುರ್ಯೋಧನನು : ಸಿಂಧುಜನ–ಭೀಷ್ಮನ ; ಮಂಚದೊಳೇಜಲ್ ಕರೆದೊಡೆ–ಮಂಚದ ಮೇಲೆ ಕುಳಿತುಕೊಳ್ಳುವಂತೆ ಹೇಳಿದರೆ ; ಒಲ್ಲೆಂ–ನನಗೆ ಬೇಡ, ನಾನು ಒಪ್ಪೆನು ; ಮಹಾಪ್ರಸಾದಂ–ಮಹಾ ಅನುಗ್ರಹ ; ಇಂತಿರ್ಪೆಂ–ಹೀಗೆಯೇ ಇರುವೆನು ; ಮಣಿಮಯ ಹೇಮಾಸನದೊಳ್–ರತ್ನಖಚಿತವಾದ ಚಿನ್ನದ ಪೀಠದಲ್ಲಿ ; ಕುಳ್ಳಿರ್ದನಂ – ಕುಳಿತುಕೊಂಡವನನ್ನು ; ಕಜ್ಜಂಪುಟ್ಟಿದೊಡೆ – ಕೆಲಸವುಂಟಾದರೆ ; ಬೞಿಯಟ್ಟದೆ–ದೂತನೊಡನೆ ಹೇಳಿ ಕಳುಹಿಸದೆ ; ಈ ಪೊೞ್ತು–ಈ ಹೊತ್ತು (ರಾತ್ರಿ) ; ಇದಾವುದು ಮನೆವಾೞ್ತೆಗೆತ್ತಂದೆ–ಇದು ಯಾವ ಗೃಹಕೃತ್ಯಕ್ಕಾಗಿ ಬಂದೆ ?

೬. ಹರಿಬಲದಿಂ – ಕೃಷ್ಣನ ಬೆಂಬಲದಿಂದ, ಪಾಂಡವರ್ – ಪಾಂಡವರು, ಎನ್ನೊಳ್–ನನ್ನಲ್ಲಿ, ಅನುವರಮುಂ–ಯುದ್ಧವನ್ನು, ಪೊತ್ತಿಸಿದರ್–ಹೊತ್ತಿಸಿದರು, ಆಂ–ನಾನು, ಕರಮಱಿದು–ಚೆನ್ನಾಗಿ ತಿಳಿದುಕೊಂಡು, ಅಂದು–ಆಗ (ಹಿಂದಿನಕಾಲ ದಲ್ಲಿ), ಆ ಹರಿಯುಂ–ಆ ಕೃಷ್ಣನನ್ನು, ಕೋಡಗಗಟ್ಟಾಗಿರೆ–ಕಪಿಯನ್ನು ಕಟ್ಟುವ ಕಟ್ಟಾಗಿರಲು, ಕಟ್ಟಿದೊಡೆ–ಕಟ್ಟಿದರೆ, ನೀಮೆ–ನೀವೇ, ಬಿಡಿಸಿದಿರಲ್ತೇ–ಬಿಡಿಸಿದಿರಲ್ಲವೇ !

೭. ಕರಿಗಂ ಪರಮಾಣುಗಂ–ಆನೆಗೂ ಅಣುವಿಗೂ, ಅಂತರಂ–ಸಂಬಂಧವು ಅವುದೊ–ಯಾವುದೋ ! ನಿಮಗಂ–ನಿಮಗೂ, ಅಸುರ ವೈರಿಗಂ–ಕೃಷ್ಣನಿಗೂ, ಏನಂತರಂ–ಏನು ಸಂಬಂಧ ; ಅಂತೆ–ಹಾಗೆಯೇ, ಅಗ್ಗದ ಪರಶುಧರಂ–ಶ್ರೇಷ್ಠನಾದ ಪರಶುರಾಮನು, ನಿಮ್ಮೊಳ್–ನಿಮ್ಮೊಡನೆ, ಪೋರ್ದು–ಹೋರಾಡಿ, ತಾನ್–ತಾನು, ಅದು ಅಂದು–ಅದು ಆಗ, ಏನಾದಂ–ಏನಾದನು ? ಎಂದರೆ ಪರಶುರಾಮನಿಗೆ ಭೀಷ್ಮನನ್ನು ಗೆಲ್ಲಲಾಗಲಿಲ್ಲ.

೮. ಅವರ್–ಆ ಪಾಂಡವರು, ಅಸುರ ವೈರಿಯಂ–ಕೃಷ್ಣನನ್ನು, ಒಡಂಬಡಿಂ–ಒಪ್ಪಿಗೆಯಿಂದ, ಪಿಡಿದರ್–ಹಿಡಿದರು, ಆಶ್ರಯಿಸಿದರು ; ಆಂ–ನಾನು, ನಿಮ್ಮಡಿಯಂ–ನಿಮ್ಮ ಪಾದಗಳನ್ನು ; ತೊೞ್ತುವೆಸದಿಂ–ಸೇವಾಕಾರ್ಯದಿಂದ ಎಂದರೆ ಸೇವಕತನದಿಂದ, ಪಿಡಿದೆಂ–ಹಿಡಿದೆನು, ಆಶ್ರಯಿಸಿದೆನು ; (ಇಲ್ಲಿಂದ ಮುಂದಕ್ಕೆ ಅರ್ಥಮಾಡುವುದು ಕಷ್ಟ

ವಾಗಿದೆ; ಇಲ್ಲಿ ಏನೋ ಕೆಟ್ಟಪಾಠವಿದೆ); ಅದೇಂ–ಅದೇನು? ತಾನ್–ತಾನು, ಎಚ್ಚುಂ–ಬಾಣಪ್ರಯೋಗ ಮಾಡಿಯೂ, ಪಿಡಿಯೊಡೆ–ಆಶ್ರಯಿಸಿದರೆ, ಅವರ್–ಅವರು (ಪಾಂಡವರು), ವಂದು–ಶರಣಾಗತರಾಗಿ ಬಂದು, ಪಿಡಿದರ್–ಹಿಡಿದರು (ಆಶ್ರಯಿಸಿದರು); ಎನ್ನದೆ–ನನ್ನದೇ, ಗೆಲ್ಲಂ–ಜಯ.

೯. ನಿಮ್ಮ ದಯೆಯಿಂ–ನಿಮ್ಮ ಕರುಣೆಯಿಂದ, ಶ್ರೀ–ಲಕ್ಷ್ಮಿಯು (ಐಶ್ವರ್ಯವು, ರಾಜಲಕ್ಷ್ಮಿಯು), ಕೊರಲೊಳ್–ಕೊರಳಿನಲ್ಲಿ, ಕಟ್ಟಿದ–ಕಟ್ಟಿಕೊಂಡ, ದೇವಿಯಂತಿರೆ–ದುರ್ಗಿದೇವತೆಯಹಾಗೆ, ಎಂದರೆ ಕೊರಳಿಗೆ ಕಟ್ಟಿಕೊಂಡ ದುರ್ಗಾದೇವಿಯ ಪದಕದಂತೆ, ತೊಟ್ಟಿಲೊಳ್ ತೊಟ್ಟು–ತೊಟ್ಟಿಲಿನಲ್ಲಿ ಮೊದಲಾಗಿ, ಶಿಶುತನದಿಂದ ಆರಂಭವಾಗಿ, ಅನಂತರಂ–ಆಮೇಲೂ, ಉರದೊಳ್–ನನ್ನೆದೆಯುಲ್ಲಿ, ನೆಲಸಿತ್ತು–ನೆಲಸಿ ಇದೆ; ನಿಮ್ಮಂ–ನಿಮ್ಮನ್ನು, ಕರಂ–ವಿಶೇಷವಾಗಿ, ನಚ್ಚಿ–ನಂಬಿಕೊಂಡು, ಬಲ್ಲಿದರೊಳ್–ಶೂರರಲ್ಲಿ, ಸಂಗರಮಂ–ಯುದ್ಧವನ್ನು, ಪೂಣ್ಚಿದೆಂ–ಹೂಡಿದೆನು; ಅದರ್ಕೆ–ಅದಕ್ಕಾಗಿ, ರಣಾಜಿರದೊಳ್–ಯುದ್ಧರಂಗದಲ್ಲಿ, ರಣಶ್ರೀ–ಜಯಲಕ್ಷ್ಮಿ, ಮಾಣದೆ–ಬಿಡದೆ, ಎನ್ನೊಳ್–ನನ್ನಲ್ಲಿಯೆ, ಪೊರ್ದುವಂತೆ–ಸೇರುವಹಾಗೆ, ನಿಮ್ಮೊಂದಭಿಪ್ರಾಯಮಂ–ನಿಮ್ಮ ಒಂದು ಆಲೋಚನೆಯನ್ನು, ಬೆಸಸಿಂ–ಹೇಳಿಸಿ, ಅಪ್ಪಣೆ ಕೊಡಿಸಿರಿ.

**ವಚನ:** ನಯದ ವಿನಯದ–ಸುಗುಣವಾದ, ನಮ್ರತೆಯ; ಕುರುವೃದ್ಧಂ–ಭೀಷ್ಮ.

೧೦. ನೀಂ–ನೀನು, ಪೃಥಾಸುತರಂ–ಪಾಂಡವರನ್ನು, ನೋಯಿಸಲಾಗದು–ದುಃಖಪಡಿಸಬಾರದು, ಎಂದು, ಧೃತರಾಷ್ಟ್ರಂ–ಧೃತರಾಷ್ಟ್ರನು, ನುಡಿದು–ಹೇಳಿ, ಆರ್ತನೇ–ಸಮರ್ಥನಾದನೇ?; ಹರಿ–ಕೃಷ್ಣನು, ಭರಂಗೆಯ್ದು–ರಭಸವನ್ನು ತೋರಿಯೂ, ಆರ್ತನೇ–ಶಕ್ತನಾದನೇ?; ಆವು–ನಾವು, ನುಡಿದು–ಹೇಳಿ, ಏನ್ ಆರ್ತೆವೇ–ಏನು ಸಮರ್ಥರಾದೆವೇ? ಎಂದರೆ ನಿನ್ನ ಛಲವನ್ನು ಹೋಗಲಾಡಿಸಲು ಯಾರೂ ಸಮರ್ಥರಾಗಲಿಲ್ಲ; ನಿನ್ನ–ನಿನ್ನ, ಒರಂಟುತನಂ–ಒರಟುತನವು, ಕೆಯ್ಗಣ್ಮಿ ವಾಯ್ತು–ಕೈಮೀರಿತು; ಅದಪ್ಪೊಡೆ–ಆದಾದರೆ, ಮಹಾಭಾರಾವತಾರಂ–ಭೂಮಿಯ ಮಹಾ ಭಾರವನ್ನು ಇಳಿಸುವ ಯುದ್ಧ; ರಣೋದ್ಯತನಾಗು–ಯುದ್ಧಕ್ಕೆ ಸಿದ್ಧನಾಗು, ಎಂಬುದಂ–ಎಂಬುದನ್ನು, ಎಮ್ಮಂ–ನಮ್ಮನ್ನು, ಅನ್ಯರವೋಲ್–ಇತರರಂತೆ, ನೀಂ–ನೀನು, ಪ್ರಾರ್ಥಿಸಲ್ವೇಟ್ಟುದೇ–ಪ್ರಾರ್ಥಿಸಬೇಕಾಗಿದೆಯೇ? ಎಂದರೆ ಯುದ್ಧಕ್ಕೆ ನಾನು ಯಾವಾಗಲೂ ಸಿದ್ಧ, ನೀನು ಹೇಳಬೇಕಾಗಿಯೇ ಇಲ್ಲ.

**ವಚನ:** ಗಾಂಗೇಯಂ–ಭೀಷ್ಮ, ತನ್ನಂತರ್ಗತದೊಳ್–ತನ್ನ ಮನಸ್ಸಿನಲ್ಲಿ;

೧೧. ಅಣಿಯರಂ–ವಿಶೇಷವಾಗಿ, ಒದವಿದ–ಉಂಟಾದ, ಮುಳಿಸಿನೊಳ್–ಕೋಪದಲ್ಲಿ, ಅವರ್–ಪಾಂಡವರು, ಅಣಂ–ಸ್ವಲ್ಪವೂ, ಉಜಿದವರ್–ಹುದುವಾಗದವರು, ಎಂದು, ರಣದೊಳ್–ಕಾಳಗದಲ್ಲಿ, ಜಯಿಸಲ್–ಗೆಲ್ಲಲು, ನಾರಾಯಣನೊಳಂ–ಕೃಷ್ಣನಲ್ಲೂ, ಉಪಾತ್ತನಾರಾಯಣನೊಳಂ–ಅರ್ಜುನನಲ್ಲೂ, ಇಂತು–ಹೀಗೆ,

ಎತ್ತಿಕೊಂಡ–ಯುದ್ಧವನ್ನು ಸಂಕಲ್ಪಿಸಿದ, ಗಂಡರುಂ-ಶೂರರೂ, ಒಳರೇ–ಉಂಟೇ ? ಭೀಷ್ಮ ದುರ್ಯೋಧನನನ್ನು ಮೆಚ್ಚಿಕೊಳ್ಳುತ್ತಾನೆ.

೧೨. ಭೀಷ್ಮನ ಧರ್ಮಸಂಕಟ : ಎನ್ನನೆ–ನನ್ನನ್ನೇ, ನಚ್ಚಿದಂ-ನಂಬಿದವನು, ದುರ್ಯೋಧನ ; ಅನುವಗಕೆ–ಯುದ್ಧಕ್ಕೆ, ಎನ್ನನೆ–ನನ್ನನ್ನೇ, ಪ್ರಾಣಿಸಿದನ್–ಶಪಥ ಮಾಡಿಸಿದನು ; ಎನಗೆ–ನನಗೆ, ಎರಡುಂಡಮುಂ–ಉಭಯಪಕ್ಷಗಳೂ, ಓರನ್ನರಿದಲ್–ಸಮನಾದವರೇ ಅಲ್ಲವೇ ! ಎನ್ನಯ ಮಕ್ಕಳೊಳಂ–ನನ್ನ ಮಕ್ಕಳಲ್ಲೂ, ಪೊಮ್ಮಕ್ಕಳೊಳಂ–ಮೊಮ್ಮಕ್ಕಳುಗಳಲ್ಲೂ, ಎಂತು ಕಾದುವೆಂ–ಹೇಗೆ ಯುದ್ಧಮಾಡುವೆನು ?

೧೩. ಮಕ್ಕಳಮೊಮ್ಮಕ್ಕಳರಥಂ–ಮಕ್ಕಳ ಮೊಮ್ಮಕ್ಕಳ ರಥಗಳು, ಎಕ್ಕೆಯಿಂ-ಒಟ್ಟಾಗಿ, ಎಡೆಗೊಂಡೊಡೆ–(ಯುದ್ಧದ) ನಡುವೆ ಎದುರಿಸಿದರೆ, ಓವದೆ–ರಕ್ಷಿಸದೆ, ರಣದೊಳ್–ಯುದ್ಧದಲ್ಲಿ, ಮಕ್ಕಳಂ–ಮಕ್ಕಳನ್ನು, ಆಂ ಕೊಂದೊಡೆ–ನಾನು ಕೊಂದರೆ, ಪಾವು–ಹಾವು, ತನ್ನಿಕ್ಕಿದ ತತ್ತಿಯನೆ–ತಾನು ಹಾಕಿದ ಮೊಟ್ಟೆಗಳನ್ನೇ, ನೊಣೆವಂತಕ್ಕು–ನುಂಗುವಂತೆ ಆಗುತ್ತದೆ.

೧೪. ಎನ್ನಂ – ನನ್ನನ್ನು. ಧುರದೊಳ್ – ಯುದ್ಧದಲ್ಲಿ, ಮಾರ್ಕೊಳ್ವರ್-ಎದುರಿಸುವವರು, ನರನಾರಾಯಣರಿರ್ವರೆ–ಅರ್ಜುನ ಕೃಷ್ಣರಿಬ್ಬರೇ: ಒರ್ವಂ–ಒಬ್ಬನು, ಮೊಮ್ಮಂ–ಮೊಮ್ಮಗನು, ಒರ್ವಂ-ಒಬ್ಬ, ಪರಮಗುರು–ಲೋಕದ ಶ್ರೇಷ್ಠನಾದ ಗುರು, ಅವರಿರ್ವರುಮಂ–ಅವರಿಬ್ಬರನ್ನೂ, ಕಾದು–ರಕ್ಷಿಸಿ, ಉಳಿದ ರಿಪುನೃಪಬಲಮಂ–ಮಿಕ್ಕ ಶತ್ರುರಾಜರ ಸೈನ್ಯವನ್ನು, ಅಳಿಪೆಂ–ನಾಶಮಾಡುವೆನು.

**ವಚನ :** ಬಗೆಯುತ್ತಿರ್ಪಿನಂ–ಚಿಂತಿಸುತ್ತಿರುವಾಗ ; ಸಹಸ್ರ ಕಿರಣೋದಯದೊಳ್–ಸೂರ್ಯೋದಯದಲ್ಲಿ, ಬಳಿಯನಟ್ಟಿ–ದೂತನನ್ನು ಕಳುಹಿಸಿ ; ಗುಹಂಗೆ–ಷಣ್ಮುಖನಿಗೆ ; ಪುರಂದರನ–ಇಂದ್ರನ ;

೧೫. ತುಂಗಮೃದಂಗ ಶಂಖಪಟಹಧ್ವನಿ–ಮದ್ದಳೆ ಶಂಖ ತಮಟೆಗಳ ತಾರಸ್ವರ, ದಿಕ್ತಟದಂತಂ – ದಿಕ್ಪ್ರದೇಶಗಳ ಅಂತ್ಯವನ್ನು, ಎಯ್ದೆ – ಸಮೀಪಿಸಲು ; ವಾರಾಂಗನೆಯರ್–ಸೂಳೆಯರು, ಚಳಲ್ಲುಳಿತ–ಅಲುಗಾಡಿ ಗುಂಪಾಗಿ ಚಲಿಸುತ್ತಿರುವ, ಚಾಮರಮಂ–ಚಾಮರಗಳನ್ನು, ನೆರೆದು–ಸೇರಿ, ಇಕ್ಕೆ–ಬೀಸಲು ; ಪಂಚರತ್ನಂಗಳುಮಂ ಪುದುಂಗೊಳಿಸಿ–ಐದುಬಗೆಯ ರತ್ನಗಳನ್ನೂ ರಾಶಿಮಾಡಿ, ಸ್ವರ್ಣಂಗಳಸಂಗಳೊಳಿರ್ದ–ಚಿನ್ನದ ಕಲಶಗಳಲ್ಲಿ ತುಂಬಿದ್ದ, ಪುಣ್ಯ ತೋಯಂಗಳೊಳ್-ಪುಣ್ಯಕರವಾದ ನೀರುಗಳಲ್ಲಿ, ಅಬ್ಬಿಜಿಂ–ಪ್ರೀತಿಯಿಂದ, ಮಿಸಿಸಿ–ಸ್ನಾನಮಾಡಿಸಿ, ಆ ವಿಭು–ಆ ಪ್ರಭು, ದುರ್ಯೋಧನನು, ವೀರಪಟ್ಟಮಂ–ಸೈನ್ಯಾಧಿಪತಿಯ ಪಟ್ಟವನ್ನು, ಕಟ್ಟಿದನು.

ವಚನ : ಪಗೆವರಂ–ಹಗೆಗಳನ್ನು ; ಪ್ರೋಟ್ಳಿಸುವ–ಬೀಗುವ, ಗರ್ವಪಡುವ ; ಆವಕರ್ಣಿಸಿ–ಕೇಳಿ ;

೧೬. ಇಲ್ಲಿಂದ ಕರ್ಣ – ಭೀಷ್ಮರ ವಿವಾದ. ಅಸಿಸೆ ಪದ್ಯ ಪ್ರಾರ್ಥಿಯಾಗಿ ; ಕರ್ಣನ ಮಾತು ; ಭಗವತಿಯ – ದುರ್ಗಾದೇವಿಯು, ಏಜುವೆಟ್ಟು – ಯುದ್ಧಗಳನ್ನು

ಹೇಳುವ. ತೆಱದಿಂ-ರೀತಿಯಿಂದ, ಇವರ-ಈ ಭೀಷ್ಮರ. ಏಱು-ಯುದ್ಧಗಳು, ಕಳೆ ಯಾಂಪ್ತು-ಎಂದೋ ನಡೆದ ವೃತ್ತಾಂತಗಳಾಗಿವೆ; ನೀನ್ ಇದಂ ಬಗೆದು-ನೀನು ಇದನ್ನು ಭಾವಿಸಿ. ಇವರ್-ಈ ಭೀಷ್ಮರು, ಇನ್ನುಂ-ಇನ್ನುಕೂಡ, ಅಂತು-ಹಗೆಗಳನ್ನು ಎದುರಿಸಿ, ಇಱಿವರ್--ಹೋರಾಡುವರು, ಎಂದು-ಎಂಬುದಾಗಿ, ವಿಮೋಹಿಸಿ-ಭ್ರಾಂತ ನಾಗಿ, ವೀರಪಟ್ಟಮಂ-ಸೇನಾಧೀಶ ಪಟ್ಟವನ್ನು, ಬಗೆಯದೆ-ಯೋಚಿಸದೆ, ಕಟ್ಟಿದೈ-ಕಟ್ಟಿದ್ದೀಯೇ; ಗುರುಗಳಂ-ಗುರುಗಳನ್ನೂ, ಕುಲವೃದ್ಧರಂ-ಕುಲಕ್ಕೆ ಹಿರಿಯರನ್ನೂ, ಆಜಿಗೆ-ಯುದ್ಧಕ್ಕೆ, ಉಯ್ದು-ತೆಗೆದುಕೊಂಡು ಹೋಗಿ, ಕೆಮ್ಮಗೆ-ಸುಮ್ಮನೆ. ಪಗೆವಾಡಿ ಯೊಳ್-ಶತ್ರುಗಳ ಶ್ರೇಣಿಯಲ್ಲಿ, ನಗಿಪಿಕೊಂಡೊಡೆ-ನಗೆಗೆ ಎಂದರೆ ಪರಿಹಾಸಕ್ಕೆ ಈಡುಮಾಡಿದರೆ, ಸುಯೋಧನಾ-ದುರ್ಯೋಧನನೇ, ಬಂದಪ್ಪುದು-ನಿನಗೆ ಬರುವುದು, ಏನ್-ಏನು? ನಿನಗೇನು ಲಾಭ ಈ ಮುದುಕರನ್ನು ಶತ್ರುಗಳ ಎದುರಿಗೆ ನಿಲ್ಲಿಸು ವುದರಿಂದ?

೧೭. ಕಣ್ಗೆಟ್ಟ – ಕಣ್ಣು ನಷ್ಟವಾದ, ದೃಷ್ಟಿಪಾಟವವಿಲ್ಲದ, ಮುದುಪಂಗೆ-ಮುದುಕನಿಗೆ, ಕಟ್ಟಿದ ಪಟ್ಟಮೆ – ಕಟ್ಟಿದ ವೀರಪಟ್ಟವೆ, ಸರವಿಗೆ-ಹಗ್ಗಕ್ಕೆ, ದೊರೆ-ಸಮಾನ: ಪಿಡಿದ ಬಿಲ್ಲೆ-ಅವನು ಹಿಡಿದಿರುವ ಬಿಲ್ಲೇ, ದಂಟಿಂಗೆ-ದಂಟಿಗೆ, ಎಣೆ-ಸಮಾನ; ಪಗೆವರ-ಹಗೆಗಳ, ನಿಟ್ಟೆಲ್ವಂ-ಉದ್ದವಾದ ಮೂಳೆಗಳನ್ನು, ಮುಱಿವೊಡೆ-ಮುರಿಯುವ ಪಕ್ಷದಲ್ಲಿ, ಎನಗೆ-ನನಗೆ, ಪಟ್ಟಂಗಟ್ಟು-ವೀರ ಪಟ್ಟವನ್ನು ಕಟ್ಟು.

೧೮. ಆದಿಯೊಳ್-ಮೊದಲು, ಅವರಂ – ಪಾಂಡವರನ್ನು, ಪಿರಿದು ಒಂದು ಆದರದಿಂ-ಹಿರಿದಾದ ಒಂದು ಪ್ರೀತಿಯಿಂದ, ನಡಪಿದ-ಸಲಹಿದ, ಅಜ್ಜರಪ್ಪುದಱಿಂದಂ-ಅಜ್ಜರಾಗಿರುವುದರಿಂದ, ಇವರ್-ಇವರು, ಅವರೊಳ್-ಅವರಲ್ಲಿ, ಕಾದರ್-ಯುದ್ಧ ಮಾಡರು; ಅವರುಂ-ಆ ಪಾಂಡವರು ಕೂಡ, ನೆರೆದು-ಎದುರಿಸಿ, ಇವರೊಳ್-ಈ ಭೀಷ್ಮರಲ್ಲಿ, ಕಾವರ್-ಹೋರಾಡರು; ನೃಪತೀ-ದೊರೆಯಾದ ದುರ್ಯೋಧನನೇ, ಎಂತು ನಂಬುವೆ-ಹೇಗೆ ನಂಬುವೆ?

ವಚನ: ಪಿಡಿಲ್ದು-ಹಿಡಿದು: ಕುಂಭಸಂಭವಂ-ದ್ರೋಣ.

೧೯. ವನಮಾತಂಗಂಗಳಿಂ-ಕಾಡಾನೆಗಳಿಂದ. ಸಿಂಗದ ಮುಪ್ಪುಂ – ಸಿಂಹದ ಮುದಿತನವೂ, ಅಸುಹೃಚ್ಚತುರಂಗಬಲಂಗಳಿಂ-ಶತ್ರುಗಳ ಚತುರಂಗ ಸೈನ್ಯಗಳಿಂದ. ನೆಗೞ್ದ-ಪ್ರಸಿದ್ಧರಾದ, ಈ ಗಾಂಗೇಯರ-ಈ ಭೀಷ್ಮರ, ಮುಪ್ಪುಂ-ಮುದಿತನವೂ, ಅದೆಂತುಂ – ಅದು ಹೇಗೂ, ಅಂಗಾಧಿಪತೀ – ಕರ್ಣನೇ, ಇಳಿಕೆವಡೆಗುಮೆ – ತಿರಸ್ಕೃತ ವಾಗುವುದೆ? ಇಲ್ಲವೆಂದು ತಾತ್ಪರ್ಯ.

೨೦. ಕುಲಜರಂ – ಸತ್ಕುಲದವರನ್ನು, ಉದ್ಧತರಂ – ಘನತೆಯುಳ್ಳವರನ್ನು, ಭುಜಬಲಯುತರಂ-ಬಾಹುಬಲವುಳ್ಳವರನ್ನು ಎಂದರೆ ಶೂರರನ್ನು, ಹಿತರಂ-ಎಲ್ಲರಿಗೂ ಬೇಕಾದವರನ್ನು, ಈ ಸಭಾಮಧ್ಯದೊಳ್-ಈ ಸಭೆಯ ನಡುವೆ, ಅಗ್ಗಳಿಸಿದ-ಅಧಿಕವಾದ, ಮದದಿಂ – ಕೊಬ್ಬಿನಿಂದ, ನಾಲಗೆ – ನಾಲಗೆಯು ಎಂದರೆ ಮಾತು, ಕುಲಮಂ-

ಕುಲವನ್ನು, ತುಬ್ಬುವವೊಲ್—ಸೂಚಿಸುವಂತೆ, ಉಱಿಪೆ—ಇರದೆ, ನೀಂ—ನೀನು. ಕೆಡೆನುಡಿಪ್ಪೆ—ಹೀಯಾಳಿಸಿ ಮಾತಾಡುವೆ : "ತುಬ್ಬು—ಚೋರಸೂಚನೇ"

**ವಚನ** : ಕರ್ಣಂ ಕಿನಿಸಿ—ಕರ್ಣನು ಕೋಪಿಸಿ.

೨೧. ಕುಲಮನೆ—ಕುಲವನ್ನೇ, ಮುನ್ನಂ—ಮೊದಲು, ಉಗ್ಗಡಿಸಿದೆಂಗಳ—ಏನು ಕೂಗಿ ಹೇಳುತ್ತೀರಲ್ಲವೆ? ಅಂತು—ಎದುರಿಸಿ, ಮಾರ್ಮಲೆವನಂ—ಪ್ರತಿಭಟಿಸು ವವನನ್ನು, ನಿಮ್ಮ ಕುಲಂಗಳ್—ನಿಮ್ಮ ಕುಲಗಳು. ಅಟ್ಟಿ—ಚೆನ್ನಟ್ಟಿ ಬಂದು, ತಿಂಬುವೆ—ತಿನ್ನುತ್ತವೆಯೆ? ಕುಲಂ—ಹುಟ್ಟಿದ ಕುಲ. ಜಾತಿ. ಕುಲಮಲ್ತು—ನಿಜವಾದ ಕುಲವಲ್ಲ; ಛಲಂ—ಛಲವು, ಕುಲಂ—ಕುಲ; ಗುಣಂ—ಗುಣವು, ಕುಲಂ—ಕುಲ; ಅಭಿಮಾನವೊಂದೆ—ಆತ್ಮಗೌರವವೊಂದೇ, ಕುಲಂ—ಕುಲ, ಅಣ್ಮು—ಪರಾಕ್ರಮವು, ಕುಲಂ—ಕುಲ; ಬಗೆವಾಗಳ್—ಚಿಂತಿಸಿದಾಗ, ಈಗಳ್—ಈಗ, ಈ ಕಲಹದೊಳ್—ಈ ಯುದ್ಧದಲ್ಲಿ. ಅಣ್ಣ, ನಿಮ್ಮ ಕುಲಂ—ನಿಮ್ಮ ಕುಲವು, ಆಕುಲಮಂ—ದುಃಖವನ್ನು, ನಿಮಗುಂಟುಮಾಡುಗುಂ—ನಿಮಗೆ ಉಂಟುಮಾಡುತ್ತದೆ.

೨೨. ಗಂಗಾಸುತಂ—ಭೀಷ್ಮನು, ಪೃಥಾಸುತರಂ—ಪಾಂಡವರನ್ನು, ಗೆಲ್ದೊಡೆ ಗೆದ್ದರೆ, ತಪಕೆ—ತಪಸ್ಸಿಗೆ, ಪೋಪೆಂ—ಹೋಗುವೆನು; ಅವರ್ಗಳ ಕೈಯೊಳ್—ಆ ಪಾಂಡವರ ಕೈಯಲ್ಲಿ, ಗಾಂಗೇಯಂ—ಭೀಷ್ಮನು, ಅೞಿದೊಡೆ—ನಾಶವಾದರೆ, ಅಹಿತರಂ—ವೈರಿಗಳನ್ನು, ಆಂ—ನಾನು, ಗೆಲೆ—ಗೆಲ್ಲಲು, ತಳ್ತಿಱಿಪೆಂ—ಸೇರಿ ಯುದ್ಧಮಾಡುವೆನು; ಅನ್ನೆಗಂ—ಅದುವರೆಗೂ. ಬಿಲ್ವಿಡಿಯೆಂ—ಬಿಲ್ಲನ್ನು ಹಿಡಿಯುವುದಿಲ್ಲ, ಎಂದರೆ ಯುದ್ಧ ಮಾಡುವುದಿಲ್ಲ ಎಂದು ಕರ್ಣನ ಪ್ರತಿಜ್ಞೆ.

೨೩. ಕಲಿತನದ—ಶೌರ್ಯದ, ಉರ್ಕು—ಗರ್ವ, ಜವ್ವನದ—ಯೌವನದ, ಸೊರ್ಕು—ಮದ, ನಿಜೇಶನ—ನಿನ್ನ ಒಡೆಯನ, ನಚ್ಚು—ನಂಬಿಕೆ, ಮಿಕ್ಕ—ಮೀರಿದ, ಅತಿಶಯವಾದ, ತೋಳ್ವಲದ—ಭುಜಬಲದ, ಪೊಡರ್ಪು—ಸ್ಫುರಣೆ, ಶಕ್ತಿ, ಕರ್ಣ—ಕರ್ಣನೇ—ನಿನಗುಳ್ಳನಿತು—ನಿನಗಿರುವಷ್ಟು, ಏನ್ ಎನಗೆ ಉಂಟೆ—ಏನು ನನಗೆ ಇದೆಯೆ? ಭಾರತಂ ಕಲಹಂ—ಯುದ್ಧ ಸಾಮಾನ್ಯ ಯುದ್ಧವಲ್ಲ, ಭಾರತ ಯುದ್ಧ, ಇದಿರ್ಚುವಂ—ಎದುರಿಸುವವನು, ಹರಿಗಂ—ಅರ್ಜುನನು. ಅಪ್ಪೊಡೆ—ಆದರೆ, ನೀಂ—ನೀನು, ಏಕೆ—ಏತಕ್ಕೆ, ಮೊಕ್ಕಳಂ—ವಿಶೇಷವಾಗಿ, ಪಳಂಚಿ—ತಾಗಿ, ಅಲೆದಪೆ—ಪೀಡಿಸುತ್ತೀಯೆ, ಅಣ್ಣ—ಕರ್ಣನೆ, ಮಹಾಜಿರಂಗದೊಳ್—ಮಹಾ ಯುದ್ಧರಂಗದಲ್ಲಿ, ಸೂಳ್ಪಡೆಯಲಪ್ಪುದು—ಸರದಿಯನ್ನು ಪಡೆಯಲಾಗುತ್ತದೆ, ಕಾಣ—ನೋಡು.

೨೪. ಮುದುಪನ—ಮುದಿಯನ, ಬಿಲ್ಬಲ್ಮೆಯುಂ—ಬಿಲ್ವಿದ್ಯೆಯ ನೈಪುಣ್ಯವೂ, ಇಱಿವ—ಹೊಡೆಯುವ, ಅದಟುಂ—ಪರಾಕ್ರಮವೂ, ಬಗೆವಾಗಳ್—ಯೋಚಿಸಿದಾಗ, ಅಣ್ಣಂ—ಕರ್ಣನು. ಎಂದಂತುಟೆ—ಎಂದು ಹೇಳಿದ ಹಾಗೆಯೇ! ತಪ್ಪದು—ತಪ್ಪಾಗುವುದಿಲ್ಲ; ಕದನದೊಳ್—ಯುದ್ಧದಲ್ಲಿ, ಕರಮೆ—ವಿಶೇಷವಾಗಿಯೇ, ತುಱುಮಕ್ಕಳಂ—

ಹೀನವಾಗುತ್ತದೆ: ಇನ್ನೆನ್ನ ನುಡಿದ–ಇನ್ನು ನಾನು ಹೇಳಿದ, ನುಡಿಯಂ–ಪ್ರತಿಜ್ಞೆಯನ್ನು, ಕೇಳಿಂ–ಕೇಳಿರಿ.

೨೫. ಚಕ್ರಮಂ–ಚಕ್ರಾಯುಧವನ್ನು, ಪಿಡಿಯೆನ್–ಹಿಡಿಯೆನು, ಎಂಬ–ಎನ್ನುವ, ಚಕ್ರಿಯಂ–ಕೃಷ್ಣನನ್ನು, ಇಳಾಚಕ್ರಂ–ಭೂಮಂಡಲವು, ಭಯಂಗೊಳ್ವಿನಂ–ಹೆದರುತ್ತಿರಲು, ಕರಚಕ್ರಮಂ–ಕೈಯಚಕ್ರವನ್ನು, ಪಿಡಿಯಿಪ್ಪೆಂ–ಹಿಡಿಯುವಂತೆ ಮಾಡುತ್ತೇನೆ; ನರರಥಂ–ಅರ್ಜುನನ ರಥ, ಆ ಕುರುಕ್ಷೇತ್ರದಿಂ–ಆ ಕುರುಭೂಮಿಯಿಂದ, ತೂಳ್ದು–ತಳ್ಳಲ್ಪಟ್ಟು, ಪಡುವ–ಪಶ್ಚಿಮಕ್ಕೆ, ಎಣ್ಗಾವುದು ಪೋಗೆ–ಎಂಟು ಗಾವುದ ಹೋಗಲು, ಪೋ. ಗಡ, ಇಸುವೆಂ–ಬಾಣದಿಂದ ಹೊಡೆಯುತ್ತೇನೆ, ಅಲ್ಲವೆ, ಹೋಗು ; ನಿಚ್ಚಂ–ಪ್ರತಿದಿನವೂ, ಪಯಿಂಛಾಸಿರ್ವರಂ–ಹತ್ತುಸಾವಿರ, ಧರಾಧೀಶರಂ–ರಾಜರನ್ನು, ಓವದೆ–ರಕ್ಷಿಸದೆ, ಯುದ್ಧದೊಳ್–ರಣದಲ್ಲಿ, ಸಿಡಿಲ್ದಂತಿರೆ–ಚದರಿ ಬೀಳುವ ಹಾಗೆ, ಮಾಚಿಪ್ಪೆಂ–ಮಾಡುತ್ತೇನೆ.

ವಚನ : ಅಳವಂ–ಶಕ್ತಿಯನ್ನು, ಅಳವಲ್ಲದೆ–ಅಳತೆ ಇಲ್ಲದೆ, ಅಧಿಕವಾಗಿ,

೨೬. ಕೌರವರು ಯುದ್ಧಭೂಮಿಗೆ ಪ್ರಯಾಣಮಾಡಿದ್ದು ; ಪದ್ಮಜಂ–ಬ್ರಹ್ಮನು, ಆಸನಾಂಬುರುಹದಿಂದೆ–ಆಸನವಾದ ಕಮಲದಿಂದ, ಕೆಡೆದಂ–ಬಿದ್ದನು ; ಆಗಳ್–ಆಗ, ಸುರೇಂದ್ರಾಚಳಂ–ಮೇರು ಪರ್ವತ, ನಡುಗಿತ್ತು–ಕಂಪಿಸಿತು ; ಅರ್ಕಂ–ಸೂರ್ಯನು, ಅಳುರ್ಕೆಗೆಟ್ಟು–ವ್ಯಾಪ್ತಿಯನ್ನು ನೀಗಿಕೊಂಡು, ನಭದಿಂ–ಆಕಾಶದಿಂದ, ತೂಳ್ದಂ–ಹಿಮ್ಮೆಟ್ಟಿದನು ; ಗೌರಿ–ಪಾರ್ವತಿಯು, ಮರುಳ್ದು–ಭ್ರಾಂತಳಾಗಿ, ವೃಷನಂ–ಶಿವನನ್ನು, ಅಪ್ಪಿದಳ್–ತಬ್ಬಿಕೊಂಡಳು ; ಸಮಸ್ತಮಿಾತ್ರಿಭುವನಂ–ಈ ಮೂರು ಲೋಕಗಳೆಲ್ಲ, ಪಂಕೇಜಪತ್ರಾಂಬುವೋಲ್–ತಾವರೆ ಎಲೆಯಮೇಲಣ ನೀರಂತೆ, ನಡುಗಿತ್ತು–ಅಲ್ಲಾಡಿತು, ಎಂಬಿನಂ–ಎನ್ನುತ್ತಿರಲು, ತತ್ಸನ್ನಾಹ ಭೇರೀರವಂ–ಕೌರವರ ಯುದ್ಧ ಸಿದ್ಧತೆಯ ಆ ಭೇರೀನಾದ, ಪರ್ವಿದುದು–ಹಬ್ಬಿತು.

ವಚನ : ಮೊಱಗುವ–ಶಬ್ದಮಾಡುವ, ಗುಡುಗುವ ; ಕೇತುಗಳೊಡನೆ–ಬಾವುಟಗಳೊಡನೆ; ಉತ್ಪಾತಕೇತುಗಳ್–ಅಪಶಕುನ ಸೂಚಕವಾದ ಬೀಳ್ನಕ್ಷತ್ರಗಳು ಅಥವಾ ಧೂಮಕೇತುಗಳು; ಪೆರ್ವೆಂಡಿರ್–ವೃದ್ಧಸ್ತ್ರೀಯರು; ಸೂಸುವ ಸೇಸೆಯೊಡನೆ–ಚೆಲ್ಲುವ ಮಂತ್ರಾಕ್ಷತೆಗಳೊಡನೆ; ರುಧಿರವರ್ಷಂ–ರಕ್ತದಮಳೆ; ಅನಿಮಿತ್ತಂ–ನಿಷ್ಕಾರಣವಾಗಿ ; ನೆಗಱೆಯುಂ–ಉಂಟಾಗಲು ; ಸೆರಗಂ ಸೆರಗುಮಂ ಬಗೆಯದೆ–ಭಯವನ್ನೂ ಅಪಾಯವನ್ನು ಲೆಕ್ಕಿಸದೆ ; ನೆಱೆ ದುಕೆಯ್ಗೆಯ್ದು–ಚೆನ್ನಾಗಿ ಸಿಂಗರಿಸಿಕೊಂಡು, ಆಯೋಗಂಗೊಂಡು–ಯುಕ್ತರಾಗಿ, ಸೇರಿ, ಪಟ್ಟವರ್ಧನದ–ಪ್ರಜಾಗಜದ ; ಬೆಂಗೆ ವಾಯ್ದು–ಬೆನ್ನಿಗೆ ಹಾರಿ, ಎಂದರೆ ಬೆನ್ನಿನಮೇಲೆ ಕುಳಿತು.

೨೭. ನಯಂ ಅನಯಂ–ನೀತಿ, ಅನೀತಿ: ಎನಗೆ–ನನಗೆ, ಜಯಮಿದು–ಇದು ಜಯ, ಅಪಜಯ ಮಿದು–ಇದು ಸೋಲು, ಯಶಂ–ಕೀರ್ತಿ, ಅಯಶಂ–ಅಕೀರ್ತಿ ಎಂಬ, ಇದಂ–ಇದನ್ನು, ಬಗೆಯದೆ–ಗಣಿಸದೆ, ಕಲಹಮನೆ–ಯುದ್ಧವನ್ನೇ, ಮನ

ದೊಳ್—ಮನಸದಲ್ಲಿ, ನಿಶ್ಚಯಿಸಿ—ನಿರ್ಣಯಿಸಿ, ಭಯಮಱಿಯದ ಕಲಿ—ಭಯವೆಂಬು ದನ್ನು ತಿಳಿಯದ ಶೂರ, ಸುಯೋಧನಂ—ದುರ್ಯೋಧನನು, ಪೊಱಮಟ್ಟಂ—ಹೊರಕ್ಕೆ ಹೊರಟನು. ಪೊಱಮಡು > ಪೊಱಗು + ಮಡು.

ವಚನ: ಮಿಳಿರ್ವ ಅಲುಗಾಡುವ; ಪಾಳಿಕೇತನಂಗಳುಂ—ಪಾಲಿಧ್ವಜಗಳೂ (ವಿವರಗಳಿಗೆ ಹಿಂದೆ ನೋಡಿ); ಪಂಚಮಹಾಶಬ್ದಂಗಳುಂ—ಶೃಂಗ, ತಮ್ಮಟೆ, ಭೇರಿ, ಜಯಘಂಟೆ, ಕಹಳೆ ಎಂಬ ಐದು ವಾದ್ಯಗಳ ಧ್ವನಿಗಳೂ; ಸುತ್ತಿಱಿದು—ಸುತ್ತುಗಟ್ಟಿ; ತಳರ್ವಂತೆ—ಚರಿಸುವಹಾಗೆ;

೨೮. ಕರಿ-ಆನೆಗಳು, ಮಕರಂಗಳಂ—ದೊಡ್ಡ ಮೀನುಗಳನ್ನು; ಕರಿಘಟಾವಳಿ—ಆನೆಗಳ ಸಾಲುಗಳು, ಅಬ್ದಕುಲಂಗಳಂ—ಮೋಡಗಳ ಸಮೂಹವನ್ನು; ಹಯಸಂತತಿ—ಕುದುರೆಗಳ ಸಮೂಹ, ಭಯಂಕರತರಮಾದ—ಅತಿ ಭಯಂಕರವಾದ, ಪೆರ್ದೆರೆಗಳಂ—ದೊಡ್ಡ ಅಲೆಗಳನ್ನು; ಮತ್ಸ್ಯಕೋಟಿಯುಂ—ಕೋಟ್ಯಂತರ ಮೀನುಗಳನ್ನು, ಸ್ಫುರಿತ—ಹೊಳೆಯುವ, ನಿಶಾತ—ಹರಿತವಾದ, ಹೇತಿಯುತ—ಕತ್ತಿಗಳಿಂದ ಕೂಡಿದ, ಸದ್ಭಟ ಕೋಟಿ—ಕೋಟ್ಯಂತರ ಯೋಧರು, ಘೂರ್ಣಿತಾರ್ಣವಮಂ—ಘೂರ್ಣಿಸುವ ಸಮುದ್ರವನ್ನು, ನಿರಂತರಂ—ಯಾವಾಗಲೂ, ತಿರಸ್ಕರಿಸಿರೆ-ಕೀಳ್ಮಾಡಿಸಲು; ಚತುರ್ಬಲಾರ್ಣವಂ-ಚತುರಂಗ ಸೈನ್ಯಸಾಗರ, ಒತ್ತರಿಸಿತ್ತು—ಮುಂದೆ ತಳ್ಳಿಕೊಂಡು ಬಂತು.

೨೯. ಮದವದ್ದಂತಿ ವರೂಥವಾಜಿ ಭಟಸಂಘಾತಂಗಳ್—ಸೊಕ್ಕಾನೆ ರಥ ಕುದುರೆ ಯೋಧರ ಸಮೂಹಗಳು, ಈ ಲೆಕ್ಕವೆಂಬುದಂ—ಈ ಸಂಖ್ಯೆಯೆನ್ನುವುದನ್ನು, ಆಂ ನಿಟ್ಟಿಸಲಾಱೆಂ—ನಾನು ನೋಡಲಾರೆನು; ಒಂದನ್ ಅಱಿವೆಂ—ಒಂದನ್ನುಮಾತ್ರ ತಿಳಿಯುವೆನು; ತತ್ಸೈನ್ಯಪಾದೋತ್ಥಿತಂ—ಆ ಸೈನ್ಯದ ಕಾಲ್ತುಳಿತದಿಂದ ಮೇಲೆದ್ದ, ರಜಂ—ಧೂಳು, ಎತ್ತಂ—ಎಲ್ಲೆಲ್ಲೂ, ಪುದಿದು—ತುಂಬಿಕೊಂಡು, ಅಂಬರಸ್ಥಳಮುಮಂ—ಆಕಾಶಪ್ರದೇಶವನ್ನುಕೂಡ, ಮುಟ್ಟಿತ್ತು—ಸೋಕಿತು; ತಳ್ತುರ್ವಿ—ಸೇರಿ ಅಧಿಕವಾಗಿ, ಪರ್ವಿದೊಡೆ—ಹರಡಿದರೆ, ಆಕಾಶಗಂಗಾಜಳಂ—ದೇವಗಂಗಾನದಿಯ ನೀರು, ಮುನ್ನಿನ—ಮೊದಲಿನ, ತೆಳ್ಪುಗೆಟ್ಟು—ತಿಳಿಯಾಗಿರುವಿಕೆಯನ್ನು ಕಳೆದುಕೊಂಡು, ಕೆಸಱಾಯ್ತು—ಬಗ್ಗಡವಾಯಿತು,

೩೦. ರವಿಕಿರಣಾಳಿಗಳ್—ಸೂರ್ಯನ ಕಿರಣಗಳ ಸಾಲು, ಧ್ವಜ ಪಟಾಳಿಯ—ಬಾವುಟದ ಬಟ್ಟೆಗಳ ಸಾಲುಗಳ, ತಿಂತಿಣಿಯಿಂದಂ—ಸಮೂಹದಿಂದ, ಉರ್ಚಲಾಱವೆ—ಭೇದಿಸಲಾರವೆ; ಎಂದರೆ ಧ್ವಜಪಟಗಳನ್ನು ನುಸುಳಿಕೊಂಡು ಬರುವುದಕ್ಕೆ ಸೂರ್ಯ ಕಿರಣಗಳಿಂದ ಆಗುತ್ತಿರಲಿಲ್ಲ; ರವಿವಾಜಿಗಳ್—ಸೂರ್ಯನ ಕುದುರೆಗಳು, ನೆಗೆದ ಪಾಂಸುಗಳಿಂ—ಎದ್ದ ದೂಳಿಗಳಿಂದ, ದೆಸೆಗೆಟ್ಟು—ದಿಕ್ಕುಗಾಣದೆ, ಪೋಗಲಾಱವೆ—ಹೋಗಲಾರವೆ; ರವಿಬಿಂಬಮುಂ—ಸೂರ್ಯ ಮಂಡಲವು ಆಗ, ಎಸೆಯಲಾಱದೆ—ಹೊಳೆಯಲಾರದೆ; ಪೆಂಪಿನ ತಿಣ್ಣನಾಂತ—ಹಿರಿಮೆಯ ಭಾರವನ್ನು ಹೊಂದಿರುವ, ಕೌರವಬಳದ—ಕೌರವ ಸೈನ್ಯದ, ಅಂತು—ಕೊನೆ, ಮೇರೆ—ಎಲ್ಲೆ, ಪರ್ವ್—[illegible], ಎಂಬುದಂ—ಎನ್ನುವುದನ್ನು, ಅಱಿವಂದಂ—ತಿಳಿವರೀತಿ, ಅಪ್ಪುದೋ—ಯಾವುದೋ !

೩೦. ಮದವದ್ದಂತಿ ಮದಾಂಬುಧಾರೆಗಳ್–ಸೊಕ್ಕಾನೆಗಳ ಮದದ ನೀರಿನ ಧಾರೆಗಳು, ಅವು–ಅವು, ಅದು, ಒಂದೊಂದರೊಳ್–ಒಂದೊಂದರಲ್ಲಿ, ಕೂಡೆ–ಸೇರಲು; ಪಣ್ಣಿದ–ಮಾಡಿದ ಎಂದರೆ ಅಲಂಕಾರಮಾಡಿದ, ಸಜ್ಜುಮಾಡಿದ; ಜಾತ್ಯಶ್ವ ರಥಾಶ್ವ ಸಂಕುಳ ಖಲೀನೋದ್ಭೂತಲಾಲಾಜಲಂ–ಜಾತಿ ಕುದುರೆ, ರಥ ಕುದುರೆಗಳ ಸಮೂಹದ ಕಡಿವಾಣದಿಂದ ಉಂಟಾದ ಜೊಲ್ಲು ನೀರು, ಕದಡಿಟ್ಟು–ಕದಡಿದ್ದು; ಕಲಕಿ, ಬಗ್ಗಡವಾಗಿ, ಎತ್ತಂ–ಎಲ್ಲೆಲ್ಲೂ, ಅವುಂಕೆ–ಒತ್ತರಿಸಲು, ಪರಭಾಗಂ ಬೆತ್ತು–ಸೊಗಸನ್ನು ಹೊಂದಿ, ಕೌರವಧ್ವಜಿನಿಯೊಳ್–ಕೌರವನ ಸೈನ್ಯದಲ್ಲಿ, ಕಾಳಿಂದಿಯುಂ ಗಂಗೆಯುಂ–ಯಮುನೆಯೂ ಗಂಗೆಯೂ, ಲೋಕಕ್ಕೆ–ಜನಕ್ಕೆ, ಸನ್ನಿದಮಾಗಿರ್ದುವು–ಸಮೀಪವಾಗಿದ್ದುವು.



ವಚನ: ಕರ್ಣತಾಳಾಹತಿಯಿಂ – ಕಿವಿಗಳ ಬೀಸುವಿಕೆಯ ಏಟಿನಿಂದ; ಜೀಱಿಟ್ಟು – ಜೀರೆಂದು ಶಬ್ದಮಾಡುತ್ತ ಎದ್ದು; ಪಾಱೀಱೆಯುಂ – ಹಾರಿ ಮೇಲಕ್ಕೇರಲೂ, ನಿಚ್ಚಪಯಣದಿಂ–ನಿತ್ಯಪ್ರಯಾಣದಿಂದ; ಪ್ರಳಯಂ–ಪ್ರಳಯ ಕಾಲವು, ಮುಱಿವಿಟ್ಟಂತೆ–ಗುಂಪಾದಂತೆ; ಬೀಡುಬಿಟ್ಟು–ಪಾಳಯವನ್ನು ಬಿಟ್ಟು.

೩೧. ಉಳ್ಳಕೈದುಗಳಂ–ಇರುವ ಆಯುಧಗಳನ್ನು, ಮಸೆಯಿಸುಗೆ–ಉಜ್ಜಿ ಹರಿತ ಗೊಳಿಸಲಿ; ಆನೆಗಳಂ–ಆನೆಗಳನ್ನು, ಅರ್ಚಿಸುಗೆ–ಪೂಜಿಸಲಿ, ವಿಶುದ್ಧವಾಜಿಗಳಂ–ನಿರ್ಮಲವಾದ ಕುದುರೆಗಳನ್ನು, ತಗುಳ್ದು ಪೂಜಿಸುಗೆ–ಅನುಸರಿಸಿ ಪೂಜಿಸಲಿ; ಆಜಿಗೆ–ಕಾಳಗಕ್ಕೆ, ಜೆಟ್ಟಿಗರಾಗಿ–ಮಲ್ಲರಾಗಿ, ಕೊಳ್ಳಿವೀಸಿಸುಗೆ–ಕೊಳ್ಳಿಯನ್ನು ಬೀಸಿಸಲಿ (ಯುದ್ಧ ಆರಂಭವಾಗಲೆಂಬುದನ್ನು ಕೊಳ್ಳಿಯನ್ನು ಬೀಸಿ ತೋರಿಸುವುದು ವಾಡಿಕೆ); ನಿರಂತರಂ–ಸಂತತವಾಗಿ, ರವಳಿ–ಸಾಮೂಹಿಕ ಶಬ್ದವು, ಘೋಷಿಸುಗೆ–ಕೂಗಲಿ; ಇಂದೆ–ಇವತ್ತೆ, ಕಡಂಗಿ–ಉತ್ಸಾಹಿಸಿ, ಸಾರ್ಚಿ–ಸಮೀಪಕ್ಕೆ ಬಂದು, ಬಿಟ್ಟು–ಪಾಳಯವನ್ನು ಬಿಟ್ಟು, ಉಸಿರದೆ ನಿಲ್ಪ–ಮಾತಾಡದೆ ನಿಲ್ಲುವ, ಸುಮ್ಮನಿರುವ, ಕಾರಣಂ ಅದಾವುದೊ–ಕಾರಣವು ಅದು ಏನೋ! ನೆಟ್ಟನೆ–ನೇರವಾಗಿ, ನಾಳೆ–ನಾಳೆ ದಿನವೇ, ಕಾಳಗಂ–ಯುದ್ಧ, ರವಳಿ=(ತೆ)ರವಲಿ, ರವಳಿ–ಶಬ್ದ, ಗದ್ದಲ ಎಂಬರ್ಥ; (ತೆ)ರವಳಿಂಚು ಎಂಬ ಕ್ರಿಯಾರೂಪವೂ ಇದೆ; ರೌತುಲಾ ರವಳಿತೋ–ರಾವುತರ ರವಳಿಯಿಂದ ಎಂಬ ಪ್ರಯೋಗವೂ ಇದೆ. ಸ್ವಲ್ಪ ದೂರಕ್ಕೆ ಕೇಳಿಬರುವ ಸಂತೆಯ ಶಬ್ದ.

೩೨ ಪಗೆಮಸೆದಂದೆ–ಹಗೆತನವನ್ನು ಮಸೆದ ದಿನವೇ, ಕೈದು–ಆಯುಧಗಳು, ಮಸೆದು ಇರ್ದುವು–ಸಾಣೆ ಹಿಡಿಯಲ್ಪಟ್ಟಿವೆ; ಪೂಜಿಸುವ–ಪೂಜೆಮಾಡುವ. ಅಂಕದಾನೆ ವಾಜಿಗಳ್–ಯುದ್ಧದ ಆನೆಕುದುರೆಗಳು, ಎಮಗಿಲ್ಲ–ನಮಗಿಲ್ಲ; ಜೆಟ್ಟಿಗರೆ–ಪೈಲ್ವಾನರೆ, ಎನ್ನೊಡವುಟ್ಟಿದರ್–ನನ್ನ ಸಹೋದರರು, ನಾಲ್ಕುಮಾನೆಗಳ್–ನಾಲ್ಕು ಆನೆಗಳು; ಅಲ್ತೆ–ಅಲ್ಲವೆ? ಇವನ್–ಇವುಗಳನ್ನು, ಆಂ=ನಾನು, ದಲ್–ದಿಟವಾಗಿಯೂ, ಈ ರಣದೊಳ್–ಈ ಯುದ್ಧದಲ್ಲಿ, ಅರ್ಚಿಸಿ–ಪೂಜಿಸಿ, ಬಿಟ್ಟಪೆನ್–ಛೂ ಬಿಡುತ್ತೇನೆ; ಏಕೆ ಮಾಣ್ಬೆನ್–ಏಕೆ ನಿಲ್ಲುವೆನು, ತಡಮಾಡುವೆನು; ಇದನ್–ಈ ಮಾತನ್ನು,

ಆವಗಂ–ಪೂರ್ಣವಾಗಿ, ಇಂತೆ–ಹೀಗೆಯೇ, ನೆಜಿಯೆ–ಪ್ರೀತಿ, ಪೇಟ್–ಹೇಳು; ನಾಳೆಯೆ ಕಾಳೆಗಂ–ನಾಳೆಯೇ ಯುದ್ಧ; ಅಂತೆಗೆಯ್ವೆಂ ಅಂ–ನಾವು ಹಾಗೆಯೇ ಮಾಡುತ್ತೇವೆ.

**ವಚನ:** ಪುಂಡರೀಕಾಕ್ಷಂಗೆ–ಕೃಷ್ಣನಿಗೆ; ಬೞಿಯನಟ್ಟಿ ಬರಿಸಿ–ದೂತನನ್ನು ಕಳಿಸಿ ಬರಮಾಡಿಕೊಂಡು; ಪಡೆಯೊಳ್–ಸೈನ್ಯದಲ್ಲಿ; ಕಟ್ಟುವಂ–ಕಟ್ಟೋಣ;

**೩೪.** ವಿರಾಟನ ಹಿರಿಯಮಗ ಶ್ವೇತನಿಗೆ ವೀರಪಟ್ಟ–ಮಾತುಂಗಾಸುರವೈರಿಯಲ್ಲಿ–ಈಶ್ವರನಲ್ಲಿ, ಬಿಲ್ಲಂ–ಬಿಲ್ಲನ್ನು, ಪಡೆದಂ–ಪಡೆದನು; ಧನುರ್ವಿದ್ಯೆಗೆ–ಬಿಲ್ವಿದ್ಯೆಯಲ್ಲಿ, ಅಂತು–ಹಾಗೆ, ಆತಂಗೆ–ಅವನಿಗೆ, ಅಗ್ಗಳಂ–ಮಿಗಿಲಾದವನು, ಆರುಂ ಇಲ್ಲ–ಯಾರೂ ಇಲ್ಲ, ಅದಜಿಂ–ಆದುದರಿಂದ, ಆ ಶ್ವೇತಂಗಂ–ಆ ಶ್ವೇತನಿಗೂ, ಅಂತಾ ನದೀಜಾತಂಗಂ–ಹಾಗೆ ಆ ಭೀಷ್ಮನಿಗೂ, ಯುದ್ಧಂ–ಕಾಳಗವು, ದೊರೆ–ಸಮಾನ, ಸಾಟಿ; ಎಂದಱಿದು–ಎಂದು ತಿಳಿದು, ಭೂಲೋಕ ವಿಖ್ಯಾತಂಗೆ–ಭೂಮಿಯಲ್ಲಿ ಪ್ರಸಿದ್ಧನಾದ, ತಚ್ಛ್ವೇತಂಗೆ–ಆ ಶ್ವೇತನಿಗೆ, ಉದಾರಂ ಧರ್ಮಜಂ–ಉದಾರಿಯಾದ ಧರ್ಮರಾಜನು, ಅಗ್ಗಳ ವೀರ ಪಟ್ಟಮಂ–ಶ್ರೇಷ್ಠವಾದ ಸೇನಾನಾಯಕ ಪಟ್ಟವನ್ನು, ಕಟ್ಟಿದಂ–ಹಣೆಗೆ ಕಟ್ಟಿದನು.

**ವಚನ:** ಪಡೆವಳರ್–ಪಡೆಯಪಾಲಕರು; ಸಾಱಿಂ–ಸಾರಿ ಹೇಳಿರಿ;

**೩೫.** ಸೂರ್ಯನು ಮುಳುಗುವುದು: ಪಗೆ ಸುಗಿವನ್ನೆಗಂ–ಹಗೆಯು ಹೆದರುತ್ತಿರಲು, ಮಸೆವ–ಮಸೆಯುತ್ತಿರುವ, ವೀರಭಟರ್ಕಳ್–ಶೂರಯೋಧರ, ರೌದ್ರಮಪ್ಪ ಕೆಯ್ದುಗಳಿಂ–ಭಯಂಕರವಾದ ಆಯುಧಗಳಿಂದ; ಅಗುರ್ವಿನ–ಭಯದ, ಅದ್ಭುತದಿಂ–ಆಶ್ಚರ್ಯದಿಂದ, ಉರ್ವಿದ–ಉಬ್ಬಿದ, ಕೆಂಗಿಡಿಗಳ್–ಕೆಂಪಾದ ಕಿಡಿಗಳು, ಪಳಂಚಿ–ಸಂಘಟ್ಟಿಸಿ, ತೊಟ್ಟಗೆ–ಬೇಗನೆ, ಕೊಳೆ–ಹಿಡಿಯಲು, ಪಾಯ್ದುವೋಲ್–ನುಗ್ಗಿದಂತೆ, ಪೊಳೆವ–ಹೊಳೆಯುತ್ತಿರುವ, ಸಂಜೆಯ ಕೆಂಪದು–ಆ ಸಂಜೆಯ ಕೆಂಬಣ್ಣ, ಸಾಣೆಗೊಡ್ಡಿದ–ಸಾಣೆಗೆ ಚಾಚಿದ, ಇಟ್ಟಗೆಯ ರಜಂಬೊಲ್–ಇಟ್ಟಿಗೆಯ ಕೆಂಧೂಳಿಯಂತೆ, ಎಂಬಿನೆಗಂ–ಎನ್ನುತ್ತಿರಲು, ದಿವಾಕರಂ–ಸೂರ್ಯ, ಅಸ್ತಮಯಕ್ಕಿೞಿದಂ–ಅಸ್ತಮಾನಕ್ಕಿಳಿದನು, ಎಂದರೆ ಮುಳುಗಿದನು.

**ವಚನ:** ಚಾತುರ್ಯಾಮಾವಸಾನ–ನಾಲ್ಕು ಜಾವಗಳ ಅಂತ್ಯದಲ್ಲಿ; ಸಮುದಿತ–ಹುಟ್ಟಿದ; ರವಳಿ ಘೋಷಿಸಿ–ಸಾಮೂಹಿಕ ಶಬ್ದವನ್ನು ಮಾಡಿ, ಕೊಳ್ಳಿ ವೀಸಿದಾಗಳ್–ಕೊಳ್ಳಿಯನ್ನು ಬೀಸಿದಾಗ (ರಾತ್ರಿ ಹೊತ್ತಿನಲ್ಲಿ).

**೩೬.** ಕೊಳ್ಳಿಯನ್ನು ಬೀಸಿದುದರ ಪರಿಣಾಮ: ಅಂಬರಂ–ಆಕಾಶವು, ಉರಿ ಮುಟ್ಟಿದ ಅರಳೆಯಂತೆ–ಉರಿಸೋಕಿದ ಹತ್ತಿಯಂತೆ, ಉರಿದತ್ತು–ಉರಿಯಿತು; ಅಜನ ಪದ್ಮವಿಷ್ಟರದ ಎಸಟಿರ್–ಬ್ರಹ್ಮನ ಪದ್ಮ ಪೀಠದ ಎಸಳು, ಅಂದು–ಆಗ, ಆರೆ ಸೀದುವು–ಅರ್ಧಸುಟ್ಟುವು; ಅಖಿಳದಿಗ್ದ್ವಿರದರದಂಗಳ್–ಎಲ್ಲ ದಿಕ್ಕಿನ ಆನೆಗಳ ದಂತಗಳು, ಕರಮೆ–ವಿಶೇಷವಾಗಿ, ಆಗಳ್–ಆಗ, ಕರಿಪುಗಾಱಿದುವು–ಕಪ್ಪನ್ನು ಕಕ್ಕಿದುವು ಎಂದರೆ ಕರಿಬಣ್ಣದವಾದುವು.

ವಚನ: ಕೊಳ್ಳಿವೀಸಿದಿಂಬಳಿಯಿಂ–ಕೊಳ್ಳಿಯನ್ನು ಬೀಸಿ ಆದಮೇಲೆ, ಅನಂತರದಲ್ಲಿ.

೩೭. ಧೃತಧವಳ ವಸನರ್–ಧರಿಸಿದ ಬಿಳಿವಸ್ತ್ರವನ್ನುಳ್ಳವರು, ಆರಾಧಿತ ಶಿವರ್–ಪೂಜಿಸಲ್ಪಟ್ಟ ಶಿವನನ್ನುಳ್ಳವರು, ಅರ್ಚಿತ ಸಮಸ್ತ ಶಸ್ತ್ರರ್–ಪೂಜಿಸಲ್ಪಟ್ಟ ಸರ್ವಾಯುಧಗಳನ್ನುಳ್ಳವರು, ನೀರಾಜಿತ ತುರಗರ್–ಆರತಿ ಎತ್ತಲ್ಪಟ್ಟ ಕುದುರೆಗಳನ್ನುಳ್ಳವರು, ಕೆಲರ್–ಕೆಲವರು, ಅತಿರಥ, ಸಮರಥ, ಮಹಾರಥ, ಅರ್ಧರಥರ್ಕಳ್–ಅತಿರಥ, ಸಮರಥ, ಮಹಾರಥ, ಅರ್ಧರಥಿಕರೆಂಬವರು, ಒಪ್ಪಿದರ್–ಶೋಭಿಸಿದರು.

೩೮. ಉಡಲುಂ ತುಡಲುಂ–ಉಟ್ಟುಕೊಳ್ಳುವುದಕ್ಕೂ, ತೊಟ್ಟುಕೊಳ್ಳುವುದಕ್ಕೂ, ವಸ್ತ್ರಂ–ವಸ್ತ್ರವನ್ನು, ತುಡುಗೆಯುಂ–ಒಡವೆಗಳನ್ನು; ಆನೆಯುಮಂ–ಆನೆಯನ್ನೂ, ಅರ್ಥಿಸಂತತಿಗೆ–ಯಾಚಕರಸಮೂಹಕ್ಕೆ, ಈಯಲ್–ಕೊಡಲು; ಬಿಡುವೊನ್ನುಮಂ–ಬಿಡಿಬಿಡಿಯಾದ ಹೊನ್ನು(ನಾಣ್ಯ)ಗಳನ್ನೂ, ಆಳ್ಗೆ–ಮನುಷ್ಯನಿಗೆ, ಅಟ್ಟುವ–ಕಳಿಸಿಕೊಡುವ, ತೊಡರೊಳ್–ತೊಡಕಿನಲ್ಲಿ, ಸಿಕ್ಕಿನಲ್ಲಿ, ಕೆಲಬರ್–ಕೆಲವರು, ಅರಸು ಮಕ್ಕಳ್–ರಾಜಪುತ್ರರು, ತೊಡರ್ದಿರ್ದರ್–ಸಿಕ್ಕಿಬಿದ್ದಿದ್ದರು.

ವಚನ: ಪ್ರಸ್ತಾವ–ಸಮಯ; ದೋರ್ವಲದ–ಬಾಹುಬಲದ; ಅಗುರ್ವಿನೊಳ್–ಭೀಕರತೆಯುಲ್ಲಿ, ಆಧಿಕ್ಯದಲ್ಲಿ; ಉರ್ವೀಪತಿಯಂ–ರಾಜನನ್ನು.

೩೯. ಇಲ್ಲಿಂದ ೪೯ ಪೂರ್ತಿ ಸೈನಿಕರ ವೀರಾಲಾಪಗಳು ಉಕ್ತವಾಗಿವೆ:– ವಿರೋಧಿಸಾಧನ ಘಟಾಘಟಿತಾಹವದಲ್ಲಿ–ಶತ್ರು ಸೈನ್ಯದ ಆನೆಗಳಿಂದುಂಟಾಗುವ ಯುದ್ಧದಲ್ಲಿ, ನಾಳೆ, ನಿನ್ನ ಕಟ್ಟಾಳಿರೆ–ಶೂರರಿರಲು, ಮುಂಚಿ ತಾಗದೊಡಂ–ಎಲ್ಲರಿಗಿಂತ ಮುಂಚಿತವಾಗಿಯೇ ಮೇಲೆ ನುಗ್ಗದಿದ್ದರೂ, ಅಳ್ಕುಱಿತಾಗಿ–ಭಯವಾಗುವಂತೆ ಎದುರಿಸಿ, ವಿರೋಧಿಸೈನ್ಯ ಭೂಪಾಳರಂ–ಶತ್ರುಸೈನ್ಯದ ರಾಜರನ್ನು, ಒಂದೆ ಪೊಯ್ಯದೊಡಂ–ಒಟ್ಟಿಗೆ ಹೊಡೆಯದಿದ್ದರೂ, ಈ ತಲೆ ಪೋದೊಡಂ–ಈ ತಲೆ ಹೋದರೂ, ಆಟ್ಟಿ–ಮುಂದಿಟ್ಟು, ಕಟ್ಟಾಳನೆ–ಶೂರರನ್ನೇ, ಆಟ್ಟಿ, ಮುಟ್ಟಿ–ಬೆನ್ನಟ್ಟಿ ಸೋಕಿ, ತಳ್ತಿಱಿಯದಿರ್ದೊಡಂ–ಸೇರಿ ಯುದ್ಧ ಮಾಡದಿದ್ದರೂ, ಮಹೀಪತೀ–ರಾಜನೇ, ಆಂ–ನಾನು, ಅಂಜಿದೆನ್–ಅಂಜಿದವನಾಗುತ್ತೇನೆ.

ವಚನ: ಮನದ ಪೊಡರ್ಪುಮಂ–ಮನಸ್ಸಿನ ಸ್ಫುರಣೆಯನ್ನು ಎಂದರೆ ಚೈತನ್ಯವನ್ನು, ಕೂರ್ಪುಮಂ–ತೀಕ್ಷ್ಣತೆಯನ್ನು, ತನ್ನನಾಳ್ದಂ–ತನ್ನ ಸ್ವಾಮಿ, ಪ್ರಭು; ಕರಂಪೆಂಪೆರ್ಚೆ–ವಿಶೇಷವಾಗಿ ಪೆಂಪುಉಬ್ಬಿ;

೪೦. ಒದವಿದ–ಉಂಟಾದ, ನಿನ್ನದೊಂದು ದಯೆ–ನಿನ್ನ ಒಂದು ದಯೆಯು, ಪಿರಿದೋ–ದೊಡ್ಡದೋ, ಮೇಣ್–ಅಥವಾ, ನೆಗಟ್ದ–ಪ್ರಸಿದ್ಧವಾದ, ಎನ್ನ ಗಂಡುಂ–ನನ್ನ ಪೌರುಷವೂ, ಆದದಟುಂ–ಉಂಟಾದ ಶೌರ್ಯವೂ, ಅಳುರ್ಕೆಯುಂ–ವ್ಯಾಪ್ತಿಯೂ, ಪಿರಿದೊ–ದೊಡ್ಡದೋ, ಸಂದೆಯಮಾದಪುದು–(ನನಗೆ) ಸಂದೇಹವಾಗುತ್ತಿದೆ, ಇಂತಿದು–ಹೀಗೆ ಇದು, ಇಲ್ಲಿ ತೂಗಿದೊಡೆ–ಇಲ್ಲಿ ತೂಕಮಾಡಿದರೆ,

ಅಱಿಯಲ್ಕೆ ಬಾರದು–ತಿಳಿಯುವುದಕ್ಕಾಗುವುದಿಲ್ಲ; ಅದು ಕಾರಣದಿಂ–ಆ ಕಾರಣ ದಿಂದ, ರಿಪುಭೂಪ ದಂತಿದಂತದ–ಶತ್ರುರಾಜರ ಆನೆಗಳ ದಂತವೆಂಬ, ತೊಲೆಯೊಳ್– ತಕ್ಕಡಿಯಲ್ಲಿ, ಭೂಪತಿ–ರಾಜನೇ, ಪರಾಕ್ರಮದಿಂ–ಪ್ರತಾಪದಿಂದ, ಎನ್ನನೆ–ನನ್ನನ್ನೇ, ತೂಗಿ–ತೂಕಮಾಡಿ, ತೋಱಿನೇ–ತೋರಿಸೆನೇ? ಎಂದರೆ ತೋರಿಸುತ್ತೇನೆ ಎಂದು ತಾತ್ಪರ್ಯ.

**ವಚನ:** ಸೆರಗುಂಬೆರಗುಮಿಲ್ಲದ– ಭಯವೂ ಅಪಾಯವೂ ಇಲ್ಲದ; ಕಲಿತನಮಂ–ಶೌರ್ಯವನ್ನು; ಉದಾರವೀರರಸ ರಸಿಕನಾಗಿ–ವಿಶಾಲವಾದ ವೀರರಸದಲ್ಲಿ ಆಸಕ್ತನಾಗಿ;

೪೧. ಕುದುರೆಯಂ–ಕುದುರೆಯನ್ನು, ಏಱಿದಂ ಬೆರಸು–ಹತ್ತಿದ ಸವಾರನ ಸಮೇತವಾಗಿ, ಸೌಳೆನೆಪೋಗಿರೆ – ಸಿಳ್ ಎಂದು (ಕತ್ತರಿಸಿ) ಹೋಗುವ ಹಾಗೆ, ಪೊಯ್ದು–ಹೊಡೆದೂ; ಎಯ್ದೆ – ಚೆನ್ನಾಗಿ, ಕಟ್ಟಿದಿರೊಳೆ – ಎದುರುಗಡೆಯಲ್ಲೇ, ನೂಂಕಿದಾನೆಗಳ–ನುಗ್ಗಿಬಂದ ಆನೆಗಳ, ಕೋಡುಗಳಂ–ಕೊಂಬುಗಳನ್ನು, ಬಳೆವೋಗೆ– ಬಳೆಗಳು ಎಂದರೆ ಆಣಸುಗಳು ಬಿದ್ದು ಹೋಗುವಂತೆ, ಪೊಯ್ದುಂ–ಹೊಡೆದೂ, ಆಂತ ಅದಟರಂ–ಇದಿರಾದ ಶೂರರನ್ನು, ಒಂದೆಪೊಯ್ದುಂ–ಒಟ್ಟಿಗೇ ಹೊಡೆದೂ, ಎರಡುಂಬಲಂ–ಎರಡು ಕಡೆಯ ಸೈನ್ಯಗಳೂ, ಎನ್ನನೆ ನೋಡೆ–ನನ್ನನ್ನೇ ನೋಡಲು, ತಕ್ಕಿನ–ಯೋಗ್ಯತೆಯನ್ನುಳ್ಳ, ಎನ್ನದಟುಮಂ–ನನ್ನ ಶೌರ್ಯವನ್ನೂ, ಎನ್ನ ವೀರ ಮುಮಂ–ನನ್ನ ಪ್ರತಾಪವನ್ನೂ, ಆಜಿಯೊಳ್–ಯುದ್ಧದಲ್ಲಿ, ಎನ್ನರಸಂಗೆ–ನನ್ನ ರಾಜನಿಗೆ, ತೋಱುವೆಂ–ತೋರಿಸುತ್ತೇನೆ.

**ವಚನ:** ಅತಿರಭಸ ರಣ ವ್ಯಸನಮುಂ–ಅತಿ ವೇಗದಿಂದ ಕೂಡಿದ ಯುದ್ಧಾಸಕ್ತಿ ಯನ್ನು; ಆತ್ಮೀಯ–ತನ್ನ; ಶಾಸನಾಯತ್ತಂ–ಅಧೀನವನ್ನಾಗಿ, ಮಂಡಳಾಗ್ರಮಂ– ಕತ್ತಿಯನ್ನು; ಅನುಗೆಯ್ದು–ಸಿದ್ಧಮಾಡಿಕೊಂಡು; ವೀರಗ್ರಹಗ್ರಸ್ತನಾಗಿ–ಶೌರ್ಯವೆಂಬ ಗ್ರಹದಿಂದ ಹಿಡಿಯಲ್ಪಟ್ಟವನಾಗಿ.

೪೨. ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ– ಸಿಡಿಲಿನಲ್ಲಿಯೇ ಸೇರಿ ಹೋರಾಡುವ ಸಿಡಿಲಿನಂತೆ, ಬಾಳ್‌ಬಾಳೊಳೆ ಪಳಂಚಿ–ಕತ್ತಿ ಕತ್ತಿಯಲ್ಲಿ ತಾಗಿ, ಮಾರ್ಕಿಡಿವಿಡೆ–ಎದುರು ಕಿಡಿಗಳನ್ನು ಸೂಸುತ್ತಿರಲು, ದೆಸೆದೇವತೆಗಳ್ – ದಿಗ್ದೇವತೆ ಗಳು, ನೋಡಲಂಜಿ–ನೋಡಲು ಹೆದರಿ, ಪೆಜಪಿಂಗೆ–ಹಿಂಜರಿಯುತ್ತಿರಲು, ತೋಳ ತೀನ್ ಕಿಡೆ–ತೋಳಿನ ತೀಟೆ ಹೋಗಲು, ನಲಿದು–ಸಂತೋಷಿಸಿ, ಒಂದೆರಡುಕುದುರೆ ಯಟ್ಟೆಯುಂ–ಒಂದೆರಡು ಕುದುರೆಗಳ ಅಟ್ಟೆಗಳೂ, ಒಂದೆರಡಾನೆಯಟ್ಟೆಯುಂ– ಒಂದೆರಡು ಆನೆಗಳ ಮುಂಡಗಳೂ, ತೊಡರ್ದು–ಕತ್ತಿಗೆ ಸಿಕ್ಕಿಕೊಂಡು, ಒಡನೆ ಆಡೆ – ಕತ್ತಿಯೊಡನೆ ಕುಣಿಯಲು. ತಳ್ತಿಱಿಯದಿರ್ದೊಡೆ – ಇದಿರಾಗಿ ಯುದ್ಧ ಮಾಡದಿದ್ದರೆ, ಜೋಳಮಂ – ಅನ್ನದ ಹಂಗನ್ನು, ಎಂತು – ಹೇಗೆ, ನೀಗುವೆಂ– ಕಳೆಯುವೆನೊ?

೪೩. ಸುರಲೋಕಂ – ದೇವಲೋಕವು, ಸ್ವರ್ಗವು; ದೊರೆಕೊಳ್ವುದು – ಸಿಕ್ಕುವುದು, ಲಭ್ಯವಾಗುವುದು, ಒಂದು; ಪರಮ ಶ್ರೀ ಲಕ್ಷ್ಮಿಯುಂ-ಉತ್ಕೃಷ್ಟವಾದ ಐಶ್ವರ್ಯವು, ಬರ್ಪುದು-ಬರುವುದು; ಆದರದಿಂ-ಪ್ರೀತಿಯಿಂದ, ದೇವನಿಕಾಯದೊಳ್ – ದೇವತೆಗಳ ಸಮೂಹದಲ್ಲಿ, ನೆರೆವುದು – ಕೂಡುವುದು, ಒಂದು; ಉತ್ಸಾಹಮುಂ – ಉತ್ಸಾಹವೂ, ತನ್ನ ಮೆಯ್ಸಿರಿ – ತನ್ನ ದೇಹಕಾಂತಿಯೂ, ಭಾಗ್ಯವೂ, ನೆರವಪ್ಪುದು-ಸಹಾಯವಾಗುವುದು, ಒಂದೆ ರಣದೊಳ್ – ಒಂದೇ ಯುದ್ಧದಲ್ಲಿ; ಆಜಿಯಂ ಗೆಲ್ದು-ಯುದ್ಧದಲ್ಲಿ ಗೆದ್ದು, ಸಂಗರದೊಳ್-ಕಾಳಗದಲ್ಲಿ, ತಳ್ತು-ಸೇರಿ, ಜೋಳದ ಪಾೞಿಯುಂ-ಅನ್ನದ ಧರ್ಮವನ್ನು, ಹಂಗನ್ನು; ನೆರಪಿದಂ-ಕೂಡಿಸಿದವನು, ಗಂಡಂ-ಶೂರನು: ಪೆಱಂ-ಬೇರೆಯವನು, ಗಂಡನೇ-ಶೂರನೇ? ಅಲ್ಲ.

೪೪. ಮಾಱಾಂತಬಲಂ-ಪ್ರತಿಭಟಿಸಿದ ಸೈನ್ಯವು, ತವೆ-ನಾಶವಾಗುವಂತೆ, ಕಱುತ್ತು-ಕೋಪಿಸಿ, ಇಱಿದು-ಹೊಡೆದು, ತನ್ನಾಳ್ದಂ-ತನ್ನ ಪ್ರಭು, ಕರಂಮೆಚ್ಚೆ-ಅಧಿಕವಾಗಿ ಮೆಚ್ಚಲು, ಗೆಲ್ದವನಂ – ಗೆದ್ದವನನ್ನು, ಶ್ರೀವಧು – ಶ್ರೀವನಿತೆಯು, ಪತ್ತುಗುಂ-ಸೇರುತ್ತದೆ; ಮಡಿದನಂ – ಸತ್ತವನನ್ನು, ದೇವಾಂಗನಾನೀಕಂ – ದೇವಸ್ತ್ರೀಯರ ಸಮೂಹವು, ಉತ್ಸವದಿಂದೆ – ಒಸಗೆಯಿಂದ, ಉಯ್ಯುಗುಂ – ಸ್ವರ್ಗಕ್ಕೆ ಒಯ್ಯುತ್ತದೆ; ಎಂತುಂ-ಹೇಗೂ, ಸುಭಟಂಗೆ-ಒಳ್ಳೆಯ ಶೂರನಿಗೆ, ಇಂಬು-ಸುಖ ಸಂತೋಷ; ಇಂತಪ್ಪುದಂ ಕಂಡುಂ-ಹೀಗಾಗುವುದನ್ನು ತಿಳಿದೂ, ಅಂಜುವಂ-ಹೆದರುವವನು, ಏಕಂಜುವಂ-ಏಕೆ ಹೆದರುವನು? ಎಂದು-ಎಂಬುದಾಗಿ, ಪೆರ್ಚಿ-ಉಬ್ಬಿ, ಮತ್ತೊರ್ವಂ – ಬೇರೊಬ್ಬನು, ಆಸ್ಥಾನದೊಳ್ – ಸಭೆಯಲ್ಲಿ, ನುಡಿದಂ-ಹೇಳಿದನು. ಇಂಬು=(ತ) ಇಂಬಂ-ಸಂತೋಷ, ಸುಖ.

ವಚನ: ದರ್ಭಶಯನಂ ಮಾಡಿ – ದರ್ಭೆಯ ಮೇಲೆ ಮಲಗಿಕೊಂಡು; ಪಲ್ಲಂ ಸುಲಿದು – ಹಲ್ಲನ್ನು ಉಜ್ಜಿ; ಪರಿಚ್ಛೇದಿಸಿರ್ದರ್ – ನಿಶ್ಚಯಿಸಿದ್ದರು; ಈ ಪೊೞ್ತೆಪೊೞ್ತು-ಈ ಹೊತ್ತೇ ಹೊತ್ತು; ನಿನಗೆ ಅಱಿವುಂಟೆ – ನಿನಗೆ ತಿಳಿವು ಇದೆಯೆ? ಓಲೆವಾಗ್ಯಂ-ಓಲೆಯ ಭಾಗ್ಯವು; ಪರಿಚ್ಛೇದಮುಂ-ನಿಶ್ಚಯವನ್ನು;

೪೫. ತಾಂಗಡ-ತಾನಲ್ಲವೇ, ನಾಳೆ ಪೋಗಿ-ನಾಳೆ ಹೋಗಿ, ದಿವಿಜಾಂಗನೆಯೊಳ್ – ದೇವಸ್ತ್ರೀಯಲ್ಲಿ, ತೊಡರ್ದು ಇರ್ಪಂ – ಕೂಡಿ ಇರುವನು; ಇಲ್ಲಿ, ಮಾಣ್ದು-ನಿಂತು, ಆಂ-ನಾನು, ಇರ್ಪೆನೆ ಗಡಂ-ಇರುತ್ತೇನಲ್ಲವೆ; ಅಂತು-ಅನಿತು ಬೆಳ್ಳನೆ-ಹಾಗೆ ಅಷ್ಟು ದಡ್ಡಳೆ ನಾನು; ಮುನ್ನಮೆ-ಮೊದಲೇ, ಪೋಗಿ-ಸ್ವರ್ಗಕ್ಕೆ ಹೋಗಿ, ದೇವಲೋಕದೊಳ್ – ಸ್ವರ್ಗದಲ್ಲಿ, ಅಧೀಶನಂ – ನನ್ನ ಸ್ವಾಮಿಯನ್ನು, ಆಂ-ನಾನು, ಇದಿರ್ಗೊಳ್ವೆಂ-ಎದುರ್ಗೊಳ್ಳುತ್ತೇನೆ; ಓವೊ-ಓಓ, ಸಗ್ಗಂಗಳೊಳಿರ್ಪ-ಸ್ವರ್ಗಗಳಲ್ಲಿರುವ, ದೇವಡಿತಿ – ದೇವಸ್ತ್ರೀಯರ, ತೊೞ್ತಿರೊಳ್ – ದಾಸಿಯರಲ್ಲಿ, ಅೞ್ತಿಯಂ-ಪ್ರೀತಿಯನ್ನು, ಆಗಲೀವೆನೇ-ಆಗಲು ಅವಕಾಶಕೊಡುತ್ತೇನೆಯೇ?

**ವಚನ :** ಕೈದವಮಿಲ್ಲದ – ಕಪಟವಿಲ್ಲದ, ನಲ್ಮೆಯಂ – ಪ್ರೇಮವನ್ನು ; ತನ್ನಾಣ್ಮನ–ತನ್ನ ಗಂಡನ; ದೋರ್ವಲದಗುರ್ವಂ–ಭುಜಭಲದ ಆಧಿಕ್ಯವನ್ನು (ಭಯವನ್ನು) ; ನಚ್ಚಿ–ನಂಬಿ.

**೪೬.** ಜಲಧಿಯೊಳಾದ–ಸಮುದ್ರದಲ್ಲಿ ಹುಟ್ಟಿದ, ಮುತ್ತುಗಳ್–ಮುತ್ತುಗಳು, ಅವೇಂ–ಅವೇನು, ಪೊಸತಾದುವೆ–ಹೊಸದಾದುವೆ ? ಅಲ್ಲ ; ನಿನ್ನ ತೋಳ ಬಾಳೊಳೆ–ನಿನ್ನ ತೋಳಿನ ಕತ್ತಿಯಲ್ಲೇ, ಬಲಗರ್ವದಿಂ–ಶಕ್ತಿಯ ಹೆಮ್ಮೆಯಿಂದ, ತೆಗೆದ–ಎತ್ತಿಕೊಂಡ. ಉದಗ್ರ ವಿರೋಧಿ ಮದೇಭ ಮಸ್ತಕ ಸ್ಥಳ ಜಳ ರಾಶಿಯೊಳ್–ಶ್ರೇಷ್ಠರಾದ ಶತ್ರುಗಳ ಆನೆಗಳ ಕುಂಭಸ್ಥಳವೆಂಬ ಸಮುದ್ರದಲ್ಲಿ, ಬಳೆದ–ಬೆಳೆದಿರುವ ; ನಿರ್ಮಳ–ಶುದ್ಧವಾದ, ನಿರ್ವ್ರಣ–ಗಾಯವಿಲ್ಲದ, ಎಂದರೆ ಮುಕ್ಕಾಗದ, ವೃತ್ತ–ದುಂಡಗಿರುವ, ಮೌಕ್ತಿಕಾವಳಿಯನೆ–ಮುತ್ತುಗಳ ಸಮೂಹವನ್ನೇ, ತರ್ಪುದು–ತರುವುದು, ಎಂದು–ಎಂಬುದಾಗಿ, ಒರ್ವಳ್–ಒಬ್ಬಳು, ನಿಜೇಶನಂ ನುಡಿದು–ತನ್ನ ಗಂಡನಿಗೆ ಹೇಳಿ, ಅಜ್ಕಱೊಳ್–ಪ್ರೀತಿಯಲ್ಲಿ, ಆಱಿಸಿದಳ್–ಸಮಾಧಾನ ಪಡಿಸಿದಳು.

**ವಚನ :** ಉಭಯ ಬಲಂಗಳೊಳ್–ಎರಡು ಸೈನ್ಯಗಳಲ್ಲಿಯೂ ; ವೀರಜನ ಜನಿತಾಳಾಪಂಗಳ್–ಶೂರರಿಂದ ಹುಟ್ಟಿದ ಮಾತುಗಳು ; ನೆಗೞೆ–ಉಂಟಾಗಲು ; ಜಲಕ್ಕನಿರೆ–ನಿರ್ಮಲವಾಗಿರಲು ; ಪಲ್ಗಳಂ ಸುಲಿದು–ಹಲ್ಲನ್ನು ತೊಳೆದು ; ಮಂಗಳ ವಸದನಂಗೊಂಡು–ಮಂಗಳಕರವಾದ ಅಲಂಕಾರಗಳನ್ನು ಮಾಡಿಕೊಂಡು ; ಪಱೆಗಳೆಸೆಯೆ–ವಾದ್ಯಗಳು ಧ್ವನಿಮಾಡಲು ; ನಾಂದೀಮುಖಮಂ–ನಾಂದೀಮುಖರೆಂಬ ಪಿತೃಗಳ ಶ್ರಾದ್ಧವನ್ನು, ನಿರ್ವಹಿಸಿ–ಮುಗಿಸಿ ; ಸನ್ನಾಹಕರ್ಮ ನಿರ್ಮಿತನುಂ–ಯುದ್ಧ ಕಾರ್ಯಕ್ಕೆ ಸಿದ್ಧಪಡಿಸಲ್ಪಟ್ಟವನೂ ; ಹಸ್ತಾಯುಧ–ಸೊಂಡಿಲೆಂಬ ಆಯುಧ ; ಭದ್ರಮನನುಂ–ಭದ್ರಜಾತಿಗೆ ಸೇರಿದ ಆನೆಯ ಮನಸ್ಸುಳ್ಳವನೂ ; ಶರಾಸನ–ಬಿಲ್ಲು; ಶರಧಿ-ಬತ್ತಳಿಕೆ ; ತನುತ್ರ–ಕವಚ ;

**೪೭.** ಬೆಳಗುವ ಸೊಡರ್ಗಳ–ಉರಿಯುತ್ತಿರುವ ದೀಪಗಳ, ಬೆಳಗುಮಂ–ಪ್ರಕಾಶವನ್ನೂ, ಇಳಿಸಿ–ಕೀಳ್ಮಾಡಿ, ನರನ–ಅರ್ಜುನನ, ದಿವ್ಯಾಸ್ತ್ರಂಗಳ್–ದಿವ್ಯವಾದ ಬಾಣಗಳು, ತಱತ್ತಱಿಸಿ-ಥಳಥಳ, ಪೊಳೆಯೆ–ಹೊಳೆಯಲು, ತಮ್ಮಯ–ತಮ್ಮ, ಬೆಳಗು–ಕಾಂತಿಯು, ಅಗ್ಗಳಿಸಿ–ಹೆಚ್ಚಾಗಿ, ತಱತಱಿಸಿ–ಹೊಳೆಹೊಳೆದು, ವಿದ್ಯುದ್ವಿಳಸಿತಂ ಎನಿಸಿದುವು–ಮಿಂಚಿನಿಂದ ಪ್ರಕಾಶಿತವಾದುವು ಎನಿಸಿಕೊಂಡವು.

**೪೮** ಅರಿಗನ–ಅರ್ಜುನನ, ಅಸ್ತ್ರಚಯಂಗಳ್–ಬಾಣಗಳ ಸಮೂಹವು, ಸೊಡರ್ಗುಡಿಯ–ದೀಪದ ಕುಡಿಗಳ, ಕೆಂಪಿನೊಳ್–ಕೆಂಪಿನಲ್ಲಿ, ಕೆಂಪಿಡಿದರೆ–ಕೆಂಪು ಬಣ್ಣ ತುಂಬಿರಲು, ರಿಪುನೃಪತಿಬಲದ–ಶತ್ರುರಾಜರ ಸೈನ್ಯದ, ಶೋಣಿತಜಲಮಂ–ರಕ್ತವೆಂಬ ನೀರನ್ನು; ಕುಡಿಯಡೆಯುಂ–ಕುಡಿಯದೆ, ಇದ್ದರೂ, ದಲ್–ದಿಟ

ವಾಗಿಯೂ, ಮುನ್ನಮೆ-ಮೊದಲೇ, ಕುಡಿದಂತೆ-ಕುಡಿದ ಹಾಗೆ, ಎಸೆದಿರ್ದುವು-ಪ್ರಕಾಶಿಸುತ್ತಿದ್ದುವು

ವಚನ : ಬೀಡು ಬೀಡುಗಳ್ಗೆಲ್ಲಂ-ಎಲ್ಲಾ ಶಿಬಿರಗಳಲ್ಲೂ, ತೋಱಲ್ದು-ಸುತ್ತಾಡಿ; ಏಕಿರ್ಪಿರ್-ಏಕೆ ಇನ್ನೂ ಇದ್ದೀರಿ; ಏೞಿಂ-ಏಳಿರಿ, ಪಣ್ಣಿಂ-ಸಿದ್ಧರಾಗಿರಿ;

೪೯. ತಂಡದೆ-ಗುಂಪಾಗಿ, ಕೇೞಿ-ಕೋಪಿಸಿ, ಸಾಱುವ-ಕೂಗಿಹೇಳುವ, ಪಲರ್ ಪಡೆವಳ್ಳರ-ಹಲವರು ಸೇನಾನಾಯಕರ, ಮಾತುಗಳ್-ಮಾತುಗಳು, ಮನಂಗೊಂಡಿರೆ-ಮನಸ್ಸನ್ನು ಮುಟ್ಟಿರಲು, ಸನ್ನಣಂದುಡುವ-ಕವಚವನ್ನು ತೊಡಿಸುವ, ಪಣ್ಣುವ-ಮಾಡುವ, ಎಂದರೆ ಸಿದ್ಧತೆಗಳನ್ನು ಮಾಡಿಕೊಳ್ಳುವ, ಬಾೞ್ತೆಯಮಂದಿರಂ-ಬದುಕಿನವರನ್ನು ಎಂದರೆ ಕೆಲಸದವರನ್ನು, ಮರುಳ್ಗೊಂಡವೊಲ್-ಪಿಶಾಚಿ ಹಿಡಿದ ಹಾಗೆ, ಊಳ್ವ-ಗಟ್ಟಿಯಾಗಿ ಕೂಗುವ, ಬಗ್ಗಿಸುವ-ಗದರಿಸಿಕೊಳ್ಳುವ, ಬೇಗದೊಳ್-ಹೊತ್ತಿನಲ್ಲಿ, ಆ ಕಟಕಂಗಳ್-ಆ ಸೈನ್ಯಗಳು, ಮಂದರ ಕ್ಷುಭಿತ ದುಗ್ಧಪಯೋಧಿಗಭೀರ ನಾದಮಂ-ಮಂದರಪರ್ವತವು ಕಡೆದ ಹಾಲ್ಗಡಲಿನ ಗಟ್ಟಿಯಾದ ಸದ್ದನ್ನು, ಎಯ್ದೆ ಕೆಯ್ಕೊಂಡವು-ಚೆನ್ನಾಗಿ ಸ್ವೀಕರಿಸಿದುವು.

೫೦ ಕೃತವಿವಿಧಾಸ್ತ್ರಶಸ್ತ್ರ ವೀರಭಟಕೋಟಿ-ನಾನಾ ಬಗೆಯಾದ ಆಯುಧಗಳಲ್ಲಿ ಪರಿಣತಿ ಪಡೆದಿರುವ ಶೂರಯೋಧರ ಸಮೂಹವು, ಭಯಂಕರಮಾಗೆ-ಭಯವಾಗುವಹಾಗೆ, ಬೀಸುವ ಆವುತಿಯ-ಆವುತಿಯೆಂಬ ಆಯುಧದ (?), ಕಳಂಕ ಪಂಕದೊಳೆ-ಕರೆಯೆಂಬ ಕೆಸರಿನಲ್ಲೇ, ಪೆರ್ಚಿದ ಕತ್ತಲೆ-ಹೆಚ್ಚಾದ ಕತ್ತಲೆಯು, ತೀವ್ರಶಸ್ತ್ರಸಂಹತಿಗಳ ದೀಪ್ತಿಯಿಂ-ಹರಿತವಾದ ಶಸ್ತ್ರಸಮೂಹಗಳ ಕಾಂತಿಯಿಂದ, ಬಿಸುಗೆಯಾಗಿ-ಬೆಸುಗೆಯನ್ನು ಹೊಂದಿ, ಕರಂ-ವಿಶೇಷವಾಗಿ, ಪೊಗರ್ವಟ್ಟು-ಕಾಂತಿಯುಕ್ತವಾಗಿ, ಅಗುರ್ವುಮದ್ಭುತಮುಮಂ-ಭಯವನ್ನೂ ಆಶ್ಚರ್ಯವನ್ನೂ, ಈಯೆ-ಉಂಟುಮಾಡಲು (ಕೊಡಲು), ಪಾಂಡವ ಕೌರವರೌದ್ರ ಸಾಧನಂ-ಪಾಂಡವರ ಭಯಂಕರ ಸೈನ್ಯಗಳು, ಪಣ್ಣಿದುವು-(ಸಮರಕ್ಕೆ) ಸಿದ್ಧವಾದುವು.

ವಚನ : ಎರಡುಂ ಪಡೆಗಳುಂ-ಎರಡು ಸೈನ್ಯಗಳೂ; ಪಣ್ಣ ಪಣ್ಣನೆ ಪಣ್ಣಿ-ಮೆಲ್ಲ ಮೆಲ್ಲಗೆ ಸಿದ್ಧವಾಗಿ ; ಒಡರಿಸಿದಾಗಳ್-ತೊಡಗಿದಾಗ

೫೧. ಲೋಕೈಕಚಕ್ಷು-ಲೋಕಕ್ಕೆ ಒಂದು ಕಣ್ಣಾಗಿರುವ, ನವಕಮಲಾಕರ ಬಾಂಧವಂ-ಹೊಸವಾದ ತಾವರೆಗೊಳದ ನಂಟನಾಗಿರುವ, ಅನೇಕ ದಿತಿಸುತಸಮರಾನೀಕ ಭಯಂಕರಂ-ಹಲವು ರಾಕ್ಷಸರ ರಣಸೈನ್ಯಕ್ಕೆ, ಭಯಂಕರಂ-ಭಯವನ್ನುಂಟುಮಾಡುವ, ಸೂರ್ಯನು, ಎರಡುಂ ಅನೀಕಂಗಳಂ-ಉಭಯ ಸೈನ್ಯಗಳನ್ನು, ಅಡರಿಮೇಲೆಹತ್ತಿ, ನೋಡುವಂತೆ-ನೋಡುವಹಾಗೆ, ಉದಯಿಸಿದಂ-ಹುಟ್ಟಿದನು, ಸೂರ್ಯೋದಯವಾಯಿತೆಂದು ತಾತ್ಪರ್ಯ.

**ವಚನ :** ಏಱಿಸಿದ–ಮೇಲಕ್ಕೆ ಎತ್ತಿ ಇಟ್ಟ; ಬಿಸುಗೆಗಳುಂ–ಅಂಬಾರಿಗಳೂ; ಇಕ್ಕಿದ–ಹಾಕಿದ, ಲೋಹವಕ್ಕರೆಗಳುಂ–ಲೋಹದ ಪಕ್ಷರಕ್ಷೆಗಳೂ; ಉರ್ಚಿದ–ಬಿಚ್ಚಿದ, ಮೊಗವಡಂಗಳುಂ–ಮುಖವಾಡಗಳೂ; ಕಟ್ಟಿದ ಪಟ್ಟಿಯಿಗೆಗಳುಂ–ಕಟ್ಟಿದ ಧ್ವಜಗಳೂ, ಒಟ್ಟಿದ–ರಾಶಿಹಾಕಿದ: ಎಱಂಕೆವೆರಸಿದ–ರೆಕ್ಕೆಯೊಡನೆ ಕೂಡಿದ; ತಳರ್ವಂತೆ–ಚಲಿಸುವಂತೆ; ಚೀತ್ಕೃತನಾದ–ಚೀತ್ಕಾರದ ಶಬ್ದ; ಚಕ್ರಾಘಾತ-ಚಕ್ರದ ಹೊಡೆತ; ನಿಶಿತಹೇತಿಗರ್ಭಂಗಳುಂ–ಹರಿತವಾದ ಆಯುಧಗಳನ್ನು ಒಳಕೊಂಡ; ವಾಜಿರಾಜಿಗಳುಂ–ಕುದುರೆಯ ಸಾಲುಗಳೂ, ದೊಪ್ಪುಳಿಸಿ–ಸಂಭ್ರಮದಿಂದ ಸುತ್ತಾಡಿ; ಖುರಮುಂ–ಗೊರಸೂ; ಪಕ್ಕರೆಯಿಕ್ಕಿ–ಪಾರ್ಶ್ವಕ್ಕೆ ಹಾಕುವ ಗುಳವನ್ನು ಧರಿಸಿ, ಪೊನ್ನಪಯರ್ಾಣಂಗಳುಂ – ಚಿನ್ನದ ಜೀನುಗಳನ್ನೂ, ಘೋಱಾಯ್ಲರ್ – ಕುದುರೆ ಸವಾರರು; ಪೊಳೆಯಿಸಿ–ಹೊರಳಿಸಲು; ಪೊಳೆವಂತೆ–ಹೊಳೆಯುವ ಹಾಗೆ; ಕಡುಗುದುರೆಗಳುಮಂ–ವೇಗಶಾಲಿಗಳಾದ ಕುದುರೆಗಳನ್ನೂ; ಮಿಡುಮಿಡುಕನೆ ಮಿಡುಕುವ–ಮಿಡುಕು ಮಿಡುಕೆಂದು ಹಾರುವ; ಸಿಡಿಲೇಱಿಗೆಯುಮಂ–ಸಿಡಿಲಿನ ವೃದಿ ಯನ್ನೂ; ಕೋಳ್ಮಸಗಿದ–ವಶವಾಗಿ, ಸೆರೆಗೆ ಸಿಕ್ಕಿ ಕೆರಳಿದ, ನಡೆವಣಿಯ=ನಡೆವ+ಅಣಿಯ–ನಡೆಯುವಸೈನ್ಯದ ಸಾಲುಗಳ; ಸಂದಣಿಯುಮಂ–ಸಮೂಹವನ್ನೂ; ಕಾಱಿತ್ತುಱು–ಕಾಡ ಹಸು, ಮಸಗಿದ–ವಿಜೃಂಭಿಸಿದ: ದುರ್ಧರ–ಎದುರಿಸಲಸಾಧ್ಯವಾದ; ಧನುರ್ಧರಬಲಮುಮಂ ಬಿಲ್ಗಾರರ ಸೈನ್ಯವನ್ನೂ; ಓಜೆಯೊಳ್–ಕ್ರಮದಲ್ಲಿ, ರೀತಿಯಲ್ಲಿ; ಪಡೆವಳರ್ಕಳ್–ಸೇನಾಪಾಲಕರು, ಒಡ್ಡಿನಿಂದಾಗಳ್–ಚಾಚಿ ನಿಂತಾಗ, ಬಿಸುಗೆ>ಶಿಬಿಕಾ?; ಬೂತುಗಂ ರಾಜಾದಿತ್ಯನಂ ಬಿಸುಗೆಯೆ ಕಳನಾಗೆ ಸುರಗಿಱಿದು ಕಾದಿಕೊನ್ದು ಎಂದು ಶಾಸನ ಪ್ರಯೋಗ (ಮಂಡ್ಯ ೪೧; ೯೪೯ ಕ್ರಿ.ಶ.); ಕಡುಗುದುರೆ> ಕಡಿದು+ಕುದುರೆ); “ಪೊಳೆ–ಲುಠನೇ”–ಹೊರಳಾಡು, ಕೋಳ್>ಕೊಳ್–ಗ್ರಹಣೇ, ಭಾವನಾಮ; ಅಣಿ=(ತ) ಪಡೈಯುಱುಪ್ಪು, ಸೈನ್ಯದ ತುಕಡಿ, ಸಾಲು.

೫೨. ಜಲಶಯುಸೋದರಾಂತರದಿಂ–ವಿಷ್ಣುವಿನ ಬಸಿರೊಳಗಿಂದ, ಈ ತ್ರಿಜಗಂ–ಈ ಮೂರು ಲೋಕಗಳೂ, ಈಗಳ್–ಈಗ, ಪೊಱಮಟ್ಟುದು–ಹೊರ ಹೊರಟಿತು, ಎಂಬ ಉಲಿ ಸಲೆ–ಎಂಬ ಮಾತು ಸಲ್ಲಲು, ತಮ್ಮ ತಮ್ಮ ಶಿಬಿರಂಗಳಿಂ–ತಂತಮ್ಮ ಬೀಡುಗಳಿಂದ, ಪಲವುಮಂ–ಹಲವು, ಉಗ್ರಚತುರ್ಬಲಂಗಳಂ–ಭೀಕರ–ಚತುರಂಗ ಸೈನ್ಯಗಳನ್ನು, ಒಂದೆ ಮಾಡಿ–ಒಟ್ಟುಗೂಡಿಸಿ, ದೆಸೆಗಳ್ ಮಸುಳಲ್–ದಿಕ್ಕುಗಳು ಕಂದುತ್ತಿರಲು, ಇರ್ವಲದಲ್–ಎರಡು ಸೈನ್ಯಗಳಲ್ಲಿ, ಅರಾತಿನಾಯಕರುಂ–ಶತ್ರುಗಳಾದ ಸೇನಾಪತಿಗಳೂ, ಒರ್ಬರನೊರ್ಬರೆ–ಒಬ್ಬರನ್ನೊಬ್ಬರೇ, ಗೆಲ್ವ–ಗೆಲ್ಲುವ, ತಕ್ಕಿನೊಳ್ ಶೌರ್ಯದಲ್ಲಿ, ಆಜಿಗೆ–ಯುದ್ಧಕ್ಕೆ, ನಡೆತಂದರ್–ಬಂದರು,

**ವಚನ :** ತನ್ನೊಡ್ಡಿದ–ತಾನು ಚಾಚಿದ, ರಚಿಸಿದ, ಮಕರವ್ಯೂಹ–ಮೀನಿನಾಕಾರದ ಒಂದು ಸೇನಾರಚನೆ; ಮೊನೆಯೊಳ್–ತುದಿಯಲ್ಲಿ; ಸುತ್ತಿಱಿದು–ಸುತ್ತುಗಟ್ಟಿ; ತೊಳಪ–ಹೊಳೆಯುವ; ಪಟವಿಗೆಗಳುಂ–ಬಾವುಟಗಳೂ; ಜೋಲ್ವ

ಪುರ್ಬಂ-ಜೋತುಬಿದ್ದಿರುವ ಹುಬ್ಬನ್ನು; ಲಲಾಟಪಟ್ಟದೊಳ್-ಹಣೆಯ ಪ್ರದೇಶದಲ್ಲಿ, ಇಟ್ಟಳಂ-ಸೊಗಸಾಗಿ, ಬೀರವಟ್ಟಮುಂ-ವೀರಪಟ್ಟವೂ ; ಅಸದಳಂ-ಅತಿಶಯವಾಗಿ ; ಪರಶುರಾಮಂ ಬಾಳ್ಗೆಂದು-ಪರಶುರಾಮನು ಬಾಳಲಿ ಎಂದು ಘೋಷಿಸಿ ; ಮಾರ್ಕೊಂಡು-ಎದುರಿಸಿ ; ಸೂಚೀವ್ಯೂಹಮನೊಡ್ಡಿ-ಸೂಜಿಯ ಆಕಾರದಲ್ಲಿ ಸೇನಾ ರಚನೆಯನ್ನು ಮಾಡಿ, ಉಪಾರೂಢ-ಏರಿದ, ಕನಕ ರಥನುಂ-ಚಿನ್ನದ ರಥವುಳ್ಳವನೂ, ಕೈಲಾಸವಾಸಿಗೆ-ಶಿವನಿಗೆ ; ಅದಿರದೆ-ನಡುಗದೆ, ಹೆದರದೆ ;

**೫೩.** ಶ್ವೇತನ ಗಂಗಾಜಾತನ-ಶ್ವೇತನ ಮತ್ತು ಭೀಷ್ಮನ, ಮಾತನೆ-ಮಾತನ್ನೇ, ಅಪ್ಪಣೆಯನ್ನೇ, ಪಾರ್ದು-ಎದುರು ನೋಡುತ್ತ, ನಿರೀಕ್ಷಿಸುತ್ತ ; ಎರಡುಮೊಡ್ಡಣಂ-ಉಭಯ ಸೈನ್ಯಗಳೂ, ಕಾದಲ್ಕೆಂದು-ಕಾಳಗಮಾಡಬೇಕೆಂದು, ಈ ತೆಱದಿಂ-ಈ ರೀತಿಯಿಂದ, ಕೆಸಱ ಕಡಿತದ ತೆಱದಿಂ-ಕೆಸರಿನ ಮೇಲೆ ಹರಡಿರುವ ಕಡತ ದಂತೆ, ಭೂತಳಮಳ್ಳಾಡೆ-ನೆಲವು ನಡುಗಲು, ಒಡ್ಡಿ ನಿಂದುವು-ಚಾಚಿ ನಿಂತವು.

**ವಚನ :** ಕೌರವ ಬಲದೊಡ್ಡಣದ-ಕೌರವನ ಸೈನ್ಯದ ವ್ಯೂಹಗಳ, ಮಕರ ಮಸ್ತಕ ಭೂಮಿಯೊಳ್-ಮೀನಿನಾಕಾರದ ವ್ಯೂಹದ ತಲೆಯ ಪ್ರದೇಶದಲ್ಲಿ.

**೫೪.** ನಿಜರಜತ ರಥಂ-ತನ್ನ ಬೆಳ್ಳಿಯ ರಥವು, ಕೆಂಬಣ್ಣದ ಕುದುರೆಗಳೊಳ್-ಕೆಂಪಾಗಿರುವ ಕುದುರೆಗಳಲ್ಲಿ, ಒಡಂಬಡೆ-ಒಪ್ಪಲು ; ಅಗುರ್ವು-ಭಯವು, ಉರ್ವರೆಯಂ-ಭೂಮಿಯನ್ನು, ತಿಂಬೆ-ತುಂಬಲು ; ಕಳಶ ಧ್ವಜಂ-ಕಲಶದ ಗುರುತುಳ್ಳ ಬಾವುಟ, ಮಿಳಿರ್ದು-ಚಲಿಸಿ, ಅಂಬರಮಂ-ಆಕಾಶವನ್ನು, ಬಳಸೆ-ವ್ಯಾಪಿಸಲು, ನಿಂದನ್-ನಿಂತುಕೊಂಡಿರುವವನು, ಆತಂ-ಆತನು, ದ್ರೋಣಂ-ದ್ರೋಣನು.

**೫೫.** ಆತನಸಾರೆ-ಆ ದ್ರೋಣನ ಹತ್ತಿರ, ಕಮಂಡಲು ಕೇತನಂ-ಕಮಂಡಲದ ಚಿಹ್ನೆಯುಳ್ಳ ಬಾವುಟ, ಅಂಬರಮನಡರೆ-ಆಕಾಶವನ್ನು ಏರಲು, ಚತುರಂಗ ಬಲೋಪೇತನ್-ಚತುರಂಗ ಸೈನ್ಯದಿಂದ ಕೂಡಿದವನು, ಅತಿಧವಳರಥಂ-ಬಲು ಬೆಳ್ಳಗಿರುವ ರಥವನ್ನುಳ್ಳವನು, ಅಭಿಜಾತಂ-ಸತ್ಕುಲದವನು, ಕ್ಷತ್ರಿಯರಂ-ಕ್ಷತ್ರಿಯರನ್ನು, ಉಱದ-ಬಗೆಯದ, ಕಲಿಕೃಪಂ-ಶೂರನಾದ ಕೃಪಾಚಾರ್ಯನು, ಆತಂ-ಅವನು.

**ವಚನ :** ದಕ್ಷಿಣೋಪಾಂತದೊಳ್-ಬಲಗಡೆಯ ಮಗ್ಗುಲಲ್ಲಿ ; ಸಮೀಪದಲ್ಲಿ ; ಕರ್ಗನೆ-ಕಪ್ಪಾಗಿ, ಕರ್ಗಿದ-ಕರಿದಾದ, ಸಮದಗಜಘಟಾಟೋಪದ ನಡುವೆ-ಮದಿಸಿದ ಆನೆಯ ಸೈನ್ಯದ ಆಡಂಬರದ ನಡುವೆ, ಇಲ್ಲಿ 'ಕರ್ಗನೆಕರ್ಗಿದ' ಎಂಬುದಕ್ಕೆ ಬದಲಾಗಿ ಕರ್ಗನೆ ಕನಿತ (ಖ.ಘ), ಕರ್ಗನೆ ಗಂನಿತ (ಗ) ಎಂದೆರಡು ಪಾಠಾಂತರಗಳಿವೆ. ಇವುಗಳಲ್ಲಿ ಕನಿತ ಎಂಬ ಪಾಠ ಸ್ವೀಕರಣ ಯೋಗ್ಯ ; ದನುಜೇಂದ್ರನೊಡ್ಡು ಕರ್ಗನೆ (ಪಾಠ-ಕಂಗನೆ) ಕನಿಯುತ್ತಿರೆ (ಪಂಪ ರಾ ೧೩-೨೧) ಎಂಬಲ್ಲಿ ಇರುವ ಕನಿ ಧಾತುಗೆ ಹೊಳೆ, ಪ್ರಕಾಶಿಸು ಎಂದು ಅರ್ಥೈಸಬಹುದು ; (ತ) ಕನಿ-ತಱಲ್ ಮಿಗುದಲ್ ನೋಡಿ.

**೫೬.** ಸರದದ ಮುಗಿಲನೆ–ಶರತ್ಕಾಲದ ಮೋಡವನ್ನೇ, ಬಿಡದೆ ಅನುಕರಿಸುವ–ಬಿಡದೆ ಹೋಲುವ, ಧವಳಾಶ್ವದಿಂದಂ–ಬಿಳಿಯ ಕುದುರೆಗಳಿಂದ, ಎಸೆದು–ಒಪ್ಪುವ, ಲೋಹರಥಮದುಂ–ಕಬ್ಬಿಣದ ರಥವದು ; ಪುಲಿಯ ಪೞಯಿಗೆವೆರಸು–ಹುಲಿಯ ಧ್ವಜ ಸಮೇತವಾಗಿ, ತೞತ್ತೞಿಸೆ–ಹೊಳೆ ಹೊಳೆಯಲು, ನಿಂದನ್–ನಿಂತವನು. ಆತಂ–ಅವನು, ಶಲ್ಯಂ–ಶಲ್ಯರಾಜನು.

**ವಚನ :** ವಾಮಭಾಗದೊಳ್ – ಎಡಭಾಗವಲ್ಲಿ, ಅಂಬರಭಾಗಮಂ–ಆಕಾಶದ ಭಾಗವನ್ನು, [ತ]ಟ್ಟೆ ಮೆಡಱಿದಂತಾಗೆ–ತಡಿಕೆಯನ್ನು ಹೆಣೆದ ಹಾಗಿರಲು ; ಒಟ್ಟಿದ ಕೈದುಗಳ–ರಾಶಿಮಾಡಿದ ಆಯುಧಗಳ ; ಇಲ್ಲಿ ಮೆಡಱು ಧಾತುವಿನ ಅರ್ಥ ಖಚಿತವಾಗಿದೆ, "ತಟ್ಟೆ ಮೆಡಱಿದಸೆಂದು ತಟ್ಟೆವೆಣೆದಂ" (ಶಮದ) ನೋಡಿ ; ಇದಕ್ಕೆ ಸಂವಾದಿಯಾದ ಧಾತು ಇತರ ದ್ರಾವಿಡ ಭಾಷೆಗಳಲ್ಲಿ ಸಿಕ್ಕಿಲ್ಲ.

**೫೭.** ಕಱೆ–ಕಪ್ಪುಮಚ್ಚೆ, ಕೊರಲೊಳ್–ಕೊರಳಿನಲ್ಲಿ ; ಕಣ್–ಕಣ್ಣು, ನೊಸಲೊಳ್–ಹಣೆಯಲ್ಲಿ ; ಪೆಱೆ–ಅರ್ಧಚಂದ್ರ ಅಥವಾ ಬಾಲಚಂದ್ರ, ಮಕುಟಾಗ್ರದೊಳ್–ಕಿರೀಟದ ತುದಿಯಲ್ಲಿ, ಉಗ್ರಧನು–ಭಯಂಕರವಾದ ಬಿಲ್ಲು, ಕರಾಗ್ರದೊಳ್–ಕೈಯ ತುದಿಯಲ್ಲಿ, ಇರೆ–ಇರಲು, ಹರಿಕೇತು–ಸಿಂಹಧ್ವಜವು, ನಭದೊಳ್–ಆಕಾಶದಲ್ಲಿ, ಅಳ್ಳಿಱಿಯೆ–ಮಿಡುಕುತ್ತಿರಲು, ಮಿಱುಗುವ–ಹೊಳೆಯುವ, ಜೆಂಬೊನ್ನರಥದಂ–ಕೆಂಪುಚಿನ್ನದ ರಥದವನು, ಅಶ್ವತ್ಥಾಮಂ–ಅಶ್ವತ್ಥಾಮನು.

**ವಚನ :** ಆ ರುದ್ರಾವತಾರನ – ಆ ರುದ್ರನ ಅವತಾರವಾದ ಅಶ್ವತ್ಥಾಮನ, ಕೆಲದೊಳ್–ಪಕ್ಕದಲ್ಲಿ ; ಕಿಕ್ಕಿಱಿಗಿಱಿದ–ಒತ್ತಾಗಿ ಸೇರಿಕೊಂಡ : ತಱಿದುಱುಗಲ–ಛತ್ರಿಗಳ ಸಮೂಹದ ; ಬಾಳಬಟ್ಟಂ – ?. ಬಾಳಪಟಂ ಎಂಬ ಪಾಠಾಂತರಕ್ಕೆ ಬದಲಾಗಿ ಚಾಱಬಟ್ಟಂ ಎಂದಿದ್ದರೆ 'ರಾಹುಮಂಡಲ' ಎಂದರ್ಥವಾಗಬಹುದು ; ತೂಂತಿಟ್ಟಂತೆ – ರಂಧ್ರಮಾಡಿದ ಹಾಗೆ, ಅಣಿಯ ನಡುವೆ – ಸೇನೆಯ ನಡುವೆ ; ವಿಚಿತ್ರಾತಪತ್ರಂಗಳ – ಸೊಗಸಾದ ಕೊಡೆಗಳ ; ಸೆಱೆಕೋಲೊಳ್ – ಪಕ್ಕಗಳ ಅಂಚಿನಲ್ಲಿ. (ತ) ಶಿಱಕೈಕ್ಕೋಲ್ – ರೆಕ್ಕೆಗಳ ಅಂಚು ; ಅಣುಗಮಯ್ದುನಂ – ಪ್ರೀತಿಯ ಮೈದುನ ; ಕರಟತಟಗಳಿತ – ಆನೆಯ ಕಪೋಲ ಪ್ರದೇಶದಿಂದ ಸುರಿಯುತ್ತಿರುವ ; ಮದಜಳಧಾರಾಪೂರ ಪರಿಪ್ಲಾವಿತ – ಮದೋದಕ ಧಾರೆಯೆಂಬ ಪ್ರವಾಹದಿಂದ ತೇಲುತ್ತಿರುವ ; ವೃದ್ಧ ವೈರಮಂ–ಹಳೆಯ ದ್ವೇಷವನ್ನು ; ಕಾದುವ ಜೆಸನಂ–ಯುದ್ಧದ ಕಾರ್ಯವನ್ನು ; ಕಾಳನೀಳಜಳಧರಂಗಳ್ – ಕಡೆಗಾಲದ ನೀಲಿ ಮೋಡಗಳು ; ತಳಿರ್ತಂತೆ–ಚಿಗುರಿದಹಾಗೆ, ಮಿಳಿರ್ವ–ಅಲುಗಾಡುವ ; ಫೇನ–ನೊರೆ ; ಸಂಕಾಶ–ಸಮಾನ ; ಪಾಂಡುಛತ್ರ–ಬೆಳ್ಗೊಡೆಗಳು.

**೫೮.** ಕನಕ . . . ಬಿಂಬಮಂ : ಕನಕಗಿರೀಂದ್ರ–ಮೇರುಪರ್ವತದ, ರುಂದ್ರ–ವಿಶಾಲವಾದ, ಶಿಖರಸ್ಥಿತ – ಶಿಖರದ ಮೇಲಿರುವ. ಬಾಳದಿನೇಶಬಿಂಬಮಂ – ಬಾಲ ಸೂರ್ಯನ ಮಂಡಲವನ್ನು, ನೆನೆಯಿಸೆ – ನೆನಪಿಗೆ ತಂದು ಕೊಡಲು, ತನ್ನ ಪೊನ್ನ

ರಥದೊಳ್ – ತನ್ನ ಚಿನ್ನದ ರಥದಲ್ಲಿ, ನೆಲಸಿರ್ದು – ಕುಳಿತಿದ್ದು, ವಿಳಾಸದಿಂದೆ–ಠೀವಿಯಿಂದ, ಭೀಮನ ಸೇನೆಯಂ–ಭೀಮಸೇನನ ಸೈನ್ಯವನ್ನು (ಅದರ ವಿನ್ಯಾಸ ಸಿದ್ಧತೆ ಮುಂತಾದವುಗಳನ್ನು), ಆರಯಲ್ – ವಿಚಾರಿಸಿಕೊಂಡು (ಬರಲು), ವನೀಪಕರಂ – ಭಿಕ್ಷುಕ ವೇಷದವರನ್ನು (ಗೂಢಚಾರರನ್ನು), ಅಟ್ಟಿ – ಕಳುಹಿಸಿ ಕೊಟ್ಟು, ಫಣೀಂದ್ರಕೇತನಂ – ದುರ್ಯೋಧನನು. ಯುಗಾಂತವಾರ್ಧಿ – ಪ್ರಳಯ ಕಾಲದ ಸಮುದ್ರ, ಭೋಂಕನೆ – ಶೀಘ್ರವಾಗಿ; ತಳರ್ವಂದದಿಂ – ಚಲಿಸುವಹಾಗೆ, ತಳರಲ್ – ಚಲಿಸಲು, ನಡೆಯಲು, ಅಟ್ಟಪನಲ್ತೆ – (ಸಂದೇಶವನ್ನು) ಕಳುಹಿಸುವ ನಲ್ಲವೆ? ಮೊನೆ ಶಬ್ದಕ್ಕೆ ಕನ್ನಡದಲ್ಲಿ ಇರುವ ಸಾಧಾರಣಾರ್ಥ ಯುದ್ಧ, ಕಾಳಗ ಎಂದು; ಆದರೆ ಪ್ರಕೃತ ಪದ್ಯದಲ್ಲಿ ಅದಕ್ಕೆ ಸೈನ್ಯ ಎಂಬರ್ಥವಾಗಬಹುದು; (ತ) ಮುಸ್ಕೈ–ಗುಂಪು; (ತೆ) ಮೊನ–ಸೈನ್ಯ.

೫೯. ಸೆಱಕೋಲ್ ಸೆಱಕೋಲಿಂ – ಒಂದು ಪಾರ್ಶ್ವದ ಕೊನೆಯಿಂದ ಇನ್ನೊಂದು ಪಾರ್ಶ್ವದ ಅಂಚಿನವರೆಗೆ. ಪತ್ತುಜುಗಾವುದದ – ೧೬ ಗಾವುದದ, ಬಲದ–ಸೈನ್ಯದ, ಪವಣನ್–ಅಳತೆಯನ್ನು, ಅನಿತಿನಿತೆಂದು–ಅಷ್ಟು ಇಷ್ಟು ಎಂದು, ಆನಱಯೆಂ–ನಾನು ತಿಳಿಯೆನು; ಅವನಿಪತೀ – ರಾಜನೇ, ದೇವಾಸುರದೊಳಂ–ದೇವದಾನವರ ಯುದ್ಧದಲ್ಲೂ, ಆನ್–ನಾನೇ, ಇನಿತುಬಲಮಂ–ಇಷ್ಟು ಸೈನ್ಯವನ್ನು; ಅಱಯೆಂ–ನಾನು ತಿಳಿಯೆನು, ಬಂಡಿಯ ಈಸುಮರಕ್ಕೆ ಎಡದಲ್ಲಿರುವುದನ್ನು ಎಡಗೋಲೆಂದೂ, ಬಲದಲ್ಲಿರುವುದನ್ನು ಬಲಗೋಲು ಎಂದೂ ಕರೆಯುವುದು ರೂಢಿ; ಇಲ್ಲಿ ಶಿಱೈ>ಸೆಱ ಎಂದರೆ ತಮಿಳಿನಲ್ಲಿ ರೆಕ್ಕೆ (ಹಕ್ಕಿಯ) ಎಂದರ್ಥ; ಸೆಱಕೋಲ್ ಎಂದರೆ ರೆಕ್ಕೆಯ ಕಡೆಯಿಂದ ಎಂದರ್ಥವಾಗಬಹುದು; ಅದೇ ಪಾರ್ಶ್ವ, ಪಕ್ಕ.

**ವಚನ:** ದ್ರೋಣನ ಮೊನೆಗೆ–ದ್ರೋಣನ ಸೈನ್ಯಕ್ಕೆ–ನಕ್ತಂಚರರ ಮೊನೆಗೆ–ರಾಕ್ಷಸರ ಸೈನಕ್ಕೆ; ತನ್ನ ಚಕ್ರರಕ್ಷೆಗೆ ಪೇಳ್ದು–ತನ್ನ ಸೈನ್ಯ ರಕ್ಷೆಗೆ ನಿಯಮಿಸಿ: ನೆಱದು ನಿಂದು–ಪೂರ್ಣನಾಗಿ, ಸಮರ್ಥನಾಗಿ ನಿಂತು; ಕೆಯ್ವೀಸು–ಕೈಯನ್ನು ಬೀಸು; ಯುದ್ಧವು ಆರಂಭವಾಗಲಿ ಎಂದು ಸೂಚಿಸುವ ಸಂಕೇತ ಕೈಬೀಸುವುದು (ಹಗಲಲ್ಲಿ), ರಾತ್ರಿಯಲ್ಲಿ ಕೊಳ್ಳಿಬೀಸುವುದು.

೬೦. ನರೇಂದ್ರ – ಧರ್ಮರಾಜನ, ಬಳನೆರಡುಂ – ಎರಡು ಸೈನ್ಯಗಳೂ, ತನ್ನನೆ–ತನ್ನನ್ನೇ, ಮಿಳಮಿಳನೋಡೆ–ಮಿಳ ಮಿಳಕಣ್ಣು ಬಿಟ್ಟುಕೊಂಡು ನೋಡು ತ್ತಿರಲು, ಒಂದೆ ರಥದಿಂದೆ–ಒಂದೇ ರಥ ಸಮೇತನಾಗಿ, ಅಸುಹೃದ್ಬಳಮಂ–ಶತ್ರು ಸೈನ್ಯವನ್ನು, ಇರದೆ–ಬಿಡವೆ, ಎಯ್ದಿ–ಸೇರಿ, ಭೀಷ್ಮರ, ಚರಣ ಯುಗಕ್ಕೆ–ಎರಡು ಚರಣಗಳಿಗೆ, ಎಱಗೆ–ನಮಿಸಲು, ನಿನಗೆ, ಜಯಮಕ್ಕೆ–ಜಯವಾಗಲಿ, ಎಂದಂ–ಎಂದು ಆಶೀರ್ವದಿಸಿದನು.

**ವಚನ:** ಪರಕೆಯುಂ ಕೆಯ್ಕೊಂಡು–ಆಶೀರ್ವಾದವನ್ನು ಸ್ವೀಕರಿಸಿ.

೬೧. ಗುರುಕೃಪಗುರುಸುತ ಶಲ್ಯರ – ದ್ರೋಣ ಕೃಪ ಅಶ್ವತ್ಥಾಮ ಶಲ್ಯರ, ಚರಣಂಗಳ್ಗೆ ಆಗಿ – ಪಾದಗಳಿಗೆ ಬಾಗಿ, ಪೋಗಿ – ಹೋಗಿ, ಪೊಡೆವಡುವುದುಂ – ನಮಸ್ಕರಿಸುತ್ತಿರಲು, ಅವರ್–ಅವರು, ಆ ನೃಪನಂ–ಆ ರಾಜಧರ್ಮಪುತ್ರನನ್ನು, ಆದರದಿಂದಂ ನಚ್ಚಿಯೊಳಂ–ಆದರದಿಂದಲೂ ಪ್ರೀತಿಯಿಂದಲೂ, ಪರಸಿ – ಹರಸಿ, ಮನಂಗೊಂಡು–ಮನಸ್ಸಿನಲ್ಲಿ ಮೆಚ್ಚಿ, ನುಡಿದರ್–ಹೇಳಿದರು.

೬೨. ನಿನ್ನ ಬರಮಿದಂ–ನಿನ್ನ ಬರುವಿಕೆಯಿಂದ ಎಂದರೆ ಇಲ್ಲಿಗೆ ಬಂದಿದ್ದರಿಂದ, ಎಮ್ಮ ಮನಂ–ನಮ್ಮ ಮನಸ್ಸು, ನಿನಗೆ ಎಱಗಿದುದು–ನಿನಗೆ ಬಾಗಿತು ಎಂದರೆ ನಮ್ಮ ಪ್ರೀತಿ ನಿನಗುಂಟಾಯಿತು ; ಎಮ್ಮಾದೆಸೆಯಿಂದಂ–ನಮ್ಮ ಈ ಕಡೆಯಿಂದ, ಜಯಮುಂ– ವಿಜಯವೂ, ಗೆಲ್ಲವೂ, ಸಾರ್ಗೆ–ಸಾರಲಿ, ಬರಲಿ ; ಪೋಗು–ಹೋಗು, ಎನೆ–ಎನ್ನಲು ; ಆಗಳ್–ಆಗ, ಅಂತಕತನಯಂ – ಧರ್ಮಪುತ್ರನು, ಗುರುಜನಮಂ–ಹಿರಿಯರನ್ನು, ಮನ್ನಿಸಿ–ಗೌರವಿಸಿ,

**ವಚನ :** ಮಗುಳ್ದು–ಹಿಂದಿರುಗಿ, ತನ್ನೊಡ್ಡಣಕ್ಕೆ–ತನ್ನ ಸೈನ್ಯಕ್ಕೆ ;

೬೩. ಪವನಜನಿಂದೆ – ಭೀಮನಿಂದ, ಕೌರವಕುಲಂ – ಕೌರವವಂಶವು, ಪಡಲಿಟ್ಟವೊಲಕ್ಕು – ನಾಶವಾದಂತಾಗುತ್ತದೆ. ಆದೊಡೆ–ಆದರೆ, ಇನ್ನವರವರ್– ಇನ್ನು ಅವರಿಗೆ ಸೇರಿದವರು, ಸಂತತಿಯವರು, ಆರುಮಿಲ್ಲ – ಯಾರೂ ಇಲ್ಲ ; ಅಣಮೆ–ವಿಶೇಷವಾಗಿ, ಸಂತತಿ–ಸಂತಾನವು, ಕೆಟ್ಟಪುದು–ನಷ್ಟವಾಗುತ್ತದೆ ; ಈ ಬವರದೊಳ್–ಈ ಯುದ್ಧದಲ್ಲಿ, ಈಗಳ್–ಈಗ, ಆನ್–ನಾನು, ಇವನಂ–ಇವನನ್ನು, ಕಾವೆಂ–ರಕ್ಷಿಸುತ್ತೇನೆ, ಎಂದು–ಎಂದು ಹೇಳಿ, ನೃಪಂ–ಧರ್ಮರಾಜನು, ದಯೆ ಯಿಂದಂ–ಕರುಣೆಯಿಂದ, ಆ ಯುಯುತ್ಸುವನೊಡಗೊಂಡು–ಆ ಯುಯುತ್ಸುವೆಂಬವ ನನ್ನು ಒಡಗೂಡಿ, ಬಂದಂ–ತನ್ನ ಪಾಳಯಕ್ಕೆ ಬಂದನು ; ಎನಿತಾದೊಡಂ– ಎಷ್ಟಾದರೂ, ಏಂ–ಏನು, ಪ್ರಭು–ಧರ್ಮರಾಜನು, ಪೊಲ್ಲಕೆಯ್ಗುಮೇ–ಕೆಟ್ಟದನ್ನು ಮಾಡುತ್ತಾನೆಯೇ?

**ವಚನ :** ಪದದೊಳ್–ಸಮಯದಲ್ಲಿ ; ದಿವ್ಯಸ್ವರೂಪಮಂ–ವಿಶ್ವರೂಪವನ್ನು ;

೬೪. ಈ ಮಲೆದು ಒಡ್ಡಿದ ಚಾತುರಂಗಮೆಂಬುದು–ಈ ಕೆರಳಿ ಎದುರಾ ಗಿರುವ ಚತುರಂಗಸೇನೆಯೆಂಬುದು, ಅದಿರದೆ – ಹೆದರದೆ, ಇದಿರ್ಚಿ – ಸಂಘಟ್ಟಿಸಿ, ಇಱಿಯಲ್–ಹೊಡೆದಾಡಲು, ನಿನಗೆ, ಒಡ್ಡಿ–ಚಾಚಿ, ನಿಂದುದು–ಮುಂದೆ ನಿಂತು ಕೊಂಡಿದೆ, ಇದಂ–ಇದನ್ನು, ಕೊಲ್ವೊಡೆ–ಕೊಲ್ಲುವ ಪಕ್ಷದಲ್ಲಿ, ನೀನುಂ–ನೀನುಕೂಡ, ಎನ್ನಕಜ್ಜದೊಳ್–ನನ್ನ ಕಾರ್ಯದಲ್ಲಿ, ಎಸಗು–ಮಾಡು, ಎಂದು, ಸೈತು–ನೇರಾಗಿ, ಅಜಿತಂ–ಶ್ರೀಕೃಷ್ಣನು, ಕದನತ್ರಿಣೇತ್ರನಂ–ಅರ್ಜುನನನ್ನು, ಆದಿಯ ವೇದರಹಸ್ಯ ದೊಳ್–ಪ್ರಾಚೀನವಾದ ವೇದಗಳ ಗೂಢಾರ್ಥದಲ್ಲಿ, ನಿರಂತರ ಪರಿಚರ್ಯೆಯಿಂ– ಸಂತತವಾದ ಸೇವೆಯಿಂದ, ಉಪಾಸನೆಯಿಂದ, ನೆಱಿಯೆ-ಪೂರ್ಣವಾಗಿ, ಯೋಜಿಸಿದಂ- ತೊಡಗಿಸಿದನು, ಪೇರಿಸಿದನು.

ವಚನ : ಪುರಾಣಪುರುಷನಪ್ಪ – ಆದಿಪುರುಷನಾದ ; ರಥಾಂಗಧರನಂ – ಚಕ್ರಪಾಣಿಯನ್ನು, ಶ್ರೀಕೃಷ್ಣನನ್ನು ; ಮೂಱುಸೂೞ್–ಮೂರುಬಾರಿ; ತವದೊಣೆಗಳಂ – ಅಕ್ಷಯವಾದ ಬತ್ತಳಿಕೆಗಳನ್ನು ; ದ್ರೋಣಂಬಾೞ್ಗೆ – ಗುರುಗಳಾದ ದ್ರೋಣರು ಬಾಳಲಿ; ಜೇವೊಡೆದು–ಬಿಲ್ಲಿನ ಹೆದೆಯನ್ನು ಎಳದು ಟಂಕಾರಮಾಡಿ ; ಒಡ್ಡಣದತ್ತ–ಸೇನೆಯತ್ತಕಡೆಗೆ ;

೬೫. ಕುಳಶೈಳೇಂದ್ರಗಳ್–ಕುಲಪರ್ವತಗಳು, ಅಂಭೋನಿಧಿಗಳ್–ಸಮುದ್ರಗಳು, ಅಖಿಳ ದಿಗ್ದಂತಿಗಳ್–ಸಮಸ್ತ ದಿಕ್ಕಿನ ಆನೆಗಳು; ವಿಶ್ವಧಾತ್ರೀವಳಯಂ–ಸಮಗ್ರ ಭೂಮಂಡಲವು, ಪಾತಾಳಮೂಲಂ–ಪಾತಾಳಲೋಕದ ತಳ, ಸಕಲ ಭುವನಂ–ಸಮಸ್ತ ಲೋಕಗಳು, ಒಂದೊಂದಱೊಳ್ – ಒಂದೊಂದರಲ್ಲಿ, ಕೇಣಿಗೊಂಡು – ಸಾಲಾಗಿ, ಉಚ್ಚಳಿಸಲ್ – ಮೇಲಕ್ಕೆ ಚಿಮ್ಮಲು, ಸೂಸಲ್ – ಚೆಲ್ಲಾಡಲು, ಪಳಂಚಲ್–ತಾಗಲು, ಸಿಡಿದು ಒಡೆದ ಆಳಜಲ್–ಸಿಡಿದು ಒಡೆದು ಹೆದರಲು, ಪಾಱಿ ಜೀಱಿಟಲ್–ಹಾರಿ ಜೀರೆಂದು ಶಬ್ದಮಾಡಲು, ಅಂದು–ಆಗ, ಉಮ್ಮಳಿಸುತ್ತೆ–ವ್ಯಾಕುಲಪಡುತ್ತ, ಅತ್ತಿರ್ದರ್–ಅತ್ತಇದ್ದರು(ಇದ್ದವು ಎಂದಿರಬೇಕೇನೊ), ಆವಂ–ಯಾವನು, ಮೀಱಿ – ಉಲ್ಲಂಘಿಸಿ, ಹರಿಗನೊಳ್ – ಅರ್ಜುನನಲ್ಲಿ, ಇದಿರಂ–ಎದುರನ್ನು ಎದುರಾಗಿ, ಮಾಱಾಂಪ ಗಂಡಂ–ಪ್ರತಿಭಟಿಸುವ ಶೂರನು ?

ವಚನ ; ಜಾತ–ಹುಟ್ಟಿದ, ಉತ್ಪಾತವಾತ ನಿರ್ಘಾತ–ಮೇಲಕ್ಕೆ ನೆಗೆದ ಗಾಳಿಯ ಹೊಡೆತದಿಂದ ; ತಳ್ಳಂಕುಗುಟ್ಟುವ – ತುಳುಕಾಡುವ, ಕ್ಷೋಭೆಗೊಳ್ಳುವ ; ಕೆಯ್ವೀಸಿದಾಗಳ್–ಯುದ್ಧಾರಂಭ ಸೂಚನೆಗಾಗಿ ಕೈಗಳನ್ನು ಬೀಸಿದಾಗ.

೬೬. ಪೂರ್ವಾಪರ ಜಲನಿಧಿಗಳ್ – ಪೂರ್ವಪಶ್ಚಿಮ ಸಮುದ್ರಗಳು ; ಅಗುರ್ವಿಸುವಿನಂ–ಭಯವನ್ನುಂಟುಮಾಡುತ್ತಿರಲು, ಒಂದನೊಂದು–ಒಂದನ್ನೊಂದು, ತಾಗುವವೊಲ್–ತಗುಲುವಹಾಗೆ, ಘಟ್ಟಿಸುವಂತೆ, ಅಗುರ್ವು ಉರ್ವಿರೆ–ಭಯವು ಹೆಚ್ಚಿರಲು, ಪರ್ವಿ – ಹಬ್ಬಿ, ಚತುರ್ಬಲಂ – ಚತುರಂಗ ಸೇನೆ, ಏರ್ವೆಸದಿಂದೆ – ಯುದ್ಧೋದ್ಯೋಗದಿಂದ, ಅಂದುಬಂದು–ಆಗ ಎದುರಾಗಿ ಬಂದು, ತಾಗಿತ್ತಾಗಳ್ – ಸಂಘಟ್ಟಿಸಿತು ;

೬೭. ಘಟೆಯ – ಆನೆಗಳ, ದೞದ – ಸೈನ್ಯದ, ಉಲಿವು – ಘೀಂಕಾರಶಬ್ದ, ಲಯಘನಘಟೆಗಳ – ಪ್ರಳಯಕಾಲದ ಮೋಡಗಳ ಸಮೂಹ, ಮೊೞಗೆನಿಸೆ – ಗುಡುಗು ಎನ್ನಿಸಲು, ರಟತ್....ದಿಂದ: ರಟತ್–ಶಬ್ದ ಮಾಡುತ್ತಿರುವ, ಪಟು–ಸಮರ್ಥವಾದ, ಪಟಹ–ತಮ್ಮಟೆಗಳ, ಶಂಖ–ಶಂಖಗಳ, ಭೇರಿಯ–ಭೇರಿಗಳ ಚಟುಳಿತದಿಂದ–ಸ್ಪಂದನದಿಂದ ಎಂದರೆ ಧ್ವನಿಗಳಿಂದ, ಅಟಳ ಪಟಳಂ–ಅತಲವೆಂಬ ಪಾತಾಳದ ಮಾಳಿಗೆಯೂ, ಅಂಬರಪಟಳಂ–ಆಕಾಶದ ಮೇಲ್ಛಾವಣೆಯೂ, ಪೊಟ್ಟಗೆ–ಫಟ್ಟೆಂದು, ಒಡೆದತ್ತು–ಒಡೆಯಿತು, ಸೀಳಿತು. ಇಲ್ಲಿರುವ ಟಕಾರದ ಅನುಪ್ರಾಸ, ನಡೆದ ಕ್ರಿಯೆಯ ಆರ್ಭಟವನ್ನು ಸೂಚಿಸುತ್ತದೆ.

೨೮. ಕರಿತುರಗರಥಪದಾತಿಯ–ಆನೆ ಕುದುರೆ ರಥ ಕಾಲಾಳುಗಳ, ಚರಣಾಸಂಘಾತಜಾತರಜಂ–ಕಾಲ್ತುಳಿತದಿಂದ ಹುಟ್ಟಿದ ಧೂಳು, ಅಜಸ್ರಂ–ಸಂತತವಾಗಿ, ನೆರೆದು–ಸೇರಿ, ಅಂಬರಕ್ಕೆ–ಬಾನಿಗೆ, ಒಗೆಯಲ್–ನೆಗೆಯಲು, ಧರೆ–ನೆಲವು, ಬಳಭರದಿಂ–ಸೇನೆಯ ವೇಗದಿಂದ, ಎಬ್ಬಿ–ಎದ್ದು, ಪಾಱುಪಂತೆ–ಹಾರುವಹಾಗೆ, ಆಗಳ್–ಆಗ, ಆಯ್ತು–ಆಯಿತು.

೨೯. ಸಮರ ರಸ ಪ್ರಿಯರೊಳ್–ಯುದ್ಧ ರಸದಲ್ಲಿ ಆಸಕ್ತಿಯುಳ್ಳವರಲ್ಲಿ, ಸತ್ವಮುಂ–ಶಕ್ತಿಯೂ, ಇಳೆಯೊಳ್–ನೆಲದಲ್ಲಿ, ರಜಮುಂ–ಧೂಳೂ, ಒದವೆ–ಉಂಟಾಗಲು, ರಣಗತ್ತಲೆಯೊಳ್–ಯುದ್ಧದ ಕತ್ತಲೆಯಲ್ಲಿ, ತಮಮುಂ–ಕತ್ತಲೆಯೂ, ಮಿಗೆ–ಹೆಚ್ಚಾಗಲು, ಎರಡುಂ ಪಡೆಯೊಳ್–ಎರಡೂ ಸೈನ್ಯಗಳಲ್ಲಿ, ಸತ್ವರಜಸ್ತಮಂಗಳಂ–ಸತ್ತ್ವರಜಸ್ಸು ತಮಸ್ಸುಗಳೆಂಬ ಮೂರು ಗುಣಗಳನ್ನು, ಕಾಣಲಾದುದು–ಕಾಣಲಾಯಿತು. ಮೊಲಗತ್ತಲೆ, ರಣಗತ್ತಲೆ, ಗೋವಳಗತ್ತಲೆ ತಮಾಲಗತ್ತಲೆ ಎಂಬ ಕೆಲವು 'ಕತ್ತಲೆ'ಗಳು ಹಳಗನ್ನಡ ಕಾವ್ಯಗಳಲ್ಲಿ ಉಕ್ತವಾಗಿವೆ, ಇವುಗಳ ವಿಷಯ ಸ್ಪಷ್ಟವಾಗಿ ತಿಳಿಯದು; ಯುದ್ಧ ಭೂಮಿಯಲ್ಲಿ ಎದ್ದ ಧೂಳು ಎತ್ತಿದ ಪತಾಕೆಗಳ ಛತ್ರಿಗಳ ನೆರಳು–ಇವುಗಳಿಂದ ಆದ ಒಂದು ತೆರದ ಕತ್ತಲೆಗೆ ರಣಗತ್ತಲೆಯೆಂದು ಹೆಸರಿರಬಹುದು.

೩೦. ಪಡೆಯ ಪೊಜಿಗೆ–ಸೇನೆಯ ಭಾರಕ್ಕೆ, ಶೇಷಂ–ಆದಿಶೇಷನು, ಅಗಿದು–ಹೆದರಿ, ಪೆಡೆಗಳಂ–ಹೆಡೆಗಳನ್ನು, ಉಡುಗುವುದುಂ–ಕುಗ್ಗಿಸಿಕೊಳ್ಳುತ್ತಲು, ಅಡಿಗಿಡೆ–ತಳವು ಕೆಡಲು, ಕೂರ್ಮನ–ಭೂಮಿಯನ್ನು ಹೊತ್ತಿರುವ ಆಮೆಯ, ಬೆನ್–ಬೆನ್ನು, ಅಂದು–ಆಗ, ನುಚ್ಚುನೂಱಪ್ಪಿನೆಗಂ–ನುಗ್ಗುನುರಿಯಾಗುತ್ತಿರಲು, ಒಡನೆ–ಕೂಡಲೇ, ಒಡೆದು, ಸಿಡಿಲ್ದು–ಸಿಡಿದು, ಎಳೆ–ಭೂಮಿ, ಬೊದಿಲ್ಲನೆ–ಬೊದಿಲ್ ಎಂದು, ಬಿಟ್ಟಿತ್ತು–ಬಿತ್ತು; "ಉಡುಗು–ಸಂಕೋಚೇ".

**ವಚನ:** ಅಂಬರಂಬರಂ–ಆಕಾಶದವರೆಗೆ; ಮಾರ್ಬಲಮಂ–ಎದುರು ಸೈನ್ಯವನ್ನು; ಸಮಕಟ್ಟುಗೆಟ್ಟು–ವ್ಯವಸ್ಥೆ ತಪ್ಪಿಹೋಗಿ; ತಟ್ಟುಪೊಟ್ಟೆಂದು–ಘಟ್ ಘಟ್ಟೆಂದು, ತಱಿದು–ಕತ್ತರಿಸಿ; ಘಟ್ಟಿಸೆಯುಂ–ಹೊಡೆಯುತ್ತಲು; ಆಂಕೆಗೊಂಡು–ಎದುರಿಸಿ, ಸರಿಯೊಳಂ–ಮಳೆಯಲ್ಲೂ; ಅಂಬಿರಿವಿಟ್ಟುಪಾಯ್ವ–ಪ್ರವಾಹವಾಗಿ ಹರಿಯುವ; ಕಳಕಳಕ್ಕೆ–ಗದ್ದಲಕ್ಕೆ; ಪಱಿಯೆ (=ಪರಿಯೆ)–ಓಡಲು; ಘಟ್ಟಿಸಿದ–ಬಲವಾಗಿ ತಾಗಿದ; ಕೀಱ–ಕಡಿವಾಣದ; ಘಟ್ಟಣೆಯೊಳ್–ಹೊಡೆತದಲ್ಲಿ; ಪೊಟ್ಟಗೊಡೆದ–ಘಟ್ಟೆಂದು ಸೀಳಿದ; ತಾಳುಗೆಗಳ–ನಾಲಗೆಗಳ; ರುಧಿರಜಲದೊಳ್–ರಕ್ತದ ನೀರಿನಲ್ಲಿ; ಪದಗೆಂಪನಾಳ್ದ–ಹದವಾದ ಕೆಂಬಣ್ಣವನ್ನು ತಾಳಿದ; ಜಾತ್ಯಶ್ವದ–ಜಾತಿ ಕುದುರೆಗಳ; ಲಾಳಾಜಲದೊಳಂ–ಜೊಲ್ಲುನೀರಿನಲ್ಲಿಯೂ; ಮೊದಲ್ ಮೂಲಂಗಿಡೆಯುಂ–ಮೊದಲು ಬೇರು ಹಾಳಾಗಲು ಎಂದರೆ ಧೂಳಿಗೆ ಮೂಲವಾದ ನೆಲ ಒದ್ದೆಯಾದ್ದರಿಂದ ಧೂಳೇಳುವುದು ನಿಂತು ಹೋಗಲು;

ತಿಱಿದಿಕ್ಕಿದಂತೆ–ಕತ್ತರಿಸಿ ಹಾಕಿದಹಾಗೆ; ಪಱಿಂದುರುಳ್ದೊಡೆ–ಛೇದಿಸಿ ಉರುಳಿದರೆ; ಪೋಟ್ಗಳೊಳಗಣಿಂದಂ–ಪೊಟ್ಟರೆಗಳ ಒಳಗಿನಿಂದ; ಒಗೆದ–ಹುಟ್ಟಿದ, ಕೇಸುರಿಗಳ್–ಕೆಂಪಾದ ಉರಿಗಳ; ಬಳಗದಂತೆ–ಸಮೂಹದಂತೆ; ಅಟ್ಟೆಗಳಿಂಪಂ–ಮುಂಡಗಳಿಂದ; ಅಂಬರಂಬರಂ – ಆಕಾಶದವರೆಗೂ; ಸುಟ್ಟುರೆಗಳಿಂದಂ – ಸುಂಟರಗಾಳಿಯಿಂದಲೂ; ಮಸುಳನಾಗೆ–ಮಾಸಲು; ದೆಸೆಯಱಿದು–ದಿಕ್ಕನ್ನು ತಿಳಿದು; ಮಾರ್ವಲಮುಮಂ–ಎದುರು ಸೈನ್ಯವನ್ನೂ; ನವರುಧಿರಜಳ–ಹೊಸದಾದ ರಕ್ತವೆಂಬ ನೀರಿನ; ಚಳತ್ ಸೇಚನದೊಳ್–ಬಾರಿ ಬಾರಿಗೆ ಒದ್ದೆಯಾಗುವಿಕೆಯಲ್ಲಿ: ಘಟ್ಟಿಸಿ–ದಮ್ಮಸ್ಸು ಮಾಡಿ; ಸಿಂದುರದೊಳ್ – ಕೆಂಪುಕಾವಿಕಲ್ಲಿನಲ್ಲಿ; ನೆಲಗಟ್ಟಿಸಿದಂತಿರ್ದ – ನೆಲಕ್ಕೆ ಹಾಸಿದಂತಿದ್ದ; ಬಿಲ್ಗಾಳೆಗಂ–ಬಿಲ್ಲಿನ ಯುದ್ಧವನ್ನು.

೭೧. ಪಿಡಿಕೆಯ್–ಕೈಯ ಮುಷ್ಟಿಯು, ತೀವಿದ–ತುಂಬಿದ, ಕೂರ್ಗಣೆ–ಹರಿತವಾದ ಬಾಣ; ಮಡಕಾಲ್ವರಂ–ಕಾಲಿನ ಹರಡಿನವರೆಗೂ, ಅಲಿವ–ಇಳಬಿದ್ದು ಅಲುಗಾಡುವ, ಕಚ್ಚೆ–ವೀರಕಚ್ಚೆಯು; ನಿಡಿಯ ಅಸಿಯ ಒಱೆ–ಉದ್ದವಾದ ಕತ್ತಿಯ ಒರೆ, ಕರ್ಪಿಡಿದ–ಕಪ್ಪು ಬಣ್ಣ ತುಂಬಿದ, ಪಣೆಗಟ್ಟು–ಹಣೆಯಕಟ್ಟು, ಕೆಯ್ಪೊಡೆ –ಕೈಚೀಲ–ಇವು, ಬೆಡಂಗನೊಳಕೊಳೆ–ಬೆಡಗನ್ನು ಹೊಂದಿರಲು, ಧನುರ್ಧರರ್–ಬಿಲ್ಗಾರರು, ಪೆಣೆದು–ಹೆಣೆದುಕೊಂಡು, ಎಚ್ಚರ್–ಬಾಣಗಳನ್ನು ಬಿಟ್ಟರು ಈ ಪದ್ಯದಲ್ಲಿ ಬಿಲ್ಲಾಳುಗಳ ವೇಷ ಚೆನ್ನಾಗಿ ಚಿತ್ರಿತವಾಗಿದೆ.

೭೨. ಶರಸಂಧಾನಂ–ಬಾಣವನ್ನು ಹೂಡುವುದು, ನಿಟ್ಟಿಸಲ್–ನೋಡಲು, ಅರಿದು ಎಂಬಿನಂ–ಅಸಾಧ್ಯವೆನ್ನಲು (ಎಂದರೆ ಅಷ್ಟು ವೇಗವಾಗಿ ಬಾಣಗಳ ಹೂಡಿಕೆ ನಡೆಯುತ್ತಿತ್ತು); ಎರಡು ಬಲದ–ಸೇನೆಯ, ಕಡುವಿಲ್ಲರ್–ವೇಗಶಾಲಿಗಳಾದ ಬಿಲ್ಗಾರರು, ಭೋರ್ಗರೆದು–ಭೋರೆಂದು ಶಬ್ದಮಾಡಿ, ಇಸೆ–ಪ್ರಯೋಗಿಸಲು, ಕೂರ್ಗಣೆಯೊಳ್ – ಹರಿತವಾದ ಬಾಣಗಳಲ್ಲಿ, ಗಗನಮಂಡಳವೆಲ್ಲಂ – ಆಕಾಶ ಮಂಡಲವೆಲ್ಲ, ಪಂದರ್ ಇಕ್ಕಿದಂತಾಯ್ತು–ಚಪ್ಪರ ಹಾಕಿದ ಹಾಗಾಯಿತು. ಕಡುವಿಲ್ಲರ್—ಕಡಿದು + ಬಿಲ್ಲರ್; ಪಂದರ್ = (ತ)ಪಂದರ್, ಇದರಿಂದ ಇಂಗ್ಲಿಷ್ Pandal ಬಂದಿದೆ.

೭೩. ಗಱಿ ಸನ್ನೆಗೆಯ್ದು–ಬಾಣಕ್ಕೆ ಕಟ್ಟಿರುವ ಗರಿಗಳಿಂದ ಸಂಜ್ಞೆಮಾಡಿ, ತೆಗೆನೆಱೆದು–ಕಿವಿಯವರೆಗೂ ಎಳೆದು, ಎಱಗಿ–ಬಾಗಿ, ಪರಂಕಲಿಸಿ–ವಿಸ್ತಾರವಾಗಿ ಹರಡಿ, ಪರ್ವಿ–ಹಬ್ಬಿ, ಕೂಕಿಱಿದು–ಮೇಲಕ್ಕೆ ನೆಗೆದು, ಇಸೆ–ಬಾಣವನ್ನು ಬಿಡಲು, ಕೆಂಗಱಿಯ–ಕೆಂಪಾದ ಗರಿಗಳನ್ನುಳ್ಳ, ಮೊನೆಯಂಬುಗಳ್–ಹರಿತವಾದ ಬಾಣಗಳು, ಪೊಣರ್ವ–ಹೋರಾಡುವ; ಬಿಲ್ಲ–ಬಿಲ್ಲಿನ, ಕಡುವಿತ್ತೆಗರಂ–ಅತಿಶಯವಾದ ಪ್ರೌಢಿಮೆ ಯುಳ್ಳವರನ್ನು, ಕಣ್ದೆಱೆಯಿಸಿದುವು – ಕಣ್ಣು ತೆರೆಯುವಂತೆ ಮಾಡಿದುವು. "ತೆಗೆನೆಱೆ–ಆಕರ್ಣಾಂತೇ"; ಪರಂಕಲಿಸು–ಪರಕಲಿಸು; ಇದರ ಅರ್ಥ ಅನಿರ್ದಿಷ್ಟ; ಕೂಕಿಱಿ < ಕೂಂಕು – ಉತ್ಸರ್ಪಣೇ + ಇಱಿ; ಕೂಂಕು ಎಂಬುದಕ್ಕೆ ತುರುಕು,

ತಳ್ಳು ಎಂಬರ್ಥವೂ ಇರುತ್ತದೆ, "ನಕ್ತಂಚರೀಮುಖದೊಳ್ ಕೂಂಕುವ ಪ್ರಾಂತರಂ ದಶಮುಖೋತ್ಪಾತಾಸಿಧಾರಾಮುಖಂ" ಎಂಬ ಪ್ರಯೋಗವಿದೆ (ಪಂಪರಾ. ೧೦-೨೩); ಕೂಕು, ಕೂಂಕು(ತೆ) – ಗಟ್ಟಿಯಾಗಿ ಕೂಗು, ಗರ್ಜಿಸು ಎಂದೂ ಆಗುತ್ತದೆ. "ಬಿತ್ತಿಗನೆಂದು ಪ್ರೌಢಂ", ಕಡಿದು + ಬಿತ್ತಿಗ > ಕಡುವಿತ್ತಿಗ.

೭೪. ಅರಿವ – ಕತ್ತರಿಸುವ, ನಡುವ–ನಾಟುವ, ಉಡಿವ – ಮುರಿಯುವ, ನೇರ್ಗೋಲ್ಪರಿದು – ನೇರಾಗಿ ಬಾಣ ಹಾರಿಬಂದು, ಉರ್ಚುವ – ಸೀಳುವ, ನಟ್ಟು ತೊನೆವ–ನಾಟಿಕೊಂಡು ತೂಗಾಡುವ, ಕಣೆಗಳ್ಗೆ–ಬಾಣಗಳಿಗೆ, ಮೊಗಂದಿರಿಯದೆ–ಮುಖವನ್ನು ತಿರುಗಿಸದೆ, ಇದಿರಿದಿರಂ–ಸಮ್ಮುಖವಾಗಿ, ಅದಿರದೆ–ನಡುಗದೆ, ಹೆದರದೆ; ಸುರಿಗಿಱಿವಂತೆ–ಕತ್ತಿಯಿಂದ ಹೊಡೆದ ಹಾಗೆ, ಅಂಬನಂಬು–ಬಾಣವನ್ನು ಬಾಣ, ಅಟ್ಟುವಿನಂ – ಅಟ್ಟಿಸಿಕೊಂಡು ಬರುತ್ತಿರಲು, ಎಚ್ಚರ್ – ಬಾಣ ಪ್ರಯೋಗ ಮಾಡಿದರು.

೭೫. ಪಿಡಿಕೆಯ್ಯ – ಕೈಯ ಹಿಡಿಯ, ದೊಣೆಯ – ಬತ್ತಳಿಕೆಯ, ಪೊದೆಯಂಬು–ಹೊದರಿನಂತಿರುವ ಎಂದರೆ ಗುಂಪಾದ ಬಾಣಗಳು, ಇಡೆ ಮುಡಿವಿನಂ–ಪ್ರಯೋಗಿಸಿ ಮುಗಿಯುತ್ತಿರಲು, ಎಚ್ಚು – ಪ್ರಯೋಗಮಾಡಿ, ಸುರಿಗೆಗಿಱ್ತು–ಕತ್ತಿಯನ್ನು ಸೆಳೆದುಕೊಂಡು, ಅದಿರದೆ – ಹೆದರದೆ, ಇದಿರಂ – ಇದಿರಾದವರನ್ನು, ಪಡೆ–ಸೈನ್ಯ, ಪೆಣೆದು – ಹೆಣೆದುಕೊಂಡು ಎಂದರೆ ಸೇರಿ, ಇಱಿದುಂ – ಹೊಡೆದೂ, ಬಿಲ್ಪಡೆ–ಬಿಲ್ಲಿನ ಸೇನೆ, ಭೋರ್ಗರೆದು–ಭೋರೆಂದು ಶಬ್ದಮಾಡಿ, ಪರಿವ–ಹರಿಯುವ, ನೆತ್ತರಕಡಲಂ–ರಕ್ತದ ಸಮುದ್ರವನ್ನು, ಪಡೆದುದು–ಉಂಟುಮಾಡಿತು

ಈ ಮೇಲಿನ ಮೂರು ಕಂದಗಳಲ್ಲಿ ಕಾಣುವ ಶುದ್ಧದೇಸಿ ಶೈಲಿಯ ಕೆಚ್ಚು ಆಕರ್ಷಕವಾಗಿದೆ.

**ವಚನ:** ಧನುರ್ಧರರ ಬಲಂಗಳುಂ – ಬಿಲ್ಗಾರರ ಸೈನ್ಯಗಳೂ; ಅೞ್ಗಿ ಮುೞ್ಗಿದಾಗಳ್ – ನಾಶವಾದಾಗ; "ಅೞ್ಗು – ಲಯೇ ಕ್ಷೀಣತ್ವೇ"; ಮುೞ್ಗು = (ತ) ಮುೞುಕು–ನಾಶವಾಗು.

೭೬. ತೊಳಗುವ–ಹೊಳೆಯುವ, ಬಾಳ್–ಕತ್ತಿ; ತಳತ್ತಳಿಪ ಕಕ್ಕಡೆ–ಥಳಥಳಿಸುವ ಕಕ್ಕಡೆಯೆಂಬ ಆಯುಧ: ಬುಂಭುಕದೊಳ್ – ಕುಚ್ಚುಗಳಲ್ಲಿ (?), ತಗುಳ್ದು – ಸೇರಿ, ಪಜ್ಜಳಿಸುವ – ಪ್ರಜ್ವಲಿಸುವ, ಪಂಚರಾಯುಧಂ – ಪಂಚರ ಎಂಬ ಆಯುಧ; ಅಗುರ್ವಿಸುವ – ಹೆದರಿಸುವ, ಆವುತಿ – ಆವುತಿಯೆಂಬ ಆಯುಧ; ಪೂಸಿದಂತೆ–ಬಳಿದಹಾಗೆ, ಇಟ್ಟಳಂ–ಒತ್ತಾಗಿ, ಅಮರ್ದಿರ್ದ–ಸೇರಿದ್ದ, ಮಾಳಜಿಗೆ–ಮಾಳಜಿಗೆಯೆಂಬ ಆಯುಧ, ಪಕ್ಕರೆಯಿಕ್ಕಿದ–ಜೂಲನ್ನು ಹಾಕಿದ, ಜಾಯಿಲಂ–ಜಾತಿ ಕುದುರೆಗಳು; ಭಯಂಗೊಳಿಸೆ – ಭಯಪಡಿಸಲು, ಕಡಂಗಿ – ಉತ್ಸಾಹಿಸಿ, ತುಂಗ ತುರಂಗ ಸಾಧನಂ – ಎತ್ತರವಾದ ಕುದುರೆಗಳ ಸೈನ್ಯ; ಅಸುಂಗೊಳೆ–ಪ್ರಾಣಾಪಹಾರ ಮಾಡಲು, ತಾಗಿದುದು–ಸಂಘಟ್ಟಿಸಿತು, ತಾಗಿತು.

ವಚನ : ಕಾಟ್ಟಿಕ್ಕರ್ಚಿನ ಬೇಗೆ – ಕಾಡುಗಿಚ್ಚಿನ ಶಾಖ; ಸಾರ್ವಂತೆ – ಬರುವ ಹಾಗೆ, ಸಮೀಪಿಸುವಂತೆ, ಇರ್ವಲದ–ಎರಡು ಸೈನ್ಯಗಳ, ಅಳವುಂ–ಪರಾಕ್ರಮವೂ ; ಕಿಚ್ಚುಗಿಂ ಕಿಡಿಯುವಾಗಿ–ಕಿಚ್ಚು ಕಿಡಿಯಾಗಿ ದಳ್ಳಿಸಿ ;

೭೭. ಈ ಪದ್ಯದ ತುಂಬ ಯುದ್ಧದ ಪರಿಭಾಷೆಯ ದೇಶೀ ಶಬ್ದಗಳು ತುಂಬಿವೆ ; ಅವಕ್ಕೆ ಅರ್ಥ ಅಸ್ಪಷ್ಟ ; ಪಸುಗೆ–ವಿಭಾಗ, ಸೆಲಂ–ಸೆಲವು, ಜಲಂ–ಜಲವು, ಹಯದ–ಕುದುರೆಯ, ಒಡಂಬಡಂ–ಒಪ್ಪಿಗೆ, ವಂಚನೆ–ಮೋಸ, ಕೇಣಂ–ಮಾತ್ಸರ್ಯ, ಆಸನಂ–ಔದಾಸೀನ್ಯ, ಕೊಸೆ–ವಾಹನವನ್ನು ಹತ್ತುವುದು, ದೆಸೆ–ದಿಸೆಯು, ದಿಟ್ಟೆ–ದೃಷ್ಟಿ, ಮುಟ್ಟೆ–ಮುಷ್ಟಿ ; ಕೆಲಜಂಕೆ–ಮಗ್ಗುಲನ್ನು ಹೆದರಿಸುವುದು. ನಿವರ್ತನೆ–ಮರಳುವುದು. ಕಾಣ್ಕೆ–ನೋಡುವುದು–ಇವೆಲ್ಲ, ಪರ್ವಿದ–ವಿಸ್ತಾರವಾದ, ಏರ್ವೆಸನದೊಳ್–ಯುದ್ಧಕಾರ್ಯದಲ್ಲಿ, ಆದ–ಉಂಟಾದ, ಬಲ್ಮೆಯೊಳ್ – ಅರಿವಿನಲ್ಲಿ, ಒಡಂಬಡೆ–ಒಪ್ಪಲು. ತಳ್ತಿಱಿವಲ್ಲಿ – ತಾಗಿಹೊಯ್ದಾಡುವಾಗ, ಸಮರಾಂಗಣಂ–ಯುದ್ಧರಂಗವು, ಉಳ್ಕುವ–ಪ್ರಕಾಶಿಸುವ, ಬಾಳ್ಗಳ–ಕತ್ತಿಗಳ, ಉಳ್ಕದಿಂ–ದೀಪ್ತಿಯಿಂದ, ಕಾಂತಿಯಿಂದ, ಮಿಂಚಿನೊಳ್ – ಮಿಂಚಿನಲ್ಲಿ. ಮುಸುಕಿದ – ಮುಚ್ಚಿದ, ಮಾೞ್ಕೆಯಾಯ್ತು–ರೀತಿಯಾಯಿತು. ''ಕೊಸೆ–ನಿಧುವನಕರಣೇ, ವಾಹಾರೋಹ ಭೇದೇಚ'' ; ತೇರಂ ಕೊಸೆಗೊಂಡು ಚಕ್ರಿಯಂ ಬಿನ್ನವಿಕುಂ ಎಂದು ಪಂಪನ ಇನ್ನೊಂದು ಪ್ರಯೋಗವಿದೆ (ಆದಿಪು. ೧೧–೫೭) ; ಕಾಣ್ಕೆ ; ಕಾಣ್ಕೆ ಕಾಣ್ಕೆಯುಂ ಗೆಲೆ (ಗದಾ. ೮–೨೩).

೭೮. ಕರ ಕರವಾಳ ಘಾತದೊಳ್–ಕೈಗತ್ತಿಯ ಏಟಿನಿಂದ, ಆರಾತಿಯ–ಹಗೆಯ, ಪಂದಲೆ–(ಆಗತಾನೆ ಕತ್ತರಿಸಿದ) ಹಸಿತಲೆಯು ; ಪಂಚರಾಯುಧಂ ಬೆರಸು–ಪಂಚರ ಎಂಬ ಆಯುಧ ಸಮೇತವಾಗಿ ; ಎಸೆವ ಅಟ್ಟೆ–ಪ್ರಕಾಶಿಸುವ ಮುಂಡವು, ತೊಟ್ಟಕವಚಂ ಬೆರಸು–ಧರಿಸಿದ ಕವಚದ ಸಮೇತವಾಗಿ, ಏಱಿದ ವಾಜಿ–ಹತ್ತಿದ ಕುದುರೆ, ಲೋಹವಕ್ಕರೆವೆರಸು–ಕಬ್ಬಿಣದ ಗುಳ ಸಮೇತವಾಗಿ, ಒಂದೆ ಸೂೞ್ಪೊಳೆ–ಒಂದೇ ಬಾರಿಯಲ್ಲೇ, ಪಡಲ್ವಡೆ–ಕೆದರಿ ಬೀಳಲು, ದೋರ್ವಲದ – ಭುಜಬಲದ, ಉರ್ವು – ಉಬ್ಬು, ಆಧಿಕ್ಯ, ಬೀರದೊಳ್ – ಶೌರ್ಯದಲ್ಲಿ, ಪೊರೆದಿರೆ – ವ್ಯಾಪಿಸಿರಲು, ಕೂಡಿರಲು, ಬಿನ್ನಣಂ–ಪ್ರೌಢಿಮೆ, ಪಟ್ಟುಗಳು, ನೆಗೞೆ–ಉಂಟಾಗಲು ಕೆಲರ್–ಕೆಲವರು ಯೋಧರು, ಆಜಿರಂಗದೊಳ್ – ಕಾಳಗದ ಕಳದಲ್ಲಿ, ತಳ್ತಿಱಿದರ್ – ಬೆರಸಿ ಹೊಯ್ದಾಡಿದರು. ಬಿನ್ನಣ>(ಸಂ) ವಿಜ್ಞಾನ, ಪಾದಮೋಟನವೇ ಮುಂತಾದ ಕುಸ್ತಿಯ ಪಟ್ಟುಗಳು ; ನೆಲಸಿದ ಬಿನ್ನಣಂ ಸೆಣಸಿ ಬಿನ್ನಣಮುಂ ಗೆಲೆ (ಗದಾ. ೮–೨೩) ಮಲ್ಲಯುದ್ಧದ ವಿಶೇಷ ವರಿಸೆಗಳಿಗೆ ವಿಜ್ಞಾನವೆಂದು ಹೆಸರು.

೭೯. ಪಿಡಿದು ಉದಿರ್ವ—ಎಡೆಬಿಡದೆ ಉದುರುತ್ತಿರುವ ಎಂದರೆ ಸುರಿಯುತ್ತಿರುವ, ಬಾಳಕಿಡಿಗಳಿಂ–ಕತ್ತಿಯ ಕಿಡಿಗಳಿಂದ, ಒಡನೊಡನೆ–ಕೂಡಲೇ, ಅರೆವೊತ್ತಿ–ಅರ್ಧಹತ್ತಿಕೊಂಡು, ತೊಟ್ಟ–ಧರಿಸಿದ, ಸನ್ನಣಂ–ಕವಚವು, ಉರಿಯಲ್ಕೆ–ಉರಿಯು

ವುದಕ್ಕೆ, ಒಡರಿಸಿದೊಡೆ–ತೊಡಗಿದರೆ, ಆವಜಿ–ಆ ಕವಚಗಳ, ಪರ್ವಂ–ಜೋಡಣೆ ಗಳನ್ನು, ಬಿಡೆಯರಿದು – ಬಿರಿಯುವಂತೆ ಕತ್ತರಿಸಿ, ಅರಿಸಮಿತಿಯೊಡನೆ – ಶತ್ರು ಸಮೂಹದೊಡನೆ, ಅರೆಬರ್–ಕೆಲವರು, ಕಾದಿದರ್–ಯುದ್ಧಮಾಡಿದರು.

೮೦. ಭುಗಭುಗನೆ – ಭುಗ್ ಭುಗ್ ಎಂದು, ಉರ್ಚಿ – ಭೇದಿಸಿಕೊಂಡು, ಪಾಯ್ವ–ನುಗ್ಗುವ, ಬಿಸುನೆತ್ತರ–ಬಿಸಿರಕ್ತದ, ಸುಟ್ಟುರೆಯಂ–ಸುಳಿಯನ್ನು, ನೆಲಕ್ಕೆ–ಭೂಮಿಗೆ, ಪರ್ದುಗಳ್–ಹದ್ದುಗಳು, ಉಗಲೀಯದೆ–ಸುರಿಯಲು ಬಿಡದೆ, ಅಪ್ಪಳಿಸಿ–ಮೇಲೆ ಹಾಯ್ದು, ಪೀರ್ವಿನಂ–ಹೀರುತ್ತಿರಲು, ಒರ್ಮೆಯೆ–ಒಂದೇ ಸಲಕ್ಕೆ, ಪೊಯ್ವ ಪೊಯ್ಗಳಿಂ – ಹೊಡೆವ ಹೊಡೆತದಿಂದ, ತಲೆಗಳ್ – ತಲೆಗಳು, ನೆಗೆದು – ಹಾರಿ, ಮುಗಿಲ್ಗಳ ಇಟ್ಟೆಡೆಗಳೊಳ್–ಮೋಡಗಳ ಇಕ್ಕಟ್ಟಾದ ಸಂದುಗಳಲ್ಲಿ, ತೊಡರ್ದಿರ್ದ–ಸಿಕ್ಕಿಕೊಂಡಿದ್ದ, ಜೇನಪುಟ್ಟಿಗಳನೆ – ಜೇನಿನ ಹಲ್ಲೆಗಳನ್ನೇ, ಏಂ ಪೋಲ್ತುವೋ–ಏನು ಹೋಲಿದುವೋ ! ತುರಂಗ ಸೈನ್ಯದೊಳ್–ಕುದುರೆ ಸೈನ್ಯದಲ್ಲಿ, ಕಲಹ–ಕಾಳಗ, ಏಂ ಅಚ್ಚರಿಯಾಯ್ತೊ–ಏನು ಆಶ್ಚರ್ಯವಾಯಿತೋ ! ಸುಟ್ಟುರೆ ಶಬ್ದಕ್ಕೆ ಸಾಧಾರಣ ವಾಗಿ ಸುಂಟರಗಾಳಿ ಎಂಬ ಅರ್ಥವುಂಟು ; ಆದರೆ ಇಲ್ಲಿಯೂ ಇತರ ಪ್ರಯೋಗ ಗಳಲ್ಲಿಯೂ ಈ ಅರ್ಥ ಹೊಂದುವುದಿಲ್ಲ ; ನೆಗೆದ ನೆತ್ತರ ಸುಟ್ಟುರೆ ಕಂಡದಿಂಡೆಗಳ್ (ಪಂಪಭಾ. ೧೧–೮೯), ಪಂದಲೆಪಾಱಿ ಪುಟ್ಟಿ ಬಿಸುನೆತ್ತರ ಸುಟ್ಟುರೆ (ಪಂಪರಾ. ೪–೬೦), ಪಱಿದ ತಲೆ ನೆತ್ತರ ಸುಟ್ಟುರೆ ಕಂಡದಿಂಡೆ (ಪಂಪರಾ. ೧೪–೭) ; ಇದಕ್ಕೆ ಸಂವಾದಿಯಾದ ತಮಿಳು ಶಬ್ದ ಶುಟಲ್‌ಕ್ಕಾಱ್ಱು ; ಇಲ್ಲಿರುವ ಶುಟಲ್‌ಗೆ, ಸುಳಿ, ಸುಳಿನೀರ್ ಎಂಬರ್ಥವಿರುವುದರಿಂದ ಅದನ್ನು ಇಲ್ಲಿ ಹೇಳಿದೆ ; ಸುಟ್ಟುರೆ=ಪ್ರವಾಹ (ಪಂಪ ಭಾ. ಕೋ) ಎಂದು ಇದೆ,

**ವಚನ** : ದೞಂಗಳ್ – ಸಾಮಾನ್ಯ ಸೈನ್ಯಗಳು ; ಕಿಱಿದಾನುಂ ಬೇಗಂ–ಸ್ವಲ್ಪ ಹೊತ್ತು ; ತಟ್ಟುಪೊಟ್ಟೆಂದು–ಥಟ್ ಫಟ್ ಎಂದು ; ಕೋಲ್ಗುಟ್ಟಿ – ಬಾಣ ಗಳಿಂದ ಹೊಡೆದು ; ಕುದುರೆಯಟ್ಟೆಯುಂ–ಕುದುರೆಗಳ ಅಟ್ಟೆಯೂ, ಇಲ್ಲಿ ಏನೋ ಕ್ಲೇಶವಿದೆ. ಅಟ್ಟೆಯಿನ್ ಎಂದು (ಪ) ಸೂಚನೆ ; ಎಂದರೆ ಅಟ್ಟೆಗಳಿಂದ ಎಂದಾಗು ತ್ತದೆ ; ಅಟ್ಟೆಯುಂ–ಅಟ್ಟೆಯೂ ; ಬಸಮಱಿದು–ಸ್ವಾಧೀನ ತಪ್ಪಿ ; ಪೆಱಪಿಂಗಿ–ಹಿಮ್ಮೆಟ್ಟಿ ; ಅನುವಿಸಿದಂತಾನುಂ–ಮೇಳೈಸಿದ ಹಾಗೂ, ಗೊಂದಣಿಸಿ–ಗುಂಪಾಗಿ ; ಅಣಿಯಂ–ಸೇನೆಯ ಸಾಲನ್ನು ; ಕಡಿತಲೆಯ–ಕತ್ತಿಯ : ಬಳ್ಳಗೆಡೆದು–ನರಿಯಂತೆ ಕೂಗಿ ; ಎಕ್ಕವಾಜವಾಜಿ–ಒಂದೆ ಹಾರನ್ನು ಹಾರಿ ; ಪಲಗೆ ವಾ [ರಿಗಳ್ಕುರುಳ್ಚಿ]–ಗುರಾಣಿಗಳನ್ನೂ ಕತ್ತಿಗಳನ್ನೂ ಝಳಪಿಸಿ ; ಮಾರ್ಕೊಂಡು–ಪ್ರತಿಭಟಿಸಿ, ಕಾದೆ–ಯುದ್ಧಮಾಡಲು ; ವಾರಿ ಎಂಬುದು ತರವಾರಿ=ಕತ್ತಿ ಎಂಬುದರ ಸಂಕ್ಷಿಪ್ತ ರೂಪವಿರಬಹುದು ; ವಾರಿಯ ಬೀರರ್ ಪಾಳಿಯೊಳೆಸೆದರ್ ಎಂದು ಜನ್ನನ ಪ್ರಯೋಗ (ಯಶೋಚ) ; “ ಕುರುಳ್ಚು–ಶಸ್ತ್ರ ಸಂಚಾಳನೆ.”.

೮೧. ಈ ಪದ್ಯದಲ್ಲಿ ಕತ್ತಿಗಾಳಗದ ಕೆಲವು ಪರಿಭಾಷಾ ದೇಶೀಶಬ್ದಗಳಿವೆ; ಅವಕ್ಕೆ ಅರ್ಥ ತಿಳಿಯದು; ಪುಸಿ – ಸುಳ್ಳು, ನಸುವಂಚನೆ – ಸ್ವಲ್ಪ ಮೋಸ, ನೋರ್ಪು–?, ಅಥವಾ ನೋರ್ಪ+ಅನುವು, ನೋಡುವ ರೀತಿ: ಅಸಿದು–ಕೃಶ, ಅಗಲಿತು–ವಿಸ್ತಾರ, ತಕ್ಕು–ಯೋಗ್ಯತೆ, ದಕ್ಕು–ಮುಳ್ಳಿನಂಥ ಕತ್ತಿ, ಪಗೆ–ದ್ವೇಷ, ಕೆಯ್ಬಗೆ – ಕೈಸಂಚಾಲನದ ವಿವಿಧರೀತಿ. ಕೆಯ್ಕುಸುರಿ – ಕೈಯ ಸೂಕ್ಷ್ಮಕಾರ್ಯ; ನುಸುಳ್–ನುಸುಳಿ ಹೋಗುವುದು, ಎಂಬ – ಎನ್ನುವ, ಕೇಣದ ಕುಸುರಿಯಂ– ಮಾತ್ಸರ್ಯದ ಸೂಕ್ಷ್ಮತೆಯನ್ನು, ಅಱಿದು–ತಿಳಿದು, ಇಱಿದು–ಹೊಡೆದು, ಪೆಱಿದು– ಸಮರ್ಥರಾಗಿ, ಉಱದೆ–ಬಿಡದೆ, ಅರೆಬರ್–ಕೆಲವರು, ಇಱಿದರ್–ಹೊಯ್ದರು, ಪದ್ಯದ ತಾತ್ಪರ್ಯ ದುರವಗಾಹ.

೮೨. ಬಱಿಸಿಡಿಲೆಱಪಂತಿರೆ – ಬರಸಿಡಿಲು ಮೇಲ್ಬೀಳುವಂತೆ, ಬಂದು, ಎಱಗಿದರಂ–ಮೇಲೆ ಬಿದ್ದವರನ್ನು, ತಳ್ತು–ಸಂಧಿಸಿ, ಬಾಳ–ಕತ್ತಿಯ, ಕಿಱುತ್ಮೊನೆಯಿಂ– ಕೆಳತುದಿಯಿಂದ, ತತ್ತಱದಱಿದು–ತರಿದು ತರಿದು, ಕತ್ತರಿಸಿ; ಉಬ್ಬರವೆಂಬಿವ ನಱಿದು–ಉಬ್ಬರ (?) ಎಂಬಿವನ್ನು ತಿಳಿದು, ಪೆಣಬಣಂಬೆಗಳ್–ಹೆಣದ ರಾಶಿಗಳು; ನೆಗೆವಿನೆಗಂ – ಉಂಟಾಗುತ್ತಿರಲು, ನೆಗೞ್ವಿನೆಗಂ ಎಂದಿರಬಹುದೆ? ಇಱಿದರ್– ಹೊಯ್ದಾಡಿದರು, ಈ ಪದ್ಯದಲ್ಲಿ ಕೆಲವು ಪಾಠಸಂಕಷ್ಟಗಳಿವೆ; ಸದ್ಯಕ್ಕೆ ಅವು ಅಪರಿಹಾರ್ಯ.

೮೩. ಬಾಳಾಗಮಂ-ಕತ್ತಿಯ ಶಾಸ್ತ್ರ ಅಥವಾ ವಿದ್ಯೆ, ಅವತಾರಂಗೆಯ್ದಂತೆ– ಅವತಾರ ಮಾಡಿದಂತೆ ಎಂದರೆ ರೂಪುಗೊಂಡಂತೆ, ಚಾರಿಸಿ–ಕತ್ತಿಗಳನ್ನು ಝಳಪಿಸಿ, ಕಾಲದಂತಕನನೆ–ಪ್ರಳಯಕಾಲದ ಯಮನನ್ನೇ, ಪೋಲ್ತು–ಹೋಲಿ, ಆರುತ್ತುಂ– ಗರ್ಜಿಸುತ್ತ, ಕವಿವ–ಮುತ್ತುವ, ಅದಟರಂ–ಶೂರರನ್ನು, ಓರೊಂದೋರೊಂದೆ– ಒಂದೊಂದೇ ಒಂದೊಂದೇ (ಏಟನ್ನು), ಪೊಯ್ದು–ಹೊಡೆದು, ಪಲರಂ–ಹಲವರನ್ನು, ಕೊಂದರ್–ಕೊಂದರು.

೮೪. ಬಾಳ್ವಾಳ್ಗಳ–ಕತ್ತಿಕತ್ತಿಗಳ, ಘಟ್ಟಣೆಯೊಳ್–ತಾಕಾಟದಲ್ಲಿ, ಬಳ್ವಳ– ವಿಶೇಷವಾಗಿ, ಬಳೆದು–ವೃದ್ಧಿಯಾಗಿ, ಒಗೆದು–ಹುಟ್ಟಿ, ನೆಗೆದ–ಹಾರಿದ, ಕಿಡಿಗಳ– ಉರಿಯ ಕಿಡಿಗಳ, ಬಂಬಲ್ಗಳ್ವೆರಸು–ಸಮೂಹದೊಡನೆ ಕೂಡಿ, ಬಾಳ್ಪೊಗೆ–ಕತ್ತಿಯ ಹೊಗೆ, ಕಾ [ರ] ಮುಗಿಲ್–ಮಳೆಗಾಲದ ಮೋಡ, ಬಳ್ಳಿಮಿಂಚಿನಿಂದೆ–ಬಳ್ಳಿಮಿಂಚಿ ನಿಂದ, ಉಳ್ಕುವವೋಲ್–ಪ್ರಕಾಶಿಸುವ ಹಾಗೆ, ಪೊಳೆದು–ಹೊಳೆದು, ನೆಗೆದುದು– ನೆಗೆಯಿತು.

೮೫. ತಲೆ ನೆಲದೊಳ್ ಉರುಳ್ವೊಡಂ–ತಲೆ ನೆಲದಲ್ಲಿ ಉರುಳಿದರೂ, ಮೆಯ್ಗಲಿಯೊರ್ವಂ–ಒಬ್ಬ ಶೂರನು,ಪಿಡಿದು–ಹಿಡಿದುಕೊಂಡು, ತಲೆಯಂ–ತಲೆಯನ್ನು, ಅಟ್ಟೆಯೊಳಿಟ್ಟು–ಮುಂಡಕ್ಕೆ ಸೇರಿಸಿಕೊಂಡು, ಅಗ್ಗಲಿಸಿದ–ಅಧಿಕವಾದ, ಮುಳಿಸಿಂ– ಕೋಪದಿಂದ, ಮಾಟದ ತಲೆಯಿಟ್ಟಾಡುವನಂ–ಕೃತಕವಾದ ತಲೆಯನ್ನಿಟ್ಟುಕೊಂಡು

ಆಡುವವನನ್ನು, ಇನಿಸು ಪೋಲ್ತು–ಒಂದಿಷ್ಟು ಹೋಲಿ, ಅಸುಗೆಯ್ದಂ–ಸಿದ್ಧವಾದನು.

**ವಚನ :** ಅಣಿ–ಸೈನ್ಯದ ಸಾಲು, ಮಣಿಯದೆ–ಭಯಪಡದೆ, ಸೆಣಸಿ–ಮತ್ಸರಿಸಿ, ಪೊಣರ್ದು–ಹೋರಾಡಿ ; " ಮಣಿ–ನಮಸ್ಸೇ, ಭಯರತ್ನಯೋಃ "

**೮೬.** ಮಾರುತ–ಮಹಾಹಂ ; ಮಾರುತ–ಗಾಳಿಯ, ಘಾತ–ಹೊಡೆತದಿಂದ, ಸಂಚಲಿತ–ಅಲುಗಿಸಲ್ಪಟ್ಟ, ಕೇತು ಸಮೂಹಂ–ಧ್ವಜಗಳ ಸಮೂಹವು; ಉದಗ್ರ ಚಕ್ರಚೀತ್ಕಾರಂ–ದೊಡ್ಡ ಗಾಲಿಗಳ ಚೀರೆಂಬ ಶಬ್ದವು ; ಉದಾರ–ರವಂ : ಉದಾರ–ಶ್ರೇಷ್ಠರಾದ, ವೀರಭಟ – ವೀರಯೋಧರ, ಸಿಂಹನಿನಾದ – ಸಿಂಹಗರ್ಜನೆಯಿಂದ, ವಿಮಿಶ್ರಿತ–ಬೆರಸಿದ, ಉತ್ಕಟ–ಅತಿಶಯವಾದ, ಜ್ಯಾ ರವಂ–ಬಿಲ್ಲಿನ ಹೆದೆಯ ಟಂಕಾರ ಶಬ್ದವು, ಇವು, ಅಂಬರಾಂತರಮಂ–ಆಕಾಶದ ಒಳಪ್ರದೇಶವನ್ನು, ಅಳ್ಳಾಡು–ಕಂಪಿಸುವಂತೆ ಮಾಡಿ, ಅವ್ವಳಿಸನ್ನೆಗಂ–ಮುನ್ನುಗ್ಗುತ್ತಿರಲು, ಶರಾಸಾರದ–ಬಾಣವೃಷ್ಟಿಯ, ಅಗುರ್ವು–ಭೀಕರತೆ, ಪರ್ವಿ ನಿಲೆ–ವ್ಯಾಪಿಸಿ ನಿಲ್ಲಲು, ಉಗ್ರರಥಂ–ಭಯಂಕರವಾದ ರಥಗಳು, ರಥಾಳಿಯೊಳ್–ರಥಗಳ ಸಮೂಹದಲ್ಲಿ, ತಾಗಿದುವು–ಸಂಘಟ್ಟಿಸಿದುವು.

**೮೭.** ಕುದುರೆಯ ಬಣ್ಣದಿಂ–ಕುದುರೆಗಳ ಬಣ್ಣದಿಂದ, ರಥದ ತೋರ್ಕೆಯಿಂ–ರಥಗಳ ತೋರಿಕೆಯಿಂದ ; ಎತ್ತಿದ–ಏರಿಸಿದ, ಚಿತ್ರಕೇತು ವೃಂದದ–ಬಣ್ಣಬಣ್ಣ ಧ್ವಜ ಸಮೂಹಗಳ, ಕುಱುಪಿಂದೆ–ಗುರುತಿನಿಂದ, ಉದಗ್ರ ರಥ ಚೋದಕ ಚಿಹ್ನದಿಂ–ಶ್ರೇಷ್ಠರಾದ ಸಾರಥಿಗಳ ಚಿಹ್ನೆಗಳಿಂದ, ಆತನೀತಂ–ಅವನು ಇವನು, ಎಂಬುದಂ–ಎನ್ನುವುದನ್ನು, ಅಱಿದು–ತಿಳಿದು, ಒರ್ವರೊರ್ವರನೆ–ಒಬ್ಬರೊಬ್ಬರನ್ನೇ. ಮಚ್ಚರದಿಂ–ಹುರುಡಿನಿಂದ, ಗಱಿ ಸನ್ನೆಗೆಯ್ದು–ಬಾಣದ ಗರಿಗಳಿಂದ ಸನ್ನೆಮಾಡಿ, ಇದಿರ್ಚಿದ ಪದದೊಳ್–ಎದುರಿಸಿದ ಸಮಯದಲ್ಲಿ, ಸಮಸ್ತದಿಕ್ತಟಂ–ಎಲ್ಲಾ ದಿಕ್ಪ್ರದೇಶಗಳು, ಪತತ್ರಿಮಯಂ–ಬಾಣಮಯವು, ಎಂಬ, ಇನಿತಾಯ್ತು–ಇಷ್ಟಾಯಿತು, ತೋರ್ಕೆ < ತೋಱು + ಕೆ; ಗಱಿಸನ್ನೆಗೆಯ್ಯುವುದು ಯುದ್ಧ ಆರಂಭವಾಗಲಿ ಎಂಬುದಕ್ಕೆ ಸೂಚನೆ.

**೮೮.** ಪರಶು ಶರನಿಕರದಿಂ–ಕೊಡಲಿಯಾಕಾರದ ಬಾಣಸಮೂಹಗಳಿಂದ, ಕುಮ್ಮರಿಗಡಿದವೊಲ್–(ಹಂಗಾಮಿ ಬೇಸಾಯಕ್ಕಾಗಿ) ಕಾಡನ್ನು ಕತ್ತರಿಸಿದಂತೆ, ಒಡನೆ–ಕೂಡಲೇ, ಕಡಿಯೆ–(ರಥಗಳನ್ನು) ಕತ್ತರಿಸಲು, ರಥಿಕರ್–ರಥಯೋಧರು, ರಥದಿಂ ಧರೆಗಿೞಿದು–ರಥದಿಂದ ನೆಲಕ್ಕಿಳಿದು, ಆರೆಬರ್–ಕೆಲವರು, ವಿರಥರತಿರಥರ್–ರಥವಿಲ್ಲದವರು, ಅತಿರಥರು ; ಮೇಲ್ವಾಯ್ದು–ಮೇಲೆ ನುಗ್ಗಿ, ರಥಿಗಳಂ–ರಥಿಕರನ್ನು, ಸುರಿಗಿಱಿದರ್–ಕತ್ತಿಯಿಂದ ಹೊಡೆದರು. ಕುಮ್ಮರಿಯಂ : ಕುಮ್ಮರಿಯಂ ಸುಡಲೆಂದು ಕಡಿದೊಟ್ಟಿದ ಮರಂಗಳ ; ಕುಮ್ಮರಿಯ ನೋಡಲೆಂದು ಪೋದಂ (ವಡ್ಡಾ. ೧೫೬).

**೮೯.** ತೇರಂ ಪಾಯಿಸಿ–ರಥವನ್ನು ಹರಿಯಬಿಟ್ಟು, ನೋಯಿಸಿ–ನೋವನ್ನುಂಟು ಮಾಡಿ, ವಾರುವ ಕುದುರೆಗಳಂ–ಬಾಡಬ ಜಾತಿಗೆ ಸೇರಿದ ಕುದುರೆಗಳನ್ನು, ಆರೆಬರ್–ಕೆಲವರು, ಎರ್ದೆಯುರಿಯೆಚ್ಚರ್–ಎದೆ ಉರಿಯುವಂತೆ ಬಾಣದಿಂದ ಹೊಡೆದರು ; ಸಾರಥಿಯ ರಥಿಯ ತಲೆಗಳಂ–ಸಾರಥಿಯ ಮತ್ತು ರಥಿಕರ ತಲೆಗಳನ್ನು, ಓರೊಂದಸ್ತ್ರ

ದೊಳ್-ಒಂದೊಂದು ಬಾಣದಲ್ಲಿಯೇ, ಪಾಱೆ-ಹಾರಿ, ಜೀಜೀಱಿಱ್ಸಿನಿಗಂ-ಜೀರೆಂದು ಶಬ್ದವಾಗುತ್ತಿರಲು, [ಎಚ್ಚರ್-ಹೊಡೆದರು]. ವಾರುವ ಕುದುರೆ ಎಂಬುದರ ಅರ್ಥ ಚಿಂತನೀಯ; ವಾರುವ< (ಸಂ) ಬಾಡಬ-ಬೀಜದ ಕುದುರೆ, ಇದರ ಜೊತೆಗೆ ಕುದುರೆ ಶಬ್ದ ಸೇರಿದೆ; ಬಹುಶಃ ಗಂಡು ಹೆಣ್ಣು ಕುದುರೆಗಳಿರಬಹುದು; ವಾರುವದ ಜೋರ ಗುದರೆಗಳ್ ಎಂಬ ಪ್ರಯೋಗವೂ ಉಂಟು.

೯೦. ನೆತ್ತರ ಕೆಸಱಿೊಳ್ – ರಕ್ತದ ಕೆಸರಿನಲ್ಲಿ, ಗಾಲಿಗಳ್ – ಚಕ್ರಗಳು, ಎತ್ತಂ-ಎಲ್ಲೆಲ್ಲೂ, ಜಿಗಿಲ್ತು-ಅಂಟಿಕೊಂಡು, ನಿಲೆ-ನಿಲ್ಲಲು, ಧರೆಗಿೞಿದು-ನೆಲಕ್ಕಿಳಿದು, ಆರ್ದು-ಗಟ್ಟಿಯಾಗಿ ಕೂಗಿ, ಎತ್ತಿ-ಮೇಲಕ್ಕೆತ್ತಿ, ಕೆಲಬರ್-ಕೆಲವರು, ಸೂತರ್-ಸಾರಥಿಗಳು, ಪರಿಯಿಸಿದರ್-ರಥಗಳನ್ನು ಹಾಯಿಸಿದರು; ಅಲ್ಲಿ-ಆ ಸಮಯದಲ್ಲಿ, ರಥಕಲ್ಪಂ-ರಥ ಜೋಡಿಸುವ ವಿದ್ಯೆ, ಏಂ ಮೆಯ್ವೆತ್ತುದೋ-ಏನು ಸಾಕಾರವಾಯಿತೋ!

**ವಚನ:** ವರೂಥಿನಿಯ-ಸೈನ್ಯದ; ವರೂಥಂಗಳ್-ರಥಗಳು; ಮಲ್ಲಾ ಮಲ್ಲಿಯಾಗಿ-ಮಲ್ಲನು ಮಲ್ಲನೊಡನೆ ಕಾದುವ ಯುದ್ಧ ಮಲ್ಲಾಮಲ್ಲಿ, ಇದಾಗಲು; ಎಂದರೆ ದ್ವಂದ್ವ ಯುದ್ಧವಾಗಲು,

೯೧. ಉಡಿದಿರ್ದ-ಮುರಿದಿದ್ದ, ಅಚ್ಚು-ಅಚ್ಚಿನ ಮರ, ಅೞಿದ ಈಸು-ಹಾಳಾದ ಇರ್ಚಿಮರ, ಶೞ್ಗಿದ-ತಗ್ಗಿಹೋದ, ನೊಗಂ-ನೊಗವು, ಜೀಜೀಱ್ದ ಚಕ್ರಂ-ಜೀರೆಂದು ಶಬ್ದಮಾಡಿ ಹಾರಿಹೋದ ಗಾಲಿ, ಸಿಡಿಲ್ ಪೊಡೆದಂತೆ- ಸಿಡಿಲು ಹೊಡೆದಹಾಗೆ, ಒರ್ಮೆಯೆ-ಒಂದು ಸಲಕ್ಕೆ, ಸೂಸಿ-ಚೆಲ್ಲಿ, ಪಾಱುವ-ಹಾರುವ, ಮಡಂ-ಪಾರಿಯ ಮರ, ನುಗ್ಗಾದ ಕೀಲ್-ನುಚ್ಚಾದ ಕೀಲು, ಸಾಯಕಂ ನಡೆ-ಬಾಣವು ನಾಟಲು, ನೊಂದು-ನೋವನ್ನು ಹೊಂದಿ, ಎಯ್ದೆ-ಚೆನ್ನಾಗಿ, ಸುರುಳ್ಪುರುಳ್ದ-ಸುರುಟಿಬಿದ್ದ, ತುರಗಂ-ಕುದುರೆ, ಸುರ್ಕಿರ್ದ-ಸುಕ್ಕಿಹೋದ, ಸೂತಂ-ಸಾರಥಿ, ಕಡಲ್ ಕಡಲಂ ಮುಟ್ಟೆ-ಸಮುದ್ರ ಸಮುದ್ರವನ್ನು ಸೋಕಿ, ತೆರಳ್ವ-ಹರಿಯುವ, ನೆತ್ತರ ಪೊನಲ್-ರಕ್ತದ ಪ್ರವಾಹ, ಉಗ್ರಾಜಿಯೊಳ್-ಭೀಕರ ಯುದ್ಧದಲ್ಲಿ, ಕಣ್ಗೊಂಡುದು-ಕಾಣಿಸಿತು,

**ವಚನ:** ವರೂಥ ಯೂಥಂಗಳ್-ರಥಗಳ ಸಮೂಹಗಳು; ಅೞಿಮೆೞ್ಗಿದಂತೆ-ಹಾಳಾಗಿ ಸಾರಿಸಿದಂತೆ ಎಂದರೆ ಸಂಪೂರ್ಣವಾಗಿ ನಾಶವಾಗಿ, ಮೆೞ್ಕು=ಮೆಱುಗು(ತ)= ಮ್ರೇಗು (ತೆ)—ಸಾರಿಸು, ಲೀಪಿಸು.

೯೨. ಇಕ್ಕಿದ-ಹಾಕಿದ ಎಂದರೆ ತೊಡಿಸಿದ, ಲೋಹವಕ್ಕರೆಯ-ಕಬ್ಬಿಣದ ಗುಳದ, ಕರ್ವುಗಳಿಂ-ಕರಿಯ ಬಣ್ಣಗಳಿಂದ, ಕವಿತರ್ಪ-ಮುಚ್ಚಿಕೊಂಡು ಬರುವ, ವಿಂಧ್ಯ ಶೈಲಕ್ಕೆ-ವಿಂಧ್ಯ ಪರ್ವತಕ್ಕೆ, ಎಣೆಯಾಗೆ-ಸಮಾನವಾಗಲು; ಜೋದರ್-ಮಾವಟಿಗರು, ಇಸುವ-ಪ್ರಯೋಗಿಸುವ, ಅಂಬಿನ-ಬಾಣಗಳ, ಬಲ್ಸರಿ-ದೊಡ್ಡಮಳೆ; ತಿಣ್ಣಮಪ್ಪಿ-ಜೋರಾಗಿ, ಕೆಯ್ಮಿಕ್ಕು-ಕೈಮೀರಿ, ವಿರೋಧಿಸಾಧನ ಘಟಾಳಿಯಂ-ಶತ್ರು ಸೈನ್ಯದ ಆನೆಗಳನ್ನು, ಓಡಿಸಲ್-ಓಡಿಸಲು, ಆಗಳ್ ಆರ್ದು-ಆಗ ಗರ್ಜಿಸಿ, ನಿಷಾದಿಗಳ್-ಮಾವಟಿಗರು, ಮುಳಿಸಿಂ-ಕೋಪದಿಂದ, ಉಗ್ರ ಸಿಂಧುರ ಘಟಾ

ವಳಿಯಂ ಭಯಂಕರವಾದ ಆನೆಗಳ ಸಮೂಹವನ್ನು, ಬಿಟ್ಟೆಕ್ಕಿದರ್–ತೋರಿಬಿಟ್ಟರು, ಎಂದರೆ ಛೂ ಬಿಟ್ಟರು. ನುಗ್ಗಿಸಿದರು.

೯೩. ಆದಿತ್ಯಂ–ಸೂರ್ಯನು, ಧ್ವಜಘಟಾಟೋಪಗಳಿಂ–ಧ್ವಜಗಳನ್ನು ಧರಿಸಿರುವ ಆನೆಗಳ ವಿಜೃಂಭಣೆಯಿಂದ, ಮಸುಳ್ವನ್ನೆಗಂ–ಕಾಂತಿಹೀನವಾಗುತ್ತಿರಲು ; ಲಯಾಂಭೋದಂಗಳ್ – ಪ್ರಳಯಕಾಲದ ಮೋಡಗಳು, ಕವಿವಂತೆವೋಲ್ – ಮುತ್ತಿಕೊಳ್ಳುವ ಹಾಗೆ, ಕವಿವುದುಂ–ಮುತ್ತಲು, ಕಾಲ್ಗಾಪು ಕಾಲ್ಗಾಪಿನೊಳ್–ಪದಾತಿಗಳು ಪದಾತಿಗಳಲ್ಲಿ, ಜೋದರ್ ಜೋದರೊಳ್–ಮಾವಟಿಗರು ಮಾವಟಿಗರಲ್ಲಿ, ಆನೆಯಾನೆಯೊಳ್–ಆನೆಗಳು ಆನೆಗಳಲ್ಲಿ, ಅಗುರ್ವಪ್ಪನ್ನೆಗಂ–ಭಯವುಂಟಾಗುತ್ತಿರಲು, ಕಾದೆ–ಯುದ್ಧ ಮಾಡಲು, ಮಾದ್ಯದ್ಗಜೇಂದ್ರಾಹವಂ–ಮದಿಸಿದ ಆನೆಗಾಳಗ, ಮೂಱುನೆಲೆಯಿಂ–ಮೂರು ಅವಸ್ಥೆಗಳಲ್ಲಿ, ಕಣ್ಗೆ–ಕಣ್ಣುಗಳಿಗೆ, ಆದಂ–ವಿಶೇಷವಾಗಿ, ಚೆಲ್ವೆಸೆದತ್ತು–ಸೊಗಸಾಯಿತು.

**ವಚನ**: ಆರೋಹಕರ್–ಸವಾರರು, ಮಾವಟಿಗರು; ತೋಱಿಕೊಟ್ಟು–ತೋರಿಸಿಬಿಟ್ಟು, ಛೂಬಿಟ್ಟು ; ಮೊಗಂಬುಗಿಸಿದಾಗಳ್–ಮುಖಕ್ಕೆ ಮುಖವನ್ನು ಸೇರಿಸಿದಾಗ ಎಂದರೆ ಸಮ್ಮುಖದಲ್ಲಿ ನಿಲ್ಲಿಸಿದಾಗ ; ಉಭಯ ವ್ಯಾಳದಂತಿ–ಎರಡು ಕಡೆಗಳ ತುಂಟಾನೆಗಳು, ವಧ್ಯಕ್ರಮಂಗಳೊಳ್ – ಕೊಲ್ಲುವ ವಿಧಾನಗಳಲ್ಲಿ, ಭಾರ್ಗವರ್–ಧನುರ್ಧರರು, ಸುರಿಗಿಱಿವಂತೆ–ಕತ್ತಿಯನ್ನು ಚುಚ್ಚುವಂತೆ, ಇಱಿಯೆ–ಚುಚ್ಚಲು, ಸೂಸುವ–ಚೆಲ್ಲುವ. ಕೆನ್ನೆತ್ತರ್–ಕೆಂಪು ರಕ್ತವು, ಕಟಿಲ್ದು–ಸಡಿಲವಾಗಿ, ಉದಿರ್ವ–ಕೆಳಗೆ ಸ್ವಲ್ಪವಾಗಿ ಬೀಳುವ, ಸಕ್ಕದ–ಕಟವಾಯಿಯ, ಸಿಪ್ಪುಗಳಂ – (ದಂತದ) ಚಿಪ್ಪುಗಳೂ, ಜೀಱಿಟ್ಟಿ–ಜೀರೆಂದು ಸಿಡಿಯುವ, ಕೋಟ್ಕಳಂ–ಕೊಂಬುಗಳೂ, ಅಗುರ್ವಂ ಪಡೆಯೆ–ಭಯವನ್ನುಂಟುಮಾಡಲು. ಸಕ್ಕ<(ಸಂ) ಸೃಕ್ವ.

೯೪. ನಡುವ ಸರಲ್ಗೆ–ನಾಟುವ ಬಾಣಗಳಿಗೆ, ಮೆಯ್ಯೊಳಗೆ ಅಡಂಗುವ–ಮೈಯೊಳಗೆ. ಮುಳುಗುವ ಎಂದರೆ ನಾಟಿ ಒಳಕ್ಕೆಹೋಗಿ ಕಾಣದಾಗುವ, ಸಂಕುಗೆ–ಕಠಾರಿಗಳಿಗೆ, ದಿಂಕುಗೊಳ್ವ–ಹಾರಿಬರುವ, ಕಕ್ಕಡೆಗೆ–ಕಕ್ಕಡೆಯೆಂಬ ಆಯುಧಗಳಿಗೆ, ಇದಿರ್ ಉರ್ಚುವ ಇಟ್ಟಿಗೆ–ಎದುರಾಗಿ ಸೀಳುವ ಈಟಿಗಳಿಗೆ, ಆನೆಯ ಕೋಟ್ಕಳ್–ಆನೆಯ ಕೊಂಬುಗಳ, ಕೋಳ್ಗೆ–ತಿವಿತಕ್ಕೆ, ನೊಂದು–ನೋವನ್ನು ಹೊಂದಿ, ಬಾಯ್ಬಿಡದೆ–ಕೂಗಿಕೊಳ್ಳದೆ, ಇನಿಸಪ್ಪೊಡಂ–ಸ್ವಲ್ಪವಾದರೂ, ಪೆಳಱದೆ–ಹೆದರದೆ, ಅಳ್ಕದೆ–ಶಕ್ತಿಗುಂದದೆ, ಪಾವಿನಲಿಟ್ಟವೋಲ್–ಹಾವಿನಿಂದ ಹೊಡೆದಹಾಗೆ, ಪೊಡರ್ಪು ಉಡುಗದೆ–ಚೈತನ್ಯ ಕುಂದದೆ, ಕೆಲವುನ್ಮದಗಂಧಸಿಂಧುರಂ–ಕೆಲವು ಮದಿಸಿದ ಆನೆಗಳು, ಇರ್ದ ನೆಲೆಯಿಂ – ಇದ್ದ ಸ್ಥಾನದಿಂದ, ಬಿೞ್ದುವು–ಬಿದ್ದುವು. ಇಲ್ಲಿ ‘ ಪಾವಿನಲಿಟ್ಟವೋಲ್ ’ ಎಂಬುದರ ಇಂಗಿತವೇನು ?

೯೫. ಪಾಱುವ – ಹಾರಿಬರುವ, ಪಾಱುಂಬಳೆ – ಚಕ್ರಾಯುಧ, ಕೋಳೆ–ಕತ್ತರಿಸಲು, ಜೀಱಿಟ್ಟು–ಜೀರೆಂದು ನೆಗೆದು, ಅಂಬರಕ್ಕೆ–ಆಕಾಶಕ್ಕೆ, ತಲೆ–ತಲೆಗಳು,

ಸಿಡಿಲ್ಪೊಡಂ–ಸಿಡಿದರೂ, ಜೋದರ–ಮಾವಟಿಗರ, ಅಟ್ಟೆಗಳ್–ಮುಂಡಗಳು, ಕೆಲವು, ಆಗಳ್–ಆಗ, ಆ ಕಾಯಸ್ಪಾಱದೆ–ಆ ಕೋಪ ಶಮನವಾಗದೆ, ಜಾಜಲ್ಲದೆ–ಅಪಸರಣ ವಿಲ್ಲದೆ, ಹಿಮ್ಮೆಟ್ಟಲ್ಲದೆ, ಹರಣಂಗೆಯ್ದುವು–ಕೊಲೆ ಮಾಡಿದುವು.

೯೩ ಚಕ್ರತೀವ್ರಹತಿಯಿಂ–ಚಕ್ರಾಯುಧದ ತೀವ್ರಪ್ರಹಾರ ಏಟಿನಿಂದ, ತಲೆ–ತಲೆಗಳು, ಕಣಕ್ ಎನೆ–ಕಣಕ್ ಎಂದು, ಪೋದೊಡೆ–ಕತ್ತರಿಸಿ ಹೋದರೆ, ಜೋದರ–ಮಾವಟಿಗರ, ಅಟ್ಟೆ–ಮುಂಡಗಳು, ಸಂದಣಿಸಿದ–ಗುಂಪಾದ, ಬಂಧದಿಂ?, ಬಿಸುಗೆಯಲ್ಲಿ–ಅಂಬಾರಿಯಲ್ಲಿ, ನೆಲಸಿರ್ದು–ನೆಲಸಿ ಇದ್ದು, ಎಸೆದು–ಸೊಗಸಿ, ಆಡೆ–ಕುಣಿಯಲು, ನಟ್ಟಕೂರ್ಗಣೆವೆರಸು–ನಾಟಿದ ಹರಿತವಾದ ಬಾಣಗಳು ಬೆರಸಿ, ಉಚ್ಚಳಿಸುತ್ತಿರೆ–ಎಬ್ಬುತ್ತಿರಲು, ಸುಯ್ವ ಪುಣ್ಣ ತಿಂತಿಣಿಗಳಿಂ–ಸುಯ್ಯುತ್ತಿರುವ ಹುಣ್ಣುಗಳ ಸಮೂಹದಿಂದ, ಒಂದೆರಡಾನೆಯಟ್ಟೆಗಳು–ಒಂದೆರಡು ಆನೆಗಳ ಕಬಂಧಗಳು, ಅಂದು ಆಗ, ಅಗುರ್ವುವೆರಸು–ಭೀಕರತೆಯಿಂದ ಕೂಡಿ, ಆಡಿದುವು–ಕುಣಿದುವು.

ವಚನ: ತಟ್ಟಱಿಯೆ – ಅಪ್ಪಳಿಸಿ ಹೊಡೆಯಲು ; ಬಿಸುನೆತ್ತರ – ಬಿಸಿವಾದ ರಕ್ತದ, ಅರ್ಬಿಗಳ್–ಬೆಟ್ಟದ ಝರಿಗಳು, ಪಾಯೆ – ಹರಿಯಲು, ಪೇರರ್ಬಿಗಳ್ವೆರಸು–ದೊಡ್ಡ ಝರಿಗಳಿಂದ ಕೂಡಿದ, ಜಾಜಿನ ಪರ್ವತಂಗಳಂತೆ–ಕಾವಿಕಲ್ಲ ಬೆಟ್ಟಗಳಂತೆ, ಕೆಡೆದು-ಬಿದ್ದು, ಅಱಿಗತಱಿಗದಾಗಳ್-ನಾಶವಾಗಿ ತಗ್ಗಿದಾಗ; ಜಾಜು <(ಸಂ)ಧಾತು,

೯೭. ಈ ನಾಲ್ಕುಂಬಲಂ – ಈ ಚತುರಂಗ ಸೈನ್ಯ, ಆನಿರೆ – ನಾನಿರಲು; ಇಱುವುದು ಗಡಂ–ಯುದ್ಧ ಮಾಡುತ್ತಿರುವುದಲ್ಲವೆ ? ಇದಲ್ತೆ ಪರಿಭವಂ ಎನಗೆ–ಇದಲ್ಲವೆ ನನಗೆ ಸೋಲು, ಎಂದು–ಎನ್ನುತ್ತ, ಏನುಂ ಮಾಣದೆ–ಏನೂ ಬಿಡದೆ, ನಿಲ್ಲದೆ; ಅನೂನಬಲಂ – ಕುಂದಿಲ್ಲದ ಶಕ್ತಿಯುಳ್ಳ, ಭೀಮಂ – ಭೀಮನು, ಕುರುಬಲದೊಳ್–ಕೌರವನ ಸೈನ್ಯದಲ್ಲಿ, ಬಂದು, ತಾಗಿದಂ–ಸಂಘಟ್ಟಿಸಿದನು.

ವಚನ: ಮಿಳಿರ್ದು – ಅಲುಗಾಡಿ ; ಮಿಳ್ಳಿಸಿದ – ಚಲಿಸಿದ, ಸಿಂಗದ ಪಟಿವಿಗೆಯಂ-ಸಿಂಹದ ಧ್ವಜವನ್ನು, ಮಿಱ್ತು-ಮೃತ್ಯು, ಪಲ್ಮೊರೆವಂತೆ-ಹಲ್ಲುಕಡಿಯುವಂತೆ, ಕಿಸುವೊನ್ನ–ಕೆಂಪುಲೋಹದ, ತಾಮ್ರದ, ಪಗೆವರ–ಹಗೆಗಳ, ಒತ್ತಿ–ಊದಿ, ಮುಂದೊಡ್ಡಿದ ಒಡ್ಡೆಲ್ಲಮಂ–ಮುಂದೆ ಚಾಚಿದ ಸೈನ್ಯವನ್ನೆಲ್ಲ, ಅಂಬಿನ ಬಂಬಲೊಳೆ–ಬಾಣಗಳ ಸಮೂಹದಲ್ಲಿಯೇ ; ಪಡಲ್ವಡಿಸುತ್ತುಂ – ಬೀಳಿಸುತ್ತಾ, ಬರ್ಪ – ಬರುವ, ಆದಿರದೆ–ನಡುಗದೆ, ಇದಿರಾಂತಾಗಳ್–ಎದುರಿಸಿದಾಗ, ಮಿಳ್ಳಿಸು ; "ಮಿಳಿರ್ದುಮಿಳ್ಳಿಸೆ ವಾನರಕೇತನಂ" ಎಂದು ನಾಗಚಂದ್ರನ ಪ್ರಯೋಗ (ಪಂಪರಾ)

೯೮. ಎಂತು ಇದಿರ್ ಆಂತೆ–ಹೇಗೆ ಎದುರಿಸಿದೆಯೋ, ಅಂತೆ–ಹಾಗೆ, ಕಲಿಯಾಗು–ಶೂರನಾಗು, ಒಳಸೋರದಿರ್–ಹಿಂಜರಿಯದಿರು, ಎಂದು, ಭೀಮಂ-ಭೀಮನು, ಕನಲ್ದು–ಕೋಪಿಸಿ, ಓರಂತೆ–ಕ್ರಮವಾಗಿ, ತಿಣ್ಣಂ ಇಸೆ–ತೀಕ್ಷ್ಣವಾಗಿ ಬಾಣ ಪ್ರಯೋಗ ಮಾಡಲು, ಪಾಯ್ವ ಸರಲ್ಗಳಂ-ನುಗ್ಗಿಬರುವ ಬಾಣಗಳನ್ನು, ಎಯ್ದಲೀಯದೆ-ಹತ್ತಿರಕ್ಕೆ ಬರಗೊಡದೆ, ಆಂತು ಆಂತು–ಎದುರಿಸಿ ಎದುರಿಸಿ, ನಿರಂತರಂ–ಎಡೆಬಿಡದೆ, ತಱಿದು–

ಕತ್ತರಿಸಿ, ಸೂತನಂ-ಸಾರಥಿಯನ್ನು. ಆತನ ವಾಜಿಯಂ–ಅವನ ಕುದುರೆಗಳನ್ನು, ಮಹೀಶಂ–ದುರ್ಯೋಧನ, ಅಚ್ಚ ಬಿಸುನೆತ್ತರ–ಅಪ್ಪಟ ಬಿಸಿ ರಕ್ತದ, ಸುಟ್ಟುರೆ–ಪ್ರವಾಹ?, ಸೂಸುವನ್ನೆಗಂ–ಚೆಲ್ಲಾಡುತ್ತಿರಲು, ತೆಗೆದು ಎಚ್ಚುಂ–ಬಿಲ್ಲ ಹಗ್ಗವನ್ನು ಎಳೆದು ಪ್ರಯೋಗಿಸಿದನು.

೯೯. ಇಸೆ–ಬಾಣಗಳನ್ನು ಬಿಡಲು, ಭೀಮಂ–ಭೀಮನು, ಮಸಗಿ–ಕೆರಳಿ, ಈರಯ್ದು–ಹತ್ತು, ಶಿತಾಸ್ತ್ರದಿಂ–ಹರಿತವಾದ ಬಾಣಗಳಿಂದ, ಸೂತಂ–ಸಾರಥಿ, ಉರುಳೆ–ಉರುಳಿ ಬೀಳಲು, ರಥಂ–ರಥವು, ಉಡಿಯೆ–ಮುರಿಯಲು, ಕುದುರೆ–ಕುದುರೆಗಳು, ಕೀಲಿಸೆ–ಮೊಳೆ ಹೊಡೆದಂತೆ ಸ್ತಬ್ಧವಾಗಿರಲು, ಪಟಿವಿಗೆ–ಬಾವುಟವು, ಮುಱಿಯೆ–ಮುರಿಯಲು, ಒಂದೆ ಸರಲೊಳ್–ಒಂದೇ ಬಾಣದಲ್ಲಿ, ಮಸಕದಿಂ–ಕೋಪದಿಂದ, ನೊಸಲಂ–ಹಣೆಯನ್ನು, ಎಚ್ಚಂ–ಹೊಡೆದನು.

೧೦೦. ಪಟ್ಟಂಗಟ್ಟಿದ–ಪಟ್ಟವನ್ನು ಕಟ್ಟಿದ, ನೊಸಲಂ–(ದುರ್ಯೋಧನನ) ಹಣೆಯನ್ನು, ನಟ್ಟ–ನಾಟಿದ, ಸರಲ್ಪಿಡಿದು–ಬಾಣವನ್ನು ಅನುಸರಿಸಿ, ನೆತ್ತರ್–ರಕ್ತವು, ಅಂಬಿರಿವಿಡೆ–ಧಾರೆಯಂತೆ ಸುರಿಯಲು, ಕಣ್ಗೆಟ್ಟಿರ್ದ–ದಿಕ್ಕು ತೋರದಿದ್ದ, ಕಂಗೆಟ್ಟಿದ್ದ, ನೃಪನ ದುರ್ಯೋಧನನಂ–ರಾಜ ದುರ್ಯೋಧನನನ್ನು, ಅಂಕದ–ಯುದ್ಧದ, ಕಟ್ಟಾಳ್ಗಳ್–ಶೂರರು, ಕಾದು–ರಕ್ಷಿಸಿ, ಕಳಿಪೆ–(ಶಿಬಿರಕ್ಕೆ) ಕಳುಹಿಸಿಕೊಡಲು ;

**ವಚನ:** ಅನುಜರ್ ನೂರ್ವರುಂ–ನೂರು ಜನ ತಮ್ಮಂದಿರೂ ; ಒರ್ವನಂ–ಒಬ್ಬನನ್ನು, ತಾಗಿದೊಡೆ–ಎದುರಿಸಿದರೆ, ಭಾರತಮನಿಂದೆ ಸಮೆಯಿಸುವೆನೆಂದು–ಭಾರತ ಯುದ್ಧವನ್ನು ಈ ದಿನವೇ ಮುಗಿಸಿಬಿಡುತ್ತೇನೆ ಎಂದು ; ಕೋದಂಡಮಂ–ಬಿಲ್ಲನ್ನು.

೧೦೧. ಕುರುಬಲಮಂ–ಕೌರವನ ಸೈನ್ಯವನ್ನು , ಪಡಲ್ವಡಿಪ–ಧ್ವಂಸಮಾಡುವ, ತಕ್ಕಿನೊಳ್–ಪರಾಕ್ರಮದಲ್ಲಿ, ಎಯ್ತರೆ-ಹತ್ತಿರಕ್ಕೆ ಬರಲು, ಬರ್ಪ ಭೀಮನಂ–ಬರುವ ಭೀಮನನ್ನು, ಬರೆ ಬರಲೀಯದೆ–ಬರುವುದಕ್ಕೆ ಬಿಡದೆ, ಇರ್ದವರಂ–ಇದ್ದವರನ್ನು, ಆ ಪದದೊಳ್–ಆ ಸಮಯದಲ್ಲಿ, ಪೆಱಗಿಕ್ಕಿ–ಹಿಂದಿಕ್ಕಿ, ಕಳಿಂಗರಾಜಂ–ಕಳಿಂಗ ದೇಶದ ರಸು, ಗಂಧಸಿಂಧುರಘಟೆ ನಾಲ್ಕು ಕೋಟಿವೆರಸು–ನಾಲ್ಕು ಕೋಟಿ ಸೊಕ್ಕಾನೆಗಳ ಸೈನ್ಯದೊಡನೆ, ಆಗಡೆ–ಆಗಳೇ, ಬಂದು ಆಂತಿರೆ–ಎದುರಿಸಲು, ಪಗೆ–ಹಗೆ, ಕೆಯ್ಗೆ ಬಂದು–ಕೈಗೆ ಸಿಕ್ಕಿ, ಬರ್ದುಕಾಡಿದ–ತಪ್ಪಿಸಿಕೊಂಡ, ಬಲ್ಮುಳಿಸಿಂ–ಬಲು ಕೋಪದಿಂದ, ವೃಕೋದರಂ–ಭೀಮಸೇನನು ; ಬರೆಬರಲ್–ಪ್ರಯೋಗ ಚಿಂತನೀಯ ; ಬರ್ ಎಂಬುದರ ಭಾವನಾಮ, ಬರಂ, ಬರವು; ಬರಂ + ಬರಲೀಯದೆ = ಬರಬರಲೀಯದೆ ಎಂದಿರಬಹುದು.

**ವಚನ:** ಮಾತಂಗ ಘಟೆಗಳ–ಆನೆಯ ಸೈನ್ಯಗಳ ; ಮುಳಿಸಂ ಕಳೆವೆಂ–ಕೋಪವನ್ನು ತೀರಿಸಿಕೊಳ್ಳುತ್ತೇನೆ.

೧೦೨. ಮರುನ್ನಂದನಂ–ಭೀಮಸೇನನು, ಗಜೆಯಂ ಭೋರನೆ ಪರ್ವಿ ಬೀಸಿ–ಭೋರೆಂದು ಗದೆಯನ್ನು ವಿಶಾಲವಾಗಿ ಬೀಸಿ, ಕಡುಪಿಂದೆ–ತೀವ್ರತೆಯಿಂದ, ಎಯ್ತಂದು–

ಸಮಿಾಪಿಸಿ, ಮಾಜಾಂತ–ಪ್ರತಿಭಟಿಸಿದ, ಸಾಮಜ ಸಂಘಾತಮಂ–ಆನೆಗಳ ಸಮೂಹ ವನ್ನು, ಒಂದುಗೊಳ್ ಎರಡುಗೊಳ್–ಒಂದನ್ನುತಗೋ, ಎರಡನ್ನು ತಗೋ, ಎಂದು, ಉರ್ವಿಪೊಯ್ವ–ಉಬ್ಬಿಹೊಡೆಯುವ, ಒಂದು ಪೊಯ್ಗೆ–ಒಂದು ಹೊಡೆತಕ್ಕೆ, ಜವಂ ಗುಂದಿ–ವೇಗವು ಕುಗ್ಗಿ, ಸಿಡಿಲ್ದು–ಸಿಡಿದು, ಮುನ್ನೆ–ಮೊದಲೇ, ಅಡಿಗುರುಳ್ತರ್ಪನ್ನೆಗಂ–ಕೆಳಕ್ಕೆ ಬೀಳುತ್ತಿರಲು. ಬೀೞೆ–ಉರುಳಲು, ದಿಗ್ಗಜಮಂ ಪೋಲ್ವಗಜಂಗಳಂ–ದಿಗ್ದಂತಿಗಳನ್ನು ಹೋಲುವ ಆನೆಗಳನ್ನು, ಪಲವುಮಂ–ಹಲವನ್ನು, ಕೊಂದಂ–ಕೊಂದಂ.

೧೦೩. ಬಡಿಗೊಳೆ–ದೊಣ್ಣೆಯಿಂದ (ಗದೆಯಿಂದ) ಹೊಡೆಯಲು, ಬಿದು–ಕುಂಭಸ್ಥಳವು, ಬಿಬ್ಬರಬಿರಿದು–ಪೂರ್ತಿಯಾಗಿ ಬಿರಿದುಹೋಗಿ, ಒಡನೆ–ಕೂಡಲೇ, ಪೊಸಮುತ್ತು–ಹೊಸ ಮುತ್ತುಗಳು, ಉಗೆ–ಚೆಲ್ಲಾಡಲು, ಮದೇಭಂ–ಮದ್ದಾನೆಗಳು, ಕೋಡನೂೞ–ಕೊಂಬುಗಳನ್ನು ನೆಲದ ಮೇಲೆ ಊರಿ, ಕೊಲ್ಲದಿರ್–ಕೊಲ್ಲಬೇಡ, ಎಂದು, ಇರದೆ, ಅಡಿಗೆಱಗುವ–ಪಾದಕ್ಕೆಬೀಳುವ, ತೆಱನಂ–ರೀತಿಯನ್ನು, ಇನಿಸಂ–ಇಷ್ಟನ್ನು, ಅನುಕರಿಸುವನಂ–ಹೋಲುತ್ತಿರಲು, ಕೆಡೆದುವು–ಬಿದ್ದುವು.

ವಚನ: ಪಡಲ್ವಡಿಸಿಯುಂ–ಚೆಲ್ಲಾಪಿಲ್ಲಿಯಾಗಿ ಬೀಳಿಸಿಯೂ ;

೧೦೪. ಒಂದೊಂದಱ–ಒಂದೊಂದು ಆನೆಯ, ಗಾತ್ರಮಂ–ದೇಹವನ್ನು, ಪಿಡಿದು–ಹಿಡಿದುಕೊಂಡು, ತಿರಿಪಿಕೊಂಡು–ಗಿರ್ರನೆ ತಿರುಗಿಸಿ, ಒಂದೊಂದಱೊಳ್–ಒಂದೊಂದು ಆನೆಯ ಮೈಯಲ್ಲಿ, ಪೊಯ್ದು–ಹೊಡೆದೂ, ಎಲ್ವುಅಡಗು ಅಪ್ಪನ್ನೆಗಂ–ಎಲುಬು ಮಾಂಸಗಳಾಗುತ್ತಿರಲು, ಎತ್ತಿಕೊಂಡು–ಮೇಲೆತ್ತಿ, ಅಸಗವೊಯ್ ಪೊಯ್ಲೊಳ್–ಅಗಸನ ಒಗೆತದ ಹೊಡೆತದಲ್ಲಿ, ತಡಂಬೊಯ್ದುಂ–ಬಿರುಸಾಗಿ, ಜೋರಾಗಿ, ಹೊಡೆದು, ಉಳ್ಳಡಗುಂ–ಒಳಗಡೆಯ ಮಾಂಸವೂ, ನೆತ್ತರುಂ–ರಕ್ತವೂ, ಎಲ್ಲೆಡೆಸೆಗಂ–ಎಲ್ಲಾದಿಕ್ಕುಗಳಿಗೂ, ಜೀಱಿಟ್ಟು–ಜೀರೆಂದು ಶಬ್ದಮಾಡಿ ಚಿಮ್ಮಿ, ಪಾಱಿತೀೞೆ–ಹಾರಿ ನೆಗೆಯಲು, ಬಲ್ಪಡಿಗಂ–ಬಲು ದಾಂಡಿಗನಾದ ಎಂದರೆ ಶೂರನಾದ ಭೀಮ, ಬೀಸಿಯುಂ–ಬೀಸಾಡಿಯೂ, ಒಂದು ಕೋಟಿವರೆಗಂ–ಒಂದು ಕೋಟಿ ಸಂಖ್ಯೆಯ ಆನೆಗಳವರೆಗೂ, ಮದೇಭಂಗಳಂ–ಮದ್ದಾನೆಗಳನ್ನು, ಕೊಂದಂ–ಕೊಂದನು.

೧೦೫. ಸಿಡಿಲಂತೆ ಒರ್ಮೆಯೆ ಪೊಯ್ಯೆ–ಸಿಡಿಲಿನ ಹಾಗೆ ಒಂದೇ ಸಲ ಹೊಡೆಯಲು, ಪೊಯ್ದುಭರದಿಂದೆ–ಹೊಡೆದ ತೀವ್ರತೆಯಿಂದ, ಒಂದಾನೆ–ಒಂದು ಆನೆಯ, ತೋಲ್‌ನೆತ್ತರ್ ಎಲ್ವು ಅಡಗು–ಚರ್ಮ ರಕ್ತ ಮೂಳೆ ಮಾಂಸಗಳು, ಒಂದೊಂದಱೊಳ್–ಒಂದೊಂದರಲ್ಲಿ, ಒಂದು–ಒಂದೂ, ಒಂದದೆ–ಸೇರಿಕೊಳ್ಳದೆ, ಗದಾನಿರ್ಘಾತದಿಂ–ಗದೆಯ ಏಟಿನಿಂದ, ಮಾಯಮಾದೊಡೆ–ಕಣ್ಣಿಗೆ ಕಾಣದ ಹಾಗಾಗಲು, ಪೋ–ಹೋಗು, ತಪ್ಪಿದೆನೆಂದು–ತಪ್ಪು ಮಾಡಿದೆನೆಂದು, ಪಲ್ಮೊರೆದು–ಹಲ್ಲನ್ನು ಉಜ್ಜಿ ಶಬ್ದಮಾಡಿ, ಅಗುರ್ವಪ್ಪನ್ನೆಗಂ–ಭಯವುಂಟಾಗುತ್ತಿರಲು, ಉಗ್ರಾಜಿಯೊಳ್–ಭಯಂಕರ ಯುದ್ಧದಲ್ಲಿ, ಭೀಮನಾ–ಭೀಮನ, ತೋಳ್ವಲದೇೞ್ಗೆ–ತೋಳ್ಬಲದ

ಏಳಿಗೆಯನ್ನು, ಮೆಚ್ಚುವನಿತರ್ಕೆ – ಮೆಚ್ಚುವಷ್ಟಕ್ಕೆ, ವಿಾಸೆಯುಂ – ವಿಾಸೆಯನ್ನು, ಕಡಿದಂ–ಕಚ್ಚಿದನು.

೧೦೬. ಧ್ವಜಮುಂ–ಬಾವುಟವೂ, ಬಿಸುಗೆಯುಂ–ಅಂಬಾರಿಯೂ, ಏಱುವರ್ದ ಜೋದರುಂ–ಹತ್ತಿದ್ದ ಮಾವಟಿಗರೂ, ಬೆರಸು–ಕೂಡಿ, ಗದೆಯಿಂ–ಗದೆಯಿಂದ, ಅರಿ ಗಜಘಟೆಯುಂ–ವೈರಿಯ ಆನೆಗಳ ತಂಡವನ್ನು, ಗಿಜಿಗಿಜಿಯಾಗಿರೆ–ಅಜಿಗುಜಿಯಾಗು ವಂತೆ, ಪೊಯ್ದೊಡೆ–ಹೊಡೆದರೆ, ಅಮರರ್–ದೇವತೆಗಳು, ಅಂಬರತಳದೊಳ್–ಆಕಾಶ ಪ್ರದೇಶದಲ್ಲಿ, ಗುಜುಗುಜುಗೊಂಡು–ಪಿಸುಗುಟ್ಟುತ್ತ, ತಂತಮ್ಮಲ್ಲಿಯೇ ಮಾತಾಡುತ್ತ, ಆರ್ದರ್–ಗರ್ಜಿಸಿದರು.

ವಚನ ; ಘನಘಟೆಯಂತೆ–ಮೋಡಗಳ ಗುಂಪಿನಂತೆ, ಕಱುಕುಱುಂ ಮಾಡಿದಂ– ಚೆದರಿ ಹೋಗುವಂತೆ ಮಾಡಿದನು, ಮೊನೆಯೊಳ್–ಯುದ್ಧದಲ್ಲಿ. ಕೆಲ್ಲಂಬುಗಳಿಂದೆ ಈಟಿಯಂತಿರುವ ಬಾಣಗಳಿಂದ; "ಕಱುಕುಱುವೆಂದು ಸ್ಥಾನವ್ಯಾಕುಲತೆ", ಕಱಿಕುಱಿಮಾಗೆ ಪಂಚಳನ ಬಲ್ಪಡೆ ಪಂಚಳನಶ್ವ ಸಂಕುಲಂ ಕಱುಕುಱುಮಾಗೆ ಎಂದು ರನ್ನನ ಪ್ರಯೋಗ (ಅಜಿವು) ; ಕೆಲ್ಲಂಬು=(ತೆ) ಚಿಲ್ಲಕೋಲ.

೧೦೭. ಉರಮುಂ–ಎದೆಯನ್ನು, ಬಿರಿವಿನಂ – ಬಿರಿಯುವಂತೆ, ಇಸೆ–ಹೊಡೆ ಯಲು, ಮದ್ರರಾಜಂ–ಶಲ್ಯನು, ಅಳಿಯನ – ಸೋದರಳಿಯನಾದ ಧರ್ಮರಾಜನ, ಪರಾಕ್ರಮಕ್ಕೆ–ಪೌರುಷಕ್ಕೆ, ಒಸೆದು–ಸಂತೋಷಿಸಿ, ಮೊಗಂ ಮುರಿಯದೆ – ಮುಖ ವನ್ನು ತಿರುಗಿಸಿಕೊಳ್ಳದೆ, ಪೆಱತುಂ ರಥಮಂ ತರಿಸಿ–ಬೇರೊಂದು ರಥವನ್ನು ತರಿಸಿ, ಕನಲ್ದು–ಕೆರಳಿ, ಅಡರ್ದು–ಹತ್ತಿ, ಕದನಕೆ–ಯುದ್ಧಕ್ಕೆ, ಆಗಳೆ–ಆಗಲೇ, ನೆಱೆದಂ– ಸಮರ್ಥನಾದನು.

೧೦೮. ರಥಮಂ–ರಥವನ್ನು, ಮುಱಿದು – ಒಡೆದು. ರಥಾಶ್ವಮಂ – ರಥದ ಕುದುರೆಗಳನ್ನು, ಉಱಿದೆ–ಬಿಡದೆ, ಎರಡುಂ ಶರದೆ–ಎರಡು ಬಾಣಗಳಿಂದ, ಸೂತನಂ– ಸಾರಥಿಯನ್ನು, ನಾಲ್ಕಱಿಂ–ನಾಲ್ಕು ಬಾಣಗಳಿಂದ, ಪಱಿವಿಗೆಯಂ–ಬಾವುಟವನ್ನು, ಒಂದು ಅಱಿಕೆಯ ಸರಲೊಳ್ – ಒಂದು ಪ್ರಸಿದ್ಧವಾದ ಬಾಣದಿಂದ, ಮಾಣದೆ– ನಿಲ್ಲದೆ, ತಱಿದಂ–ಕತ್ತರಿಸಿದನು ; ಏಂ ಕೃತಾಸ್ತ್ರನೋ ಶಲ್ಯಂ–ಏನು ಅಸ್ತ್ರವಿದ್ಯಾ ಪಾರಂಗತನೋ ಶಲ್ಯನು.

ವಚನ : ವಿರಥನಂ ಮಾಡಿ–ರಥ ಹೀನನನ್ನಾಗಿ ಮಾಡಿ ; ಚಕ್ರರಕ್ಷಕಂ–ಸೈನ್ಯ ರಕ್ಷಕನು ; ಎಡೆಗೊಂಡು–ನಡುವೆ ಹೊಕ್ಕು.

೧೦೯. ಮೃಗರಾಜ ನಖರ ಬಾಣಾಳಿಗಳಿಂ–ಸಿಂಹದ ಉಗುರಿನ ಆಕಾರದ ಬಾಣ ಸಮೂಹಗಳಿಂದ, ತೆಗೆನೆಱೆದು – ಪೂರ್ಣವಾಗಿ ಎಳೆದು, ಶಲ್ಯಂ–ಶಲನ್ನು, ಉಱಿದೆ–ಇರದೆ, ಇಸೆ–ಪ್ರಯೋಗವಾಡಲು, ಮೃಗರಾಜಂಗಳೆ–ಸಿಂಹಗಳೆ, ಬಿದುವಂ– ಕುಂಭಸ್ಥಲಗಳನ್ನು, ಪೋೞ್ವವೊಲ್ – ಸೀಳುವಂತೆ, ಉಗ್ರಬಾಣಾವಳಿಗಳ್–ಭೀಕರ ಬಾಣಜಾಲಗಳು, ಅಗಲ್ವಿನಂ–ಅಗಲಿ ಹೋಗುವಂತೆ, ಬೇರಾಗುವಂತೆ, ಪೋೞ್ದುವು– ವಿಭಾಗಿಸಿದುವು.

**ವಚನ**: ಊಱಕೊಂಡು–ಬಲವಾಗಿ ಅಮುಕಿ, ಎಚ್ಚಾಗಳ್–ಪ್ರಯೋಗಿಸಿದಾಗ; ತೆಗೆನೆಱೆದೂಱಕೊಂಡಿಸೆ ಶಿರಂ ಪಱದತ್ತ ವಿಯತ್ತಳಂಬರಂ ನೆಗೆದೊಡೆ–ಎಂದು ಪಂಪನ ಇನ್ನೊಂದು ಪ್ರಯೋಗ (ಪಂಪಭಾ. ೧೨–೧೫೪).

೧೧೦. ಪೆಱಗಿಡುವ–ಹಿಮ್ಮೆಟ್ಟುವ, ದಂತಿಯಂ–ಆನೆಯನ್ನು, ಕಲಿ–ಶೂರನಾದ ನೀಳನು, ನಿಱಿಸಿ–ನಿಲ್ಲಿಸಿ, ಸ್ಥಾಪಿಸಿ, ಚಲಂ–ಛಲವು, ನೆಲಸೆ–ನೆಲಸಲು, ತೋಱಿಕುಡುವುದುಂ – ತೋರಿ ಬಿಡುತ್ತಲು, ಛೂ ಬಿಡುತ್ತಲು, ಆಗಳ್ – ಆಗ, ಶಲ್ಯ–ಶಲ್ಯನು, ಅಂತ ನೀಳನ ತಲೆಯಂ–ಎದುರಿಸಿದ ನೀಲನ ತಲೆಯನ್ನು, ಪೊಱಮುಯ್ವವರಂ–ಹೆಗಲ ಹೊರಗಡೆಯವರೆಗೆ, ತೆಗೆ ನೆಱೆದು–ಕಿವಿಯವರೆಗೆ ಬಾಣವನ್ನು ಸೆಳೆದು, ಉಱದೆ–ಇರದೆ, ಎಚ್ಚಂ–ಹೊಡೆದನು.

**ವಚನ**: ಮೇಗಣಿಂ – ಮೇಲ್ಗಡೆಯಿಂದ, ಮೃಗರಾಜನಂತೆ – ಸಿಂಹದಂತೆ, ಹಸ್ತಿ ಮಸ್ತಕದಿಂ–ಆನೆಯ ತಲೆಯಿಂದ, ಕೆಡೆವುದುಂ – ಬೀಳುತ್ತಲು, ಪೆಱಗಿಕ್ಕಿ–ಹಿಂದಿಟ್ಟು.

೧೧೧. ಗೋಗ್ರಹಣದೋಳ್ – ಗೋಗ್ರಹಣದ ಯುದ್ಧ ಸಮಯದಲ್ಲಿ, ಪಗೆವಾಡಿ–ಶತ್ರುಗಳ ಸಾಲುಗಳು, ನಗೆ–ನಗಲು, ಪೊಱಮಾಱದ–ಹಿಂದಕ್ಕೆ ಓಡಿಬಂದ, ಬನ್ನಂ ಒಂದು–ಒಂದು ಅವಮಾನ, ನೆಟ್ಟಗೆ–ನೇರಾಗಿ, ಮನಮಂ–ಮನವನ್ನು, ಪಳಂಚಿ–ತಾಗಿ, ಅಲೆಯೆ – ಹಿಂಸಿಸಲು, ಮಾಣಡೆ – ನಿಲ್ಲದೆ, ಶಲ್ಯನಂ–ಶಲ್ಯರಾಜನನ್ನು, ಅಂದು–ಆಗ, ಅಶಲ್ಯನಂ–ಆಯುಧ ರಹಿತನನ್ನಾಗಿ, ಬಗೆವವೋಲ್–ಗಣಿಸುವ ಹಾಗೆ, ಏಳಿದಂ ಬಗೆದು–ಕಡೆಗಣಿಸಿ ನೋಡಿ, ದಂತಿಯಂ–ತನ್ನ ಆನೆಯನ್ನು, ಆಗಡೆ–ಆಗಲೇ, ತೋಱಕೊಟ್ಟು – ಛೂ ಬಿಟ್ಟು, ತೊಟ್ಟಗೆ – ಬೇಗನೆ, ರಥಮಂ ಪಡಲ್ವಡಿಸಿ–ರಥವನ್ನು ನೆಗ್ಗಿ ಬೀಳಿಸಿ, ಅರಾತಿಯಂ–ಹಗೆಯನ್ನು, ಅಸ್ತ್ರಕೋಟಿಯಿಂ–ಕೋಟ್ಯಂತರ ಬಾಣಗಳಿಂದ, ಪೂಳ್ದಿನ್–ಹೂಳಿದನು. 'ಪೊಱಮಾಱೆಂದು ಬೆನ್ನೀಹಂ', ಪೊಱಗು + ಮಾಱು ;

**ವಚನ**: ಅಳವುಮದಟುಂ – ಶಕ್ತಿಯೂ ಶೌರ್ಯವೂ, ರಾಜೋತ್ತರಮಾಗೆ–ಚಂದ್ರನಂತೆ ವರ್ಧಿಸಲು ; ಸಿಗ್ಗಾಗಿ–ನಾಚಿ.

೧೧೨. ಉತ್ತರನ ಮರಣ: ತಾರಕನಂ – ತಾರಕಾಸುರನನ್ನು, ಗುಹಂ–ಷಣ್ಮುಖನು, ಅಂತು – ಎದುರಿಸಿ, ಶಕ್ತಿಯಿಂ – ಶಕ್ತ್ಯಾಯುಧದಿಂದ, ಇಡುವಂತೆ–ಪ್ರಹಾರ ಮಾಡುವಂತೆ, ಅರಾತಿಸಂಹಾರಕವಪ್ಪ-ಹಗೆಯನ್ನು ಕೊಲ್ಲುವುದಾದ, ವಿಸ್ಫುರಿತ ಶಕ್ತಿಯಿಂ–ಹೊಳೆಯುತ್ತಿರುವ ಶಕ್ತಿಯೆಂಬ ಆಯುಧದಿಂದ, ಆತನಂ–ಉತ್ತರನನ್ನು, ಇಟ್ಟು–ಹೊಡೆದು, ಖಡ್ಗದಿಂ–ಕತ್ತಿಯಿಂದ, ವಾರಣಮಂ–(ಉತ್ತರನ) ಆನೆಯನ್ನು, ಪಡಲ್ವಡಿಸಿ–ಚೂರು ಚೂರಾಗಿ ಬೀಳಿಸಿ, ತಾಂ–ತಾನು (ಶಲ್ಯನು), ಪೆಱಪಿಂಗುವುದುಂ–ಹಿಂಪಕ್ಕೆ ಸರಿಯುತ್ತಲು, ಬಲಕ್ಕೆ–(ಪಾಂಡವರ) ಸೈನ್ಯಕ್ಕೆ, ಹಾಹಾರವಂ–ಅಯ್ಯೋ, ಅಯ್ಯೋ ಎಂಬ ಶಬ್ದ, ಉಣ್ಮೆ–ಹುಟ್ಟಲು, ತಲೆದೋರಲು, ಆಜಿಯೊಳ್–ಯುದ್ಧದಲ್ಲಿ,

ಉತ್ತರಂ–ಉತ್ತರನು, ದಂತಿವೆರಸು–ತನ್ನ ಆನೆಯ ಸಮೇತವಾಗಿ, ಅೞಿಗ್–ನಾಶವಾಗಿ, ತಱಿಗಿದಂ–ತಗ್ಗಿದನು, ಕುಸಿದನು.

**ವಚನ:** ಜವಂಗೆ-ಯಮನಿಗೆ, ಪೊಸತಿಕ್ಕುವಂತೆ–ಪ್ರಥಮ ಬಲಿಕೊಡುವ ಹಾಗೆ, ಇಕ್ಕಿ–ಹೊಡೆದು, ಬಸವೞಿದ–ಆಯಾಸಗೊಂಡ; ಅಮರಾಪಗಾಸುತನ–ಭೀಷ್ಮನ, ಮೊನೆಯೊಳ್–ಸೈನ್ಯದಲ್ಲಿ, ಭರಂಗೆಯ್ದು–ತೀವ್ರತೆಯನ್ನು ಮಾಡಿ, ಅತೀತನಾದುದಂ–ಸತ್ತುದನ್ನು; ಪೊಸತಂ+ಇಕ್ಕು=ಪೊಸತಿಕ್ಕು; ಒಕ್ಕಣೆ ಆದ ಮೇಲೆ ಅನ್ನವನ್ನು ದಿಕ್ಕುದಿಕ್ಕಿಗೆ ಚೆಲ್ಲಿ ಬಲಿಕೊಡುವುದಕ್ಕೆ ಪೊಸತು ಎಂದು ಹೆಸರು, ಮಲೆನಾಡಿನಲ್ಲಿ ಇದು ರೂಢಿಯಾಗಿದೆಯಂತೆ.

೧೧೩. ಪ್ರಳಯಪಯೋಧಿವೋಲ್–ಪ್ರಳಯಕಾಲದ ಕಡಲಂತೆ, ಅಳುರ್ದು–ವ್ಯಾಪಿಸಿ, ಪೆಂಕುಳಿಗೊಂಡ–ಹುಚ್ಚಾದ, ಮದೇಭವೈರಿವೋಲ್–ಸಿಂಹದಂತೆ, ಕೆಳರ್ದು–ಕೆರಳಿ, ಲಯಾಗ್ನಿವೋಲ್–ಪ್ರಳಯದ ಕಿಚ್ಚಿನಂತೆ, ಅಳುರ್ದು–ಹರಡಿ (ಸುಟ್ಟು), ಮದ್ರಮಹೀಶನಂ-ಶಲ್ಯ ರಾಜನನ್ನು, ಎಯ್ದೆ ತಾಗೆ-ಸಮಿಾಪಿಸಿ ತಾಗಲು, ಈಗಳ್-ಈಗ, ಶಲ್ಯನೊಳೆ–ಶಲ್ಯನಲ್ಲಿಯೇ, ಕಾಳಗಂ–ಯುದ್ಧ, ಬಳ್ವಳ ಬಳೆವತ್ತು–ಅಧಿಕವಾಗಿ ಬೆಳೆಯಿತು, ಎನುತ್ತಂ-ಎಂದು ಹೇಳುತ್ತಾ, ಅಂತೆ-ಹಾಗೆಯೇ, ಅಹಿಕೇತು-ದುರ್ಯೋಧನನು, ಕೆಯ್ಕೊಳಲ್–ಶಲ್ಯನನ್ನು ರಕ್ಷಿಸುವುದಕ್ಕಾಗಿ, ಸಿಂಧುತನಯಂಬೆರಸು–ಭೀಷ್ಮನೊಡನೆ ಬಂದು, ತಾಗಿದಂ–(ಶ್ವೇತನನ್ನು) ಎದುರಿಸಿದನು. ಪೆಂಕುಳಿಗೊಳ್: ಅದು ಪೆಂಕುಳಿ ನಾಯ ವಿಷಾಪಹಾರಕಂ (ಲೋಕೋಪ ೧೦–೩೫); ಇವಱಿಂದೆ ಪೆಂಕುಳಿಗೊಂಡ ನಾಯ್ ಕಚ್ಚಿದ ವಿಷಂ ಮಾಣ್ಬುದು (ಅದೇ–ವ್ಯಾಖ್ಯಾನ); ಪೆಂಕುಳಿನಾಯ್–ಪುಚ್ಚುಗೊಂಡನಾಯ್ (ಖಗೇಂದ್ರ. ೧೬–೨೪, ೩೫); ಪ್ರಾಣಿಗಳಿಗೆ ಬೆದೆಗಾಲದಲ್ಲಿ ಹುಚ್ಚು ಹಿಡಿಯುವುದು ಸಹಜ; ಸಿಂಹಕ್ಕೂ ಹಾಗೆಯೇ; ಪೆಣ್+ಕುಳಿ=ಪೆಂಕುಳಿ (ಹೆಣ್ಣನ್ನು ಸ್ವೀಕರಿಸುವ ಶೀಲವುಳ್ಳವನು).

**ವಚನ:** ರಣಪಟಹಂಗಳಂ ನೆಗಱ್ಚೆ–ಯುದ್ಧದ ಭೇರಿಗಳನ್ನು ಹೊಡೆಯಿಸಲು; ಗಱಿಸನ್ನೆಗೆಯ್ದು–ಬಾಣದ ಗರಿಗಳಿಂದ ಸಂಜ್ಞೆ ಮಾಡಿ.

೧೧೪. ನಡುವ–ನಾಟುವ, ಸರಲ್–ಬಾಣ; ಸರಲ್ಕೊಳೆ ಸುರುಳ್ವ ಹಯಂ–ಬಾಣ ಚುಚ್ಚಲು ಸುರಟಿ ಬೀಳುವ ಕುದುರೆ; ಹಯದ-ಕುದುರೆಯ, ಉಳ್ಳುರುಳ್ಗಳೊಳ್-ಒಳಕರುಳುಗಳಲ್ಲಿ, ತೊಡರ್ವ–ಸಿಕ್ಕಿಕೊಳ್ಳುವ, ಭಟರ್–ಯೋಧರು; ಭಟರ್ಕಳೊಳೆ–ಭಟರಲ್ಲಿಯೇ, ತೊೞ್ತುೞಿಮಾಡ್ಪ–ಸೊಪ್ಪುಗುಟ್ಟುವ, ಅರೆಯುವ, ರಥಂ-ರಥಗಳು, ರಥಕ್ಕೆ ಪಾಯ್ದು–ರಥದ ಮೇಲೆ ನುಗ್ಗಿ, ಅಡಿಗಿಡೆ–ಹೆಜ್ಜೆ ಜಾರಲು, ಮೆಯ್ವೊಣರ್ಚುವ–ಮೈಯನ್ನು ಸೇರಿಸುವ, ಮಹಾರಥರ್–ಮಹಾರಥಿಕರು, ಅಜಿಯೊಳ್–ಯುದ್ಧದಲ್ಲಿ, ಅಂತು–ಹಾಗೆ, ಅಗುರ್ವಿನ–ಭಯದ, ಅಚ್ಚು–ಮುದ್ರೆ, ಉಡಿವರೆ–ಮುರಿದಿರಲು, ಬಿಸುನೆತ್ತರಸುಟ್ಟುರೆ–ಬಿಸಿರಕ್ತದ ಸುಳಿ, ಪ್ರವಾಹ; ಸೂಸುವನ್ನೆಗಂ–ಚೆಲ್ಲುವವರೆಗೂ,

ಕಾದಿ-ಯುದ್ಧಮಾಡಿ, ಬಿಚ್ಚಳಿಸಿದರ್ – ವಿಸ್ತರಿಸಿದರು ಎಂದರೆ ಅತಿಶಯಿಸಿದರು. 'ತೊಟ್ಟುಬಿಯೆಂದು ಸೊಪ್ಪಾದುದು'.

**ವಚನ**: ಪಡೆಯ–ಸೈನ್ಯದ; ತಲೆಮುಟ್ಟ–ತಲೆಯನ್ನು ಸೇರಿಸಿ ಎಂದರೆ ಸಮ್ಮುಖರಾಗಿ; ಅಱಿವಿನೊಳ್–ಸಾವಿನಲ್ಲಿ; ಮುಳಿಸಿನೊಳ್–ಕೋಪದಲ್ಲಿ; ಮುಟ್ಟೆ ವಂದು–ಹತ್ತಿರಕ್ಕೆ ಬಂದು, "ತಲೆಮುಡು–ಶಿರಸ್ಸಂಧಾನೇ".

**೧೧೫.** ಮುಳಿಸಿನೊಳ್ – ಕೋಪದಲ್ಲಿ, ಎಯ್ದೆ ಕೆಂಪಡರ್ದ–ಚೆನ್ನಾಗಿ ಕೆಂಪೇರಿದ, ಕಣ್ಗಳಿಂ–ಕಣ್ಣುಗಳಿಂದ, ಒರ್ಮೆಯೆ–ಒಂದೇ ಸಲಕ್ಕೆ, ನುಂಗುವಂತೆ–ನುಂಗುವಹಾಗೆ, ಅಸುಂಗೊಳೆ–ಪ್ರಾಣವನ್ನು ಹೀರಲು, ನಡೆ ನೋಡಿ–ನಾಟುವಂತೆ ನೋಡಿ, ಮಾಣದೆ–ಬಿಡದೆ, ಉರಮಂ–ಎದೆಯನ್ನು, ಬಿರಿಯೆಚ್ಚೊಡೆ–ಸೀಳುವಂತೆ ಹೊಡೆದರೆ, ಸೂಸಿಪಾಯ್ವ–ಚೆಲ್ಲಿ ಹರಿಯುವ, ಅಸೃಗ್ಜಳಂ–ರಕ್ತದ ನೀರು, ಅವನ, ಉಗ್ರಕೋಪ ಶಿಖಿ–ಭಯಂಕರ ಕೋಪವೆಂಬ ಅಗ್ನಿ, ತಳ್ತು–ಸೇರಿ, ಅಳುರ್ವಂತೆ ಪೊಲಾಗೆ–ವ್ಯಾಪಿಸುವ ಹಾಗಾಗಲು, ಶಲ್ಯಂ–ಶಲ್ಯನು, ಆ ರಣದೊಳ್–ಆ ಕಾಳಗದಲ್ಲಿ, ನೆಱಲ್ದೊಡೆ–ನಿಶ್ಚೇಷ್ಟನಾದರೆ, ಸುರಾಪಗಾತ್ಮಜಂ–ಭೀಷ್ಮನು, ಅವನಂ–ಶಲ್ಯನನ್ನು, ಪೆಱಗಿಕ್ಕಿ–ಹಿಂದಿಕ್ಕಿ ಎಂದರೆ ರಕ್ಷಣೆಗೆ ಬಂದು.

**ವಚನ**: ಪನ್ನಿರ್ವರಾದಿತ್ಯರ–ಹನ್ನೆರಡು ಸೂರ್ಯರ, ದ್ವಾದಶಾದಿತ್ಯರ; ಭೈರವಾಂಡಬರಮುಮಂ – ಭೀಕರವಾದ ಆಟೋಪವನ್ನೂ, ಕಾಲಾಂತಕನ – ಪ್ರಳಯದ ಯಮನ, ಮಸಕಮುಮಂ–ವಿಜೃಂಭಣೆಯನ್ನೂ.

**೧೧೬.** ಖರಕಿರಣಪ್ರಚಂಡ ಕಿರಣಾವಳಿ-ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯನ ರಶ್ಮಿಸಮೂಹವು, ಲೋಕಮಂ–ಜಗತ್ತನ್ನು, ಎಯ್ದೆ–ಚೆನ್ನಾಗಿ, ಪರ್ವುವಂತಿರೆ–ಹಬ್ಬುವ ಹಾಗೆ, ಕಡುಕೆಯ್ದು–ವೇಗವನ್ನು ತೋರಿಸಿ, ತನ್ನೆರಡು ಕೈಯೊಳಂ–ತನ್ನ ಎರಡು ಕೈಗಳಿಂದಲೂ, ಎಚ್ಚ ಶರಾಳಿಗಳ್–ಬಿಟ್ಟ ಬಾಣ ಸಮೂಹಗಳು, ಭಯಂಕರ ತರಮಾಗೆ – ಅತಿ ಭೀಕರವಾಗಲು, ಭೂಭುವನಮೆಲ್ಲಮಂ – ಭೂಲೋಕವನ್ನೆಲ್ಲಾ, ಒರ್ಮೆಯೆ–ಒಂದೇಬಾರಿಗೆ ಸುತ್ತಿ, ಮುತ್ತಿಕೊಂಡಿರೆ–ಬಳಸಿ ಕವಿದುಕೊಂಡಿರಲು, ದೆಸೆಗಾಣಲಾಗದು–ದಿಕ್ಕನ್ನು ನೋಡಲು ಆಗದು: ದಲ್–ದಿಟವಾಗಿಯೂ, ಆ ರಣಗತ್ತಲೆ–ಆ ಯುದ್ಧದ ಕತ್ತಲೆ, ಮಂದಮಾದುದೋ–ದಟ್ಟವಾಯಿತೋ!

**ವಚನ**: ಅಂಬಿನ ಬಂಬಲೊಳಂ–ಬಾಣಗಳ ಗುಂಪುಗಳಲ್ಲೂ; ಜೋಡಾಗಿ–ಜೊತೆಗೂಡಿ; ಗಜವ್ರಜಂಗಳ–ಆನೆಗಳ ಸಮೂಹಗಳ; ಡೊಣೆವುಗಳಿಂದೆ–(ಗಾಯದ) ಬಿಲಗಳಿಂದ (?), ಒಱಿತು-ಪ್ರವಿಸಿ, ಜಿನುಗಿ; ಮಿಳಿರ್ವಪಟವಿಗೆಗಳ್–ಅಲ್ಲಾಡುವ ಬಾವುಟಗಳು; ತಲೆದೋಱಿ-ಮೇಲೆ ಕಾಣುತ್ತಿರಲು, ಮುಱುಂಗಿದ-ಮುಳುಗಿದ, ಓಸರಿಸಿ-ಒಂದುಕಡೆಗೆ ಸರಿಸಿ, ಕೀಲಿಂಕರ್ಚಿ-ಕಡಿವಾಣವನ್ನು ಕಚ್ಚಿ; ದಿಂಡುಮುಗುಳ್ದು (ದ್ದು)-ರಾಶಿಯಾಗಿ ಹೊರಳಿ, ತಿಂತಿಣಿಯೊಳ್-ಗುಂಪಿನಲ್ಲಿ; ತೊಡರ್ದು-ಸಿಕ್ಕಿ, ಎಡಪುತ್ತುಂ-ಎಡವುತ್ತ, ಎಬ್ಬಿಟ್ಟ-ಎಬ್ಬಿಸಿ, ಓಡಿಸಿ, ತೊಂಡು ಮರುಳ್ಗಳುಂ-ದುಷ್ಟ

ಪಿಶಾಚಿಗಳೂ; ಪಂದಲಿಗಳುಂ-ಹಸಿ ತಲೆಗಳೂ, ಪುದುಂಗೊಳಿಸೆ-ಸೇರಿಸಲು, ನಾಡೆಯುಂ ಪೊಟ್ಟು-ತುಂಬ ಹೊತ್ತು.

೧೧೭. ಪಟ್ಟಂಗಟ್ಟಿದ-ಪಟ್ಟವನ್ನು ಕಟ್ಟಿಕೊಂಡ, ಇಳಾಧಿನಾಥರೆ-ರಾಜರೆ, ಪಯಿಂಛಾಸಿರ್ವರ್-ಹತ್ತುಸಾವಿರ; ಪಟ್ಟಂಗಟ್ಟಿದವು-ಪಟ್ಟವನ್ನು ಕಟ್ಟಿಸಿಕೊಂಡ, ಒಳ್ಳಾನೆಗಳ್-ಭದ್ರಹಸ್ತಿಗಳು, ಒಂದು ಲಕ್ಕ-ಒಂದುಲಕ್ಷವು (ಇಲ್ಲಿ ಲಕ್ಕಂ ಎಂದಿರಬೇಕು; ಪ್ರಕೃತಿ ಪ್ರಯೋಗ) ; ತುರಗಂ-ಕುದುರೆಗಳು, ಪತ್ತೆಂಟು ಲಕ್ಕಂ-ಹತ್ತೆಂಟು ಲಕ್ಷವು ; (ಇವೆಲ್ಲಾ ಭೀಷ್ಮನ) ಒಂದೆ ಬಿಲ್ಗೆ-ಒಂದೇ ಬಿಲ್ಲಿಗೆ, ಪಡಲ್ವಟ್ಟು-ಚದರಿಹೋಗಿ, ಅಟಿಪ್ಪಡಿದುವು-ನಾಶವಾದವು, ಎನೆ-ಎನ್ನಲು, ನದೀಪುತ್ರಂಗೆ-ಭೀಷ್ಮನಿಗೆ, ಚಲಂ ಬಟ್ಟಂ-ಮತ್ಸರಿಸಿಯೂ, ಮಾರ್ಮಲೆದು-ಪ್ರತಿಭಟಿಸಿ, ಅಂಬುಮೊಟ್ಟಂ-ಬಾಣವನ್ನು ಹೂಡಿಯೂ, ಸಂಗ್ರಾಮ ರಂಗಾಗ್ರದೊಳ್-ಯುದ್ಧ ರಂಗದ ಮುಂಭಾಗದಲ್ಲಿ, ಉೞಿವರ್-ಉಳಿಯುವವರು ಎಂದರೆ ಜೀವಸಹಿತ ಇರುವವರು, ಆರ್-ಯಾರು, ಪೇಳ್-ಹೇಳು ? ಎಂದರೆ ಯಾರೂ ಇಲ್ಲ.

**ವಚನ**: ಎಂಬನ್ನೆಗಂ-ಎನ್ನುತ್ತಿರುವಲ್ಲಿ ; ಅನವರತ ಶರಾಸಾರದಿಂ-ಸಂತತವಾದ ಬಾಣವೃಷ್ಟಿಯಿಂದ ; ಸಣ್ಣಿಸಿದಂತೆ-ನಯವಾದ ಪುಡಿಯಾದಂತೆ ; ತವೆ ನಾಶವಾಗಲು ; ನೆರವಿಯಂ-(ಸಾಮಾನ್ಯ) ಸೈನ್ಯಸಮೂಹವನ್ನು ; ಏವಂದಪುದು-ಏನು ಬರುತ್ತದೆ, ಅದಿರದೆ-ಹೆದರದೆ, ಇದಿರಂ ಮಾರ್ಕೊಂಡು-ಇದಿರಿನಲ್ಲಿ ಪ್ರತಿಭಟಿಸಿ, ಬಿಲ್ದೊಯ್ದು-ಬಿಲ್ಲಿನ ಟಂಕಾರವನ್ನು ಮಾಡಿ ; ಸಣ್ಣಿಸು <ಸಣ್ಣ+ಇಸು ; ಸಣ್ಣ<(ಸಂ) ಶ್ಲಕ್ಷ್ಣ ; (ಪ್ರಾ) ಸಣ್ಹ.

೧೧೮. ಶ್ವೇತಭೀಷ್ಮರ ಯುದ್ಧ, ಶ್ವೇತನ ಮರಣ : ಶ್ವೇತನ ಬಿಲ್ಲೊಳಿರ್ದ-ಶ್ವೇತನ ಬಿಲ್ಲಿನಲ್ಲಿ ಇದ್ದ, ಮದನಾರಿಯ ರೂಪು-ಶಿವನ ಆಕಾರವು, ಎರ್ದೆಗೊಳ್ವುದುಂ-ಹೃದಯವನ್ನು ಆಕರ್ಷಿಸಲು, ನದೀಜಾತಂ-ಭೀಷ್ಮನು, ಉದಾತ್ತ ಭಕ್ತಿಯೊಳ್-ಅತಿಶಯವಾದ ಭಕ್ತಿಯಲ್ಲಿ, ಕೆಯ್ಮುಗಿದಾಗಳ್-ಕೈಗಳನ್ನು ಮುಗಿದಾಗ, ಇದೆಂತೊ-ಇದು ಹೇಗೋ ? ನಿಮ್ಮ ಪೆರ್ಮಾತಿನ-ದೊಡ್ಡಮಾತಿನ ಎಂದರೆ ಅಧಿಕವಾಗಿ ಕೊಚ್ಚಿಕೊಳ್ಳುವ, ಬೀರಂ-ಶೌರ್ಯ, ಮುಪ್ಪಿನೊಳ್-ಮುದಿತನದಲ್ಲಿ, ಈ ಎಡೆಗೆ ವಂದುದೆ-ಈ ಸ್ಥಿತಿಗೆ ಬಂತೆ? ಲೋಕವಿಖ್ಯಾತರಿರ್-ಲೋಕದಲ್ಲೆಲ್ಲಾ ಪ್ರಸಿದ್ಧರಾಗಿದ್ದೀರಿ ; ಆಗಿ-ಹಾಗೆ ಪ್ರಸಿದ್ಧರಾಗಿ, ಕೆಯ್ದುವಿಡಿವಲ್ಲಿಯೆ-ಆಯುಧವನ್ನು ಹಿಡಿಯಬೇಕಾದ ಸಮಯದಲ್ಲೇ, ಕಾಲ್ವಿಡಿಯಲ್ಕೆ-ಕಾಲನ್ನು ಹಿಡಿಯುವುದಕ್ಕೆ, ತಕ್ಕುದೇ-ಯೋಗ್ಯವೇ ?

೧೧೯. ರಣಾಗ್ರದೊಳ್-ಯುದ್ಧಮುಖದಲ್ಲಿ, ಪೊಣರ್ಪೊಡೆ-ಹೋರಾಡುವ ಪಕ್ಷದಲ್ಲಿ, ಅಂಕದ ಪೊಂಕದ-ಪ್ರಸಿದ್ಧವಾದ ಶೌರ್ಯವನ್ನುಳ್ಳ ಅಥವಾ ಯುದ್ಧದ ಉಬ್ಬಾಟವನ್ನುಳ್ಳ, ಸಿಂಧುಪುತ್ರನೋರ್ವನೆ-ಭೀಷ್ಮನೊಬ್ಬನೆ, ಎನಗೆ-ನನಗೆ, ದೊರೆಯೆಂದು-ಸಮಾನನೆಂದು, ನಿಮ್ಮೊಳ್-ನಿಮ್ಮಲ್ಲಿಯೇ, ತಜಿಸಂದಿಜಿಯಲ್ಕೆ-ನಿರ್ಣಾಯಕವಾಗಿ ಯುದ್ಧಮಾಡಲು, ಆನ್-ನಾನು, ಪೂಣ್ದೆಂ ವಲಂ-ಪ್ರತಿಜ್ಞೆಮಾಡಿದೆನು,

ಅಲ್ಲವೆ? ಎನಗೆ–ನನಗೆ, ಇಱಿವಟ್ಟೆಯಂ–ಯುದ್ಧಮಾಡುವ ಆಸಕ್ತಿಯನ್ನು, ಕಿಡಿಸಿ–ಹಾಳುಮಾಡಿ, ನಿಮ್ಮಳವಂ–ನಿಮ್ಮ ಶಕ್ತಿಯನ್ನು, ಪೆಱಗಿಕ್ಕಿ–ಹಿಂದಕ್ಕೆ ಇಟ್ಟು, ನೀಮುಂ–ನೀವೂ, ಇಂತು–ಹೀಗೆ, ಇನಿತು–ಇಷ್ಟು, ಎರ್ದೆಗೆಟ್ಟರ್–ಧೈರ್ಯಹೀನರಾದಿರಿ; ಇಂ–ಇನ್ನು, ತಱುಬಿಲಸಂದರಂ–ಯುದ್ಧಕ್ಕೆ ಬಂದವರನ್ನು, ಆರುಮಂ–ಯಾರನ್ನೂ, ಎಂತು–ಹೇಗೆ, ನಂಬುವರ್–ನಂಬುತ್ತಾರೆ?

ವಚನ: ನೋಯೆ ನುಡಿದೊಡೆ–ನೋವುಂಟಾಗುವ ಹಾಗೆ ಮಾತಾಡಿದರೆ,

೧೨೦. ಏನೆಂದೊಡಂ–ನೀನು ಏನು ಹೇಳಿದರೂ, ಎಂದುದು–ಹೇಳಿದ್ದು, ನಿನಗೆ, ಒಪ್ಪಿದಪುದು–ಒಪ್ಪುತ್ತದೆ; ಅಂತು ಏಕೆ ಎನ್ನ–ಹಾಗೇಕೆ ಎಂದು ಕೇಳುವೆಯೊ? ನಿನ್ನ, ಈ ಶರಾಸನದೊಳ್–ಈ ಬಿಲ್ಲಿನಲ್ಲಿ, ಶೂಲ ಕಪಾಲಪಾಣಿ–ಶೂಲವನ್ನೂ ಕಪಾಲವನ್ನೂ ಕೈಯಲ್ಲಿ ಉಳ್ಳ ಶಿವನು, ದಯೆಯಿಂ–ಕರುಣೆಯಿಂದ, ಬಂದು, ಇರ್ದಂ–ಇದ್ದಾನೆ, ಉಂತೆ–ಸುಮ್ಮನೆ, ಆನುಂ–ನಾನು ಕೂಡ, ಇಂತಿನಿತಂ–ಹೀಗೆ ಇಷ್ಟನ್ನು, ನೀಂ ನುಡಿವನ್ನೆಗಂ–ನೀನು ನುಡಿಯುತ್ತಿರಲು, ತಡೆವೆನೇ–ತಡಮಾಡುತ್ತೇನೆಯೇ? ತ್ರೈಲೋಕ್ಯನಾಥಂ–ಮೂರುಲೋಕಕ್ಕೆ ಒಡೆಯನು, ಕಣಾ–ನೋಡು, ವಿನಮನ್ಮಸ್ತಕನಾದೆಂ–ತಲೆಬಾಗಿದವನಾದೆನು, ಅಣ್ಮುವೊಡೆ–ನಾನು ಯುದ್ಧಮಾಡುವ ಪಕ್ಷದಲ್ಲಿ, ನೀಂ–ನೀನು, ಈ ದೇವನಂ–ಈ ಮೂಲೋಕದೊಡೆಯನಾದ ಶಿವನನ್ನು, ತೋಱುವೈ–ತೋರಿಸುತ್ತೀಯೆ.

೧೨೧. ನಿನಗೆ, ಇಱುವಂತು–ಯುದ್ಧಮಾಡುವ ಹಾಗೆ, ಮನದೊಳ್–ಮನಸ್ಸಿನಲ್ಲಿ, ತಱಿಸಲವುಂಟಪ್ಪೊಡೆ–ನಿಶ್ಚಯವಿರುವುದೇ ಆದರೆ, ಎಲವೊ–ಎಲವೋ, ಈ ದೇವೇಶನನ್–ಈ ಶಿವನನ್ನು, ಏಂ ಸೆಱೆವಿಡಿದೆ–ಏನು ಮೊರೆಹೊಕ್ಕೆ?. ದೇವನ ಮಱೆಯಂ–ಶಿವನ ಮೊರೆಯನ್ನು, ತೊಲಗು, ಬಿಟ್ಟುಹೋಗು, ಬೞಿಕ–ಅನಂತರ, ಎನಗಂ ನಿನಗಂ–ನನಗೂ ನಿನಗೂ, ಅಱಿಯಲಕ್ಕುಂ–ತಿಳಿಯಲಾಗುತ್ತದೆ. ನಮ್ಮಿಬ್ಬರ ಶೌರ್ಯ ಪ್ರತಾಪಗಳನ್ನೂ ನಾವಿಬ್ಬರೂ ತಿಳಿಯುವುದಾಗುತ್ತದೆ ಎಂದು ತಾತ್ಪರ್ಯ.

೧೨೨. ಕಾಗೆವೋಲ್–ಕಾಗೆಯಂತೆ, ಬಿಲ್ಗೆ–ಬಿಲ್ಲಿಗೆ, ಕರಂ–ವಿಶೇಷವಾಗಿ, ಅಂಜುವಿರ್–ಅಂಜುತ್ತೀರಿ, ಅಂಜಲಿಂ–ಹೆದರಬೇಡಿರಿ, ಆ ತ್ರಿಣೇತ್ರನಂ–ಆ ಶಿವನನ್ನು, ಪೋ–ಹೋಗು, ಗೆಡೆಗೊಂಡು–ಮೇಳಿಸಿಕೊಂಡು, ಕಾದುವೆನೆ–ಯುದ್ಧ ಮಾಡುತ್ತೇನೆಯೆ? ಕಾದೆಂ–ಯುದ್ಧ ಮಾಡೆನು; ಹರನಿತ್ತುದು–ಶಿವ ಕೊಟ್ಟದ್ದು, ಎಂದು ಇದಂ–ಈ ಬಿಲ್ಲನ್ನು, ನೋಡ–ನೋಡು, ಆಗಡುಂ–ಯಾವಾಗಲೂ, ಅಟ್ಟೆಯಿಂ ಪಿಡಿವೆಂ–ಪ್ರೀತಿಯಿಂದ ಹಿಡಿಯುತ್ತೇನೆ; ಅಕ್ಕಟ–ಅಚ್ಚರಿ, ನಿಮ್ಮನದಿರ್ಪುವಲ್ಲಿ–ನಿಮ್ಮನ್ನು ಅಡಗಿಸುವಾಗ, ಚಾಪಾಗಮಂ–ಧನುರ್ವಿದ್ಯೆ, ಏವುದು–ಯಾವುದು, ಅಂತೆ ನಗೆ–ಹಾಗೆ ನನಗೆ, ಬಿಲ್ವರಂ–ಬಿಲ್ಲಿನವರೆಗೆ, ಎಂದರೆ ಬಿಲ್ಲನ್ನು ಹಿಡಿಯುವವರೆಗೆ ಆಜಿಯೊಳ್–ಯುದ್ಧದಲ್ಲಿ, ಆಂಪ ಎದುರಿಸುವ, ಗಂಡರಾರ್–ಶೂರರು ಯಾರು?

೧೨೩. ಬಿಲ್ಲಂ-ಬಿಲ್ಲನ್ನು, ಬಿಸುಟೆಂ-ಬೀಸಾಡಿದೆನು, ಅಪೇವುದು-ಅದು ಯಾವುದು, ಎಂದು, ಕಡುಪಿಂದೆ-ಬೇಗನೆ, ಈಡಾಡಿ-ಎಸೆದು, ಸೂರ್ಯಪ್ರಭಾ ಪ್ರಸರಂಗಳ್-ಸೂರ್ಯನ ಕಾಂತಿಯು ಹಸರಗಳು, ಮಸುಳ್ವನ್ನೆಗಂ-ಕಂದುತ್ತಿರಲು, ಪೊಳೆವುದು-ಹೊಳೆಯುತ್ತಿರುವ, ಒಂದು ಶಕ್ತಿಯಂ-ಒಂದು ಶಕ್ತ್ಯಾಯುಧವನ್ನು, ಕೊಂಡು-ಹಿಡಿದು, ಅಗುರ್ವಿಸಿ-ಹೆದರಿಸಿ, ಗಾಂಗೇಯನಂ-ಭೀಷ್ಮನನ್ನು, ಇಟ್ಟಂ-ಹೊಡೆದನು, ಇಟ್ಟೊಡೆ-ಇಟ್ಟರೆ, ಅದಂ-ಆ ಶಕ್ತಿಯನ್ನು, ಪೇರಾಳ್-ಮಹಾಶೂರನಾದ ಭೀಷ್ಮ, ಈರಯ್ದು-ಹತ್ತು, ಅಸ್ತ್ರದಿಂ-ಬಾಣಗಳಿಂದ, ಖಂಡಿಸಿ-ಕತ್ತರಿಸಿ, ತಿಱಿದಿಕ್ಕಿದಂತೆ-ಚಿವುಟಿ ಎಸೆದಹಾಗೆ, ಆ ಶ್ವೇತನಾ-ಆ ಶ್ವೇತನ, ತಲೆಯಂ-ತಲೆಯನ್ನು, ಪೋಗೆಚ್ಚನ್-ಹೋಗುವಂತೆ ಹೊಡೆದನು.

೧೨೪. ಶ್ವೇತನ, ಉಪಮಾತೀತಮಂ-ಹೋಲಿಕೆಗೆ ಮೀರಿದ, ಈ ಧರೆಗೆ-ಈ ಭೂಮಿಗೆ, ನೆಗೞ್ದಿನೆಗೞ್ದಂ-ಮಾಡಿ ಪ್ರಸಿದ್ಧವಾದ, ಬೀರಮಂ-ಶೌರ್ಯವನು, ನಾಂ-ನಾನು, ಪಾತಾಳಕ್ಕಱಿಪುವೆಂ-ಪಾತಾಳಕ್ಕೆ ತಿಳಿಯಪಡಿಸುತ್ತೇನೆ, ಎಂಬೀ ತೆಱದೊಳೆ-ಎಂಬೀ ರೀತಿಯಲ್ಲೇ, ಅಪರಜಳನಿಧಿಗೆ-ಪಶ್ಚಿಮ ಸಮುದ್ರಕ್ಕೆ, ದಿನಪಂ-ಸೂರ್ಯನು, ಇೞಿದಂ-ಇಳಿದನು.

**ವಚನ:** ಅಪಹಾರ ತೂರ್ಯಂಗಳ-ಯುದ್ಧದ ನಿಲುಗಡೆಯನ್ನು ಸೂಚಿಸುವ ವಾದ್ಯಗಳನ್ನು, ಬಾಜಿಸಿ-ಬಾರಿಸಿ; ಆದಿತ್ಯಂ-ಸೂರ್ಯನು: ಅದಿರ್ಪುವಂತು-ಅಡಗಿಸುವ ಹಾಗೆ; ಆಟಂದು-ಮೇಲೆ ಬಿದ್ದು; ಪೆಸರ್ಗಳನನ್ವರ್ಥಂ ಮಾಡಿ-ಹೆಸರುಗಳನ್ನು ಸಾರ್ಥಕವಾಗಿರುವಂತೆ ಮಾಡಿ.

೧೨೫. ಪಡೆಯ ಪಾಡಿಯ-ಸೈನ್ಯದ ಸಾಲುಗಳ, ಬೀರರ-ಶೂರರ, ಪೆಂಡಿರ್-ಸ್ತ್ರೀಯರು, ಅನುರಾಗದಿಂ-ಸಂತೋಷದಿಂದ, ನೆರೆದು-ಒಟ್ಟಾಗಿ ಸೇರಿ, ಅೞ್ಕಱಿಂ-ಪ್ರೀತಿಯಿಂದ, ಪರಸಿ-ಹರಸಿ, ಒಱಲ್ದು-ಸ್ನೇಹಿಸಿ, ಸೇಸೆಗಳನಿಕ್ಕೆ-ಮಂತ್ರಾಕ್ಷತೆಗಳನ್ನು ಹಾಕಲು, ಮುರಾರಿಯ-ಶ್ರೀ ಕೃಷ್ಣನ, ಪಾಂಚಜನ್ಯ-ಪಾಂಚಜನ್ಯವೆಂಬ ಶಂಖದ, ವಿಸ್ಫುರಿತ ರವಂ-ವಿಕಂಪಿತ ಶಬ್ದವು, ಜಯೋತ್ಸವದ-ವಿಜಯೋತ್ಸವದ, ಘೋಷಣೆಯಂತಿರೆ-ಡಂಗುರದಂತೆ ಇರಲು, ಉದಾತ್ತಚಿತ್ತಂ-ಉದಾರವಾದ ಮನವುಳ್ಳ, ಅವನೀತಳ ಪೂಜ್ಯಗುಣಂ-ಭೂಮಂಡಲದಿಂದ ಪೂಜಿಸಲ್ಪಟ್ಟ ಗುಣವುಳ್ಳ, ಗುಣಾರ್ಣವಂ-ಅರಿಕೇಸರಿ, ಅರ್ಜುನ, ಆತ್ಮಮಂದಿರಮಂ-ತನ್ನ ಶಿಬಿರವನ್ನು (ಗೃಹವನ್ನು), ಪೊಕ್ಕಂ-ಪ್ರವೇಶಿಸಿದನು.

ದಶಮಾಶ್ವಾಸಂ ಸಂಪೂರ್ಣಂ

# ಏಕಾದಶಾಶ್ವಾಸಂ

೧. ಶ್ರೀಯುವತಿಯಂ-ಲಕ್ಷ್ಮಿಯೆಂಬ ವನಿತೆಗೆ, ಆ ವೀರಶ್ರೀ ಯುವತಿಯಂ-ಆ ವೀರ ಲಕ್ಷ್ಮಿಯೆಂಬ ಸ್ತ್ರೀಯನ್ನು, ಸವತಿ ಮಾಟಿಪೆಂ-ಸವತಿಯಾಗಿ ಮಾಡುತ್ತೇನೆ, ಎಂದು-ಎಂಬುದಾಗಿ, ಅರಿನೃಪರ-ಶತ್ರುರಾಜನ, ಉಳ್ಳಾಯಂ ಬೆರಸು-ಇರುವ ಸಾಮರ್ಥ್ಯ ಸಮೇತರಾಗಿ, ಎಱಿದು ಕೊಂಡು-ಸೆಳೆದುಕೊಂಡು, ಧರಾಯುವತಿಗೆ-ಭೂಮಿಯೆಂಬ ಸ್ತ್ರೀಗೆ, ನೆಗೆಟ್ಟಿ - ಪ್ರಸಿದ್ಧನಾದ, ಹರಿಗನೊರ್ವನೆ - ಅರ್ಜುನನೊಬ್ಬನೇ, ಗಂಡಂ-ಪತಿ,

೨. ಎಂಬ-ಎನ್ನುವ, ನಿಜ ಚರಿತಮಂ-ತನ್ನ ಚರಿತ್ರೆಯನ್ನು, ಪಲರುಂ-ಹಲವರೂ, ಬಣ್ಣಿಸೆ-ವರ್ಣಿಸಲು, ಕಿವಿಯನಾಂತು-ಕಿವಿಗೊಟ್ಟು ಕೇಳುತ್ತ, ಬೀರಂ-ಶೌರ್ಯವು, ಅಳುಂಬಂ ಎನಿಸಿ-ಅತಿಶಯವೆನಿಸಿ, ತನಗಿದಿರಂ ಬಂದು-ತನಗೆ ಎದುರು ಬಂದು, ಕಡಂಗಿ-ಉತ್ಸಾಹಿಸಿ ಎಂದರೆ ಯುದ್ಧ ಮಾಡಲು ಪ್ರಯತ್ನಿಸಿ, ಸತ್ತರಂ-ಸತ್ತವರನ್ನು, ಪೊಗೞುತ್ತುಂ-ಹೊಗಳುತ್ತ,

ವಚನ: ಯುದ್ಧವಾದ ದಿನ ರಾತ್ರಿಯಲ್ಲಿ ಸೈನ್ಯದ ಶಿಬಿರಗಳಲ್ಲಿ ಆಗುವ ನಡವಳಿಕೆಯ ಚಿತ್ರ ಇಲ್ಲಿದೆ:-ಅೞಿಯೆ ನೊಂದ-ಸಾಯುವಂತೆ ನೋವುಪಟ್ಟ, ತಮ್ಮಣುಗಾಳ್ಗಳ-ತಮ್ಮ ಪ್ರೀತಿಯ ಬಂಟರ, ಕೊಂಡಾಟದಾನೆಗಳ-ಹೊಗಳಲ್ಪಟ್ಟ ಆನೆಗಳ; ಪುಣ್ಗಳಂ-ಗಾಯಗಳನ್ನು, ಉಡಿಯಲುಂ-ಅಳಿಸುವುದಕ್ಕೆ ಎಂದರೆ ಹೋಗಾಡಿಸುವುದಕ್ಕೂ, ಓವಲುಂ-ಕಾಪಾಡುವುದಕ್ಕೂ, ಮರ್ದುಬೆಜ್ಜರುಮಂ-ಮದ್ದನ್ನೂ, ವೈದ್ಯರನ್ನೂ, ಅಟ್ಟುತ್ತುಂ-ಕಳುಹಿಸಿ ಕೊಡುತ್ತ; ಇಕ್ಕಿದ-ಧರಿಸಿದ; ಸನ್ನಣಂಗಳಂ-ಯುದ್ಧ ಕವಚಗಳನ್ನು; ಗೆಲ್ದು-ಗೆದ್ದು ಎಂದರೆ ಭೇದಿಸಿ, ಕಣಕೆನೆ-ಕಣಕ್ ಎನ್ನುವಂತೆ, ಪೊಗುರ್ಚಿ-ಸೀಳಿ ಹೊಕ್ಕು; ಉಡಿದಂಬುಗಳುಮಂ-ಮುರಿದ ಬಾಣಗಳನ್ನು; ಎಲ್ವಿಂನಟ್ಟ-ಎಲುಬುಗಳನ್ನು ನಾಟಿ, ಉಡಿದ-ಮುರಿದ, ಬಾಳ ಕಕ್ಕಡೆಯು-ಕತ್ತಿಗಳ ಮತ್ತು ಕಕ್ಕಡೆಗಳ, ಉಡಿಗಳುಮಂ-ಚೂರುಗಳನ್ನೂ; ಅಯಸ್ಕಾಂತಮಂ ತೋಱಿ-ಸೂಜಿಕಲ್ಲನ್ನು ತೋರಿಸಿ; ವಜ್ರಮುಷ್ಟಿಯ-ವಜ್ರಮುಷ್ಟಿ ಎಂಬ ಕೈಯಾಯುಧದ, ಪೊಯ್ಲೊಳಂ-ಏಟಿನಲ್ಲಿಯೂ, ಬಾಳ-ಕತ್ತಿಯ, ಕೋಳೊಳಂ-ತಿವಿತದಲ್ಲೂ, ಉಚ್ಚಳಿಸಿದ-ಸಿಡಿದು ಹೋದ, ಕಪಾಲದ ಓಡುಗಳಂ-ತಲೆಯ ಚಿಪ್ಪುಗಳನ್ನು, ಗಂಗೆಗಟ್ಟುತ್ತಂ-ಗಂಗಾ ನದಿಗೆ ಕಳುಹಿಸಿಕೊಡುತ್ತ.

೩. ಉನ್ನತ ಮಸ್ತಕ ಸ್ಥಳದೊಳ್-ಎತ್ತರವಾದ ತಲೆಯ ಪ್ರದೇಶದಲ್ಲಿ, ಅಂಬುಗಳ್ ಅೞ್ದು-ಬಾಣಗಳು ಮುಳುಗಿ ಎಂದರೆ ನಾಟಿ, ಉಡಿದಿರ್ದೊಡೆ-ಮುರಿದಿದ್ದರೆ, ಅತ್ತಮಿತ್ತಂ-ಅತ್ತಕಡೆ ಇತ್ತಕಡೆ, ನೆ[ರೆ]ತಂದು-ಗುಂಪಾಗಿ ಬಂದು, ಬಲ್ವಡಿಗರ್-ಬಲುಪಾಂಡಿಗರು, ಇಱುಕ್ಕುಳಿಸೊಳ್-ಇಕ್ಕುಳಗಳಲ್ಲಿ. ಕಿೞ್ತೆ-ಕೀಳಲು, ನೊಂದೆನೆನ್ನದೆ-ನೊಂದೆನು ಎಂದು ಹೇಳದೆ, ಆಃ ಎನ್ನದೆ-ಅಃ ಎಂದು ಹೇಳದೆ, ಅಣಂ-ಸ್ವಲ್ಪವೂ

ಮೊಗಂ ಮುರಿಯದೆ–ಮುಖವನ್ನು ತಿರುಗಿಸಿಕೊಳ್ಳದೆ, ಅಶ್ವದೆ–ಸುಸ್ತಾಗದೆ, ಜೇನೆಗಳೊಳ್–ನೋವುಗಳಲ್ಲಿ, ಮೊಗಂಗಳಂ–ಮುಖಗಳನ್ನು, ಬಿನ್ನಗೆಮಾಡದೆ–ವ್ಯಾಕುಲಿತವನ್ನಾಗಿ ಮಾಡದೆ, ಅಳವು – ಸಾಮರ್ಥ್ಯ, ಅಚ್ಚರಿಯಾಗೆ – ಆಶ್ಚರ್ಯಕರವಾಗಿರಲು, ಕೆಲರ್–ಕೆಲವರು, ಮಹಾರಥರ್–ಮಹಾರಥಿಕರು, ಇರ್ದರ್–ಇದ್ದರು.

೪. ರಸಮೊಸರ್ವನ್ನೆಗಂ – ರಸವು ಸೂಸುತ್ತಿರಲು, ತಗುಳೆಪಾಡುವ – ಬಿಡದೆ ಅನುಸರಿಸಿ ಹಾಡುವ, ಗಾಣರ–ಸಂಗೀತಗಾರರ, ಗೇಯಂ–ಸಂಗೀತ, ಅಚ್ಚಿಗಂ–ಪ್ರೀತಿಯನ್ನು, ಪೊಸಯಿಸೆ–ಹೊಸದಾಗಿ ಉಂಟುಮಾಡುತ್ತಿರಲು, ಸೋಂಕುವ–ಮುಟ್ಟುವ, ಒಲ್ದು ಒಲಿಸುವ–ಪ್ರೀತಿಸಿ, ಪ್ರೀತಿಸುವಂತೆ ಮಾಡುವ, ಓಪಳ–ಪ್ರಿಯಳ, ಸೋಂಕು–ಸ್ಪರ್ಶವು, ಪೊದಳ್ದ–ವ್ಯಾಪಿಸಿದ, ಬಿರಿದ–ಅರಳಿದ, ಜಾದಿಯೊಳ್-ಜಾಜಿಯ ಹೂವಿನಲ್ಲಿ, ಮಸಗಿದ–ವಿಜೃಂಭಿಸಿದ, ಕಂಪು–ಸುಗಂಧವು, ಕಂಪಂ ಒಳಕೊಂಡು–ಸುಗಂಧವನ್ನು ಜೆರಸಿಕೊಂಡು, ಅಲೆವ–ಬೀಸುವ, ಒಂದು ಎಲರ್–ಒಂದು ಗಾಳಿಯು, ಎಂಬ ಇವು–ಎನ್ನುವ ಇವುಗಳು, ಉಗ್ರ–ಭಯಂಕರವಾದ, ವೀರಭಟ–ವೀರಯೋಧರ, ಆಹವ ಕೇಳಿ–ಯುದ್ಧಕ್ರೀಡೆಯ, ಪರಿಶ್ರಮಂಗಳಂ – ಆಯಾಸಗಳನ್ನು, ಅಂದು–ಆಗ, ಪಾಱಿಸುವುವು–ಹಾರಿಹೋಗುವಂತೆ ಮಾಡುತ್ತವೆ ಎಂದರೆ ಕಳೆಯುತ್ತವೆ, ಹೋಗಲಾಡಿಸುತ್ತವೆ.

**ವಚನ**: ಉತ್ತಾಯಕನಾಗಿ–(ಪ್ರತಾಪವನ್ನು) ಮೆರೆದವನಾಗಿ; ಕಟ್ಟೊವಂ–ಕಟ್ಟೋಣ.

೫. ಬೇಳ್ವೆಯ–ಯಜ್ಞದ, ಕೊಂಡದೊಳ್–ಕುಂಡದಲ್ಲಿ, ಉರ್ಚಿದ ಬಾಳ್ವೆರಸು–ಹಿರಿದ ಕತ್ತಿಯೊಡನೆ, ಅರಿಬಲಮಂ–ಶತ್ರುಸೈನ್ಯವನ್ನು, ಅರಿಯಲೆಂದು–ಕತ್ತರಿಸಬೇಕೆಂದು, ಅಂಕದ ಕಟ್ಟಾಳ್–ಯುದ್ಧದ ಬಲ್ಲಾಳು, ವೀರಂ–ಶೂರನು, ಅತಿಬಲಂ–ಅತಿಶಕ್ತಿಯನ್ನುಳ್ಳವನು, ಧೃಷ್ಟದ್ಯುಮ್ನಂ-ಧೃಷ್ಟದ್ಯುಮ್ನನೆಂಬುವನು, ನಿನಗೆ, ಆಳ್ವೆಸಕೆ-ಸೇವಾವೃತ್ತಿಗೆ, ಎಂದು, ಇರ್ದನಲ್ತೆ–ಇದ್ದಾನಲ್ಲವೆ?

**ವಚನ**; ಈ ಕಜ್ಜಂ–ಈ ಕೆಲಸ; ಬಱಿಯನಟ್ಟಿ–ದೂತನನ್ನು ಕಳುಹಿಸಿ.

೬. ಆ ಸಮರ ಮುಖದೊಳ್–ಆ ಯುದ್ಧಾರಂಭದಲ್ಲಿ, ಎಸೆವ–ಪ್ರಕಾಶಿಸುವ, ಅರಿಕೇಸರಿಯ–ಅರ್ಜುನನ, ವಿರೋಧಿ ರುಧಿರ ಜಲನಿಧಿಪೊಲ್–ಶತ್ರುಗಳ ರಕ್ತದ ಕಡಲಂತೆ, ಸಂಧ್ಯಾಸಮಯಮೆಸೆಯೆ–ಮುಂಜಾನೆಯ ಸಂಧಿಕಾಲವು ಸೊಗಸಾಗಲು, ತಲತಲ–ಥಳಥಳ ಎಂದು, ನೇಸರ್ಮೂಡುವುದುಂ–ಸೂರ್ಯ ಹುಟ್ಟುತ್ತಲು, ಒಡ್ಡಣಕ್ಕೆ–ಯುದ್ಧರಂಗಕ್ಕೆ, ಎಟ್ಟಿಂದರ್–ಬಂದರು.

**ವಚನ**: ಒಡ್ಡಿ–ಸೈನ್ಯವನ್ನು ಮುಂದಿಟ್ಟು, ಚಾಜಿ; ಪ್ರಳಯಕಾಳಾನಿಳನೆ-ಪ್ರಳಯದ ಗಾಳಿಯೆ; ಕೆಯ್ವೀಸಿದಾಗಳ್–ಕೈಯನ್ನು ಬೀಸಿದಾಗ.

೭. ಚತುರಂಗಂ ಚತುರಂಗ ಸೈನ್ಯದೊಳ್–ಚತುರಂಗ ಸೈನ್ಯವು ಚತುರಂಗ ಸೈನ್ಯದಲ್ಲಿ, ಅಡುರ್ತುಂ–ಸಮಿಪಿಸಿ, ತಿಱ್ಱನೆ ಎಯ್ತಂದು–ತಿರ್ರೆಂದು ತಿರುಗುತ್ತ ಬಂದು,

ತಾಗಿ–ಸಂಘಟ್ಟಿಸಿ, ತಡಂಮೆಟ್ಟದೆ – ನಿದಾನವಾಗಿ ಹೆಜ್ಜೆ ಇಡದೆ, ಕಾದೆ – ಯುದ್ಧ ಮಾಡಲು, ಬಾಳ್ಗಳ–ಕತ್ತಿಗಳ, ಉಡಿಗಳ್–ಮುರುಕುಗಳು, ಜೀಜೆುಬ್ದು–ಜೀರೆಂದು ಶಬ್ದ ಮಾಡಿ ಚಿಮ್ಮಿ, ಮಾರ್ತಾಗಿ–ಒಂದೊಂದಕ್ಕೆ ತಗುಲಿ, ಅಥವಾ ಸಾಜಿಸೆಟುಿ–ಹಾರಿ ಏಳಲು, ಶೋಣಿತಧಾರೆಗಳ್–ರಕ್ತದ ಧಾರೆಗಳು, ಉರ್ಚಿ–ಸೂಸಿ, ಪೆರ್ಚಿ–ಹೆಚ್ಚಾಗಿ, ಸಿಡಿಯಲ್–ಸಿಡಿಯಲು, ವಿಮಾನಂಗಳು–(ದೇವತೆಗಳ) ವಿಮಾನಗಳು, ತೇಂಕಲ್–ತೇಲಾಡಲು, ಅಳ್ಕಿ–ಬೆದರಿ, ತಗುಳ್ದು–(ಒಬ್ಬರ ಹಿಂದೆ ಒಬ್ಬರು) ಓಡಿ, ದೇವರ್–ದೇವತೆಗಳು, ನಭೋಭಾಗದೊಳ್–ಆಕಾಶದ ಭಾಗದಲ್ಲಿ, ಮತ್ತಂ–ಪುನಃ, ಅತ್ತ-ಅತ್ತಕಡೆಗೆ, ಆಗಳೆ-ಆಗಲೇ, ತಳರ್ದರ್-ಚಲಿಸಿದರು, ಹೊರಟರು. ಅಡುರ್ತು < ಅಡುಱು+ದು, ಅಡ್ + ಉಱು–ಹತ್ತಿರ ಇರು, ಸಮೀಪಿಸು, ಲಕ್ಷ್ಮಣನಡುರ್ತು ಕಾಡುತ್ತಿರ್ದಂ. ಓವದೆ ಬಿಲ್ಲ ಬಿತ್ತಿಗಡುರ್ತಸೆ (ಆದೀ. ೧೩–೫೮), ತಪೋಭರವು ನಡುರ್ತು ತಾಳ್ದಲ್ (ಚಂದ್ರಪು. ೨–೫೨) ಎಂದು ಕೆಲವು ಪ್ರಯೋಗಗಳಿವೆ.

**ವಚನ:** ಒಂದೊರ್ವರೊಳ್ – ಒಬ್ಬೊಬ್ಬರಲ್ಲಿ; ಇದು ಓರೊರ್ವರೊಳ್ ಎಂದಿರಬೇಕು; ಸಾರೆಯಂಬಿನೊಳ್ – ಹಾರೆಯಾಕಾರದ ಬಾಣದಲ್ಲಿ, ನೆಪ್ಪಿಂಗೆ – ಕತ್ತರಿಸುವಿಕೆಗೆ, ಕೊಲೆಗೆ, ನೆಪ್ಪುಗೊಳ್ಳದೆ–ಕತ್ತರಿಸುವಿಕೆಯನ್ನುಕೊಳ್ಳದೆ ಎಂದರೆ ಕೊಲೆಗೆ ಕೊಲೆಯನ್ನು ಮಾಡದೆ, ನೇರ್ + ಪು = ನೇರ್ಪು, ನೇರ್–ಕೃಂತನೇ; ಅಂತಕಲೋಕಮುಂ-ಯಮುಲೋಕವನ್ನು; ಎಯ್ದುಸುವುದುಂ-ಸೇರಿಸುತ್ತಲೂ; ಎಬ್ಬಿಟ್ಟು-ಎಬ್ಬಿಸಿ ಓಡಿಸು;

೮. ಉಕ್ಕೋಪಾದಹನದೊಡನೆ–ಅತಿಶಯವಾದ ಕೋಪಾಗ್ನಿಯೊಡನೆ, ಪೃಷತ್ಕಂಗಳ್–ಬಾಣಗಳು, ಕೋಟಿಗಣಿತದಿಂದೆ – ಕೋಟಿ ಲೆಕ್ಕದಿಂದ, ಉಱುವಿಸಂ – ಇಸುತ್ತಿರಲು. ಆರ್ದು–ಗರ್ಜಿಸಿ, ಉತ್ಕಚದಿತಿಜನಂ–ಕೆದರು ಕೂದಲುಳ್ಳ ರಾಕ್ಷಸನಾದ, ಘಟೋತ್ಕಚನಂ – ಘಟೋತ್ಕಚನನ್ನು, ಬಿೞ್ದು – ಬಿದ್ದು, ಮೂರ್ಛೆವೋಪಿನಂ – ಮೂರ್ಛೆಹೋಗುವಂತೆ, ಉಱದೆ–ಬಿಡದೆ, ಎಚ್ಚಂ–ಬಾಣಗಳಿಂದ ಹೊಡೆದನು.

**ವಚನ:** ತೆರಳ್ಚಿ–ಒಂದು ಮಾಡಿ, ಉಂಡೆಮಾಡಿ; ತೀರ್ರೈಸಿ–ಚಪ್ಪರಿಸಿ (?) (೨–೫೮) ಪದ್ಯವನ್ನು ನೋಡಿ; ಮುಸಕದಿಂ–ಕೋಪದಿಂದ;

೯. ಇಸುವುದುಂ–ಬಾಣಪ್ರಯೋಗ ಮಾಡುತ್ತಲು, ಎಚ್ಚ ಶಾತಶರಸಂತತಿಯಂ–ಬಿಟ್ಟ ಹರಿತವಾದ ಬಾಣಗಳ ಸಮೂಹವನ್ನು, ಭಗದತ್ತಂ–ಭಗದತ್ತನು, ಎಯ್ದೆ–ಚೆನ್ನಾಗಿ, ಖಂಡಿಸಿ–ಕತ್ತರಿಸಿ, ರಥಮುಂ–ರಥವನ್ನು, ಪಡಲ್ವಡಿಸಿ–ಧ್ವಂಸಮಾಡಿ ಬೀಳಿಸಿ, ಮತ್ಸರದಿಂ–ದ್ವೇಷದಿಂದ, ಗಜೆಗೊಂಡು–ಗದೆಯನ್ನು ಹಿಡಿದುಕೊಂಡು, ತಾಗೆ–(ಭಗವತ್ತನನ್ನು) ತಾಗಲು, ಮಾಣಿಸಲ್–(ಅವನನ್ನು) ನಿಲ್ಲಿಸಲು, ಅಮರಾಪಗಾಸುತಂ–ಭೀಷ್ಮನು, ಇದಿರ್ಚುವುದುಂ–ಎದುರಿಸುತ್ತಲೂ, ಪವನಾತ್ಮಜಂ–ಭೀಮನು, ರಥಮುಱಿಗೆ–ರಥವು ನಾಶವಾಗುವಂತೆ, ಪೊಯ್ದು–ಹೊಡೆದು, ಶಂಕಿಸದೆ–ಹೆದರದೆ.

ಇದಿರಾಂತ–ಎದುರು ನಿಂತ, ಸೈಂಧವನುಮಂ–ಜಯದ್ರಥನನ್ನೂ, ಓಡೆ–ಪಲಾಯನ ಮಾಡುವಂತೆ, ಕಾದಿದಂ–ಸೆಣಸಿದನು.

ವಚನ:—ತಾಗಿದ ಬೇಗದಿಂ–ಸಂಘಟ್ಟಿಸಿದ ಶೀಘ್ರತೆಯಿಂದ, ಬಿರ್ದನಿಕ್ಕು ವಂತಿಕ್ಕಿ–ಔತಣವಿಕ್ಕುವಂತೆ ಇಕ್ಕಿ : ಮತ್ತಿನ–ಬೇರೆಯ ; ಬಱಿಸಂದಾಗಳ್–ಹಿಂದೆ ಅಟ್ಟಿಸಿಕೊಂಡು ಬಂದಾಗ ; ಬಿರ್ದು= (ತ) ವಿರುಂದು = (ತೆ) ವಿಂದು-ಉತ್ಸವದ ಊಟ ಇತ್ಯಾದಿ.

೧೦. ಕೌರವರಂ-ಕೌರವರನ್ನು, ಕೊಲಲೆಂದು-ಕೊಲ್ಲಬೇಕೆಂದು, ಮೊದಲಿಟ್ಟಂ-(ಭೀಮನು) ಆರಂಭಿಸಿದನು ; ಆರ್ದು–ಗರ್ಜಿಸಿ, ಉರ್ಚಿ–ಭೇದಿಸಿ, ಮುಕ್ಕದೆ–ತಿನ್ನದೆ, ಇನ್ನೇಕಿರ್ಪಂ–ಇನ್ನೇಕೆ ಇರುವನು ; ಇವಂಗೆ–ಈ ಭೀಮನಿಗೆ, ಆಂ–ನಾನು, ಕರಂ–ವಿಶೇಷವಾಗಿ, ಕೂರ್ಪೆಂ–ಪ್ರೀತಿಸುತ್ತೇನೆ ; ಇವರುಂ–ಈ ಕೌರವರೂ, ಸತ್ತಪ್ಪರ್–ಸಾಯುತ್ತಾರೆ ; ಇಂದಿಂಗೆ–ಇವತ್ತಿಗೆ, ಕಾವುದಂ–ರಕ್ಷಿಸುವುದನ್ನು, ಆಂ–ನಾನು, ಕಾವೆಂ–ರಕ್ಷಿಸುತ್ತೇನೆ ; ಎನ್ನುತ್ತೆ–ಎನ್ನುತ್ತ, ಪೆಱ ರಥಮುಂ–ಬೇರೆ ರಥವನ್ನು, ಬಂದೇಱಿ–ಬಂದು ಹತ್ತಿ, ಪೋ ಪೋಗಲ್–ಹೋಗಬೇಡ, ಹೋಗಬೇಡ, ಎಂದೊದಱುತ್ತುಂ–ಎಂದು ಕೂಗಿಕೊಳ್ಳುತ್ತ, ಪರಿತಂದು–ಧಾವಿಸಿ ಬಂದು, ಗಂಗಾಸುತಂ–ಭೀಷ್ಮನು, ಭೀಮನಂ–ಭೀಮನನ್ನು, ತಾಗಿ–ಎದುರಿಸಿ, ತಗರ್ದಂ–ಅಡ್ಡಗಟ್ಟಿದನು "ತಗರ್–ಗತಿಬಂಧನೇ"

**ವಚನ** : ಅಳಱ ಪೆಳಱ-ಹೆದರಲು ಬೆದರಲು ; ಕಿವುಱಿದುಱಿದು ಕೊಲ್ವಲ್ಲಿ-ಅಮುಕಿ ಹಿಂಡುವಂತೆ ಕೊಲ್ಲುವಾಗ, "ಕಿಮುಱ್ಚು ಹಸ್ತಮರ್ದನೇ" ; (ಕಿಮುಱ್= ಕಿವುಱ್) + ಚು ; ಕಿವುಱಿರ್–ಹಿಂಡು ಎಂದಾಗಬಹುದು.

೧೧. ಪ್ರಳಯ ಪಯೋಧಿ ನಾದಮನೆ – ಪ್ರಳಯ ಕಾಲದ ಸಮುದ್ರದ ಘೋಷವನ್ನೇ, ಪೋಲ್ತು–ಹೋಲಿ, ರಣಾನಕರಾವಂ–ಯುದ್ಧದ ಭೇರೀ ಶಬ್ದಗಳು, ಈಗಳ್–ಈಗ, ಅಗ್ಗಳಂ–ವಿಶೇಷವಾಗಿ, ಎಸೆದಪ್ಪುದು–ಕೇಳಿ ಬರುತ್ತಿದೆ, ಅತ್ತ–ಅತ್ತ ಕಡೆ, ಕಱಿವ ಅಂಬಿನ ಬಲ್ಸರಿಯಿಂದಂ–ಸುರಿಯುವ ಬಾಣಗಳ ಬಲುಮಳೆಯಿಂದ, ಆ ದಿಶಾವಳಿ–ಆ ದಿಕ್ಕುಗಳ ಸಾಲು, ಮಸುಳ್ದು–ಕಾಂತಿ ಹೀನವಾಗಿ, ಇಂತು–ಹೀಗೆ, ನೀಳ್ದಪುದು–ಉದ್ದವಾಗಿದೆ, ಎಂದರೆ ಚಾಚಿಕೊಂಡಿದೆ ; ಪೋಗದೆ ಕಾದುವ ಗಂಡರಿಲ್ಲ–ಹಿಮ್ಮೆಟ್ಟದೆ ಕಾದಾಡುವ ಶೂರರಿಲ್ಲ ; ನಿನ್ನಳಿಯನುಂ – ನಿನ್ನ ಸೋದರಳಿಯನಾದ ಅಭಿಮನ್ಯುವೂ, ಆ ವೃಕೋದರನುಂ – ಆ ಭೀಮಸೇನನೂ, ಅಲ್ಲದೆ – ಅಲ್ಲದವರು, ಪೆಱರ್–ಇತರರು, ಮುರಾಂತಕ–ಕೃಷ್ಣನೇ, ಇಲ್ಲ.

೧೨. ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರ್–ದ್ರೋಣ ಅಶ್ವತ್ಥಾಮ ಶಲ್ಯ ಭಗದತ್ತ ಭೀಷ್ಮರು, ಎಂಬ–ಎನ್ನುವ, ಸಂದ ಬೀರರೆ–ಪ್ರಸಿದ್ಧರಾದ ವೀರರೆ, ಮಱುವಕ್ಕಂ–ಎದುರುಪಕ್ಷ, ಶತ್ರುಪಕ್ಷ : ಅಣ್ಣನೊಡನೆ–ಅಣ್ಣನಾದ ಭೀಮನೊಡನೆ, ಇರ್ವರೆ– ಇಬ್ಬರೆ, ಕೂಸುಗಳ್ – ಮಕ್ಕಳು (ಎಂದರೆ ಅಭಿಮನ್ಯು ಘಟೋತ್ಕಚರು)

ಎಂಬ ಶಂಕೆಯುಂ-ಎಂಬ ಭಯವೂ, ಎನಗೆ-ನನಗೆ, ಈಗಳ್-ಈಗ, ಪಿರಿದು ಆದಪುದು-ಹಿರಿದಾಗಿ ಆಗುತ್ತಿದೆ; ಮಾಣದೆ-ಬಿಡದೆ, ಅತ್ತಲತ್ತ-ಆತ್ತಕಡೆಗೆ, ರಥಮಂ-ರಥವನ್ನು, ಚೋದಿಸು-ಪ್ರೇರಿಸಿಬಿಡು, ಎಂದು-ಎಂದು ಹೇಳುತ್ತ, ಭೋರ್ಗರೆಯೆ-ಭೋರೆಂದು ಶಬ್ದ ಮಾಡಲು, ಅರಾತಿಗೆ-ಹಗೆಗೆ, ಮಿಱ್ತುಬರ್ಪವೋಲ್-ಸಾವು ಬರುವಂತೆ, ಬಂದಂ-ಬಂದನು. ''ಮತ್ತಲತ್ತ ರಥಮನೆಂದು'' ಎಂಬುದಕ್ಕೆ ಪ್ರತಿಯಾಗಿ "ಮತ್ತಲತ್ತ ರ[ದ]ಮನೆಂದು" ಎಂಬ ಪಾಠವಿದ್ದರೆ ಪದ್ಯದ ಓಟ ಚೆಲುವಾಗುತ್ತದೆ; ರಾಜ ಎಂಬುದು ಅರಸ ಆದಂತೆ ರಥ ಎಂಬುದು ಅರದವಾಗುತ್ತದೆ; ಸಂಸ್ಕೃತದ ರಕಾರ ಲಕಾರಾದಿ ಶಬ್ದಗಳಿಗೆ ತಮಿಳಿನಲ್ಲಿ ಆದಿಯಲ್ಲಿ ಅಕಾರ, ಉಕಾರ, ಇಕಾರಗಳು ಸೇರಿ ತದ್ಭವಗಳಾಗುತ್ತವೆ; ಲೋಕ > ಉಲಗಂ: ಲಕ್ಷ್ಮಣ > ಇಲಕ್ಕಣಂ; ರೂಪಂ > ಉರುವಂ ಇತ್ಯಾದಿ; ಇದರಂತೆ ರಥ ತಮಿಳಿನಲ್ಲಿ ಅರದವಾಗುತ್ತದೆ; ಅದು ಕನ್ನಡಕ್ಕೆ ಬಂದಿದೆ, ತಮಿಳಿನ ಮೂಲಕ; ಪೊನ್ನ ಕರ್ಣಪಾರ್ಯರು ಈ ಶಬ್ದವನ್ನು ಪ್ರಯೋಗಿಸಿದ್ದಾರೆ.

**ವಚನ:** ನೆಲನದಿರೆ-ನೆಲ ನಡುಗಲು; ಬರವಿಂಗೆ-ಬರುವಿಕೆಗೆ, ಆಗಮನಕ್ಕೆ; ಮೆಲ್ಲನೆ ಉಲಿದು-ಮೆಲ್ಲಗೆ ಸದ್ದು ಮಾಡಿ;

**೧೩.** ಎಡೆಗೊಂಡ-(=ಗೊಂದ)-ನಡುವೆ ಬಂದ, ಅಂಕದ-ಪ್ರಸಿದ್ಧರಾದ, ಶಲ್ಯ ಸೈಂಧವ ಕೃಪ ದ್ರೋಣರ್ಕಳುಂ-ಶಲ್ಯ ಜಯದ್ರಥ ಕೃಪ ದ್ರೋಣರು ಕೂಡ, ಸಾಯಕಂಗಿಡೆ-ಬಾಣಗಳನ್ನು ವ್ಯರ್ಥವಾಗಿ ಬಿಡಲು, ತನ್ನೆಚ್ಚ-ತಾನು (ಅರ್ಜುನನು) ಪ್ರಯೋಗಿಸಿದ, ಶರಾಳಿಗಳ್-ಬಾಣಗಳ ಸಾಲು, ಪ್ರಲಯ ಕಾಲೋಲ್ಕಂಗಳ್-ಪ್ರಳಯ ಕಾಲದ ಉಲ್ಕಾಪಾತಗಳು, ಆ ತಾಗಿದಾಗಡೆ-ಅಗೋ ತಗುಲಿದ ಕೂಡಲೇ. ತತ್ಸೂತ ರಥಾಶ್ವಕೇತನ ಶರವ್ರಾತಂಗಳುಂ-ಆ ಸಾರಥಿ ರಥ ಕುದುರೆ ಬಾವುಟ ಬಾಣಗಳ ಸಮೂಹಗಳೂ, ನುರ್ಗೆ-ನುರಿಯಾಗಲು, ನಮ್ಮ ಹರಿಗಂ-ನಮ್ಮ ಅರಿಕೇಸರಿ, ಅರ್ಜುನ, ಕಣ್ಗೆಡೆ-ಶತ್ರುಗಳು ಕಂಗೆಡಲು, ಅಂತು-ಹಾಗೆ, ಬೆನ್ನಟ್ಟಿದನ್-ಅಟ್ಟಿಸಿಕೊಂಡು ಹೋದನು; ಹರಿಗಂ-ಅರ್ಜುನ, ಗಂಡಂ-ಶೂರನು, ಪೆಱರ್-ಇತರರು, ಗಂಡರೇ-ಶೂರರೇ?

**ವಚನ:** ಕುಳುಂಪೆಯಂ-ಹೊಂಡದ, ಕುಂಟೆಯ; ಕೆದಱುವನ್ನಂ-ಸಿಡಿಯುತ್ತಿರಲು; ಅಳುಂಬಮಾದ-ಅತಿಶಯವಾದ; ಕನಕ ತಾಳಧ್ವಜಂಗೆ-ಹೊಂದಾಳೆಯ ಚಿಹ್ನವನ್ನು ಧ್ವಜದಲ್ಲುಳ್ಳವನಿಗೆ ಎಂದರೆ ಭೀಷ್ಮನಿಗೆ,

**೧೪.** ಅಜ್ಜ-ತಾತನಾದ ಭೀಷ್ಮನೇ, ಮುಳಿ[ಯಲ್]-ಕೋಪಮಾಡಬೇಡ, ಬಿನ್ನಪಂ-ಬಿನ್ನಹ, ದಾಯಿಗರೊಳ್-ದಾಯಾದಿಗಳಲ್ಲಿ, ವಿರೋಧಮಂ-ಹಗೆತನವನ್ನು, ಇಂತು - ಹೀಗೆ, ಬಳ್ವಳನೆ - ಅತಿಶಯವಾಗಿ, ಮಾಳ್ಪುದಂ - ಮಾಡುವುದನ್ನು, ನಿಮ್ಮನೆ-ನಿಮ್ಮನ್ನೇ, ನಂಬಿ - ನಚ್ಚಿ, ಮಾಡಿದೆಂ - ಮಾಡಿದೆನು; ಇಂತು - ಹೀಗೆ, ಗೋವಳಿಗನಂ ಗೆಡೆಗೊಂಡು-ಗೋಪಾಲನಾದ ಕೃಷ್ಣನನ್ನು ಸ್ನೇಹಿತನನ್ನಾಗಿ ಮಾಡಿಕೊಂಡು, ಮುಂ-ಮುಂಚೆ, ಬಳೆದೊಟ್ಟ-ಬಳೆಯನ್ನು ಧರಿಸಿದ, ಪೇಡಿಯೆ-ಹೇಡಿಯಾದ ಅರ್ಜುನನೇ, ನಿಮ್ಮಂ-ನಿಮ್ಮನ್ನು, ಇಂತು-ಹೀಗೆ, ಇಳಿಸಿ-ಕಡೆಗಣಿಸಿ, ಮುಪ್ಪಲ-

ನೆಲ್ಲಮಂ–ನನ್ನ ಸೈನ್ಯವನ್ನೆಲ್ಲ, ಕೊಲೆ–ಕೊಲ್ಲಲು. ನೋಡುತಿರ್ಪುದು–ನೋಡುತ್ತ ಇರುವುದು, ಪಾಂಡಯೋ–ಧರ್ಮವೇ ? ಅಲ್ಲ ಎಂದು ದುರ್ಯೋಧನನ ಅಭಿಪ್ರಾಯ.

೧೫. ಮೇಳದೊಳ್–ಸ್ನೇಹದಲ್ಲಿ, ಎಂತುಂ–ಹೇಗೂ, ಪೆಜರ ಆಳಂ–ಇತರರ ಶೂರರನ್ನು, ಎಂದರೆ ಶತ್ರುಪಕ್ಷದ ಶೂರರನ್ನು, ಛಿದ್ರಿಸುವೆವು – ಛೇದಿಸುತ್ತೇವೆ, ಪೋ–ಹೋಗು, ಎಂಬ–ಎನ್ನುವ, ಪಾಂಡವರೊಳ್–ಪಾಂಡವರಲ್ಲಿ, ಮೇಳಿಸಿ–ಸೇರಿ ಕೊಂಡು, ನಣ್ಪನೆ-ನಂಟತನವನ್ನೇ, ಬಾಂಧವ್ಯವನ್ನೇ, ಬಗೆದಿರ್-ಬಗೆದಿರಿ, ಜೋಳದ-ಪಾಟೀಯುಮಂ–ಅನ್ನವಿಟ್ಟ ಧರ್ಮವನ್ನೂ ಎಂದರೆ ಅನ್ನದ ಋಣವನ್ನೂ, ಇನಿಸು–ಸ್ವಲ್ಪ, ನಿಮ್ಮೊಳ್–ನಿಮ್ಮಲ್ಲಿ, ಬಗೆಯಿಂ–ಭಾವಿಸಿರಿ.

೧೬. ಒರ್ವಂ – ಒಬ್ಬನು (ಶ್ರೀಕೃಷ್ಣನು), ಕೇಳ್ – ಕೇಳು, ತ್ರಿಜಗಕ್ಕಂ–ಮೂರು ಲೋಕಕ್ಕೂ, ಗುರು ; ದೇವಂ–ದೇವನು ; ಆದಿಪುರುಷಂ–ಪ್ರಥಮ ಪುರುಷನಾದವನು ; ಒರ್ವಂ–ಒಬ್ಬನು (ಅರ್ಜುನನು), ರಿಪುಧ್ವಜಿನೀ ಧ್ವಂಸಕನಾಗಿ–ಶತ್ರು ಸೈನ್ಯಗಳನ್ನು ನಾಶಮಾಡುವವನಾಗಿ, ಸಂದ ಕಲಿಯುಂ ಬಿಲ್ಲಾಳುಂ–ಪ್ರಸಿದ್ಧನಾದ ಶೂರನೂ, ಬಿಲ್ಗಾರನೂ ; ಇನ್ನೆಂದೊಡೆ–ಇನ್ನು ಎಂದರೆ, ಜಗತ್ಖ್ಯಾತರಂ–ಲೋಕ ವಿಖ್ಯಾತರಾದ ಕೃಷ್ಣಾರ್ಜುನರನ್ನು, ಎಂತು–ಹೇಗೆ, ಏಳಿಸಯ್–ತಿರಸ್ಕರಿಸುತ್ತೀಯ ? ಮುಂ ಪೂಣ್ದುದಂ – ಮೊದಲು ಪ್ರತಿಜ್ಞೆಮಾಡಿದುದನ್ನು, ಮಱೆವೆನೇ – ಮರೆಯುತ್ತೇನೆಯೋ ? ರಥಂ ಧ್ವಜಂ ಅಂಬು ಎಂಬಿವಂ-ರಥ ಧ್ವಜ ಬಾಣ ಎಂಬಿವುಗಳನ್ನು, ಎಯ್ದೆ–ಚೆನ್ನಾಗಿ, ಸಂಧಿಸು–ಕೂಡಿಸು, ನೆರಹು ; ಜಸಂ–ಕೀರ್ತಿಯು, ನಿಲ್ಕೆನ್ನೆಗಂ–ಶಾಶ್ವತವಾಗಿ ನೆಲಸುತ್ತಿರಲು, ಕಾದುವೆಂ–ಯುದ್ಧ ಮಾಡುವೆನು.

**ವಚನ** : ಪೆಱಗೆ–ಹಿಂದೆ ; ಒರ್ವರೊರ್ವರಂ ಗಱಿಸನ್ನೆಗೈದು–ಒಬ್ಬರೊಬ್ಬರಿಗೆ ಬಾಣದ ಗರಿಯಿಂದ ಸಂಜ್ಞೆ ಮಾಡಿ ; ಚೌಪಳಿಗೆಗಳೊಳ್–ಚೌಕಾಕಾರದ ಮುಖ ಮಂಟಪಗಳಲ್ಲಿ ; ಕಲಂಕೆ–ಕಲಕಲು ;

೧೭. ಉಪಮಾತೀತದ – ಹೋಲಿಕೆಗೆ ಮೀರಿದ. ಬಿಲ್ಲಬಲ್ಮೆ – ಬಿಲ್ವಿದ್ಯೆಯ ನೈಪುಣ್ಯ, ಸಮಸಂದು – ಸಮಾನವಾಗಿ ಸೇರಿ, ಒಂದೊರ್ವರೊಳ್ – ಒಬ್ಬೊಬ್ಬರಲ್ಲಿ, ಪರ್ಬೆ–ಹಬ್ಬಲು ; ಪರವ್ಯೂಹ ಭಯಂಕರಂ–ಶತ್ರುಸೈನ್ಯ ಭೀಕರನಾದ ಅರ್ಜುನ, ಪರ್ವಿ–ವ್ಯಾಪಿಸಿ, ನೆಗೆದು–ಹಾರಿ, ಪಾರ್ದು–ನೋಡಿ, ಆರ್ದು–ಗರ್ಜಿಸಿ, ಎಚ್ಚೊಡೆ–ಬಾಣಪ್ರಯೋಗ ಮಾಡಿದರೆ, ಅಂಬು ಅಂಬಂ ಅಟ್ಟೆ – ಬಾಣಗಳು ಬಾಣಗಳನ್ನು ಅನುಸರಿಸಿ, ಪಳಂಚುತ್ತೆ–ಸಂಘಟಿಸುತ್ತ, ಸಿಡಿಲ್ದ–ಸಿಡಿದ, ತೋರಗಿಡಿಯಿಂ–ದಪ್ಪನಾದ ಕಿಡಿಗಳಿಂದ, ಒಂದೊಂದಱೊಳ್–ಒಂದು ಬಾಣ ಇನ್ನೊಂದರಲ್ಲಿ, ಜೇವುತಂ–ಸುಡುತ್ತ, ತ್ರಿಪುರಂ ಬೊತ್ತಿಸಿದಂತೆ–ತ್ರಿಪುರಗಳನ್ನು ಉರಿ ಮುಟ್ಟಿಸಿದ ಹಾಗೆ, ವಿಯನ್ಮಂಡಳಂ–ಆಕಾಶಮಂಡಲವು, ಪೊತ್ತಿ–ಹೊತ್ತಿಕೊಂಡು, ಎತ್ತಂ–ಎಲ್ಲೆಲ್ಲೂ, ಪೊಗೆಪತ್ತು–ಹೊಗೆಯಾಡಿತು. ತೋರ<(ಪ್ರಾ) ಥೋರ<(ಸಂ) ಸ್ಥೂಲ.

**ವಚನ** : ಬ್ರಹ್ಮಾಂಡಮುರಿಯೆ–ಬ್ರಹ್ಮನ ಮೊಟ್ಟೆ ಎಂದರೆ ಸಮಸ್ತ ಸೃಷ್ಟಿ ಉರಿಯಲು.

೧೮. ನಡಪಿದಂ–ಸಾಕಿಸಲಹಿದವನು, ಅಜ್ಜಂ–ತಾತನಾದ ಭೀಷ್ಮ. ಎಂದು, ವಿಜಯಂ – ಅರ್ಜುನ, ಕಡುಕೆಯ್ದು – ತೀವ್ರತೆಯನ್ನು ತೋರಿಸಿ, ಇಸಂ – ಬಾಣ ಪ್ರಯೋಗಮಾಡನು ; ಎನ್ನ–ನನ್ನ, ಮಮ್ಮಂ–ಮೊಮ್ಮಗ, ಆಂ–ನಾನು, ನಡಪಿದೆಂ–ಸಾಕಿದೆನು, ಎಂದು, ಸಿಂಧುತನಯಂ – ಭೀಷ್ಮನು, ಕಡುಕೆಯ್ದು – ತೀವ್ರತೆಯನ್ನು ಪ್ರದರ್ಶಿಸಿ, ಇಸಂ – ಬಾಣಬಿಡನು ; ಇಂತು – ಹೀಗೆ, ಪಾಡುಗಾಡು–ಸ್ಥಿತಿಯನ್ನು ಕಾಪಾಡಿ, ಒಡನೊಡನೆ–ಕೂಡಲೇ, ಇರ್ವರುಂ–ಇಬ್ಬರೂ, ಶರಾಸನ ವಿದ್ಯೆ[ಯಂ]–ಬಿಲ್ವಿದ್ಯೆಯನ್ನು, ಮೆಱೆಯಲೆಂದೆ–ತೋರಿಸಬೇಕೆಂದೇ, ಎತ್ತಂ–ಎಲ್ಲೂ, ಇತ್ತಂ–ಇಲ್ಲೂ, ಇದಿರೊಳ್ – ಎದುರಿನಲ್ಲಿ, ಮಲೆದು – ಪ್ರತಿಭಟಿಸಿ, ಒಡ್ಡಿದ – ಚಾಚಿದ, ಚಾತುರಂಗಮುಂ–ಚತುರಂಗ ಸೈನ್ಯವನ್ನು, ಪಡಲ್ಪಡಿಸಿದರ್ – ಚೆಲ್ಲಾಪಿಲ್ಲಿಯಾಗಿ ಕೆಡವಿದರು.

**ವಚನ** : ಕಿಱಿದು ಪೊೞ್ತು–ಸ್ವಲ್ಪಹೊತ್ತು ; ಕೆಯ್ಗಾದು–ಕೈಯನ್ನು ರಕ್ಷಿಸಿ, ಎಂದರೆ ಧಾರಾಳವಾಗಿ ಬಾಣಪ್ರಯೋಗ ಮಾಡದೆ, ಸರಿತ್ಸುತನ–ಭೀಷ್ಮನ ; ಏವಮಂ ಮಾಡೆ–ಕೋಪವನ್ನುಂಟುಮಾಡಲು,

೧೯. ಮುನಿದು–ಕೆರಳಿ, ಎರಡಂಬಿನೊಳ್–ಎರಡು ಬಾಣಗಳಲ್ಲಿ, ರಥಮುಮಂ–ರಥವನ್ನೂ, ಪದವಿಲ್ಲುಮಂ–ಹದವಾದ ಬಿಲ್ಲನ್ನೂ, ಎಯ್ದೆ ಪಾರ್ದು – ಚೆನ್ನಾಗಿ ನೋಡಿ, ನೆಕ್ಕನೆ – ನೆಕ್ಕೆಂದು, ಕಡಿದು–ಕತ್ತರಿಸಿ, ಇಂದ್ರಸೂನು – ಅರ್ಜುನ, ಅಳುರ್ಕೆಯಿಂ–ಆಧಿಕ್ಯದಿಂದ, ಆರ್ದೊಡೆ–ಗರ್ಜಿಸಿದರೆ, ದಿವ್ಯಸಿಂಧುನಂದನಂ–ದೇವ ನದಿಯ ಮಗ ಭೀಷ್ಮ, ಬೇಱೆ ರಥಮಂ–ಇನ್ನೊಂದು ರಥವನ್ನು, ಇರದೆ ಏಱ–ಇರದೆ ಹತ್ತಿ, ಪೆಱತೊಂದು – ಬೇರೊಂದು, ಶರಾಸನಕ್ಕೆ – ಬಿಲ್ಲಿಗೆ, ಮೆಲ್ಲನೆ – ಮೆಲ್ಲಗೆ, ನಿಡುದೋಳನುಯ್ದು–ಉದ್ದವಾದ ತೋಳುಗಳನ್ನು ಚಾಚಿ, ಕರಂ ಅಚ್ಚರಿಯಾಗೆ–ವಿಶೇಷವಾಗಿ ಆಶ್ಚರ್ಯವುಂಟಾಗಲು, ಕಡಂಗಿ – ಉತ್ಸಾಹಿಸಿ, ಕಾದಿದಂ – ಯುದ್ಧ ಮಾಡಿದನು.

**ವಚನ:** ತೋಡುಂ ಬೀಡುಂ–ಬಾಣವನ್ನು ಹೂಡುವುದೂ ಬಿಡುವುದೂ ; ಎರ್ದೆಗಾಯಲ್ – ಮನವನ್ನು ವಶದಲ್ಲಿಟ್ಟುಕೊಳ್ಳಬೇಕೆಂದು ; ಎಕ್ಕೆಯಿಂ – ಒಂದೇ ಸಲ, ತಂಡತಂಡದೆ–ರಾಶಿರಾಶಿಯಾಗಿ, ತೀವಿದ–ತುಂಬಿದ, ಅಕಾಂಡ ಪ್ರಳಯಾನಿಲ ವಿಸ್ಫುಲಿಂಗೋಪಮಾನಂಗಳಪ್ಪ – ಅಕಾಲದ ಪ್ರಲಯಾಗ್ನಿಯ ಕಿಡಿಗಳಿಗೆ ಸಮಾನ ಗಳಾದ ; ನಿಶಿತಕಾಂಡಂಗಳಿಂದೆ–ಹರಿತವಾದ ಬಾಣಗಳಿಂದ, ಪಯಿಂಛಾಸಿರ್ವರ್–ಹತ್ತುಸಾವಿರ ; ಮಕುಟಬದ್ಧರುಮಂ – ರಾಜರನ್ನೂ, ತುರುಷ್ಕ – ಟರ್ಕಿದೇಶದ, ಪೇಸೇಱೆ–ಜುಗುಪ್ಸೆಯೇಳುವಂತೆ ; ಸೂಱೆಗೊಳೆ-ಸರದಿಯಲ್ಲೇ ; ತೊಡು < ತೋಡು ; ಬಿಡು < ಬೀಡು ; ಎರಡೂ ಭಾವನಾಮಗಳು,

೨೦. ನುಡಿವಳಿಗೆ – ಮಾತುಗಾರಿಕೆಗಾಗಿ, ಎಂದರೆ ಪ್ರತಿಜ್ಞೆಗಾಗಿ, ನರನ ರಥಮಂ–ಅರ್ಜುನನ ರಥವನ್ನು, ಪಡುವು–ಪಶ್ಚಿಮಕ್ಕೆ, ಎಣ್ಗಾವುದುವರಂ–ಎಂಟು

ಗಾವುದದವರೆಗೆ, ಸಿಡಿಲ್ವಿನಂ–ಸಿಡಿದು ಹೋಗುವಂತೆ, ಎಚ್ಚು–ಹೊಡೆದು, ಅಚ್ಚು ಡಿಯೆ–ರಥದ ಅಚ್ಚನ್ನು ಮುರಿಯಲು, ಭುಜಬಲದೆ–ಬಾಹು ಬಲದಿಂದ, ಹರಿಯ–ಕೃಷ್ಣನ, ಉರದೆಡೆಯಂ – ಎದೆಯ ಪ್ರದೇಶವನ್ನು, ಬಿರಿಯೆಚ್ಚು–ಬಿರಿಯುವಂತೆ ಹೊಡೆದು, ಭೀಷ್ಮಂ–ಭೀಷ್ಮನು, ಅಳವಂ–ಶಕ್ತಿಯನ್ನು, ಮೆಱೆದಂ–ಪ್ರಕಟಿಸಿದನು.

೨೧. ದೇವಾಸುರದೊಳಂ–ದೇವದಾನವರ ಯುದ್ಧದಲ್ಲೂ, ಇಂದಿನ–ಇವತ್ತಿನ, ನೋವಂ–ಯಾತನೆಯನ್ನು, ನೊಂದು–ನೋವನ್ನು ಹೊಂದಿ, ಅಱಿಯೆಂ–ತಿಳಿಯೆನು; ಉೞಿದ ಕೆಯ್ದುವಿನೊಳಂ–ಮಿಕ್ಕ ಆಯುಧಗಳಲ್ಲೂ, ಇವಂ–ಈ ಭೀಷ್ಮನು, ಸಾವನೆ – ಸಾಯುತ್ತಾನೆಯೆ ? ಸೆರಗಂ ಬಗೆದೊಡೆ–ಸಹಾಯವನ್ನು ಅಪೇಕ್ಷಿಸಿದರೆ, ಸಾವಾದಪುದು–ಮರಣವಾಗುತ್ತದೆ, ಎಂದು, ಚಕ್ರಿ–ಕೃಷ್ಣನು, ಚಕ್ರದೊಳ್ – ಚಕ್ರಾಯುಧದಲ್ಲಿ, ಇಟ್ಟಂ–ಹೊಡೆದನು. ಸೆರಗಂ ಎಂಬುದಕ್ಕೆ ಅರ್ಥ ಅನಿರ್ದಿಷ್ಟ; ಕೇಡು, ಅಪಾಯ, ಭಯ ಎಂದು ಕೆಲವು ವೇಳೆ ಅರ್ಥವಾದರೆ ಇತರ ಸಂದರ್ಭಗಳಲ್ಲಿ ಸಹಾಯ ಎಂಬರ್ಥ ಹೊಂದಿಕೆಯಾಗುತ್ತದೆ; ಸೆರಗಂ ಪಾರ್ದಪನೆಂಗುಮೀಧರೆ ಗದಾದಂಡಂ ಭುಜಾದಂಡಂ ಸಂಜಯ ಮಜ್ಜಯಕ್ಕೆ ನೆರವು, ಮತ್ತಾರ್ ನೆರಂ ಬಾರ್ವನೇ (ಗದಾ. ೩-೪೭); ಸೆರಗಂ ಪಾರದುದಾತ್ತ ರಾಘವನ ಮಾತಂ ಕೇಳ್ದು ಜಾಂಬೂನದಂ (ಪಂಪರಾ.೧೧-೭) ಎಂಬ ಪ್ರಯೋಗ ಗಳನ್ನು ನೋಡಬಹುದು; ಕೆಲವು ವೇಳೆ ಎರಡು ಅರ್ಥಗಳೂ ಹೊಂದುತ್ತವೆ; ಖರದೂಷಣರಂ ಕೊಂದರ್ ವಿರಾಧಿತಂಗವನ ಪೂರ್ವವೃತ್ತಿಯನಿತ್ತರ್ ಸೆರಗಿಲ್ಲದವರ್ ಕಾರಣಪುರುಷರ್ (ಪಂಪರಾ. ೧-೧೯) ; 'ಸೆರಗಂ ಬೆರಗಂ ಬಗೆಯದೆ' ಎಂಬ ನುಡಿಗಟ್ಟಿನಲ್ಲಿ ಇದು ಸಾಧಾರಣವಾಗಿ ಬರುತ್ತದೆ.

೨೨. ಇಟ್ಟೊಡೆ–ಹೊಡೆದರೆ, ತನಗೆ, ಅಸುರಾರಿಯ–ವಿಷ್ಣುವು, ಕೊಟ್ಟ, ಮಹಾವೈಷ್ಣವಾಸ್ತ್ರಮಂ–ಮಹಾ ವೈಷ್ಣವಾಸ್ತ್ರವನ್ನು, ಗಾಂಗೇಯಂ–ಭೀಷ್ಮನು, ತೊಟ್ಟು–ಹೂಡಿ, ಇಸುವುದುಂ–ಪ್ರಯೋಗಿಸುತ್ತಲು, ಎರಡುಂ–ಎರಡು ಅಸ್ತ್ರಗಳೂ, ಕಿಡಿಗುಟ್ಟೆ–ಕಿಡಿಗಳನ್ನು ಕಾರಿ, ಸಿಡಿಲ್ ಸಿಡಿಯೆ–ಸಿಡಿಲು ಸಿಡಿಯಲು, ಅಂಬರ ತಲದೊಳ್–ಆಕಾಶ ಪ್ರದೇಶದಲ್ಲಿ, ಪೋರ್ದುವು ಹೋರಾಡಿದುವು.

೨೩. ಪೋರ್ವುದುಂ–ಹೋರಾಡುತ್ತಲು, ಇಂ–ಇನ್ನು, ಪೆಱತಂಬಿಂ–ಬೇರೆಯ ಬಾಣದಿಂದ, ಪಗೆ–ಶತ್ರುತ್ವವು, ತೀರ್ವುದೆ–ಮುಗಿಯುತ್ತದೆಯೆ, ಎಂದು, ಪಾಶುಪತಮಂ–ಪಾಶುಪತಾಸ್ತ್ರವನ್ನು, ಪಿಡಿಯಲ್–ಹಿಡಿಯಲು, ಅರ್ಜುನಂ–ಅರ್ಜುನನು, ಪಾರ್ವುದುಂ–ನೋಡುತ್ತಿರಲು, ಆಗಳ್–ಆಗ, ಬೇರ್ವೆರಸು–ಬೇರು ಸಮೇತವಾಗಿ, ಕಿೞ್ಕಿಲ್ಕೆ–ಕೀಳುವುದಕ್ಕೆ, ಬಗೆಯೆ–ಯೋಚಿಸಲು, ಸುರರ್–ದೇವತೆಗಳು, ಎಡೆವೊಕ್ಕರ್–ನಡುವೆ ಹೊಕ್ಕರು (ಅರ್ಜುನ ಪಾಶುಪತವನ್ನು ಹೂಡಬಾರದೆಂಬುದನ್ನು ಸೂಚಿಸುವುದಕ್ಕಾಗಿ).

೨೪. ಸೂರ್ಯ ಮುಳುಗಿ ದಿನದ ಯುದ್ಧ ಮುಗಿದದ್ದು :–ಅಸುರಾರಿಯ–

ಕೃಷ್ಣನು, ಪಿಡಿವ–ಹಿಡಿಯುವ, ಉನ್ನತ ಕರಚಕ್ರಮೆಂದು–ಶ್ರೇಷ್ಠವಾದ ಕೈಯ ಚಕ್ರವೆಂದು, ಎನ್ನುಮಂ–ನನ್ನನ್ನೂ, ಭೀಷ್ಮಂ–ಭೀಷ್ಮನು, ತಱುಗುಂ–ಕತ್ತರಿಸುವನು, ಮುನ್ನಂ–ಮೊದಲು, ಅಡಂಗುವೆನೆಂಬವೋಲ್–ಮರೆಯಾಗುತ್ತೇನೆ ಎನ್ನುವಂತೆ, ದಿನಪಂ–ಸೂರ್ಯನು, ಅಸ್ತಾಚಲಸ್ಥನಾದಂ–ಪಶ್ಚಿಮದ ಬೆಟ್ಟದಲ್ಲಿ ನಿಂತವನಾದನು.

ವಚನ: ಅಪಹಾರತೂರ್ಯಂಗಳಂ–ಯುದ್ಧ ನಿಂತಿತೆಂದು ಸೂಚಿಸುವ ವಾದ್ಯಗಳನ್ನು; ಮುನ್ನೊತ್ತಿದ ವೇಳೆಗಳ್–ಮೊದಲು ಒತ್ತರಿಸಿಕೊಂಡ ಕಡಲ ಪೂರೆಗಳು, ಬೀಡುಗಳಂ–ಶಿಬಿರಗಳನ್ನು.

೨೫. ಅರಸಂ–ಧರ್ಮರಾಜನು, ಅಸುರ ವೈರಿಯಂ–ಕೃಷ್ಣನನ್ನು, ಮನೆಗೆ ಬರಿಸಿ–ತನ್ನ ಮನೆಗೆ ಬರಮಾಡಿಕೊಂಡು, ಚಕ್ರಂ–ಚಕ್ರಾಯುಧವು, ಭೀಷ್ಮಂಗೆ–ಭೀಷ್ಮನಿಗೆ, ಇಂತು–ಹೀಗೆ, ಏಕೆ–ಏತಕ್ಕೆ, ಮೊಗಂದಿರಿದುದೋ–ಮುಖವನ್ನು ತಿರುಗಿಸಿತೊ, ವಿಮುಖವಾಯಿತೊ ? ಅಸುರಾರೀ–ಕೃಷ್ಣನೇ, ನಿಮ್ಮಂ ಪಿಡಿದ–ನಿಮ್ಮನ್ನು ಹಿಡಿದುಕೊಂಡಿರುವ ಎಂದರೆ ಆಶ್ರಯಿಸಿರುವ, ಎನಗೆ–ನನಗೆ, ಧುರದೊಳ್–ಯುದ್ಧದಲ್ಲಿ, ಅರಿದೆನಲ್–ಅಸಾಧ್ಯವೆನ್ನಲು, ಅರಿದು–ಅಶಕ್ಯವಾದುದು, ಉಂಟೇ–ಇದೆಯೇ ?

೨೬. ಪೇಸೆನೆ–ಹೇಳು ಎನ್ನಲು, ನುಡಿದಂ–(ಕೃಷ್ಣನು) ಹೇಳಿದನು ; ಭೀಷ್ಮಂ–ಭೀಷ್ಮನು, ಮುರನೆಂಬಸುರನಂ–ಮುರನೆಂಬ ರಾಕ್ಷಸನನ್ನು, ಎನಗಾಗಿ ನನಗಾಗಿ, ಕಾದಿ–ಯುದ್ಧಮಾಡಿ, ಪಿಡಿದು–ಹಿಡಿದು, ಒಪ್ಪಿಸಿದೊಡೆ–ಒಪ್ಪಿಸಿದರೆ, ವೈಷ್ಣವ ಬಾಣಮಂ–ವೈಷ್ಣವಾಸ್ತ್ರವನ್ನು, ಒಸೆದು–ಸಂತೋಷಿಸಿ, ಇತ್ತೆಂ–ಕೊಟ್ಟೆನು: ಅದಂ ಗೆಲಲ್ಕೆ–ಅದನ್ನು ಗೆಲ್ಲುವುದಕ್ಕೆ, ಕೆಯ್ದುಗಳೊಳ್–ಆಯುಧಗಳು, ಒಳವೇ–ಇವೆಯೇ ? ಇಲ್ಲ.

೨೭. ಭೇದದೊಳಲ್ಲದೆ–ಭೇದೋಪಾಯದಲ್ಲಿ ಅಲ್ಲದೆ, ಗೆಲಲ್–ಗೆಲ್ಲಲು, ಅರಿದಾದಂ–ಅಸಾಧ್ಯನಾದವನು ; ಸುರಸಿಂಧು ಸುತನಂ–ಭೀಷ್ಮನನ್ನು, ಇಂದು ಇರುಳೊಳ್–ಇಂದು ರಾತ್ರಿಯಲ್ಲಿ, ನೀಂ–ನೀನು, ಭೇದಿಸು–ಛಿದ್ರಿಸು, ಎನೆ–ಎನ್ನಲು, ನೃಪತಿಯೋರ್ವನೆ–ರಾಜನಾದ ಧರ್ಮಪುತ್ರನೊಬ್ಬನೇ, ಆದರದಿಂ ಬಂದು–ಪ್ರೀತಿಯಿಂದ ಬಂದು, ಸಿಂಧುಸುತನಂ–ಭೀಷ್ಮನನ್ನು, ಕಂಡಂ–ನೋಡಿದನು.

೨೮. ಕಂಡು–ನೋಡಿ, ಪೊಡೆವಟ್ಟು–ನಮಸ್ಕರಿಸಿ, ನಯಂ–ನಮ್ರತೆಯು, ಎರ್ದೆಗೊಂಡಿರೆ–ಮನವನ್ನು ತುಂಬಿರಲು, ಪತಿ ನುಡಿದಂ–ಧರ್ಮರಾಜನು ಹೇಳಿದನು ; ದೇವರ್ – ಸ್ವಾಮಿಗಳು, ಕಲುಷಂಗೊಂಡಾಗಳ್ – ಕೋಪಗೊಂಡಾಗ; ಕಾವರೆ ಕಣೆಗೊಂಡವೊಲ್ – ಕಾಪಾಡುವವರೆ ಬಾಣವನ್ನು ಹೂಡಿದ ಹಾಗೆ, ಎಂದೆಂಬ ಮಾತಿನಂತೆ–ಎಂದು ಹೇಳುವ ಗಾದೆಯ ಮಾತಿನಂತೆ, ಆಗಿರಪೇ–ಆಗಿರುವುದಿಲ್ಲವೆ ? ''ಕಾವರೆ ಕಣೆಗೊಳ್ವೊಡಬ್ಬೆ ಬಾರಿಪರೊಳರೇ'' ಎಂದು ಜನ್ನನ

ಪ್ರಯೋಗವಿದೆ (ಯಶೋಚ) ; "ಕಾವಲಿಕಣೆಗೊಂಡರೆಂಬ ನುಡಿಗಡೆಯಕ್ಕುಂ" ಎಂದು ನಾಗಚಂದ್ರನ ಪ್ರಯೋಗ (ಪಂಪರಾ. ೯-೯೧).

೨೯. ತೊಂಬಯ್ ಸಾಸಿರ್ವರ್ – ತೊಂಬತ್ತುಸಾವಿರ, ಮಕುಟಬದ್ಧರ್- ರಾಜರು, ನಿಮ್ಮಂಬಿನ–ನಿಮ್ಮ ಬಾಣಗಳ, ಬಂಬಲೊಳ್–ಸಮೂಹದಲ್ಲಿಯೇ, ಮಡಿದರ್- ಸತ್ತರು, ನಂಬಿಂ–ನಂಬಿರಿ, ನಂಬಲಿಂ–ನಂಬದಿರಿ, ಇಂದಿಂಗೆ–ಇವತ್ತಿಗೆ, ಒಂಬತ್ತು ದಿನಂ ದಲ್–ಒಂಬತ್ತು ದಿವಸಗಳು, ದಿಟವಾಗಿಯೂ, ಎಮ್ಮ–ನಮ್ಮ, ಬೆನ್ನಲಿ ನಿಂದಿರ್–ಬೆನ್ನಪೀಡೆಯಾಗಿ ನಿಂತಿರಿ, ಎಂದರೆ ನಮ್ಮನ್ನು ಸೋಯಿಸುವವರಾದಿರಿ.

೩೦. ಚಕ್ರಿಯ ಚಕ್ರದೊಳಂ–ಶ್ರೀ ಕೃಷ್ಣನ ಚಕ್ರಾಯುಧದಲ್ಲಿಯೂ, ಎಚ್ಚ–(ನೀವು) ಹೂಡಿದ, ನಿಜಪತತ್ರಿ–ನಿಮ್ಮ ಬಾಣ, ತೊಡರ್ದು–ಅಡ್ಡಗಟ್ಟಿ, ಆಕ್ರಮಿಸಿದುದು–ಬಳಸಿಕೊಂಡಿತು, ದಲ್–ದಿಟ, ಎನೆ–ಎನ್ನಲು, ನಿಮ್ಮಾ–ನಿಮ್ಮ ಈ, ಕ್ರಮಕಮಲಕ್ಕೆ – ಪಾದಕಮಲಕ್ಕೆ, ಎಱಗದೆ – ಬಾಗದೆ, ವಕ್ರಿಸಿ – ವಕ್ರವಾಗಿ, ಬಾಳ್ವರುಂ – ಬಾಳುವವರೂ, ಭೂಚಕ್ರದೊಳಗೆ – ಭೂಮಂಡಲದೊಳಗೆ, ಒಳರೇ – ಇದ್ದಾರೆಯೇ ? ಇಲ್ಲ,

೩೧ ಸಾವೆ ನಿಮತಿಚ್ಛೆಯೆನೆ–ಮರಣವೇ ನಿಮ್ಮ ಇಚ್ಛೆಯೆನಲು, ಆವಂ– ಯಾರು, ತಳ್ತಿಱಿದು–ಎದುರಾಗಿ ನಿಂತು, ಪೊಣರ್ದು–ಹೋರಾಡಿ, ಗೆಲ್ವಂ–ಗೆಲ್ಲು ತ್ತಾನೆ? ಅದಱಿಂದಂ–ಆದ್ದರಿಂದ, ಎಮಗೆ–ನಮಗೆ, ಸಾವು–ಮರಣವು, ದಿಟಂ– ನಿಶ್ಚಯ ; ನಿಮ್ಮಡಿ–ನಿಮ್ಮ ಪಾದಗಳು, ಕೊಲೆ–ಕೊಲ್ಲಲು, ಸಾವುದು–ಸಾಯುವುದು, ಲೇಸಲ್ತೆ – ಒಳ್ಳೆಯದಲ್ಲವೆ? ಸುಗತಿವಡೆಯಲ್ಕಕ್ಕುಂ – ಸದ್ಗತಿಯನ್ನು ಪಡೆಯುವು ದಾಗುತ್ತದೆ.

ವಚನ: ಮಮ್ಮನ–ಮೊಮ್ಮಗನ ; ಕೂರ್ಮೆಯಿಂ–ಪ್ರೀತಿಯಿಂದ ; ಕಣ್ಣ ನೀರಂ ನೆಗಪಿ–ಕಣ್ಣೀರನ್ನು ತುಂಬಿಕೊಂಡು.

೩೨. ಜಗದೊಳ್–ಲೋಕದಲ್ಲಿ, ಅವಧ್ಯನಂ–ಕೊಲ್ಲಲಾಗದವನನ್ನು, ಗೆಲಲ್ ಬಾರದು – ಗೆಲ್ಲಲು ಬರುವುದಿಲ್ಲ, ಅದು ಆದೊಡಮೇಂ – ಅದು ಆದರೆ ತಾನೆ ಏನು? ಶಿಖಂಡಿ–ಶಿಖಂಡಿಯು, ತೊಟ್ಟಗೆ ಕೊಳೆ–ಬೇಗನೆ ಎದುರಿಸಿ, ಮುಂದೆ ನಿಲೆ– ಮುಂದುಗಡೆ ನಿಲ್ಲಲು, ನಾಳಿನೊಂದು ಕಾಳೆಗದೊಳ್–ನಾಳೆಯ ದಿವಸದ ಒಂದು ಯುದ್ಧದಲ್ಲಿ, ಸಾವು–ಮರಣವು, ಎನಗೆ–ನನಗೆ, ಅಪ್ಪುದು–ಆಗುತ್ತದೆ; ಇದಂ- ಈ ವಿಷಯವನ್ನು, ನರಂಗೆ–ಅರ್ಜುನನಿಗೆ, ಅಱಿಪದೆ–ತಿಳಿಸದೆ, ಈ ತೆಱದಿಂ–ಈ ರೀತಿಯಿಂದ, ನೆಗಳ್ದು–ಮಾಡಿ, ಎಯ್ದೆ–ಚೆನ್ನಾಗಿ, ವೀರಲಕ್ಷ್ಮಿಗೆ-ಜಯಲಕ್ಷ್ಮಿಗೆ, ನೆಲೆಯಾಗು–ಆಶ್ರಯವಾಗು, ಪೋಗು–ಹೋಗು, ಎನೆ–ಎನ್ನಲು, ನೃಪಂ – ರಾಜ ಧರ್ಮರಾಜನು, ಪೊಡೆವಟ್ಟು–ನಮಸ್ಕರಿಸಿ, ಮನೋನುರಾಗದಿಂ–ಮನದ ಸಂತೋಷ ದಿಂದ.

ವಚನ: ಮಂದರಧರಂಗೆ – ಶ್ರೀ ಕೃಷ್ಣನಿಗೆ, ಪವಡಿಸಿದಾಗಳ್ – ಮಲಗಿಕೊಂಡಾಗ.

೩೩. ಚಲಚಲದೆ–ಅಧಿಕವಾದ ಛಲದಿಂದ, ಅಂತು–ಎದುರಿಸಿ, ಕಾದುವ–ಯುದ್ಧಮಾಡುವ, ಸುಯೋಧನ ಸಾಧನದ–ದುರ್ಯೋಧನನ ಸೈನ್ಯದ, ಒಡ್ಡುಗಳ್–ಗುಂಪುಗಳು, ಕಬಿಲ್ದು–ಕೃಶವಾಗಿ, ಅಲಱಿ–ಬಿರಿದು ಎಂದರೆ ಚೆದರಿ, ತೆರಳ್ದು–ಚಲಿಸಿ, ತೂಳ್ದು–ಒತ್ತರಿಸಲ್ಪಟ್ಟು, ಬಿಱುತು–ಚೆದರಿ, ಓಡೆ–ಓಡಲು, ಗುಣಾರ್ಣವನಿಂದಂ–ಅರ್ಜುನನಿಂದ, ಆಜಿಯೊಳ್–ಯುದ್ಧದಲ್ಲಿ, ಕೊಲಿಸಿ–ಕೊಲ್ಲಿಸಿ, ಸಮಸ್ತಧಾತ್ರಿಯುಮಂ – ಸಮಸ್ತ ಭೂಮಂಡಲವನ್ನೂ, ಆಳಿಪೆವು – ಆಳುವ ಹಾಗೆ ಮಾಡುತ್ತೇವೆ, ಎಂದು, ಉಲಿವಂತೆ – ಕೂಗುವ ಹಾಗೆ, ಪಕ್ಕಿಗಳ್ – ಪಕ್ಷಿಗಳು, ಚಿಲಿಮಿಲಿಯೆಂಬ ಪ್ರೊತ್ತಿಱೊಳೆ–ಚಿಲಿಮಿಲಿ ಎಂದು ಸದ್ದುಮಾಡುವ ಹೊತ್ತಿನಲ್ಲಿಯೇ ಎಂದರೆ ಮುಂಜಾನೆಯಲ್ಲಿಯೇ, ಅಂತಕಾತ್ಮಜಂ–ಧರ್ಮಪುತ್ರನು, ಬಂದು, ಉಜದೆ–ಇರದೆ, ಒಡ್ಡಿದಂ–ಸೈನ್ಯವನ್ನು ಚಾಚಿದನು. ಅಲಱು=(ತ) ಅಲಱು–ಬಿರಿ, ಒಡೆ, ನಾಶಮಾಡು; ಮನದಿಂ ನುಡಿಯಿಂ ತನುವಿಂ। ದೆನಸುಂ ಮುನ್ನೆಱಿಪಿದಘಮನಲಱುಪೆನೆಂಬೀ॥ ಮನದಿಂದಪೊಸೆದು ಗೊಮ್ಮಟ ಜಿನನಂ ಸ್ತುತಿಯಿಸಿದನಿಂತು ಸುಜನೋತ್ತಂಸಂ॥ ಎಂಬಲ್ಲಿ ಪ್ರಯೋಗವಿದೆ.

ವಚನ: ಕುರುಧ್ವಜಿನಿಯುಂ–ಕೌರವಸೇನೆಯೂ; ಪಣವ–ಒಂದು ವಾದ್ಯ; ಝಲ್ಲರೀ–ಒಂದು ಬಗೆಯಾದ ತಮಟೆ; ವಿಕಟಾಟ್ಟಹಾಸಂಗಳೆಂಬಂತೆ–ವಿಕಾರವಾದ ನಗುವೆಂಬಂತೆ; ಮೊೞಗೆ–ಶಬ್ದಮಾಡಲು;

೩೪. ಉಭಯಬಲದ–ಎರಡೂ ಸೈನ್ಯಗಳ, ಅರಸುಗಳ್–ರಾಜರು, ರಣರಭಸಂಗಳ್ವೆರಸು–ಯುದ್ಧತೀವ್ರತೆಯಿಂದ ಕಾದಿ, ಮುಳಿದು–ಕೋಪಿಸಿ, ಕೆಯ್ವೀಸೆ–ಕೈಬೀಸಲು, ಒಗೆದು – ಹುಟ್ಟಿ, ನೆಗೆದ – ಚಿಮ್ಮಿದ, ಸಮರಾರಾವಂ – ಯುದ್ಧದ ಘೋಷವು, ಲಯಕ್ಷುಭಿತ ಜಲನಿಧಿ ನಿನಾದಮಂ–ಪ್ರಳಯಕಾಲದ ಕದಡಿದ ಕಡಲ ಅಬ್ಬರವನ್ನು, ಅಭಿನಯಿಸಿದುದು–ಅನುಕರಣೆಮಾಡಿತು.

೩೫. ಇಸುವ–ಬಾಣ ಪ್ರಯೋಗ ಮಾಡುವ, ಧನುರ್ಧರರಿಂ–ಬಿಲ್ಗಾರರಿಂದಲೂ, ಪಾಯಿಸುವ–ಹಾಯಿಸುವ, ನುಗ್ಗಿಸುವ, ದಟಿಂಗಳಿಂ–ಸೈನ್ಯಗಳಿಂದಲೂ, ಅಗುರ್ವು–ಭೀಕರತೆಯು, ಪರ್ವುವಿನಂ – ಹಬ್ಬುತ್ತಿರಲು, ಚೋದಿಸುವ – ಹರಿಯಿಸುತ್ತಿರುವ, ರಥಂಗಳಿಂ–ರಥಗಳಿಂದಲೂ, ಎಂಟುಂದೆಸೆ–ಎಂಟು ದಿಕ್ಕುಗಳೂ, ಮಸುಳ್ವಿನಂ–ಮಾಸುತ್ತಿರಲು, ಆಗಳ್ – ಆಗ, ಉಭಯ ಬಲಂಗಳ್ – ಎರಡು ಸೈನ್ಯಗಳೂ, ಇಱಿದುವು–ಯುದ್ಧಮಾಡಿದುವು.

೩೬. ಅೞಿದು–ಸತ್ತು, ಅೞಿಗಿದ– ನಾಶವಾದ, ಕರಿಘಟೆಗಳ ಬಳಗದಿಂ–ಆನೆಗಳ ಸಮೂಹಗಳಿಂದ, ಉಚ್ಚಳಿಸಿ–ಮೇಲಕ್ಕೆ ಚಿಮ್ಮಿ, ಮೊರೆವ–ಶಬ್ದಮಾಡುತ್ತಿರುವ ನೆತ್ತರ–ರಕ್ತದ, ತೆರೆಗಳ್–ಅಲೆಗಳು, ಸುೞಿಸುೞಿದು–ಸುಳಿಸುಳಿಯಾಗಿ

ಸುತ್ತಿ, ಕಲ್ವಟ್ಟೆಯೊಳ್–ಕಲ್ಲು ದಾರಿಯಲ್ಲಿ ಎಂದರೆ ಪಾತ್ರದಲ್ಲಿ, ಘೋರ್ಗರೆದು–ಘೋರೆಂದು ಶಬ್ದಮಾಡಿ, ಪರಿವ–ಹರಿಯುವ, ತೊಱೆಗಳ–ನದಿಗಳ, ತೆಱದಿಂ–ರೀತಿಯಿಂದ, ಒಡವರಿದುವು–ಕೂಡ ಹರಿದುವು. ಇಲ್ಲಿ ಬಿಳಗಳ ವಿಶ್ರಪ್ರಾಸವಿದೆ.

**ವಚನ :** ಚಾತುರ್ದಂತಂ–ಚತುರಂಗ ಸೈನ್ಯ ; ಓರಂತೆ–ಕ್ರಮವಾಗಿ ; ನಡುವಗಲ್ವರಂ–ನಡುಹಗಲವರೆಗೂ ; ಸಮಕಟ್ಟಂ–ಏರ್ಪಾಡನ್ನು. ವ್ಯವಸ್ಥೆಯನ್ನು.

೩೭. ಕುರುಬಲವೆಂಬುದು–ಕೌರವಸೈನ್ಯವೆಂಬುದು, ಈ ಸುರನದೀಜನ–ಈ ಭೀಷ್ಮನ, ತೋಳ್ವಲವೆಂಬ–ಬಾಹುಬಲವೆಂಬ, ವಜ್ರಪಂಜರದೊಳಗೆ–ವಜ್ರದ ಪಂಜರದಲ್ಲಿ, ಇರ್ದು–ಇದ್ದು, ಬಟ್ಟಿಪುದು–ಬಾಳುತ್ತಿದೆ; ಪಾಂಡವ ಸೈನ್ಯಮುಂ–ಪಾಂಡವರ ಸೈನ್ಯವು ಕೂಡ, ಇಂದು, ಭೀಷ್ಮರೊರ್ವರೊಳ್–ಭೀಷ್ಮರೊಬ್ಬರಲ್ಲಿ, ಇರದೆ–ಬಿಡದೆ, ಆಂತು–ಎದುರಿಸಿ, ಕಾದಲ್–ಯುದ್ಧಮಾಡಲು, ಅವರಂ–ಆ ಭೀಷ್ಮರನ್ನು, ಪೆಱಗಿಕ್ಕಿ–ಹಿಂದಿಕ್ಕಿ (ರಕ್ಷಿಸಿ), ಕಡಂಗಿ–ಉತ್ಸಾಹಿಸಿ, ಕಾದಿ–ಹೋರಾಡಿ, ನಿತ್ತರಿಸುವೆಂ–ನಿಭಾಯಿಸುತ್ತೇನೆ (ಅಥವಾ ಪಾರಾಗುತ್ತೇನೆ) ಎಂದು ತಱಿಸಂದು–ನಿಶ್ಚಯಿಸಿ, ಪಾಂಡವ ಬಲಕ್ಕೆ–ಪಾಂಡವರ ಸೈನ್ಯಕ್ಕೆ, ಇದಿರಂ–ಎದುರಾಗಿ, ತಾಗಿದಂ–ಸಂಘಟ್ಟಿಸಿದನು.

**ವಚನ :** ಅತಿರಥಮಥನಂ–ಅರ್ಜುನನು ; ಆಂತಾಗಳ್–ಪ್ರತಿಭಟಿಸಿದಾಗ.

೩೮. ನಡುವ–ನಾಟುವ, ಇಡುವ–ಬೀಸಿ ಹೊಡೆಯುವ, ಆರ್ದು–ಗರ್ಜಿಸಿ, ಅರಿವ – ಕತ್ತರಿಸುವ, ಸೀರ್ವ – ತುಂಡು ಮಾಡುವ, ಪಳಂಚುವ – ತಾಗುವ, ಪೋರ್ವ–ಹೋರಾಡುವ, ಬಾಣದಿಂದೆ–ಬಾಣಗಳಿಂದ, ಉಡಿದು–ಮುರಿದು, ಸಿಡಿಲ್ದು–ಸಿಡಿದು, ಸೂಸಿಯೆ–ಚೆಲ್ಲಾಡಿಯೆ, ಕಟಿಲ್ದು–ಸಡಿಲವಾಗಿ, ಬಟಿಲ್ದು–ಬಾಗಿ, ಸಡಿಲ್ದು–ಬಿಗಿತಪ್ಪಿ, ಜೋಲ್ದು–ಜೋತುಬಿದ್ದು, ನೇಲ್ದು–ನೇತಾಡಿ, ಉಡಿದನೊಗಂ–ಮುರಿದ ನೊಗವು, ಧ್ವಜಂ–ಬಾವುಟವು, ಪಲಗೆ–ಹಲಗೆಯು, ಕೀಲ್–ಕೀಲು, ಕವರ್–ಕವಲುಮರ, ಕವೆ, ಅಚ್ಚು–ರಥದ ಅಚ್ಚು, ತುರಂಗಮಂ–ಕುದುರೆಗಳು, ರಥಂ–ರಥಗಳು, ಕಿಡೆ–ನಾಶವಾಗಲು, ಕವರಿಂದೆ–ಕೊಳ್ಳೆಯಿಂದ, ಅಗುರ್ವಂ–ಭಯವನ್ನೂ, ಒಳಕೊಂಡಿರೆ–ಹೊಂದಿರಲು, ಮಹಾರಥರ್–ಮಹಾರಥಿಕರು, ತಳ್ತಿಱಿದರ್–ಸೇರಿ ಹೋರಾಡಿದರು. ಕವರ್ = (ತ) ಕವರ್, ಕವಲ್ ;

**ವಚನ :** ಮಾರ್ಮಲೆಯಲಾಱದೆ – ಪ್ರತಿಭಟಿಸಲಸಮರ್ಥರಾಗಿ ; ಒಲ್ಲನುಲಿದು–ಮೆಲ್ಲನೆ ಕೂಗಿಕೊಂಡು.

೩೯. ಧವಳಹಯಂ – ಬಿಳಿಕುದುರೆಗಳು, ಧವಳರಥಂ–ಬಿಳಿಯರಥ, ಧವಳೋಷ್ಣೀಷಂ–ಬಿಳಿಯ ತಲೆಸಾಗು, ಶಶಾಂಕ ಸಂಕಾಶ ಯಶೋಧವಳಿತ ಭುವನಂ–ಚಂದ್ರನಿಗೆ ಸದೃಶವಾದ ಕೀರ್ತಿಯಿಂದ ಬೆಳ್ಳಗಾಗಿರುವ ಲೋಕವುಳ್ಳವನು (ಭೀಷ್ಮ), ಅವಯವದಿಂ–ಶ್ರಮವಿಲ್ಲದೆ, ಬಂದು, ಧರ್ಮತನಯನ–ಧರ್ಮಪುತ್ರನ, ಬಲದೊಳ್–ಸೈನ್ಯದೊಡನೆ, ತಾಗಿದಂ–ಹಳಚಿದನು.

ವಚನ: ಕಳಾಪಂಗಳೊಳ್–ಸಮೂಹಗಳಲ್ಲಿ; ಪುಡಪುಡನೆ[ಪು]ಜ್ಜಿ–ಬಿಸಿಬಿಸಿಯಾಗಿ ಬೆಂದು, ಪಾಯ್ವ–ಹಾಯುವ; ಪತಂಗಗಳಂತೆ–ಚಿಟ್ಟೆಗಳಂತೆ; ಭರಂಗೆಯ್ದು–ಜೋರುಮಾಡಿ.

೪೦. ಶರಸಂಧಾನದ–ಬಾಣಗಳನ್ನು ಬಿಲ್ಲಿಗೆ ತೊಡಿಸುವ, ಜೇಗಂ–ವೇಗವು, ಅಂಬುಗಳಂ–ಬಾಣಗಳನ್ನು, ಅಂಬು–ಬಾಣಗಳು, ಈಂಬಂತೆ–ಈನುವ ಹಾಗೆ ಎಂದರೆ ಹೆರುವ ಹಾಗೆ, ಮೇಣ್–ಅಥವಾ, ಅಂಬಿನ ಆಗರಂ–ಬಾಣಗಳ ಮನೆ, ಅಂಬು ಅಂತೆನೆ–ಬಾಣಗಳಂತೆ ಎನ್ನಲು, ಪಾಯ್ವ–ನುಗ್ಗಿಬರುವ, ಅರಾತಿ ಶರಸಂಘಾತಂಗಳಂ–ವೈರಿಯ ಬಾಣ ಸಮೂಹಗಳನ್ನು, ನುರ್ಗಿ–ಪುಡಿಮಾಡಿ, ಸೀಳ್ದು–ಕತ್ತರಿಸಿ, ಅರಿದು–ತುಂಡುಮಾಡಿ, ಅಟ್ಟುಂಬರಿಗೊಂಡು–ಬೆನ್ನಟ್ಟಿ ಓಡಿಸಿ, ಕೂಡೆ–ಕೂಡಲೇ, ಕಡಿದಂತೆ–ಕಡಿದಹಾಗೆ, ಗಾಂಗೇಯನ–ಭೀಷ್ಮನ, ಅಸ್ತ್ರಾಳಿಗಳ್–ಬಾಣಗಳ ಸಾಲುಗಳು, ಆ ಸೈನ್ಯಮಂ–ಆ ಸೇನೆಯನ್ನು, ಪರ್ವಿ–ವ್ಯಾಪಿಸಿ, ಗೋಳ್ಮುರಿಗೊಂಡು–ಕೊರಳನ್ನು ತಿರಿಚಿಕೊಂಡು, ಆ ರಸಾತಳಮುಮಂ–ಆ ಪಾತಾಳಲೋಕವನ್ನೂ, ಉರ್ಚಿದುವು–ಉಬ್ಬಿದವು, ತುಂಬಿದುವು.

ವಚನ: ಗ್ರೀಷ್ಮಕಾಲದ ಆದಿತ್ಯನಂತೆ-ಬೇಸಗೆಕಾಲದ ಸೂರ್ಯನಂತೆ; ಕಾಯ್ದು-ಸುಟ್ಟು; ಕೆಳರ್ದು–ಕೆರಳಿ; ಪಯಿಂಛಾಸಿರ್ವರ್–ಹತ್ತುಸಾವಿರ ಜನ.

೪೧. ಮಣಿಮುಕುಟಾಳಿಗಳ್ವೆರಸು–ರತ್ನಮಯ ಕಿರೀಟಗಳ ಸಮೂಹದೊಡನೆ ಕೂಡಿ, ಉರುಳ್ದ–ಉರುಳಿದ, ನರೇಂದ್ರ–ರಾಜರ, ಶಿರಂಗಳೊಳ್–ತಲೆಗಳಲ್ಲಿ, ಫಣಾಮಣಿಗಳ–ಹೆಡೆಗಳಲ್ಲಿರುವ ರತ್ನಗಳ, ದೀಪ್ತಿಗಳ್-ಕಾಂತಿಗಳು, ಬೆಳಗೆ–ಪ್ರಕಾಶಿಸಲು, ಧಾತ್ರಿಯಂ–ನೆಲವನ್ನು, ಒಯ್ಯನೆ–ಮೆಲ್ಲಗೆ, ಕಂಡಿಮಾಡಿ–ರಂಧ್ರಮಾಡಿ, ಕಣ್ತಣಿವಿನಂ–ಕಣ್ಣುತೃಪ್ತಿಪಡುತ್ತಿರಲು, ಅಂದು, ನಿಂದು–ನಿಂತು, ಇಱಿದ–ಹೋರಾಡಿದ, ಕೊಳ್ಗುಳಮಂ–(ಭೀಷ್ಮನ) ಯುದ್ಧರಂಗವನ್ನು, ನಡೆನೋಳ್ಪ–ಚೆನ್ನಾಗಿ ನೋಡುವ, ಅಹೀಂದ್ರರೊಳ್–ಸರ್ಪರಾಜರಲ್ಲಿ, ಸೆಣಸಿದುದು–ಸ್ಪರ್ಧಿಸಿತು, ಎಂದೊಡೆ–ಎಂದು ಹೇಳಿದರೆ, ಸುರಸಿಂಧು ಪುತ್ರನಾ–ಭೀಷ್ಮನ, ಪರ್ಸನಂ–ಯುದ್ಧಕಾರ್ಯವನ್ನು, ಏವೊಗಳ್ವುದು–ಏನೆಂದು ಹೊಗಳುವುದು? ಎಂದರೆ ಭೀಷ್ಮನ ಯುದ್ಧ ಹೊಗಳಿಕೆಗೆ ಮೀರಿದ್ದಾಗಿತ್ತು.

ವಚನ: ಪೇೞಿ ಪೆಸರಿಲ್ಲದಂತೆ–ಹೇಳಲು ಹೆಸರು ಕೂಡ ಇಲ್ಲದಂತೆ, ಮಲ್ಲನಂತೆ–ಜಟ್ಟಿಯಂತೆ; ಪೆಂಕುಳಿಗೊಂಡ ಸಿಂಹಮಂ–ಹುಚ್ಚೇರಿದ ಸಿಂಹವನ್ನು.

೪೨. ಅಂಬರಮೆಲ್ಲಂ–ಆಕಾಶವೆಲ್ಲ, ಅಂಬಿನೊಳೆ–ಬಾಣಗಳಲ್ಲಿಯೆ, ಪೂೞೆ-ಹೂತುಹೋಗಲು; ಮಹೀಭುಜರ್ – ರಾಜರು, ಎತ್ತಂ ಎಚ್ಚ – ಎಲ್ಲೆಲ್ಲಿಯೂ ಪ್ರಯೋಗಿಸಿದ, ಕಿತ್ತಂಬುಗಳ್–ಸಣ್ಣ ಬಾಣಗಳು, ಎತ್ತ–ಎಲ್ಲೆಲ್ಲೂ, ಅವ್ವಳಿಸೆ–ಮೇಲೆ ನುಗ್ಗಲು, ಮಾಣದೆ–ನಿಲ್ಲದೆ, ಅವಂ–ಅವುಗಳನ್ನು, ಕಡಿದಿಕ್ಕಿ–ಕತ್ತರಿಸಿ ಹಾಕಿ, ತನ್ನ, ನಲ್ಲಂಬುಗಳಿಂದ–ಒಳ್ಳೆಯ ಬಾಣಗಳಿಂದ, ಆರ್ದು–ಗರ್ಜಿಸಿ, ಇಱಿವೆ,

ಅಡುರ್ತು–ಸವಿಾಪಿಸಿ, ಇಸೆ–ಪ್ರಯೋಗಿಸಲು, ಭೂಭುಜರೆಲ್ಲಂ–ಎಲ್ಲಾ ರಾಜರೂ; ಬಿಲ್ಲುಂ ಬೆಱಗಾಗೆ–(ಭಯ ಆಶ್ಚರ್ಯಗಳಿಂದ) ಸಂಭ್ರಾಂತರಾಗಲು, ವಿಕ್ರಮಾರ್ಜುನಂ–ಅರ್ಜುನನು, ಸೆರಗಿಲ್ಲದೆ–ಭಯವಿಲ್ಲದೆ ಅಥವಾ ಸಹಾಯವಿಲ್ಲದೆ, ಬಂದು, ಪೊಣರ್ದಂ–ಹೋರಾಡಿದನು. ಕಿತ್ತಂಬು < ಕಿಱಿದು + ಅಂಬು ;

**ವಚನ**; ಪೊಣರ್ವಾಗಳ್–ಹೋರಾಡಿದಾಗ ; ಅನುವರಂ ಯುದ್ಧ ; ದೊರೆಯಾಯ್ತು–ಸಮಾನವಾಯಿತು, ಸೂಱೆಗೊಳೆ–ಬಾರಿಯಲ್ಲೆ.

**೪೩.** ಜ್ವಳನ ಪತತ್ರಿಯಂ–ಆಗ್ನೇಯಾಸ್ತ್ರವನ್ನು, ವಾರುಣಪತ್ರಿಯಿಂ–ವರುಣಾಸ್ತ್ರದಿಂದ, ಕಡಿದು – ಕತ್ತರಿಸಿ, ಐಂದ್ರಬಾಣಮುಂ – ಇಂದ್ರಾಸ್ತ್ರವನ್ನು, ಸಮಾರಣಾಸ್ತ್ರದಿಂ–ವಾಯ್ವಸ್ತ್ರದಿಂದ, ಕಳೆದು–ಹೋಗಾಡಿಸಿ, ಇದಿರ್ಚಿದ–ಎದುರಾದ, ಭೂಭುಜರೆಲ್ಲರಂ–ರಾಜರನ್ನೆಲ್ಲಾ, ಭಯಂಗೊಳಿಸಿ–ದಿಗಿಲುಪಡಿಸಿ, ನಿಶಾತವಜ್ರಶರದಿಂ–ಹರಿತವಾದ ಇಂದ್ರಬಾಣದಿಂದ, ಸುರರ್–ದೇವತೆಗಳು, ಅಂಬರದೊಳ್–ಆಕಾಶದಲ್ಲಿ, ತಗುಳ್ದು–ಅನುಸರಿಸಿ, ಬಿಚ್ಚಳಿಸೆ–ವಿಸ್ತರಿಸಲು ಎಂದರೆ ಚೆನ್ನಾಗಿ ಹೊಗಳಲು, ನದೀಜಂ–ಭೀಷ್ಮನು, ಉಚ್ಚಳಿಸೆ – ಮೇಲಕ್ಕೆ ಹಾರುತ್ತಿರಲು, ಗುಣಾರ್ಣವಂ–ಅರ್ಜುನ, ಕಾದಿದಂ–ಯುದ್ಧಮಾಡಿದನು ; ಏಂ ಕಲಿಯೋ–ಏನು ಶೂರನೋ !

**ವಚನ**: ತನ್ನ ನುಡಿದ ನುಡಿವಳಿಯಂ – ತಾನು ಹೇಳಿದ ಮಾತುಗಳನ್ನು ಎಂದರೆ ಪ್ರತಿಜ್ಞೆಯನ್ನು ; ನೆನೆದು–ಸ್ಮರಿಸಿ, ಅಲ್ಲಲಿಗಾಳೆಗಂ–ಮೇಳಗಾಳಗ, ವಿನೋದದ ಕಾಳಗ ; “ ಅಲ್ಲಣಿಗೆಯೆಂದು ಮೇಳಂ ”,

**೪೪.** ಇಲ್ಲಿಂದ ಮುಂದಕ್ಕೆ ಭೀಷ್ಮನ ಶರಶಯನ : ಉದಗ್ರ ನಾಯಕರ–ಶ್ರೇಷ್ಠರಾದ ಸೇನಾನಾಯಕರ, ಸಾಯಕಮೆಲ್ಲಮುಂ – ಬಾಣಗಳನ್ನೆಲ್ಲ, ಕಡಿದಂ–(ಭೀಷ್ಮನು) ಕತ್ತರಿಸಿದನು ; ಆ ಶಿಖಂಡಿ–ಆ ಶಿಖಂಡಿಯು, ಪೊಕ್ಕು–ಪ್ರವೇಶಿಸಿ, ಅಡಿಗಿಡೆ–ಹೆಜ್ಜೆ ಕೆಡಲು, ಬಂದು ಮುಂದೆ ನಿಲೆಯುಂ–ಬಂದು ಮುಂದೆ ನಿಲ್ಲುತ್ತಲೂ, ಮೊಗಮಂ ನಡೆ ನೋಡಿ–ಮುಖವನ್ನು ದೃಷ್ಟಿಸಿ ನೋಡಿ, ಆತಂ–ಶಿಖಂಡಿ, ಆರ್ದು–ಗರ್ಜಿಸಿ, ಒಡನೊಡನೆ–ಮೇಲಿಂದಮೇಲೆ, ಎಚ್ಚೊಡೆ–ಬಾಣಪ್ರಯೋಗ ಮಾಡಿದರೆ, ಎಚ್ಚಮೊನೆಯಂಬುಗಳ್–ಹೊಡೆದ ಹರಿತವಾದ ಬಾಣಗಳು, ಅ[ಱ್ಬ]–ಪೆಟ್ಟಿಯಲ್ಲಿ ನಾಟಿ ಮುಳುಗಿ, ಇಡಿವೋಗೆಯುಂ–ಕಿಕ್ಕಿರಿದರೂ, ಸುರಸಿಂಧು ನಂದನಂ–ಭೀಷ್ಮನು, ಮನಂಗಿಡಂ–ಮನಸ್ಸಿನ ಸ್ಥಿರತೆಯನ್ನು ಕಳೆದುಕೊಳ್ಳನು ; ಅವಂ–ಅವುಗಳನ್ನು, ಅಂಕೆಗೊಳ್ಳನ್–ಎದುರಿಸನು ; ಅಗಿಯಂ–ಹೆದರನು, ಸುಗಿಯಂ–ಬೆದರನು.

**೪೫.** ಇದು ರಣಂ–ಇದು ಯುದ್ಧ ; ಎನ್ನೊಳಾಂತಿಜೀವ–ನನ್ನಲ್ಲಿ ಎದುರಿಸಿ ಯುದ್ಧಮಾಡುವ, ಮೆಯ್ಗಲಿಯುಂ – ಶೂರನಾದವನೂ, ಸಮರೈಕಮೇರು – ಯುದ್ಧದಲ್ಲಿ ಮೇರುಪರ್ವತದಂತೆ ಸ್ಥಿರನಾದವನು ಒಬ್ಬನೇ ; ಇದು ಬಿರುದು, ಅರ್ಜುನ ; ಎನ್ನದಟುಂ – ನನ್ನ ಪೌರುಷವೂ, ಆಳುರ್ಕೆಯುಂ – ವ್ಯಾಪ್ತಿಯೂ, ಪಿರಿದು–ಹಿರಿದಾದದ್ದು ; ಪೇಡಿಗೆ–ಹೇಡಿಯಾದ ಶಿಖಂಡಿಗೆ, ಅದೆಂತು–ಅದು ಹೇಗೆ,

ಇದಿರಾಂಪಿಂ–ಎದುರಾಗುವನು, ಎಂದು, ಅಣಂ–ಕೊಂಚವೂ, ಜಿಡಜಿಡಿ–ಭಯ ಪಡದೆ, ನಟ್ಟ ಕೂರ್ಗಣೆಯ–ನಾಟಿದ ಹರಿತವಾದ ಬಾಣಗಳ, ಬಿರ್ಪೊಜೆಯಿಂದೆ–ಭಾರವಾದ ಹೊರೆಯಿಂದ, ಪೆರ್ವಿದಿರ–ದೊಡ್ಡ ಬಿದಿರಿನ, ಸಿಡುಂಬಿನೊಳ್–ಮೆಳೆಗಳಲ್ಲಿ, ಉರ್ವಿ–ಉಬ್ಬಿ, ಪುದಿದ–ಸೇರಿದ, ತುಂಬಿದ, ಒಂದು ಕುಳಾಚಳದಂತೆ–ಒಂದು ಕುಲಪರ್ವತದಂತೆ, ಸಿಂಧುಜಂ-ಭೀಷ್ಮನು, ಬಱಿಲ್ದಂ–ಜೋತುಬಿದ್ದನು. (ಆಯಾಸದಿಂದ).

೪೬. ತಿಂತಿಣಿಯಾಗೆ – ಗುಂಪುಗುಂಪಾಗಿ, ನಟ್ಟ ಕಣೆಯೊಳ್–ನಾಟಿದ ಬಾಣಗಳಲ್ಲಿ, ನೆಲಮುಟ್ಟದೆ–ನೆಲವನ್ನು ಸೋಕದೆ, ಮೆಯ್ಯೊಳ್ – ಮೈಯಲ್ಲಿ, ಅತ್ತಮಿತ್ತಂ–ಅಲ್ಲಿ ಇಲ್ಲಿ, ತೆಱೆದಿರ್ದ–ಬಾಯಿಬಿಟ್ಟುಕೊಂಡಿರ್ದ, ಪುಣ್ಗಳ್–ಹುಣ್ಣುಗಳು, ಎಸೆವಕ್ಕರದಂತಿರೆ–ಹೊಳೆಯುವ ಅಕ್ಷರಗಳಂತಿರಲು, ನೋಡಿ, ಕಲ್ಲಿಂ–ಕಲಿಯಿರಿ, ಎಂಬಂತೆವೊಲ್–ಎನ್ನುವ ಹಾಗೆ, ಅಟ್ಟವಣೆಕೋಲ್ಗಳಮೇಲೆ–ಪುಸ್ತಕವನ್ನಿಡುವ ಪೀಠದ ಮೇಲೆ, ಎಸೆದಿರ್ದ–ಸೊಗಸಾಗಿ ಇದ್ದ, ವೀರ ಸಿದ್ಧಾಂತದ ಶಾಸನಂ ಬರೆದ–ಪ್ರತಾಪದ ತತ್ವಗಳನ್ನು ಶಾಸನವಾಗಿ ಬರೆದಿರುವ, ಪೊತ್ತಗೆಯಂತೆ–ಪುಸ್ತಕದಂತೆ, ಅಮರಾಪಗಾತ್ಮಜಂ–ಭೀಷ್ಮನು, ಇರ್ದಂ–ಇದ್ದನು. "ತಿಣಿ–ಸಂಘನ್ನೇ"; ತಿಣಿ + ತಿಣಿ = ತಿಂತಿಣಿ–ಸಮೂಹ; ಧಾತು ಪುನರುಕ್ತವಾಗಿ ಭಾವನಾಮವಾಗಿದೆ; ಅಟ್ಟವಣೆ<(ಸಂ) ಆಸ್ಥಾಪನಾ (ಶಬ್ದವಿಹಾರ–೪೬ ನೆಯ ಪುಟ ನೋಡಿ) : ಠವಣೆ ಕೋಲು ಎಂದರೂ ಇದೇ ಅರ್ಥ; ಪೊತ್ತಗೆ<(ಸಂ) ಪುಸ್ತಕ<(ಪಾರಶಿ) ಪೊಸ್ತ್–ಬರೆವಣಿಗೆಗಾಗಿ ಉಪಯೋಗಿಸುವ ಚರ್ಮದ ಪಟ್ಟಿ.

೪೭. ಬಾಳಕಾಲದೊಳೆ–ಬಾಲನಾಗಿದ್ದ ಕಾಲದಿಂದಲೇ, ತೊಟ್ಟು–ಆರಂಭವಾಗಿ, ಅಂಕದ–ಪ್ರಸಿದ್ಧವಾದ. ಶೌಚಂ–ಶೌಚಗುಣವು ಎಂದರೆ ಬ್ರಹ್ಮಚರ್ಯೆಯು, ನಡೆದುದು–ನಡೆಯಿತು; ಈಗಳ್–ಈಗ, ನಾಂ–ನಾನು, ನೆಲನಂ ಮುಟ್ಟೆ–ನೆಲವನ್ನು ಸೋಕಿ, ಓಗಡಿಪುದೆ–(ಶೌಚವನ್ನು) ಹೋಗಲಾಡಿಸುವುದೆ? ಕೆಡಿಸುವುದೆ?; ಏಕೆ ಅದು–ನೆಲವು ಏಕೆ, ಪೆಣ್ ಗಡಿಂ–ಸ್ತ್ರೀ ಅಲ್ಲವೆ? ಎಂದು–ಎಂಬುದಾಗಿ, ಮೈಯೊಳ್–ಮೈಯಲ್ಲಿ, ಅಟ್ಟೆಡಿದ–ನಾಟಿ ಮುಳುಗಿ ತುಂಬಿದ, ವಿಕರ್ಣ ಕೋಟಿಯೊಳ್–ಅಸಂಖ್ಯಾತ ಬಾಣಗಳಲ್ಲಿ, ಅಣಂ–ಸ್ವಲ್ಪವೂ, ನೆಲಮುಟ್ಟದೆ–ನೆಲವನ್ನು ಮುಟ್ಟದೆ, ಬಿಟ್ಟು–ಬಿದ್ದು, ಅಯ್ಯ–ಅಯ್ಯಾ, ಸುರಸಿಂಧುನಂದನಂ–ಭೀಷ್ಮನು, ಶೌಚಗುಣದುನ್ನತಿಯಂ – ಬ್ರಹ್ಮಚರ್ಯಗುಣದ ಆಧಿಕ್ಯವನ್ನು, ಒಡಂಬಡಿಸಿದಂ–ಅಂಗೀಕರಿಸಿದನು. ಓಗಡಿಸು–ಜುಗುಪ್ಸೆಪಡು, ಓಕರಿಸು ಎಂಬಿವು ಸಾಧಾರಣವಾದ ಅರ್ಥಗಳು; ಆದರೆ ಇಲ್ಲಿ ಸ್ವಲ್ಪ ಬೇರೆಯಾಗಿದೆ. ಈ ಪದ್ಯ ಭೀಷ್ಮನನ್ನು ಕುರಿತ ಚರಮಶ್ಲೋಕ; ಆತನ ಬಾಳಿನ ಘನತೆಯನ್ನು ತೆರೆದು ತೋರಿಸುತ್ತದೆ.

ವಚನ: ಪತ್ತುವಿಟ್ಟು–ಸಂಬಂಧವನ್ನು ಬಿಟ್ಟು; ತೊಲಗಿ; ಸ್ವಚ್ಛಂದ ಮಿಟ್ಟು–ಸ್ವೇಚ್ಛಾಮರಣಿ,

೪೮. ತರುವಲಿಗಳಂ ನಮ್ಮಂ–ಹುಡುಗರಾದ ಅಥವಾ ಅನಾಥರಾದ ನಮ್ಮನ್ನು, ತಾಯ್ವೋಲ್–ತಾಯಿಹಾಗೆ, ಕರುಣದಿಂ–ದಯೆಯಿಂದ, ನಡಪಿದ–ಸಾಕಿದ, ಅಜ್ಜರ್–ತಾತಂದಿರಾದ, ನೀಂ–ನೀವು, ಇಂತಿರೆಯುಂ–ಹೀಗೆ ಇರಲೂ ಎಂದರೆ ಈ ಸ್ಥಿತಿಗೆ ಬಂದಿರುವಿಕೆಯನ್ನೂ, ನೋಡಿದೆವು–ಕಂಡೆವು; ಏನ್ ಎಮಗೆ ಅರಸಿಕೆಯೋ–ನಮಗೆ ಏನು ರಾಜತನವೊ, ಪೇಟಿಂ–ಹೇಳಿರಿ, ಎಂದು, ಶೋಕಂಗೆಯ್ದರ್–ದುಃಖಪಟ್ಟರು.

ವಚನ: ಅೞಲ್‌ವೇಡ–ದುಃಖಬೇಡ ಅಥವಾ ದುಃಖ ಪಡಬೇಡ; ಪೊಡೆವಟ್ಟು–ನಮಸ್ಕರಿಸಿ.

೪೯. ಅಂತ ಮಾರ್ವಲಮಂ–ಎದುರಿಸಿದ ಶತ್ರುಸೈನ್ಯವನ್ನು, ಇಱಿವುದಂ–ಘಾತಿಸುವುದನ್ನು, ಇನ್ನೆಗಂ–ಇದುವರೆಗೆ, ಅಚ್ಚರಿಯಾಗೆ – ಆಶ್ಚರ್ಯವಾಗಲು, ತಾಗಿ–ತಗುಲಿ, ತಳ್ತು–ಸೇರಿ, ಇಱಿದಿರ್–ಯುದ್ಧ ಮಾಡಿದಿರಿ; ಇದೊಂದವಸ್ಥೆ–ಈ ಒಂದು ಅವಸ್ಥೆ (ಶರಶಯನದ), ನಿಮಗೆ, ಎನ್ನಯ–ನನ್ನ, ಕರ್ಮದಿಂ–ಹಿಂದೆ ಮಾಡಿದ ಕರ್ಮದಿಂದ, ಆದುದು–ಆಯಿತು; ಎಂದೊಡೆ–ಎಂದು (ದುರ್ಯೋಧನ ಹೇಳಿದರೆ), ಕಂದ–ಮಗುವೇ, ಪಾಂಡವರ ವೈರಮಂ–ಪಾಂಡವರಲ್ಲಿ ದ್ವೇಷವನ್ನು, ಇಂ–ಇನ್ನು, ಮಱೆವುದು–ಮರೆಯುವುದು; ಕೋಪಮುಂ–ಕೋಪವೂ, ಕಱುಪುಂ–ಅಸಂತೋಷವೂ, ಎನ್ನೊಡವೋಕೆ–ನನ್ನ ಜೊತೆಯಲ್ಲಿ ಹೋಗಲಿ; [ಎ]ಡಂಬಡುಂ – ಅಸಮಾಧಾನವು, ಏವುದು – ಯಾವುದು ? ಅದಂ – ಸಂಧಿಯನ್ನು, ಇನ್ನುಂ–ಇನ್ನೂ, ಒಡಂಬಡು–ಒಪ್ಪು, ಸಂಧಿ ಮಾಡುವೆಂ–ಸಂಧಿಯನ್ನು ಮಾಡುತ್ತೇನೆ.

೫೦. ಅದಟನಳುರ್ಕೆಯಂ – ಶೌರ್ಯದ ಆಧಿಕ್ಯವನ್ನು, ಬಲದ – ಸೈನ್ಯದ, ಅಳುರ್ಕೆಯುಮಂ–ಆಧಿಕ್ಯವನ್ನು, ಗೆಡೆಗೊಂಡು - ಜೊತೆಯಾಗಿ ಹೊಂದಿ, ನೀಂ–ನೀವು, ಇದಾವುದು–ಇದು ಯಾವ, ಪಡೆಮಾತಂ–ಸುದ್ದಿಯನ್ನು ಎಂದರೆ ವಿಷಯವನ್ನು, ಇಂತು–ಹೀಗೆ, ನುಡಿದಿರ್–ಹೇಳಿದಿರಿ? ಪುದುವಾೞ್ಕೆಯೊಳ್-ಜೊತೆಗೂಡಿ ಬದುಕುವುದರಲ್ಲಿ, ಎನ್ನ–ನನ್ನ, ಬಳ್ಕಿದ ಅಳ್ಕಿದ-ಬಳುಕಿದ ಬೆದರಿದ, ಬಗೆ ಗಂಡಿರೇ–ಮನವನ್ನು ನೋಡಿದಿರೆ! ಮಗನೆ–ಮಗನೇ, ನೀಂ–ನೀನು, ಪಗೆಯಂ–ಹಗೆಯನ್ನು, ನೆಟ್ಟನೆ–ನೇರಾಗಿ, ತಱಿದೊಟ್ಟು–ಕತ್ತರಿಸಿಹಾಕು, ಎನ್ನದೆ–ಎಂದು ಹೇಳದೆ, ಬಗೆಗೆಟ್ಟು–ಬುದ್ಧಿಹೀನರಾಗಿ, ದಾಯಿಗರೊಳ್-ದಾಯಾದಿಗಳಲ್ಲಿ, ಇಂ-ಇನ್ನು, ಮಗುೞ್ಬಂ–ಮತ್ತೆಯೂ, ಪುದುವಾೞ್ಪುದು–ಹುದುವಾಗಿ ಬದುಕುವುದು, ಎಂಬಿರೇ – ಎಂದು ಹೇಳುತ್ತೀರೇ ?

ವಚನ: ಇಲ್ಲಿಂದಂ ಮೇಲಾಪ ಕಜ್ಜಮಂ–ಇದಕ್ಕಿಂತಲೂ ಉತ್ತಮವಾದ ಕಾರ್ಯವನ್ನು;

೫೧. ಸೂರ್ಯನು ಮುಳುಗುತ್ತಾನೆ; ನೆರದ ವಿರೋಧಿ ನಾಯಕರಂ–ಕಾಳಗ

ಕಸ್ಮಾಗಿ ಸೇರಿದ ಶತ್ರುರಾಜರನ್ನು, ಆಹವದೊಳ್–ಯುದ್ಧದಲ್ಲಿ, ತಱಿಸು–ಕತ್ತರಿಸಿ. ಒಟ್ಟಲ್–ರಾಶಿಮಾಡಲು, ಒಂದಿದ–ಸೇರಿದ. ಒಡ್ಡು–ಸೈನ್ಯ, ಉರುಳ್ವಿನಂ–ಉರುಳು ತ್ತಿರಲು, ಗುಣಾರ್ಣವಂ–ಅರ್ಜುನ, ಅಡುರ್ತು–ಸಮೀಪಿಸಿ, ಇಱಿದಲ್ಲಿ–ಘಾತಿಸು ವಾಗ, ಸಿಡಿಲ್ದ ನೆತ್ತರೊಳ್–ಸಿಡಿದ ರಕ್ತದಲ್ಲಿ. ಪೊರೆದು–ವ್ಯಾಪಿಸಿ. ನಿರಂತರಂ– ಯಾವಾಗಲೂ, ಪೊಲಸುನಾಱುವ–ದುರ್ನಾತ ಹೊಡೆಯುವ, ಮೆಯ್ಯನೆ–ದೇಹ ವನ್ನೇ, ಕರ್ಚಲೆಂದು – ತೊಳೆಯಬೇಕೆಂದು, ಕಮಳೈಕಬಾಂಧವಂ – ಸೂರ್ಯನು, ಅಪರಾಂಬುರಾಶಿಗೆ–ಪಶ್ಚಿಮದ ಕಡಲಿಗೆ, ಇೞಿವಂತೆ–ಇಳಿಯುವ ಹಾಗೆ, ಚೆಚ್ಚರಂ– ಬೇಗನೆ, ಇೞಿದಂ–ಇಳಿದನು.

ವಚನ : ಬಿದಿರ ಸಿಡಿಂಬಿನ–ಬಿದಿರ ಮೆಳೆಯ ; ಒಱಗಿದಂ–ಮಲಗಿದನು ; ಬೞಿಯನಟ್ಟಿ–ದೂತನನ್ನು ಕಳಿಸಿ ;

೫೨. ಪಾಂಡುಸುತರಂ-ಪಾಂಡವರನ್ನು, ಸಾಧಿಸಿಕೊಂಡು-ಗೆದ್ದುದು, ಆಯ್ತೇ –ಆಯಿತೇ ! ನಣ್ಪಿಂಗೆ-ಬಾಂಧವ್ಯಕ್ಕೆ, ಬೆನ್ನಿತ್ತು-ಬೆನ್ನನ್ನು ಕೊಟ್ಟು ಎಂದರೆ ಆಶ್ರಯ ವಾಗಿ, ಅಜ್ಜನ ಮಾತು–ತಾತನ ಮಾತು, ಭೀಷ್ಮನ ಮಾತು, ಸೈತಾಯ್ತು–ನೇರ ವಾಯ್ತು ; ದಲ್-ದಿಟವಾಗಿಯೂ, ನಮ್ಮ ಪಡೆಯಂ-ನಮ್ಮ ಸೈನ್ಯವನ್ನು, ಕಾವನ್ನರ್ –ರಕ್ಷಿಸುವಂಥವರು, ಇನ್ನಾರೋ–ಇನ್ನು ಯಾರೋ ? ಕಾವೊಡೆ–ರಕ್ಷಿಸುವ ಪಕ್ಷದಲ್ಲಿ. ಈತಂ ಕರ್ಣಂ ಸುಷ್ಠು ಅಕ್ಕುಂ–ಈ ಕರ್ಣನು ಸಮರ್ಥನಾಗುತ್ತಾನೆ ; ಅದಱಿಂ– ಆದ್ದರಿಂದ, ಆತಂಗೆ–ಆತನಿಗೆ, ನಾಮೆಲ್ಲಂ–ನಾವೆಲ್ಲರೂ, ನಿರ್ದ್ವೈತಂ–ಎರಡಿಲ್ಲದೆ ಎಂದರೆ ಭಿನ್ನಾಭಿಪ್ರಾಯವಿಲ್ಲದೆ, ಬೀರದ–ವೀರದ, ಬೀರವಟ್ಟಮಂ–ವೀರಪಟ್ಟವನ್ನು, ಇದಂ–ಇದನ್ನು, ನಿರ್ವ್ಯಾಜದಿಂ–ಯಾವನೆಪವೂ ಇಲ್ಲದೆ, ಕಟ್ಟುವಂ–ಕಟ್ಟೋಣ.

೫೩. ಸುರಸಿಂಧೂದ್ಭವನಿಂಬೞಿಕ್ಕೆ–ಭೀಷ್ಮನ ಅನಂತರ, ಸೇನಾಧಿಪತ್ಯಕ್ಕೆ– ಸೈನ್ಯಾಧಿಪತಿಯ ಪದವಿಗೆ, ತಕ್ಕರೆ–ಯೋಗ್ಯರಾದವರೇ ; ಪೆಱರಾರ್–ಬೇರೆ ಯಾರು ? ಲೋಕೈಕ ಧನುರ್ಧರಂ–ಲೋಕಕ್ಕೆಲ್ಲ ಒಬ್ಬನೆ ಬಿಲ್ಗಾರನಾದ, ಕಳಶಜಂ– ದ್ರೋಣನು, ತಕ್ಕ–ಯೋಗ್ಯನು ; ನದೀ ನಂದನಂಗೆ–ಭೀಷ್ಮನಿಗೆ, ಆಂ–ನಾನು, ನೆರವಾದೆನಪ್ಪೊಡೆ–ಸಹಾಯವಾಗಿದ್ದ ಪಕ್ಷದಲ್ಲಿ, ಇನಿತು–ಇಷ್ಟು, ಏಕಾದಪ್ಪುದು– ಏಕಾಗುತ್ತದೆ ; ಈ ಪೊೞ್ತೆಪೊೞ್ತು–ಈ ಹೊತ್ತೇ ಹೊತ್ತು ; ಇರಬೇಡ–ಸುಮ್ಮನಿರ ಬೇಡ ; ಭೂಪತೀ–ರಾಜನೇ, ನೀಂ–ನೀನು, ವೀರಪಟ್ಟಮನದಂ–ಆ ವೀರ ಪಟ್ಟ ವನ್ನು, ದ್ರೋಣಂಗೆ–ದ್ರೋಣನಿಗೆ, ಈವುದು–ಕೊಡುವುದು.

೫೪. ವಿಸಸನ ರಂಗಕ್ಕೆ – ಯುದ್ಧರಂಗಕ್ಕೆ, ಆನ್‌ಇರೆ – ನಾನು ಇರಲು, ಪೆಱರಂ–ಇತರರನ್ನು, ಬೆಸಗೊಳ್ವುದೆ–ಕೇಳುವುದೆ ? ಎಂದು–ಎಂದು ಹೇಳುತ್ತ, ಜಯ ಪಟಹಂಗಳ್–ವಿಜಯ ಭೇರಿಗಳು, ದೆಸೆದೆಸೆಗೆ–ದಿಕ್ಕುದಿಕ್ಕಿಗೆ, ಎಸೆವಿಸೆಗಂ–ಶಬ್ದ ಮಾಡುತ್ತಿರಲು, ಕಳಶಭವಂ–ದ್ರೋಣನು, ಬೀರವಟ್ಟಮಂ – ವೀರಪಟ್ಟವನ್ನು, ಕಟ್ಟಿಸಿಕೊಂಡಂ–ಕಟ್ಟಿಸಿಕೊಂಡನು.

**ವಚನ :** ಶಾತಕುಂಭಕುಂಭಸಂಭೃತ–ಚಿನ್ನದ ಕಲಶಗಳಲ್ಲಿ ತುಂಬಲ್ಪಟ್ಟ ; ಸಮುಕಟ್ಟುತಿರ್ಪನ್ನೆಗಂ–ಏರ್ಪಾಡು ಮಾಡುತ್ತಿರಲು

**೫೫.** ಅದಟಂ ಸಿಂಧುತನೂಭವಂ–ಶೂರನಾದ ಭೀಷ್ಮನು, ವಿಜಯನೊಳ್ ಮಾರ್ಕೊಂಡು–ಅರ್ಜುನನಲ್ಲಿ ಪ್ರತಿಭಟಿಸಿ, ಅಣಂ–ವಿಶೇಷವಾಗಿ, ಕಾದಲಾರದೆ–ಯುದ್ಧ ಮಾಡಲಸಮರ್ಥನಾಗಿ, ಜೆಂಬಿಟಿಬ್ದೊಡೆ – ಜೆನ್ನುಮೇಲೆ ಬಿದ್ದರೆ ಎಂದರೆ ಶರಶಯನದ ಮೇಲೆ ಬೆನ್ನಿಟ್ಟು ಮಲಗಿದರೆ, ದ್ರೋಣಂ–ದ್ರೋಣನು. ಕಾದಲೆಂದು–ಯುದ್ಧ ಮಾಡಬೇಕೆಂದು, ಬೆಸನಂ–ಕಾರ್ಯವನ್ನು, ಪೂಣ್ದಂ–ವಹಿಸಿಕೊಂಡನು, ಅಂತು–ಹಾಗೆ, ಆದುವಂ–ಆದನ್ನೂ, ನೋಡುವೆಂ–ನೋಡುತ್ತೇನೆ, ಎಂದು, ಕಣ್ ತಣಿವಿನಂ–ಕಣ್ಣು ತೃಪ್ತಿಪಡುತ್ತಿರಲು, ನೋಡಲ್ಕೆ ಬರ್ಪಂತೆ – ನೋಡುವುದಕ್ಕೆ ಬರುವ ಹಾಗೆ, ಬಂದು, ಭಾನು–ಸೂರ್ಯ, ಉದಯಾದ್ರೀಂದ್ರಮನೇಱೆ–ಉದಯ ಪರ್ವತವನ್ನು ಹತ್ತಲು, ಅನೀಕಾರ್ಣವಂ–ಸೇನಾಸಮುದ್ರವು, ಪೊಱಮಟ್ಟು–ಹೊರಕ್ಕೆ ಬಂದು. ಒಡ್ಡಿತ್ತು–ಚಾಚಿತ್ತು, ಯುದ್ಧಕ್ಕೆ ಸಿದ್ಧವಾಗಿತ್ತು.

**ವಚನ :** ತದ್ವ್ಯೂಹದ ಆ ರಚನೆಯ ; ಮೊನೆಗೆ–ಮುಂಭಾಗಕ್ಕೆ, ಅಗ್ರಕ್ಕೆ.

**೫೬.** ಶೋಣಾಶ್ವಂಗಳ್–ಕೆಂಪು ಕುದುರೆಗಳು, ರಜತ ರಥಮಂ–ಬೆಳ್ಳಿಯ ರಥವನ್ನು, ಪೂಡೆ–ಹೂಡಲು ; ಕುಂಭಧ್ವಜಂ–ಕಲಶದ ಬಾವುಟ, ಗೀರ್ವಾಣಾವಾಸಂಬರ–ಸ್ವರ್ಗದವರೆಗೂ, ಅಡರೆ–ಏರಲು ; ಮಾಱಿಯೊಡ್ಡು–ಎದುರು ಸೈನ್ಯ, ಎನ್ನೀ ಬಾಣಾವಾಸಕ್ಕೆ–ನನ್ನ ಈ ಬತ್ತಳಿಕೆಗೆ, ಸಾಲದು ದಲ್–ಸಾಕಾಗುವುದಿಲ್ಲ, ದಲ್–ದಿಟ, ಎನುತುಂ–ಎಂದು ಹೇಳುತ್ತ, ಅಳವಂ–ಪ್ರತಾಪವನ್ನು, ಬೀಱುತುಂ–ಬೀರುತ್ತ, ಪ್ರಕಟಿಸುತ್ತ ; ಬಿಲ್ಗೆ ಜಾಣಂ–ಬಿಲ್ವಿದ್ಯೆಯಲ್ಲಿ ಜಾಣನಾದ ದ್ರೋಣನು, ಮುಸಗಿ–ಕೆರಳಿ, ಒಂದು ಕೂರಂಬನಾಗಳ್–ಒಂದು ಹರಿತವಾದ ಬಾಣವನ್ನು ಆಗ, ತಿರುಪುತ್ತೆ–ತಿರುಗಿಸುತ್ತ, ನಿಂದಂ–ನಿಂತನು.

**೫೭.** ಆ ಸಕಳಧರಾಧೀಶರ–ಆ ಎಲ್ಲಾ ರಾಜರ, ಬೀಸುವ ಕುಂಚಮನೆ–ಬೀಸುವ ಚವರಿಗಳನ್ನೇ, ಪಾರ್ದು–ನೋಡಿ, ಬೀಸಲೊಡಂ–ಬೀಸಿದ ಕೂಡಲೇ, ಕೆಯ್ವೀಸಲೊಡಂ–ತೋಳುಗಳನ್ನು ಬೀಸಿದ ಕೂಡಲೇ, ಉಭಯ ಬಲಂಗಳ್–ಎರಡು ಸೈನ್ಯಗಳೂ, ಅಱಿದು–ತಿಳಿದು, ತಡೆಯದೆ–ತಡಮಾಡದೆ, ಆಸುಕರಂ ಬೆರಸು–ತೀವ್ರತೆಯಿಂದ ಕೂಡಿ, ತಾಗಿದುವು–ಸಂಘಟ್ಟಿಸಿದುವು ; ಆಸುಕರಂ<(ಸಂ) ಆಶುಕರ.

ವಚನ ; ತಲೆಗಳ್ ಪಱಿಯೆ–ತಲೆಗಳು ಕತ್ತರಿಸಲು ; ಬಱಿಗಳ್–ಪಕ್ಕೆಗಳು ; ಸುಲಿಯೆ–ಬಿಚ್ಚಲು, ತೆರೆಯಲು ;

**೫೮.** ಒಡನೆ–ಕೂಡಲೇ, ನಭಂಬರಂ–ಆಕಾಶದವರೆಗೆ. ಸಿಡಿಲ್ವ–ಸಿಡಿಯುವ, ಪಂದಲೆ–ಹಸಿತಲೆ ; ಸೂಸುವ–ಚೆಲ್ಲುವ, ಕಂಡದ ಇಂಡೆಗಳ್ – ಮಾಂಸಖಂಡಗಳ ಮುದ್ದೆಗಳು, ತೊಡರೆ–ಸಿಕ್ಕಿಕೊಳ್ಳಲು, ತೆರಳ್ದ–ಒಟ್ಟಾದ, ನೆತ್ತರ ಕಡಲ್–ರಕ್ತದ ಸಮುದ್ರ ; ನೇಣದ–ಕೊಬ್ಬಿನ, ಒಳ್ಗೆಸಱಿನೊಳ್–ಒಳ್ಳೆಯ ಕೆಸರಿನಲ್ಲಿ, ಜಿಗಿಲ್ತು–

ಅಂಟಿಕೊಂಡು, ಅಗುರ್ವು-ಭಯ, ಅಡರೆ-ಏರಲು ; ನಿಸಂತರಂ-ಎಡೆಬಿಡದೆ, ಪೊಳೆಪ-ಹೊಳೆಯುವ, ಬಾಳುಡಿ-ಕತ್ತಿಯ ಮುರುಕುಗಳು, ಸುಯ್ಪು-ದುಡಿಯುತ್ತಿರುವ, ನವವ್ರಣಂಗಳೊಳ್-ಹೊಸಗಾಯಗಳಲ್ಲಿ, ಪೊಡರೆ-ಸ್ಫುರಿಸುತ್ತಿರಲು, ಆಹವರಂಗ ಭೂಮಿಯೊಳ್-ಯುದ್ಧಭೂಮಿಯಲ್ಲಿ, ಅದ್ಭುತ ಭಯಾನಕಂ-ಆಶ್ಚರ್ಯ ಭಯಂ-ಕರತೆಗಳು, ಪೊದಳ್ದುವು-ವ್ಯಾಪಿಸಿದುವು.

**ವಚನ** : ಧರ್ಮಪುತ್ರನ ಮೊನೆಯೊಳ್-ಧರ್ಮರಾಜನ ಸೈನ್ಯದ ಅಗ್ರಭಾಗದಲ್ಲಿ, ಭರಂಗೆಯ್ದು-ಜೋರುಮಾಡಿ.

**೫೯.** ಧ್ವಜಮಂ-ಬಾವುಟವನ್ನು, ಖಂಡಿಸಿ-ಕತ್ತರಿಸಿ ; ಧೃಷ್ಟದ್ಯುಮ್ನನಂ-ಧೃಷ್ಟದ್ಯುಮ್ನನನ್ನು, ಬಾಣದೊಳೆ-ಬಾಣಗಳಲ್ಲಿಯೆ, ಪೂಳ್ದು-ಹೂತು ; ನೆಟ್ಟನೆ-ನೇರಾಗಿ, ಒಟ್ಟಜೆಯಿಂ-ಆಧಿಕ್ಯದಿಂದ (ಬಲವಾಗಿ), ಶಿಖಂಡಿಯಂ-ಶಿಖಂಡಿಯನ್ನು, ತೂಳ್ದಿ-ತಳ್ಳಿ ; ಕಾಯ್ಪಿಂದಂ-ಕೋಪದಿಂದ, ದ್ರುಪದನಂ-ದ್ರುಪದನನ್ನು, ಏಸಾಡಿ-ಬಾಣಪ್ರಯೋಗಮಾಡಿ, ಮಿಕ್ಕು-ಮೀಱಿ, ಜವಂ-ಯಮನು, ಕೊಲ್ವವೋಲ್-ಕೊಲ್ಲುವಂತೆ, ಆತನಿಂ ಕಿಱಿಯರಂ-ಆ ದ್ರುಪದನಿಗಿಂತ ಕಿರಿಯರಾದವರನ್ನು ಎಂದರೆ ಅವನ ತಮ್ಮಂದಿರನ್ನು, ಪನ್ನೊರ್ವರಂ-ಹನ್ನೊಂದು ಜನರನ್ನು, ಕೊಂದು, ಮಾಣದೆ-ಬಿಡದೆ, ಮತ್ಸ್ಯಜನಂ-ವಿರಾಟನ ಮಗನಾದ, ನಿಶ್ಯಂಕನಂ-ಹೆದರಿಕೆಯಿಲ್ಲದ, ಶಂಕನಂ-ಶಂಕನನ್ನು, ಒಂದೇ ಶರದಿಂ-ಒಂದೇ ಬಾಣದಿಂದ, ಕೊಂದಂ-ಕೊಂದನು.

**ವಚನ** : ಮೇಘ ಘಟೆಗಳ್-ಮೋಡಗಳ ಸಮೂಹಗಳು ; ಅನೇಕಪ ಘಟೆಗಳ್ವೆರಸು-ಆನೆಗಳ ಗುಂಪುಗಳೊಡನೆ ಕೂಡಿ ; ಪೆಱಗಿಕ್ಕಿ-ಹಿಂದಕ್ಕೆ (ರಕ್ಷಿಸಿ)

**೬೦.** ಓರೊಂದೆ ಪಾರೆಯಂಬಿನೊಳ್-ಒಂದೊಂದೇ ಹಾರೆಯಾಕಾರದ ಬಾಣದಲ್ಲಿ, ಓರೊಂದೆ-ಒಂದೊಂದೇ, ಗಜೇಂದ್ರಮುರುಳೆ-ಆನೆ ಉರುಳಲು ; ತೆಗೆನೆಱೆದು-ಕಿವಿವರೆಗೆ ಹೆದೆಯನ್ನು ಸೆಳೆದು, ಎಚ್ಚೆಚ್ಚು-ಹೊಡೆದು ಹೊಡೆದು, ಓರಣದೊಳ್-ಕ್ರಮವಾಗಿ, ಸಾಲಾಗಿ, ಆರುಂ ಅಗುರ್ವಿಸೆ-ಯಾರಾದರೂ ಸರಿಯೆ ಭಯಪಡುತ್ತಿರಲು, ಚೇಕಿತ್ಸನಂ-ಚೇಕಿತ್ಸನನ್ನು, ಘಟೋದ್ಭವಂ-ದ್ರೋಣನು, ತಱಿದು-ಕತ್ತರಿಸಿ, ಆರ್ದಂ ಗರ್ಜಿಸಿದನು.

**ವಚನ** : ಅಲ್ಲಕಲ್ಲೋಲಂ ಮಾಡಿ-ಚೆಲ್ಲಾಪಿಲ್ಲಿಯಾಗಿ ಚೆದರಿಸಿ ; ಕಳಶಕೇತನಂ-ದ್ರೋಣ ;

**೬೧.** ಸಂಸಪ್ತಕರ್ಕಳ್ - ಸಂಸಪ್ತಕರು, ಕಾದಲ್ - ಯುದ್ಧಮಾಡಲು, ಕರೆದೊಡೆ-ಕರೆದರೆ, ಬೆನ್ನಂ ತಗಳ್ದು-ಅವರ ಬೆನ್ನಟ್ಟಿ, ಆದಕಾಯ್ಪಿಂ-ಉಂಟಾದ ಕೋಪದಿಂದ, ಕಾದುತ್ತಿಪರ್ಾತಂ-ಹೋರುತ್ತಿರುವ, ಅರಿಗಂ-ಅರ್ಜುನನು, ಅಂತಾ ಕಳಕಳಮಂ ಅದಂ ಕೇಳ್ದು-ಹಾಗೆ ಆ ಕೋಲಾಹಲವನ್ನು ಕೇಳಿ, ಭೋಂಕೆಂದು ಬಂದು -ಬಿರುಸಾಗಿ ಬಂದು, ಎಚ್ಚೆಚ್ಚ-ಹೊಡೆದ ಹೊಡೆದ, ಆ ದಿವ್ಯಾಸ್ತ್ರಂಗಳಿಂ-ಆ ಶ್ರೇಷ್ಠ

ವಾದ ಬಾಣಗಳಿಂದ, ತನ್ನೊವಜರ್-ತಮ್ಮ ಗುರುಗಳಾದ ದ್ರೋಣರು, ಉಗಿಱು–ಆಕರ್ಷಿತರಾಗಲು, ತಮ್ಮಣ್ಣನಂ–ತಮ್ಮ ಅಣ್ಣ ಧರ್ಮರಾಜನನ್ನು, ಶೌರ್ಯದಿಂದಂ–ಪ್ರತಾಪದಿಂದ, ಕಾದಂ–ರಕ್ಷಿಸಿದನು; ಮುಂ–ಹಿಂದಿನ ಕಾಲದಲ್ಲಿ, ಬಿಜ್ಜಸಂ–ವಿಜಯಾದಿತ್ಯನೆಂಬ ರಾಜನನ್ನು, ಕಾದ–ರಕ್ಷಿಸಿದ, ಅರಿಗಂ–ಅರಿಕೇಸರಿ (ಪಾರ್ಥ), ಉೞಿದರಂ–ಮಿಕ್ಕವರನ್ನು, ಕಾವುದು–ರಕ್ಷಿಸುವುದು, ಏಂ ಚೋದ್ಯಮಾಯ್ತೇ–ಏನು ಆಶ್ಚರ್ಯವಾಯಿತೇ? ಅರಿಕೇಸರಿ ವಿಜಯಾದಿತ್ಯನನ್ನು ರಕ್ಷಿಸಿದ ವಿಷಯ ಹಿಂದೆಯೇ ಬಂದಿದೆ.

**ವಚನ**: ಮಾರ್ತಾಂಡಂ–ಸೂರ್ಯ; ಶರನಿಕರಸ್ಫುರಿತಕಿರಣಂಗಳ್–ಬಾಣಗಳ ಸಮೂಹದ ಪ್ರಕಾಶಮಾನವಾದ ರಶ್ಮಿಗಳು; ಮಸುಳ್ದು – ಕಾಂತಿಹೀನವಾಗಿ, ಕಂದಿ; ಅಪರಜಳನಿಧಿಗೆ–ಪಶ್ಚಿಮ ಸಾಗರಕ್ಕೆ: ಅಪಹಾರತೂರ್ಯಂಗಳಂ–ಯುದ್ಧದ ನಿಲುಗಡೆಯನ್ನು ಸೂಚಿಸುವ ವಾದ್ಯಗಳನ್ನು.

**೬೨.** ಪಡೆಗಳೆರಡುಂ–ಎರಡು ಸೈನ್ಯಗಳೂ, ಬೀಡಿಂಗೆ–ಪಾಳಯಕ್ಕೆ, ಎತ್ತಂ–ಎಲ್ಲೆಲ್ಲೂ, ತೆರಳ್ದು–ಹೋಗಿ, ನೆಗೞ್ತೆಯಂ–ಕೀರ್ತಿಯನ್ನು, ಪಡೆದು–ಹೊಂದಿ, ಸಂಪಾದಿಸಿ; ಅೞಿದರಂ–ಸತ್ತವರನ್ನು, ಮೆಚ್ಚುತ್ತೆ–ಮೆಚ್ಚಿಕೊಳ್ಳುತ್ತ, ಉತ್ಸಾಹದಿಂ–ಮೇಲಿಂದ ಮೇಲೆ, ಪೊಗೞುತ್ತುಂ – ಹೊಗಳುತ್ತ, ಒಳ್ಪಡರೆ – ಒಳ್ಳೆಯತನವು ಅಧಿಕವಾಗುತ್ತಿರಲು, ನುಡಿಯುತ್ತುಂ – ಮಾತಾಡುತ್ತ, ಅಂತು ಇರ್ದು – ಹಾಗೆ ಇದ್ದು, ಆದಿತ್ಯಂ–ಸೂರ್ಯನು, ಅಂದು–ಆ ದಿನ, ಅತ್ತ–ಅತ್ತಕಡೆ, ಉದಯಾದ್ರಿಯಂ ಅಡರೆ – ಉದಯಗಿರಿಯನ್ನೇರಲು, ಪೊಱಮಟ್ಟು–ಶಿಬಿರಗಳಿಂದ ಹೊರಕ್ಕೆ ಬಂದು, ಕೋಪದಿಂ–ಕೋಪದಿಂದ, ಒಡ್ಡಿ ನಿಂದುವು–ಎದುರಿಸಿ ನಿಂತುವು.

**೬೩.** ಅಂತು–ಹಾಗೆ, ಒಡ್ಡಿನಿಂದ–ಎದುರಿಸಿ ನಿಂತ, ಚಾತುರ್ದಂತಂ–ಚತುರಂಗ ಸೈನ್ಯಗಳು, ಕೆಯ್ವೀಸುವನ್ನೆಗಂ – ಕೈಬೀಸುತ್ತಿರಲು, ಸೈರಿಸದೆ – ತಾಳ್ಮೆಯಿಂದಿರದೆ; ಓರಂತೆ – ಕ್ರಮವಾಗಿ, ಪೆಣೆದು – ಹೆಣೆದುಕೊಂಡು, ಅಂತೆ – ಹಾಗೆ, ನೆತ್ತರ ತೊಱೆಗಳ್–ರಕ್ತದ ನದಿಗಳು, ದಿಗಂತಾಂತಮಂ–ದಿಕ್ಕುಗಳ ಕೊನೆಯನ್ನು, ಎಯ್ದೆ–ಮುಟ್ಟಿ, ಪರಿಯೆ–ಹರಿಯಲು, ಇಱಿದುವು–ಯುದ್ಧಮಾಡಿದುವು.

**೬೪.** ಅೞಿಗ್ಗಿದ–ನಾಶವಾದ, ಬಿಲ್ಪಡೆ–ಬಿಲ್ಗಾರರ ಸೈನ್ಯ, ಮಾಣದೆ–ಇರದೆ, ತೞ್ಗಿದ–ತಗ್ಗಿದ, ಕ್ಷಯಿಸಿದ, ರಥಂ–ರಥಗಳು, ಎಯ್ದೆ–ಚೆನ್ನಾಗಿ, ಬಗಿದ–ತೋಡಿದ, ಪುಣ್ಗಳ ಪೊಱೆಯಿಂ–ಹುಣ್ಣುಗಳ ಭಾರದಿಂದ ಎಂದರೆ ಆಧಿಕ್ಯದಿಂದ, ಮೊೞಗ್ಗಿದ–ಬಾಗಿದ, ಕರಿಘಟೆ–ಆನೆಗಳ ಸೈನ್ಯಗಳು, ಇವುಗಳಿಂದ, ವೀರಭಟ ರಣರಂಗಂ–ಶೂರ ಯೋಧರಿಂದ ಕೂಡಿದ ರಣಭೂಮಿ, ಜವಂ–ಯಮನು, ಅಡುವ–ಬೇಯಿಸುವ, ಅೞ್ಗೆಯಂ–ಅಡುಗೆಯನ್ನು, ಅನುಕರಿಸೆ – ಹೋಲಲು; "ಮೊೞ್ಗಿ–ನಮಸೇ"; ಅೞ್ಗೆ<ಅಡುಗೆ; ಅಲುಗು<ಅಲ್ಗು ಆದಹಾಗೆ; ಹೀಗೆಯೇ ಬಿರುದು<ಬಿರ್ದು,

ಬಿರ್ದುಗೊಂಡಾಡುವ ಮದನಮದೋನ್ಮತ್ತೆಯರ್ ನಲ್ಲರಾದರ್ (ಶೂದ್ರಕ, ಕಾವ್ಯಸಾ. ೨೧೫).

ವಚನ: ಪೆಣೆದು ಕಾದೆ–ಹೆಣೆದುಕೊಂಡು ಯುದ್ಧಮಾಡಲು.

೬೫. ಪೊಸಮಸೆಯ–ಹೊಸದಾಗಿ ಸಾಣೆಯಿಕ್ಕಿದ, ಅಂಬುಗಳ್–ಬಾಣಗಳು, ದೆಸೆಗಳಂ – ದಿಕ್ಕುಗಳನ್ನು, ಮಸುಳ್ಪನ್ನೆಗಂ – ಮಾಸಿಸುತ್ತಿರಲು, ಎಯ್ದೆಪಾಯೆ – ಚೆನ್ನಾಗಿ ನುಗ್ಗಲು; ಪಾಯಿಸುವ ರಥಂಗಳ್–ಚೋದಿಸುವ ರಥಗಳು, ಆ ರಥದ– ಆ ರಥಗಳ, ಕೀಲ್ಮುಱಿದಾಗಳೆ–ಕೀಲುಗಳು ಮುರಿದಾಗಲೇ, ಕೆಯ್ಯಂ–ಕೈಗಳನ್ನು, ಅಲ್ಲಿ – ಕೀಲುಗಳೆಡೆಯಲ್ಲಿ, ಕೋದು – ಪೋಣಿಸಿ, ಸೇರಿಸಿ, ಎಸಗುವ – ರಥಗಳನ್ನು ಓಡಿಸುವ, ಸೂತರ್–ಸಾರಥಿಗಳು; ಅಂಬುಕೊಳೆ–ಬಾಣಗಳು ನಾಟಲು, ಸೂತರ್–ಸಾರಥಿಗಳು, ಉರುಳ್ದುಂ–ಕೆಳಕ್ಕೆ ಉರುಳಿಯೂ, ಇಳಾತಳಕ್ಕೆ ಪಾಯ್ದು–ನೆಲದ ಮೇಲಕ್ಕೆ ನೆಗೆದು, ಅಸಿಯೊಳೆ – ಕತ್ತಿಗಳಲ್ಲೇ, ತಾಗಿ – ಸಂಘಟ್ಟಿಸಿ, ತಳ್ತಿಱಿವ– ಎದುರಿಸಿ ಹೋರಾಡುವ, ನಿಚ್ಚಟರ್ – ಸ್ಥಿರರಾದ ಶೂರರು, ಆಜಿರಂಗದೊಳ್ – ಯುದ್ಧರಂಗದಲ್ಲಿ, ಒಪ್ಪಿದರ್–ಶೋಭಿಸಿದರು.

ವಚನ: ವಿಳಯಕಾಲ ಜಳಧರಂಗಳ್–ಪ್ರಳಯಕಾಲದ ಮೇಘಗಳು;

೬೬. ರಥದಿಂ ಧಾತ್ರಿಗೆ ಪಾಯ್ದು–ರಥದಿಂದ ನೆಲಕ್ಕೆ ದುಮುಕಿ, ಕೊಂಡು ಗದೆಯಂ–ಗದೆಯನ್ನು ತೆಗೆದುಕೊಂಡು, ಇಂದು–ಈ ದಿವಸ, ಅಸ್ಮನ್ಮನೋರಥಂ– ನನ್ನ ಅಭಿಲಾಷೆಯು, ಕೆಯ್ಸಾರ್ದುದು–ಕೈಗೆ ಬಂತು, ಎಂದು, ಕಡಂಗಿ–ಉತ್ಸಾಹಿಸಿ, ಮಾಣದೆ–ನಿಲ್ಲದೆ, ಸಿಡಿಲ್ ಪೊಯ್ವಂತೆವೊಲ್–ಸಿಡಿಲು ಹೊಡೆಯುವಂತೆ, ಪೊಯ್ದುದುಂ–ಹೊಡೆಯುತ್ತಲು, ರಥಯೂಥಧ್ವಜಶಸ್ತ್ರ ಸಂಘಟನದೊಳ್–ರಥಗಳ ಸಮೂಹ ಬಾವುಟಗಳು ಆಯುಧಗಳು–ಇವುಗಳ ತಾಕಲಾಟದಲ್ಲಿ, ಘಂಟಾ ಸಮೇತಂ – ಕೊರಳಿನ ಗಂಟೆಗಳು ಸಹಿತವಾಗಿ, ಕರಿಗಳ್ – ಆನೆಗಳು, ಉಗ್ರಾಜಿಯೊಳ್–ಭಯಂಕರ ಯುದ್ಧದಲ್ಲಿ, ಮಹಾರಥನಿಂದಂ–ಮಹಾರಥಿಕನಾದ ಭೀಮಸೇನನಿಂದ, ಕುಳಶೈಳದಂತೆ–ಕುಲಗಿರಿಗಳ ಹಾಗೆ, ಬೀೞ್ತಂದುವು–ಕೆಳಕ್ಕೆ ಬಿದ್ದುವು. ಇಲ್ಲಿ 'ಸಂಘಟನ' ಎಂಬುದಕ್ಕೆ ಇತರ ಪಾಠಗಳಿವೆ; ಅವುಗಳಿಗೆ ಅರ್ಥೈಸುವುದು ಕಷ್ಟ.

೬೭. ಮದವದ್ದಂತಿಗಳಂ – ಸೊಕ್ಕೇರಿದಾನೆಗಳನ್ನು, ಕಱುತ್ತು – ಕೋಪಿಸಿ, ಅಸಗವೊಯ್ಲೊಳ್ಪುಯ್ದು – ಅಗಸನೇಟಿನಿಂದ ಹೊಡೆದು, ಆಜಿಯೊಳ್–ಯುದ್ಧದಲ್ಲಿ, ಭೀಮಂ–ಭೀಮಸೇನನು, ಆರ್ದು–ಗರ್ಜಿಸಿ, ಒದೆದು–ಕಾಲಿನಿಂದ ಒದ್ದು, ಈಡಾಡಿದೊಡೆ–ಎಸೆದರೆ, ಅತ್ತ–ಅತ್ತಕಡೆ, ಅಜಾಂಡ ತಟಮಂ–ಬ್ರಹ್ಮಾಂಡದ ಮೇರೆಯನ್ನು, ತಾಪನ್ನೆಗಂ – ತಗುಲುವ ಹಾಗೆ, ಪಾಱಿ–ಹಾರಿ, ತಾಱಿದ – ಒಣಗಿಹೋದ, ಪೇರಾನೆಯ – ದೊಡ್ಡ ಆನೆಗಳ, ಒಡಲ್ಗಳ್ – ದೇಹಗಳು, ಅಭ್ರತಳದೊಳ್ – ಮೋಡಗಳ ಪ್ರದೇಶದಲ್ಲಿ, ಸಿಲ್ಕಿರ್ದುಂ–ಸಿಕ್ಕಿಕೊಂಡಿದ್ದೂ, ಒರೊಂದು–ಒಂದೊಂದು

ಮಾಣದೆ-ನಿಲ್ಲದೆ, ಜೆಟ್ಟು ಬೀಬ್ವತೆಱದಿಂದೆ-ಬೆಟ್ಟ ಬೀಳುವ ಹಾಗೆ, ಕುರುಕ್ಷೇತ್ರ ದೊಳ್-ಕುರುಭೂಮಿಯಲ್ಲಿ, ಇನ್ನುಂ-ಇನ್ನೂ ಕೂಡ, ಬೀೞ್ವುರ್ವು-ಬೀಳುತ್ತಿವೆ. ಭೀಮನು ಎಂದೋ ಎಸೆದ ಆನೆಗಳ ಹೆಣಗಳು ಮೋಡದ ಪದರಗಳಲ್ಲಿ ಸಿಕ್ಕಿ ಕೊಂಡಿದ್ದು ಇನ್ನೂ ಕೂಡ ಒಂದೊಂದು ಕುರುಕ್ಷೇತ್ರದಲ್ಲಿ ಬೀಳುತ್ತಿದೆ ಎಂಬ ಉತ್ಪ್ರೇಕ್ಷೆ ಅದರ ನವೀನತೆಯಿಂದ ಆಶ್ಚರ್ಯಕರವಾಗಿ ಮನೋಜ್ಞವಾಗಿದೆ. ಪಂಪ ಭಾರತವಿರುವವರೆಗೂ ಅವು ಬೀಳುತ್ತಲೇ ಇರುತ್ತವೆ.

೬೮. ತಡಂಗಾಲ್ – (ಭೀಮನ) ದೊಡ್ಡ ಕಾಲುಗಳು, ತೊಡರಿ-ಸಿಕ್ಕಿ ಕೊಂಡು, ಪೊಯ್ದೊಡೆ-ಒದೆದರೆ, ಕೆಡೆದುಂ-ಕೆಳಕ್ಕೆ ಬಿದ್ದೂ, ತಿವಿದೊಡೆ-ತಿವಿದರೆ, ಸುರುಳ್ದುಂ-ಸುರುಟಿಕೊಂಡೂ, ಮೋದಿದೊಡೆ-ಅಪ್ಪಳಿಸಿದರೆ, ಇರದೆ-ಬಿಡದೆ, ಎಲ್ವಡಗಾಗಿ-ಎಲುಬು ಮಾಂಸಗಳಾಗಿ, ಮಡಿದುಂ-ಸತ್ತೂ, ಕರಿಘಟೆಗಳ್-ಆನೆಗಳು, ಗಡಣದೆ-ಗುಂಪುಗುಂಪಾಗಿ, ಬಿೞ್ದುವು-ಬಿದ್ದುವು; ಏಂ ಬಲಸ್ಥನೊ ಭೀಮಂ-ಭೀಮನು ಏನು ಶಕ್ತಿಸಂಪನ್ನನೋ!

**ವಚನ**: ಒಲ್ಲನೆ-ಒಯ್ಯನೆ, ಮೆಲ್ಲನೆ; ಉಲಿದು-ಕೂಗಿ.

೬೯. ಇಲ್ಲಿಂದ ಮುಂದಕ್ಕೆ ೮೨ನೆಯ ಪದ್ಯಪೂರ್ತ ಸುಪ್ರತೀಕ ಗಜದ ವಧೆ ಭಗದತ್ತನ ಮರಣ: ನೆಗಳ್ದಿಂ-ಪ್ರಸಿದ್ಧನಾದನು; ಎನ್ನೇಱ ದೀಯಾನೆಯುಂ-ನಾನು ಹತ್ತಿಕೊಂಡಿರುವ ಈ ಆನೆ ಕೂಡ, ದೇವೇಂದ್ರನ-ಇಂದ್ರನ, ಐರಾವತದ-ಐರಾವತವೆಂಬ ಆನೆಯ, ಕೆಳೆಯುಂ-ಸ್ನೇಹಿತ, ದಲ್-ದಿಟವಾಗಿಯೂ, ದಿಗಿಭಂ-ದಿಗ್ದಂತಿ; ದುರ್ಯೋಧನಂ-ಕೌರವನು, ಎನಗೆ-ನನಗೆ, ನಚ್ಚಿದಂ-ನಂಬಿಕೆಯುಳ್ಳವನು; ಭೀಮಂ-ಭೀಮನು, ಇದಿರಂ-ಸಮ್ಮುಖಕ್ಕೆ, ಎಯ್ತಂದಂ-ಬಂದನು, ಈಗಳ್-ಈಗ, ಸಂದ ಎನ್ನ ಅಳವುಂ ಅದಟುಂ-ಪ್ರಸಿದ್ಧವಾದ ನನ್ನ ಶಕ್ತಿಯೂ ಶೌರ್ಯವೂ, ಮುಗಿಲಂ ಮುಟ್ಟಿತ್ತು-ಮೋಡಗಳನ್ನು ಸ್ಪರ್ಶಮಾಡಿತು, ಎಂದರೆ ಅತ್ಯತಿಶಯವಾಯಿತು; ಎಂದು ಆರ್ದು-ಎಂದು ಗರ್ಜಿಸಿ, ದೋರ್ದರ್ಪಯುಕ್ತಂ-ಬಾಹುಬಲದ ಗರ್ವದಿಂದ ಕೂಡಿದ, ಭಗದತ್ತಂ-ಭಗದತ್ತನು, ಸುಪ್ರತೀಕದ್ವಿಪಮಂ-ಸುಪ್ರತೀಕವೆಂದು ಹೆಸರುಳ್ಳ ಆನೆಯನ್ನು, ಉಪಚಿತ ಉತ್ಸಾಹದಿಂ-ವೃದ್ಧಿಗೊಳ್ಳುತ್ತಿರುವ ಹುಮ್ಮಸ್ಸಿನಿಂದ, ತೋಱಿಕೊಟ್ಟಂ-ತೋರಿಸಿಬಿಟ್ಟನು, ಛೂಬಿಟ್ಟನು.

೭೦. ಮದಕರಿಯ ಪರಿವ ಭರದಿಂ-ಮದಿಸಿದ ಆನೆಯು ಓಡುವ ವೇಗದಿಂದ, ನೆಲಂ-ಭೂಮಿಯು, ಅದಿರ್ದೊಡೆ-ಅಲುಗಾಡಿದರೆ, ಒಡ್ಡಿನಿಂದ-ಚಾಚಿನಿಂತ, ಚತುರಂಗಮುಂ-ಚತುರಂಗ ಸೈನ್ಯವೂ, ಕೂಡಿದ-ಕಾಯಿಗಳಿಂದ ಕೂಡಿದ, ತೂಡಿದ; ಚದುರಂಗದ ಮಣೆಯುಂ-ಚದುರಂಗದ ಮಣೆಯನ್ನು, ಅಲ್ಗಿದಂತಪ್ಪಿನೆಗಂ-ಅಳ್ಳಾಡಿಸಿದಂತಾಗುತ್ತಿರಲು, ಒರ್ಮೊದಲೆ-ಒಂದೇ ಸಲ, ನಡುಗಿದುದು-ಕಂಪಿಸಿತು.

**ವಚನ**: ಅಸುರನುಯ್ದು-ರಾಕ್ಷಸನು ಎತ್ತಿಕೊಂಡುಹೋದ; ಆದಿವರಾಹಂ-ಆದಿಯ ಹಂದಿ, ಎಂದರೆ ವರಾಹಾವತಾರದ ವಿಷ್ಣು; ಅಱಸಲೆಂದು-ಹುಡುಕ

ಬೇಕೆಂದು ; ಸಕಳ ಜಳಚರಕಳಿತ ಜಳನಿಧಿಗಳಂ–ಸಮಸ್ತ ನೀರ್ಜಂತುಗಳಿಂದ ಕೂಡಿದ ಕಡಲುಗಳನ್ನು ; ಕಲಂಕುವಂತೆ–ಕಲಕುವ ಹಾಗೆ ; ಬಳಜಳನಿಧಿಯುಮಂ–ಸೈನ್ಯ ಸಾಗರವನ್ನು, ಅಳಿ....ತಟಂ ; ಅಳಿಕುಳ-ದುಂಬಿಗಳ ಸಮೂಹದ. ಝೇಂಕಾರದಿಂದ, ಮುಖರಿತ–ಶಬ್ದ ಮಾಡುತ್ತಿರುವ, ವಿಶಾಲ–ವಿಸ್ತಾರವಾದ, ಕರಟತಟಂ–ಕಪೋಲ ಪ್ರದೇಶವುಳ್ಳ ; ಆ ದಿಶಾಗಜೇಂದ್ರಂ–ಆ ದಿಗ್ದಂತಿ ;

೭೧. ಕರ್ಣತಾಳ–ಕಿವಿಗಳನ್ನು ಬೀಸುವುದರಿಂದಾದ, ಪವನಾಹತಿಯಿಂ–ಗಾಳಿಯ ಹೊಡೆತದಿಂದ, ಜಳರಾಶಿ–ಸಮುದ್ರವು, ತಳರ್ದುದು–ಚಲಿಸಿತು ; ಕೆಯ್ಯ–ಸೊಂಡಿಲಿನ, ಬಳ್ವಳಿಕೆಗೆ–ಅತಿಶಯವಾದ ಬೀಸಾಟಕ್ಕೆ, ದಿಗ್ಗಜಂ–ದಿಗ್ದಂತಿ ಗಳು, ದೆಸೆಯಿನ್–ದಿಕ್ಕುಗಳಿಂದ, ಅತ್ತ–ಅತ್ತ ಕಡೆಗೆ, ತೆರಳ್ದುವು–ಹೋದುವು ; ಕಾಯ್ಪಿನಿಂ–ಕೋಪದಿಂದ, ದಿಶಾವಳಿವೆರಸು–ದಿಕ್ಕುಗಳ ಸಮೂಹ ಸಹಿತವಾಗಿ, ಅಂಬರಂ–ಆಕಾಶ, ಪೊಗೆದು–ಹೊಗೆಯಾಡಿ, ಪೊತ್ತಿದುದು–ಉರಿಯಿತು ; ಆದ ಮದಾಂಬುವಿಂ–ಸುರಿದ ಮದದ ನೀರಿನಿಂದ, ಜಗಂ–ಜಗತ್ತು, ಜಳಧಿವೊಲಾಯ್ತು–ಸಮುದ್ರದಂತಾಯಿತು ; ಸುಪ್ರತೀಕಮುಂ–ಆ ಸುಪ್ರತೀಕ ಗಜವನ್ನು, ನೆಱಿಯೆ–ಪೂರ್ಣವಾಗಿ, ಬಣ್ಣಿಪರಾರ್ ಗಳ–ವರ್ಣಿಸುವವರು ಯಾರು, ದಿಟವಾಗಿಯೂ ! ಬಳ್ವಳಿಕೆ < ಬಳ್ವಳ—ಅತಿಶಯ + ಇಕೆ.

೭೨. ಕರನಖದಂತಘಾತದಿಂ–ಸೊಂಡಿಲು, ಉಗುರು–ದಂತಗಳ ಹೊಡೆತ ಗಳಿಂದ, ಉರುಳ್ವ–ಬೀಳುವ, ಚತುರ್ಬಲದಿಂ–ಚತುರಂಗ ಸೈನ್ಯದಿಂದ, ತೆರಳ್ವ–ಹೊರಡುವ, ನೆತ್ತರ ಕಡಲ್–ರಕ್ತದ ಕಡಲು, ಆ ಕಡಲ್ವರೆಗಂ–ಆ ಸಮುದ್ರದ ವರೆಗೂ, ಎಯ್ದೆ–ಹೋಗಲು ; ಮಹಾಮಕರಂ–ಮಹಾ ಮೊಸಳೆಯು, ಸಮುದ್ರ ದೊಳ್–ಸಾಗರದಲ್ಲಿ, ಪರಿವವೊಲ್–ಓಡುವಂತೆ, ಇಂತು–ಹೀಗೆ, ಅಗುರ್ವುವೆರಸು–ಭೀಕರತೆಯಿಂದ ಕೂಡಿ, ಆ ಭಗದತ್ತನಕಾಲೊಳ್–ಆ ಭಗದತ್ತನ ಕಾಲುಗಳ ತಿವಿತದಲ್ಲಿ, ಸುಪ್ರತೀಕ ಗಜಂ–ಸುಪ್ರತೀಕವೆಂಬ ಆನೆ, ಆಜಿರಂಗದೊಳ್–ರಣಾಂಗಣ ದಲ್ಲಿ, ಅಚ್ಚರಿಯಪ್ಪಿನಂ–ಆಶ್ಚರ್ಯವುಂಟಾಗುತ್ತಿರಲು, ಏಂ ಪರಿದುದೊ–ಏನು ಓಡಿತೋ !

**ವಚನ**: ಪರಿದ ಬೀದಿಗಳೊಳೆಲ್ಲಂ–ಓಡಿದ ದಾರಿಗಳಲ್ಲೆಲ್ಲ ; ಕೆಯ್ಯ ಕಾಲ ಕೋಡ ಏಱಿನೊಳ್–ಸೊಂಡಲಿನ, ಕಾಲುಗಳ, ಕೊಂಬುಗಳ ಹೊಡೆತದಲ್ಲಿ ; ಜವನೆ–ಯಮನೇ ; ಚಿವುಳಿದುಱಿವಂತೆ–ಚಿಗುಳಿಯನ್ನು ತುಳಿದಹಾಗೆ; ತೊಱ್ತುೞಿದುೞಿದು–ತುಳಿದು ತುಳಿದು ತುಳಿದು, ಚೆನ್ನಾಗಿ ತುಳಿದು, ಸೊಪ್ಪಾಗುವಂತೆ ತುಳಿದು ; ಅರೆದು ಸಣ್ಣಿಸಿಧಂತೆ–ತೇದು ಸಣ್ಣಗಾಗಿಸಿದಂತೆ, ಗಜಾಸುರನೊಳ್–ಗಜನೆಂಬ ರಾಕ್ಷಸನಲ್ಲಿ ; ಆಸುರಂ ಬೆರಸು–ರಭಸದೊಡನೆ ಕೂಡಿ ; ಅಂಧಕಾರಾತಿಯಂತೆ–ಈಶ್ವರನ ಹಾಗೆ ; ಪೊಣರೆ–ಹೋರಾಡಲು ;

೭೩. ತೊಲಗು–ನಡೆ, ಆಚೆಗೆ ; ಇದು ಸುಪ್ರತೀಕ ಗಜಂ–(ಅಂಥ ಇಂಥ

ಆನೆಯಲ್ಲ) ಸುಪ್ರತೀಕವೆಂಬ ಆನೆ ಇದು ; ಆಂ—ನಾನು, ಭಗದತ್ತನೆಂ—(ಸಾಮಾನ್ಯನಲ್ಲ), ಭಗದತ್ತನಾಗಿದ್ದೇನೆ; ಇಲ್ಲಿ, ನಿನ್ನ, ತೋಳ್ವಲದ—ಬಾಹುಬಲದ, ಪ್ರೌಢಪ್ರೌಢೈತನ್ಯ, ಸಲ್ಲದು—ಸಲ್ಲುವುದಿಲ್ಲ; ಎಲೆ—ಲೋ, ಸಾಯದೆ, ಪೋಗು—ಹೋಗು; ಎನೆ—ಎನ್ನಲು, ಭೀಮಂ—ಭೀಮನು, ಕೇಳ್ದು—ಕೇಳಿ, ಆಂತು—ಎದುರಿಸಿ, ಒಲೆಯದಿರ್—ತೂಗಾಡಬೇಡ, ಉರ್ಕಿನೊಳ್—ಉಬ್ಬಾಟದಲ್ಲಿ, ನುಡಿವೆ—ಮಾತಾಡುತ್ತೀಯೆ ; ಈ ಕರಿ—ಈ ಆನೆ, ಸೂಕರಿಯಲ್ತೆ—ಹೆಣ್ಣು ಹಂದಿಯಲ್ಲವೆ? ಪತ್ತಿ—ಏರಿ, ಗಂಟಲಂ—ಇದರ ಗಂಟಲನ್ನು, ಒಡೆಯೊತ್ತಿ—ಒಡೆಯುವಂತೆ ಅಮುಕಿ, ಕೊಂದಪೆಂ—ಕೊಲ್ಲುತ್ತೇನೆ; ಇದಲ್ತು—ಇದಲ್ಲ, ಇದಱಮ್ಮನುಂ—ಇದರ ಅಪ್ಪನು ಕೂಡ, ಎನ್ನಂ—ನನ್ನನ್ನು, ಆಂಪುದೇ—ಎದುರಿಸುತ್ತದೆಯೆ? ಈ ಪದ್ಯದ ತುಂಬ ಇರುವ ಸಣ್ಣ ಸಣ್ಣ ವಾಕ್ಯಗಳು ಸಂಭಾಷಣೆಯ ಶೈಲಿಗೆ ಅಳವಟ್ಟು ಶಕ್ತಿ ಸಂಪನ್ನವಾಗಿವೆ.

**ವಚನ :** ನಾರಾಚಂಗಳಿಂ—ಬಾಣಗಳಿಂದ ; ತೋಡುಂ ಬೀಡುಂ—ತೊಡುಬಿಡುವುದೂ ; ಸರಲ ಸರಿಯಂ—ಬಾಣದ ಮಳೆಯನ್ನು,

**೭೪.** ದಿಕ್ಕರಿ—ದಿಗ್ದಂತಿ ಸುಪ್ರತೀಕ, ಸಿಡಿಲೆಱಪಂದದಿಂದೆ—ಸಿಡಿಲು ಬೀಳುವ ಹಾಗೆ, ಎಱಗಿ—ಹೊಡೆದು, ವರೂಥಮಂ—ರಥವನ್ನು, ಪಡಲ್ವಡಿಸೆ—ಚೂರು ಚೂರಾಗಿ ಬೀಳಿಸಲು, ಮರುತ್ಸುತಂ—ಭೀಮನು, ಮುಳಿದು—ಕೆರಳಿ, ಮಚ್ಚರದಿಂ—ಮಾತ್ಸರ್ಯದಿಂದ, ಗಜೆಗೊಂಡು—ಗದೆಯನ್ನು ಹಿಡಿದು, ಸುತ್ತುಗೊಂಡು—ಬಳಸಿ, ಅಡಿಗಿಡೆ—ಹೆಜ್ಜೆ ಹಾಳಾಗುವಂತೆ, ನುರ್ಗೆ—ನುಗ್ಗಿ, ಪೊಯ್ದು—ಹೊಡೆದು, ಪೆಱಪಿಂಗುವುದು—ಹಿಂದಕ್ಕೆ ಹೋಗುತ್ತಲು, ಕರಿ—ಆನೆಯು, ನೊಂದು—ಯಾತನೆ ಪಟ್ಟು, ಭೀಮನಂ—ಭೀಮನನ್ನು, ಅಗುರ್ವಿಸಿ—ಹೆದರಿಸಿ, ಪಾಂಡವ ಸೈನ್ಯಂ—ಪಾಂಡವರ ಸೈನ್ಯವು, ಅಳ್ಕುಱಲ್—ಭಯವನ್ನು ಹೊಂದುತ್ತಿರಲು, ಕೋಪದಿಂ—ಕೋಪದಿಂದ, ಪಿಡಿದು—ಹಿಡಿದು, ಎಱಗಿತ್ತು—ಮೇಲೆ ಬಿತ್ತು.

**ವಚನ :** ಕೋಡ—ಕೊಂಬುಗಳ, ಕೆಯ್ಯ—ಸೊಂಡಲಿನ, ಕಾಲ—ಕಾಲುಗಳ, ಎಡೆಗಳೊಳ್—ನಡುವಣ ಪ್ರದೇಶಗಳಲ್ಲಿ; ಬಿಣ್ಪುಮಂ—ಭಾರವನ್ನು, ಪೊಳೆವಂದದಿಂ—ಹೊರಳಿಸುವ ರೀತಿಯಿಂದ ; ಏರ್ದು—ಹತ್ತಿ, ಡೊಕ್ಕರಂಗೊಂಡು—ಡೊಕ್ಕರವೆಂಬ ಒಂದು ಪಟ್ಟನ್ನು ಹಾಕಿ; ಯೋಜನಂಬರಂ—ಯೋಜನಗಳವರೆಗೆ; ಒತ್ತುವುದುಂ—ತಳ್ಳುತ್ತಲು, ಕೊರಳ ಹಿಂಬಾಗವನ್ನು ಒಂದು ಭುಜದ ಕಂಕುಳಲ್ಲಿ ಇರಿಕಿಸಿಕೊಂಡು, ಗಲ್ಲವನ್ನು ಅಂಗೈಯಲ್ಲಿ ಪೀಡಿಸುತ್ತ ಇನ್ನೊಂದು ಕೈಯಿಂದ ಕೀಲುಗಳನ್ನು ಹಿಡಿದುಕೊಂಡು, ಎರಡು ತೊಡೆಗಳಿಂದ ಹೊಟ್ಟೆಯನ್ನು ಬಲವಾಗಿ ಪೀಡಿಸುತ್ತ ಇರುವುದಕ್ಕೆ ಡೊಕ್ಕರವೆಂದು ಹೆಸರು ("ಮನ್ಯಾಂ ಕಕ್ಷೇ ವಿನಿಕ್ಷಿಪ್ಯ ಭುಜೇನೈಕೇನ ಸಂಯುತಾಮ್ ॥ ಗಲಂ ಪ್ರಕೋಷ್ಠೇನಾಪೀಡ್ಯ ತತ್ಸರೇಣ ಕಾರಾಂತರಮ್, ಸಂಧೌ ಪ್ರಗೃಹ್ಯ ಜಠರಂ ಸಕ್ಥಿಭ್ಯಾಂಪರಿಪೀಡಯೇತ್ ॥ ತತಸ್ತದ್ ಡೊಕ್ಕರಂ ನಾಮ ವಿಜ್ಞಾನಂ ಜೀವಘಾತನಂ ॥"); ಮಲ್ಲಯುದ್ಧದಲ್ಲಿ ಇದು ಒಂದು ಬಿನ್ನಣ.

೭೫. ಕರಿಯುಂ-ಆನೆಯೂ, ಪವನಜನಂ-ಭೀಮನನ್ನು, ಕುರು ಭೂಮಿಯ ನಡುವರೆಗಂ-ಕುರುಕ್ಷೇತ್ರದ ಮಧ್ಯದವರೆಗೂ, ಒತ್ತೆ-ತಳ್ಳಲು, ತದ್ದಿಕ್ಕರಿಗಂ-ಆ ದಿಗ್ದಂತಿಗೂ, ಭೀಮಂಗಂ-ಭೀಮನಿಗೂ, ಉಗ್ರಸಂಗನಧರೆಯೊಳ್-ಭಯಂಕರವಾದ ಯುದ್ಧಭೂಮಿಯಲ್ಲಿ, ಆಗಳ್-ಆಗ, ತೋಳ್ವಲಂ-ಭುಜಬಲವು, ಸರಿಸರಿಯಾದುದು-ಸರಿಸಮಾನವಾಯಿತು.

ವಚನ: ಅಳಜಿ ಪೆಳಜಿ-ಹೆದರಲು ಬೆದರಲು; ಕಿವುಚಿದುಚಿದು-ಅಜಿಗುಜಿಯಾಗುವಂತೆ ತುಳಿದು, ವಿಕ್ರಾಂತ ತುಂಗಂ-ಅರ್ಜುನ, ಈ ವಚನ ಇದೇ ಆಶ್ವಾಸದ ೧೨ ರನಂತರ ಬರುವ ವಚನಕ್ಕೆ ಸಮಾನವಾಗಿವೆ, ಬಲುಮಟ್ಟಿಗೆ.

೭೬. ಪರಿದುದು-ಓಡಿಪುದು, ಸುಪ್ರತೀಕ ಗಜಂ-ಸುಪ್ರತೀಕವೆಂಬ ಆನೆ; ಏಱಿದವಂ-ಆನೆಯನ್ನು ಆರೋಹಿಸಿರುವವನು, ಭಗದತ್ತಂ-ಭಗದತ್ತನು; ಆ ಮದ ದ್ವಿರದಮಂ-ಆ ಸೊಕ್ಕಾನೆಯನ್ನು, ಆಂಕೆಗೊಂಡು-ಎದುರಿಸಿ, ಪೆಣೆವಂ-ಹೆಣೆದುಕೊಂಡು ಹೋರಾಡುವವನು, ಪವನಾತ್ಮಜಂ-ಭೀಮಸೇನನು; ಈಗಳ್-ಈಗ, ಆಹವಂ-ಯುದ್ಧ, ಪಿರಿದು ದಲ್-ಹಿರಿದಾಗಿದೆ ಅಲ್ಲವೆ? ಅತ್ತ ಪೋಪಂ ಎನೆ-ಅತ್ತಕಡೆ ಹೋಗೋಣ ಎನ್ನಲು, ಹರಿ-ಕೃಷ್ಣನು, ತದ್ರಥಮಂ-ಆ ರಥವನ್ನು, ವಾಯುವೇಗದಿಂ ಪರಿಯಿಸೆ-ವಾಯುವೇಗದಿಂದ ಓಡಿಸಲು, ಅಂಕದ-ಯುದ್ಧದ, ಪೊಂಕದ-ಆಧಿಕ್ಯ, ವನ್ನುಳ್ಳ, ಸುಪ್ರತೀಕಮಂ-ಸುಪ್ರತೀಕ ಗಜವನ್ನು, ಹರಿಗಂ-ಅರ್ಜುನ, ತಾಗಿದಂ-ಹಳಚಿದನು. "ಪೊಂಗು-ಸ್ಫುಟನೇ"; ಇದರ ಭಾವನಾಮ ಪೊಂಕ; (ತ) ಪೊಂಗು-ಮಿಗುದಲ್. ಇದಕ್ಕೆ ಕಾದು, ಉಕ್ಕು, ಬಿರಿ, ಒಡೆ ಮುಂತಾದ ಹಲವರ್ಥಗಳಿವೆ.

ವಚನ: ಮೃಗರಾಜ ನಖರ ಮಾರ್ಗಣಂಗಳೊಳಂ-ಸಿಂಹದ ಉಗುರಿನಂತಿರುವ ಬಾಣಗಳಲ್ಲಿ; ಕೂರ್ಮನಖಾಸ್ತ್ರಂಗಳೊಳಂ-ಆಮೆಯ ಉಗುರಿನಂತಿರುವ ಅಂಬುಗಳಲ್ಲಿ; ಪೂಡೆ-ಹೂತರೆ; ಭೂದತ್ತಮಪ್ಪ - ಭೂಮಿದೇವಿಯಿಂದ ಕೊಡಲ್ಪಟ್ಟ.

೭೭. ಇಡುವುದುಂ-(ದಿವ್ಯಾಂಕುಶವನ್ನು) ಬೀಸಿ ಎಸೆಯಲು; ಅದು, ವಿಲಯಾಗ್ನಿಯ-ಪ್ರಳಯಾಗ್ನಿಯ, ಕಿಡಿಗಳಂ-ಕಿಡಿಗಳನ್ನು, ಉಗುಟುತುಂ-ಕಾರುತ್ತ, ಎಯ್ದೆವರ್ಪುದುಂ-ಹತ್ತಿರಕ್ಕೆ ಬರಲು. ಇದಿರಂ ನಡೆದು-ಎದುರಾಗಿ ಹೋಗಿ, ಅಜರಂ-ಶ್ರೀಕೃಷ್ಣನು, ಉರದಿಂ-ಎದೆಯಿಂದ, ಆಂತೊಡೆ-ಎದುರಿಸಿದರೆ, ಕಂಧರದೊಳ್-ಕೊರಳಿನಲ್ಲಿ, ಅಂಕುಶಂ-ಅಂಕುಶವು, ತುಡುಗೆವೊಲ್-ಆಭರಣದಂತೆ, ಎಸೆದಿರ್ದುದು-ಪ್ರಕಾಶಿಸಿತು.

ವಚನ: ಚೋದ್ಯಂಬಟ್ಟು-ಆಶ್ಚರ್ಯವನ್ನು ಹೊಂದಿ.

೭೮. ಇದು-ಈ ಅಂಕುಶ, ಪೆಱತಲ್ತು-ಬೇರೆ ಅಲ್ಲ ಎಂದರೆ ಬೇರೇನೂ ಅಲ್ಲ; ಭೂತಳಮುಂ-ಭೂಮಂಡಲವನ್ನು ಆಂ-ನಾನು, ತರಲ್-ತರುವುದಕ್ಕಾಗಿ, ಆದಿ ವರಾಹನಾದೆಂ-ವರಾಹವತಾರವನ್ನು ಮಾಡಿದೆನು; ಅಂದು-ಆಗ, ಅದಱ-

ಆ ವರಾಹದ, ವಿಷಾಣಮಂ – ಕೋರೆಹಲ್ಲನ್ನು, ಬಳಿಯಂ – ಅನಂತರ, ಆ ವಸುಧಾಂಗನೆಗೆ–ಆ ಭೂಮಿದೇವಿಗೆ, ಇತ್ತಂ–ಕೊಟ್ಟನು; ಈತಂ–ಈ ಭಗದತ್ತನು, ಆ ಸುದತಿಯ–ಆ ಭೂದೇವಿಯ, ಪೌತ್ರಂ–ಮೊಮ್ಮಗ; ಆಕೆ–ಅವಳು, ಕುಡೆ–ಕೊಡಲು, ಇವಂಗೆ–ಇವನಿಗೆ, ಬಂದುದು–ಬಂತು; ಎನಗಲ್ಲದೆ–ನನಗಲ್ಲದೆ, ಅನಲಾಗದುದಱಿಂ–ತಾಳಿಕೊಳ್ಳಲಾಗದ್ದರಿಂದ, ಆಂತೆಂ–ತಾಳಿಕೊಂಡೆನು, ಧರಿಸಿದೆನು; ಗುಣಾರ್ಣವ–ಅರ್ಜುನನೇ, ಇಂ–ಇನ್ನು, ಈ ಕರಿಕಂಧರಮಂ–ಈ ಆನೆಯ ಕೊರಳನ್ನು, ತಱಿವುದು–ಕತ್ತರಿಸುವುದು.

೭೯. ಎಂಬುದುಂ–ಎನ್ನುತ್ತಲೂ, ಒಂದೆ ದಿವ್ಯಶರದಿಂ–ಒಂದೇ ಶ್ರೇಷ್ಠವಾದ ಬಾಣದಿಂದ, ಶಿರಮಂ–(ಆನೆಯ) ತಲೆಯನ್ನು, ಪಱಿಯೆಚ್ಚೊಡೆ–ಕತ್ತರಿಸಿ ಹೋಗುವಂತೆ ಹೊಡೆದರೆ, ಆತಂ–ಆ ಭಗದತ್ತನು, ಒತ್ತಂಬದಿಂ–ಬಲಾತ್ಕಾರದಿಂದ, ಆಂತೊಡೆ–ಎದುರಾದರೆ, ಆಂ-ನಾನು, ಬಱಿದೆ–ವ್ಯರ್ಥವಾಗಿ, ತಪ್ಪಿದೆನೆಂದು–ತಪ್ಪುಮಾಡಿದೆನೆಂದು, ಎಂದರೆ ಆನೆಯ ತಲೆಯನ್ನೂ ಭಗದತ್ತನ ಶಿರವನ್ನೂ ಒಟ್ಟಿಗೇ ಕತ್ತರಿಸಬೇಕಾಗಿತ್ತು, ಹಾಗೆ ಮಾಡಲಿಲ್ಲ, ತಪ್ಪಾಯಿತು ಎಂದು; ಕಿರೀಟಿ–ಅರ್ಜುನ, ತನ್ನ, ಬಿಲ್ಲಂ–ಬಿಲ್ಲನ್ನು, ಬಿಸುಟಿರ್ದೊಡೆ–ಬಿಸಾಡಿದ್ದರೆ, ಅಚ್ಯುತಂ–ಶ್ರೀ ಕೃಷ್ಣನು, ಇದೇ ತಱಿಂ–ಇದು ಏತಕ್ಕೆ, ಆಕುಲಮಿರ್ದೆ–ವ್ಯಥಿತನಾಗಿದ್ದೀಯ, ನೋಡು, ಇದು ಎಂತು ಎಂಬುದುಂ–ಇದು ಹೇಗೆ ಎನ್ನುತ್ತಲು, ಮುಳಿಸಿಂ–ಕೋಪದಿಂದ, ಗುಣಾರ್ಣವಂ–ಅರ್ಜುನ, ಎರಡು ಕೈಗಳುಮಂ–ಭಗದತ್ತನ ಎರಡು ಕೈಗಳನ್ನೂ, ಎಚ್ಚಂ–ಬಾಣದಿಂದ ಹೊಡೆದನು. ವ್ಯಾಸ ಭಾರತದ ಕಥೆಗೂ ಇಲ್ಲಿನ ಕಥೆಗೂ ತುಂಬ ವ್ಯತ್ಯಾಸವಿದೆ.

೮೦. ಎಚ್ಚು–ಕೈಗಳನ್ನು ಕತ್ತರಿಸಿ, ಅವನ ತಲೆಯುಮಂ–ಭಗದತ್ತನ ತಲೆಯನ್ನೂ, ಪಱಿಯೆಚ್ಚೊಡೆ–ಕತ್ತರಿಸುವಂತೆ ಹೊಡೆದರೆ, ದಿಕ್ಕರಿಯ ತಲೆಯುಂ–ದಿಗ್ದಂತಿಯ ತಲೆಯೂ, ಆತನ ತಲೆಯುಂ–ಅವನ ತಲೆಯೂ, ಪಚ್ಚಿಕ್ಕಿದಂತೆ–ವಿಭಾಗ ಮಾಡಿದಂತೆ, ಕೆಯ್ಗಳುಂ–ಕೈಗಳೂ, ಧರೆಯೊಳ್–ನೆಲದಲ್ಲಿ, ಅಚ್ಚರಿಯುಪ್ಪಿನೆಗಂ–ಆಶ್ಚರ್ಯವುಂಟಾಗುತ್ತಿರಲು, ಒಡನೆ–ಜೊತೆಯಾಗಿಯೇ, ಉರುಳ್ದುವು–ಉರುಳಿದುವು.

೮೧. ಇತ್ತ–ಇತ್ತಕಡೆ, ಅರಿಗಂಗೆ–ಅರ್ಜುನನಿಗೆ, ಅಮಿತ್ರಜಯಮಪ್ಪುದುಂ–ಶತ್ರುವಿಜಯವಾಗುತ್ತಲು, ಅತ್ತ–ಅತ್ತಕಡೆ, ಅಮರರ್ಕಳ್–ದೇವತೆಗಳು, ಆರ್ದು–ಗರ್ಜಿಸಿ, ಪುಷ್ಪವೃಷ್ಟಿಗಳಂ – ಹೂವಿನ ಮಳೆಗಳನ್ನು, ಸೂಸುತ್ತಿರೆ – ಚೆಲ್ಲುತ್ತಿರಲು, ಓಗರವೂಗಳ ಬಂಡಂ–ಬೆರಕೆ ಹೂಗಳ ಮಕರಂದವನ್ನು, ಎಯ್ದೆ ಪೀರುತ್ತೆ-ಚೆನ್ನಾಗಿ ಹೀರುತ್ತ, ಇಂದ್ರವನದಿಂ–ಇಂದ್ರನ ತೋಟದಿಂದ, ಮಱಿದುಂಬಿಗಳ್–ದುಂಬಿಯ ಮರಿಗಳು, ಇಂದ್ರನೀಲಮಂ–ಇಂದ್ರನೀಲವೆಂಬ ರತ್ನಗಳನ್ನೂ, ಮುತ್ತುಮಂ–ಮುತ್ತುಗಳನ್ನೂ, ಓಳಿಯೊಳೆ–ಸಾಲಾಗಿ, ಕೋದು–ಪೋಣಿಸಿ, ಎಱಲಿಕ್ಕಿದ–ನೇತು ಬಿಟ್ಟ, ಮಾಲೆಯಂತೆವೋಲ್ – ಹಾರದಂತೆ, ಒಡವಂದುವು – ಜೊತೆಯಲ್ಲೇ ಬಂದುವು. ಓಗರವೂಗಳ್ ಎಂದರೆ ಬಗೆ ಬಗೆಯ ಹೂಗಳ ಮಿಶ್ರಣ; ಹಿಂದೆ ಬಂದಿರುವ

ಓಗರಗಂಪು-ಎಂಬುದನ್ನು ನೋಡಬಹುದು ; ಅಗ್ಗಳನ ಕೆಳಗಿನ ಪದ್ಯ ಈ ಸಂದರ್ಭದಲ್ಲಿ ಗಮನಾರ್ಹ ; ಕುಸುಮಿತಾನೇಕ ಕುಸುಮವಲ್ಲೀ ಪ್ರಸರ ವಿಸರದೊಳ್.

ತಾನುಗುಟುತ್ತುಮಿರ್ಪ ಪೊಸಗಂಪುಮನಿತ್ತೆ ತೆಮಳ್ದಿ ಕೊಂಡು ಮಂ
ದಾನಿಳನುಯ್ಯುತಿರ್ಪ ತನಿಗಂಪುಮನಿತ್ತೆ ಮರುಳ್ವ ಭೃಂಗಸಂ
ತಾನಮುಣುತ್ತುಮಿರ್ಪ ನಱುಗಂಪುಮನಿತ್ತೆ ಗಡಂ ಪ್ರಫುಲ್ಲಮ
ಲ್ಲೀ ನವಪುಷ್ಪಮೋಗರದ ಕಂಪುಗಳಾಗರಮಾಯ್ತು ಸುಗ್ಗಿಯೊಳ್ ॥೪-೯೯.

೮೨. ನರಶರಂಗಳಿಂ – ಅರ್ಜುನನ ಬಾಣಗಳಿಂದ, ಧರಣೀಸುತನಱಿದಂ-ಭಗದತ್ತನು ಸತ್ತನು ; ದಿಕ್ಕರಿ ಕೆಡೆದುದು-ದಿಗ್ದಂತಿ ಸುಪ್ರತೀಕ ಬಿತ್ತು ನೆಲಕ್ಕೆ ; ಭುವನಮುಂ-ಲೋಕವು ಕೂಡ, ಇನ್ ಉರಿಯದೆ ಇರದು-ಇನ್ನು ಉರಿಯದೆ ಇರುವುದಿಲ್ಲ, ಆಂ-ನಾನು, ಇರದೆ, ಅಡಗುವೆಂ-ಅಡಗಿಕೊಳ್ಳುತ್ತೇನೆ, ಎಂಬವೊಲ್-ಎನ್ನುವಂತೆ, ಅರ್ಕಂ-ಸೂರ್ಯನು, ಅಪರಜಳನಿಧಿಗೆ-ಪಶ್ಚಿಮ ಸಮುದ್ರಕ್ಕೆ, ಇೞಿದಂ-ಇಳಿದನು. ಸೂರ್ಯ ಮುಳುಗಿದನೆಂದು ಭಾವ.

**ವಚನ :** ಅೞಲ್ದು – ದುಃಖಿಸಿ ; ತೊಟ್ಟ ಸನ್ನಣಮನಪ್ಪೊಡಂ – ತೊಟ್ಟ ಯುದ್ಧಕವಚವನ್ನಾದರೂ, ಕಳೆಯದೆಯುಂ-ತೆಗೆದುಹಾಕದೆಯೂ ;

೮೩. ಮಸಕಂಗುಂದದ-ಆಟೋಪವು ಕಡಮೆಯಾಗದ, ಸುಪ್ರತೀಕಗಜಮಂ-ಸುಪ್ರತೀಕವೆಂಬ ಆನೆಯನ್ನು, ಧಾತ್ರೀಸುತಂ-ಭಗದತ್ತನು, ಕೀಱಿ-ಭಯಧ್ವನಿಯನ್ನು ಮಾಡುತ್ತ, ಚೋದಿಸಿ-ಪ್ರೇರಿಸಿ, ಮುಂದಕ್ಕೆ ನುಗ್ಗಿಸಿ, ಭೀಮಂಗೆಲೆ-ಭೀಮನನ್ನು ಗೆಲ್ಲಲು, ಹರಿಯುಂ ತಾನುಂ-ಕೃಷ್ಣನೂ ತಾನೂ (ಅರ್ಜುನನೂ), ಮುಟ್ಟೆವಂದು-ಹತ್ತಿರಕ್ಕೆ ಬಂದು, ಭರಂಗೆಯ್ದು-ತೀವ್ರತೆಯನ್ನು ತೋರಿಸಿ, ತನ್ನೆಸಕಂಗಾಯದೆ-ತನ್ನ ಕರ್ತವ್ಯವನ್ನು ಪಾಲಿಸದೆ, ಅಧರ್ಮ ಯುದ್ಧದೆ-ಅನ್ಯಾಯವಾದ ಯುದ್ಧದಲ್ಲಿ, ನರಂ-ಅರ್ಜುನನು, ಕೊಲ್ವಲ್ಲಿ-ಕೊಲ್ಲುವಾಗ, ಕಂಡು-ನೋಡಿ, ಇಂತು-ಹೀಗೆ, ಉಪೇಕ್ಷಿಸಿ-ಉದಾಸೀನಮಾಡಿ, ನೀಮುಂ-ನೀವು ಕೂಡ, ನಡೆ-ನಾಟುವಂತೆ ಎಂದರೆ ಸ್ಥಿರವಾಗಿ, ನೋಡುತಿರ್ದಿರ್-ನೋಡುತ್ತ ಇದ್ದಿರಿ, ಎನೆ-ಎನ್ನಲು, ಮತ್ತಿನ್ನಾರಂ-ಮತ್ತೆ ಇನ್ನು ಯಾರನ್ನು, ಆಂ-ನಾನು, ನಂಬುವೆಂ-ನಂಬುತ್ತೇನೆ,

**ವಚನ :** ಪನ್ನಗಧ್ವಜನ-ದುರ್ಯೋಧನನ ; ಕಾರ್ಮುಕಾಚಾರ್ಯ-ಬಿಲ್ಲೋಜ, ದ್ರೋಣ.

೮೪. ಎನಗಲ್ತು-ನನಗೆ (ಮಾತ್ರ) ಅಲ್ಲ, ಆರ್ಗಂ-ಯಾರಿಗೂ, ವಿಜಯಂ-ಪಾರ್ಥನು; ಅಸಾಧ್ಯನತ್ತೆ-ಗೆಲ್ಲಲರಿದಾದವನಲ್ಲವೆ? ನೀಂ-ನೀನು, ಆತನಂ ಗೆಲ್ವ-ಅವನನ್ನು ಗೆಲ್ಲುವ, ಮಾತಂ-ಮಾತನ್ನು, ಅಮೋಘಂ-ವ್ಯರ್ಥವಲ್ಲದೆ, ಇಂದೆ-ಈ ದಿನವೇ, ಬಿಸುಡು-ಬಿಟ್ಟುಬಿಡು ; ನಾಳೆ-ನಾಳೆಯ ದಿನ, ವಿಜಯಂ-ಅರ್ಜುನ, ಮಾರ್ಕೊಳ್ಳದಂದು-ಪ್ರತಿಭಟಿಸದಿರುವಾಗ, ಉರ್ಕಿ-ಉಕ್ಕಿ, ಪೊಕ್ಕನಂ-ಹೊಕ್ಕವನನ್ನು, ಒರ್ವನಂ-ಒಬ್ಬನನ್ನು, ಆಂತು-ಎದುರಿಸಿ, ಕದನದೊಳ್-ಯುದ್ಧದಲ್ಲಿ

ಇಕ್ಕುವೆಂ-ಕೊಲ್ಲುತ್ತೇನೆ, ಪೇಱ್-ಅಥವಾ, ಧರ್ಮಸಂ-ಧರ್ಮಪುತ್ರನನ್ನು, ಕಟ್ಟುವೆಂ-ಕಟ್ಟುತ್ತೇನೆ, ಸೆರೆಹಿಡಿಯುತ್ತೇನೆ, ಭೂಪತಿ – ದುರ್ಯೋಧನನೇ, ನೀಂ – ನೀನು, ಇಂತು–ಹೀಗೆ, ನಂಬು ; ಅನ್ನನಂ–ಅಂಥವನನ್ನು, ಬಗೆಯಲ್ವೇಡ–ಗಣಿಸಬೇಡ.

**ವಚನ**: ಇನಿತಂ – ಇಷ್ಟನ್ನು ; ಪೂಣಿಸಲೆ – ಪ್ರತಿಜ್ಞೆ ಮಾಡಿಸಲೆಂದೇ :, ಬಱಿಯನಟ್ಟಿ–ದೂತನನ್ನು ಕಳಿಸಿ,

**೮೫.** ಆಹವಾಜಿರದೊಳ್ – ಯುದ್ಧರಂಗದಲ್ಲಿ, ಅರಿಗನಂ – ಅರ್ಜುನನನ್ನು, ಆಂಪ–ಎದುರಿಸುವ, ಗಂಡುಂ ಅದಟುಂ–ಪೌರುಷವೂ ಶೌರ್ಯವೂ, ನಿಮಗೆ, ಆವಗಂ–ಪೂರ್ತಿಯಾಗಿ (ಯಾವಾಗಲೂ), ಆದುದು-ಉಂಟಾಗಿದೆ ; ಅದರ್ಕೆ–ಅದಕ್ಕೆ (ಆದ್ದರಿಂದ), ನಾಳೆ–ನಾಳೆಯ ದಿನ, ನರನಂ–ಅರ್ಜುನನನ್ನು, ತೆಗೆದು–ಆಕರ್ಷಿಸಿ, ಉಯ್ವುದು–ಕರೆದುಕೊಂಡು ಹೋಗುವುದು ; ಧರ್ಮಪುತ್ರನಂ–ಧರ್ಮರಾಜನನ್ನು, ಗುರು–ದ್ರೋಣನು, ಪಿಡಿದಪ್ಪಂ–ಸೆರೆಹಿಡಿಯುತ್ತಾನೆ, ಎಂದು, ಅವರಂ–ಆ ಸಂಸಪ್ತಕರನ್ನು, ಆಗಲೆ–ಆಗಲೇ, ಪೂಣಿಸಿ–ಪ್ರತಿಜ್ಞೆ ಮಾಡಿಸಿ, ಪೋಗವೇೞ್ದು–ಹೋಗುವಂತೆ ಹೇಳಿ, ಮಚ್ಚರದೊಳ್–ದ್ವೇಷದಲ್ಲಿಯೆ, ಮಾಣದೆ–ನಿಲ್ಲದೆ, ಅಸುಂಗೊಳ್–ಪ್ರಾಣಾಪಹಾರವನ್ನು ಮಾಡಲು ; ಕಕ್ಕರಸು–ಕಕ್ಕನೆಂಬ ರಾಜ (?), ಅಂಜೆ–ಹೆದರಲು, ಸಂಜೆಯೊಳ್–ಬೆಳಗಿನ ಸಂಧ್ಯಾಕಾಲದಲ್ಲಿ, ಒಡ್ಡಿದಂ–ಸೇನೆಯನ್ನು ಸ್ಥಾಪಿಸಿದನು, ಚಾಚಿದನು. ಇಲ್ಲಿ 'ಕಕ್ಕರ ಸಂಜೆ' ಎಂಬುದಕ್ಕೆ ಸರಿಯಾಗಿ ಅರ್ಥವಾಗುವುದಿಲ್ಲ ; ಈ ವಿಷಯವಾಗಿ, ದಿ. ಮುಳಿಯ ತಿಮ್ಮಪ್ಪಯ್ಯನವರು "ಕಕ್ಕ-ಅರಸು–ಅಂಜೆ-ಸಂಜೆಯೊಳ್ ಎಂದು ವಿಂಗಡಿಸಿ ಅನ್ವಯಗೊಳಿಸಬೇಕು. ಕಕ್ಕ–ಕಕ್ಕಲ ಮೊದಲಾದವುಗಳು ಒಂದೇ ಹೆಸರಿನ ರೂಪಾಂತರಗಳೆಂಬುದು ಇತರ ರಾಜವಂಶಾವಳಿಯಿಂದ ಗೊತ್ತಾಗಿದೆ. ಸಂಸಪ್ತಕರನ್ನು ಹಾಗೆ ಕಳುಹಿಸಿದ ಕಕ್ಕರಸ (ಸುಯೋಧನ)ನು ವೈರಿಗಳಂಜುವಂತೆ ಸಂಜೆಯ ಸಮಯದಲ್ಲಿ ಯುದ್ಧಕ್ಕಣಿಯಾದನು ಎಂದೂ, ಅದರೊಡನೆ ಕಕ್ಕರ (ಮಾಸಲು ಬಣ್ಣವು) ಸಂಧಿ(ಸಂಜೆ)ಗೊಂಡ ಸಂಜೆಯಲ್ಲಿ ಎಂದೂ ಪ್ರಕೃತಾಪ್ರಕೃತಾರ್ಥಗಳು ಅಲ್ಲಿ ಸಂಧಿಸಿರಬೇಕೆಂದು ನಮಗೆ ತೋರುತ್ತಿದೆ" ಎಂದು ಬರೆದಿದ್ದಾರೆ (ನಾಡೋಜಪಂಪ, ಪು. ೧೭೯) ; 'ಕಕ್ಕರಸಂಜೆ' ಎಂಬ ಪಾಠಕ್ಕೆ ಪ್ರತಿಯಾಗಿ 'ಕಕ್ಕಸರಂಜೆ' ಎಂದಾಗಲಿ, 'ಕಕ್ಕರರಂಜೆ' ಎಂದಾಗಲಿ ಇದ್ದಿರಬಹುದು, ಕಕ್ಕಸ < (ಸಂ)ಕರ್ಕಶ = ಕರ್ಕರ < ಕರ್ಕರ–ಕಠೋರ. ಕಠಿನ ; ಎಂದರೆ ಕದನದಲ್ಲಿ ಕರ್ಕಶರಾದವರು, ಕದನಕರ್ಕಶರು ಎಂದು ಅರ್ಥವಾಗಬಹುದು ; ಅವರು ಅಂಜೆ ಹೆದರಲು.

**ವಚನ**: ಪತಾಕಿನಿಯುಂ – ಸೈನ್ಯವೂ ; ಮಿೞ್ತುಗರೆವಂತೆ – ಮೃತ್ಯುವನ್ನು ಕರೆದಹಾಗೆ ;

**೮೬.** ಗುರು ಭಾರ್ಗವಂ–ಗುರುವಾದ ಪರಶುರಾಮು, ಇಂತು–ಹೀಗೆ, ಈ ಒಡ್ಡಂ–ಈ ವ್ಯೂಹ ರಚನೆಯನ್ನು, ಎಂದರೆ ಚಕ್ರವ್ಯೂಹ ರಚನೆಯನ್ನು, ಅಱಿಪಿದಂ ತಿಳಿಸಿಕೊಟ್ಟನು ; ಇದಂ – ಇದನ್ನು, ಗೆಲಲ್ – ಗೆಲ್ಲಲು, ಆವನುಂ – ಯಾವನೂ,

ನೆಱೆಯಂ – ಸಮರ್ಥನಾಗನು ; ಒರ್ವಂ – ಒಬ್ಬನು, ಉರ್ಕಿನ – ಉದ್ಧತತನದ, ಅಳುರ್ಕೆಯಿಂ–ಆಧಿಕ್ಯದಿಂದ, ಪೊಕ್ಕೊಡೆ–ಹೊಕ್ಕರೆ, ಪೊಕ್ಕನೆ–ಹೊಕ್ಕವನೇ, ಮತ್ತೆ–ತಿರುಗಿ, ಅಣಂ–ಸ್ವಲ್ಪವೂ, ಪೊಱಮಡಂ–ಹೊರಕ್ಕೆ ಬಾರನು , ಅಂತು–ಹಾಗೆ, ಆ ಪಾಂಡವ ಸೈನ್ಯಮುಂ–ಆ ಪಾಂಡವರ ಸೈನ್ಯವನ್ನು, ಕಱಿದು–ಕತ್ತರಿಸಿ, ಒಟ್ಟುವೆಂ–ರಾಶಿಹಾಕುತ್ತೇನೆ ಎಂದು, ಬಿಲ್ಲೆಱೆಯಂ–ಧನುರ್ವಿದ್ಯೆಗೆ ಒಡೆಯನಾದ ದ್ರೋಣನು, ಆಹವರಂಗದೊಳ್ – ರಣರಂಗದಲ್ಲಿ, ಅಂಕದ – ಪ್ರಸಿದ್ಧವಾದ, ಚಕ್ರವ್ಯೂಹಮಂ–ಚಕ್ರವ್ಯೂಹವೆಂಬ ರಚನೆಯನ್ನು, ಒಡ್ಡಿದಂ – ಚಾಚಿದನು, ಮುಂದಿಟ್ಟನು.
" ನಭಭಮಂಸಸಲಂಗ ಮುಮ್ಪೊಪ್ಪಲ್ ಪೇಲ್ದಪರಾ ಅನವದ್ಯಮಂ "

**ವಚನ** : ಎಡೆಯಱಿದು–ಅವಕಾಶವನ್ನು ತಿಳಿದು, ಸ್ಥಾನವನ್ನು ತಿಳಿದು; ಅವರ ಬಳಸಿಯುಂ – ಅವರನ್ನು ಸುತ್ತುವರಿದೂ; ಇವರ್ಗಿವರ್ ಪಾಸಟಿ – ಇವರಿಗೆ ಇವರು ಸಮಾನ, ನೆಲೆಯೊಳ್-ಸ್ಥಳದಲ್ಲಿ ; ತಳರದೆ- ಚಲಿಸದೆ ; ನೆಱೆದು-ಪೂರ್ಣನಾಗಿ, ಸಮರ್ಥನಾಗಿ ;

**೮೭.** ಇಲ್ಲಿಂದ ಮುಂದಕ್ಕೆ ೧೦೬ರ ವರೆಗೆ ಅಭಿಮನ್ಯುವಿನ ಸಂಹಾರ ; ಇದು ಚಕ್ರವ್ಯೂಹಂ–ಇದು (ಸಾಮಾನ್ಯ ವ್ಯೂಹವಲ್ಲ, ಪ್ರಸಿದ್ಧವಾದ, ಅಭೇದ್ಯವಾದ) ಚಕ್ರವ್ಯೂಹ ; ಈ ವ್ಯೂಹಮನೊಡೆವದಟಂ–ಈ ವ್ಯೂಹವನ್ನು ಭೇದಿಸುವ ಶೂರ, ಪಾರ್ಥಂ–ಅರ್ಜುನ ; ಅಂತು–ಹಾಗೆ, ಆತನುಂ–ಅವನೂ, ಸೇಣಿದಂ–ದೂರದಲ್ಲಿರುವವನು ; ಎಮ್ಮಾ–ನಮ್ಮ ಈ, ನಾಲ್ವರುಂ–ನಾಲ್ಕು ಜನವೂ, ಇದಂ–ಇದನ್ನು, ಭೇದಿಸಲ್–ಮುರಿಯಲು, ಅಱಿಯೆವು–ತಿಳಿಯೆವು ; ಕಂದ–ಮಗುವೇ, ನೀಂ–ನೀನು, ಬಲ್ಲ–ಬಲ್ಲೆಯೋ ? ಪೇೞ್–ಹೇಳು, ಎಂಬುದುಂ–ಎನ್ನುತ್ತಲೂ, ಆಂ–ನಾನು, ಎಮ್ಮಯ್ಯನಲ್–ನನ್ನ ತಂದೆಯಲ್ಲಿ, ಕೇಳ್ದು–ಕೇಳಿ, ಇದಂ–ಇದನ್ನು, ಅಱಿವೆಂ–ತಿಳಿದಿರುತ್ತೇನೆ ; ಇದೇನ್ ಅಯ್ಯ ಚಿಂತಾಂತರಂ–ಇದೇನು ಅಪ್ಪ ವಿಶೇಷ ಚಿಂತೆ ? ಇದಂ – ಇದನ್ನು, ಈಗಳ್ – ಈಗ, ವನ್ಯಗಂಧದ್ವಿರದಮೆ – ಕಾಡಿನ ಸೊಕ್ಕಾನೆಯೆ, ಕೊಳನಂ ಪೊಕ್ಕವೊಲ್–ಕೊಳವನ್ನು ಹೊಕ್ಕಹಾಗೆ, ಪೊಕ್ಕು–ಪ್ರವೇಶಿಸಿ, ಕಾದಿ–ಯುದ್ಧಮಾಡಿ, ತೋರ್ಪೆಂ–ತೋರಿಸುತ್ತೇನೆ.

**೮೮.** ಅನಲನ–ಅಗ್ನಿಯು, ಕೊಟ್ಟ, ಗಾಂಡಿವದ–ಗಾಂಡೀವವೆಂಬ ಬಿಲ್ಲಿನ, ತೇರ – ರಥದ ಸಾರಥಿಯಾದ, ಮುರಾರಿಯ – ಶ್ರೀ ಕೃಷ್ಣನ, ಮೆಚ್ಚು – ಮೆಚ್ಚಿಕೆಯು, ದೇವದೇವನ–ಶಿವನು, ದಯೆಗೆಯ್ದು–ಕರುಣಿಸಿದ, ಸಾಯಕದ–ಪಾಶುಪತಾಸ್ತ್ರದ, ಬೆಂಬಲದೊಳ್–ಸಹಾಯದಲ್ಲಿ, ಕಲಿಯೆಂದು–ಶೂರನೆಂದು, ಕೆಮ್ಮನೆ–ಸುಮ್ಮನೆ, ಅಮ್ಮನಂ–ಅಪ್ಪನಾದ ಅರ್ಜುನನನ್ನು, ಅದ[ಟು]ಬ್ಬುಗಿರ್ಪ–ಶೌರ್ಯವನ್ನು ಒಲಿದು ಮೆಚ್ಚುತ್ತಿರುವ, ಇರವಿದೇಂ–ಸ್ಥಿತಿಯೇನು ? ಪಗೆಯ–ಹಗೆಯ, ಒಡ್ಡು–ಸೈನ್ಯ, ಗೆಲಲ್ಕೆ–ಗೆಲ್ಲುವುದಕ್ಕೆ, ಅಳುಂಬಂ–ಅಸಾಧ್ಯ, ಅತಿಶಯ, ಎಂಬನಿತುವರಂ–ಎಂಬಷ್ಟರ ವರೆಗೆ, ನಿಮಗೆ, ಅತ್ತಳಗಂ ಬರೆ–ವ್ಯಥೆಯುಂಟಾಗಲು, ಮತ್ತೆ–ತಿರುಗಿ, ಮಾಣ್ಬೆನೇ

ನಿಲ್ಲುವೆನೇ? ಇಲ್ಲ, ಯುದ್ಧಕ್ಕೆ ಹೊರಡುತ್ತೇನೆ. 'ಉಱ್ಗ–ಸ್ನೇಹೇ, ಉಱುಗಿದನೆಂದು ಬಲ್ದಂ, ಉಱುಗೆಂದು ಬೇಂಟ'; ಅತ್ತಳಗಂ, ಅತ್ತಲಗ್ಗಂ ಎಂಬುದಕ್ಕೆ ಸಾಧಾರಣಾರ್ಥ ಅತಿಶಯ, ಅಸಾಧ್ಯ, ಕ್ವಚಿತ್ತಾಗಿ ವ್ಯಾಕುಲ ಎಂದಾಗುತ್ತದೆ; ತೋೞೊೞೆ ಜೀವ ವಿಯೋಗಮಪ್ಪುದೆರ್ದೆಗಪ್ಪುದತ್ತಳಗಂ (ಪಂಪಭಾ. ೪–೧೦೦) ಎಂಬುದನ್ನು ನೋಡಬಹುದು.

೮೯. ನೆಱೆದು–ಸಮರ್ಥರಾಗಿ, ಚತುರ್ವಲಂ ಬೆರಸು ಬಂದು–ಚತುರ್ಬಲ ಸಮೇತವಾಗಿ ಬಂದು, ಉಱವೆ– ಇರವೆ, ಒಡ್ಡಿದ – ಎದುರಿಸಿದ, ಗಂಡರ್ – ಶೂರರು, ಆರುಂ–ಯಾರೂ, ಎನ್ನಱಿಯದ–ನಾನು ತಿಳಿಯದ, ಗಂಡರೇ–ಶೂರರೇ? ನೆಗೆದ ನೆತ್ತರ–ಚಿಮ್ಮಿದ ರಕ್ತದ, ಸುಟ್ಟುರೆ–ಪ್ರವಾಹವು (?), ಕಂಡದ ಇಂಡೆಗಳ್–ಮಾಂಸ ಖಂಡದ ರಾಶಿಗಳು, ಪಱಿದು–ಕತ್ತರಿಸಿ, ನಭಂಬರಂ-ಆಕಾಶದವರೆಗೆ, ಪರೆದು–ವ್ಯಾಪಿಸಿ, ಪರ್ವಿ-ಹಬ್ಬಿ, ಲಯಾಗ್ನಿ ಶಿಖಾಕಳಾಪಮಂ-ಪ್ರಳಯಾಗ್ನಿ ಜ್ವಾಲೆಗಳ ಸಮೂಹವನ್ನು, ಮಱೆಯಿಸೆ–ಮರೆಮಾಡುತ್ತಿರಲು, ತಾಗಿ–ಎದುರಿಸಿ, ತಳ್ತು–ಸೇರಿ, ಇಱಿಯದನ್ನೆಗಂ–ಯುದ್ಧಮಾಡದಿರಲು, ಎಂತು–ಹೇಗೆ, ನರಂಗೆ–ಅರ್ಜುನನಿಗೆ, ಪುಟ್ಟಿದೆಂ–ಹುಟ್ಟಿದೆನು.

ವಚನ: ಯಮನಂದನನಿಂತೆಂದಂ–ಧರ್ಮರಾಜನು ಹೀಗೆ ಹೇಳಿದನು.

೯೦. ಅನುವರದಲ್ಲಿ–ಕಾಳಗದಲ್ಲಿ, ತಳ್ತು–ಸೇರಿ, ಪಗೆಯುಂ–ವೈರಿಯನ್ನು, ತವೆ–ನಾಶವಾಗಲು, ಕೊಂದೊಡಂ–ಕೊಂದರೂ; ಅಂತ–ಎದುರಿಸಿದ, ಅರಾತಿಸಾಧನ ದೊಳಗೆ–ಶತ್ರುಸೈನ್ಯದಲ್ಲಿ, ಅೞ್ಗಿ ತೞ್ಗಿದೊಡಂ–ನಾಶವಾಗಿ ಕ್ಷೀಣಿಸಿದರೂ, ಎನ್ನಯ ಸಂತತಿಗೆ–ನನ್ನ ಸಂತಾನಕ್ಕೆ, ಆಗಿಸಿರ್ದ–ಉಂಟುಮಾಡಿದ, ನಿನ್ನನೆ–ನಿನ್ನನ್ನೇ, ಮದ ದಂತಿದಂತ ಮುಸಲಾಹತಿಗಂ–ಸೊಕ್ಕಾನೆಯ ದಂತವೆಂಬ ಒನಕೆಯ ಏಟಿಗೂ, ಕರವಾಳ ಬಾಯ್ಗಂ–ಕತ್ತಿಯ ಬಾಯಿಗೂ, ಅಂಬಿನಮೊನೆಗಂ–ಬಾಣದ ಅಲಗಿಗೂ, ಮಹಾ ರಥರ–ಮಹಾರಥಿಕರ, ತಿಂತಿಣಿಗಂ–ಸಮೂಹಕ್ಕೂ, ಪಿಡಿದು–ನಿನ್ನನ್ನು ಹಿಡಿದು, ಎಂತು ನೂಂಕುವೆಂ–ಹೇಗೆ ತಳ್ಳುವೆನು, ಒಡ್ಡುವೆನು.

೯೧. ಮಗನೆ–ಮಗನೇ, ಪದಿನಾಲ್ಕು ವರುಷದ–ಹದಿನಾಲ್ಕು ವರ್ಷಗಳ, ಮಗನಯ್–ಮಗನಾಗಿರುವೆ; ನಿನ್ನನ್ನನೊರ್ವನಂ–ನಿನ್ನಂಥ ಒಬ್ಬನನ್ನು, ಪಗೆವಡೆಯ–ಶತ್ರುಸೈನ್ಯದ, ಒಡ್ಡುಗಳಂ–ಸಮೂಹಗಳನ್ನು, ಒಡೆಯಲ್ಕೆವೇೞ್ದು–ಒಡೆಯುವುದಕ್ಕೆ ಹೇಳಿ, ನಿಯಮಿಸಿ, ಎರ್ದೆ–ಎದೆಯು, ಧಗಮೆನೆ–ಧಗ್ಗೆಂದು ಉರಿಯಲು, ಕಱುವೇ–ವತ್ಸನೇ, ಸೈರಿಸುವ–ತಾಳಿಕೊಳ್ಳುವ, ಉಪಾಯಮಾವುದು–ಉಪಾಯ ಯಾವುದು?

ವಚನ: ಆ ಮಾತಂ ಮಾರ್ಕೊಂಡು–ಆ ಮಾತನ್ನು ಪ್ರತಿಭಟಿಸಿ,

೯೨. ರಣದೊಳ್ – ಯುದ್ಧದಲ್ಲಿ, ಕ್ರಮಮುಂ – ಕ್ರಮವನ್ನು ಎಂದರೆ ಹಿರಿಯನಾದಮೇಲೆ ಅವನಿಗಿಂತ ಕಿರಿಯ ಎಂಬ ಕ್ರಮವನ್ನು, ಕೆಯ್ಕೊಳಲೆಂದು–ಸ್ವೀಕರಿಸಲೆಂದು, ಪುಟ್ಟಿ–ಹುಟ್ಟಿ, ಸಾವನ್ನೆಗಂ–ಸಾಯುವವರೆಗೂ, ? ಮಾಣ್ದೊಡೆ–ನಿಂತರೆ, ತಡೆದರೆ, ಅಕ್ರಮಮುಕ್ಕುಂ–ಕ್ರಮವಲ್ಲದಾಗುತ್ತದೆ; ಕ್ರಮಮುಕ್ಕುಮೇ–

ಕ್ರಮವಾಗುತ್ತದೆಯೇ? ಕ್ರಮಮಂ–ಕ್ರಮವನ್ನು, ಆಂ–ನಾನು, ಏಗೆಯ್ದಪೆಂ–ಏಕೆ ಮಾಡುತ್ತೇನೆ? ವಿಕ್ರಮಮಂ-ಪರಾಕ್ರಮವು, ಕ್ರಮಂ-ಕ್ರಮವು; ಆಂ ವಿಕ್ರಮದಾತನೆಂ-ನಾನು ಪರಾಕ್ರಮದವನಾಗಿದ್ದೇನೆ, ಕ್ರಮದಮಾತಂತಿರ್ಕೆ–ನಿಮ್ಮ ಪಾದಗಳ ಮಾತು ಹಾಗಿರಲಿ; ಮಾಣ್ದಿರ್ದೊಡೆ–(ಯುದ್ಧಕ್ಕೆ ಹೋಗದೆ) ನಿಂತಿದ್ದರೆ, ಆಂ–ನಾನು, ಕ್ರಮಕೆಂದು–ನಿಮ್ಮ ಪಾದಗಳಿಗೆ ಎಂದು, ಎಂದರೆ ಸೇವೆಗಾಗಿ ಎಂದು, ಇರ್ದೆನೆ–ಇದ್ದೇನೆಯಲ್ಲ; ಬಿಟ್ಟೊಡಂ ಬಿಡದೊಡಂ–(ನೀವು ನನ್ನನ್ನು) ಯುದ್ಧಮಾಡುವುದಕ್ಕೆ ಬಿಟ್ಟರೂ ಬಿಡದಿದ್ದರೂ, ಬೀಱಿಕೊಂಡೆಂ–ಹೋಗುವುದಕ್ಕೆ ಅಪ್ಪಣೆಯನ್ನು ಪಡೆದೆ, ಇಂ–ಇನ್ನು, ಮಾಣ್ಬೆನೇ–ನಿಲ್ಲುತ್ತೇನೆಯೆ?

**ವಚನ:** ಕನಕರಥಮಂ–ಚಿನ್ನದ ರಥವನ್ನು; ತನ್ನ ಮನದನ್ನನಪ್ಪ–ತನ್ನ ಮನಸ್ಸಿನಂಥವನೇ ಆದ; ಚೋದಿಸೆಂದಾಗಳ್–ಮುಂದಕ್ಕೆ ಹರಿಯಿಸು ಎಂದಾಗ.

**೯೩.** ಎಱಗುವ–ಬೀಳುವ, ಬಟ್ಟೆನಂಬುಗಳ–ದುಂಡಾದಬಾಣಗಳ, ಬಲ್ಸರಿ–ಬಲವಾದ ಮಳೆ, ಕುಂಭಜನಂ–ದ್ರೋಣನನ್ನು, ಮರಳ್ಚೆ–ಹಿಂದಿರುಗಿಸಲು, ಪಾಯ್ದ–ಹಾದ, ಅಱಕೆಯ–ಪ್ರಸಿದ್ಧವಾದ, ಪಾರೆಯಂಬುಗಳ–ಹಾರೆಯಾಕಾರದ ಬಾಣಗಳ, ತಂದಲ್–ಸೋನೆ, ಸಿಂಧುರಾಜನಂ–ಸೈಂಧವನನ್ನು, ಆರ್ಗುವಿಸಿ–ಹೆದರಿಸಿ, ಮಱುಗಿಸೆ–ವ್ಯಥೆಪಡಿಸಲು, ಬಾಗಿಲೊಳ್–ಚಕ್ರವ್ಯೂಹದ ಬಾಗಿಲಲ್ಲಿ, ಮುಸುಱಿ–ಮುತ್ತಿ, ನಿಂದ-ನಿಂತ, ಘಟಾವಳಿಯಂ–ಆನೆಗಳ ಸಾಲನ್ನು, ತೆರಳ್ಚಿ–ಓಡಿಸಿ, ತತ್ತುಱದಱಿದು–ತುಂಡು ತುಂಡಾಗಿ ಕತ್ತರಿಸಿ, ಒತ್ತಿ–ತಳ್ಳಿ, ಅಭಿಮನ್ಯು–ಅಭಿಮನ್ಯುವು, ವಿರೋಧಿಬಳಾಂಬು-ರಾಶಿಯಂ–ಶತ್ರುಸೇನಾಸಾಗರವನ್ನು, ಪೊಕ್ಕಂ–ಪ್ರವೇಶಿಸಿದನು.

**ವಚನ:** ಪೆಣಮಯಂಮಾಡಿ–ಹೆಣಗಳಿಂದ ಕಿಕ್ಕಿರಿಯುವಂತೆ ಮಾಡಿ; ಇಲ್ಲಿ ಸಂಸ್ಕೃತದ ಮಯಟ್ ಪ್ರತ್ಯಯ ಪೆಣ ಎಂಬ ಕನ್ನಡ ಶಬ್ದಕ್ಕೆ ಸೇರಿದೆ; ತೂಱಿಕೊಂಡ – ಗಾಳಿಯಲ್ಲಿ ತೂರಿದ, ಜೋಳದಂತೆ – ಜೋಳದ ಕಾಳಿನ ಹಾಗೆ, ಪಡಲ್ವಡಿಸಿದಾಗಳ್–ಚೆಲ್ಲಾಪಿಲ್ಲಿಯಾಗಿ ಬೀಳಿಸಿದಾಗ.

**೯೪.** ಒಣಗಿದುದು – ಒಣಕಲಾದ, ಪೆರ್ವಿದಿರ – ಹೆಬ್ಬಿದಿರಿನ, ಒಂದು ಪೆರ್ವೊದಱಿಂ–ಒಂದು ದೊಡ್ಡ ಮೆಳೆಯಿಂದ, ಮೊರೆದು–ಶಬ್ದಮಾಡಿ, ಉರ್ವುವ–ಉಬ್ಬುವ, ಆಶುಶುಕ್ಷಣಿಯವೊಲ್–ಅಗ್ನಿಯಂತೆ, ಆಂತ–ಎದುರಿಸಿದ, ಖಡ್ಗನಿವಹಕ್ಕೆ–ಕತ್ತಿಗಳ ಸಮೂಹಕ್ಕೆ ಎಂದರೆ ಕತ್ತಿಹಿಡಿದವರ ಗುಂಪಿಗೆ, ರಥಕ್ಕೆ–ರಥಗಳಿಗೆ, ಮತ್ತು ವಾರಣ ನಿವಹಕ್ಕೆ–ಮದ್ದಾನೆಗಳ ಸಮೂಹಕ್ಕೆ, ತಕ್ಕಿನ – ಯೋಗ್ಯತೆಯನ್ನುಳ್ಳ, ಅಭಿಮನ್ಯುವ–ಅಭಿಮನ್ಯುವಿನ, ಕೂರ್ಗಣೆ–ಹರಿತವಾದ ಬಾಣಗಳು, ಪಾಯ್ದು–ನುಗ್ಗಿ, ನುಂಗುಲುಂ–ನುಂಗುವುದಕ್ಕೂ, ನೊಣೆಯಲುಂ–ಕಬಳಿಸುವುದಕ್ಕೂ, ಉರ್ಚಿ–ಭೇದಿಸಿ, ಮುಕ್ಕಲುಂ–ತಿನ್ನುವುದಕ್ಕೂ, ಯುದ್ಧರಂಗದೊಳ್–ರಣರಂಗದಲ್ಲಿ, ಇದೇಂ–ಇದೇನು, ನೆಱೆ–ಚೆನ್ನಾಗಿ, ಕಲ್ತುವೊ–ಕಲಿತುವೋ! ಇಲ್ಲಿ ನೊಣೆ ಎಂಬುದಕ್ಕೆ ಟೊಣೆ ಎಂಬ ಪಾಠವಿದೆ: 'ಟೊಣೇ–ಶತಾರ್ಥೇ (ಮೋಸಗೊಳಿಸು)' ಎಂಬ ಅರ್ಥ

ಹೊಂದುವುದಿಲ್ಲ ; ಅಲ್ಲದೆ ನುಂಗಿಸೊಣೆ, ಸೊಣೆದು ನುಂಗು ಎಂದು ಒಟ್ಟಿಗೆ ಬರುವುದು ಒಂದು ನುಡಿಗಟ್ಟು.

**ವಚನ :** ಮಾರ್ಪಡೆಯೆಲ್ಲಮಂ–ಪ್ರತಿ ಸೈನ್ಯವನ್ನೆಲ್ಲ; ಜವನ ಪಡೆಗೆ–ಯಮನ ಸೈನ್ಯಕ್ಕೆ; ಪಡಿಗಚ್ಚಿಕ್ಕಿದಂತೆ–(?) ; ಇಲ್ಲಿ ಬಹುಶಃ 'ಪಡಿಗಂಚಿಕ್ಕುವಂತೆ' ಎಂಬು ಪಾಠ ಇದ್ದಿರಬಹುದು; ಪಡಿ–ಎಂದರೆ ನಿತ್ಯಗಟ್ಟಳೆಯ ಆಹಾರ : ಕಂಚು–ತಟ್ಟೆ ; ಎಂದರೆ ಪಡಿಯನ್ನು ಬಡಿಸುವ ತಟ್ಟೆ ಎಂದರ್ಥವಾಗುತ್ತವೆ ; ನರನಂದನನಂ–ಅಭಿಮನ್ಯುವನ್ನು ; ವಿಕ್ರಮಕ್ಕಂಕ್ರಮಕ್ಕಂ–ಶೌರ್ಯಕ್ಕೂ ಕ್ರಮಕ್ಕೂ, ಪುರುಡಿಸುವ–ಸ್ಪರ್ಧಿಸುವ ;

೯೫. ಸೂಱೈಸಿ–ಕ್ರಮಕ್ರಮವಾಗಿ, ಎಚ್ಚೆಚ್ಚು–ಬಾಣಪ್ರಯೋಗವಮಾಡಿ, ಬಿಲ್ಲಂ-ಬಿಲ್ಲನ್ನು, ರಥದ ಕುದುರೆಯಂ-ರಥಗಳ ಕುದುರೆಗಳನ್ನು, ಸೂತನಂ-ಸಾರಥಿಗಳನ್ನು, ಖಂಡಿಸುತ್ತೆ–ಕತ್ತರಿಸುತ್ತ, ಆಱೇೞೆಂಟೊಂಬತ್ತು ಪತ್ತು–ಆರೇಳು ಎಂಟು ಒಂಬತ್ತು ಹತ್ತು, ಎಂಬ–ಎನ್ನುವ, ಆಱಕೆಯ ಸರಲಿಂದೆ–ಹೆಸರಾಂತ ಬಾಣಗಳಿಂದ, ಊಱಿ ಕೊಂಡು–ನಾಟಿ ಕೀಲಿಸಿ, ಆವಮೆಯ್ಯುಂ–ಯಾವ ದೇಹವೂ, ಪಾೞಿರ್–ಹಾಳು, ಎಂಬಂತಾಗೆ–ಎಂಬ ಹಾಗಾಗಲು, ಪಾರ್ದುರ್ದು–ನೋಡಿ ಗರ್ಜಿಸಿ, ಉಱದೆ–ಇರದೆ, ಮುಳಿಸಿಂ–ಕೋಪದಿಂದ, ಇಸೆ–ಪ್ರಯೋಗಿಸಲು, ನೂರ್ವರುಂ–ನೂರು ಜನರೂ, ಮಕುಟಮಣಿಗಣ ಜ್ಯೋತಿಸಾರರ್–ಕಿರೀಟಗಳ ರತ್ನಸಮೂಹಗಳ ಕಾಂತಿಯ ಸಾರವನ್ನುಳ್ಳ, ಕುಮಾರರ್-ದುರ್ಯೋಧನನ ಮಕ್ಕಳು, ಪೊನ್ನತಾೞ್ಗಳ್-ಹೊಂಪಾಳೆಯ ಮರಗಳು, ಬೀೞ್ವಂತೆ–ಬೀಳುವಹಾಗೆ, ಬಿರ್ದ್ದರ್–ಬಿದ್ದರು.

**ವಚನ :** ಮೊಗಮುಂ ಆವಮೊಗದೊಳೆ ನೋೞ್ಪೆಂ–ಮುಖವನ್ನು ಯಾವ ಮುಖದಲ್ಲಿ ನೊಡುವೆನು ಎಂದರೆ ಯಾವ ಮುಖದಿಂದ ಅವನನ್ನು ನೋಡಲಿ.

೯೬. ಒಂದೆ ಸರಲಿಂದಂ – ಒಂದೇ ಬಾಣದಿಂದ, ಅವನ – ದುಶ್ಯಾಸನನ, ಎದೆಯಂ–ಎದೆಯನ್ನು, ದೊಕ್ಕನೆ-ದೊಕ್ಕೆಂದು, ತಿಣ್ಣಂ ಎಚ್ಚು-ತೀಕ್ಷ್ಣವಾಗಿ ಘಾತಿಸಿ, ಸಂಕ್ರಂದನನಂದನತನಯಂ–ಅಭಿಮನ್ಯುವು, ತಂದೆಯ–ಭೀಮಸೇನನ, ಪ್ರಜ್ಞೆಯನೆ–ಪ್ರತಿಜ್ಞೆಯನ್ನೇ, ನೆನೆದು–ನೆನೆದುಕೊಂಡು, ದುಶ್ಯಾಸನನಂ–ದುಶ್ಯಾಸನನನ್ನು, ಕೊಲಲ್–ಕೊಲ್ಲಲು, ಒಲ್ಲನೆ–ಒಪ್ಪನೆ, ಇಷ್ಟಪಡನೆ.

**ವಚನ :** ಕಾನೀನ ಸೂನು–ಕರ್ಣನ ಮಗ ; ಏನುಂ ಮಾಣದೆ–ಏನೂ, ಸ್ವಲ್ಪವೂ ಬಿಡದೆ ; ಬೞಿವೞಿಯಂ ತಗುಳ್ದು–ಹಿಂದೆ ಹಿಂದೆಯೇ ಅನುಸರಿಸಿ ; ಗೞೆವೞಿಯ ಪಾವಿನಂತೆ–ಬಿದಿರಗಣೆಯಮೇಲೆ ಬರುವ ಹಾವಿನಂತೆ, ಗೞೆ> ಗಣೆ + ಬೞಿ–ದಾರಿ ; ಮಲ್ಲಾಮಲ್ಲಿಯಾಗೆ–ದ್ವಂದ್ವ ಯುದ್ಧವಾಗಿ ; ತೂಳ್ದು–ತಳ್ಳಲ್ಪಟ್ಟು ; ತೆರಳ್ದು–ಚಲಿಸಿ ; ಅತಿಭರಂ–ಅತಿ ಜೋರಾದುದು ; ಏಗೆಯ್ವಂ ಎನೆ–ಏನು ಮಾಡೋಣವೆನ್ನಲು ; ಇಂದಿನ ಅನುವರಕೆ–ಈ ದಿನದ ಯುದ್ಧಕ್ಕೆ ; ಈ ಎಡೆಯೊಳ್–ಈ ಸಮಯದಲ್ಲಿ, ಆನೆ–ನಾನೆ, ಸಾಲ್ವೆಂ–ಸಾಕಾಗುತ್ತೇನೆ, ಸಮರ್ಥನಾಗುತ್ತೇನೆ.

೯೭. ಉಱದೆ–ಇರದೆ, ಇದಿರಾಂತು–ಎದುರಿಗೆ ಪ್ರತಿಭಟಿಸಿ, ನಿಂದ–ನಿಂತ, ರಿಪುಸೈನ್ಯಮಂ – ಶತ್ರು ಸೈನ್ಯವನ್ನು, ತತ್ತಱದಱಿದಿಕ್ಕಲ್ – ಚೂರು ಚೂರಾಗಿ ಕತ್ತರಿಸಿ ಹಾಕಲು, ಆಂ–ನಾನು, ನೆಱೆವೆಂ–ಸಮರ್ಥನಾಗಿದ್ದೇನೆ, ಇನ್ ಇರಬೇಡ–ಇನ್ನು ಇಲ್ಲಿ ಇರಬೇಡ, ನಿನ್ನಱಕೆಯ–ನಿನ್ನ ಪ್ರಸಿದ್ಧನಾದ, ಕುಂಭಸಂಭವನಂ–ದ್ರೋಣನನ್ನು, ಒಡಗೊಂಡು ಪೋಗು–ಒಡಗೂಡಿ ಹೋಗು, ಎಂದೊಡೆ–ಎಂದು ಹೇಳಿದರೆ, ಜಯದ್ರಥಾ–ಜಯದ್ರಥನೇ, ಪಾಂಡವಸೈನ್ಯಮಂ–ಪಾಂಡವರ ಸೇನೆಯನ್ನು, ಕಱುತ್ತು–ಕೆರಳಿ, ಇಱಿವ–ಘಾತಿಸುವ, ಇನಿತೊಂದು–ಇಷ್ಟೊಂದು, ಅಳುರ್ಕೆ–ಸಾಮರ್ಥ್ಯ, ನಿನಗೆ, ಏತಱೊಳ್–ಯಾವುದರಲ್ಲಿ, ಆದುದೊ–ಉಂಟಾಯಿತೋ ? ಪೇೞ್–ಹೇಳು.

೯೮. ನರನೊಳ್–ಅರ್ಜುನನಲ್ಲಿ, ಮುಂ–ಹಿಂದಿನ ಕಾಲದಲ್ಲಿ, ಅಗಪಟ್ಟ–ಒಳಗೆ ಸಿಕ್ಕ, ಸೆರೆಯಾದ, ಒಂದಟಲಿಲೊಳ್–ಒಂದು ವ್ಯಥೆಯಿಂದ, ಆಂ–ನಾನು, ಕೈಳಾಸ ಶೈಳೇಶನಂ–ಈಶ್ವರನನ್ನು, ಪಿರಿದುಂ ಭಕ್ತಿಯೊಳ್–ಹಿರಿದಾದ ಭಕ್ತಿಯಲ್ಲಿ, ಅರ್ಚಿಸುತ್ತಮಿರೆ–ಪೂಜಿಸುತ್ತಿರಲು, ತದ್ದೇವಾಧಿಪಂ–ಆ ದೇವತೆಗಳೊಡೆಯ, ಶಿವ, ಮೆಚ್ಚಿದೆಂ–ಮೆಚ್ಚಿದೆನು, ನರನೊರ್ವಂ–ಅರ್ಜುನನೊಬ್ಬ; ಪೊಱಗಾಗಲ್–ಹೊರಗಾಗಿರಲು, ಒಂದು ದಿವಸಂ–ಒಂದು ದಿನ, ನಿರುತಂ–ನಿಶ್ಚಯವಾಗಿಯೂ, ಕೌಂತೇಯರಂ–ಪಾಂಡವರನ್ನು, ನೀಂ–ನೀನು, ಕಾದಿ–ಯುದ್ಧಮಾಡಿ, ಗೆಲ್–ಗೆಲ್ಲು, ಎನೆ–ಎನ್ನಲು, ಆಂ–ನಾನು, ಅದ್ರೀಂದ್ರಾತ್ಮಜಾಧೀಶನೊಳ್ – ಶಿವನಲ್ಲಿ, ಬರಮಂ – ವರವನ್ನು, ಪೆತ್ತೆಂ–ಪಡೆದೆನು. ಇಲ್ಲಿ ಅಗಪಡು ಎಂಬುದು ಗಮನಾರ್ಹ ; ಅಗಂ–ಒಳಗೆ + ಪಡು–ಬೀಳು, ಒಳಗೆ ಬೀಳು, ಸೆರೆಯಾಗಿ ಸಿಕ್ಕು ಎಂದು ಅಭಿಪ್ರಾಯ, (ತ)ಅಗಂ-ಉಳ್ಳಿಡಂ-ಒಳಗು ; ಇದನ್ನು ಕೆಲವರು ಕವಿಗಳು ಅಘವಡು ಎಂದರೆ ಅಘಮಂ+ಪಡು–ಪಾಪವನ್ನು ಹೊಂದು ಎಂದು ಭಾವಿಸಿದ್ದಾರೆ; ಮುನಿ ನೇತ್ರೇಂದ್ರಿಯ ಲೋಭದಿಂದ ಮುಂದಘವಟ್ಟಂ (ಪಂಪರಾ. ೪–೮೫), ಅವರಘವಟ್ಟೆರವಂ ತಿಳಿದು ವಿಭೀಷಣಂ (ಪಂಪರಾ–೧೩–೧೪೮) ; ಕಿಟ್ಟೆಲ್ಲರೂ ಇದನ್ನು ಅಘವಡು ಎಂಬುದಾಗಿ ಉಲ್ಲೇಖಿಸಿ 'to suffer pain' ಎಂದು ಅರ್ಥ ಹೇಳಿದ್ದಾರೆ; ಪಂಪಭಾ. ಕೋಶದಲ್ಲಿ ಸರಿಯಾದ ಅರ್ಥವಿದೆ.

**ವಚನ** : ರಾಜಾಧಿರಾಜಂ–ದುರ್ಯೋಧನನು ; ಎರಡು ಮುಯ್ಯುಮಂ–ಎರಡು ಹೆಗಲುಗಳನ್ನೂ,

೯೯. ನಿನ್ನನೆ ನಚ್ಚಿ–ನಿನ್ನನ್ನೇ ನಂಬಿ, ಪಾಂಡವರೊಳ್–ಪಾಂಡವರಲ್ಲಿ, ಆಂತು–ಎದುರಿಸಿ, ಇಱಯಲ್–ಯುದ್ಧಮಾಡಲು, ತಱಸಂದು–ನಿಶ್ಚಯಿಸಿ, ಆಂ–ನಾನು, ಪೂಣ್ದೆಂ–ಪ್ರತಿಜ್ಞೆ ಮಾಡಿದೆನು ; ನಿನ್ನ ಶರಾಳಿಗಳ್ಗೆ–ನಿನ್ನ ಬಾಣಸಂಘಾತಕ್ಕೆ, ಪಾಂಡವಸೈನ್ಯಂ–ಪಾಂಡವರ ಸೈನ್ಯಗಳು, ಅಗಿದು–ಹೆದರಿ, ನಿಂದುವು–ನಿಂತುವು ; ಎಂದೊಡೆ–ಎಂದು ಹೇಳಿದರೆ, ಇಂ–ಇನ್ನು, ನಿನ್ನ, ಭುಜಪ್ರತಾಪದ–ಬಾಹುವಿಕ್ರಮದ,

ಅಳವು–ಪ್ರಮಾಣ, ಆರ್ಗಂ–ಯಾರಿಗೂ, ಅಸಾಧ್ಯಮಾಯ್ತು–ಗೆಲ್ಲಲಾಗದ್ದಾಯಿತು ; ಅದೇಂ–ಅದೇನು, ನಿನ್ನ ಅಳವಿಂದ–ನಿನ್ನ ಶೌರ್ಯದಿಂದ, ಜಯದ್ರಥಾ–ಜಯದ್ರಥನೇ, ಅರಾತಿಜಯಂ–ಶತ್ರುಗಳನ್ನು ಗೆಲ್ಲುವುದು, ಎನಗೆ–ನನಗೆ, ಸಾರ್ದುದು–ಸೇರಿತು ;

**ವಚನ :** ಪೊಗಟ್ದು–ಹೊಗಳಿ ; ಇರವೇಟ್ದು–ಇರಲು ಹೇಳಿ.

೧೦೦. ಉಡಿದ ರಥಂಗಳ-ಮುರಿದ ರಥಗಳ, ಇಟ್ಟೆಡೆಗಳೊಳ್-ಇಕ್ಕಟ್ಟುಗಳಲ್ಲಿ, ಮಕುಟಗಳ–ಕಿರೀಟಗಳ, ರತ್ನದೀಪ್ತಿಗಳ್–ರತ್ನದ ಕಾಂತಿಗಳು, ಸ್ಫೂರ್ಜಿಸಂ–ಸ್ಫುರಿಸುತ್ತಿರಲು, ಅಟಿಗ್ಗತಟಿಗ್ಗದ–ಪೂರ್ತಿನಾಶರಾದ, ನಿಜಾತ್ಮಜರಂ–ತನ್ನ ಮಕ್ಕಳನ್ನು, ನಡೆನೋಡಿ–ದೃಷ್ಟಿಸಿ ನೋಡಿ, ಕಣ್ಣನೀರ್–ಕಣ್ಣೀರು, ಒಡನೊಡನೆ–ಕೂಡಲೇ, ಉರ್ಚಿಪಾಯೆ–ಚಿಮ್ಮಿಹರಿಯಲು, ಮುಳಿಸಿಂದೆ–ಕೋಪದಿಂದ, ಅದಂ–ಅದನ್ನು, ಒಯ್ಯನೆ–ಮೆಲ್ಲಗೆ, ತಾಳ್ದಿ – ಸ್ಥೈರಿಸಿ, ಕಾಯ್ಪಿನೊಳ್ – ಕೋಪದಲ್ಲಿ, ಕಡಂಗಿ–ಉತ್ಸಾಹಿಸಿ, ಜಗಂಗಳಂ–ಲೋಕಗಳನ್ನು, ನೊಣೆದು ನುಂಗಲುಂ–ಕಬಳಿಸಿ ನುಂಗಲು, ಸುಯೋಧನಂ–ದುರ್ಯೋಧನನು, ಆಟಿಸಿದಂ–ಬಯಸಿದನು.

**ವಚನ :** ಅಳ್ದನ–ಸ್ವಾಮಿಯಾದ ದುರ್ಯೋಧನನ ; ಮುಳಿದ ಮೊಗಮಂ–ಕೆರಳಿದ ಮುಖವನ್ನು ;

೧೦೧. ತೇರಂ–ರಥವನ್ನು, ಕುದುರೆಯಂ–ಕುದುರೆಗಳನ್ನು, ಎಸಗುವ–(ರಥವನ್ನು) ಹರಿಸುವ; ಸಾರಥಿಯಂ-ಸಾರಥಿಯನ್ನು, ಬಿಲ್ಲಂ-ಬಿಲ್ಲನ್ನು, ಅದಱ-ಬಿಲ್ಲಿನ, ಗೊಣೆಯುಮಂ–ಹೆದೆಯನ್ನೂ, ಉಱದೆ–ಇರದೆ, ಓರೊರ್ವರ್–ಒಬ್ಬರೊಬ್ಬರು, ಓನೊಂದಂ–ಒಂದೊಂದನ್ನು, ಎಚ್ಚೊಡೆ–ಹೊಡೆದರೆ. ಬೀರಂ–ವೀರನಾದ ಅಭಿಮನ್ಯು, ಗದೆಗೊಂಡು–ಗದೆಯನ್ನು ಹಿಡಿದು, ಬೀರರಂ–(ಶತ್ರು) ಶೂರರನ್ನು, ಬೆಂಕೊಂಡಂ–ಬೆನ್ನಟ್ಟಿದನು. ಇಲ್ಲಿರುವ ಉಂ ಎಂಬ ಸಮುಚ್ಚಯವನ್ನು ತೇರಂ–ಮುಂತಾದ ಶಬ್ದಗಳಿಗೆ ಅನ್ವಯಿಸುವಾಗ ಸೇರಿಸಿಕೊಳ್ಳಬೇಕು.

೧೦೨. ಬೆಂಕೊಳೆ–ಬೆನ್ನಟ್ಟಲು, ಕಳಿಂಗ ರಾಜನ–ಕಳಿಂಗ ದೇಶದ ರಾಜನು, ನೂಂಕಿದ–ಮುಂದಕ್ಕೆ ತಳ್ಳಿದ, ಕರಿಘಟೆಯಂ–ಆನೆಗಳ ಹಿಂಡನ್ನು, ಬಡಿ ಬಡಿದು–ಹೊಡೆದು ಹೊಡೆದು, ಎತ್ತಂ–ಎಲ್ಲೆಲ್ಲೂ, ಕಿಂಕೊಟಿ ಮಾಳ್ಪುದುಂ–ಕಿಂಕೊಳಿ ಮಾಡುತ್ತಲು, ಉಱದೆ – ಇರದೆ, ಕರ್ಣನು, ನಿಶಿತವಿಶಿಖದಿಂದೆ – ಹರಿತವಾದ ಬಾಣದಿಂದ, ಎರಡುಂ ಕರಮುಂ–ಎರಡೂ ಕೈಗಳನ್ನು, ಎಚ್ಚಂ– ಹೊಡೆದನು, ಕತ್ತರಿಸಿದನು. ಇಲ್ಲಿ 'ಕಿಂಕೊಟಿ' ಎಂಬುದಕ್ಕೆ ೧–೩೨ ರ ಟಿಪ್ಪಣಿಯನ್ನು ನೋಡಿ.

೧೦೩. ಕರಮೆರಡುಂ ಪಱಿವುದುಂ–ಎರಡು ಕೈಗಳೂ ಕತ್ತರಿಸಿ ಹೋಗುತ್ತಲು, ಆತುರದಿಂದಂ–ನೋವಿನಿಂದ, ತನ್ನ, ಕುನ್ನಗೆಯ್ಯೊಳೆ-ಮುರಿದಕೈಗಳಿಂದಲೇ, ಉದ್ಧುರ–ಕಳಚಿಹೋದ, ರಥಚಕ್ರದಿಂ-ರಥದ ಗಾಲಿಯಿಂದ, ನರಪ್ರಿಯತನೂಜಂ-ಅಭಿಮನ್ಯುವು, ಅಕ್ಷೋಹಿಣಿಯುಂ-ಅಕ್ಷೋಹಿಣಿ ಸೈನ್ಯವನ್ನು, ತಿರಿಪಿ-ತಿರುಗಿಸಿ, ಇಟ್ಟಂ-ಹೊಡೆದನು. ಕುನ್ನ < (ಸಂ) ಕ್ಷುಣ್ಣ–ಮುರಿದ, ಜಜ್ಜಿದ.

ವಚನ : ಅಱಿಯೆ ನೊಂದ–ಸಾಯುವಂತೆ ಯಾತನೆಪಟ್ಟ ; ಬೆರಗಱಿಯದ–ಉಪಾಯವನ್ನು ತಿಳಿಯದ ಅಥವಾ ವಿವೇಕವಿಲ್ಲದ, ಬೆಳ್ಳಾಳ್–ಅಂಜುಪುರುಕ ಅಥವಾ ದಡ್ಡನು; ಪಾಯ್ವಂತೆ–ನುಗ್ಗುವಂತೆ; ಕಿೞ್ತು ಬಾಳ್ವೆರಸು–ಹಿರಿದ ಕತ್ತಿಯೊಡನೆ, ಬೆರಗು=(ತ)ವಿರಗು–ಉಪಾಯಂ, ವಿವೇಕಂ.

೧೦೪. ಸ್ಫುರಿತ ಕೃಪಾಣ ಪಾಣಿಗೆ–ಹೊಳೆಯುವ ಕತ್ತಿಯನ್ನು ಕೈಯಲ್ಲುಳ್ಳವನಿಗೆ ಎಂದರೆ ಖಡ್ಗಪಾಣಿಯಾದ ಗದಾಯುಧನೆಂಬ ದುಶ್ಶಾಸನನ ಮಗನಿಗೆ, ಇದಿರಂ ನಡೆದು–ಎದುರಾಗಿ (ಅಭಿಮನ್ಯುವು) ನಡೆದು, ಅಳ್ಕುಱೆ – ಭಯವಾಗುತ್ತಿರಲು, ತೊಟ್ಟುವಾಯ್ದು–ಮುಟ್ಟುವಂತೆ ಮೇಲೆ ಬಿದ್ದು, ಡೊಕ್ಕರದೊಳ್–ಡೊಕ್ಕರವೆಂಬ ಒಂದು ಬಿನ್ನಣದಲ್ಲಿ, ಪಟ್ಟಿನಲ್ಲಿ, ಮಿಕ್ಕ–ಮೀರಿದ, ದಿಕ್ಕರಿಯನಿಕ್ಕುವವೊಲ್–ದಿಗ್ದಂತಿಯನ್ನು ಕೊಲ್ಲುವಹಾಗೆ, ನೆಲಕಿಕ್ಕಿ–ನೆಲಕ್ಕೆ ಬೀಳಿಸಿ, ಪತ್ತಿ–ಮೇಲೆ ಏರಿ, ಕತ್ತರಿಗೊಳೆ–ಕತ್ತರಿಯಂತೆ ಹಿಡಿಯಲು, ಕಾಯ್ದು–ಕೋಪಿಸಿ, ಕಣ್ಮುಮುೞ್ದು–ಕಣ್ಣು ಹೊರಕ್ಕೆ ಹೊರಟುಕೊಂಡು, ಉಸಿರ್ ಕುಸಿದು–ಉಸಿರು ಕುಗ್ಗಿ, ಅಂತಕಂ–ಕೊಲ್ಲುವವನು (ಗದಾಯುಧನು), ಅಂತಮೆಯ್ದೆ–ಸಾಯಲು, ಅಭಿಮನ್ಯು, ಭಯಂಕರ ರಂಗ ಭೂಮಿಯೊಳ್–ಭಯಂಕರವಾದ ರಣರಂಗದಲ್ಲಿ, ಮೆಯ್ಯ್–ಮೈ, ಪರವಶವಾಗೆ–ಮೂರ್ಛೆಯನ್ನು ಹೊಂದಲು, ಜೋಲ್ದಂ–ಜೋತು ಬಿದ್ದನು, ಸೊರಗಿ ಬಿದ್ದನು. ಡೊಕ್ಕರ–೧೧–೭೪. ಟಿಪ್ಪಣಿಯನ್ನು ನೋಡಿ; ಕತ್ತರಿ=ಕತ್ತರಂ, ಆಂ ಪಿಡಿದುದೆಕತ್ತರಂ (ಅನಂಪು. ೨–೨೭), ಖಮ್ಮರಿ ಕತ್ತರಿ (ಚಂದ್ರ ಪು. ೫–೭೮)

೧೦೫. ಅನಿತು–ಅಷ್ಟು, ಆಣ್ಮೆ–ಪೌರುಷ ಪ್ರದರ್ಶನಮಾಡಿ, ಸತ್ತ, ನರಸಂದನಂಗೆ–ಅಭಿಮನ್ಯುವಿಗೆ, ಕಣ್ಸೋಲ್ತು–ಚಕ್ಷು ಪ್ರೀತಿಯುಂಟಾಗಿ, ಅಮರೇಂದ್ರನಂ–ಇಂದ್ರನನ್ನು, ಬಗೆಯದೆ–ಲಕ್ಷ್ಯ ಮಾಡದೆ, ಇಂ–ಇನ್ನು. ಎನಗೆ ತನಗೆ ಎಂಬ–ಅಭಿಮನ್ಯುವು ನನಗೆ ಬೇಕು ತನಗೆ ಬೇಕು ಎಂದು ಹೇಳುವ, ದೇವಾಂಗನೆಯರ–ದೇವಸ್ತ್ರೀಯರ, ಕಳಕಳಮೆ–ಗದ್ದಲವೇ, ಅಂಬರದೊಳ್–ಆಕಾಶದಲ್ಲಿ, ಪಿರಿದುಂ–ಹಿರಿದಾಗಿಯೂ, ಆಯ್ತು–ಆಯಿತು.

೧೦೬. ಅಭಿಮನ್ಯು ಮರಣವಾರ್ತಾ ಪ್ರಭೂತಶೋಕಾಗ್ನಿ–ಅಭಿಮನ್ಯುವಿನ ಸಾವಿನ ಸುದ್ದಿಯಿಂದ ಉಂಟಾದ ದುಃಖವೆಂಬ ಅಗ್ನಿ, ಧರ್ಮತನಯನಂ–ಧರ್ಮ ಪುತ್ರನನ್ನು, ಇರದೆ–ಬಿಡದೆ, ಅಂದು–ಆಗ, ಅಭಿಭವಿಸಿ–ಆಕ್ರಮಿಸಿ, ತನ್ನನ್–ತನ್ನನ್ನು ಆಳುರ್ದಂತೆ–ವ್ಯಾಪಿಸಿದ ಹಾಗೆ (ಸುಟ್ಟ ಹಾಗೆ), ಭಾಸ್ಕರಂ–ಸೂರ್ಯನು, ಅಸ್ತಾಚಲದೊಳ್–ಅಸ್ತಗಿರಿಯಲ್ಲಿ, ಕೆಂಕಮಾದಂ-ಕೆಂಪಾದನು. ದೀರ್ಘಾಕ್ಷರ ಪ್ರಾಚುರ್ಯವುಳ್ಳ ಈ ಪದ್ಯದ ಬಂಧ ಶೋಕಭಾವವನ್ನು ಪ್ರತಿಬಿಂಬಿಸುತ್ತಿದೆ.

ವಚನ: ಅಶನಿಘಾತ–ವಜ್ರದ ಏಟು; ಅಪಹತ ಕದನರ್–ಯುದ್ಧದಿಂದ ಹಿಂದಿರುಗಿದವರು ;

**೧೦೭.** ಇದಿರಾಂತ–ಎದುರಿಗೊಡ್ಡಿದ, ಅರಾತಿ ಬಲಂ–ಶತ್ರು ಸೈನ್ಯ, ಎನಿತು–ಎಷ್ಟು, ಅಂತು–ಹಾಗೆ, ಅನಿತಂ–ಅಷ್ಟನ್ನು, ತವೆಕೊಂದು–ನಾಶವಾಗುವಂತೆ ಕೊಂದು, ತತ್ಸುಯೋಧನ ಸುತರ್–ಆ ದುರ್ಯೋಧನನ ನೂರು ಮಕ್ಕಳು, ಎನ್ನ–ನನ್ನ, ಬಾಣಗಣದಿಂ – ಬಾಣಗಳ ಸಮೂಹದಿಂದ, ತವಧೆ – ನಾಶವಾಗದೆ, ಇರ್ದರೋ–ಇದ್ದಾರೆಯೋ? ಯುದ್ಧಪಾಳ್ಗೆ–ಕಾಳಗದ ಶೂರನಾದ, ಎನಗೆ–ನನಗಾಗಿ, ರೋದನಂ–ಅಳುವುದು, ಆವುದು–ಯಾವುದು? ಎನಗೆ–ನನಗಾಗಿ, ಏಕೆಯೋ–ಏಕೊ, ಶೋಕಿಪಂ–ದುಃಖಿಸುತ್ತಾನೆ? ಎಂದು–ಎಂಬುದಾಗಿ, ಧರ್ಮನಂದನ–ಧರ್ಮಸುತನೇ, ನರನಂದನಂ ಅಭಿಮನ್ಯು–ಅರ್ಜುನನ ಮಗನಾದ ಅಭಿಮನ್ಯುವು, ನಿನಗೆ–ನಿನಗಾಗಿ, ಸಗ್ಗದೊಳ್–ಸ್ವರ್ಗದಲ್ಲಿ, ಏನ್ನೋಯಸೇ–ಏನು ವ್ಯಥೆಪಡುವುದಿಲ್ಲವೇ?

**೧೦೮.** ಜ್ಞಾನಮಯನಾಗಿ–ಜ್ಞಾನದಿಂದ ತುಂಬಿದವನಾಗಿ, ಸಂಸಾರನಿತ್ಯತೆಯಂ–ಹುಟ್ಟುಸಾವುಗಳ ಅಶಾಶ್ವತತೆಯನ್ನು, ಜಲಕ್ಕನಾಗಿ–ವಿಶದವಾಗಿ, ಅಱಿದು–ತಿಳಿದು, ಇರ್ದು–ಇದ್ದು, ಅಜ್ಞಾನಿಯವೋಲ್–ಅವಿವೇಕಿಯಂತೆ, ನೀನುಂ–ನೀನು ಕೂಡ, ಶೋಕಾನಲಸಂತಪ್ತಚಿತ್ತನಪ್ಪುದು–ಶೋಕದುರಿಯಿಂದ ಬೆಂದಮನದವನಾಗುವುದು, ದೊರೆಯೇ–ತಕ್ಕುದೇ, ಉಚಿತವೇ?

**ವಚನ:** ಷೋಡಶರಾಜೋಪಾಖ್ಯಾನಮುಂ–ಹದಿನಾರು ರಾಜರ ಕಥೆಗಳನ್ನು, ಆಱಿನುಡಿದು–ಶಮನವಾಗುವಂತೆ ಮಾತಾಡಿ.

**೧೦೯.** ಇತ್ತ–ಇತ್ತಕಡೆ, ಆಜಿಯೊಳ್–ಯುದ್ಧದಲ್ಲಿ, ಮತ್ತನೂಜಶತಂ–ನನ್ನ ಮಗದಿರು ನೂರು, ಅೞಿದುದು – ಸತ್ತುಹೋಯಿತು; ಅತ್ತ–ಅತ್ತಕಡೆ, ಅಭಿಮನ್ಯುವೊರ್ವನ್–ಅಭಿಮನ್ಯುವೊಬ್ಬ, ಅೞಿದಂ–ಸತ್ತನು; ಇದಾವ ಗೆಲ್ಲಂ–ಇದು ಯಾವ ಜಯ?, ಎನಗಂ–ನನಗೆ ಕೂಡ ಎಂದರೆ ನನಗಿಂತಲೂ, ಕಲಿಯಾದನೊ–ಶೂರನಾದನೋ; ಪೂಣ್ದು–ಪ್ರತಿಜ್ಞೆಮಾಡಿದ, ಗಂಡವಾತಱಿಯದೆ–ಪೌರುಷದ ಭಾಷೆಯನ್ನು ಕೆಡಿಸದೆ, ಗಂಡಂ–ಪೌರುಷವನ್ನು (ಅಥವಾ ಶೂರನು), ಇಂತು–ಹೀಗೆ, ಆೞ್ವುದು–ಕೆಡಿಸಬೇಕು, ಅಥವಾ ಸಾಯಬೇಕು; ಈ ಅೞ್ವು–ಅವಸಾನವು, ಸಾವು, ಎನಗೆ–ನನಗೆ, ಆಜಿರಂಗದೊಳ್–ರಣರಂಗದಲ್ಲಿ, ಗೞಿಯಿಸುಗೆ–ಘಟಿಸಲಿ, ಉಂಟಾಗಲಿ: ಎಂಬಿದಂ–ಎಂಬ ಈ ಮಾತುಗಳನ್ನು, ಘಟಸಂಭವನೊಳ್–ದ್ರೋಣನಲ್ಲಿ, ನುಡಿಯುತುಂ–ಮಾತಾಡುತ್ತ, ಸುಯೋಧನಂ–ದುರ್ಯೋಧನನು (ಬೀಡಿಂಗೆ ಪೋದಂ), ತನ್ನ ನೂರು ಮಕ್ಕಳನ್ನು ಕೊಂದವನೂ ಹಗೆಯ ಮಗನೂ ಆಗಿದ್ದ ಅಭಿಮನ್ಯುವಿನ ವಿಷಯವಾಗಿ ಇಂಥ ಪ್ರಶಂಸೆಯನ್ನು ಮಾಡುವುದು ದುರ್ಯೋಧನನ ಗುಣೋನ್ನತಿಯನ್ನು ಸಾರುತ್ತದೆ. ರನ್ನನ ಪದ್ಯಗಳನ್ನು (ಗದಾ. ೪–೨೪,೨೫,೨೬) ಇದರೊಡನೆ ಹೋಲಿಸಬಹುದು.

**ವಚನ:** ಬಡಬಾನಳನಳರ್ವಂತಳುರ್ದು – ಬಡಬಾಗ್ನಿಯು ವ್ಯಾಪಿಸುವ ಹಾಗೆ ವ್ಯಾಪಿಸಿ ಸುಟ್ಟು; ಕಟಕಕ್ಕೆ–ಶಿಬಿರಕ್ಕೆ; ವಿಜಯಂ–ಅರ್ಜುನನ, ಬರೆವರೆ–ಬರುತ್ತಿರಲು,

೧೧೦. ಹರಿ–ಶ್ರೀ ಕೃಷ್ಣನು, ನಿಜಯೋಗದಿಂ–ತನ್ನ ಯೋಗಶಕ್ತಿಯಿಂದ, ತನ್ನಳಿಯಂ–ತನ್ನ ಸೋದರಳಿಯ ಅಭಿಮನ್ಯು, ಲಯಮಾದುದಂ–ಸತ್ತುದನ್ನು, ಅಱಿದು – ತಿಳಿದು, ಭಯಂಕರ ಕಪಿಕೇತನಂಗೆ – ಭಯಂಕರನಾದ ಅರ್ಜುನನಿಗೆ, ಅಱಿಪಲ್–ತಿಳಿಸಲು, ಒಲ್ಲದೆ–ಒಪ್ಪದೆ, ಶಮಂತ ಸಂಚಕಂಬರಂ–ಶಮಂತಪಂಚಕ ವೆಂಬ ಕೊಳದವರೆಗೆ, ಬಂದು ಇೞಿದು–ರಥದಿಂದ ಇಳಿದು, ಸಂಗರಪರಿಶ್ರಮಮಂ–ಯುದ್ಧದ ಆಯಾಸವನ್ನು, ಕಳೆಯಿಂದು–ನೀಗು ಎಂದು, ಮಯ್ದುನಂ ಬೆರಸು–ಮೈದುನನ ಸೊಡನೆ, ಜಳಾವಗಾಹದೊಳ್ – ಮುಳುಗಿ ಸ್ನಾನಮಾಡುವುದರಲ್ಲಿ, ಇರುತ್ತೆ–ಇರುತ್ತ, ಮಹಾಕಪಟ ಪ್ರಪಂಚದಿ–ಮಹಾಮೋಸದ ಆಧಿಕ್ಯದಿಂದ

೧೧೧. ಜಳಮಂತ್ರಮಂತ್ರಿತಾಶಯ ಜಳದೊಳ್–ಜಲಸ್ತಂಭನ ಮಂತ್ರ ದಿಂದ ಮಂತ್ರಿಸಲ್ಪಟ್ಟ ಜಲಾಶಯದಲ್ಲಿ, ನರಂ–ಅರ್ಜುನ, ಇನಿಸು ಮುಳುಗೆ–ಸ್ವಲ್ಪ ಹೊತ್ತು ಮುಳುಗಲು, ನಿಜಸುತಂ–ನಿನ್ನ ಮಗ, ಅಸುಹೃದ್ಬಳಜಳನಿಧಿಯೊಳ್–ಶತ್ರು ಸೈನ್ಯ ಸಾಗರದಲ್ಲಿ, ಫಲ್ಗುಣ – ಅರ್ಜುನನೇ, ಮುೞುಗಿದಂ–ಮುೞುಗಿ ಹೋದನು, ಎಂಬುದನೆ–ಎಂಬ ಈ ಮಾತನ್ನೇ, ನುಡಿದು, ಹರಿ–ಕೃಷ್ಣ, ಮುಳುಗ ವುದುಂ–ಮುಳುಗುತ್ತಲು.

೧೧೨. ಝೊಂಕನೆ – ಬೇಗನೆ ಎಂದರೆ ಇಪ್ಪಕ್ಕಿಪ್ಪಂತೆ, ಅನಿರೀಕ್ಷಿತವಾಗಿ, ಕೇಳ್ದು–ಆ ಮಾತನ್ನು ಕೇಳಿ, ಎರ್ದೆಕದಡಿ–ಹೃದಯ ಕಲಕಿ, ಕಲಂಕಿದ–ಕದಡಿದ, ಬಗೆವೆರಸು – ಚಿಂತೆಯಿಂದ ಕೂಡಿ, ನೆಗೆದು – ನೀರ ಮೇಲಕ್ಕೆ ಎದ್ದು, ನಾಲ್ಕುಂ ದೆಸೆಯುಂ–ನಾಲ್ಕು ದಿಕ್ಕುಗಳನ್ನು, ಶಂಕಾಕುಳಿತಂ–ಭಯದಿಂದ ಪೀಡಿತನಾದವನು, ನೋಡಿ, ಮನಂ–ಮನಸ್ಸು, ಕೊಳುಕೆನೆ–ಕಳಕ್ಕೆನ್ನಲು, ಮುೞುಗಿ ನೆಗೆದ ಹರಿಯುಂ–ಮುಳುಗಿ ಮೇಲೆದ್ದ ಕೃಷ್ಣನನ್ನು, ನುಡಿದಂ–ಕುರಿತು ಹೇಳಿದನು.

೧೧೩. ಇದು–ಈ ಮಾತು, ಆಕಾಶವಚನಂ–ಆಕಾಶದ ಮಾತು, ಎಂದರೆ ಅಶರೀರವಾಣಿ; ಸುತಶೋಕಮುಂ – ಪುತ್ರಶೋಕವನ್ನು, ಎನಗೆ–ನನಗೆ, ಅಱಿಪಿ ದಪ್ಪುದು–ತಿಳಿಸುತ್ತದೆ: ಅಸ್ಮತ್ತನಯಂಗೆ – ನನ್ನ ಮಗನಿಗೆ, ಮರಣಂ – ಸಾವು, ಆ ಕುರುಪತಿಯಿಂದು – ಆ ದುರ್ಯೋಧನನಿಂದ, ಆದುದು – ಆದದ್ದು, ಆಗಲೆ ವೇೞ್ಕುಂ–ಆಗಿಯೇ ಇರಬೇಕು; ಏಕೆ, ಎಂದು, ಅಱಿಯೆಂ–ತಿಳಿಯೆನು.

೧೧೪. ಇಂದಿನ–ಇವತ್ತಿನ, ಚಕ್ರವ್ಯೂಹಮಂ–ಚಕ್ರವ್ಯೂಹ ರಚನೆಯನ್ನು, ಆಂ–ನಾನು, ದಲ್–ನಿಜವಾಗಿಯೂ, ಅಣಂ–ಸ್ವಲ್ಪವೂ, ಮೆಚ್ಚಲಾೞೆಂ–ಮೆಚ್ಚಲ ಸಮರ್ಥನಾಗಿದ್ದೇನೆ, ಎನುತಂ–ಎಂದು ಹೇಳುತ್ತ, ರಥಮಂ–ರಥವನ್ನು, ಬಂದು–ಕೊಳದಿಂದ ಬಂದು. ಏಱಿ–ಹತ್ತಿ, ಮಗನ–ಮಗನಿಗೆ ಸಂಬಂಧಿಸಿದ, ಮನಕತಂ–ಮನದ ನೋವು, ವ್ಯಥೆ, ಎರ್ದೆಯುಂ–ಎದೆಯನ್ನು, ಒಂದುತ್ತರಂ–ಒಂದಿಷ್ಟು ಅತಿ ಶಯವಾಗಿ, ಅಲೆಯೆ–ಪೀಡಿಸಲು, ನರಂ–ಅರ್ಜುನ, ಇಂತೆಂದಂ–ಹೀಗೆಂದನು.

೧೧೫. ಕನನದಿಂ–ಯುದ್ಧದಿಂದ, ಆಂ–ನಾನು, ಬರೆ–ಬರಲು, ನಿಚ್ಚಲುಂ–

ಪ್ರತಿದಿನವೂ, ಇದಿರ್ವಂದು-ಎದುರಿಗೆ ಬಂದು, ಕೊರಲ್ಗೆ-ಕೊರಳಿಗೆ, ಪಾಯ್ದು-ಹಾರಿ, ಅಪ್ಪಿ, ಬಾಯ್ವಾಯೊಳ್-ನನ್ನ ಬಾಯಿಂದ ತನ್ನ ಬಾಯಲ್ಲಿ, ಅಲಂಪು-ಸಂತೋಷವು, ಇದಿರ್ಗೊಳೆ-ಎದುರಿಗೆ ತೋರುತ್ತಿರಲು, ತಂಬುಲಮಂ-ಅಗಿದ ಎಲೆಯಡಿಕೆಯನ್ನು, ಕೊಳ್ಳದೆ-ಸ್ವೀಕರಿಸದೆ, ಮಾಣ್ದು-ಬಿಟ್ಟು, ಮಗನ ತಡವು-ಮಗನು ತಡಮಾಡಿದ್ದು, ಅಸುರಾರೀ-ಶ್ರೀ ಕೃಷ್ಣನೇ, ಇದೇನ್-ಇದೇನು ?

ಈ ಪದ್ಯಗಳಲ್ಲಿ (೧೧೦-೧೧೫) ವಾಕ್ಯಗಳು ಪದ್ಯದಿಂದ ಪದ್ಯಕ್ಕೆ ಹರಿದು ಕಥೆಯ ವೇಗವನ್ನು ಪ್ರತಿಬಿಂಬಿಸುತ್ತ ಅರ್ಜುನನ ಆತಂಕವನ್ನು ಹೆಗ್ಗಳಿಸುತ್ತ ಶೈಲಿ ದಾರುಣ ರಮ್ಯವಾಗಿ ಭವ್ಯತೆಯ 'ನೆಲೆಯನ್ನು ಮುಟ್ಟುವಂತಿದೆ

ವಚನ : ಎಯ್ದೆವಂದು-ಹತ್ತಿರಬಂದು, ಪರಿಜನಮುಂ-ಸೇವಕರನ್ನೂ; ಇದೇನ್-ಇದೇನು ವಿಷಯ, ಎಂದು ಬೆಸಗೊಳೆ-ಎಂದು ಕೇಳಲು ; ಇದೇನ್ ಎಂಬ ಪ್ರಶ್ನೆಯಲ್ಲಿ ಎಂಥ ಶೋಕಸಾಗರವಡಗಿದೆಯೊ !

೧೧೬. ಧರ್ಮರಾಜನ ಮಾತು : ಗುರು ಚಕ್ರವ್ಯೂಹಮಂ ಪಣ್ಣಿದೊಡೆ-ದ್ರೋಣನು ಚಕ್ರವ್ಯೂಹವನ್ನು ರಚನೆ ಮಾಡಿದರೆ, ಇದಂ-ಇದನ್ನು, ಪುಗಲ್-ಹೊಗಲು, ಬಲ್ಲರ್-ತಿಳಿದವರು; ಆರ್-ಯಾರು, ಎಂದೊಡೆ-ಎಂದು ಹೇಳಿದರೆ, ನಾನಿರೆ-ನಾನಿರಲು, ಇಂ-ಇನ್ನು, ಮತ್ತೆ ಆರ್ ಬಲ್ಲರ್-ಬೇರೆ ಯಾರು ತಿಳಿದವರು ? ಎಂದು-ಎಂದು ಹೇಳಿ, ಒರ್ವನೆ-ಒಬ್ಬನೆ, ರಿಪುಬಳ ವಾರಾಸಿಯುಂ-ಶತ್ರುಸೈನ್ಯ ಸಾಗರವನ್ನು, ಪೊಕ್ಕು-ಪ್ರವೇಶಿಸಿ, ಮಿಕ್ಕು-ಮೀರಿ, ಅಂತರಂ-ಎದುರಾದವರನ್ನು, ಆಟಂದು-ಮೇಲೆ ಬಿದ್ದು, ಇಕ್ಕಿ-ಕೊಂದು, ದುರ್ಯೋಧನನ-ಕೌರವನ, ನೂರ್ವರುಂತನಯರುಂ-ನೂರು ಮಂದಿ ಮಕ್ಕಳನ್ನು, ಕೊಂದು, ತತ್ಸಂಗರದೊಳ್-ಆ ಯುದ್ಧದಲ್ಲಿ, ಎಮ್ಮಂ-ನಮ್ಮನ್ನು, ಕಾದು-ರಕ್ಷಿಸಿ, ಇಂತು-ಹೀಗೆ, ಆಂತು-ಎದುರಿಸಿ, ಇಱಿದು-ಯುದ್ಧಮಾಡಿ, ನಿಜಸುತಂ-ನಿನ್ನ ಮಗ ಅಭಿಮನ್ಯು, ದೇವಲೋಕಕ್ಕೆ-ಸ್ವರ್ಗಕ್ಕೆ, ಸಂದಂ-ಸೇರಿದನು. 'ಸಂದಾನ್' ಎಂದು ಪೂರ್ವದ ಹಳಗನ್ನಡದ ಪ್ರಯೋಗವಿದ್ದಿದ್ದರೆ, ಪದ್ಯದ ರಮಣೀಯತೆ ಹೆಚ್ಚುತ್ತಿತ್ತು.

೧೧೭. ಸಿಂಧು ವಿಷಯಾಧೀಶಂ-ಸಿಂಧು ದೇಶದ ರಾಜ ಸೈಂಧವನು, ಬಾಳ ಶಶಾಂಕಮೌಳಿ-ಶಿವನು, ಬರಮುಂ-ವರವನ್ನು, ಕುಡೆ-ಕೊಡಲು, ಪೆತ್ತ-ಪಡೆದ, ಒಂದು ಉರ್ಕಿನಿಂ-ಒಂದು ಕೊಬ್ಬಿನಿಂದ, ರಣೋತ್ಸಾಹದಿಂ-ಯುದ್ಧದ ಹುಮ್ಮಸ್ಸಿನಿಂದ, ನಿಂದು-ನಿಂತುಕೊಂಡು, ಓವದೆ-ಕಾಪಾಡದೆ (ನಿರ್ದಾಕ್ಷಿಣ್ಯವಾಗಿ), ಒರ್ವನೆ-ಒಬ್ಬನೇ, ಎಮ್ಮನ್-ನಮ್ಮನ್ನು, ಆಂತು-ಎದುರಿಸಿ, ಭರಂಗೆಯ್ದು-ತೀವ್ರತೆಯನ್ನು ತೋರಿಸಿ, ಅತ್ತ-ಅತ್ತಕಡೆಗೆ, ದುರ್ಯೋಧನಂ ಬೆರಸು-ದುರ್ಯೋಧನ ಸಹಿತವಾಗಿ, ಆ ದ್ರೋಣನಂ-ಆ ದ್ರೋಣನನ್ನು, ಅಟ್ಟಿ-ಕಳುಹಿಸಿ, ಪ್ರೌಢಕ್ಕೆ ಒಂದು ಮತ್ಸರದಿಂ-ವ್ಯಾಪಿಸಿದ ಒಂದು ದ್ವೇಷದಿಂದ, ನಿನ್ನ, ತನೂಜನಂ-ಮಗನನ್ನು, ಕೊಲಿಸಿದಂ-ಕೊಲ್ಲಿಸಿದನು, ಮತ್ತೆ-ಬೇರೆ, ಅವರ್-ಆ ಕೌರವರು, ಆಂತು-ಎದುರಿಸಿ, ಕೊಲ್ವರೇ

–ಕೊಲ್ಲುವವರೇ ? ಅಭಿಮನ್ಯುವಿನ ಕೊಲೆಗೆ ದುಶ್ಯಾಸನನ ಮಗ ಗದಾಯುಧನು ನೇರವಾಗಿ ಕಾರಣನಾಗಿದ್ದರೂ ಆ ಅಪವಾದ ಸೈಂಧವನಿಗೆ ಅಂಟಿಕೊಂಡಿತು. ಕೊಂದವನು ಕೊಲ್ಲಿಸಿಕೊಂಡವನ ಸಂಗಡಲೇ ಸತ್ತದ್ದರಿಂದ ಅರ್ಜುನ ಸೇಡನ್ನು ಯಾರ ಮೇಲೆ ತೀರಿಸಿಕೊಳ್ಳಬೇಕು ? ಚಕ್ರವ್ಯೂಹದೊಳಗೆ ಕರ್ಣಾದಿಗಳು ಅಭಿಮನ್ಯುವಿಗೆ ಏನು ಮಾಡಿದರೆಂಬ ವಿಷಯ ಪಾಂಡವರಿಗೆ ತಿಳಿಯಲಾಗಲಿಲ್ಲ ; ಏಕೆಂದರೆ ಅವರಿಗೆ ಅದರೊಳಕ್ಕೆ ಪ್ರವೇಶವೇ ದೊರೆಯಲಿಲ್ಲ ; ಇದಕ್ಕೆ ಕಾರಣ ಸೈಂಧವ ; ಅವನು ಅವರನ್ನು ಚಕ್ರವ್ಯೂಹದ ಬಾಗಿಲಲ್ಲಿ ಅಡ್ಡಗಟ್ಟಿ ನಿಂತನು. ಆದ್ದರಿಂದ ಅವನ ಮೇಲೆಯೇ ಅಪವಾದವು ಏರಿಕೊಂಡಿತು.

**ವಚನ** : ಪ್ರಚಂಡ . . . ರಸನುಂ ; ಪ್ರಚಂಡ–ಅತಿ ತೀಕ್ಷ್ಣವಾದ, ಕೋಪ ಪಾವಕ–ಕೋಪಾಗ್ನಿಯಿಂದ, ಪ್ರಶಮಿತ–ಶಮನ ಮಾಡಲ್ಪಟ್ಟ, ಶೋಕರಸನುಂ–ದುಃಖ ಭಾವವುಳ್ಳವನು ; ಉನ್ನತ. . . ಭ್ರುಕುಟಿಯುಂ : ಉನ್ನತ–ಎತ್ತರವಾದ, ಲಲಾಟತಟ–ಹಣೆಯ ಪ್ರದೇಶದಲ್ಲಿ, ಘಟಿತ–ಸೇರಿಸಿದ, ಭೀಷಣ–ಭಯಂಕರವಾದ, ಭ್ರುಕುಟಿಯುಂ–ಹುಬ್ಬುಗಂಟುಳ್ಳವನೂ, ಕಲ್ಪಾಂತದಿನಕರ ದುರ್ನಿರೀಕ್ಷನುಂ–ಕಲ್ಪದ ಕಡೆಯ ಸೂರ್ಯನಂತೆ ನೋಡಲಶಕ್ಯನಾದವನೂ ; ಉತ್ಪಾತ ಮಾರುತನಂತೆ–ವಿಪತ್ಕಾಲದ ಗಾಳಿಯಂತೆ, ಸಕಲ ಭೂ ಭೃತ್ಕಂಪಕಾರಿಯುಂ–ಎಲ್ಲ ಬೆಟ್ಟಗಳನ್ನು ನಡುಗಿಸುವವನೂ ; ವರ್ಧಮಾನ ಉತ್ಸೇಧನುಂ–ಬೆಳೆಯುತ್ತಿರುವ ಎತ್ತರವುಳ್ಳವನೂ ; ಅಂಧಕಾರಾತಿಯಂತೆ – ರುದ್ರನಂತೆ, ಭೈರವಾಕಾರನುಂ ಆಗಿ – ಭೀಕರಾಕಾರನೂ, ಆಗಿ

೧೧೪. ಅರ್ಜುನನ ಮಹಾಪ್ರತಿಜ್ಞೆ ; ರಸೆಯಿಂ–ಪಾತಾಳದಿಂದ, ಭೂತಳದಿಂ–ಭೂಮಂಡಲದಿಂದ, ಕುಳಾದ್ರಿಕುಳದಿಂ–ಕುಲಪರ್ವತಗಳ ಸಮೂಹದಿಂದ, ದಿಗ್ದಂತಿಯಿಂ–ದಿಕ್ಕಿನ ಆನೆಗಳಿಂದ, ವಾರ್ಧಿಯಿಂ–ಸಮುದ್ರಗಳಿಂದ, ದೆಸೆಯಿಂದೆ–ದಿಕ್ಕುಗಳಿಂದ, ಅಜಾಂಡತಟದಿಂದೆ–ಬ್ರಹ್ಮಾಂಡದ ಮೇರೆಯಿಂದ, ಅತ್ತ–ಆಚೆಗೆ, ಎಲ್ಲಿ ಪೊಕ್ಕಿರ್ದುಂ–ಎಲ್ಲಿ ಹೊಕ್ಕಿದ್ದೂ, ಇಂ–ಇನ್ನು, ವೈರಿಗೆ–ಹಗೆಗೆ, ಮಿಸುಕಲ್–ಅಲ್ಲಾಡಲು, ತೀರ್ಗುಮೆ–ತೀರುತ್ತದೆಯೆ ? ಎನ್ನ ಸುತನಂ ಕೊಂದಿರ್ದುದಂ ಕೇಳ್ದು–ನನ್ನ ಮಗನನ್ನು ಕೊಂದಿದ್ದನ್ನು ಕೇಳಿ, ಇನ್ನುಂ–ಇನ್ನೂ ಕೂಡ, ಸೈರಿಸಿ ಮಾಣ್ದೆಂ–ಸಹಿಸಿಕೊಂಡು ನಿಂತೆನು, ಎಂದೊಡೆ–ಎಂದರೆ, ಇದಂ–ಈ ಕೊಲೆಯನ್ನು, ಪೇಳ್–ಹೇಳು, ಆಂ–ನಾನು, ಏತಱೊಳ್–ಯಾವುದರಲ್ಲಿ, ನೀಗುವೆಂ–ಕಳೆಯುತ್ತೇನೆ. ಏನು ಪ್ರತೀಕಾರ ಮಾಡುತ್ತೇನೆ ಎಂದು ತಾತ್ಪರ್ಯ.

೧೧೫. ಬಳೆದ ಸುತಶೋಕದಿಂದೆ–ವೃದ್ಧಿಗೊಂಡ ಪುತ್ರಶೋಕದಿಂದ, ಎನ್ನ ನಯನ ಜಲಂಗಳ್–ನನ್ನ ಕಣ್ಣೀರುಗಳು, ಈಗಳೆ ಸುರಿಗುಮೇ–ಈಗಲೆ ಸುರಿಯುತ್ತದೆಯೆ ? ಸುರಿಯದು–ಸುರಿಯುವುದಿಲ್ಲ ; ಜಯದ್ರಥನ–ಸೈಂಧವನ, ಚಿತಾನಳನಿಂದಂ – ಚಟ್ಟದ ಉರಿಯಿಂದ, ಒಗೆದ – ಹುಟ್ಟಿದ, ಪೊಗೆಗಳ್ – ಹೊಗೆಗಳು,

ಕೊಳೆ – ಮುತ್ತಿಕೊಳ್ಳಲು, ಸುರಿವೊಡೆ – ಸುರಿಯುವ ಪಕ್ಷದಲ್ಲಿ, ಸುರಿವುವು– ಸುರಿಯುತ್ತವೆ.

೧೨೦. ಬಿಸಜಭವನಕ್ಕೆ–ಬ್ರಹ್ಮನಾಗಲಿ, ಮೃಡನಕ್ಕೆ–ಶಿವನಾಗಲಿ, ಅಸುರಾಂತಕನಕ್ಕೆ – ವಿಷ್ಣುವಾಗಲಿ, ಕಾವೊಡಂ – ರಕ್ಷಿಸಿದರೂ, ನಾಳೆಸೊಳ್ – ನಾಳೆ, ಅರ್ವಿಸೆ–ಹೆದರಲು, ಕೊಂದು, ಸಿಂಧುರಾಜನ ಬಸಿಜಂ–ಸೈಂಧವನ ಬಸಿರನ್ನು, ಪೋೞ್ದು – ಸೀಳಿ, ಎನ್ನಮಗನಂ–ನನ್ನ ಮಗನನ್ನು. ಆಂ–ನಾನು, ತೆಗೆಯದೆ– ಹೊರಕ್ಕೆ ತೆಗೆಯದೆ, ಇರೆಂ–ಇರೆನು.

೧೨೧. ಎನ್ನ–ನನ್ನ, ಮಗನಂ–ಮಗನನ್ನು, ಕೊಂದು, ಇಂ–ಇನ್ನು, ಭಯದಿಂದಂ– ಭಯದಿಂದ, ಅಜನ – ಬ್ರಹ್ಮನ, ಗುಂಡಿಗೆವೊಕ್ಕು – ಕಮಂಡಲುವನ್ನು ಪ್ರವೇಶಿಸಿಯೂ, ಮೇಣ್–ಅಥವಾ, ಮಂದರಧರನ–ವಿಷ್ಣುವಿನ, ಪೊರ್ಕುೞ– ಹೊಕ್ಕುಳಿನ, ಪೊಂದಾವರೆ ವೊಕ್ಕುಂ–ಹೊಂದಾವರೆಯನ್ನು ಪ್ರವೇಶಿಸಿಯೂ, ಅವಂ– ಆ ಜಯದ್ರಥನು, ಬರ್ದುಕುವನೇ–ತಪ್ಪಿಸಿಕೊಳ್ಳುತ್ತಾನೆಯೆ?

೧೨೨. ಪಡೆ–ಸೈನ್ಯವು, ಪಡೆಮೆಚ್ಚೆಗಂಡನೆನೆ–ಪಡೆಮೆಚ್ಚೆಗಂಡ ಎಂಬ ಬಿರುದನ್ನು ಹೇಳಲು, ಸಂದ–ಪ್ರಸಿದ್ಧವಾದ, ಅರಿಕೇಸರಿ–ವೈರಿಸಿಂಹ, ಎಂಬ, ಅಗುರ್ವು– ಭೀತಿಯು, ಸೇರ್ಪಡೆ–ಸೇರಾಗಿ ಉಂಟಾಗಲು, ನೆಗೞ್ದ– ಪ್ರಸಿದ್ಧನಾದ, ಆಂ– ನಾನು, ಅಣಂ–ಸ್ವಲ್ಪವೂ, ಸೆಡೆದು–ಭಯದಿಂದ ಕುಗ್ಗಿ, ಮಾಣ್ಬೆನೆ–ಬಿಡುತ್ತೇನೆಯೆ? ನಾಳೆ–ನಾಳೆಯ ದಿನ, ದಿನೇಶಂ–ಸೂರ್ಯನು, ಅಸ್ತದತ್ತ–ಮುಳುಗುಬೆಟ್ಟದ ಆಚೆ, ಉಡುಗದ ಮುನ್ನ–ಕುಗ್ಗಿಹೋಗುವುದಕ್ಕೆ ಮುಂಚೆಯೇ ಎಂದರೆ ಸೂರ್ಯನು ಮುಳುಗುವುದಕ್ಕೆ ಮುಂಚಿತವಾಗಿಯೆ, ಸೈಂಧವನ್ – ಜಯದ್ರಥನು, ಅಗುರ್ವಿಸೆ – ಹೆದರಲು, ಕೊಲ್ಲದೊಡೆ – ಕೊಲ್ಲದಿದ್ದರೆ, ಏನೊ–ಏನೋ, ಗಾಂಡಿವಂ ಪಿಡಿಪೆನೆ–ಗಾಂಡೀವವನ್ನು ಹಿಡಿಡೆನೆ? ಚೀಃ–ಚೀ, ಯುದ್ಧರಂಗದೊಳ್–ರಣರಂಗದಲ್ಲಿ, ವೈರಿಗೆ–ಶತ್ರುವಿಗೆ, ತೊವಲ್ಪಿಡಿಪೆಂ–ಚಿಗುರನ್ನು ಹಿಡಿಪೆನು, ಅಲ್ಲನೆ– ಅಲ್ಲವೆ? ಚಿಗುರನ್ನು ಹಗೆಯ ಎದುರಿಗೆ ಹಿಡಿದುಕೊಂಡಿರುವುದು ಹೇಡಿತನದ ಸೂಚಕ.

**ವಚನ :** ಸೈಂಧವನ ಸಜ್ಜನಂ–ಸೈಂಧವನ ಕುಲಸ್ತ್ರೀ, ಧರ್ಮಪತ್ನಿ; ದುಜ್ಜೋದನನ–ದುರ್ಯೋಧನನ; ತಂಗೆ–ತಂಗಿ; ಮಲಮಲಮಱುಗಿ–ಮಲ ಮಲ ಎಂದು ವ್ಯಥೆಪಟ್ಟು; ಕವಿದು ಪಟ್ಟು–ಮುಚ್ಚಿ ಮಲಗಿ.

೧೨೩. ತನ್ನ ಸುತನೞಿಯಲ್–ತನ್ನ ಮಗನು ಸಾಯಲು, ನಿನ್ನಯ– ನಿನ್ನ, ಮಯ್ದುನನಂ–ಮೈದುನನಾದ ಜಯದ್ರಥನನ್ನು, ಅೞಿಯಲ್–ಕೊಲ್ಲಲು, ಅರ್ಜುನನು, ಪೂಣ್ದಂ–ಪ್ರತಿಜ್ಞೆ ಮಾಡಿದನು; ಅದಕ್ಕೆ–ಅದರಿಂದ, ಆಂ–ನಾನು, ನಡುಗಿ–ಹೆದರಿ, ಬಂದೆಂ–ಬಂದೆನು; ಇಂ–ಇನ್ನು, ನೀಂ–ನೀನು, ಎನ್ನ–ನನ್ನ, ಓಲೆಯ–ಕಿವಿಯೋಲೆಯ, ಕಡಗದ–ಬಳೆಗಳ, ಅೞಿವಂ–ನಾಶವನ್ನು, ಏಂ ನೋಡಿದ

ಪಾ-ಪೋಷಿಸುವೆಯ, ಏನು? ನಾನು ವಿಧವೆಯಾಗುವುದನ್ನು ನೋಡುವೆಯೋ ಏನು? ಎಂದು ತಾತ್ಪರ್ಯ.

ವಚನ: ಸುಯೋಧನಂ ಮುಗುಳ್ನಗೆ ನಕ್ಕು–ಈ ನಗೆಯ ಅರ್ಥವೇನು? ಅರ್ಜುನನ ಪ್ರತಿಜ್ಞೆ ಬರಿ ಬಾಯಿಮಾತು; ಅದೆಲ್ಲಿ ನಡೆಯುತ್ತದೆ? ಅದಕ್ಕೇಕೆ ಗಾಬರಿಪಡುವುದು? ಇಂಥ ಪ್ರತಿಜ್ಞೆಗಳು ಎಷ್ಟೋ! ಎಂಬ ಅವಜ್ಞೆ, ಧಿಕ್ಕಾರ, ಅಪಹಾಸ್ಯದ ಭಾವಗಳು ವ್ಯಕ್ತವಾಗಿವೆ.

೧೨೪ ಮರುಳಕ್ಕ–ಅಯ್ಯೋ, ಹುಚ್ಚಿ ತಂಗಿ, ಮಗನ ಶೋಕದಿಂ–ಪುತ್ರ ಶೋಕದಿಂದ, ಉರುಳ್ದುಂ–ಉರುಳಾಡಿಯೂ, ಪೂಣ್ದವನ–ಪ್ರತಿಜ್ಞೆ ಮಾಡಿದವನ, ಪೂಣ್ಕೆ – ಪ್ರತಿಜ್ಞೆಯು, ದುಶ್ಶಾಸನನೊಳ್ – ದುಶ್ಶಾಸನನಲ್ಲಿಯೂ, ಎನ್ನೊಳಂ–ನನ್ನಲ್ಲಿಯೂ. ಕರತನದಿಂ–ತೀಕ್ಷ್ಣತೆಯಿಂದ, ಮರುತ್ಸುತಂ–ಭೀಮನು, ಪೂಣ್ದ–ಪ್ರತಿಜ್ಞೆ ಮಾಡಿದ, ಪೂಣ್ಕೆವೊಲ್–ಪ್ರತಿಜ್ಞೆಯಂತೆ, ಅಕ್ಕುಂ–ಆಗುತ್ತದೆ. ಕರತನ=ಕರ<(ಸಂ) ಖರ+ತನ.

೧೨೫. ಕೃತವಿವಿಧಾಸ್ತ್ರಶಸ್ತ್ರ ಯಮಪುತ್ರ ಮರುತ್ಸುತಯಜ್ಞಸೇನರ್–ವಿವಿಧಶಾಸ್ತ್ರಗಳಲ್ಲಿ ಪರಿಣತರಾದ ಧರ್ಮರಾಜ ಭೀಮ ಧೃಷ್ಟದ್ಯುಮ್ನರು, ಉದ್ಧತಬಳರ್ – ಅತಿಶಯಶಕ್ತಿಯುಳ್ಳವರು, ಎತ್ತಿ – ದಂಡೆತ್ತಿ, ಕಾದಿ–ಹೋರಾಡಿ, ಸುಗಿದು–ಹೆದರಿ, ಓಡಿದರ್, ಅಲ್ಲರೆ–ಅಲ್ಲವೆ? ಜಯದ್ರಥನೊಡನೆ ಯುದ್ಧದಲ್ಲಿ ಹೆದರಿ ಪಲಾಯನ ಮಾಡಿದರು: ವಿವಿಂಶತಿ . . . . ಪುತ್ರರ್; ವಿವಿಂಶತಿ, ಕೃಪ, ಕರ್ಣ, ಶಲ್ಯ, ಕಳಶೋದ್ಭವ–ದ್ರೋಣ, ತತ್ಪ್ರಿಯಪುತ್ರರ್–ಅವನ ಮಗ ಅಶ್ವತ್ಥಾಮ, ಇವರೆಲ್ಲ, ಕಾವರ್–ರಕ್ಷಿಸುವವರು, ಎಂದೊಡೆ–ಎಂದು ಹೇಳಿದರೆ, ಅಪ್ರತಿರಥನಂ–ಸಾಟಿಯಿಲ್ಲದ ರಥಿಕನಾದ, ಜಯದ್ರಥನಂ–ಜಯದ್ರಥನನ್ನು, ಅಜಿಯೊಳ್–ಯುದ್ಧದಲ್ಲಿ, ಎಯ್ತರೆ ವರ್ಪ–ಸಮೀಪವಾಗಿ ಬರುವ, ಗಂಡರಾರ್–ಶೂರರಾರು?

ವಚನ: ದುಶ್ಶಳೆಯಂ–ಸೈಂಧವನ ಹೆಂಡತಿ, ದುರ್ಯೋಧನನ ತಂಗಿ ದುಶ್ಶಲೆ, ಒಡಗೊಂಡು–ಜೊತೆಯಲ್ಲಿ ಕರೆದುಕೊಂಡು; ಕುಂಭಸಂಭವನಲ್ಲಿಗೆ – ದ್ರೋಣನಲ್ಲಿಗೆ.

೧೨೬. ಸುತಶೋಕೋದ್ರೇಕದಿ–ಪುತ್ರಶೋಕದ ಕಾವಡಿನಿಂದ, ಅರ್ಜುನಂ–ಅರ್ಜುನನು, ಸೈಂಧವನಂ–ಜಯದ್ರಥನನ್ನು, ಅಟಿಪೆಂ – ನಾಶಮಾಡುವೆನು, ಎಂದು. ಪೂಣ್ದಂ–ಪ್ರತಿಜ್ಞೆ ಮಾಡಿದನು; ಇಂತು-ಹೀಗೆ, ಈ ಸತಿ–ಈ ಹೆಂಗಸು ದುಶ್ಶಳೆಯು, ಬಂದಳ್–ನಿಮ್ಮಲ್ಲಿಗೆ ಬಂದಳು; ಆತ್ಮಾನುಜೆಯ–ನನ್ನ ತಂಗಿಯ, ಕಡಗಮಂ–ಬಳೆಗಳನ್ನು ಎಂದರೆ ಸೌಮಂಗಲ್ಯವನ್ನು, ಕಾವುದು – ರಕ್ಷಿಸುವುದು; ನೀವೆ-ನೀವೇ, ಮಾರ್ಕೊಳ್ವೊಡೆ – ಶತ್ರುಗಳನ್ನು ಪ್ರತಿಭಟಿಸಿದ ಪಕ್ಷದಲ್ಲಿ, ಇತರರ್ ತಾಂ ಆರ್–ಇತರರು ತಾವು ಯಾರು, ಕದನದೊಳ್–ಯುದ್ಧದಲ್ಲಿ, ಮುಟ್ಟಲ್–ಸೈಂಧವನನ್ನು ಸೋಕಲು, ಸಮರ್ಥರ್–ಶಕ್ತಿವಂತರು? ಎನೆ–ಎಂದು ಹೇಳಲು, ರಣದೊಳ್–ಯುದ್ಧದಲ್ಲಿ, ಗೆಲ್ವಾಸೆಯಂತಿರ್ಕೆ–ಗೆಲ್ಲುವ ಆಸೆ ಹಾಗಿರಲಿ, ಸಿಂಧು

ಕ್ಷಿತಿಪಂ–ಸಿಂಧುರಾಜನು, ಸೈಂಧವನು, ತಾಂ ಏನನಾದಂ ತಾನು ಏನಾದನೋ, ಅದನೆ–ಅದನ್ನೇ, ಆನುಂ–ನಾನೂ, ಅಪ್ಪೆಂ–ಆಗುತ್ತೇನೆ; ಪೋಗು–ಹೋಗಯ್ಯ ಅಥವಾ, ನರೇಂದ್ರ–ದುರ್ಯೋಧನನೇ, ಪೋಗು–ಹೋಗು, ಎಂದರೆ ಸೈಂಧವನಿಗೆ ಯುದ್ಧದಲ್ಲಿ ಯಾವ ಗತಿ ಬರುತ್ತದೊ ಅದೇ ಗತಿಗೆ ನಾನು ಹೋಗುತ್ತೇನೆ ಎಂದು ಭಾವ.

೧೨೭. ಬಿಜಯಂಗೆಯ್–ನೀನು ಹೋಗುವುದು, ಎನೆ–ಎನ್ನಲು, ನೃಪಂ–ದುರ್ಯೋಧನನು, ಪೋಪುದುಂ–ಹೋಗುತ್ತಲು, ಅದಂ–ಆ ವಿಷಯವನ್ನು, ಧರ್ಮಾತ್ಮಜಂ–ಧರ್ಮಪುತ್ರನು, ಕೇಳ್ದು–ಕೇಳಿ, ಅಜಿತಂಗೆ–ಶ್ರೀ ಕೃಷ್ಣನಿಗೆ, ಪೇೞ್ದು–ಹೇಳಿ, ಆ ಹರಿ ಪೇೞ್ದುದು ಒಂದು ನಯದಿಂದೆ–ಆ ಕೃಷ್ಣನು ಹೇಳಿದ ಒಂದು ನೀತಿಯಿಂದ, ಆ ರಾತ್ರಿಯೊಳ್–ಆ ಇರುಳಿನಲ್ಲಿ, ಪೋಗಿ–ಹೋಗಿ, ಕುಂಭಜನಂ–ದ್ರೋಣನನ್ನು, ಕಂಡು–ನೋಡಿ, ವಿನಮ್ರನಾಗಿ–ಬಾಗಿದವನಾಗಿ, ನಮಸ್ಕರಿಸಿದವನಾಗಿ, ನುಡಿದಂ ಹೇಳಿದನು, ಜಗತ್ಪೂಜಿತ–ಲೋಕಪೂಜ್ಯನಾದ ದ್ರೋಣನೇ, ನೀಂ–ನೀವು, ಇಂತು–ಹೀಗೆ, ಕೆಯ್ಕೊಂಡು ಕಾದೆ–ದುರ್ಯೋಧನನ ಪಕ್ಷವನ್ನು ವಹಿಸಿ ಯುದ್ಧ ಮಾಡಲು, ಬೆಟ್ಟನಾದೊಡೆ–ರಭಸವುಳ್ಳವನಾದರೆ, ಎಮಗೆ–ನಮಗೆ, ಇಂ–ಇನ್ನು, ಬಾೞ್ವಾಸೆ–ಬದುಕುವ ಆಸೆ, ಆವಾಸೆಯೋ–ಯಾವ ಆಸೆಯೋ?

೧೨೮. ನಿಮ್ಮಳವಂ–ನಿಮ್ಮ ಪ್ರತಾಪವನ್ನು, ಅಱಿದು–ತಿಳಿದು, ಮುನ್ನಂ–ಮೊದಲು, ನಿಮ್ಮಂ–ನಿಮ್ಮನ್ನು, ಪ್ರಾರ್ಥಿಸಿದೆಂ–ಬೇಡಿಕೊಂಡೆವು; ಈಗಳ್–ಈಗ, ಅದುವಂ–ಅದನ್ನೂ, ಮಱೆದಿರ್–ಮರೆತಿರಿ: ನಿಮ್ಮಯ–ನಿಮ್ಮ, ಧರ್ಮದ–ಕರುಣೆಯ, ದಯೆಯ, ಹುಕ್ಕಳಿವು–ಕಂದರಾಗಿದ್ದೇವೆ, ಎಮ್ಮಂ–ನಮ್ಮನ್ನು, ಕಡೆಗಣಿಸಿ–ಉಪೇಕ್ಷಿಸಿ, ನಿಮಗೆ–ನಿಮಗೆ, ನೆಗೞ್ವುದು–ಮಾಡುವುದು, ದೊರೆಯೇ–ಯೋಗ್ಯವೆ.

೧೨೯. ಎನೆ–ಎನ್ನಲು, ಗುರು–ದ್ರೋಣ, ಕರುಣಾರಸಮದು–ಆ ದಯೆಯ ಭಾವ, ಮನದಿಂ–ಮನಸ್ಸಿನಿಂದ, ಪೊಱಪೊಣ್ಮೆ–ಹೊರಕ್ಕೆ ಚಿಮ್ಮಲು, ನಿನಗೆ, ಜಯಮಕ್ಕುಂ–ಗೆಲವಾಗುತ್ತದೆ, ಅನಂತನ–ಶ್ರೀ ಕೃಷ್ಣನು, ಪೇೞ್ದ ತೆಱದೆ–ಹೇಳಿದ ರೀತಿಯಿಂದ, ನೆಗೞ್–ಮಾಡು, ಎನೆ–ಎನ್ನಲು. ನೃಪತಿ–ಧರ್ಮರಾಜ, ವಿನಯದೆ–ನಮ್ರತೆಯಿಂದ, ಬೀೞ್ಕೊಂಡು–ಅಪ್ಪಣೆಯನ್ನು ಪಡೆದು, ಬೀಡಂ–ಪಾಳೆಯವನ್ನು, ಪೊಕ್ಕಂ–ಪ್ರವೇಶಿಸಿದನು, ಬೀೞ್ಕೊಳ್ <ಬಿಡು> ಬೀಡು ಎಂದರೆ ಬಿಡುವಿಕೆ, ಅಗಲುವುದು + ಕೊಳ್.

**ವಚನ:** ತರಂಗೋಪಮಾನ–ಅಲೆಗಳಿಗೆ ಸಾಟಿಯಾದ, ದುಕೂಲಾಂಬರ ಪರಿಧಾನನುಂ–ರೇಷ್ಮೆಯ ವಸ್ತ್ರದ ಹೊದಿಕೆಯುಳ್ಳವನೂ; ಮಱಿದೊಱಗಿದ[ನಂ] –ಮರೆತುಮಲಗಿದವನನ್ನು, ಅಮೋಘಾಸ್ತ್ರ ಧನಂಜಯನಂ – ಅರ್ಜುನನನ್ನು, ಪುಂಡರೀಕಾಕ್ಷಂ–ಶ್ರೀ ಕೃಷ್ಣನು. ಈ ವಚನದ ಕೊನೆಯ ಪಂಕ್ತಿಯಲ್ಲಿ ಸ್ವಲ್ಪ ಪಾಠ

ಕ್ಲೇಶವಿದೆ. "ಮಱಿದೊಱಗಿದವೋಘಾಸ್ತ್ರ ಧನಂಜಯನಂ" ಎಂದು ಸರ್ವ ಪ್ರತಿಗಳ ಪಾಠ; ಇದನ್ನು ಹೀಗೆಯೇ ಇಟ್ಟುಕೊಂಡರೆ ಈ ವಾಕ್ಯಕ್ಕೆ ಕರ್ತೃಪದವಾದ ಆರೂಢ ಸರ್ವಜ್ಞಂ ಎಂಬುದಕ್ಕೆ ಕ್ರಿಯಾಪದವಿಲ್ಲವಾಗುತ್ತದೆ: ಆದ್ದರಿಂದ ಪಾಠವನ್ನು ಮಱಿದೊಱಗಿದ[ನ]ವೋಘಾಸ್ತ್ರ ಎಂದು ತಿದ್ದಿದೆ; ಇದರಲ್ಲೂ ಕೊಂಚ ಕ್ಲೇಶವಿದೆ; ಮಱಿದೊಱಗಿದನ್+ಅವೋಘಾಸ್ತ್ರ ಎಂದು ಬಿಡಿಸುವುದು ಉಚಿತವೆಂದು ಕಾಣುವುದಿಲ್ಲ; ಆದ್ದರಿಂದ ಇದನ್ನು ಮಱಿದೊಱಗಿದನನ್+ಅವೋಘಾಸ್ತ್ರ="ಮಱಿದೊಱಗಿದ[ನನ]ವೋಘಾಸ್ತ್ರ" ಎಂದು ತಿದ್ದಿದೆ, ಆಗ ಆರೂಢ ಸರ್ವಜ್ಞಂ, ಎಂಬುದಕ್ಕೆ ಆರೂಢ ಸರ್ವಜ್ಞನಂ ಎಂದು ಇಟ್ಟುಕೊಳ್ಳಬೇಕು, ಅನ್ವಯಿಸುವಾಗ.

೧೩೦. ಸೈಂಧವನಂ–ಜಯದ್ರಥನನ್ನು, ಆಜಿಯೊಳ್–ಯುದ್ಧದಲ್ಲಿ, ಕೊಲಲ್ಕೆ–ಕೊಲ್ಲಲು, ಅರಿದು–ಅಸಾಧ್ಯ, ಈತನ–ಅರ್ಜುನನು, ಪೂಣ್ದ–ಪ್ರತಿಜ್ಞೆ ಮಾಡಿದ, ಪೂಣ್ಕೆಯುಂ–ಪ್ರತಿಜ್ಞೆಯೂ, ಪಿರಿದು–ದೊಡ್ಡದು; ಅವನ್–ಅವನು, ಉಗ್ರಪಾಶುಪತಬಾಣದಿನಲ್ಲದೆ – ಭಯಂಕರವಾದ ಪಾಶುಪತಾಸ್ತ್ರದಿಂದಲ್ಲದೆ, ಸಾಯಂ – ಸಾಯನು: ಅಂತು–ಹಾಗೆ, ಹರಂ–ಶಿವನು, ಅದಂ–ಅದನ್ನು, ಒಸೆದು–ಮೆಚ್ಚಿ, ಇತ್ತುಂ–ಕೊಟ್ಟು, ಆದಱಮುಷ್ಟಿಯುಂ–ಅದರ ಮಂತ್ರವನ್ನೂ (?), ಈಯನೆ ಏನ್–ಏನು ಕೊಡನೆ? ಅದಂ–ಅದನ್ನು, ಆದರದೆ–ಭಕ್ತಿಯಿಂದ, ಬೇಡವೇೞ್ಪುದು–ಬೇಡಬೇಕಾಗಿದೆ, ಎಂದು, ಚಕ್ರಿ–ಕೃಷ್ಣನು, ಕಿರೀಟಿಯಂ–ಅರ್ಜುನನನ್ನು, ಶಿವನಲ್ಲಿಗೆ–ಶಿವನ ಬಳಿಗೆ, ಕೊಂಡೊಗೆದಂ- ಕರೆದುಕೊಂಡು ಹಾರಿದನು.

**ವಚನ:** ಮನಃ ಪವನವೇಗದಿಂ–ಮನಸ್ಸಿನ ಗಾಳಿಯ ವೇಗದಿಂದ, ತ್ರಿಣೇತ್ರನ – ಶಿವನ; ಅಭವಂ-ಶಿವನು, ಅತಿರಥನುಮಂ ಮಧುಮಥನನುಮಂ–ಅರ್ಜುನನನ್ನೂ ಕೃಷ್ಣನನ್ನೂ: ಅಮೃತದೃಷ್ಟಿಯಿಂ–ಅಮೃತದಂತಿರುವ ನೋಟದಿಂದ;

೧೩೧. ಅಪಗತ ಕಪಟದೆ–ಹೊರಟು ಹೋದ ಕಪಟದಿಂದ ಎಂದರೆ ನಿಷ್ಕಪಟದಿಂದ, ನಟಂ–ನಟರಾಜನಾದ ಶಿವನು, ಅದಂ–ಅದನ್ನು, ಆ ಮುಷ್ಟಿಯನ್ನು–ಮಂತ್ರವನ್ನು; ಉಪದೇಶಂಗೆಯ್ದು–ಉಪದೇಶಮಾಡಿ. ಪರಸಿ–ಹರಸಿ, ಪೋಗು–ಹೋಗು, ಎನೆ–ಎನ್ನಲು, ಪೊಡೆಮಟ್ಟು–ನಮಸ್ಕರಿಸಿ. ಪಸಾದಂ ಎಂದ–ಪ್ರಸಾದ, ಅನುಗ್ರಹ ಎಂದು ಹೇಳಿದ, ಹರಿಗನಂ–ಅರ್ಜುನನನ್ನು, ಉಪೇಂದ್ರಂ–ಕೃಷ್ಣನು, ಆ ದರ್ಭಶಯನತಳಕೆ–ಆ ದರ್ಭೆಯ ಹಾಸಿಗೆಯ ಮೇಲಕ್ಕೆ, ಇೞಿಪುವುದುಂ–ಇಳಿಸುತ್ತಲು,

**ವಚನ:** ನನಸಾಗೆಯುಂ–ಪ್ರತ್ಯಕ್ಷವಾಗಿ ಕಂಡಂತೆ ಆಗಿಯೂ; ಕನಸಿನಂದದಮಾಗಿ–ಕನಸಿನ ರೀತಿಯಾಗಿ; ಮಂಗಳ ಪಾಠಕರ ರವಂಗಳೊಳ್–ವಂದಿಮಾಗಧ ಮಂಗಳ ಗೀತೆಗಳ ಶಬ್ದಗಳಲ್ಲಿ, ಭೋಂಕನೆ-ಬೇಗನೆ, ಅನ್ನೆಗಂ–ಅಷ್ಟರಲ್ಲಿ.

೧೩೨. ತನ್ನ ಸುತನಅಲೊಳ್ – ತನ್ನ ಪುತ್ರಶೋಕದಲ್ಲಿ, ಅರ್ಜುನಂ – ಅರ್ಜುನನು, ಎನ್ನ–ನನ್ನ, ಉದಯಮುಂ–ಮೂಡುವುದನ್ನು, ಎಯ್ದೆ–ಚೆನ್ನಾಗಿ, ಪಾರ್ದು–ನಿರೀಕ್ಷಿಸಿ, ಪಗೆವರ – ಹಗೆಗಳ, ಚೇರೊಳ್ – ಜೇರಿನಲ್ಲಿ, ಬೆನ್ನೀರಂ – ಬಿಸಿ ನೀರನ್ನು, ಎಱೆಯದಿರಂ – ಹೊಯ್ಯದಿರನು, ಅದಂ – ಅದನ್ನು, ಅಂ – ನಾನು, ನೋಡುವೆಂ–ನೋಡುತ್ತೇನೆ, ಎಂಬ ತೆಱದಿಂ–ಎಂಬ ರೀತಿಯಿಂದ, ಇನಂ–ಸೂರ್ಯ, ಉದಯಿಸಿದಂ–ಹುಟ್ಟಿದನು.

**ವಚನ :** ನೆಲೆಯಿಂ ತಳರ್ವಂತೆ–ಇರುವ ಸ್ಥಳದಿಂದ ಚಲಿಸುವಂತೆ; ಆಸುವರದೊಳ್–ಯುದ್ಧದಲ್ಲಿ; ಪರಿಚ್ಛೇದಿಸಿ–ನಿಶ್ಚಯಿಸಿ; ಕನಕ ಕಳಶ ಸಂಭೃತ–ಚಿನ್ನದ ಕೊಡಗಳಲ್ಲಿ ತುಂಬಿದ; ನಿರ್ವರ್ತಿತ–ಮುಗಿಸಲ್ಪಟ್ಟ, ಸಂಧ್ಯೋಪಾಸನನುಂ–ಸಂಧ್ಯಾವಂದನೆಯನ್ನುಳ್ಳವನೂ, ಅರ್ಚಿತ ಶಿತಿಕಂಠನುಂ–ಪೂಜಿಸಲ್ಪಟ್ಟ ಶಿವನನ್ನುಳ್ಳವನೂ, ನೀರಾಜಿತ–ಆರತಿ ಮಾಡಿದ; ಇನಿಸು–ಸ್ವಲ್ಪ, ಮಾರ್ಕೊಂಡು–ಎದುರಿಸಿ, ಸಾಮಂತ ಚಕ್ರಮಂ–ಸಾಮಂತರ ಸಮೂಹವನ್ನು; ಇರಲ್ವೇಳ್ದು–ಇರುವಂತೆ ನಿಯಮಿಸಿ, ಶಕಟವ್ಯೂಹ – ಗಾಡಿಯಾಕಾರದ ಸೈನ್ಯರಚನೆ; ಶರಾಸನಾಚಾರ್ಯಂ – ಬಿಲ್ಲೋಜ, ದ್ರೋಣ; ರಥಾಂಗಧರನಂ–ಶ್ರೀ ಕೃಷ್ಣನನ್ನು; ಮೂಱುಸೂೞ್–ಮೂರು ಸಲ; ಬಲವಂದು–ಪ್ರದಕ್ಷಿಣೆ ಮಾಡಿ; ತವದೊಣೆಗಳಂ–ಅಕ್ಷಯವಾದ ಬತ್ತಳಿಕೆಗಳನ್ನು; ಅಮರೆ – ಸೇರಿಕೊಳ್ಳುವಂತೆ; ಜೇವೊಡೆದಾಗಳ್ – ಬಿಲ್ಲಿನ ಹೆದೆಯನ್ನು ಎಳೆದು ಟಂಕಾರ ಮಾಡಿದಾಗ;

೧೩೩. ಭವಂ–ಶಿವನು, ಭವನಗೋತ್ರದಿಂ – ಶಿವನ ಬೆಟ್ಟದಿಂದ ಎಂದರೆ ಕೈಲಾಸದಿಂದ, ಅಜಂ – ಬ್ರಹ್ಮನು, ಅಜಾಂಡದಿಂ – ಬ್ರಹ್ಮಾಂಡದಿಂದ, ಭಾನು – ಸೂರ್ಯನು, ಭಾನುವೀಥಿಯಿಂ – ಸೂರ್ಯನ ಮಾರ್ಗದಿಂದ ಎಂದರೆ ಆಕಾಶದಿಂದ, ಇಳಾತಳಂ – ಭೂಮಿ, ತಳದಿಂ – ಬುಡದಿಂದ, ಎಯ್ದೆ–ಚೆನ್ನಾಗಿ, ಕಿೞ್ತು–ಕಿತ್ತು, ಎೞ್ದು ಬರ್ಪಂತೆ – ಎದ್ದು ಬರುವ ಹಾಗೆ, ತೂಳ್ವ–ತಳ್ಳುವ, ಅವಾರ್ಯ ಭುಜವೀರ್ಯಮಂ – ತಡೆಯಲಶಕ್ಯವಾದ ಬಾಹುಬಲವನ್ನು, ನೆಱೆಯೆ– ಪೂರ್ಣವಾಗಿ, ತೋರ್ಪಿನಂ – (ಅರ್ಜುನ) ತೋರಿಸುತ್ತಿರಲು, ಕುಂಭಸಂಭವಂ – ದ್ರೋಣನು, ಮುರಲೆ=ಮಲರೆ–ಸಂತೋಷದಿಂದ ಮನಸ್ಸು ಅರಳಲು, ಎಂದರೆ ಸಂತೋಷಪಡಲು, ರಿಪುಕುರಂಗ ಕಂಠೀರವಂ – ಶತ್ರುಗಳೆಂಬ ಹುಲ್ಲೆಗೆ ಹುಲಿಯಾದ ಅರ್ಜುನನು, ತಾಗಿದಂ–ಸಂಘಟ್ಟಿಸಿದನು, ತಾಕಿದನು. (ಶ)ಮುಲರ್ತ್ತಲ್ – ಮನಮುಗಿೞ್ದಲ್ = ಮನದಲ್ಲಿ ಸಂತೋಷಪಡು; "ಜಸಂ ಜಸಯುಲಂಗಪೊಂದಿದೊಡೆ ಪೃಥ್ವಿಯೆಂಬರ್ ಬುಧರ್"

**ವಚನ :** ಪುಗಲೀಯದೆ – ಪ್ರವೇಶಿಸಲು ಬಿಡದೆ; ಉಱೆ ನೆಱೆಗೆಯ್ಯದೆ– ಚೆನ್ನಾಗಿ ಸೆರೆ ಹಿಡಿಯದೆ; ವಿನಯಾಸ್ತ್ರ–ವಿನಯವನ್ನು ತೋರುವ ಬಾಣ;

೧೩೪. ಕಮನೀಯಂ–ಸೊಗಸಾಗಿ, ಸೌಮ್ಯವಾಗಿ, ಬಲವಂದು–ಪ್ರದಕ್ಷಿಣೆ

ಮಾಡಿ, ಪೋಪನಂ-ಹೋಗುವವನನ್ನು ಎಲೇ-ಲೋ, ಪೋ ಪೋಗದಿರ್ ಪೋಗ ದಿರ್-ಹೋಗಬೇಡ ಹೋಗಬೇಡ, ಎನ್ನೊಡನೆ-ನನ್ನೊಡನೆ, ಸಮರಕ್ಕೆ-ಯುದ್ಧಕ್ಕೆ, ಅಂಜಿ-ಹೆದರಿ, ಪೋದೆ-ಹೋದೆ, ಎನಲ್-ಎನ್ನಲು, ನರಂ-ಅರ್ಜುನ, ದ್ರೋಣರಂ-ದ್ರೋಣಾಚಾರ್ಯರನ್ನು ಕುರಿತು, ಎಂದಂ-ಹೇಳಿದನು, ನಿಮಗಾಂ-ನಿಮಗೆ ನಾನು, ಅಂಜುವುದು-ಹೆದರುವುದು, ಎನ್ನ-ನನ್ನ, ಬಾಲತನದಿಂದೆ-ಬಾಲ್ಯದಿಂದ, ಅಂದು-ಆಗ, ಆದುದು-ಆಯಿತು, ಇಂದು-ಈಗ, ಆದುದೇ-ಆಯಿತೇ! ನಿಮಗೆ, ಆಂ-ನಾನು, ಅಂಜದೊಡೆ-ಹೆದರದಿದ್ದರೆ, ಯುದ್ಧದೊಳ್-ರಣದಲ್ಲಿ, ತ್ರೈಲೋಕ್ಯಮಂ-ಮೂರು ಲೋಕಗಳನ್ನು, ಅಂಜಿಸಲ್ - ಹೆದರಿಸಲು, ನೆಱೆವೆನೇ - ಸಮರ್ಥನಾಗುವೆನೆ?

ವಚನ: ಪದುಮನಾಭನ ಚೋದಿಸುವ-ಶ್ರೀ ಕೃಷ್ಣನು ಮುಂದೆ ಹಾಯಿಸುವ; ಸಾಧನದೊಳ್-ಸೈನ್ಯದಲ್ಲಿ;

೧೩೫. ಪೊಸಮಸೆಯಂಬು-ಹೊಸದಾಗಿ ಮಸೆದ ಬಾಣಗಳು, ಕಾರಮುಗಿಲ್ವೋಲ್-ಮಳೆಗಾಲದ ಮಳೆಯಂತೆ, ಕಱೆಯುತ್ತಿರೆ-ಸುರಿಯುತ್ತಿರಲು, ಅನಿತುಮಂ-ಅಷ್ಟನ್ನೂ, ನಿಜಮಾರ್ಗಣಕೋಟಿಯಿಂ-ತನ್ನ ಬಾಣಗಳ ತುದಿಗಳಿಂದ, ನೇರ್ದು-ಕತ್ತರಿಸಿ, ಸೀಳ್ದು - ಸೀಳಿ, ಖಂಡಿಸಿ - ಮುರಿದು, ಕಡಿದೊಟ್ಟಿ - ತುಂಡು ಮಾಡಿ ರಾಶಿ ಹಾಕಿ, ಸುಟ್ಟು - ಉರಿಸಿ, ತನ್ನ ಮೊನೆಯಂಬುಗಳಿಂ - ತನ್ನ ಮೊನಚಾದ ಬಾಣಗಳಿಂದ, ಚತುರಂಗಂ - ಚತುರಂಗ ಸೈನ್ಯವು, ಅಗುರ್ವಿಸೆ - ಹೆದರಲು, ತೆಗೆದೆಚ್ಚು-ಕಿವಿವರೆಗೆ ಸೆಳೆದು ಬಾಣಪ್ರಯೋಗಮಾಡಿ, ಎಯ್ದೆ-ಚೆನ್ನಾಗಿ, ಕೀಲಿಸೆ-ಬಾಣಗಳನ್ನು ನಾಟಿಸಲು, ಅಕಳಂಕರಾಮನಿಂ-ಅರಿಕೇಸರಿಯಿಂದ ಎಂದರೆ ಅರ್ಜುನನಿಂದ, ಪಡೆ-ಸೈನ್ಯ, ಚಿತ್ರದ-ಚಿತ್ತಾರದ, ಪಡೆಯಂತೆವೋಲ್-ಸೈನ್ಯದಂತೆ, ಆಯ್ತು-ಆಯಿತು.

೧೩೬. ಅಡಿ-ಪಾದಗಳು, ತೊಡೆ, ಪೊರ್ಕುಳುಂ-ಹೊಕ್ಕುಳೂ, ತೆಗಲೆ-ಹೆಗ್ಗತ್ತು, ಕೈ, ಕಣಕಾಲ್-ಕಾಲಿನ ಕೆಳಭಾಗ, ಕೊರಲ್-ಕೊರಳು, ಎಂಬಿವುಂ-ಎಂಬ ಇವುಗಳೂ, ಬೆರಲ್-ಬೆರಳು, ನಡು-ನಡುವು, ಉರ-ಎದೆ, ಬೆನ್-ಬೆನ್ನು, ಬಸಿಱ್-ಹೊಟ್ಟೆ, ತೊಳಕು-(?) ಕರ್ಚರ್ಕೆ-(?), ಮುಯ್ಯು-ಹೆಗಲು, ಮುಸುಂಬು-ಮೂತಿ, ಮೂಗು, ಪೆರ್ದೊಡೆ-ಹೆದ್ದೊಡೆ, ಕಟಿ-ಸೊಂಟ, ಮುಮ್ಮಡಂ-ಕಾಲ ಹರಡಿನ ಮುಂಭಾಗ, ಪರಡು-ಕಾಲಿನ ಹರಡು, ಸಂದಿ-ಕೀಲು, ನೊಸಲ್-ಹಣೆಯ ಭಾಗ, ಪಣೆ-ಹಣೆ, ಕಣ್-ಕಣ್ಣುಗಳು, ಕದಂಪು-ಕೆನ್ನೆ, ಇವು ಎಂಬ-ಇವುಗಳು ಎನ್ನುವ, ಎಡೆಯನೆ-ಸ್ಥಳಗಳನ್ನೇ, ಪಾರ್ಥನಂಬುಗಳ್-ಅರ್ಜುನನ ಬಾಣಗಳು, ನಟ್ಟುವು - ನಾಟಿದುವು, ಉರ್ಚಿದುವು - ಸೀಳಿದುವು, ನೇರ್ದುವು-ಕತ್ತರಿಸಿದುವು, ಸೀಳ್ದುವು-ಹೋಳು ಮಾಡಿದುವು.

ವಚನ: ಮಾಱಾಂತ-ಎದುರಿಸಿದ, ಮಾರ್ಪಡೆಯೆಲ್ಲಮಂ-ಎದುರು ಸೈನ್ಯ

ವನ್ನೆಲ್ಲ ; ಜವನ–ಯಮನ, ಒಕ್ಕಲಿಕ್ಕಿ–ಒಕ್ಕಲಾಗಿ ಮಾಡಿ ; ಪೆಸೆದ–ಹೆಸೆದು ಕೊಂಡ, ತೊಡರಿಕೊಂಡ ; ಆನೆ ಮೆಟ್ಟಿದ ಕುಳುಂಪೆಯ ನೀರಂತೆ–ಆನೆ ತುಳಿದಾಡಿದ ಹೊಂಡದ ನೀರಿನಂತೆ : ಎಬ್ಬಿಟ್ಟಿ–ಎಬ್ಬಿಸಿ ಓಡಿಸಲು ; ಮಕುಟವರ್ಧನರಂ–ರಾಜ ರನ್ನು ; ನಡುವಗಲಿೞಿವಿನಂ–ಮಧ್ಯಾಹ್ನ ಇಳಿಯುತ್ತಿರಲು ; ನೀರ್ಗೊಳಿಕ್ಕಲೆಂದು– ಸ್ನಾನಮಾಡಿಸಬೇಕೆಂದು ;

೧೩೭. ಚಾತುರಂಗಬಳಂ–ಚತುರಂಗ ಸೈನ್ಯವೂ, ಅಳ್ಕುಱದೆ–ಭಯಪಡದೆ, ಅಂತ – ಎದುರಿಸಿದ, ಮಹಾರಥರ್ಕಳುಂ–ಮಹಾರಥಿಕರೂ, ಅೞಿದುದು–ನಾಶ ವಾಯಿತು ; ಒಡ್ಡಣಂ–ಸೈನ್ಯವು, ಕೞಿಕುಱಿಮಾದುದು–ಚೆಲ್ಲಾಪಿಲ್ಲಿಯಾಯಿತು, ತಲೆದೋಱಲೆ–ತಲೆಯನ್ನು ತೋರಿಸುವುದಕ್ಕೇ ಎಂದರೆ ಸಮ್ಮುಖವಾಗಿ ನಿಲ್ಲು ವುದಕ್ಕೇ, ಗಂಡರಿಲ್ಲ–ಶೂರರು ಇಲ್ಲ ; ಇನ್ನಿನಿಸು–ಇನ್ನು ಸ್ವಲ್ಪ, ಜೇಗದೆ–ಹೊತ್ತಿ ನಲ್ಲಿ, ಸೈಂಧವನಂ–ಜಯದ್ರಥನನ್ನು, ತೊತ್ತುೞದುೞಿದಪ್ಪಂ–ಚೆನ್ನಾಗಿ ತುಳಿದು ಬಿಡುತ್ತಾನೆ ; ನೆಗೞ್ತೆಯಂ–ಕೀರ್ತಿಯನ್ನು, ಗೞಿಯಿಸಿಕೊಳ್ವೊಡೆ–ಸೇರಿಸಿಕೊಳ್ಳ ಬೇಕಾದರೆ, ಪಡೆಯಬೇಕಾದರೆ, ಇನ್ನಿನಿಸು–ಇನ್ನೂ ಸ್ವಲ್ಪ, ತಱಿಸಂದು–ನಿಶ್ಚ ಯಿಸಿ, ನಿಂದು–ನಿಂತುಕೊಂಡು, ಪಾರ್ಥನೊಳ್–ಅರ್ಜುನನಲ್ಲಿ, ಇಱಿಯಿಂ–ಯುದ್ಧ ಮಾಡಿರಿ.

**ವಚನ :** ದ್ರೋಣಾಚಾರ್ಯಂ ಮುಗುಳ್ನಗೆ ನಕ್ಕು–ಈ ನಗೆಯ ಇಂಗಿತ ? ದುರ್ಯೋಧನನ ಮಾತುಗಳನ್ನು ಹಗುರವಾಗಿ ಪರಿಗಣಿಸುವುದು ; ಅರ್ಜುನನ ಪರಾ ಕ್ರಮ ಈಗಲಾದರೂ ತಿಳಿಯಿತಲ್ಲ ಎಂಬ ಸಂತೋಷ ; ಇಳಿಸಿ ನುಡಿವ–ತಿರಸ್ಕರಿಸಿ ಮಾತಾಡುವ ; ಎಣಗೋಣಂಗಳುಂ–ಗರ್ವವಕ್ರತೆಗಳೂ, ಎಕ್ಕಸಕ್ಕತನಂಗಳುಂ–ನಿಂದೆ ಪರಿಹಾಸಗಳೂ, ಎತ್ತವೋದುವು–ಎಲ್ಲಿ ಹೋದುವು, ಎಣಗೋಣ : ಇದಕ್ಕೆ ಏಣ ಗೋಣ ಎಂಬ ರೂಪವೂ ಉಂಟು : ಬ್ರಹ್ಮಶಿವನ ಕೆಳಗಿನ ಪ್ರಯೋಗಗಳನ್ನು ನೋಡಿ; ಅತಿಮಾರ್ಗನೆಕ್ಕಸಕ್ಕಂ । ಸಿತಗಂ ಚಳಬಳಿಗನೇಣಗೋಣಂ ಮೂರ್ಖಂ ॥ ಮತಿ ಹೀನನದಱಿಂ ಜಿನ । ಮತಮಂ ಕೇಳ್ದಾಗಮ ಸುಮನಸಕ್ಕುಮವಶ್ಯಂ ॥ ೩–೫೫ ; ನೆೞಲಂ ನೋಡಿ ತುಱುಂಬನೋಸರಿಸುತುಂ ತುಂತೆನ್ನನುಂ ಪಾಡುತುಂ । ಪೞಿವುತ್ತುಂ ಸುಚರಿತ್ರದೊಂದೆಸಕಮಂ ಪಣ್ಯಾಂಗನಾನೀಕದೊಳ್ ॥ ಕೆಳೆಗೊಂಡಾಡುತುಮೇಣ ಗೋಣ ತನದಿಂ ಮಾತಾಡುತುಂ ರಾಗದಿಂ । ಸುೞಿವುತ್ತಿರ್ದಪರಂತಿರಾರ್ಹತರದೇನೆ ಗೆಯ್ದೊಡಂ ಬಲ್ಲರೇ ॥ ೬–೩೯, (ತ) ಏಣ್ ಕೋಣ್–ವಕ್ರವಾದ ಮಾತು ; ಏಣ್ ಗೋಣಾನ ಪೇಚ್ಚು ; ಗರ್ವದ ಮಾತು, ಗರ್ವಪ್ಪೇಚ್ಚು ; ಎಕ್ಕಸಕ್ಕ=(ತ) ಎಕ್ಕಚ್ಚಕ್ಕಂ–ತಾರುಮಾರು, ಅಂಕು ಡೊಂಕು=(ತೆ) ಎಕ್ಕಸಕ್ಕಮು–ಅಪಹಾಸ್ಯ, ಗೇಲಿ, ನಿಂದೆ.

೧೩೮. ನಿನಗರಸಾಳ್ತನಂ ನುಡಿವ : ನಿನಗೆ, ಅರಸ–ರಾಜನೇ, ಆಳ್ತನಂ ನುಡಿವ–ಪರಾಕ್ರಮದ ಮಾತುಗಳನ್ನು ಹೇಳುವ ಅಥವಾ ನಿನಗೆ, ಅರಸಾಳ್ತನಂ–

ರಾಜಭಟತನವನ್ನು ಎಂದರೆ ರಾಜನ ಇಂಗಿತಕ್ಕೆ ಅನುಸಾರವಾಗಿ ನುಡಿಯುವ ಅರಸಾಳಿನ ತನವನ್ನು, ನುಡಿವ–ಹೇಳುವ, ಬೀರರ–ವೀರರ, ಬೀರದ–ಶೌರ್ಯದ, ಆಳ್ಕೆ–ವ್ಯಾಪ್ತಿ, ಆಧಿಕ್ಯ, ವಿಕ್ರಮಾರ್ಜುನನೊಳ್–ಅರ್ಜುನನಲ್ಲಿ, ಏಕೆ ಸಲ್ಲದು–ಏಕೆ ಸಲ್ಲುವುದಿಲ್ಲ? ಎನಗೆ–ನನಗೆ, ಆತಂ–ಅವನು, ಆ ಅರ್ಜುನ, ಅಸಾಧ್ಯಂ–ಗೆಲ್ಲಲಾಗದವನು, ಅವಧ್ಯಂ–ಕೊಲ್ಲಲಾಗದವನು, ಆನುಂ–ನಾನೂ, ಈ ಮೊನೆಯೊಳ್–ಈ ಯುದ್ಧಮುಖದಲ್ಲಿಯೇ ನಿಂದು–ನಿಂತು, ಕಾದಿದಪೆಂ–ಹೋರಾಡುತ್ತೇನೆ; ಅನ್ನೆಗಂ–ಅಲ್ಲಿಯವರೆಗೆ, ನೀಂ–ನೀನು, ಎನ್ನವರೂಥಸೂತ ಕೇತನ ಕವಚಂಗಳಿಂ–ನನ್ನ ರಥಸಾರಥಿ ಧ್ವಜ ಕವಚ ಗಳಿಂದ, ನೆಱೆದು–ಸಮರ್ಥನಾಗಿ, ಜಗದೇಕಮಲ್ಲನೊಳ್–ಅರ್ಜುನನಲ್ಲಿ, ತಳ್ತು–ಎದುರಿಸಿ, ಇಱಿ–ಯುದ್ಧಮಾಡು.

ವಚನ: ಅಭೇದ್ಯಕವಚಮಂ–ಭೇದಿಸಲಾಗದ ಕವಚವನ್ನು; ಶರಾಸನ–ಬಿಲ್ಲು; ಕಳಸಕೇತನವರೂಥನಾಗಿ–ಕಲಶಧ್ವಜದಿಂದ ಕೂಡಿದ ರಥವುಳ್ಳವನಾಗಿ, ಎಂದರೆ ದ್ರೋಣನ ರಥವನ್ನುಳ್ಳವನಾಗಿ.

೧೩೯. ತಡೆಯದೆ–ತಡಮಾಡದೆ, ರಾಜರಾಜಂ–ದುರ್ಯೋಧನನು, ಇದಿರಂ ಬರೆ–ಎದುರು ಬರಲು, ಭೋರ್ಗರೆದು–ಭೋರೆಂದು ಶಬ್ದಮಾಡಿ, ಎಚ್ಚೊಡೆ–ಬಾಣ ಪ್ರಹಾರ ಮಾಡಿದರೆ, ಅಂಬುಗಳ್–ಬಾಣಗಳು, ನಡದೆ–ನಾಟಕೊಳ್ಳದೆ, ಸಿಡಿಲ್ವುದುಂ–ಸಿಡಿಯುತ್ತಲೂ, ಕರತಳದ್ವಯಮಂ–ಎರಡು ಅಂಗೈಗಳನ್ನು, ಬಿರಿಯೆಚ್ಚು–ಬಿರಿಯು ವಂತೆ ಹೊಡೆದು, ಕೆಯ್ದುವಂ–ಆಯುಧವನ್ನು, ಪಿಡಿವ–ಹಿಡಿಯುವ, ಅದಟಿಲ್ಲಮಂ–ಶಕ್ತಿಯನ್ನೆಲ್ಲ, ಕಿಡಿಸಿ–ಕೆಡಿಸಿ, ಅಮರೇಂದ್ರನಂದನಂ–ಅರ್ಜುನ, ಭೀಮಂ–ಭೀಮ ಸೇನನು, ಆತನಂ–ಆ ದುರ್ಯೋಧನನನ್ನು, ಮಡಿಪುವೆಂ–ಸಾಯಿಸುತ್ತೇನೆ, ಎಂದ ಪೂಣ್ಕೆ–ಎಂಬ ಪ್ರತಿಜ್ಞೆ, ಪುಸಿಯಾದಪುದು–ಸುಳ್ಳಾಗುವುದು, ಎಂದು, ತಾಂ–ತಾನು, ಕೊಲಲ್–ಕೊಲ್ಲಲು, ಒಲ್ಲನೆ–ಇಷ್ಟಪಡನೆ!

ವಚನ: ಕೆಯ್ಕೊಳಲ್–ಸ್ವೀಕರಿಸಲು ಎಂದರೆ ಬೆಂಬಲವಾಗಿ ರಕ್ಷಿಸಲು; ಎಡೆಗೊಂಡು–ನಡುವೆ ಆಕ್ರಮಿಸಿ,ಅಡ್ಡಗಟ್ಟಿ.

೧೪೦. ಪೋಗದಿರ್–ಹೋಗಬೇಡ, ಎಂದು ಮೂದಲಿಸೆ–(ಭೂರಿಶ್ರವನು) ಅವಹೇಳನ ಮಾಡಲು, ಸಾತ್ಯಕಿ–ಸಾತ್ಯಕಿಯು, ತೀವ್ರ ಶರಾಳಿಯಿಂದೆ–ತೀಕ್ಷ್ಣ ವಾದ ಬಾಣ ಸಮೂಹಗಳಿಂದ, ಅಗುರ್ವಾಗೆ–ಭಯವುಂಟಾಗಲು, ವರೂಥಮಂ–ರಥವನ್ನು, ಕಡಿದೊಡೆ–ಕತ್ತರಿಸಿದರೆ, ಆತಂ–ಅವನು, ಉರ್ಚಿದ–ಕಿತ್ತ, ಬಾಳ್ವೆರಸು–ಕತ್ತಿಯೊಡನೆ, ಎಯ್ತೆವಂದು–ಹತ್ತಿರ ಬಂದು, ಆಗಳ್–ಆಗ, ಇದಿರ್ಚೆ–ಎದುರಿಸಲು, ತಾನುಂ–ತಾನು ಕೂಡ, ಅಸಿಯುಂ–ಕತ್ತಿಯನ್ನು, ಸೆರಗಿಲ್ಲದೆ ಕಿೞ್ತು–ಭಯವಿಲ್ಲದೆ ಕಿತ್ತು, ಪಾಯ್ದು–ನುಗ್ಗಿ, ಭೂಭಾಗ ನಭೋವಿಭಾಗವರಂ–ಭೂಮಿ ಆಕಾಶ ಪ್ರದೇಶ ಗಳವರೆಗೆ, ಅಳ್ಕುಱೆ–ಭಯವುಂಟಾಗಲು, ವಿರೋಧಿಗಳ್–ವೈರಿಗಳು, ತಳ್ತಿಱಿದರ್–ಎದುರಿಸಿ ಯುದ್ಧ ಮಾಡಿದರು.

ವಚನ: ಬಿಂಕಮುಮಂ-ಗರ್ವವನ್ನೂ; ಪಾಸವಣ-ಪಾಸಿವಾಳದ ಹೂ; ದಂಡೆಯುಂ-ಹಾರವನ್ನು; ತೋರದ - ದೊಡ್ಡವಾದ, ಇಂಡೆಯಾಡಿದಂತೆ - ರಾಶಿ ಹಾಕಿದಂತೆ; ಇಂಡೆಗಳುಂ-ರಾಶಿಗಳೂ; ನಾರಂಗ ಪಕಳವಟ್ಟೆಯ ಪಱಿಯಿಗೆಗಳಂತೆ- ಕಿತ್ತಳೆಯ ಮತ್ತು ಬಣ್ಣಬಣ್ಣದ ಬಟ್ಟೆಗಳ ಬಾವುಟಗಳಂತೆ; ಮಿಳಿರ್ದು ಮಿಳ್ಳಿಸಿ- ಅತ್ತ ಇತ್ತ ಹೊರಳಾಡಿ ಚಲಿಸಲು, "ಮಿಳಿರ್ ಉಃತನೇ"; ಮಿಳ್ಳಿಸು-''ಸರಿಸುರಿಯೆ ಮಿಂಚು ಮಿಳ್ಳಿಸೆ'' (ಪಂಪರಾ. ೧-೮೧), ''ಮಿಳಿರ್ದು ಮಿಳ್ಳಿಸೆ ವಾನರ ಕೇತನಂ'' (ಪಂಪರಾ. ೧೩ - ೧೧೯); ಪಾಱುವ ನೆತ್ತರ ಸುಟ್ಟುರೆಗಳುಂ-ಮೇಲಕ್ಕೆ ಹಾರುವ ರಕ್ತದ ಸುಂಟರುಗಾಳಿಗಳೂ (?);

೧೪೧. ನರನೆಚ್ಚೊಡೆ-ಅರ್ಜುನನು ಬಾಣಪ್ರಯೋಗ ಮಾಡಿದರೆ, ಕರ- ಕೈ, ಪಱಿದು-ಕತ್ತರಿಸಿ, ಕರವಾಳ್-ಕತ್ತಿ, ಒಡನೆ-ಕೂಡಲೆ, ಕಾಸಿ ಬೆಚ್ಚಂತೆ- ಕಾಸಿ ಬಿಸುಗೆ ಹಾಕಿದಂತೆ, ಅಮರೆ-ಸೇರಿಕೊಂಡಿರಲು, ವಸುಂಧರೆಯೊಳ್-ನೆಲದಲ್ಲಿ, ಬಿಟ್ದು-ಬಿದ್ದು, ಇರ್ದುದು-ಇತ್ತು; ಭೂರಿಶ್ರವನಾ-ಭೂರಿಶ್ರವನ, ಪ್ರಣಿಸಿದ- ಪ್ರತಿಜ್ಞೆ ಮಾಡಿ ಹಿಡಿದ, ಮುಷ್ಟಿ, ಏಂ ತಿರಮೋ-ಏನು ಸ್ಥಿರವಾದದ್ದೋ?

ವಚನ: ತನ್ನೇಱಂಗೆ-ತನ್ನ ಯುದ್ಧಕ್ಕೆ, ತಾನೇ ಸಿಗ್ಗಾಗಿ-ತಾನೇ ನಾಚಿ; ಸೊರ್ಕುತ್ತಂ-ಕೊಬ್ಬುತ್ತ;

೧೪೨. ನಿಡುವಗೆ-ದೀರ್ಘಕಾಲದ ಶತ್ರು, ಸೈಪಿನಿಂದೆ - ಪುಣ್ಯವಶದಿಂದೆ, ದೊರೆಕೊಂಡುದು - ದೊರೆಯಿತು; ಗದೆಗೊಂಡೆನಪ್ಪೊಡೆ - ಗದೆಯನ್ನು ತೆಗೆದು ಕೊಂಡವನಾದರೆ, ಇವರ್-ದುಶ್ಶಾಸನಾದಿಗಳು, ಈಗಡೆ-ಈಗಲೇ, ಪರೆದಪರ್- ಚೆದರಿಬಿಡುತ್ತಾರೆ; ಇವಂದಿರಂ-ಇವರನ್ನು, ಎಚ್ಚು-ಬಾಣಪ್ರಹಾರ ಮಾಡಿ, ತವೆ- ನಾಶವಾಗುವಂತೆ, ಕೊಲ್ವೆಂ-ಕೊಲ್ಲುತ್ತೇನೆ: ಎಂದು-ಎಂಬುವಾಗಿ, ನಚ್ಚಿನ- ನಂಬಿಕೆಯ ಎಂದರೆ ಆತ್ಮವಿಶ್ವಾಸದ, ಅಚ್ಚು-ಮುದ್ರೆ; ಉಡಿವಿನಂ-ಮುರಿಯು ತ್ತಿರಲು, ಎಚ್ಚೊಡೆ-ಬಾಣ ಘಾತಮಾಡಲು, ಎಚ್ಚೆಡೆಯಿಂ-ಹೊಡೆದ ಸ್ಥಳದಿಂದ ಎಂದರೆ ಗಾಯಗಳಿಂದ, ಅರುಣಾಂಬು-ರಕ್ತ, ಕಲಂಕಿ-ಕದಡಿ, ಪಾಯೆ-ಹರಿಯಲು, ಅಂಧನೃಪಾಲನಂದನರ್ - ಧೃತರಾಷ್ಟ್ರನ ಮಕ್ಕಳು, ಮರುತ್ತನೂಜನಾ - ಭೀಮ ಸೇನನ, ಮುನ್ನಡಿಯೊಳ್-ಅಡಿಯ ಮುಂಭಾಗದಲ್ಲಿ, ಉರುಳ್ದರ್-ಉರುಳಿದರು.

ವಚನ: ನಿಶಿತ ವಿಶಿಖಹತಿಯಿಂ-ಹರಿತವಾದ ಬಾಣಗಳ ಏಟಿನಿಂದ, ಮುಟ್ಟೆ ವರ್ಪಾಗಳ್-ಸಮೀಪಕ್ಕೆ ಬರುವಾಗ, ಆಳ್ದನ-ಸ್ವಾಮಿಯಾದ ದುರ್ಯೋಧನನ; ಸಾವಂ-ಸಾವನ್ನು ಎಂದರೆ ಸಾವಿಗೆ ಸಮಾನವಾದ ಮೂರ್ಛೆಯನ್ನು.

೧೪೩. ಎಡೆಗೊಂಡು-ದುರ್ಯೋಧನನ ಭೀಮನ ನಡುವೆ ಪ್ರವೇಶಿಸಿಕೊಂಡು, ಅಂಕದ ಕರ್ಣಂ-ಹೆಸರುವಾಸಿಯಾದ ಕರ್ಣನು, ಎಯ್ದೆವರೆ-ಹತ್ತಿರಕ್ಕೆ ಬರಲು, ದಿವ್ಯಾಸ್ತ್ರಂಗಳಿಂದಂ - ಶ್ರೇಷ್ಠವಾದ ಬಾಣಗಳಿಂದ, ಸಿಡಿಲ್ ಪೊಡೆವಂತಪ್ಪಿನಂ -ಸಿಡಿಲು ಹೊಡೆಯುವ ಹಾಗೆ ಆಗುತ್ತಿರಲು, ಉದಗ್ರರಥಮಂ - ಶ್ರೇಷ್ಠವಾದ

ರಥವನ್ನು, ಎಚ್ಚು-ಹೊಡೆದು, ಮುಯ್ಯೇೞುಸೂೞ್ - ಇಪ್ಪತ್ತೊಂದು ಸಲ, ಕಡಿಯಲ್-ಕತ್ತರಿಸಲು, ಸಾರ್ದೊಡೆ-ಬಂದರೆ, ಸೂತಸುತಂ-ಕರ್ಣನು, ಅೞಲ್ದು-ವ್ಯಥೆಗೊಂಡು, ಒಂದು ಉಗ್ರೇಷುವಿಂ-ಒಂದು ಭಯಂಕರ ಬಾಣದಿಂದ, ತಿಣ್ಣಂ ಎಚ್ಚು-ತೀವ್ರವಾಗಿ ಪ್ರಯೋಗಿಸಿ, ಭೀಮಂ-ಭೀಮನು, ನಸುಮುಚ್ಚಿವೋಗಿ-ಸ್ವಲ್ಪ ಮೂರ್ಛೆಗೊಂಡು, ರಥದೊಳ್-ರಥದಲ್ಲಿ, ನರಳ್ವನ್ನೆಗಂ-ನರಳುತ್ತಿರಲು, ಅರ್ದಂ-ಗರ್ಜಿಸಿದನು

ವಚನ : ಬಿಲ್ಲಂಕೋದು-ಬಿಲ್ಲನ್ನು ಎಂದರೆ ಬಿಲ್ಲಿನ ಹಗ್ಗವನ್ನು, ಕೋದು-ಭೀಮನ ಕೊರಳಿಗೆ ಸುತ್ತಿ ; ಮೇಗಿಲ್ಲದೆ-ಮೇಲಿಲ್ಲದೆ ಎಂದರೆ ಅಸಮಾನವಾಗಿ, ತೆಗೆದು-ಎಳೆದು,

೧೪೪. ತಾಂ ಗಡಂ-ತಾನಲ್ಲವೆ, ಎನ್ನಾಳ್ದನ-ನನ್ನ ಸ್ವಾಮಿ ದುರ್ಯೋಧನನ, ತೊಡೆಯುಂ-ತೊಡೆಗಳನ್ನು, ಇಂ ಉಡಿವನ್-ಇನ್ನು ಮುರಿಯುತ್ತಾನೆ! ಇವನ್-ಇವನು, ಎನ್ನೊಳಂ-ನನ್ನಲ್ಲಿಯೂ, ಕಾದುವಂ-ಯುದ್ಧ ಮಾಡುತ್ತಾನೆ! ಎಂದು ಅಂಗಪತಿ ನುಡಿದು-ಎಂದು ಕರ್ಣ ಹೇಳಿ, ಅಂಬಿಕೆಗೆ-ತಾಯಿ ಕುಂತಿಗೆ, ನುಡಿದ ನುಡಿ-ಹೇಳಿದ ಮಾತು, ಭಾಷೆ, ಮನದೊಳ್-ಮನದಲ್ಲಿ, ನಿಲೆ-ನಿಲ್ಲಲು, ಕೊಲ್ಲದೆ, ತಾಂಗಿದಂ-ತಡೆದನು, ಎಂದರೆ ಕೊಲ್ಲದೆ ಬಿಟ್ಟನು. ತಾಂಗು-ತಡೆ, ತಡಮಾಡು, ''ನಿಲಲ್ವೇೞ್ಕುಮೆಂದು ಪೋಗಲೀಯದೆ, ಕಾಲಂ ಪಿಡಿದು, ತಾಂಗುತ್ತಿರ್ಪನ್ನೆಗಂ'' (ವಡ್ಡಾ. ೧೧೭), (ತ) ತಾಂಗು-ತಡುತ್ತಲ್.

ವಚನ : ಚಾಣೂರಾರಿ-ಕೃಷ್ಣ ; ಜರಾಸಂಧಾರಿಯ-ಭೀಮನ ; ಮುನ್ನೆಗೆದ-ಮೊದಲು ಚಿಮ್ಮಿದ, ತಲೆದೋರಿದ ; ಮನಃಕ್ಷತಂಬಟ್ಟು-ಮನದಲ್ಲಿ ನೊಂದು : ಆರಯಲ್-ವಿಚಾರಿಸಲು ; ಸೈಂಧವನ ಮೊನೆಯೊಳ್-ಸೈಂಧವನ ಯುದ್ಧದಲ್ಲಿ ; ಪೆಱಗಿಕ್ಕಿ-ಹಿಂದಿಕ್ಕಿ, ಮುಂದೆ ಬಂದು ;

೧೪೫. ದಿನಕರಂ-ಸೂರ್ಯನು, ಅಸ್ತಮಸ್ತಕಮಂ - ಅಸ್ತಗಿರಿಯ ನೆತ್ತಿಯನ್ನು, ಆಸೆವಡಲ್-ಬಯಸಲು, ಬಗೆದಪ್ಪಂ-ಎಣಿಸುತ್ತಿದ್ದಾನೆ ಎಂದರೆ ಸೂರ್ಯ ಮುಳಗಲು ಬಯಸುತ್ತಿದ್ದಾನೆ; ಏಕೆ-ಯಾತಕ್ಕೆ, ಕೆಮ್ಮನೆ-ಸುಮ್ಮನೆ, ತಡೆವೈ-ತಡಮಾಡುತ್ತೀಯೆ ? ಜಯದ್ರಥನಂ ಇಕ್ಕು-ಜಯದ್ರಥನನ್ನು ಹೊಡೆ, ಕೊಲ್ಲು ; ಆರೊಳಂ-ಯಾರಲ್ಲಿಯೂ, ತೊಡಂಕವೇಡ-ತೊಡಕಿಕೊಳ್ಳಬೇಡ ; ಎಂದು ಎನುತಂ-ಎಂದು ಹೇಳುತ್ತ, ಅಜಂ-ಶ್ರೀ ಕೃಷ್ಣನು, ಮರುಜ್ಜವದೆ - ವಾಯುವೇಗದಿಂದ, ಚೋದಿಸೆ-ರಥವನ್ನು ಹಾಯಿಸಲು, ಪಾರ್ಥನ-ಅರ್ಜುನನ, ದೇವದತ್ತನಿಸ್ವನದೊಳ್-ದೇವದತ್ತವೆಂಬ ಶಂಖದ ನಾದದೊಡನೆ, ತೀವಿ-ತುಂಬಿ, ಅಜಾಂಡಮಂಡಳಂ-ಬ್ರಹ್ಮಾಂಡ ಮಂಡಲವು, ಪೊಟ್ಟನೆ-ಫಟ್ಟನೆ, ಒಡೆವಂತೆವೊಲ್ - ಒಡೆಯುವ ಹಾಗೆ, ಆದುದು-ಆಯಿತು.

೧೪೬. ರಣರಂಗದಲ್ಲಿ ಅರ್ಜುನನ ರಥ ಓಡಿದ್ದು : ಚಟುಳಿತ . . ತಳಂ :

ಚಟುಳಿತ–ವೇಗವಾಗಿ ಚಲಿಸುತ್ತಿರುವ, ಚಕ್ರನೇಮಿ–ಗಾಡಿಯ ಬಳೆಯ, ಪರಿವರ್ತನ–ಹೊರಳುವಿಕೆಯ, ಘಟ್ಟನ – ಹೊಡೆತದ, ಘಾತ – ಏಟಿನಿಂದ, ನಿರ್ಭರ – ಭರಿಸಲ ಸಾಧ್ಯವಾಗಿ, ಸ್ಫುಟಿತ – ಸೀಳಿದ, ಧರಾತಳಂ – ಭೂಮಿಯ ಪ್ರದೇಶವನ್ನುಳ್ಳ; ವಿಜಯಸುಗ್ರರಥಂ – ಅರ್ಜುನನ ಭಯಂಕರ ರಥವು, ಘಟಾಘಟಿತ – ಆನೆಗಳ ಗುಂಪಿನಿಂದ ಕೂಡಿದ, ಹಟದ್ವಿರೋಧಿರುಧಿರಪ್ರವ – ಶತ್ರುಗಳ ಹೊಳೆಯುತ್ತಿರುವ ರಕ್ತ ಪ್ರವಾಹದ, ಲಂಪಟ–ಆಸಕ್ತಿಯುಳ್ಳ, ಸಂಕಟಂ–ಸಮ್ಮರ್ದದ, ಉತ್ಕಟಂ–ಅತಿಶಯತೆಯನ್ನುಳ್ಳುದು, ಕಟಕಟಘಾತ ನಾಕತಟ ಸಂಕಟಂ–ಕಟಕಟವೆಂಬ ಹೊಡೆತದಿಂದ ಸ್ವರ್ಗಕ್ಕೆ ಸಂಕಟವನ್ನುಂಟುಮಾಡುವುದು, ಸಂಗರ ರಂಗಭೂಮಿಯೊಳ್ – ಯುದ್ಧಾಂಗಣದಲ್ಲಿ, ಪರಿದತ್ತುದಲ್ – ಓಡಾಯಿಸಿತು. ಅಲ್ಲವೆ? ಈ ಪದ್ಯದಲ್ಲಿ ಟಕಾರದ ಅನುಪ್ರಾಸ ಕರ್ಕಶತೆಯನ್ನು ಬಿಂಬಿಸುತ್ತ ರಥ ಓಡಿದ್ದನ್ನು ಶಬ್ದಮೂಲಕವಾಗಿಯೇ ಚಿತ್ರಿಸುತ್ತಿದೆ; ನಾಕತಟ ಸಂಕಟ – ಪ್ರಕೃತಿ ಪ್ರಯೋಗ, ನಾಕತಟಸಂಕಟಂ–ಎಂದು ಪ್ರಥಮಾಂತವಾಗಿರಬೇಕು.

**ವಚನ** : ಭಯಜ್ವರಮುಂ-ಭಯವೆಂಬ ಜ್ವರವೂ; ಮಹೇಶ್ವರ ಜ್ವರಮುಂ–ಶಿವನ ಹಣೆಗಣ್ಣಿನಿಂದ ಉತ್ಪನ್ನವಾದ ಜ್ವರವೂ; ಒಂದೆ ವಿಂದೆಯಲ್ಲದೆ – ಒಂದೇ ಗುಂಪಾಗಿಯಲ್ಲದೆ, ಎಂದರೆ ಪೃಥಕ್ಕಾಗಿ, ಬೇರೆ ಬೇರೆಯಾಗಿ, ವಿಂದೆ < (ಸಂ) ವೃಂದ; ಒಂದೊರ್ವರೊಳ್–ಒಬ್ಬರೊಬ್ಬರಲ್ಲಿ; ಸಂದಿಸಿ–ಎದುರಾಗಿ, ಗೊಂದಣಿಸಿ–ಗುಂಪಾಗಿ (ತಮ್ಮ ಸೈನ್ಯ ಸಮೇತವಾಗಿ)

೧೪೭. ಈ ಎಱಗುವಂಬಿನ ಬಲ್ಸರಿ – ಈ ಬೀಳುವ ಬಾಣಗಳ ದೊಡ್ಡ ಮಳೆಯು, ಶರದೊಳಗೆ – ಬಾಣಗಳ ನಡುವೆ, ಉರ್ಚಿಪೋಪ – ಭೇದಿಸಿಕೊಂಡು ಹೋಗುವ, ಪೊಳಪಿಂಗೆ–ಹೊಳಪಿಗೆ, ಒಳಗಾಗಿ–ವಶವಾಗಿ, ತಗುಳ್ದುದು–ಅಟ್ಟಿಬಿಟ್ಟು, ಒಂದು, ಬೆಳ್ಸರಿಗೆ – ಬಿಳಿಬಣ್ಣದ ಮಳೆಗೆ, ಎಣೆಯಾದುದು – ಸಮಾನವಾಯಿತು, ನಿರಂತರವಾಗಿ ಬೀಳುವ ಬಾಣಗಳ ನಡುವೆ ನಡುವೆ ಸೂರ್ಯಕಾಂತಿ ನುಸುಳಿಕೊಂಡು ಬಂದು ಪ್ರಕಾಶಿತವಾಗಿ ಅದು ಬಾಣದ ಮಳೆಯಲ್ಲಿ ಸುರಿಯುವ ಬಿಳಿ ಕಿರಣಗಳ ಮಳೆ ಎಂಬಂತಾಯಿತು, ಎಂಬಿನಂ–ಎನ್ನುತ್ತಿರಲು, ನಿರಂತರದೊಳೆ–ಎಡೆಬಿಡದೆ, ಪಾಯ್ದ–ಹಾದ, ನುಗ್ಗಿದ, ಕೂರ್ಗಣೆಯಿಂ – ಮಸೆದ ಬಾಣಗಳಿಂದ, ಗುಣಾರ್ಣವಂ–ಅರ್ಜುನನು. ಚತುರ್ಬಲಂ–ಚತುರಂಗ ಸೈನ್ಯವನ್ನು, ತಱದೊಟ್ಟಿ–ಕತ್ತರಿಸಿ ರಾಶಿ ಹಾಕಿ, ತೆರಳ್ಚಿ–ಓಡಿಸಿ, ತೂಳ್ದಿಕೊಂಡು–ತಳ್ಳಿಕೊಂಡು, ಅಲೆದು–ತೀಡು, ಮಗುಳ್ಚಿ–ಹಿಂದಿರುಗಿಸಿ, ಸಣ್ಣಿಸಿದಂ – ನಯಗೊಳಿಸಿದನು; ಎಂದರೆ ಸೈನ್ಯವನ್ನೆಲ್ಲ ಧ್ವಂಸ ಮಾಡಿದನು ಎಂಬ ಭಾವ.

೧೪೮. ಕಲಿಗಂ ಬಲ್ಲಾಳ್ಗಂ–ಕಲಿಗಳಿಗೂ ಬಲ್ಲಾಳುಗಳಿಗೂ, ಅಂಬೆತ್ತಿದೆಂ–ಬಾಣವನ್ನು ಎತ್ತಿದ್ದೇನೆ, ಎಂದರೆ ಅವರನ್ನು ಸವಾಲುಮಾಡಿ ಯುದ್ಧಕ್ಕೆ ಕರೆಯುತ್ತಿದ್ದೇನೆ. ಸಿಂಧುರಾಜಂ – ಸೈಂಧವನು, ಮಾರ್ಕೊಳಲ್ – ಎದುರಿಸಲು, ಇದುವೆ–

ಇಪೇ, ಪಪಂ-ಸಮಯ, ಗೆಲಲಿಂಪು–ಗೆಲ್ಲಬೇಕೆಂದು, ಆಂ-ನಾನು, ಬಂದೆಂ–ಬಂದೆನು, ಇಂ ಕೊಂಪಪೆನೆ–ಇನ್ನು ಕೊಲ್ಲುತ್ತೇನೆಯೆ? ಎಂದರೆ ನಾನು ಗೆಲ್ಲುವುದಕ್ಕೆ ಬಂದೆನೇ ಹೊರತು ಕೊಲ್ಲುವುದಕ್ಕೆ ಬರಲಿಲ್ಲ; ನೆರೆದು – ಒಟ್ಟಾಗಿ ಸೇರಿ, ನಿಂದು – ನಿಂತು, ಆನಿಂ–ಎದುರಿಸಿರಿ; ಎಂದು ಆಂತರಂ–ಎಂದು ಎದುರಾದವರನ್ನು, ಮೂದಲಿಸುತ್ತ ಹೀಯಾಳಿಸುತ್ತ, ಪ್ರಚಂಡ ಪ್ರಳಯ ಘನಘಟಾರಾವದಿಂದೆ – ಪ್ರಚಂಡವಾದ ಪ್ರಳಯಕಾಲದ ಮೋಡಗಳ ಸಮೂಹದ ಮೊಳಗಿನಿಂದ, ಆರ್ದು–ಗರ್ಜಿಸಿ, ಎಚ್ಚಂ ಹೊಡೆದನು (ಬಾಣಗಳಿಂದ), ರೋದೋವಿವರಮುಂ–ಆಕಾಶದ ಬಿಲವನ್ನು ಅಥವಾ ವಿಸ್ತಾರವನ್ನು, ಬಾಣಾವಲಿಯಿಂದಂ–ಬಾಣ ಸಮೂಹಗಳಿಂದ, ಪೂೞೆ–ಹೂಳಲು, ಒಂದು, ಘೋರಾಂಧಕಾರಂ – ಒಂದು ಭಯಂಕರವಾದ ಕತ್ತಲೆ, ಒದವಿತ್ತು–ಉಂಟಾಯಿತು.

ವಚನ: ಶರಸಂಘಾತದಿಂ–ಬಾಣಗಳ ಸಮೂಹದಿಂದ; ಒಗೆದ–ಹುಟ್ಟಿದ, ರಣಗತ್ತಲೆಯೆ–ಯುದ್ಧದ ಕತ್ತಲೆಯೆ, ಮೊಲಗತ್ತಲೆಯುಂ–ಮೊಲದ ಕತ್ತಲೆಯನ್ನು, ಎಂದರೆ ಚಂದ್ರನಲ್ಲಿರುವ ಮೊಲದ ಮಚ್ಚೆಯಿಂದ ಉಂಟಾಗುವ ಕತ್ತಲೆಯನ್ನು; ನೇಸಱ್ಪಟ್ಟತ್ತು – ಸೂರ್ಯ ಮುಳುಗಿದನು. ಮೊಲಗತ್ತಲೆ–"ನಿನ್ನ ಮೊಲಗತ್ತಲೆಗಾಂ ಬೆಱಗಾದೆನೆಂದು" (ಆದಿಪು. ೩–೭೩).

೧೪೯. ಜ್ವಳತ್–ಪ್ರಕಾಶಿಸುತ್ತಿರುವ, ಅನಳಾಸ್ತ್ರದಿಂದ–ಆಗ್ನೇಯಾಸ್ತ್ರದಿಂದ, ಇಸೆ–ಪ್ರಯೋಗಿಸಲು, ಕತ್ತಲೆ–ಕತ್ತಲೆಯು, ತೆರಳ್ದು–ಚಲಿಸಿ, ತೂಳ್ದುದು–ತಳ್ಳಲ್ಪಟ್ಟಿತು; ಆಗಳ್–ಆಗ, ಮಹಾರಥರ್–ಮಹಾರಥಿಕರು, ಉಮ್ಮಳಿಸಿ–ವ್ಯಾಕುಲಗೊಂಡು, ಪೆಳಱೆ–ಹೆದರಲು, ಸೈಂಧವಂ–ಜಯದ್ರಥನು, ಎನ್ನ ಅಳವಿಂಗಂ–ನನ್ನ ಶಕ್ತಿಗೂ, ದೋರ್ಬಲದ–ಬಾಹುಬಲದ, ಅಳವಿಂಗಂ–ಅಳತೆಗೂ, ಇಂ–ಇನ್ನು, ಎನಗೆ–ನನಗೆ, ಸೆಡೆದಿರಲ್–ಸೆಡೆದುಕೊಂಡು ಇರಲು ಎಂದರೆ ಭಯದಿಂದ ಕುಗ್ಗಿರಲು, ದೊರೆಯಲ್ತು–ಯೋಗ್ಯವಲ್ಲ, ಎಂದು–ಎಂಬುದಾಗಿ, ಬಂದು–ಯುದ್ಧಕ್ಕೆ ಬಂದು, ಅಸುಂಗೊಳೆ–ಪ್ರಾಣಾಪಹಾರವನ್ನು ಮಾಡಲು, ಜಗದೇಕಮಲ್ಲನೊಳ್–ಅರ್ಜುನನಲ್ಲಿ, ಸುರರ್–ದೇವತೆಗಳು, ತನ್ನ, ಅಳವಂ–ಪರಾಕ್ರಮವನ್ನು, ಪೊಗೞೆ-ಕೊಂಡಾಡಲು, ಪೊಣರ್ದಂ–ಹೋರಾಡಿದನು.

೧೫೦. ನಿನ್ನೆ–ನಿನ್ನೆ ದಿನ, ನಿನ್ನ ಮಗನಂ–ನಿನ್ನ ಮಗನಾದ ಅಭಿಮನ್ಯುವನ್ನು, ಸೆರಗಿಲ್ಲದೆ–ಭಯವಿಲ್ಲದೆ, ಪೊರಳ್ಚಿ–ಹೊರಳಿಸಿ, ಕೊಂದೆಂ–ಕೊಂದೆನು, ಇಂದುಂ–ಈ ದಿನವೂ, ಇಂತು–ಹೀಗೆ, ಇನ್ನೆಗಂ–ಇದುವರೆಗೂ, ಇರ್ಪುದಂ–ಇರುವುದನ್ನು, ಭಯದಿಂ–ಭಯದಿಂದ, ಇರ್ದೆನೆ–ಇದ್ದೆನೆ? ಎಂದರೆ ಈ ದಿವಸ ಇದುವರೆಗೂ ನಾನು ನಿನಗೆ ಎದುರಾಗದೆ ಇದ್ದುದು ಭಯದಿಂದಲ್ಲವಲ್ಲ; ನಿನ್ನನೆ–ನಿನ್ನನ್ನೇ, ಪಾರುತಿರ್ದೆಂ – ನಿರೀಕ್ಷಿಸುತ್ತ ಇದ್ದೆನು; ಎಂದು – ಎಂದು ಹೇಳಿ, ಉನ್ನತ ಶೌರ್ಯದಿಂದೆ–ಅತಿಶಯವಾದ ಪರಾಕ್ರಮದಿಂದ, ಅಜಿತನಂ–ಕೃಷ್ಣನನ್ನೂ,

ನರನಂ–ಅರ್ಜುನನನ್ನು, ಏೞುಮೆಂಟುಂ ನಿಶಿತಾಸ್ತ್ರದಿಂ–ಏಳು ಎಂಟು ಹರಿತವಾದ ಬಾಣಗಳಿಂದ, ಮುನಿದು–ಕೆರಳಿ, ಎಚ್ಚಂ–ಪ್ರಯೋಗಿಸಿದನು ; ಸಿಂಧುರಾಜನಾ – ಸೈಂಧವನ, ಅಡಟು–ಪರಾಕ್ರಮ, ಏಂ ದೊರೆವೆತ್ತದೊ–ಏನು ಯೋಗ್ಯತೆಯನ್ನು ಪಡೆಯಿತೋ ! ಎಂದರೆ ಅಸಮಾನವಾಯಿತು ಎಂಬ ಭಾವ.

**ವಚನ**: ಪೆರ್ಚಿದ–ಹೆಚ್ಚಿದ, ಉಮ್ಮಚ್ಚಡಿಂದೆ–ಕೋಪದಿಂದ ;

**೧೫೧.** ಎಂತು–ಹೇಗೆ, ಅಸ್ಮತ್ಪುತ್ರನಂ–ನನ್ನ ಮಗನನ್ನು, ಸಂಗರದೊಳ್– ಯುದ್ಧದಲ್ಲಿ, ಅಱಿದೆ – ಕೊಂದೆ, ಇನ್ನಂತೆ – ಇನ್ನು ಹಾಗೆಯೇ, ನಿಲ್ – ನಿಲ್ಲು, ಶಕ್ತಿ ಚಾತುರ್ದಂತಂಗಳ್ – ಪರಾಕ್ರಮವೂ ಚತುರಂಗ ಸೈನ್ಯಗಳೂ, ನಿನ್ನಂ – ನಿನ್ನನ್ನು, ಆಂ – ನಾನು, ಕೊಲ್ವೆಡೆಯೊಳ್–ಕೊಲ್ಲುವ ಸಮಯದಲ್ಲಿ, ಕಾವುವೇ– ರಕ್ಷಿಸುತ್ತವೆಯೇ, ಪೇೞ್–ಹೇಳು ; ಕಾಯುವು–ರಕ್ಷಿಸವು ; ಅಣ್ಮು – ಪೌರುಷವನ್ನು ತೋರಿಸು, ಎಂದು, ಅಂತಾಂತು – ಎದುರಿಸಿ, ಎದುರಿಸಿ, ಎಚ್ಚೆಚ್ಚು – ಬಾಣಪ್ರಯೋಗ ಮಾಡಿ ಮಾಡಿ, ಸೂತ ಧ್ವಜಹಯ ರಥ ಸಂಘಾತಮಂ–ಸಾರಥಿ ಬಾವುಟ ಕುದುರೆ ರಥಗಳ ಸಮೂಹವನ್ನು, ನುರ್ಗೆ – ನುಚ್ಚುಮಾಡಲು, ಲೋಕಕ್ಕೆ – ಪ್ರಪಂಚಕ್ಕೆ, ಅಂತಂಮಾೞ್ಪ – ಕೊನೆಯನ್ನು ಮಾಡುವ ಎಂದರೆ ನಾಶ ಮಾಡುವ, ಅಂತಕಂ ಬೊಲ್ – ಯಮನಂತೆ, ಗದೆವಿಡಿದು – ಗದೆಯನ್ನು ಹಿಡಿದು, ಉಱದೆ - ಇರದೆ, ಎಯ್ತರ್ಪನಂ–ಬರುವವನನ್ನು, ಅನಂತಂ–ಕೃಷ್ಣ, ಕಂಡು–ನೋಡಿ,

**೧೫೨.** ಪಾಶುಪತಮಂ – ಪಾಶುಪತಾಸ್ತ್ರವನ್ನು, ತುಡು–ಹೂಡು, ಎನೆ – ಎನ್ನಲು, ನರಂ – ಅರ್ಜುನನು, ಎಡೆಮಡಗದೆ – ಅವಕಾಶವನ್ನು ಕೊಡದೆ ಎಂದರೆ ತ್ವರೆಯಾಗಿ, ತುಡೆ–ಹೂಡಲು, ದಿಶಾಳಿ–ದಿಕ್ಕುಗಳ ಸಾಲು, ನಡುಗಿದುದು–ಕಂಪಿಸಿತು ; ವಿಯತ್ತಳಂ–ಆಕಾಶ, ಸುರುಳ್ದು–ಸುರುಳಿಯಾಗಿ, ಉಡುಗಿದುದು–ಸುಕ್ಕಿತು, ಎಳೆ–ಭೂಮಿ, ಪಿಡುಗಿದುದು–ಒಡೆಯಿತು ; ಶಿವನ, ಮನಂ–ಮನಸ್ಸು, ಕಲಂಕಿ ಕದಡಿದುದು–ಕ್ಷೋಭೆಗೊಂಡಿತು.

**೧೫೩.** ಬೆಟ್ಟು–ಬೆಟ್ಟವು, ಎಂದರೆ ಕಡಲಲ್ಲಿರುವ ಪರ್ವತಗಳು, ಸುೞಿಯೊಳಗಿರ್ದು – ಸುಳಿಯಲ್ಲಿದ್ದು, ಪೊಱಪೊಣ್ಮುವಿನಂ – ಹೊರಕ್ಕೆ ಹೊರಡುತ್ತಿರಲು, ಲವಣಾಂಬುರಾಶಿ–ಉಪ್ಪು ನೀರಿನ ಸಮುದ್ರ, ಕುಕ್ಕುಱಿಗುದಿವಲ್ಲಿ - ಅನ್ನ ಕುದಿಯುವಂತೆ ಕುದಿಯುವಾಗ, ಕೊಬ್ಬುಗುದಿದು–ಅನ್ನ ಕುದಿಯುತ್ತಿರಲು, ಮೇಗೆ ಸಿಡಿಲ್ದಗುಱಿಂತೆ–ಮೇಲಕ್ಕೆ ಸಿಡಿದ ಅಗುಳಿನಹಾಗೆ, ಕೂಡೆ–ಕೂಡಲೆ, ತತ್ತಱಗುದಿಯುತ್ತುಮಿರ್ಪ–ತಳತಳಯೆಂದು ಕುದಿಯುತ್ತಿರುವ, ಕುದಿಪೊಳ್ – ಕುದಿತದಲ್ಲಿ, ಅಲ್ಲಿಯ– ಸಮುದ್ರದ, ಮುತ್ತುಗಳ್ – ಮುತ್ತುಗಳು, ಸಿಡಿದು, ರುದ್ರಸುರೇಂದ್ರವಿಮಾನಪಂಕ್ತಿಯಂ – ಶಿವನ ದೇವೇಂದ್ರನ ವಿಮಾನಗಳ ಸಾಲುಗಳನ್ನು, ಒರ್ಮೊದಲೆ–ಒಂದೇ ಸಲಕ್ಕೆ, ಛಱಿಲ್ ಛಱಿಲೆನೆ – ಚಳೀರೆನ್ನಲು, ಕೊಂಡವು – ಆಕ್ರಮಿಸಿದುವು, ತಾಗಿದುವು.

ಪಚನ: ಕ್ಷೋಭಮುಂ – ಕದಡುವುದೂ; ತ್ರೈಲೋಕ್ಯಕ್ಷೋಭಮುಂ – ಮೂರು ಲೋಕಗಳ ಭಯ ಕಂಪನಗಳೂ.

೧೫೪. ತೆಗೆನೆಱೆದು–ಕಿವಿವರೆಗೆ ಬಾಣವನ್ನು ಸೆಳೆದು, ಊಱೆಕೊಂಡು–ಬಲವಾಗಿ ಅಮುಕಿ, ಇಸೆ–ಪ್ರಯೋಗಿಸಲು, ಶಿರಂ ಪಱಿದು–ತಲೆ ಕತ್ತರಿಸಿ, ಪಿಯುತ್ತಳಂಬರಂ – ಆಕಾಶದವರೆಗೆ, ನೆಗೆದೊದೆ – ಹಾರಿದರೆ, ರಾಹು – ರಾಹುಗ್ರಹ, ಬಾಯ್ದೆಱೆದು – ಬಾಯನ್ನು ತೆರೆದುಕೊಂಡು, ನುಂಗಲೆ ಬಂದಪ್ಪುದು – ನುಂಗುವುದಕ್ಕೇ ಬರುತ್ತಿದೆ, ಎಂಬ – ಎನ್ನುವ, ಶಂಕೆಯಿಂದ – ಭಯದಿಂದ, ದಿನೇಶಂ – ಸೂರ್ಯನು, ಅಗಿದು – ಹೆದರಿ, ಅಸ್ತಗಿರಿಯಂ – ಅಸ್ತಾಚಲವನ್ನು, ಮಱೆಗೊಂಡಂ–ಮರೆಯಾಗಿಸಿಕೊಂಡನು, ಎಂದರೆ ಸೂರ್ಯನು ಮುಳುಗಿದನು; ಪರಸೈನ್ಯ ಭೈರವಂ – ಅರ್ಜುನನು, ಅಮೋಘಂ – ಅಮೋಘವಾದದ್ದು, ಎಂಬ ಮಾತುಗಳ, ನೆಗೞ್ತೆಯಂ–ಕೀರ್ತಿಯನ್ನು, ಆಹವದೊಳ್–ಯುದ್ಧದಲ್ಲಿ, ಪಡೆದಂ–ಪಡೆದನು.

೧೫೫. ಬಿರಿದ–ಅರಳಿದ, ಅಲರೋಳಿ–ಹೂಗಳಸಾಲು; ಸಗ್ಗದ–ಸ್ವರ್ಗದ, ಮಿಾಳಿಗಳಂ–ಸೊಕ್ಕಿದ ದುಂಬಿಗಳನ್ನು, ಗೆಡೆಗೊಂಡು–ಜೊತೆಗೂಡಿ, ದೇವಸುಂದರಿಯರ – ದೇವಸ್ತ್ರೀಯರ, ಕೆಯ್ಗಳಿಂದಂ – ಕೈಗಳಿಂದ, ಉಗೆ – ಸೂಸಲು, ತುಂಬುರು ನಾರದರ–ತುಂಬುರನ ನಾರದನ, ಒಂದುಗೇಯದ–ಒಂದು ಸಂಗೀತದ; ಇಂಚರಂ–ಇನಿಯುಪದ್ದು, ಎರ್ದೆಯಂ – ಹೃದಯವನ್ನು, ಪಳಂಚಿ – ತಾಗಿ, ಅಲೆಯೆ – ಪೀಡಿಸಲು, ವೀರಲತಾಂಗಿಯ ಸೋಂಕು–ವೀರವನಿತೆಯ, ವಿಜಯಲಕ್ಷ್ಮಿಯ ಸ್ಪರ್ಶ, ಮೆಯ್ಯೊಳ್ – ಮೈಯಲ್ಲಿ, ಅಂಕುರಿಸೆ – ಮೊಳೆಯಲು, ರೋಮಾಂಚಗೊಳ್ಳಲು, ಗುಣಾರ್ಣವಂ – ಅರ್ಜುನ, ಆಜಿಪರಿಶ್ರಮಮಂ – ಯುದ್ಧದ ಆಯಾಸವನ್ನು, ನಿರಾಕುಳಂ–ತೊಂದರೆ ಇಲ್ಲದೆ, ಕಳೆದಂ–ನೀಗಿದನು.

ಏಕಾದಶಾಶ್ವಾಸಂ ಸಂಪೂರ್ಣಂ

# ದ್ವಾದಶಾಶ್ವಾಸಂ

೧. ಶ್ರೀಕಾಂತಾಕಾಂತಂ–ಜಯಲಕ್ಷ್ಮಿಯೆಂಬ ಸ್ತ್ರೀಗೆ ಒಡೆಯನಾದ, ಇಳಾಲೋಕೈಕಲಲಾಮಂ–ಭೂಲೋಕಕ್ಕೆ ಒಬ್ಬನೇ ಶ್ರೇಷ್ಠನಾದ, ಅರಿಗಂ–ಅರ್ಜುನನು, ಅನೇಕಮಂ – ಅನೇಕವಾದ, ಮಹೋಗ್ರಾರಿನೃಪಾನೀಕಮಂ – ಅತಿ ಭಯಂಕರರಾದ ಶತ್ರುರಾಜರ ಸೈನ್ಯವನ್ನು, ಗೆಲ್ದು–ಗೆದ್ದು, *ಉಱದೆ–ಇರದೆ, ಆ ಕಲಹದೊಳ್–ಆ ಯುದ್ಧದಲ್ಲಿ, ನಿಲ್ವುದುಂ–ನಿಂತುಕೊಳ್ಳುತ್ತಲು, ಆಗಳ್–ಆಗ,

೨. ನೃಪಂ–ದುರ್ಯೋಧನನು, ನಂಬಿ–ನನ್ನನ್ನು ನಚ್ಚಿ, ಬಂದು, ಸೈಂಧವನಂ–ಜಯದ್ರಥನನ್ನು, ಎನಗೆ–ನನಗೆ, ಒಪ್ಪೈಸೆ–ಒಪ್ಪಿಸಲು (ರಕ್ಷಿಸಬೇಕೆಂದು), ಆದುದನಾಗಲ್ಕೆ–ಜಯದ್ರಥನಾದುದನ್ನು ನಾನು ಆಗುವುದಕ್ಕೆ, ಪೂಣ್ದೆಂ–ಪ್ರತಿಜ್ಞೆ ಮಾಡಿದೆನು ; ಇಂಬಳಿದು–ಹದತಪ್ಪಿ, ಆಶ್ರಯ ನಷ್ಟವಾಗಿ, ಅವಂ–ಅವನು, ಅನುವರದೊಳ್–ಯುದ್ಧದಲ್ಲಿ, ಮುಂಬಯಣಂಬೋದಂ–ಮುಂಚಿತವಾಗಿ ಪ್ರಯಾಣ ಹೋದನು, ಎನಗೆ–ನನಗೆ, ಮಾಣ್ಬುದು–(ಇನ್ನು) ತಡೆದಿರುವುದು ; ದೊರೆಯೇ–ಯೋಗ್ಯವೇ, ಉಚಿತವೇ ?

೩. ಬವರದೊಳ್–ಯುದ್ಧದಲ್ಲಿ, ಏಂಬಲ್ಲಂ–ಏನು ತಿಳಿದಿದ್ದಾನೆ, ಎಂದರೆ ಏನೂ ಇಲ್ಲವೆಂದರ್ಥ ; ಪೆಱರ್ಗೆ–ಇತರರಿಗೆ, ಒವಜುಗೆಯಲ್–ಉಪಾಧ್ಯಾಯ ವೃತ್ತಿಯನ್ನು ಮಾಡಲು, ಎಂದರೆ ಬೋಧಿಸಲು, ಕಂಡು–ನೋಡಿ, ತನಗೆ–ತನ್ನವಿಷಯಕ್ಕೆ, ಅಱಿಯಂ–ತಿಳಿಯನು ; ಎಂದರೆ ಇತರರಿಗೆ ಉಪದೇಶಮಾಡಬಹುದು ; ಆದರೆ ಅದರಂತೆ ನಡೆಯಲು ಮಾತ್ರ ವ್ಯಕ್ತಿಗೆ ಆಗದಿರಬಹುದು ; ಹಾಗೆ, ಹೀಗೆ, ಯುದ್ಧ ಮಾಡಬೇಕು ಎಂದು ಬಾಯಲ್ಲಿ ಹೇಳಬಹುದು, ಆದರೆ ಯುದ್ಧ ಬಂದಾಗ ಏನೂ ಮಾಡದಿರಬಹುದು ; ಎಂತುವೊ ನುಡಿ–ಮಾತು ಎಂಥಾದ್ದೋ ; ತ[ಪ್ಪ]ದು–ನಷ್ಟವಾಗುತ್ತದೆ ; ಬಿಲ್ಲೊವಜಂ–ಬಿಲ್ಲಿನ ಆಚಾರ್ಯ (ದ್ರೋಣನು). ಕಮ್ಮ [ಱ]ಯೊವಜಂ–ನುಡಿದಂತೆ ನಡೆಯುದವನು, ಎಂಬುದಂ–ಎನ್ನುವುದನ್ನು, ಮಾಡುವೆನೇ–ಮಾಡುತ್ತೇನೆಯೇ, ಇಲ್ಲ. ಈ ಪದ್ಯದಲ್ಲಿ ಕೆಲವು ಪಾಠ ಕ್ಲೇಶಗಳಿವೆ ; ಆದರೆ ಅರ್ಥವೇನೋ ಚಿಂತಿಸಿದರೆ ವಿಶದವಾಗುತ್ತದೆ. ದ್ರೋಣನು ತನಗೆ ತಾನೇ ಹೇಳಿಕೊಳ್ಳುತ್ತಾನೆ ; ಜನ ಏನು ಹೇಳುತ್ತಾರೆ, ದ್ರೋಣ ಇತರರಿಗೆ ಹೇಳುವವನೇ ಹೊರತು ಯುದ್ಧದಲ್ಲಿ ತಾನು ಹೇಳಿದಂತೆ ಮಾಡಲು ತಿಳಿಯನು : ಮಾತೊಂದು ಕಾರ್ಯವಿನ್ನೊಂದು, ಎಂಥ ಮಾತುಗಳಿವು, ನಾಶವಾಗುವಂಥವು, ತಾನು ನುಡಿದಂತೆ ನಡೆಯದ ಆಚಾರ್ಯನಲ್ಲವೇ, ಎಂದು. ತಪ್ಪದು–ಅದು ತಪ್ಪು, ಸುಳ್ಳು ಎಂದೂ ಆಗಬಹುದು, ಇಲ್ಲಿ ತ[ಪ್ಪ]ದು ಎಂದು ತಿದ್ದಿದೆ ; ಕಮ್ಮಱ ಎಂಬುದನ್ನು ಕಮ್ಮ [ಱ] ಎಂದು ತಿದ್ದಿದೆ. ಕಮ್ಮಾಱ ಎಂದರೆ ಕಮ್ಮಾರನನ್ನುಳ್ಳದು ಅಥವಾ ಕಮ್ಮಾರತನವನ್ನುಳ್ಳವನು ; ಕೆಲಸ>ಕೆಲಃ ಇದ್ದಹಾಗೆ, ಎಂದರೆ ಅರ್ಥವಾಗುವುದಿಲ್ಲ. ಈ

ಶಬ್ದದ ಪ್ರಯೋಗವು ಹಲವೆಡೆ ಬರುತ್ತದೆ, ಪಡುಳಂ ತುಳ್ಳಿ ನೆಗಪುಗಾಣಿಯಿಪ ಪಾತಂ ತಗುಳ್ದೆ ಗಜಪಿ ಪೋದಂ ಸಂದಿ । ರ್ದದಟರೊಳಿಱಿದಱಿಯಂ ತ । ಪ್ಪಡೆ ಕಮ್ಮಾಱಿ ಯೋಜನೆನಿಸಿದಂ ಬಿಲ್ಲೋಜಂ ॥ (ಗದಾ. ೨–೧೩) ; ಇನ್ನೆಂತುಟು ಪೇೞ್ವು ಕಮ್ಮ ಗಿಲೆ ಗಮ್ಮನೆ ಕಮ್ಮರಿ ಯೋಜನಾಗೆನೇ (ಆದಿಪು. ೨–೬೧) ; ಒಡಲಘ್ರಪಮುಕುಚಿ ಯಿದಂ ಬಿಡುವುದು ಧರ್ಮಮನೆ ಪಿಡಿವುದೆಂಬಾತೆಱದಿಂ । ನಡೆಯದೆ ಮಱೆದಾನಿಂತಿ ರ್ದೊಡೆ ಕಮ್ಮರಿಯೋಜನೆಂಬ ನುಡಿಗೆಡೆಯಪ್ಪೆಂ (ಚಂದ್ರಪ್ರ. ೧೦–೧೬೪) ; ಈ ಮೂರು ಪ್ರಯೋಗಗಳಲ್ಲೂ ನುಡಿನಂತೆ ನಡೆಯದವನು ಎಂಬ ಅರ್ಥ ಸ್ಪಷ್ಟವಾಗಿದೆ ; ಕಮ್ಮರಿಯೋಜ ಎಂಬುದೇ ಸರಿಯಾದ ರೂಪವೆಂಬುದೂ ಖಚಿತವಾಗುತ್ತದೆ ; ಗದಾ. ಪ್ರಯೋಗದಲ್ಲಿರುವ 'ಱಿ' ತಪ್ಪು ; ಕಮ್ಮರಿ > (ಸಂ) ಕರ್ಮಾರಿ–ಕರ್ಮಕ್ಕೆ ಶತ್ರು ವಾದವನು, ಕೆಲಸಮಾಡದವನು.

೪. ಒಪ್ಪೆ–ಸೊಗಸಾಗಲು, ಎಲ್ಲರಿಗೂ ಸಮ್ಮತವಾಗಿರಲು, ಜಯದ್ರಥಂ–ಜಯದ್ರಥನು, ಆದುದಂ–ಆದುದನ್ನು, ಅಪ್ಪೆಂ–ನಾನು ಆಗುತ್ತೇನೆ, ಪೋಗು–ಹೋಗು, ಎಂದು, ಮುನ್ನೆ ನುಡಿದುದಂ–ಮೊದಲು ಭಾಷೆ ಮಾಡಿದ್ದನ್ನು, ಈಗಳ್–ಈಗ, ತಪ್ಪುವೆನೆ–ಸುಳ್ಳಾಗಿಸುತ್ತೇನೆಯೆ ? ಧರೆಯೊಳ್–ಲೋಕದಲ್ಲಿ, ಎನ್ನ ನುಡಿಯುಂ–ನನ್ನ ಮಾತೂ, ಎನ್ನ ಎಚ್ಚ ಅಂಬುಂ–ನಾನು ಪ್ರಯೋಗಿಸಿದ ಬಾಣವೂ, ತಪ್ಪದು ವಲಂ–ತಪ್ಪುವುದಿಲ್ಲ, ಅಲ್ಲವೆ ?

**ವಚನ** : ಕುಂಭಸಂಭವಂ–ದ್ರೋಣ ; ಕುಂಭಸಂಭವನಂತೆ–ಅಗಸ್ತ್ಯನಂತೆ, ಅೞುರಲ್ ಬಗೆದು–ವ್ಯಾಪಿಸಲು ಯೋಚಿಸಿ, ನೇಸಱ್ ಪಟ್ಟೊಡಂ–ಸೂರ್ಯ ಮುಳುಗಿದರೂ, ಆನುವರದೊಳ್ – ಯುದ್ಧದಲ್ಲಿ ; ಅಳ್ಳೆವಿಳ್ಳೆಯಾದ–ಆಯಾಸ ಹೊಂದಿದ (?) ; ಅಳ್ಳೆ ವಿಳ್ಳೆ–ಈ ಶಬ್ದದ ಅರ್ಥ ನಿಷ್ಪತ್ತಿಗಳು ಚಿಂತನೀಯ ; ಕೆಲವು ಪ್ರಯೋಗಗಳಿವೆ : ಪಯಣದೊಳಳ್ಳೆ ವಿಳ್ಳೆಯಾಗಿ ಬಂಬಲ ಬಾಡಿದ ತನುಲತೆಗಳುಂ (ಆದಿಪು. ೧೧–೭೦ ಗ) ; ಅಟ್ಟಿ ಪೆತ್ತ ಪೊಲೆವುಲ್ಲೆಯಳ್ಳೆವಿಳ್ಳೆಯಾದ ಮಾತಂ . . . . ಕೆಳೆಯಂಗಿಂತೆಂದಂ (ಅದೇ ೧೨–೨೯ ಗ) ; ಅಳ್ಳೆವಿಳ್ಳೆಯಾಗಿ ಪೋಗಲೀಯದೆ ತಳ್ತು ಪರಭಾಗಂ ಒಡೆದ ವಿದ್ರುಮಲತೆಗಳುಮಂ (ಅದೇ ೧೧–೭೯ ಗ) ; (ಶತ್ರು ಸೈನ್ಯದ) ಸಂಘಟ್ಟನದಿಂದಳ್ಳೆವಿಳ್ಳೆಯಾದ ಯಾದವ ದೇಶದ ಜನ ಕ್ಲೇಶಮಂ (ಜಗವಿ. ೮–೩ ಗ).

೫. ಇಲ್ಲಿಂದ ಮುಂದಕ್ಕೆ ರಾತ್ರಿ ಕಾಳಗ ; ತಕ್ಕೈನ–ಪರಾಕ್ರಮವುಳ್ಳ, ವಿಕ್ರಮಾರ್ಜುನನ–ಅರಿಕೇಸರಿಯ, ಅರ್ಜುನನ, ಕೋಪದ ದಳ್ಳುರಿಗಳ್–ಕೋಪವೆಂಬ ಜ್ವಲಿಸುವ ಉರಿಗಳು, ವಿರೋಧಿಯಂ–ಶತ್ರುವನ್ನು, ಮುಕ್ಕಲೆ–ಕಬಳಿಸುವುದಕ್ಕೇ, ಮುತ್ತಿದಂತೆ–ಮುತ್ತಿಕೊಂಡ ಹಾಗೆ, ಕರಿಗೆ–ಆನೆಗೆ, ಎಂಟು ; ರಥಕ್ಕೆ–ರಥಗಳಿಗೆ, ಆಸುವಾಗೆ–ಅನುಕೂಲವಾಗಲು, ನಾಲ್ಕು : ವಾಹಕ್ಕೆ–ಕುದುರೆಗೆ, ಎರಡು, ಪಾದಚರರ್ಗೆ–ಪದಾತಿಗಳಿಗೆ ಒಂದು, ಎನೆ–ಎನ್ನಲು, ದೀವಿಗೆಗಳ್–ದೀಪ

ಗಳು, ಎರಜಿ಼ಸೆಯೆ–ಎರಡು ಪಕ್ಷಗಳ, ಒಕ್ಕಣಂಗಳೊಳ್–ಸೈನ್ಯಗಳಲ್ಲಿ. ಜಲಕ್ಕನೆ–ವಿಶದವಾಗಿ, ಇಟ್ಟಳಂ–ರಮಣೀಯವಾಗಿ, ಎಕ್ಕೆಕ್ಕೆಯಿಂ–ಗುಂಪು ಗುಂಪಾಗಿ, ಬೆಳಗುತಿರ್ದುವು–ಹೊಳೆಯುತ್ತಿದ್ದವು.

**ವಚನ :** ಏರ್ವಸನಂ – ಯುದ್ಧೋದ್ಯೋಗವನ್ನು, ಯುದ್ಧಕಾರ್ಯವನ್ನು ; ವೈಮಾನಿಕದೇವರ್ – ವಿಮಾನಸ್ಥಿತರಾದ ದೇವತೆಗಳು ; ಕಿರ್ಚೆಟ್ಟಿಲಂಕೆಯಂ – ಉರಿಯುತ್ತಿರುವ ಲಂಕಾನಗರವನ್ನು ; ಧರ್ಮಪುತ್ರಂ, ಅಧೋಕ್ಷಜನಂ–ಶ್ರೀಕೃಷ್ಣನನ್ನು.

೬. ಇರುಳೊಳಂ–ರಾತ್ರಿಯಲ್ಲಿ ಕೂಡ, ಪೋಗದೆ–ಹೋಗದೆ, ಇಂತು–ಹೀಗೆ, ಇಱಿಯಲ್–ಯುದ್ಧಮಾಡಲು, ಘಟಸಂಭವಂ–ದ್ರೋಣನು, ಇರ್ದಂ–ಇರುತ್ತಾನೆ. ಎಂತು–ಹೇಗೆ. ಈ ಮಹಾಹವಮಂ–ಈ ಮಹಾಯುದ್ಧವನ್ನು, ನಿತ್ತರಿಸುವಂ–ದಾಟೋಣ, ಪಾರಾಗೋಣ. ಎಂಬುದು–ಎನ್ನುತ್ತಲು, ಇಂ ಇರುಳೊಳ್–ಇನ್ನು ರಾತ್ರಿಯಲ್ಲಿ. ಬಲಂ–ಶಕ್ತಿ, ನಿಶಾಚರ ಬಲಕುಂಟು–ರಾಕ್ಷಸರ ಸೈನ್ಯಕ್ಕೆ ಉಂಟು, ನಾಣದೆ–ಬಿಡದೆ, ತಡಮಾಡದೆ, ಘಟೋತ್ಕಚನಂ–ಘಟೋತ್ಕಚನನ್ನು, ಬೆಸಸವೇಟ್ಟುದು–ಯುದ್ಧ ಕಾರ್ಯಕ್ಕೆ ನಿಯಮಿಸುವುದು, ಎಂದೊಡೆ–ಎಂದು ಶ್ರೀ ಕೃಷ್ಣನು ಹೇಳಿದರೆ, ಆದರದೊಳೆ–ಪ್ರೀತಿಯಿಂದಲೇ, ಯಮರಾಜನಂದನಂ–ಧರ್ಮಪುತ್ರನು, ಆ ಪದದೊಳ್–ಆ ಸಮಯದಲ್ಲಿ, ಭೀಮನಂದನನಂ–ಭೀಮನ ಮಗ ಘಟೋತ್ಕಚನನ್ನು,

**ವಚನ :** ಕರೆದು–ಕೂಗಿ ; ಅರಿದುಂ ಪಿರಿದುಂ ಆಗಿ–ಅಸಾಧ್ಯ ಮತ್ತು ಮಹಾಘನವೆಂದು ; ಎನ್ನ ತೊೞ್ತುವೆಸನಂ–ನನ್ನ ಸೇವಾ ಕಾರ್ಯವನ್ನು ; ಈ ವಿಶಸನರಂಗದೊಳ್–ಈ ಯುದ್ಧರಂಗದಲ್ಲಿ ;

೭. ಪರೆದ–ಕೆದರಿದ, ಉರಿಗೇಸಂ–ಉರಿಯುತ್ತಿರುವ ಕೂದಲುಳ್ಳವನು ; ಅವ್ವಳಿಪ–ಮುಂದಕ್ಕೆ ನುಗ್ಗುವ. ಚಾಚುವ, ನಾಲಗೆ–ನಾಲಿಗೆ, ಮಿಂಚುವ–ಹೊಳೆಯುವ, ದಾಡೆ–ಕೋರೆಹಲ್ಲು, ಬಿಟ್ಟ ಕಣ್–ತೆರೆದ ಕಣ್ಣುಗಳು, ತಿರಿಪಿದ–ಹೊಸೆದಿರುವ, ಮಿಾಸೆ–ಮಿಾಸೆಗಳು, ಕೊಂಕಿದ–ವಕ್ರವಾದ, ಸಟಂ–ಕೇಸರಗಳು, ಕಱಿದಪ್ಪ ಕದಂಪು–ಕಪ್ಪಗಿರುವ ಕೆನ್ನೆಗಳು, ನೀಳ್ದ–ಉದ್ದವಾದ, ತಾಱ್ಮರದವೊಲ್–ತಾಳೆಯ ಮರದಂತೆ, ಅಪ್ಪ–ಆಗಿರುವ, ಒಡಲ್–ದೇಹ, ಕಹಕಹ ಧ್ವನಿ–ಕಹಕಹ ಎಂಬ ಶಬ್ದ, ಕೌಳಿಕನಾದಂ–ಸಾಮೂಹಿಕ ಶಬ್ದ, ಇವೆಲ್ಲ, ಆಸುರತರಮಾಗೆ–ತುಂಬ ಭಯಂಕರವಾಗಲು, ಘಟೋತ್ಕಚ ರೌದ್ರ ಸಾಧನಂ–ಘಟೋತ್ಕಚನ ಭಯಂಕರ ಸೈನ್ಯವು, ಬಂದು, ಕವಿದತ್ತು–ಮುತ್ತಿಕೊಂಡಿತು ; ಇಲ್ಲಿ ಕ[ಡು] ನೆಕ್ಕಕದಂಪು. ಪೊದಳ್ದು–ಎಂಬ ಪಾಠಾಂತರಗಳು ಪರಿಗ್ರಾಹ್ಯ.

**ವಚನ :** ನಿಶಾಚರಬಲಂ–ರಾಕ್ಷಸ ಸೈನ್ಯ, ಅಜವಜಗಾದ – ಒಣಗಿಬತ್ತಿಹೋದ ; ಅಳುರ್ವ–ಸುಡುವ ; ದಳ್ಳಿಸಿ – ಪ್ರಜ್ವಲಿಸಿ ; ಪ್ರದಿದ – ಹೊಂದಿಸಿದ,

ಕರ್ಬೊನ್ನ – ಕಬ್ಬಿಣದ; ಗೊಂಕುಜುಂಗುಜ್ತಿಯುಂ – ಒಂದುಜಾತಿಯ ಹೇಸರ ಕತ್ತೆಯೂ; ಗೃಧ್ರಧ್ವಜಮುಂ–ಹದ್ದಿನ ಬಾವುಟವೂ; ಅಂಜನಪುಂಜ–ಕಾಡಿಗೆಯ ರಾಶಿ, ವಿಕಟಾಂಗಮುಂ–ವಿಕಾರವಾದ ದೇಹವೂ, ಎಳವೆಱೆಯುಂ–ಬಾಲ ಚಂದ್ರ ನನ್ನು; ಅಡಸಿದಂತಪ್ಪ–ತುರುಕಿದಂತಿರುವ, ಜೋಡಿಸಿರುವ ಹಾಗೆ ಇರುವ; ಅಗು ರ್ವಾಗೆ–ಭಯವಾಗಲು,

೮. ಕುದುರೆಯ–ಕುದುರೆಗಳ, ಬಿಲ್ಲ–ಬಿಲ್ಗಾರರ, ಬಲ್ಲಣೆಯ–ಬಲವಾದ ಪದಾತಿಯ, ಕೇಣಿಯಂ – ಸಾಲುಗಳನ್ನು, ಅಲ್ಲಿ, ಕೆಲರ್ – ಕೆಲವರು, ನಿಶಾಟರ್– ರಾಕ್ಷಸರು, ಉಣ್ಮಿದ–ಚಿಮ್ಮಿದ, ಬಿಸುನೆತ್ತರೊಳ್–ಬಿಸಿರಕ್ತದಲ್ಲಿ, ಮಿದಿದು–ಕುಟ್ಟಿ, ನುಣ್ಣನೆ ನುಂಗಿದರ್–ನಯವಾಗಿ ನುಂಗಿದರು; ಕೆಲರ್–ಕೆಲವರು, ಕುದುಗುಳಿ– ಕುದಿಯುವ ಸ್ವಭಾವವುಳ್ಳ, ರಕ್ಕಸರ್–ರಾಕ್ಷಸರು, ಬಿಸುಗೆಗಳ್ವೆರಸು–ಅಂಬಾರಿಗಳ ಸಮೇತವಾಗಿ, ಉಗ್ರಮಹಾಗಜಂಗಳಂ – ಭಯಂಕರವಾದ ಹೇರಾನೆಗಳನ್ನು, ಚದುರ್ಗಿಡೆ–ಚತುರತೆ ಕೆಡುತ್ತಿರಲು, ನುಂಗಿ, ಬಿಸುನೆತ್ತರ–ಬಿಸಿರಕ್ತದ, ಕಾಟ್ಟು ರಂಗಳಂ–ಕಾಡಿನ ಪ್ರವಾಹಗಳನ್ನು, ಬಿಕ್ಕಿ–ಉಸಿರೆಳೆದುಕೊಂಡು, ಕುಡಿದರ್– ಕುಡಿದರು. ಕೇಣಿ < ಕೇಱ–ಪಂಕ್ತಿ ; "ಮಿದಿ ಮುಸಲಕ್ರಿಯಾಯಾಂ", ಕುದುಗುಳಿ > ಕುದಿ+ಕುಳಿ ; "ಬಿಕ್ಕು–ಉಚ್ಛ್ವಾಸೇ"

**ವಚನ :** ತೆರಳ್ಚಿ–ತೆರಳೆಮಾಡಿ, ಉಂಡೆಮಾಡಿ; ತೇರಯಿಸಿ–ತವಕಿಸಿ (?), ಬೆಜಗಾದ – ಅಚ್ಚರಿಪಟ್ಟ ; ನೆಱಪಲೆಂದು – ತೀರಿಸಬೇಕೆಂದು, ಪೂರ್ಣವಾಡ ಬೇಕೆಂದು; ಬೆಸನಂ ಬೇಡಿದಾಗಳ್ – ಈ ಕೆಲಸವನ್ನು ನಮಗೆ ಒಪ್ಪಿಸಿ ಎಂದು ಬಯಸಿದಾಗ.

೯. ಅಗ್ನಿಗೆ – ಉರಿಗೆ, ಅಗ್ನಿ – ಉರಿಯು, ಪ್ರತಿವಿಷಂ–ಪ್ರತಿಯಾದ ವಿಷ, ಎಂದರೆ ಉರಿ ಉರಿಯನ್ನು ಆರಿಸುತ್ತದೆ; ವಿಷಕಂ–ವಿಷಕ್ಕೂ, ವಿಷಂ–ವಿಷವು, ಪ್ರತಿವಿಷಂ–ಪ್ರತಿಯಾದ ವಿಷ, ಎಂದರೆ ವಿಷ ವಿಷವನ್ನು ಹೊಡೆಯುತ್ತದೆ; ಎಂಬ- ವೋಲ್–ಎನ್ನುವ ಹಾಗೆ, ಆ ನಿಶಾಚರಂಗೆ – ಆ ರಾಕ್ಷಸ ಘಟೋತ್ಕಚನಿಗೆ, ಈ ನಿಶಾಟರ್–ಈ ರಾಕ್ಷಸರಾದ ಜಟಾಸುರನ ಮಕ್ಕಳು, ಅತಿಬಲರ್–ಅತಿ ಬಲವುಳ್ಳ ವರು; ಇವರ್–ಇವರು, ಅಕ್ಕೆ–ಆಗಲಿ ಎಂದರೆ ಪ್ರತಿಭಟರಾಗಲಿ. ಎನುತುಂ– ಎನ್ನುತ್ತ, ಬೆಸವೇೞೆ–ಅಪ್ಪಣೆ ಮಾಡಲು, ಕಾರ್ಯಕ್ಕೆ ನಿಯಮಿಸಲು, ತಾಗಿಪಾ ದಿತಿಸುತರಂ–ಎದುರಿಸಿದ ಆ ರಾಕ್ಷಸರನ್ನು, ಘಟೋತ್ಕಚಂ–ಘಟೋತ್ಕಚನು, ಅಸುಂ ಗೊಳೆ–ಪ್ರಾಣವನ್ನು ತೆಗೆಯುವಂತೆ, ಕಾದಿ – ಯುದ್ಧ ಮಾಡಿ. ನಿಶಾಟ ಕೋಟಿ ಸಂತತಿಗಳಂ – ಕೋಟ್ಯಂತರ ರಾಕ್ಷಸ ಸಮೂಹಗಳನ್ನು, ಇಕ್ಕಿ – ಸಾಯಿಸಿ, ಪಾಂಡವ ಬಲಕ್ಕೆ – ಪಾಂಡವರ ಸೈನ್ಯಕ್ಕೆ, ಅನುರಾಗಮಂ – ಸಂತೋಷವನ್ನು, ಉಂಟುಮಾಡಿದಂ–ಉಂಟಾಗಿಸಿದನು.

**ವಚನ :** ಜೀರಿಗೆಯೊಕ್ಕಲ್ ಮಾಡಿ–ಜೀರಿಗೆ ಧಾನ್ಯವನ್ನು ಒಕ್ಕಣೆಮಾಡು ವಂತೆ ಮಾಡಿ; ಅಂಗರಾಜಂ–ಕರ್ಣ,

೧೦. ' ಸಮದೇಭೇಂದ್ರ ಸಮೂಹದಿಂದಂ–ಮದಿಸಿದ ಆನೆಗಳ ಸಮೂಹದಿಂದ, (ಆನೆಯ ಸಮೂಹಗಳನ್ನು), ಇಡುತುಂ–ಹೊಡೆಯುತ್ತ, ಕಂಠೀರವ ಧ್ವಾನದಿಂದೆ–ಸಿಂಹನಾದದಿಂದ, ಅಗುರ್ವಪ್ಪಿನಂ – ಭಯವಾಗುತ್ತಿರಲು, ಆರುತ್ತುಂ–ಗರ್ಜಿಸುತ್ತ, ಪೆಣಗಳಂ–ಹೆಣಗಳನ್ನು, ನುಂಗುತುಂ–ನುಂಗುತ್ತ, ಆಕಾಶದ ಅಂತಮುಂ–ಆಕಾಶದ ಅಂತ್ಯವನ್ನು, ಎಯ್ದುತ್ತುಂ – ಸೇರುತ್ತ, ಇದಿರ್ಚಿ–ಎದುರಿಸಿ, ಕಾದುವೆಡೆಯೊಳ್–ಯುದ್ಧಮಾಡುವ ಸಮಯದಲ್ಲಿ, ದೇವರ್ಕಳ್ – ದೇವತೆಗಳು, ಕಾಣುತ್ತೆ – ನೋಡುತ್ತ, ಇನ್ನುಂ – ಇನ್ನು ಕೂಡ, ರಾವಣಂ – ರಾವಣಾಸುರನು, ಒಳಂ – ಇರುತ್ತಾನೆ, ಎಂಬಿನಂ – ಎನ್ನುತ್ತಿರಲು, ಹೈಡಿಂಬನ – ಘಟೋತ್ಕಚನ, ಆಡಂಬರಂ – ಆಟೋಪವು, ನೆಗಟ್ದುದು–ಉಂಟಾಯಿತು.

೧೧. ಸರಿಪಧಿಪತಿ–ನದಿಗಳಿಗೆ ರಾಜ ಎಂದರೆ ಸಮುದ್ರವು, ಮೊಣಕಾಲ್ವರಂ–ಮೊಣಕಾಲಿನವರೆಗೆ ; ಮೇರು – ಮೇರುಪರ್ವತ, ಉರಂಬರಂ – ಎದೆಯವರೆಗೆ ; ಅಜಾಂಡಂ – ಬ್ರಹ್ಮಾಂಡವು, ಮುಯ್ವುವರೆಗಂ – ಹೆಗಲಿನವರೆಗೆ, ಬರೆ – ಬರಲು, ತಲೆಯ ನೆಲೆಗೆ – ತಲೆಯ ಎಡೆಗೆ, ಲೋಕಾಂತರಂ – ಅನ್ಯಲೋಕವು, ಎಡೆಯಿಲ್ಲ–ಜಾಗವಿಲ್ಲ, ಎನಿಸೆ–ಎನಿಸಲು, ದನುತನಯಂ – ರಾಕ್ಷಸಪುತ್ರನು, ಘಟೋತ್ಕಚನು, ಪೆರ್ಚಿದಂ–ಬೆಳೆದನು ; ಘಟೋತ್ಕಚನ ತಲೆಗೆ ಸ್ಥಳವೇ ಇಲ್ಲವೆಂಬಂತೆ ಅವನ ಬೃಹದಾಕಾರ ಬೆಳೆಯಿತು.

೧೨. ಬೆಳ್ಳಾಳ್ಗೆ–ಅಂಜುವ ಯೋಧನಿಗೆ, ಪೊಳೆವುದೋಜವುದು – ಹೊಳಪನ್ನು ತೋರಿಸುವುದು ಎಂದರೆ ಬರಿಹೊಳಪನ್ನು (ಆಯುಧಗಳ) ತೋರಿಸಿದರೆ ಸಾಕು ಹೇಡಿ ಅಂಜಿ ಓಡುವನು : ಒಳ್ಳಾಳ್ಗೆ–ಸುಭಟನಿಗೆ, ಪೊಡರ್ಪುದೋರ್ಪುದು–ಪರಾಕ್ರಮವನ್ನು ತೋರಿಸುವುದು, ಅಣ್ಮು ಅಣ್ಮು – ಪೌರುಷವನ್ನು ತೋರಿಸು ತೋರಿಸು ಎಂದು, ಒಳ್ಪಲಗಿನ – ಒಳ್ಳೆಯ ಅಲಗನ್ನುಳ್ಳ, ಶರತತಿಯಿಂ – ಬಾಣಗಳ ಸಮೂಹದಿಂದ, ಕೊಳ್ಳೆ ಕೊಳ–ಕೋ ಕೋ ಎಂದು, ಅಂಗರಾಜಂ – ಕರ್ಣ, ಅಸುರನಂ – ರಾಕ್ಷಸನನ್ನು, ಎಚ್ಚಂ – ಪ್ರಯೋಗಿಸಿದನು. ಬಾಣದಿಂದ ಹೊಡೆದನು.

೧೩. ಎಚ್ಚೊಡೆ–ಬಾಣಗಳಿಂದ ಹೊಡೆದರೆ, ಅಸುರಂ–ರಾಕ್ಷಸನು, ಇಟ್ಟ–ಮೇಲೆಸೆದ, ಬೆಟ್ಟಂ–ಬೆಟ್ಟವನ್ನು, ಒಂದು ವಜ್ರಶರದಿಂ–ಒಂದು ವಜ್ರಬಾಣದಿಂದ, ಆರ್ದು–ಗರ್ಜಿಸಿ, ಎಚ್ಚು–ಹೊಡೆದು ; ದಿತಿಜನೆಚ್ಚ – ರಾಕ್ಷಸನು ಪ್ರಯೋಗಿಸಿದ, ಸಿಡಿಲಶರಮಂ–ಸಿಡಿಲಬಾಣವನ್ನು, ಉದಕ ಬಾಣದಿಂದೆ–ನೀರ್ಬಾಣದಿಂದ, ಎಚ್ಚು–ಹೊಡೆದು ; ದನುತನೂಜನೆಚ್ಚ – ರಾಕ್ಷಸಕುಮಾರನು ಪ್ರಯೋಗಿಸಿದ, ವಾರ್ಧಿಗೆ–ಸಮುದ್ರಾಸ್ತ್ರಕ್ಕೆ, ಅನಲಬಾಣದಿಂದೆ – ಆಗ್ನೇಯಾಸ್ತ್ರದಿಂದ, ಎಚ್ಚು – ಹೊಡೆದು, ನಚ್ಚುಗಿಡಿಸೆ–(ಅವನ ಸ್ವಶಕ್ತಿಯ) ನಂಬಿಕೆಯನ್ನು ಹಾಳುಮಾಡಲು, ಘಟೋತ್ಕಚಂ–ಘಟೋತ್ಕಚನು, ಶೂಲಮಂ–ಶೂಲಾಯುಧವನ್ನು, ಕೊಂಡು–ತೆಗೆದುಕೊಂಡು ;

ಇದು ಮಾತ್ರಾವೃತ್ತ; ಪ್ರತಿಪಾದದಲ್ಲೂ ಮೂರು ಮಾತ್ರೆಯ ಗಣಗಳು ಏಳು ಮತ್ತು ಒಂದು ಗುರುವೂ ಬರುತ್ತವೆ; ಇದು ಅಂಶಗಣಘಟಿತ ಉತ್ಸಾಹ ವೃತ್ತವೂ ಆಗಬಹುದು; ಆಗ — —, ∪∪—, ಎಂಬ ಚತುರ್ಮಾತ್ರಾ ಗಣಗಳು ಬರುವುದಿಲ್ಲ.

೧೪. ನೆಲಂ ಅದಿರ್ವಿನಂ-ನೆಲವು ಅದುರುತ್ತಿರಲು, ಇದಿರಂಬರೆ-ಎದುರಿಗೆ ಬರಲು, ಕುಲಿಶಾಯುಧಂ,-ಇಂದ್ರನು, ಇತ್ತ-ಕೊಟ್ಟ, ಶಕ್ತಿಯಿಂದೆ-ಶಕ್ತಿಯೆಂಬ ಆಯುಧದಿಂದ, ಆತನ – ಘಟೋತ್ಕಚನ, ಉರಃಸ್ಥಲಮಂ – ಎದೆಯ ಪ್ರದೇಶವನ್ನು, ಇಡೆ – (ಕರ್ಣನು) ಹೊಡೆಯಲು, ವಜ್ರಹತಿಯಿಂ-ವಜ್ರಾಯುಧದ ಏಟಿನಿಂದ, ಕುಲಗಿರಿ-ಕುಲಪರ್ವತವು, ಕೆಡೆವಂತೆ-ಬೀಳುವಹಾಗೆ, ಆ ದನುತನಯಂ-ಆ ಘಟೋತ್ಕಚನು, ಕೆಡೆದಂ-ಬಿದ್ದನು.

೧೫. ಇವನ-ಘಟೋತ್ಕಚನ, ಕಬಂಧ ಘಾತದಿಂ-ಮುಂಡದ ಪೆಟ್ಟಿನಿಂದ, ಒಂದಕ್ಷೋಹಿಣಿ – ಒಂದು ಅಕ್ಷೋಹಿಣಿ ಸೈನ್ಯವು, ಇಂದು, ನುರ್ಗಿದುದು – ನುಚ್ಚುನುರಿಯಾಯಿತು; ಸತ್ತು – ತಾನು ಸತ್ತು, ಇನಿತಂ – ಇಷ್ಟನ್ನು, ಕೊಂದಂ – ಕೊಂದನು; ಇವನಂ-ಇವನನ್ನು ಎಂದರೆ ಇಂಥವನನ್ನು, ಅಳ್ಕುಱೆ-ಭಯವುಂಟಾಗುವಹಾಗೆ, ಕೊಂದ, ಅಳವು – ಪರಾಕ್ರಮವು, ಇನತನಯನಲ್ಲದಂಗೆ – ಕರ್ಣನಲ್ಲದವನಿಗೆ, ಒಪ್ಪುಗುಮೇ-ಒಪ್ಪುತ್ತದೆಯೇ? ಇಲ್ಲ.

ವಚನ: ಎರಡುಂ ಪಡೆಗಳುಂ-ಎರಡು ಸೈನ್ಯಗಳೂ; ದೇವರ ಪಡೆಗಳುಂ-ದೇವತೆಗಳ ಸಮೂಹಗಳೂ; ಅಯ್ಗಾವುದು ನೆಲಂ – ಐದು ಗಾವುದದ ನೆಲವು; ಒಡಲ ಅಳವಿಯಾಗೆ-ದೇಹದ ಪ್ರಮಾಣವಾಗಲು (ಅಳತೆಯಾಗಲು);

೧೬. ಘಟೋತ್ಕಚನ ವಧೆಯಲ್ಲಿ ರಾತ್ರಿ ಯುದ್ಧ ಮುಗಿಯುತ್ತದೆ: ದಿವಿಜಾಧೀಶನ-ಇಂದ್ರನು, ಕೊಟ್ಟ, ಶಕ್ತಿಯನದಂ – ಆ ಶಕ್ತ್ಯಾಯುಧವನ್ನು, ಕರ್ಣಂ-ಕರ್ಣನು, ನರಂಗೆಂದು-ಅರ್ಜುನನಿಗೆ ಎಂದು, ಬಯ್ತು-ಮುಚ್ಚಿಟ್ಟು, [ಅ]ವನಿಂದೆ –ಆ ಕರ್ಣನಿಂದ, ಇಂದು-ಈ ದಿನ, ಅಟಿವೆಯ್ದೆ ವಂದೊಡೆ-ಸಾವು ಸಮೀಪಿಸಿದ್ದರಿಂದ, ಅದಱಿಂದೆ-ಆ ಶಕ್ತ್ಯಾಯುಧದಿಂದ, ಆತನಂ-ಘಟೋತ್ಕಚನನ್ನು, ಕೊಂದಂ-ಕೊಂದನು; ಇಂ ಇವನಂ – ಇನ್ನು ಈ ಕರ್ಣನನ್ನು, ಕೊಲ್ವದು-ಕೊಲ್ಲುವುದು, ಮೊಗ್ಗ–ಸಾಧ್ಯ; ಅದರ್ಕೆ-ಅದಕ್ಕಾಗಿ, ಅಟಿಲವೇಡ-ದುಃಖ ಪಡಬೇಡ, ಎಂಬನ್ನಂ –ಎನ್ನುತ್ತಿರಲು, ಅತ್ತ-ಅತ್ತ ಕಡೆ, ರವಿ-ಸೂರ್ಯನು, ನಿಜಾತ್ಮಜನ ಗೆಲ್ದ-ತನ್ನ ಮಗನಾದ ಕರ್ಣನು ಗೆದ್ದ, ಉಗ್ರಾಜಿಯಂ – ಭಯಂಕರ ಯುದ್ಧವನ್ನು, ನೋಟ್ಪವೋಲ್-ನೋಡುವ ಹಾಗೆ, ಪೂರ್ವಾಚಲಮಂ-ಮೂಡಣ ಪರ್ವತವನ್ನು, ಏಱಿದಂ-ಹತ್ತಿದನು; ಎಂದರೆ ಸೂರ್ಯೋದಯವಾಯಿತು.

ವಚನ: ಶೋಣಾಶ್ವಂಗಳೊಳ್-ಕೆಂಪಾದ ಕುದುರೆಗಳಲ್ಲಿ; ಕಳೇಬರ-ದೇಹ, ಹೆಣ; ಗಿರಿದುರ್ಗಮಲ್ಲದ-ಬೆಟ್ಟದ ದುರ್ಗವಲ್ಲದ; ಶೃಂಗಾಟಕವ್ಯೂಹಮಂ-ನಾಲ್ಕು

ದಾರಿ ಕೊಡುವ ಸ್ಥಳದಂತಿರುವ ಸೇನಾರಚನೆಯನ್ನು; ಪತಾಕಿನಿಯುಮಂ-ಸೈನ್ಯ ವನ್ನೂ; ಕೆಯ್ವೀಸಿದಾಗಳ್-ಕೈ ಬೀಸಿದಾಗ,

೧೭. ಎಳೆಯುಂ ಬ್ರಹ್ಮಾಂಡಮುಂ ತಾಗುವವೊಲ್ – ಭೂಮಿಯೂ ಬ್ರಹ್ಮಾಂಡವೂ ಸಂಘಟ್ಟಿಸುವ ಹಾಗೆ, ಉಭಯ ಸೈನ್ಯಾಬ್ಧಿಗಳ್-ಎರಡು ಸೈನ್ಯ ಸಾಗರಗಳೂ, ಬಿಲ್ ಬಿಲ್ಲೊಳ್-ಬಿಲ್ಗಾರರು ಬಿಲ್ಗಾರರಲ್ಲಿ; ಉದಗ್ರಾಶ್ವಂಗಳ್-ಶ್ರೇಷ್ಠರಾದ ಅಶ್ವಾರೋಹಕರು, ಅಶ್ವಂಗಳೊಳ್ – ಕುದುರೆಸವಾರಿಯಲ್ಲಿ; ಅಣಿ-ಪದಾತಿ, ಅಣಿಯೊಳ್-ಪದಾತಿಗಳಲ್ಲಿ, ಸ್ಯಂದನಂ- ರಥಿಕರು; ಸ್ಯಂದನೌಘಂಗಳೊಳ್-ರಥಿಕರ ಸಮೂಹಗಳಲ್ಲಿ, ಉಗ್ರೇಭಂ-ಭಯಂಕರವಾದ ಗಜಾರೋಹಕರು, ಮದೇಭಂಗಳೊಳ್-ಸೊಕ್ಕಾನೆಯ ಭಟರಲ್ಲಿ, ಇಱಿಯೆ-ಯುದ್ಧಮಾಡಲು, ತೆರಳ್ದುರ್ವ-ಹರಿದು ಬರುವ, ಕೆನ್ನೆತ್ತರಿಂದೆ-ಕೆಂಪಾದ ರಕ್ತದಿಂದ, ಖಂಡಂಗಳ-ಮಾಂಸಖಂಡಗಳ, ಒಂದಿಂಡೆಯೊಳೆ – ಒಂದು ರಾಶಿಯಲ್ಲೇ, ಜವಂ – ಯಮನು, ಆಡುರ್ಚ – ಮೇಲೆ ಎರಗಿ, ಓಕುಳಿಯಂ – ಓಕುಳಿ ಎರಚುವುದನ್ನು, ಆಗಳ್-ಆಗ, ಆಡಿಪಂತೆ – ಆಡಿದ ಹಾಗೆ, ಆದುದು-ಆಯ್ತು, ಇಲ್ಲಿ ಬಿಲ್, ಅಶ್ವ, ಆಣಿ ಮುಂತಾದುವುಗಳ ವಾಚ್ಯಾರ್ಥಕ್ಕಿಂತ ಲಕ್ಷ್ಯಾರ್ಥಗಳು ಪರಿಗ್ರಾಹ್ಯ; ಈ ಅಲಂಕಾರವನ್ನು Synecdoce ಎಂದು ಕರೆಯುತ್ತಾರೆ.

**ವಚನ**: ಜೆಳ್ಪಂಗೆಡೆಮ-ಪ್ರವಾಹವಾಗಿ; ಬಸವಱಿದು – ಆಯಾಸಪಟ್ಟು; ಮಾನಸಿಕೆಯಂ-ಮನುಷ್ಯತ್ವವನ್ನು; ತುಱುವಂ ಮಗುೞ್ಚಿದುದುಮಂ-ದನಗಳನ್ನು ಹಿಂದಿರುಗಿಸಿದುದನ್ನೂ,

೧೮. ಮಗಳಂ-ಮಗಳಾದ ಉತ್ತರೆಯನ್ನು, ಪಾರ್ಥಾತ್ಮಜಂಗಂ-ಅಭಿಮನ್ಯುವಿಗೂ, ತಲೆ– ತನ್ನ ತಲೆಯೇ, ಬಱಿವಱಿಯೆಂದು – ಬಳುವಳಿಯೆಂಬುದಾಗಿ, ಇತ್ತುದಂ – ಕೊಟ್ಟುದನ್ನು, ತನ್ನ ಮಕ್ಕಳ್ – ಉತ್ತರ, ಶ್ವೇತ ಮುಂತಾದವರು, ನೆಗಟ್ದ-ಉಂಟಾದ, ಆ ಸಂಗ್ರಾಮದೊಳ್-ಆ ಯುದ್ಧದಲ್ಲಿ, ಸತ್ತುದುಮನೆ-ಸತ್ತುದನ್ನೇ, ಮನದೊಳ್-ಮನಸ್ಸಿನಲ್ಲಿ, ತಾಳ್ದಿ-ಧರಿಸಿ, ತಾಪಾಗಳ್-ಎದುರಾಗಿ ತಾಗುವಾಗ, ಆ ಜೆಟ್ಟಿಗನಂ-ಆ ಶೂರನನ್ನು, ಕುಂಭೋದ್ಭವಂ-ದ್ರೋಣನು, ಬಂದು, ಅದಿರದೆ-ಹೆದರದೆ, ಇದಿರಂ-ಎದುರನ್ನು, ಅಂತು-ಪ್ರತಿಭಟಿಸಿ, ಒಂದೆ ಕೆಲ್ಲಂಬಿನಿಂ-ಒಂದೇ ಒಂದು ಕೆಲ್ಲಂಬಿನಿಂದ (?), ಸೊಲ್ಲಗೆ-ಸದ್ದಿಲ್ಲದೆ, ಪಾರ್ದು-ನೋಡಿ, ಆರ್ದು-ಗರ್ಜಿಸಿ, ಏಸಿಂ – ಹೊಡೆತದಿಂದ, ತಲೆಪಱಿದು – ತಲೆ ಕತ್ತರಿಸಿ, ಬೀೞ್ವನ್ನಂ-ಬೀಳುತ್ತಿರಲು, ಆಗಳ್-ಆಗ, ಎಚ್ಚಂ-ಬಾಣಪ್ರಯೋಗ ಮಾಡಿದನು.

**ವಚನ**; ಜೆಳ್ಪಂಗೆಡೆಪು – ಪ್ರವಾಹವಾಗಿ; ಬಸವಱಿದು ಆಯಾಸಪಟ್ಟು; ಮಾನಸಿಕೆಯಂ-ಮನುಷ್ಯತ್ವವನ್ನು;

೧೯. ಎನಗಂ-ನನಗೂ (ದ್ರುಪದನಿಗೂ), ಭಾರದ್ವಾಜಂಗಂ-ದ್ರೋಣನಿಗೂ, ವಿದ್ಯೆಯೊಳ್ – ವಿದ್ಯೆ ಕಲಿಯುವಲ್ಲಿ, ಗುರುಗಳ್ – ಗುರುವು (ಗಳು), ಒರ್ವನೆ

ಒಬ್ಬನೇ; ಎನ್ನಂ-ನನ್ನನ್ನು, ಬಿಲ್ಬಲ್ಮೆಯೊಳ್-ಬಿಲ್ಲಿನ ಜ್ಞಾನದಲ್ಲಿ ಎಂದರೆ ಧನುರ್ವಿದ್ಯೆಯಲ್ಲಿ, ಮಿಗಲ್-ಮೀರಿಸಲು, ಪಿರಿದು-ಹಿರಿದಾದ, ಪುರುಡು-ಸ್ಪರ್ಧೆಯು, ಉಂಟು-ಇದೆ; ಎಯ್ದೆ-ಚೆನ್ನಾಗಿ, ಜೇರ್ವರಿದ-ಜೇರುಬಿಟ್ಟ, ಪಗೆಯುಂ-ದ್ವೇಷವೂ, ಬನ್ನಂಬಟ್ಟ-ಸೋಲನ್ನು ಹೊಂದಿದ, ತಿರಸ್ಕಾರಕ್ಕೆ ಗುರಿಯಾದ, ಮುನ್ನಿನ-ಮೊದಲಿನ, ಎನ್ನ-ನನ್ನ, ಬನ್ನಮುಂ-ಸೋಲೂ, ಪಿರಿದು-ದೊಡ್ಡದು; ಅದೆ ನೆವಂಗೊಂಡು-ಅದೇ ನೆಪವನ್ನಾಗಿಟ್ಟುಕೊಂಡು, ಅಂ-ನಾನು, ಇಂದು-ಈಗ, ಇಲ್ಲಿ-ಈ ರಣರಂಗದಲ್ಲಿ, ನೀಗದೆ-ತೀರಿಸದೆ, ಕಳೆದುಕೊಳ್ಳದೆ, ಮಾಣ್ಬೆನೇ-ತಡೆಯುತ್ತೇನೆಯೇ?

ವಚನ: ಆಕಾರದ ಕವಿಯುಂ-ಆಕಾರದ ಮುಚ್ಚಳವೂ: ನೆಲದ ಕಲ್ಲೆಯುಂ-ನೆಲದ ಬೇಲಿಯೂ ಎಂದರೆ ಸಮುದ್ರವೂ; ಮುನ್ನಮೆ-ಮೊದಲೇ, ಮೇರೆದಪ್ಪುವುದುಮಂ-ಮೇರೆಯನ್ನು ಮೀರುವುದನ್ನೂ; ತನ್ನೊಳ್ ಅಳವಡಿಸಿಕೊಂಡು-ತನ್ನಲ್ಲಿ ಹೊಂದಿಸಿಕೊಂಡು; ಕವಿ-ಮುಚ್ಚಳ; ಕವಿ ಪೊಜಗಿರೆ ಕೀಟಿತೊಳಗಿರೆ ಅವಿರಳಮಾ ತುರಗಮುಖಿಸೋ ನೃಪಮಂದಿರಮೋ . (ಶಮದ. ೧೪೯-೮), ಕಲ್ಲೆ=(ತೆ) ಕಲ್ಲ-ಬೇಲಿ, ಎಲ್ಲೆ.

೨೦. ದೆಸೆಯೆಲ್ಲಂ-ಎಲ್ಲ ದಿಕ್ಕುಗಳೂ, ತೀವ್ರ ಬಾಣಾಳಿಯೊಳೆ-ತೀಕ್ಷ್ಣವಾದ ಬಾಣಗಳ ಸಾಲುಗಳಲ್ಲಿಯೇ, ಮೆಡಱಿದಂತೆ-ಹೆಣೆದ ಹಾಗೆ, ಅಂಬರಂ-ಆಕಾಶ, ಬಾಣದಿಂದಂ-ಬಾಣಗಳಿಂದ, ಮುಸುಕಿಟ್ಟಂತೆ-ಮುಸುಕು ಹಾಕಿದಂತೆ, ಆಗೆ-ಆಗಲು, ಬೇಗಂ-ವೇಗವಾಗಿ, ತುಡುವ-ಹೂಡುವ, ಬಿಡುವ-ಎಸೆಯುವ, ಸೂಟಿಗ್ಗಿಯ್ಯ-ಸಡದಿಯ ಕೈಗಳ, ಬೇಗಂಗಳಂ-ವೇಗಗಳನ್ನು, ನಿಟ್ಟಿಸಲ್-ನೋಡಲು, ಆರ್ಗಂ-ಯಾರಿಗೂ, ಬಾರದಂತಾಗೆ-ಬಗದೆ ಇರದಂತಾಗಲು, ತದ್ರಾಜಚಕ್ರಂ-ಆ ರಾಜರ ಸಮೂಹ, ಅಸದಳಂ-ಅಧಿಕವಾಗಿ, ಇಸೆ-ಬಾಣಪ್ರಯೋಗಮಾಡಲು, ಉದ್ದಾಮ . . . . ಕಾರಂ: ಉದ್ದಾಮ-ಅತಿಶಯವಾದ, ಮೌರ್ವೀರವ-ಬಿಲ್ಲಹೆದೆಯ ಟಂಕಾರದಿಂದ, ಮುಖರ-ಶಬ್ದಾಯಮಾನವಾಗಿರುವ, ಮಹಾಚಾಪ-ಮಹಾ ಧನಸ್ಸುಗಳ, ಚಕ್ರ-ಸಮೂಹಗಳ, ಅಂಧಕಾರಂ-ಕತ್ತಲೆಯು, ಪೊದಳ್ದು-ವ್ಯಾಪಿಸಿ, ಅರ್ಬಿಸಿದತ್ತು-ಹೆದರಿಸಿತು.

ವಚನ; ಅನ್ನೆಗಂ-ಅಷ್ಟರಲ್ಲಿ; ಕಪ್ಪಂಗವಿಯಾಗಿ-ಆನೆಯನ್ನು ಹಿಡಿಯುವ ಗುಣಿಯ ಮುಚ್ಚಳದಂತಾಗಿ, ಕವಿವ-ಮುತ್ತಿಕೊಳ್ಳುವ; ಜಳಧರ ವರ್ಷಂಗಳಿಂ-ಮೇಘಗಳ ಮಳೆಯಿಂದ; ನಂದಿಸೆಯುಂ-ಆರಿಸುತ್ತಲು; ಮುಟ್ಟಿವರೆ-ಮುಟ್ಟುವಂತೆ ಹತ್ತಿರ ಬರಲು; ನಿಱಿಸಿ-ಸ್ಥಾಪಿಸಿ; ಪೇಱ್ದು-ನಿಯಮಿಸಿ; ಕಪ್ಪಂಗವಿ < ಕಪ್ಪ=ಕಪ್ಪು+ಕವಿ; ಕಪ್ಪು ಎಂದರೆ ಗುಣಿ; ನಡುವೆ ಬಿಂದುವಿನ ಆಗಮ, ಕಳ್ಳಂಗಡಲೆ ಎಂಬಲ್ಲಿರುವಂತೆ.

೨೧. ಉಪಚಯಮಪ್ಪ-ವೃದ್ಧಿಹೊಂದುತ್ತಿರುವ, ಬಿಲ್ಲೊವಜನ-

ದ್ರೋಣನ, ಅಂಬಿನ–ಬಾಣಗಳ, ಬೆಳ್ಸರಿ–ಬಿಳಿ ಸೋನೆ ಮಳೆ; ದ್ರುಪದಬಲಾಂಬು ರಾಶಿಯಂ–ದ್ರುಪದನ ಸೈನ್ಯ ಸಾಗರವನ್ನು, ಅಗುರ್ವಿಸ–ಹೆದರಿಸುವ, ಪರ್ವಿಸ–ಚೆದುರಿಸುವ, ಬಾಡಬಾಗ್ನಿಯಾಯ್ತು – ಬಾಡಬಾಗ್ನಿಯಾಯಿತು. ಅದಂ–ವಿಶೇಷ ವಾಗಿ, ರಥದ್ವಿಪಘಟೆ–ರಥಗಳೂ, ಆನೆಗಳ ಸಮೂಹವೂ, ಎಂಬಿವು–ಎಂಬ ಇವು, ಅಂಬಿನೊಳೆ–ಬಾಣಗಳಲ್ಲಿಯೇ, ಪೊಱ್ಚು–ಹೂತು ಹೋಗಿ, ಪಡಲ್ವಡೆ–ಚೆಲ್ಲಾಪಿಲ್ಲಿ ಯಾಗುತ್ತಿರಲು, ಕುಂಭಸಂಭವಂ–ದ್ರೋಣನು, ಆ ತ್ರಿಪುರಮಂ–ಆ ಮೂರು ಪುರ ಗಳನ್ನು, ಎಚ್ಚ–ಬಾಣದಿಂದ ಹೊಡೆದ, ರುದ್ರನ–ಈಶ್ವರನ, ನೆಗೞ್ತಿಯುಮಂ–ಕಾರ್ಯವನ್ನೂ, ಗೆಲೆ–ಗೆಲ್ಲಲು, ತಿಣ್ಣಂ–ಬಲವಾಗಿ, ಎಚ್ಚಂ–ಹೊಡೆದನು.

**ವಚನ:** ಜವನಂತೆ–ಯಮನಹಾಗೆ. ಒಕ್ಕಲಿಕ್ಕಿ–ಒಕ್ಕಣೆಮಾಡಿ; ಏನುಂ ಮಾಣದೆ–ಏನೂತಡಮಾಡದೆ; ಬಟ್ಟೆನಂಬಿನ ದುಂಡಾದ ಅಲಗುಳ್ಳ ಬಾಣಗಳ, ಬೆಳ್ಸರಿಯುಮಂ–ಸೋನೆಮಳೆಯನ್ನೂ; ಕೆಲ್ಲಂಬಿನ–ಕೆಲ್ಲಂಬುಗಳೆಂಬ ಬಾಣಗಳ, ತಂದಲುಮಂ – ತುಂತುರುಮಳೆಯನ್ನೂ, ಪಾರೆಯಂಬಿನ – ಹಾರೆಯಾಕಾರದ ಬಾಣಗಳ, ಸೋನೆಯುಮಂ–ಎಡೆಬಿಡದೆ ಸುರಿಯುವ ಮಳೆಯನ್ನೂ; ಕಳಸಯೋನಿ–ದ್ರೋಣನು.

೨೨. ಪದಿನೆಂಟಂಬಿನೊಳ್ ಎಚ್ಚೊಡೆ–ಹದಿನೆಂಟು ಬಾಣಗಳಿಂದ ಹೊಡೆದರೆ, ಪದಿನೆಂಟಸ್ತ್ರಂಗಳಿಂ–ಹದಿನೆಂಟು ಬಾಣಗಳಿಂದ, ಎಚ್ಚು–ಹೊಡೆದು, ಸೀಳ್ದು–ಸೀಳಿ, ಕೋಪದಿಂ–ಕೋಪದಿಂದ, ಎಂಬತ್ತುಸರಂಗಳಿಂ–ಎಂಬತ್ತು ಬಾಣಗಳಿಂದ, ಗುರು–ದ್ರೋಣ, ಭರಂಗೆಯ್ದು – ವೇಗವನ್ನು ತೋರಿಸಿ, ಎಚ್ಚೊಡೆ – ಪ್ರಯೋಗಿಸಿದರೆ, ಎಂಬತ್ತು ಬಾಣದಿಂ–ಎಂಬತ್ತು ಬಾಣಗಳಿಂದ, ಕಡಿದು–ಕತ್ತರಿಸಿ, ಉಗ್ರ.... ತಂಗಳಂ; ಉಗ್ರ–ಭಯಂಕರವಾದ, ಸೂತ–ಸಾರಥಿಗಳ, ಹಯ–ಕುದುರೆಗಳ, ಸಂಘಾತಂಗಳಂ – ಸಮೂಹಗಳನ್ನು, ತಿಣ್ಣಂ – ತೀವ್ರವಾಗಿ, ಎಚ್ಚು–ಹೊಡೆದು, ಇದಿರೊಳ್–ಎದುರಿನಲ್ಲಿ, ನಿಲ್ಲದಿರ್ – ನಿಲ್ಲಬೇಡ, ಸತ್ತೆ – ನೀನು ಸತ್ತುಹೋದೆ, ಎನುತುಂ–ಎಂದುಹೇಳುತ್ತ, ಪಾಂಚಾಳರಾಜಾಧಿಪಂ–ದ್ರುಪದನು,

**ವಚನ:** ಮೆಯ್ವೆರ್ಚಿ–ಉಕ್ಕಿ, ಕೊಬ್ಬಿ; ಪೆರ್ಚಿದ–ಅಧಿಕವಾದ, ಉಮ್ಮಚ್ಚ ದೊಳ್–ಕೋಪದಲ್ಲಿ; ಪೂಣ್ಗೂರ್ತು–?

ಪೂಣ್ಗೂರ್ತು–ಇದರ ರೂಪವೂ ಅರ್ಥವೂ ಅನಿರ್ದಿಷ್ಟ, ಪುಣ್ಗೂರ್ತು ಎಂದು ರೂಪವುಂಟು (ಪಂಪಭಾ ೧೨–೭೨ವ); ಬಹುಶಃ ಪುಣ್ = ಹುಣ್ಣು, ಎಂಬ ಶಬ್ದ ಇರಬಹುದು, ಪುಣ್ಣಂ + ಕೂರ್ತು < ಕೂರ್–ತೀಕ್ಷ್ಣವಾಗು?

೨೩. ಮುನ್ನೆ–ಮೊದಲೇ, ಎನ್ನೊಳೆ–ನನ್ನಲ್ಲಿಯೇ, ಮುೞ್ಚಿಪನೆ–ಮಾತ್ಸರ್ಯ ಪಡುವವನೇ; ಒಡನೆ ಓದಿದೆನೆಂಬ ಮೇಳದಿಂ–ಜೊತೆಯಲ್ಲಿ ವಿದ್ಯಾಭ್ಯಾಸ ಮಾಡಿದೆನು ಎಂಬ ಸಲುಗೆಯಿಂದ, ಎನ್ನನೆ–ನನ್ನನ್ನೇ, ಮುೞ್ಚಂ–ಮೆಚ್ಚನು; ಎನ್ನೊಳ್–ನನ್ನಲ್ಲಿ, ಇವಂ–ಇವನು, ಸಮನೆ–ಸಮಾನನಾಗಿಯೆ, ಎಚ್ಚಪನಸ್ತ್ರಂ–ಬಾಣ ಪ್ರಯೋಗ

ಮಾಡುವವನಾಗುತ್ತಾನೆ; ಆದೊಡೇಂ-ಆದರೇನು? ಇಂ-ಇನ್ನು, ಇವನಂ-ಇವನನ್ನು, ಪಡಲ್ವಡಿಪೆಂ-ಕೆಡರಿಬೀಳಿಸುತ್ತೇನೆ, ಎಂದು. ಇರದೆ, ಆಗಳೆ-ಆಗಲೇ, ಭಾರ್ಗವಾಸ್ತ್ರದಿಂದಂ-ಭಾರ್ಗವವೆಂಬ ಬಾಣದಿಂದ, ಆ ದ್ರುಪದರಾಜಶಿರೋಂಬುಜಮಂ-ಆ ದ್ರುಪದ ರಾಜನ ಕಮಳದಂತಿರುವ ತಲೆಯನ್ನು, ಘಟೋದ್ಭವಂ-ದ್ರೋಣನು, ನೆಱೆದು-ಸಮರ್ಥನಾಗಿ, ಎಚ್ಚಂ-(ಬಾಣದಿಂದ) ಕತ್ತರಿಸಿದನು, ಭಾರ್ಗವಾಸ್ತ್ರ ಎಂದರೆ, ಪರಶುರಾಮನು ಕೊಟ್ಟ ಬಾಣವಿರಬಹುದು; ಶಿವನು ಕೊಟ್ಟ ಬಾಣವಿರಬಹುದು; ಭಾರ್ಗವ ಎಂದರೆ ವಜ್ರ ಎಂದೂ ಅರ್ಥವಾಗುತ್ತದೆ, ಭಾರ್ಗವಾಸ್ತ್ರ ಎಂದರೆ ವಜ್ರಾಸ್ತ್ರವಿರಬಹುದು.

**ವಚನ:** ಅಱಿವಂ ಕಂಡು – ಸಾವನ್ನು ನೋಡಿ; ಪನ್ನೊರ್ವರುಂ-ಹನ್ನೊಂದು ಜನರೂ.

೨೪. ಶಕಟಂಗಳ್-ಬಂಡಿಗಳು, ಪದಿನೆಂಟು ಕೋಟಿವರೆಗಂ-ಹದಿನೆಂಟು ಕೋಟಿಯವರೆಗೂ, ತೀವಿರ್ದ-ತುಂಬಿದ್ದ ಅನೇಕ-ಲೆಕ್ಕವಿಲ್ಲದ, ಉಗ್ರಸಾಯಕದಿಂದಂ – ಭೀಕರ ಬಾಣಗಳಿಂದ, ಚತುರಂಗ ಸಾಧನದ – ಚತುರಂಗ ಸೈನ್ಯದ, ಮೆಯ್ಮೆಯ್ಯೊಳ್ – ಮೈಮೈಯಲ್ಲಿ, ಜಿಗಿಲ್ತು – ಅಂಟಿಸಿ, ಅಂತ – ಎದುರಾದ, ನಾಯಕರಂ – ಸೇನಾಪತಿಗಳನ್ನು, ಸುಂಟಗೆಯಾಱುದಂತೆ – ಸುಟ್ಟ ಮಾಂಸವನ್ನು ಆರಲು ಇಕ್ಕಿದ ಹಾಗೆ, ಜೋಲ್ವನ್ನೆಗಂ-ಜೋತುಬೀಳುತ್ತಿರಲು, ರಥದೊಳ್-ರಥಗಳಲ್ಲಿ, ಕೋದು-ಪೋಣಿಸಿ, ಕುಂಭೋದ್ಭವಂ-ದ್ರೋಣನು, ಮೆಯ್ವೆರ್ಚಿ-ಮೈಯುಬ್ಬಿ, ಚಾಪಕಳಾಕೌಶಳಮಂ-ಬಿಲ್ವಿದ್ಯೆಯ ನೈಪುಣ್ಯವನ್ನು, ಜಗಕ್ಕೆ-ಲೋಕಕ್ಕೆ, ಮೆಱೆದಂ-ಪ್ರಕಟಿಸಿದನು.

**ವಚನ:** ಪೇೞಪೆಸರಿಲ್ಲದಂತೆ – ಹೇಳಲು ಹೆಸರಿಲ್ಲದೆ, ನಿರ್ನಾಮವಾಗಿ; ಅಂಪರ್-ಎದುರಿಸುವವರು; ಇಕ್ಕಿ-ಹೊಡೆದು, ಗೆಲ್ದ ಮಲ್ಲನಿರ್ದಂತೆ-ಗೆದ್ದ ಜೆಟ್ಟಿ ಇದ್ದ ಹಾಗೆ.

೨೫. ಸಕಲಾರಾತಿ ನರೇಂದ್ರ ಮೌಳಿಗಳ್ – ಎಲ್ಲಾ ಶತ್ರು ರಾಜರ ಕಿರೀಟಗಳು, ಉರುಳ್ದು-ಸಲಕ್ಕೆ ಉರುಳಿ, ಆದೀಪ್ತ ರತ್ನಾಂಶುಮಾಳಿಕೆಯಿಂದೆ-ಪ್ರಕಾಶಮಾನವಾದ ರತ್ನಗಳ ಕಿರಣಗಳ ಮಾಲೆಯಿಂದ, ಆ ರಣರಂಗಮಂ-ಆ ಕದನ ಭೂಮಿಯನ್ನು, ಬೆಳಗೆ-ಬೆಳಗುವಂತೆ ಮಾಡಲು, ಕಾೞ್ಕಿಚ್ಚು ಎಂದು-ಇದು ಕಾಡುಗಿಚ್ಚು ಎಂದು, ಭೂತಾಂಗನಾನಿಕರಂ-ಪಿಶಾಚಸ್ತ್ರೀಯರ ಸಮೂಹವು, ಶೋಣಿತವಾರಿಯಂ – ರಕ್ತವೆಂಬ ನೀರನ್ನು, ಕುಡಿದು, ಅಗುರ್ವಪ್ಪನ್ನೆಗಂ-ಭಯವುಂಟಾಗುತ್ತಿರಲು, ಸೂಸೆ-ಚೆಲ್ಲಲು, ನೋಡೆ-ನೋಡು, ಆ ದ್ರೋಣನಿಂ-ಆ ದ್ರೋಣನಿಂದ, ಕೊಳ್ಗುಳಂ-ಯುದ್ಧರಂಗವು, ಕೂಡೆ-ಕೂಡಲೆ, ಸಂಜೆಗವಿದಂತೆ-ಸಂಧ್ಯಾಕಾಲವು ಮುಚ್ಚಿ ಕೊಂಡಂತೆ, ಕವಿಲ್ತು-ಕಪ್ಪು ಕೆಂಪು ಮಿಶ್ರವಾದ ಕಪಿಲ ವರ್ಣವಾಗಿ, ಇರ್ದುದು-ಇತ್ತು,

**ವಚನ :** ದ್ರೋಣನಂ ಕೆಯ್ಗೆಮಾಡಲೆಂದು – ದ್ರೋಣನನ್ನು ವಶಪಡಿಸಿ ಕೊಳ್ಳಬೇಕೆಂದು ;

೨೬. ನಿಶಿತ ವಿಶಿಖಂಗಳ್ – ಹರಿತವಾದ ಬಾಣಗಳು, ಒಂದೊಂದು – ಒಂದೊಂದೂ, ಅಶನಿಯೆ–ಸಿಡಿಲೇ ; (ಅವು) ಗಿರಿಕುಳಮಂ–ಬೆಟ್ಟಗಳ ಸಮೂಹವನ್ನು, ಅ [ಲ]ಜುವಂತೆ – ನಾಶಮಾಡುವ ಹಾಗೆ. ಮದೇಭಪ್ರಸರಸಹಸ್ರಂ – ಸಾವಿರ ಸೊಕ್ಕಾನೆಗಳ ಗುಂಪುಗಳು, ಕೆಡೆದುವು–ಬಿದ್ದುವು ; ದ್ರೋಣನಿದಿರ್ಗೆ–ದ್ರೋಣನ ಎದುರಿಗೆ, ವಿಸಸನದೊಳ್ – ಯುದ್ಧದಲ್ಲಿ, ಪಾರ್ವಲಂ – ಪ್ರತಿಭಟಿಸುವ ಸೈನ್ಯ, ಒಳವೇ–ಇವೆಯೇ? ಇಲ್ಲ.

**ವಚನ :** ಮಾಜಾಂತ – ಪ್ರತಿಭಟಿಸಿ ಎದುರಿಸಿದ ; ಸಿಂಧುರಾರಾತಿಯೆ – ಸಿಂಹವೇ :

೨೭. ನಾಮದಿಂ – ಹೆಸರಿನಿಂದ, ಅಶ್ವತ್ಥಾಮಂ – ಅಶ್ವತ್ಥಾಮ ಎನ್ನುವ ಒಂದು ಸಾಮಜಂ – ಒಂದು ಆನೆಯು, ಅಲ್ಲಿ – ಯುದ್ಧರಂಗದಲ್ಲಿ, ಅೞಿದೊಡೆ–ಸತ್ತರೆ, ನೃಪಂ–ಧರ್ಮರಾಜನು, ಕಂಡು–ನೋಡಿ, ಹತೋಶ್ವತ್ಥಾಮಾ ಎನೆ–ಅಶ್ವತ್ಥಾಮನು ಹತನಾದನು ಎನ್ನಲು. ಒವಜಂ – ಗುರುವಾದ ದ್ರೋಣನು, ಒರ್ವೆಸರ ಇಭಮಂ – ಒಂದು ಹೆಸರಿನ ಆನೆಯನ್ನು, ಅಶ್ವತ್ಥಾಮನೆಗೆತ್ತು – ತನ್ನ ಮಗನಾದ ಅಶ್ವತ್ಥಾಮನೆಂದೇ ಭಾವಿಸಿ, ಒಣರ್ದಂ–ಚಿಂತಿಸಿದನು.

೨೮. ಒಗೆದ – ಉತ್ಪನ್ನವಾದ, ಸುತಶೋಕದಿಂದೆ – ಪುತ್ರಶೋಕದಿಂದ, ಆವಗೆಯಂತೆ – ಮಡಕೆಯನ್ನು ಸುಡುವ ಒಲೆಯಂತೆ, ಒಳಗು – ಮನಸ್ಸು, ಉರಿಯೆ – ಉರಿಯಲು, ಭೋಂಕನೆ – ಬೇಗನೆ, ಇದ್ದಕ್ಕಿದ್ದಂತೆ. ಎರ್ದೆ–ಎದೆಯು, ತೆಜಿಯಲ್ – ಬಿರಿಯಲು, ಹಾ ಮಗನೆ – ಅಯ್ಯೋ ಮಗನೇ, ಎಂದು, ಅಶ್ರುಜಲಾರ್ದ್ರಗಂಡಂ – ಕಣ್ಣೀರಿನಿಂದ ತೊಯ್ದ ಕೆನ್ನೆಯುಳ್ಳವನು, (ದ್ರೋಣ), ಆ ಗಂಡಿನೊಡನೆ – ಆ ತನ್ನ ಪೌರುಷದೊಡನೆ, ಬಿಲ್ಲಂ – ಬಿಲ್ಲನ್ನು, ಬಿಸುಟಂ–ಬಿಸಾಡಿದನು, ಎಸೆದನು.

**ವಚನ :** ವಿಚ್ಛಿನ್ನ ವೀರರಸನುಂ – ಕತ್ತರಿಸಿ ಎಂದರೆ ನಿಂತು ಹೋದ ವೀರ ರಸವುಳ್ಳವನೂ ; ಮಗನ ವಾರ್ತಂ–ಮಗನ ಸುದ್ದಿಯನ್ನು.

೨೯. ಬೆಸಗೊಳೆ–ಕೇಳಲು, ಕುಂಜರಂ–ಆನೆಯು, ಮಡಿದುದು–ಸತ್ತಿತು, ಎಂದು, ಮಹೀಭುಜಂ–ಧರ್ಮರಾಜನು, ಉಳ್ಳವಾಱಿನ್ತೆಯಿಂ–ಇರುವ ರೀತಿಯಿಂದ ಎಂದರೆ ನಿಜವಾಗಿ, ಪುಸಿಯದೆ – ಸುಳ್ಳು ಹೇಳದೆ, ಪೇೞ್ದೊಡಂ – ಹೇಳಿದರೂ, ಕಿಱಿದು ನಂಬದೆಯುಂ – ಸ್ವಲ್ಪವೂ ನಂಬದೆ, ರಣದಲ್ಲಿ – ಯುದ್ಧದಲ್ಲಿ, ಮುನ್ನೆ–ಮೊದಲೇ, ಬಿಲ್ಬಿಸುಟೆಂ – ಬಿಲ್ಲನ್ನು ಬಿಸಾಡಿದೆನು ; ಇಂ ಇದಂ – ಇನ್ನು ಇದನ್ನು ಎಂದರೆ ಈ ಬಿಲ್ಲನ್ನು, ಇದೆಂತು ಪಿಡಿವೆಂ – ಇದು ಹೇಗೆ ಹಿಡಿಯುವೆನು, ಪೇೞ್–ಹೇಳು, ಎಂದು, ಇರದೆ, ಆತ್ಮಯೋಗಿ – ಆತ್ಮಯೋಗವನ್ನುಳ್ಳ, ಬಿಲ್ಗೊವಜಂ–

ದ್ರೋಣನು, ರಣಾಗ್ರದೊಳ್–ಯುದ್ಧದ ಮುಂದುಗಡೆ, ಉದಾತ್ತ ಯೋಗದೊಳ್–ಉತ್ಕೃಷ್ಟವಾದ ಯೋಗ ಸಮಾಧಿಯಲ್ಲಿ, ತನ್ನಸುವಂ – ತನ್ನ ಪ್ರಾಣವನ್ನು, ಕಳೆದಂ–ನೀಗಿದನು,

ವಚನ : ಭಾವಿತಾತ್ಮಂ–ಧ್ಯಾನಿಸಲ್ಪಟ್ಟ ಆತ್ಮವುಳ್ಳವನು ; ಪೆಣನಸಿಡಿದು ಪಗೆಗೊಂಡರ್–ಹೆಣವನ್ನು ಹೊಡೆದು ಹಗೆ ತೀರಿಸಿಕೊಂಡರು ; ಬಾರಿಸೆವಾರಿಸೆ–ಬೇಡ ಬೇಡವೆಂದು ತಡೆಯುತ್ತಿರಲು ;

೩೦. ಕರವಾಳಂ–ಕತ್ತಿಯನ್ನು, ಘುರವಟ್ಟಿಸಿ–ಬೀಸಿ, ಝಳಪಿಸಿ, ಶಿರೋಜಮಂ–ಕೂದಲನ್ನು, ಪಿಡಿದು–ಹಿಡಿದು, ತೆಗೆದು–ಎಳೆದು, ಗುರುವಂ–ದ್ರೋಣನನ್ನು, ಪಚ್ಚಂತಿರೆ – ಎರಡು ಭಾಗ ಮಾಡಿದ ಹಾಗೆ, ಪಿರಿದು – ಹಿರಿದಾಗಿ, ಪೊಯ್ದಂ–ಹೊಡೆದನು ; ಎಂತಪ್ಪರೊಳಂ–ಎಂಥವರಲ್ಲಿಯೂ. ಮುಳಿಸು–ಕೋಪವು, ಅರಿವಂ–ವಿವೇಕವನ್ನು, ಆಗಲ್–ಉಂಟಾಗಲು, ಇತ್ತಪುದೇ ಏಂ–ಅವಕಾಶವನ್ನು ಕೊಡುತ್ತದೆಯೇ ಏನು? ಅರ್ಥಾಂತರನ್ಯಾಸಾಲಂಕಾರ,

ವಚನ : ಎಚ್ಚಿಗೋಣ ಸಾವಂ–(ಬಲಿಯಾಗಿ) ಎಳೆದು ತಂದ ಕೋಣನ ಸಾವನ್ನು ; ಪತಾಕಿನಿಯುಮಂ–ಸೈನ್ಯವನ್ನು ; ಒಂದು ತಲೆಯಾಗೋಡುವ–ಒಂದೇ ದಿಕ್ಕಿಗೆ ತಲೆತಿರುಗಿಸಿಕೊಂಡು ಓಡುತ್ತಿರುವ ; ಧ್ವಜಿನಿಯುಮಂ – ಸೇನೆಯನ್ನೂ, ಪೊಸೆಯೊಳ್ – ಯುದ್ಧದಲ್ಲಿ ; ಮುಟ್ಟಿವರ್ಪನ್ನೆಗಂ – ಹತ್ತಿರಕ್ಕೆ ಬರುತ್ತಿರಲು, ಶೋಣಾಶ್ವೋಪಲಕ್ಷಿತ – ಕೆಂಪು ಕುದುರೆಗಳ ಗುರುತನ್ನುಳ್ಳ ; ಸೂತ – ಸಾರಥಿ ; ಕೇತನ – ಬಾವುಟ ; ಉಪಲಕ್ಷಿಸಿ - ನೋಡಿ, ಚೆನ್ನಾಗಿ ದೃಷ್ಟಿಸಿ ನೋಡಿ ; ಅತೀತನಾದುದಂ–ಸತ್ತುದನ್ನು.

೩೧. ಅಶ್ವತ್ಥಾಮನ ದುಃಖ ಕೋಪಗಳು : ಒಜಿತು–ಸೋರಿ, ಉಗುತರ್ಪ–ಸುರಿಯುತ್ತಿರುವ, ಕಣ್ಬನಿಗಳಂ – ಕಣ್ಣೀರ ಹನಿಗಳನ್ನು, ಬರಲ್ ಈಯದೆ – ಬರುವುದಕ್ಕೆ ಬಿಡದೆ ಎಂದರೆ ತಡೆದುಕೊಂಡು, ಕೋಪಪಾವಕಂ – ಕೋಪಾಗ್ನಿಯು ನಿಱಿಸೆ-ಸ್ಥಿರವಾಗಿಸಲು, ಕನಲ್ದು–ಕೆರಳಿ, ರೋಪದಿಂ–ಸಿಟ್ಟಿನಿಂದ (ಅಥವಾ ಬಾಣಗಳಿಂದ). ಅಪಾಂಡವಮಾಗಿರೆ – ಪಾಂಡವರು ಇಲ್ಲದಂತಾಗಿ, ಮಾಡದಂದು - ಮಾಡದಿರುವಾಗ, ಬಿಲ್ಲಿಱಿಯನ–ಧನುರ್ವಿದ್ಯೆಗೆ ಒಡೆಯನಾದ ದ್ರೋಣನ, ಪುತ್ರನಲ್ಲೆನ್–ಮಗನಲ್ಲ (ನಾನು), ಎನುತಂ – ಎನ್ನುತ್ತ, ಗುರುಪುತ್ರಂ – ಗುರುಸುತನಾದ ಅಶ್ವತ್ಥಾಮನು, ಇದಿರ್ಚೆ – ಎದುರಿಸಲು, ಪಾಂಡವ ಸೈನ್ಯ ಸಾಗರಂ – ಪಾಂಡವರ ಪಡೆಯ ಕಡಲು, ಭೀತಿಯಿಂ–ಭಯದಿಂದ, ಮಱುಗಿ–ಕುದಿದು, ತೆರಳ್ದು–ಚಲಿಸಿ, ತೂಳ್ದು–ತಳ್ಳಲ್ಪಟ್ಟು, ಸುೞಿಗೊಂಡುದು–ಸುಳಿ ಸುಳಿಯಾಗಿ ತಿರುಗಿತು.

ವಚನ : ಉರಿಯ ಉಗುಳಿಯಂತಪ್ಪ – ಉರಿಯ ಉಂಡೆಯಂತಿರುವ ; ತೊಟ್ಟು–ಹೂಡಿ.

೩೨. ದೆಸೆಮುಸುಳ್ದತ್ತು–ದಿಕ್ಕುಗಳು ಮಾಸಿದವು ; ಪಾರ್ಥ ತಳರ್ದತ್ತು–

ಕಡಲುಗಳು ನೆಲೆಯಿಂದ ಚಲಿಸದುವು ; ನೆಲಂ ಸಿಡುಗಿತ್ತು–ಭೂಮಿಯು ಸಿಡಿಲಂತೆ ಸಿಡಿಯಿತು ; ತೊಟ್ಟನೆ–ಬೇಗನೆ (ಅನಿರೀಕ್ಷಿತವಾಗಿ), ಆಗಸಂ–ಆಕಾಶವು, ಒಡೆಸತ್ತು –ಒಡೆಯಿತು, ಅಜಾಂಡಂ ಅಳಜಿತ್ತು–ಬ್ರಹ್ಮಾಂಡವು ಜಿದರಿತ್ತು ಅಥವಾ, (ಅಲಜಿತ್ತು) ನಾಶವಾಯಿತು ; ಎನುತಿರ್ದ ಎಡೆಯುಲ್ಲಿ–ಎನ್ನುತ್ತಿದ್ದ ಸಮಯದಲ್ಲಿ, ಲೋಕಮಂ–ಜಗತ್ತನ್ನು, ಬಸಿಜಿನೊಳಗಿಟ್ಟು–ಗರ್ಭದಲ್ಲಿಟ್ಟುಕೊಂಡು, ಆರ ಅಳವು ಒಡ್ಡಿಸೆ–ಯಾರ ಶಕ್ತಿಯೂ ಪ್ರತಿಭಟಿಸಲು, ಕಾದಳವಂ–ರಕ್ಷಿಸಿದ ಶಕ್ತಿಯುಳ್ಳ, ಮುರಾಂತಕಂ–ಶ್ರೀಕೃಷ್ಣನು, ಅರ್ವಿಸೆ ತೆಗೆದೆಚ್ಚ–ಭಯಪಡಿಸುವಂತೆ ಸೆಳೆದು ಪ್ರಯೋಗಿಸಿದ, ವೈಷ್ಣವಮಂ–ನಾರಾಯಣಾಸ್ತ್ರವನ್ನು, ವೈಷ್ಣವದಿಂ–ವೈಷ್ಣವಾಸ್ತ್ರ ದಿಂದ, ಒಡ್ಡಿಸಿ–ಎದುರಿಸಿ, ಆಗಳ್–ಆಗ, ಕಾದಂ–ಕಾಪಾಡಿದನು.

**ವಚನ :** ಉಪಾಯದೊಳೆ ಗೆಲ್ದಂ–ಉಪಾಯದಲ್ಲಿಯೇ ಎಂದರೆ ಸುಲಭ ವಾಗಿಯೇ ಗೆದ್ದನು.

**೩೩.** ಸೂರ್ಯನು ಅಸ್ತಮಿಸುತ್ತಾನೆ : ಎರಡುಂ ಪತಾಕಿನಿಗಳ್–ಉಭಯ ಸೈನ್ಯಗಳೂ, ಕವಿದು–ಮುತ್ತಿಕೊಂಡು, ಆಗಡುಂ–ಯಾವಾಗಲೂ, ಎನ್ನನೆ– ನನ್ನನ್ನೇ, ಸಕ್ಕಿಮಾಡಿ–ಸಾಕ್ಷಿಯಾಗಿ ಮಾಡಿ, ಕಾದುವುದಱಿಂ–ಯುದ್ಧಮಾಡು ವುದರಿಂದ, ಅಲ್ಲಿ ಸತ್ತರಸುಮಕ್ಕಳ–ಅಲ್ಲಿ ಸತ್ತ ರಾಜಕುಮಾರರ, ಪಾಪಂ–ಪಾಪವು ಇದೆಲ್ಲಂ–ಇದೆಲ್ಲವೂ, ಎನ್ನಂ–ನನ್ನನ್ನು, ಎಯ್ದುವುದು–ಮುಟ್ಟುತ್ತದೆ, ಅದಂ– ಆದನ್ನು (ಆ ಪಾಪವನ್ನು), ಉಪವಾಸದಿಂ ಜಪದಿಂ – ಉಪವಾಸದಿಂದ, ಜಪದಿಂದ, ಓಡಿಸಿ – ತೊಲಗಿಸಿ, ಶುಚಿಯಪ್ಪೆಂ – ನಿರ್ಮಲನಾಗುತ್ತೇನೆ, ಎಂಬ ವೊಲ್–ಎನ್ನುವಂತೆ, ನಳಿನೀವರ ಜೀವಿತೇಶ್ವರಂ–ತಾವರೆಗಳ ಶ್ರೇಷ್ಠ ಪ್ರಾಣ ವಲ್ಲಭನಾದ ಸೂರ್ಯನು, ಅಪರಾಂಬುರಾಶಿಗೆ–ಪಶ್ಚಿಮ ಸಮುದ್ರಕ್ಕೆ, ಇೞಿದಂ ಇಳಿದನು.

**ವಚನ :** ಒಂದಿರುಳುಮೆರಡುಂ ಪಗಲುಂ–ಒಂದು ರಾತ್ರಿಯೂ ಎರಡು ಹಗಲುಗಳೂ ; ಓರಂತೆ–ಒಂದೇ ಸಮನಾಗಿ (ಕ್ರಮವಾಗಿ) ; ಚಳಿತು–ಶಕ್ತಿಗುಂದಿ ; ಬೀಡುಗಳ್ಗೆ–ಶಿಬಿರಗಳಿಗೆ ; "ಚಳಿ–ವಿಗತ ಪ್ರಭಾವೇ."

**೩೪.** ಗುರುವಿನ–ತಂದೆಯ, ಶೋಕದಿಂದೆ–ದುಃಖದಿಂದ ಎಂದರೆ ತಂದೆಯ ಮರಣದಿಂದಾದ ದುಃಖದಿಂದ, ರಥಮಧ್ಯದೊಳ್–ರಥದ ನಡುವೆ, ಒಯ್ಯನೆ– ಮೆಲ್ಲನೆ, ಜೋಲ್ದು–ಜೋತು, ಬಿೞ್ದನಂ–ಬಿದ್ದ ಅಶ್ವತ್ಥಾಮನನ್ನು, ಗುರುಸುತನಂ– ಗುರುವಿನ ಮಗನನ್ನು, ಕೃಪಂ–ಕೃಪಾಚಾರ್ಯನು, ಕೃಪೆಯಿಂ–ಕರುಣೆಯಿಂದ, ಆತ್ಮ ವಿಳಾಸದೊಳ್–ಆತ್ಮಪ್ರಕಾಶನದಲ್ಲಿ, ಸಂತೈಸುತ್ತುಂ–ಸಮಾಧಾನ ಪಡಿಸುತ್ತ, ಅಂತಿರೆ– ಹಾಗಿರಲು, ಗುರುಶೋಕಂ–ಪಿತೃಶೋಕವು, ಅಗ್ಗಳಿಸೆ–ಅಧಿಕವಾಗಲು, ತಾಪವಿಯೋಗ ಮುಮಕ್ಕುಂ–ತಾಪವೂ ವಿಯೋಗವೂ ಆಗುತ್ತದೆ ; ಆಗಮಂ–ಯಾವಾಗಲೂ, ಗುರುವೆನೆ–ಅಧಿಕವೆನ್ನಲು, ಪೇೞಿಂ–ಹೇಳಿರಿ, ಆ ಗುರುವಿಯೋಗಭರಂ-ಆ ತಂದೆಯ

ಅಗಲಿಕೆಯ ತೀವ್ರತೆ, ಗುರುವಾಗದಿರ್ಕುಮೇ-ಭಾರವಾಗದೆ ಇರುತ್ತದೆಯೇ ? ಎಂದರೆ ಅತಿಶಯವಾಗುತ್ತದೆ.

ವಚನ ; ಪನ್ನಗ ಕೇತನಂ-ಸರ್ಪಧ್ವಜನಾದ ದುರ್ಯೋಧನ

೩೫. ಪುದಿದ-ವ್ಯಾಪಿಸಿದ, ಔರ್ವಾನಳಂ-ಬಾಡಬಾಗ್ನಿಯು, ಅಬ್ಧಿಯಂ-ಕಡಲನ್ನು, ಸುಡುವವೊಲ್-ಸುಡುವಂತೆ, ಶಸ್ತ್ರಾಗ್ನಿಯಿಂ-ಬಾಣಗಳ ಉರಿಯಿಂದ, ತೀವ್ರಕೋಪದಿಂ-ತೀಕ್ಷ್ಣವಾದ ಕೋಪದಿಂದ, ಉದ್ವೃತ್ತ-ಗರ್ವಿಷ್ಠವಾದ, ಬಲಾಬ್ಧಿಯಂ-ಸೈನ್ಯಸಾಗರವನ್ನು, ಸುಡೆ-ಸುಡಲು, ಕರಂ-ವಿಶೇಷವಾಗಿ. ಬೆಂಬಿಬ್ದು-ಬೆನ್ನಿನಲ್ಲಿ ಬಿದ್ದು ಎಂದರೆ ಅನುಸರಿಸಿ ಉಪಸರ್ಪಣೆ ಮಾಡಿ, ದುರ್ಯುಕ್ತಿಯಿಂದೆ-ಹೀನೋಪಾಯದಿಂದ, ಅದಯಂ-ದಯೆಯಿಲ್ಲದ, ಧರ್ಮಜಂ-ಧರ್ಮರಾಜನು, ಗುರುವಂ-ಗುರುವಾದ ದ್ರೋಣನನ್ನು, ಇಕ್ಕಿದಂ-ಕೊಂದನು. ಇಂ-ಇನ್ನು, ನೀಂ-ನೀನು, ಅತನಂ-ಅವನನ್ನು, ಬೇಗಂ-ಬೇಗನೆ, ಇಕ್ಕದೆ-ಕೊಲ್ಲದೆ, ಕಣ್ಣೀರ್ಗಳಂ ಇಕ್ಕೆ-ಕಣ್ಣೀರನ್ನು ಸುರಿಸಲು, ಚಂದ್ರಧವಳಂ-ಚಂದ್ರನಂತೆ ಬೆಳ್ಳಗಿರುವ, ನಿನ್ನ ಅನ್ವಯಂ-ನಿನ್ನವಂಶವು, ಮಾಸದೇ-ಮಲಿನವಾಗದೇ ?

೩೬. ಎನಗೆ-ನನಗೆ, ಕೂರ್ಪುದನ್-ಪ್ರೀತಿಸುವುದನ್ನು, ಆ ಘಟಸಂಭವಂ-ಆ ದ್ರೋಣನು, ನಿನಗೆ ಕೂರಂ-ನಿನಗೆ ಪ್ರೀತಿಸನು ಎಂದರೆ ದ್ರೋಣ ನನ್ನನ್ನು ಎಷ್ಟು ಪ್ರೀತಿಸುತ್ತಾನೋ ಅಷ್ಟು ನಿನ್ನನ್ನು ಪ್ರೀತಿಸುವುದಿಲ್ಲ ; ಅಟಲ್-ದುಃಖವು, ನಿನತು-ನಿನ್ನದು, ಅಲ್ತು-ಅಲ್ಲ, ಕೇಳ್-ಕೇಳು, ಎನತುಂ-ನನ್ನದೂ ಕೂಡ ; ಅಜವಕೆಶೋಕಮಂ – ಶಮನವಾಗದ ದುಃಖವನ್ನು, ಇರ್ವೆಮುಂ – ನಾವಿಬ್ಬರೂ, ಮುನಿವರಂ-ಕೋಪಿಸುವವರನ್ನು ಎಂದರೆ ಹಗೆಗಳನ್ನು, ತವೆ-ನಾಶವಾಗುವಂತೆ, ಕೊಂದು, ಒಡನೀಗುವಂ-ಜೊತೆಯಲ್ಲೇ ಕಳೆಯೋಣ. "ದ್ರುತವಿಲಂಬಿತಮೊಪ್ಪೆ ನಭಂಭರಂ"

೩೭. ಗುರು ತಂದೆಯಾದ ದ್ರೋಣ, ಮದೀಯ ವಿಮೋಹದಿಂ-ನನ್ನ ಮೇಲಣ ಪ್ರೀತಿಯಿಂದ, ಜವಂ-ಯಮನು. ಕೃಪೆಯಿಂ-ಕರುಣೆಯನ್ನು, ಬಿಸುಟಂತೆ-ಬಿಸಾಡಿದ ಹಾಗೆ, ಕೊಕ್ಕರಿಸಿ-ಹೇಸಿ, ಬಿಲ್ವಿಸುಟೆರ್ದೊಡೆ-ಬಿಲ್ಲನ್ನು ಎಸೆದರೆ, ಆ ಪದದೊಳ್-ಆ ಸಮಯದಲ್ಲಿ, ದ್ರುಪದಾತ್ಮಜಂ-ದ್ರುಪದನ ಮಗ ಧೃಷ್ಟದ್ಯುಮ್ನ, ಗುರುವ-ತಂದೆಯ, ಕೇಶಕಲಾಪಮುಂ-ಕೂದಲಿನ ಸಮೂಹವನ್ನು, ಎಂದರೆ ಜುಟ್ಟನ್ನು, ತೆಗೆದಂಗಡಂ-ಎಳೆದನಲ್ಲವೆ ? ತೆ-ತೆಗೆ, ಛೀ, ಗಂಡನುಮಾದಂ-ಶೂರನೂ ಆದನು, ಈ ಪರಿಭವಕ್ಕೆ-ಈ ಅವಮಾನಕ್ಕೆ, ಅನುರೂಪಂ-ಸದೃಶವಾದದ್ದು, ಅಹಿಕೇತನಾ-ದುರ್ಯೋಧನನೇ, ಪೆಜತೊಂದುಂ-ಬೇರೊಂದೂ, ಇಲ್ಲ. "ತರಳವೃತ್ತಮೆನಿಪ್ಪುದೊಪ್ಪಿರೆ ನಂಭರಂ ಸಜಜಂಗಮಂ."

೩೮. ಭಾರ್ಗವಂ-ಪರಶುರಾಮನ, ತಂದೆಯ ಅಟುವಿಂಗೆ-ತನ್ನ ತಂದೆಯ ಕೊಲೆಗಾಗಿ (ಸಾವಿಗಾಗಿ), ರಾಯೆಂಬೀ ಪೆಸರಿಲ್ಲದಂತು-ರಾಜ ಎಂಬ ಈ ಹೆಸರು

ಇಲ್ಲದಿರುವ ಹಾಗೆ, ಪುಯ್ಯೇಲಿಸೂಲ್ – ಇಪ್ಪತ್ತೊಂದು ಸಲ, ಕಟ್ಟಾಯಂ–ತೀವ್ರವಾದ ಪರಾಕ್ರಮವು, ಪೊಂಪುಳಿವೋಗೆ – ಅಧಿಕವಾಗಲು, ಎಂತು – ಹೇಗೆ, ಕೊಂದನ್–ಕೊಂದನು, ಅಂತು–ಹಾಗೆ, ಈ ಎಮ್ಮಯ್ಯನಿಂ–ಈ ನಮ್ಮ ತಂದೆ ಕಾರಣವಾಗಿ, ಆದುದು ಒಂದು–ಆದ ಒಂದು, ಪಗೆಯಿಂ–ದ್ವೇಷದಿಂದ, ಉಗ್ರಪಾಂಚಾಳರಾಜಾಯುಃ ಪಾರಮಂ – ಭಯಂಕರರಾದ ಪಾಂಚಾಲ ದೇಶದರಸುಗಳ ಆಯುಸ್ಸಿನ ಅಂತ್ಯವನ್ನು, ಸೀಳ್ದು – ಸೀಳಿ, ಅನ್ಯಭೂಪಬಲಮಂ – ಶತ್ರುರಾಜರ ಸೈನ್ಯವನ್ನು, ಪರ್ದಿಂಗೆ–ಹದ್ದುಗಳಿಗೆ, ಬಿರ್ದಿಕ್ಕುವೆಂ–ಔತಣ ಮಾಡುತ್ತೇನೆ.

೩೯. ಪಗೆಯುಂದಮುಂ – ಶತ್ರುವಿನ ರೀತಿಯು ಕೂಡ, ಆ ರಾಮನ – ಆ ಪರಶುರಾಮನ, ಪಗೆಯೊಳ್‌ಸಮಂ – ಶತ್ರುಗಳಿಗೆ ಸಮಾನ (ಕ್ಷತ್ರಿಯರು); ಅವರ ಪಿಡಿವ ಬಿಲ್–ಅವರು ಹಿಡಿಯುವ ಬಿಲ್ಲು, ಬಿಲ್–ನನ್ನ ಬಿಲ್ಲು; ಎಮ್ಮಂಬುಗಳುಂ–ನಮ್ಮ ಬಾಣಗಳು ಕೂಡ, ಅವರಿತ್ತ–ಅವರು ಕೊಟ್ಟ, ನಲ್ಲಂಬುಗಳ್–ಒಳ್ಳೆಯ ಬಾಣಗಳು, ಎನೆ – ಎನ್ನಲು, ಬಳಿಗಾಯದಂತು: ಬಳಿಯಂ ಕಾಯದಂತು–ಕ್ಷತ್ರಿಯ ವಂಶವನ್ನು ರಕ್ಷಿಸದೆ, ಹಾಗೆ, ಚಲಮನೆ–ನನ್ನ ಛಲವನ್ನೇ, ಕಾವೆಂ–ರಕ್ಷಿಸುತ್ತೇನೆ, ಎಂದರೆ ಕ್ಷತ್ರಿಯ ಕುಲವನ್ನು ನಿರ್ಮೂಲಿಸಿ ನನ್ನ ಹಠವನ್ನು ನೀಗುತ್ತೇನೆ.

**ವಚನ**; ವೀರವಟ್ಟಮಂ–ವೀರಪಟ್ಟವನ್ನು;

೪೦. ಅಶ್ವತ್ಥಾಮ-ಕರ್ಣರ ಕಲಹ: ಭೂಪರೆಂಬರ್–ರಾಜರೆನ್ನುವವರು, ನಿಜದೊಳೆ–ಸಹಜವಾಗಿಯೇ, ಅವಿವೇಕಿಗಳ್ ಅಪ್ಪರ್–ಬುದ್ಧಿಯಿಲ್ಲದವರಾಗುತ್ತಾರೆ; ಅದು, ಅಕ್ಕೆ–ಆಗಲಿ; ಫಣಿಧ್ವಜ–ದುರ್ಯೋಧನನೇ, ನೀಂ–ನೀನು, ಕಡುಕೆಯ್ದು–ತೀವ್ರವಾಗಿ ಎಂದರೆ ಬಲವಾಗಿ, ಕರ್ಣನನೆ – ಕರ್ಣನನ್ನೇ, ನಚ್ಚುವೆಯಪ್ಪೊಡೆ–ನಂಬುವೆಯಾದರೆ, ಯುದ್ಧದೊಳ್–ಕಾಳಗದಲ್ಲಿ, ವೃಷಧ್ವಜನುಮಂ–ಶಿವನನ್ನೂ, ಇಕ್ಕಿಗೆಲ್ದ–ಹೊಡೆದು ಗೆದ್ದ, ಅರಿಗನೊಳ್–ಅರ್ಜುನನಲ್ಲಿ, ತಲೆಮುಟ್ಟಿ–ತಲೆಯನ್ನು ಸೇರಿಸಿ ಎಂದರೆ ಅಭಿಮುಖನಾಗಿ, ನಿಂದು–ನಿಂತು, ಸೂತಜಂ–ಕರ್ಣನು, ಇಱಿವಂಗಡಂ–ಯುದ್ಧ ಮಾಡುವನಲ್ಲವೆ? ಪಟ್ಟಮೇ–ಕಟ್ಟಿದ ವೀರಪಟ್ಟವೇ, ಪಾಱಿ–ಹಾರಿ, ಮೇಲೆಬಿದ್ದು, ಪಗೆಯಂ – ವೈರಿಯನ್ನು, ತಿಂಬುದೇ – ತಿನ್ನುವುದೇ, ಏಂಗಳ–ಏನು ದಿಟವಾಗಿಯೂ? "ತಲೆಮುಡು–ಶಿರಸ್ಸಂಧಾನೇ".

**ವಚನ**: ಅಂಗರಾಜಂ – ಕರ್ಣನು, ಗುರುತನೂಜನಂ – ಅಶ್ವತ್ಥಾಮನನ್ನು, ಇಂತೆಂದಂ–ಹೀಗೆಂದನು.

೪೧. ಎನಿತು–ಎಷ್ಟು, ಆಳಪ್ಪ ಉಳ್ಳೊಡಂ–ಪ್ರತಾಪವಿದ್ದರೂ, ದ್ವಿಜನ–ಹಾರುವನ, ಗಂಡಗುಣಕ್ಕೆ–ಪೌರುಷ ಗುಣಕ್ಕೆ, ಅಗಿವನ್ನರ್–ಹೆದರುವಂಥವರು, ಆರೋ–ಯಾರೋ? ವಿಷಂ–ವಿಷವು, ಒಳ್ಳೆಗೆ–ಕೇರೆಹಾವಿಗೆ, ಉಳ್ಳೊಡೆ–ಇದ್ದರೆ, ಅದು, ನೆಟ್ಟನೆ–ನೇರಾಗಿ, ಒಳ್ಳೆಯೆ – ನೀರಹಾವೇ, ಕಾಳಿಯನಾಗಂ ಅಗದು–

ಕಾಳಿಂಗ ಸರ್ಪವಾಗುವುದಿಲ್ಲ ; ಅಣ್ಮಿನ–ಪೌರುಷದ, ಪಡೆಮಾತು–ಸುದ್ದಿ, ಅಪೊಂಡೆ– ಅದು ಒಂದೇ, ನೆಪಮಾಗಿರೆ – ನೆಪವಾಗಿರಲು, ಕೆಯ್ದುವಸಿಕ್ಕಿ – ಆಯುಧವನ್ನು ಬೀಸಾಡಿ, ಸತ್ತ–ಮಡಿದ, ಸಾವಿನ–ಮರಣದ, ಪಡಿಚಂಪಮಾಗಿಯುಂ ಪ್ರತಿಕೃತಿ ಯಾಗಿದ್ದರೂ, ಗಂಡವಾತುಗಳ್ – ಪೌರುಷದ ಮಾತುಗಳು, ಇದೇಂ–ಇದೇನು, ನಿಮಗೆ, ಅಱ್ತಿಯೋ–ಪ್ರೀತಿಯೋ, ಇಷ್ಟವೊ? ಪಡಿಚಂದ<ಪ್ರಾ. ಪಡಿಚ್ಚಂದ< ಸಂ. ಪ್ರತಿಚ್ಛಂದ–ಮೂರ್ತಿ, ಪ್ರತಿಬಿಂಬ.

08648

**ವಚನ :** ಗಂಡವಾತಂ – ಪೌರುಷದ ಮಾತನ್ನು, ಈ ಮಾಂಗಲಿಗಂ – ಈ ಮಿಾನನ್ನು ಕೊಲ್ಲುವವನು ಎಂದರೆ ಬೆಸ್ತರವನು ; ಬಾಳಂಕಿಱ್ತು – ಕತ್ತಿಯನ್ನು ಒರೆಯಿಂದ ಎಳೆದು ; ಎಡೆವೊಕ್ಕು–ನಡುವೆ ಪ್ರವೇಶಿಸಿ ; ಬಾರಿಸಿ–ತಡೆದು ;

**೪೨.** ಈ ನಮ್ಮ ಸೈನ್ಯಂ–ಈ ನಮ್ಮ ಸೇನೆಗಳು, ಅಸದಳಮಾಗಿಯುಂ– ಅಸದೃಶವಾಗಿದ್ದರೂ, ಅತಿಶಯವಾಗಿದ್ದರೂ ; ಇಂತು–ಹೀಗೆ, ಒರ್ವರೊರ್ವರೊಳ್– ಒಬ್ಬೊಬ್ಬರಲ್ಲಿ, ಸೆಣಸಿ–ಜಗಳವಾಡಿ, ಮತ್ಸರಿಸಿ ; ಬಳವ್ಯಸನದೊಳೆ–ಸೈನ್ಯದಲ್ಲಿರುವ ಒಳ ಜಗಳಗಳಿಂದಲೇ, ಕೆಟ್ಟುದು – ಹಾಳಾಯಿತು : ಅಲ್ಲದೊಡೆ – ಅಲ್ಲದಿದ್ದರೆ, ಸುಯೋಧನ – ದುರ್ಯೋಧನನೇ, ನಿನಗೆ, ಮಲೆವ – ಔದ್ಧತ್ಯವನ್ನು ತೋರಿಸುವ, ಮಾರ್ವಲಂ–ಎದುರು ಸೈನ್ಯ, ಶತ್ರು ಸೈನ್ಯ, ಒಳವೇ–ಉಂಟೇ? ಬಲವ್ಯಸನಗಳಲ್ಲಿ ಅಂತಶ್ಶಲ್ಯಂ ಎಂಬುದೊಂದು, ಅಂತರ್ದ್ವೇಷಯುಕ್ತಂ ಎಂದು ಅರ್ಥ; ಇದು ಅರ್ಥಶಾಸ್ತ್ರದ ಪರಿಭಾಷೆ. 'ಖಳವ್ಯಸನ' ಎಂಬ ಪಾಠ ತಪ್ಪು.

**ವಚನ :** ಮುಳಿಸಂ – ಕೋಪವನ್ನು ; ಅವಧಾರಿಸಲಾಱದೆ – ತಾಳಲಾರದೆ, ಸೈರಿಸಲಾರದೆ ;

**೪೩.** ಆಂ ಇರೆ–ನಾನು ಇರುವಾಗ, ನೀಂ–ನೀನು, ಈ ಸೂತಸುತಂಗೆ–ಈ ಸೂತಪುತ್ರನಾದ ಕರ್ಣನಿಗೆ, ಎಡೆಗೊಂಡು–ನಡುವೆ ಹೊಗಿಸಿ ಎಂದರೆ ಅನಿರೀಕ್ಷಿತ ವಾಗಿ ಇಬ್ಬರ ನಡುವೆ ತಂದು, ಕೈವಾರದಿಂದೆ–ಹೊಗಳಿಕೆಯಿಂದ, ಬೀರವಟ್ಟಮಂ– ವೀರ ಪಟ್ಟವನ್ನು, ಒಸೆದು–ಪ್ರೀತಿಸಿ, ಇತ್ತೊಡಂ–ಕೊಟ್ಟರೂ, ಏನಾಯ್ತು–ಏನು ಆಯಿತು? ಈ ಖಳಂ–ಈ ದುಷ್ಟನಾದ ಕರ್ಣನು, ಧನಂಜಯ ಕ್ರೂರ ಬಾಣ ಗಣಾವಳಿಯಿಂದೆ–ಅರ್ಜುನನ ಕ್ರೂರವಾದ ಬಾಣಗಳ ಸಮೂಹಗಳಿಂದ, ಅೞ್ದಾಡಿ ದೊಡಲ್ಲದೆ–ನಾಶವಾದರಲ್ಲದೆ, ಆಂ–ನಾನು, ವೈರಿಸಂಹಾರಕಾರಣಚಾಪಮಂ–ಶತ್ರು ಸಂಹಾರಕ್ಕೆ ಕಾರಣವಾದ ಈ ನನ್ನ ಬಿಲ್ಲನ್ನು, ಪಿಡಿಯೆಂ–ಹಿಡಿಯೆನು, ಗಡಾ– ಅಲ್ಲವೇ? "ಒಪ್ಪಿರಲ್ ರಸಸಂತಜಜಂಗಂ ಪುಟ್ಟುವುದಾ ಖಚರಪ್ಲುತಂ".

**೪೪.** ಭುವನಂಗಳ್ ಪದಿನಾಲ್ಕುಮಂ – ಹದಿನಾಲ್ಕು ಲೋಕಗಳನ್ನೂ, ನಡುಗಿಸಲ್ ಹೆದರಿಸಲು, ಸಾಮರ್ಥ್ಯಮುಳ್ಳ–ಶಕ್ತಿಯುಳ್ಳ, ಎನ್ನ ಕೆಯ್ದುವಿ ನೊಳ್–ನನ್ನ ಆಯುಧಗಳಲ್ಲಿ, ತೀರದುದು–ತೀರದಿರುವುದು ಎಂದರೆ ಸಾಧ್ಯವಾಗದೆ ಇರುವುದು, ಆವ ಕೆಯ್ದುವಿನೊಳಂ–ಯಾವ ಆಯುಧಗಳಲ್ಲಿಯೂ, ತೀರ್ದಪುದೇ

–ಶೀರುತ್ತಡೆಯೇ? ಇಲ್ಲ; ನಿನ್ನ ಕೆಯ್ದುವಂ–ನಿನ್ನ ಆಯುಧವನ್ನು, ಎಂತುಂ–ಹೇಗೂ, ಬಿಸುಟಿರ್ದ ಲೆಕ್ಕಮೆ ವಲಂ–ಬಿಸಾಡಿರುವ ಹಾಗೆಯೇ ಗಣಿಸಬೇಕಲ್ಲವೆ? ಎಂದರೆ ಆಯುಧವಿದ್ದರೂ ಇಲ್ಲದಿದ್ದರೂ ನೀನು ಮಾಡುವುದು ಒಂದೇ ಎಂಬ ಭಾವ, ಏನೂ ಮಾಡಲಾರೆ; ನಿಷ್ಕಾರಣಂ–ಕಾರಣವಿಲ್ಲದೆ, ಕೆಯ್ದುವಿಕ್ಕುವ–ಆಯುಧವನ್ನು ತೊರೆಯುವ, ಕಣ್ಣೀರ್ಗಳಂ ಇಕ್ಕುವ–ಕಣ್ಣೀರನ್ನು ಸುರಿಸುವ, ಈ ಎರಡುಮಂ–ಈ ಎರಡನ್ನೂ, ನಿಮ್ಮಯ್ಯನೊಳ್–ನಿಮ್ಮ ತಂದೆಯಾದ ದ್ರೋಣನಲ್ಲಿ, ಕಲ್ತಿರೇ–ಕಲಿತುಕೊಂಡಿರೇ?

ವಚನ: ನುಡಿಗೆ–ಮೂದಲಿಕೆಯ ಮಾತಿಗೆ; ಸಿಗ್ಗಾಗಿ–ನಾಚಿ:

**೪೫.** ಮುನಿಸಂ ಮುಂದಿಟ್ಟು–ಕೋಪವನ್ನು ಮುಂದು ಮಾಡಿ, ಬಿಲ್ಲಂ–ಬಿಲ್ಲನ್ನು, ಬಿಸುಡಲೆ–ಬಿಸಾಡುವುದಕ್ಕೇ, ಮುನ್ನಂ–ಮೊದಲು, ಬಗೆದೆಂ–ಎಣಿಸಿದೆನು, ಆಲೋಚಿಸಿದೆನು; ಇಂ–ಇನ್ನು, ನಿನ್ನನೆ–ನಿನ್ನನ್ನೇ, ಪೀನಂ–ವಿಶೇಷವಾಗಿ, ನಚ್ಚಿ–ನಂಬಿ, ನಿನ್ನಾಳ್ದನ–ನಿನ್ನ ಸ್ವಾಮಿಯಾದ ದುರ್ಯೋಧನನು, ನುಡಿಯಿಸೆ–ಮಾತಾಡಿಸಲು, ಉರ್ಕಿನಿಂ–ಗರ್ವದಿಂದ, ನೀಂ–ನೀನು, ಅಡಿಪ್ಪೈ–ಮಾತನಾಡಿದೆ; ಎನಗೆ–ನನಗೆ, ಮಾತನಾಡಲ್ಕೆ–ಮಾತನಾಡುವುದಕ್ಕೆ, ಈ ಸೂಳ್ ಅಲ್ತು–ಈ ಸರದಿಯಲ್ಲ ಎಂದರೆ ಇದು ಸಮಯವಲ್ಲ; ಇಂ–ಇನ್ನು, ಸೇನಾಧಿಪ ಪದವಿಯೊಳ್–ಸೈನ್ಯಾಧಿಪತಿಯ ಅಧಿಕಾರದಲ್ಲಿ, ನೀನೆ–ನೀನೇ, ನಿಲ್–ನಿಲ್ಲು; ನೀನುಂ ಆನುಂ–ನೀನೂ ನಾನೂ, ದುರ್ಯೋಧನನಂ – ದುರ್ಯೋಧನನನ್ನು, ಸಕ್ಕಿಟ್ಟು – ಸಾಕ್ಷಿಯಾಗಿಟ್ಟು, ಮಾಱಾಂತ–ಎದುರಾದ, ಅದಟರೊಳ್–ಶೂರರಲ್ಲಿ, ಅಳವಂ–(ನನ್ನ ನಿನ್ನ) ಶಕ್ತಿಯನ್ನು, ನಾಳೆ–ನಾಳೆಯದಿನ, ತೋಱುವಂ–ತೋರಿಸೋಣ, ಪೀನ ಎಂಬುದು ಸಂಸ್ಕೃತದಲ್ಲಿ ಗುಣವಾಚಕ. ಇದನ್ನೇ ಪೀನಂ ಎಂದು ಕನ್ನಡದಲ್ಲಿ ಅವ್ಯಯವಾಗಿ ಬಳಸುವ ರೂಢಿ ಇದೆ; ಅಱಿದು ಪೀನಂ ಮಾರ್ಗಗತಿಯುಂ (ಕವಿರಾ. ೧–೪೬): ದಾನಾಂಬು ಚುಂಬಿತ ಕಪೋಲತಂ ಮಹೇಭಂ। ತಾನೊಪ್ಪುವಂತೆ ಸೊಗಯಿಪ್ಪುದು ನೋಡೆ ಪೀನಂ (ಕಾವ್ಯಾಲೋ. ೬೪೩). "ಪೀನಂ ಪ್ರಥಮೆಗೆ ನೀನಾತಾನೆಂದಱಿ" (ಶಮದ. ೧೫೨).

**೪೬.** ನಿನ್ನ ಶರಾಸಾರಂಗಳ್–ನಿನ್ನ ಬಾಣಗಳ ಮಳೆ, ಸಾರಂಗಳ್–ಶಕ್ತಿಯುತವಾದವು; ಉಳಿದ–ಮಿಕ್ಕ ಎಂದರೆ ನಿನ್ನದಲ್ಲದ, ಇತರರ, ಕೆಯ್ದುಗಳ್–ಆಯುಧಗಳು, ಎಂತುಂ–ಹೇಗೂ, ಅಸಾರಂ–ಸಾರವಿಲ್ಲದುವು, ಶಕ್ತಿಯಿಲ್ಲದುವು; ಇದಿರ್ಚಿದ–ಎದುರಾದ, ಅರಿನೃಪಧ್ವಜಿನಿಗಳೊಳ್–ಶತ್ರುರಾಜರ ಸೈನ್ಯದಲ್ಲಿ, ನಾಂ–ನಾವಿಬ್ಬರೂ, ಸಾರಾಸಾರತೆಯಂ–ಸಾರತೆ ನಿಸ್ಸಾರತೆಗಳನ್ನು, ಅರಯ್ಪಂ–ಹುಡುಕೋಣ, ವಿಚಾರ ಮಾಡೋಣ, "ಅರಯ್–ಅನ್ವೇಷಣೇ."

ವಚನ: ಪುರುಷಕಾರಮನೆ–ಪೌರುಷ ಪ್ರಯತ್ನವನ್ನೆ; ನೆಗೞ್ವುದು–ಮಾಡುವುದು; ಪ್ರತಿಪತ್ತಿಗಳಿಂ–ಸತ್ಕಾರಗಳಿಂದ; ಇಲ್ಲಿಗೆ ಕರ್ಣಾಶ್ವತ್ಥಾಮರ

ವಿವಾದವು ಮುಗಿಯುತ್ತದೆ. ಪಂಪನು ಈ ದೃಶ್ಯವನ್ನು ರಚಿಸುವಾಗ ವೇಣೀ ಸಂಹಾರ ನಾಟಕದ ಮೂರನೆಯ ಅಂಕದಲ್ಲಿ ಬರುವ ಸದೃಶ ದೃಶ್ಯವನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದನು. ಎರಡಕ್ಕೂ ಸಮಾನವಾದ ಅಂಶಗಳು ಕೆಲವಿವೆ. ಕತ್ತಿ ಹಿರಿದು ಅಶ್ವತ್ಥಾಮ ಕರ್ಣರು ಒಬ್ಬರ ಮೇಲೊಬ್ಬರು ನುಗ್ಗಿದಾಗ ಕರ್ಣ ಅಶ್ವತ್ಥಾಮನನ್ನು ಕೊಲ್ಲುವುದಕ್ಕೆ ಹಿಂಜರಿಯುತ್ತಾನೆ; ಕಾರಣ ಅವನು ಬ್ರಾಹ್ಮಣನೆಂದು. ಇದನ್ನು ಕೇಳಿ ಅಶ್ವತ್ಥಾಮ ತಾನು ಬ್ರಾಹ್ಮಣನಲ್ಲವೆಂದು ಹೇಳುತ್ತ ತನ್ನ ಜನಿವಾರವನ್ನು ಕಿತ್ತೆಸೆಯುತ್ತಾನೆ. ಈ ಅಂಶವನ್ನು ಪಂಪನು ಬಿಟ್ಟಿದ್ದಾನೆ; ಉಳಿದೆಡೆಗಳಲ್ಲಿ ಸಾದೃಶ್ಯಗಳಿವೆ.

೪೭. ಅಂತರ್ಭೇದದೊಳ್-ರಹಸ್ಯವಾದ ಭೇದೋಪಾಯದಲ್ಲಿ, ಆ ಗಾಂಗೇಯರಂ–ಆ ಭೀಷ್ಮರನ್ನು, ಅಂತು–ಹಾಗೆ, ಛಿದ್ರಿಸಿದರ್ - ಒಡೆದರು, ನಾಶಮಾಡಿದರು ; ಈಗಳ್–ಈಗ, ಇಂತು–ಹೀಗೆ, ಪುಸಿದು–ಸುಳ್ಳುಹೇಳಿ, ಈ ಘಟೋದ್ಭವನಂ –ಈ ದ್ರೋಣನನ್ನು, ಕೊಂದರ್–ಕೊಂದರು ; ಆ ಕೌಂತೇಯರ-ಆ ಪಾಂಡವರ, ಆಯಕ್ಕೆ–(ವಿಜಯದ) ಲಾಭಕ್ಕೆ, ಗೆಂಟು–ದೂರವು, ಎಂತೆಂತಕ್ಕುಂ–ಹೇಗೆ ಹೇಗೆ ಆಗುವುದೊ, ಅದಂ–ಅದನ್ನು, ಮದುದ್ಯಮಮೆ–ನನ್ನ ಕಾರ್ಯವೇ, ಪ್ರಯತ್ನವೇ, ಪೇೞ್ಗೆ–ಹೇಳಲಿ, ಆ ವೈರಿಗಳ್ಗೆ–ಆ ಹಗೆಗಳಿಗೆ, ಆಂ-ನಾನು, ಎಂತು–ಹೇಗೆ, ಒಲ್ವೆಂ –ಒಲಿಯುತ್ತೇನೆ, ಒಳ್ಪಂ–ಒಳ್ಳೆಯ ತನವನ್ನು, ತಳೆವಂತು - (ಪಾಂಡವರ ವಿಷಯದಲ್ಲಿ) ಹೊಂದುವ ಹಾಗೆ, ತೇಜಂ–ತೇಜಸ್ಸು, ಎನಗೆ–ನನಗೆ, ಇಂ–ಇನ್ನು, ಎಂತಕ್ಕುಂ –ಹೇಗೆ ಆಗುವುದು ? ಇಂ ಪೇೞಿರೇ–ಇನ್ನು ನೀವು ಹೇಳಿರಿ.

೪೮. ಚಲಮನೆ–ಹಿಡಿದ ಪಟ್ಟನ್ನೇ ಹಿಡಿಯುವ ಎಂದರೆ ಹಟವನ್ನೇ, ಪೇೞ್ವೆಡೆ–ಹೇಳುವ ಪಕ್ಷದಲ್ಲಿ, ಅಯ್ವರುಮಂ–ಐದು ಜನ ಪಾಂಡವರನ್ನೂ, ಅಯ್ದು – ಐದು, ಅೞಿಯೂರೊಳೆ – ಕುಗ್ರಾಮಗಳಲ್ಲಿಯೇ, ಬಾೞಿಸು ಎಂದು– ಜೀವಿಸುವ ಹಾಗೆ ಮಾಡು ಎಂದು, ಮುಂ–ಮೊದಲು, ಬಲಿ ಬಲಸೂದನಂ–ಬಲಿ ಚಕ್ರವರ್ತಿಯ ಶಕ್ತಿಯನ್ನು ಧ್ವಂಸಮಾಡಿದ ಶ್ರೀಕೃಷ್ಣನು, ನುಡಿಯೆಯುಂ– ಹೇಳಿದರೂ, ಕುಡದೆ ಇರ್ದುದೆ–ಕೊಡದೆ ಇದ್ದುದೇ. ಪೇೞ್ಗುಂ–ಹೇಳುತ್ತದೆ; ಮೆಯ್ಗಲಿತನಮಂ–ಶೌರ್ಯವನ್ನು, ಸರಿತ್ಸುತ ಘಟೋದ್ಭವರಂ–ಭೀಷ್ಮ ದ್ರೋಣರನ್ನು, ಪೊಣರ್ದಿಕ್ಕಿ–ಯುದ್ಧಮಾಡಿ ಸಂಹರಿಸಿ, ಗೆಲ್ದರೊಳ್–ಗೆದ್ದ ಪಾಂಡವರಲ್ಲಿ, ಕಲಹಮೆ – ಯುದ್ಧವೇ, ಎಯ್ದೆ–ಚೆನ್ನಾಗಿ, ಹೇಳುತ್ತದೆ ; ಕೌರವೇಶ್ವರಾ – ದುರ್ಯೋಧನನೇ, ಪೆಱತು ಪೇೞ್ವೆಡೆ ಆವುದೋ–ಬೇರೆ ಹೇಳುವ ಅವಕಾಶ ಯಾವುದೋ ? ಯಾವುದೂ ಇಲ್ಲ.

ವಚನ : ಪೆಱತು ಮಂತಣಕ್ಕೆ–ಬೇರೆ ಆಲೋಚನೆಗೆ ; ಒಲ್ಲಣಿಗೆ [ಯಂ]– ಒಪ್ಪಿಬಟ್ಟೆಯನ್ನು ; ಪಿೞಿವಂತೆ–ಹಿಂಡುವಂತೆ ; ತಳಂ–ಅಂಗೈ ; ಸುರುಳ್ವಿನಂ– ಸುರುಟಿಕೊಳ್ಳುತ್ತಿರಲು ; ಮುಯ್ಯೇೞ್ಸೂೞ್ – ಇಪ್ಪತ್ತೊಂದು ಸಲ, ಪಿೞಿದ–

ಹಿಂಡಿದ; ತಿದಿಯುಗಿದು–ಚರ್ಮವನ್ನು ಸುಲಿದು; ಮಿಡಿದನಿತು ಬೇಗದಿಂ–ಚಿಟಿಕೆ ಹಾಕುವಷ್ಟು ಹೊತ್ತಿನಲ್ಲಿ; ಪುಡಿಯೊಳ್–ಧೂಳಿನಲ್ಲಿ; ತೊತ್ತಳದುಳಿದು–ಸೊಪ್ಪುಸೊಪ್ಪಾಗಿ ತುಳಿದು; ರೂಕ್ಷರಾಕ್ಷಸಂ–ಕ್ರೂರನಾದ ರಾಕ್ಷಸನನ್ನು; ಆಲೋಕಾಂತರಂ–ಲೋಕದ ಒಳಗೂ ಹೊರಗೂ; ನೆಗಟ್ತೆ–ಪ್ರಸಿದ್ಧವಾಗಲು; ಒಲ್ಲಣಿಗೆ<ಉದ್ರಪಟ್ಟಿಕಾ(ಸಂ), 'ಶಬ್ದವಿಹಾರ'ವನ್ನು ನೋಡಿ.

೪೯. ನೆಗಳ್ದ–ಪ್ರಸಿದ್ಧವಾದ, ಕಲಿತನದ–ಶೌರ್ಯದ, ಚಾಗದ–ದಾನದ, ಬಗೆ–ರೀತಿ, ತನ್ನೊಳ್–ತನ್ನಲ್ಲಿ, ನೆಗಟ್ತೆವೆತ್ತು – ಪ್ರಸಿದ್ಧಿಯನ್ನು ಪಡೆದು, ನೆಗಳ್ದಿರೆ-ಉಂಟಾಗಿರಲು, ಸಂದಂಗೆ-ಸಂದವನಿಗೆ ಎಂದರೆ ಹೆಸರುವಾಸಿಯಾದವನಿಗೆ ಅಗಣಿತಗುಣಂಗೆ – ಅಸಂಖ್ಯಗುಣಗಳುಳ್ಳವನಿಗೆ, ಕರ್ಣಂಗೆ – ಕರ್ಣನಿಗೆ, ಒಗಸುಗಮೇ – ಅತಿಶಯವೆ? ಅಲ್ಲ; ಅರಸಾ–ರಾಜನೇ, ಬೀರವಟ್ಟಮಂ–ವೀರಪಟ್ಟವನ್ನು ಕಟ್ಟು, ಎಂದರೆ ಕಲಿತನದಲ್ಲೂ, ದಾನದಲ್ಲೂ, ಗುಣದಲ್ಲೂ, ನಡತೆಯಲ್ಲೂ, ಸುಪ್ರಸಿದ್ಧನಾದ ಕರ್ಣನಿಗೆ ವೀರಪಟ್ಟವನ್ನು ಕಟ್ಟುವುದು ಏನೂ ಹೆಚ್ಚಲ್ಲ; ಆದ್ದರಿಂದ ದುರ್ಯೋಧನನೇ, ಕರ್ಣನಿಗೆ ಸೇನಾಪತಿಯ ಪದವಿಯನ್ನು ಕೊಡು.

೫೦. ರಥಯಾನಪಾತ್ರದಿಂ – ರಥವೆಂಬ ನಾವೆಯಿಂದ, ಪರರಥಿನೀ ಜಳನಿಧಿಯ–ಶತ್ರುಸೈನ್ಯ ಸಾಗರದ, ಪಾರಮಂ–ಆಚೆಯ ತೀರವನ್ನು, ಸಲ್ವ–ಸೇರುವ, ಜಗತ್ಪ್ರಥಿತಭುಜ ದರ್ಪದಿಂದೆ-ಲೋಕಪ್ರಸಿದ್ಧವಾದ ಬಾಹು ಬಲಗರ್ವದಿಂದ, ಅತಿರಥಮಥನಂ – ಅತಿರಥರನ್ನು ಧ್ವಂಸಮಾಡುವವನಾದ, ಕರ್ಣಂ – ಕರ್ಣಂ, ಕರ್ಣಧಾರಂ ಅಲ್ಲವೆ-ಹಡಗನ್ನು, ನಾವೆಯನ್ನು ನಡೆಯಿಸುವವನಲ್ಲವೆ? ಹೌದು.

**ವಚನ:** ಮನದೆಗೊಂಡು–ಮನಸ್ಸಿನಲ್ಲಿ ಸ್ವೀಕರಿಸಿ ಎಂದರೆ ಒಪ್ಪಿ;

೫೧. ಅಂಗಮಹೀತಳಾಧಿಪಾ–ಕರ್ಣನೇ, ನಿನಗೆ, ಪಾಂಡವಬಲಂ - ಪಾಂಡವರ ಸೈನ್ಯ, ಉಂತೆ–ಸುಮ್ಮನೆ, ನಡುಗುವುದು–ಹೆದರುತ್ತದೆ, ಅರ್ಜುನಂ ಎಂಬಂ–ಅರ್ಜುನನೆನ್ನುವವನು, ಉರ್ಕುಡುಗಿ–ಗರ್ವಕುಗ್ಗಿ, ಸುರುಳ್ದಪನ್ - ಸಂಕೋಚಗೊಳ್ಳುತ್ತಾನೆ ಎಂದರೆ ಮುದುರಿಕೊಂಡು ಬಿಡುತ್ತಾನೆ; ಈ ಎಡೆಗೆ - ಈ ಸಮಯಕ್ಕೆ, ಪೆಱರ್ ಆರ್‌ಮೊರೆ–ಬೇರೆ ಯಾರು ಅರ್ಹರು? ಪೇಟ್–ಹೇಳು, ವೀರಪಟ್ಟಮಂ–ವೀರಪಟ್ಟವನ್ನು, ತಡೆಯದೆ–ತಡಮಾಡದೆ, ಕಟ್ಟಿ-ಕಟ್ಟಿಕೊಂಡು, ವೈರಿಗಳ–ಹಗೆಗಳನ್ನು, ಪಟ್ಟನೆ–ಪಟ್ಟೆಂದು, ಪಾಱಿಸಿ–ಹಾರಿಹೋಗುವಂತೆ ಮಾಡಿ, ಎನ್ನ ಬೆಳ್ಗೊಡೆಯುಮಂ–ನನ್ನ ರಾಜ್ಯ ಚಿಹ್ನವಾದ ಬಿಳಿ ಕೊಡೆಯನ್ನೂ, ಎನ್ನಪಟ್ಟಮುಮಂ–ನನ್ನ ರಾಜ ಪಟ್ಟವನ್ನೂ, ಎನ್ನುಮಂ-ನನ್ನನ್ನೂ, ಕಾವುದು-ಕಾಪಾಡುವುದು. ವೈರಿಗಳ ಎಂಬಲ್ಲಿರುವ ಷಷ್ಠೀವಿಭಕ್ತಿ ದ್ವಿತೀಯಾ ವಿಭಕ್ತಿಯ ಅರ್ಥವನ್ನುಳ್ಳದ್ದು, "ತಿಂಕನಾಡ ಮಱಿಯಲ್ಕಿನ್ನುಂ ಮನಂಬರ್ಕುಮೇ" ಎಂಬಲ್ಲಿ ಇರುವ ಹಾಗೆ.

**ವಚನ:** ನಿನ್ನಾಳ್ಗಳೊಳ್–ನಿನ್ನ ಸೇವಕರಲ್ಲಿ; ಆನಾರದೊರೆಯುಂ–ನಾನು

ಯಾರಿಗೆ ಸಮಾನ? ಎಣ್ಬೆರಲಪಟ್ಟಂ–ಎಂಟು ಬೆರಳಷ್ಟು ಅಗಲವಾಗಿರುವ ಹಣೆಗೆ ಕಟ್ಟುವ ಪಟ್ಟಿ, ಬದ್ದವಣಂ<(ಸಂ)ವರ್ಧಮಾನ – ಮಂಗಳ ವಾದ್ಯಗಳು; ಕನಕಪೀಠದೊಳ್–ಸುವರ್ಣದ ಪೀಠದಲ್ಲಿ.

೫೨. ಪಜೆಗಳ್ – ಭೇರಿಗಳು, ಭೋರೆಂದು – ಭೋರೆಂಬುದಾಗಿ, ಓರಂತೆ–ಕ್ರಮವಾಗಿ, ಮೊರೆಯೆ–ಶಬ್ದ ಮಾಡಲು, ಮಂಗಳಗೀತಿಗಳ್–ಶುಭ ಸಂಗೀತಗಳು, ನೆರೆಯೆ–ಸೇರಲು, ಗಣಿಕಾನೀಕಂ–ವೇಶ್ಯಾ ಸಮೂಹವು, ಬಂದು, ಆಡೆ–ಕುಣಿಯಲು; ಕುರುಪರಿವೃಢಂ–ಕುರುರಾಜ ದುರ್ಯೋಧನನು, ಪುಣ್ಯಜಲಂಗಳಂ–ಪುಣ್ಯತೀರ್ಥಗಳ ನೀರುಗಳನ್ನು, ತರಿಸಿ, ಮಿಸಿಸುತ್ತೆ–ಸ್ನಾನಮಾಡಿಸುತ್ತ ಎಂದರೆ ಅಭಿಷೇಕಮಾಡುತ್ತ, ಕರ್ಣಂಗೆ–ಕರ್ಣನಿಗೆ, ಆ ವೀರಪಟ್ಟದ–ಆ ವೀರಪದವಿಯ, ಪಟ್ಟಮಂ–ವಸ್ತ್ರವನ್ನು, ತಾಂ–ತಾನು, ತನ್ನ ಕೈಯೊಳೆ–ತನ್ನ ಕೈಗಳಿಂದಲೇ, ಕಟ್ಟಿದಂ–ಹಣೆಗೆ ಕಟ್ಟಿದನು, "ಹರಿಣಿಯೆನಿಪಾ ವೃತ್ತಂ ತೋಜಲ್ ನಸಂಮರ ಸಲಗಂ"

ವಚನ: ನೊಸಲೊಳ್–ಹಣೆಯಲ್ಲಿ; ಅಸದಳಂ–ಅತಿಶಯವಾಗಿ, ಅಸಮಾನವಾಗಿ; ಉಪಾಶ್ರಯಂ ಬಡೆಯೆ–ಆಶ್ರಯವನ್ನು ಹೊಂದಲು; ಸೇಸೆಯನಿಕ್ಕಿ–ಮಂತ್ರಾಕ್ಷತೆಯನ್ನು ಹಾಕಿ; ತುಡುಗೆಗಳೆಲ್ಲಮಂ–ಎಲ್ಲ ಒಡವೆಗಳನ್ನು; ನೆಱೆಯೆ–ಪೂರ್ಣವಾಗಿ; ದೇವ ಸಬಳದ–ದೇವ ಮಾನದ?; ಮಂಡನಾಯೋಗದೊಳ್–ಅಲಂಕಾರಗಳಲ್ಲಿ; ಪಣ್ಣಿದ–ಸಿದ್ಧಪಡಿಸಿದ, ಸಿಂಗರಿಸಿದ; ತಡವಿಕ್ಕಿದಂತೆ–ಹಿರಿದು ಮಾಡಿದ ಹಾಗೆ, ತಡಂ–ದೊಡ್ಡದು, ಹಿರಿದು; ಬೂತುಗಳ್ಗೆಲ್ಲಂ–ಪ್ರಾಣಿಗಳಿಗೆಲ್ಲ; ನಿಯೋಗಿಗಳ್–ಕಾರ್ಯಕರ್ತರು; ಪುಂಜಿಸಿದ–ರಾಶಿಹಾಕಿದ; ಅರ್ಥಿಜನಕ್ಕೆ–ಬೇಡುವವರಿಗೆ, ಗೋಸನೆಯಿಟ್ಟು–ಸಾರಿಸಿ, ಕೂಗಿ ಕರೆಸಿ; ದರ್ಭಾಸ್ತರಣದೊಳ್–ದರ್ಭೆ ಹುಲ್ಲಿನ ಚಾಪೆಯ ಮೇಲೆ.

೫೩. ಉದಯಗಿರಿತಟದೊಳ್ – ಉದಯ ಪರ್ವತ ಪ್ರದೇಶದಲ್ಲಿ ಎಂದರೆ ಪೂರ್ವದಿಕ್ಪ್ರದೇಶದಲ್ಲಿ, ಉದಯಿಸುವ–ಹುಟ್ಟುವ, ಅದಿತಿಪ್ರಿಯ ಪುತ್ರಂ–ಸೂರ್ಯನು, ಅಲ್ಲದೆ, ಮತ್ತೊರ್ವಂ–ಮತ್ತೊಬ್ಬನು, ಭಾನು–ಸೂರ್ಯ, ದಲ್ – ದಿಟವಾಗಿಯೂ, ಒಗೆದಂ–ಹುಟ್ಟಿದನು, ಎನಿಪ–ಎನ್ನಿಸಿಕೊಳುವ, ತೇಜಸ್ಸಿನ, ಪೊದಳ್ಕೆಯಿಂ–ವ್ಯಾಪ್ತಿಯಿಂದ, ಕರ್ಣ–ಕರ್ಣನು, ಜನದ ಮನಮಂ–ಲೋಕದ ಮನಸ್ಸನ್ನು, ಅಲೆದಂ–ಆವರಿಸಿದನು.

ವಚನ: ಪಾರಗರಪ್ಪ–ಪರಿಣತರಾದ; ಧರಾಮರರ್ಗೆ–ಬ್ರಾಹ್ಮಣರಿಗೆ; ವಾರುವದ ಬೋರಗುದುರೆಗಳೊಳ್ – ಒಂದು ಜಾತಿಯ ಕುದುರೆಗಳಲ್ಲಿ; ಪಸುರ್ವೊನ್ನ–ಹಸುರುಲೋಹದ ಅಥವಾ ಹಸುರು ಚಿನ್ನದ (?); ಶರಶಯನದೊಳ್–ಬಾಣದ ಹಾಸಿಗೆಯಲ್ಲಿ; ಗಾಂಗೇಯನಲ್ಲಿಗೆ–ಭೀಷ್ಮನ ಬಳಿಗೆ, ಬಲವಂದು–ಪ್ರದಕ್ಷಿಣೆ ಮಾಡಿ; ತದೀಯ–ಅವನ;

೫೪. ಕರ್ಣನು ಭೀಷ್ಮರಿಂದ ಕ್ಷಮೆಯನ್ನು ಯಾಚಿಸುವುದು : ಆಂ–ನಾನು, ಮಾತಱಯದೆ–ಏನು ಹೇಳಬೇಕೆಂಬುದನ್ನು ತಿಳಿಯದೆ, ನಿಮ್ಮಡಿಯಂ–ನಿಮ್ಮ ಪಾದ ಗಳನ್ನು, ನಿಮ್ಮನ್ನು, ನೋಯೆ–ನೊಂದುಕೊಳ್ಳುವಂತೆ, ನುಡಿದೆಂ–ಮಾತಾಡಿದೆನು ; ಉಱದೆ–ಇರದೆ, ಏಳಿಸಲ್–ತಿರಸ್ಕಾರಮಾಡಲು, ಎಮ್ಮಳವೆ, ಏನ್–ನಮಗೆ ಸಾಧ್ಯ ವೇನು ? ಅಜ್ಜ–ತಾತನೆ, ಆ ಮನದ ಉಮ್ಮಚ್ಚಮಂ–ಮನದ ಆ ಕೋಪವನ್ನು, ಮಱವುದು–ಮರೆತು ಬಿಡುವುದು ; ನಿಮ್ಮಂ – ನಿಮ್ಮನ್ನು, ಎಱಯಲೆ–ಬೇಡುವುದ ಕ್ಕಾಗಿಯೇ – ಬಂದೆಂ, ಬಂದೆನು, “ ಉಮ್ಮಚ್ಚಂ – ಅಸಂಬದ್ಧಂ ಭಂಗೀಭಣಿತಂ ಕ್ರೋಧಃ ” ಎಂದು ಹೇಮಚಂದ್ರಾಚಾರ್ಯ (ದೇಶೀನಾಮ ಮಾಲಾ).

೫೫. ಆ ಪಾಂಡುಸುತರಂ – ಆ ಪಾಂಡವರನ್ನು, ನಿಮ್ಮಡಿಯಂ–(ಪೂಜ್ಯ ರಾದ) ನೀವು ಕೂಡ, ಧುರದೊಳ್–ಯುದ್ಧದಲ್ಲಿ, ಗೆಲಲ್–ಗೆಲ್ಲಲು, ಅರಿಯರುಂ– ಅಸಾಧ್ಯರಾದವರು, ಎಮ್ಮಂದಿಗರ್ – ನಮ್ಮಂಥವರು ; ಗೆಲ್ವರೆಂಬುದು – ಗೆಲ್ಲುತ್ತಾರೆ ಎನ್ನುವುದು, ಅಚ್ಚರಿಯಲ್ತೆ–ಆಶ್ಚರ್ಯವಲ್ಲವೆ ? ಎಂತುಂ–ಹೇಗೂ, ಹರಿಗನೊಳ್– ಅರ್ಜುನನಲ್ಲಿ, ಇಱದು–ಹೋರಾಡಿ, ಎನ್ನ ಚಲಮನೆ–ನನ್ನ ಛಲವನ್ನೇ, ಮೆಱವೆಂ– ಪ್ರದರ್ಶಿಸುತ್ತೇನೆ ; ಇಲ್ಲಿ “ ಗೆಲಲರಿಯ [ರನಾ] ಪಾಂಡುಸುತರಂ ’’ ಎಂದು ಪಾಠ ವಿರಬೇಕು.

**ವಚನ :** ಅಹರ್ಪತಿ ಸುತನಂ–ಸೂರ್ಯನ ಮಗ ಕರ್ಣನನ್ನು.

೫೬. ನುಡಿವುದಂ–ಹೇಳುವುದನ್ನು, ನೀಂ–ನೀನು, ಪತಿಭಕ್ತಿಯ – ಸ್ವಾಮಿ ಭಕ್ತಿಯ, ಪೆಂಪಿಂ–ಹಿರಿಮೆಯಿಂದ, ನುಡಿದಯ್–ಹೇಳಿದೆ ; ಪೆಱತಂದದಿಂ–ಬೇರೆರೀತಿ ಯಿಂದ, ನುಡಿದೆಯಲ್ತೆ–ಮಾತಾಡಲಿಲ್ಲವಲ್ಲವೆ ? ಇಲ್ಲಿ ನುಡಿ [ಯೆ]ಯಲ್ತೆ ಎಂದು ಪಾಠವಿರಬೇಕೇನೊ ? ಮದಾಯಂ–ನನ್ನ ಸಾಮರ್ಥ್ಯವು, ಅಮೋಘಂ–ವ್ಯರ್ಥ ವಲ್ಲದ್ದು (ಹೀಗೆಂದು ಭೀಷ್ಮ ತನ್ನನ್ನು ತಾನೇ ಹೊಗಳಿಕೊಳ್ಳುವನೆ ? ಆದ್ದರಿಂದ ನನ್ನ ಲಾಭವು, ನನ್ನ ದರ್ಶನ ಲಾಭವು ವ್ಯರ್ಥವಲ್ಲದ್ದು ಎಂದಾಗಬಹುದು ; ಆಯ ಶಬ್ದಕ್ಕೆ ಸಾಮರ್ಥ್ಯ ಎಂಬ ಅರ್ಥ ಕಾಣುವುದಿಲ್ಲ) ; ಸೂೞ್ – ಸರದಿಯನ್ನು, ಪಡೆಯಲ್ಕೆ – ಪಡೆಯುವುದಕ್ಕೆ, ಎನಗೆ–ನನಗೆ, ಅಕ್ಕುಂ–ಆಗುತ್ತದೆ ; ಇಂ – ಇನ್ನು, ಎಡೆಯೊಳ್–ನಡುವೆ, ಎಂದೆಂ–ಎಂದು ಹೇಳಿದೆನು ; ಅದೆಂದುದು–ಹೇಳಿದ ಆ ಮಾತು, ಅದೇಂ–ಅದೇನು, ತಪ್ಪಾದುದೆ – ತಪ್ಪಾಯಿತೆ ? ನಮ್ಮೊವಜರ್–ನಮ್ಮಿಬ್ಬರ ಗುರು ಗಳು, ಜಸಂಬಡೆದ–ಕೀರ್ತಿವಂತರಾದ, ಭಾರ್ಗವರ್ – ಪರಶುರಾಮರು, ಅಪ್ಪುದ ಱಂದಂ – ಆಗಿರುವುದರಿಂದ, ಅಂಗಮಹೀಪತೀ – ಕರ್ಣನೇ, ನಂಟ [ರೆಂ]–ನಾವು ನಂಟರಾಗಿದ್ದೇವೆ.

**ವಚನ :** ಮಕ್ಕಳ ಲೆಕ್ಕದ–ಮಕ್ಕಳ ಲೆಕ್ಕದಲ್ಲಿ, ಎಂದರೆ ಕುಂತಿಯ ಗಾಂಧಾ ರಿಯ ಮಕ್ಕಳು ಹೇಗೋ ಹಾಗೆ ; ಮೊಮ್ಮಗನಾಗಿರುವೆ.

೫೭. ಕುರುಮಹೀಪತಿ– ದುರ್ಯೋಧನನು, ನಿನ್ನನೆ–ನಿನ್ನನ್ನೇ, ನಚ್ಚಿದಂ–

ನಂಬಿದನು; ನಿನ್ನ, ಶರಾಳಿಗಳ್ಗೆ–ಬಾಣಗಳ ಸಮೂಹಕ್ಕೆ, ಅರಿಸಾಧನಸಂಪದಂ–ಶತ್ರುಸೈನ್ಯದ ಸಂಪತ್ತೆಲ್ಲಾ, ಮುನ್ನಂ–ಮೊದಲು, ನಡುಗುತ್ತುಮಿರ್ಪುದು–ಹೆದರುತ್ತಿದೆ; ಅಂತೆ–ಹಾಗೆಯೇ, ಶಸ್ತ್ರಸಂಪನ್ನನೆ ಆಗಿ–ಆಯುಧಗಳ ಸಂಪತ್ತುಳ್ಳವನಾಗಿ, ಶಲ್ಯನನೆ – ಶಲ್ಯರಾಜನನ್ನೇ, ಸಾರಥಿಯಾಗಿರೆಮಾಡಿ – ಸಾರಥಿಯಾಗಿರುವಂತೆ ಮಾಡಿಕೊಂಡು, ನೀಂ–ನೀನು, ನಿನ್ನಯ ಬಲ್ಲಮಾೞ್ಕೆಯೊಳ್–ನೀನು ಬಲ್ಲ ರೀತಿಯಲ್ಲಿ, ಕಾದು–ಯುದ್ಧ ಮಾಡು; ಅಂಗವಲ್ಲಭಾ–ಕರ್ಣನೇ, ನಿನಗೆ, ಇದಂ – ಈ ಮಾತನ್ನು, ನುಡಿದೆಂ–ಹೇಳಿದೆನು.

೫೮. ಎನೆ–ಎನ್ನಲು, ಕುಲದ ಚಲದ ಒಳ್ಪಿನ–ಒಳ್ಳೆಯ ಕುಲವನ್ನುಳ್ಳ ಚಲವನ್ನುಳ್ಳ, ಭೂಪನಂ–ರಾಜನಾದ ಶಲ್ಯನನ್ನು, ಎನಗೆ–ನನಗೆ, ತೇರಂ – ರಥವನ್ನು, ಎಸಗು–ನಡೆಯಿಸು, ಎಂದೊಡೆ–ಎಂದು ಕೇಳಿದರೆ, ಸದ್ವಿನಯಮುೞಿದು–ಒಳ್ಳೆಯ ವಿನಯವನ್ನು ಬಿಟ್ಟು, ಉರ್ಕಿ–ಗರ್ವಿಸಿ, ಕುಲಹೀನನೆಂಬ ಪರಿವಾದಂ–ಹೀನಕುಲದವನೆಂಬ ಅಪವಾದವು, ಈಗಳ್–ಈಗ, ಎನಗೆ ಆಗಿರದೇ–ನನಗೆ ಆಗಿರುವುದಲ್ಲವೇ ಏನು?

೫೯. ಆಯದ–ಸ್ಥಿರತೆಯನ್ನುಳ್ಳ, ಕಟ್ಟಾಳ್–ಶೂರರು, ನೀಂ–ನೀವು, ಈ ಯುಗದೊಳ್ – ಈ ಯುಗದಲ್ಲಿ, ಮೊದಲ್ – ಮೊದಲಿಗರಾಗಿರುವರು; ಪೆಱರುಂ ಒಳರೆ–ಇತರರೂ ಇದ್ದಾರೆಯೆ? ಧಾತ್ರನಿಂ–ವಿಧಿಯಿಂದ, ಸಾವಕ್ಕೆ–ಮರಣವಾಗಲಿ, ಜಯಶ್ರೀಯಕ್ಕೆ – ಗೆಲುವಿನ ಸಂಪದವುಂಟಾಗಲಿ, ಕಟ್ಟಾಯದ–ಶೌರ್ಯದ, ಬಟ್ಟೆ ಸಂದು – ಮಾರ್ಗದಲ್ಲಿ ಹೋಗಿ, ಆಂ – ನಾನು, ನಿಮ್ಮಂ – ನಿಮ್ಮನ್ನು; ಮೆಚ್ಚಿಸುವೆಂ–ಮೆಚ್ಚಿಸುತ್ತೇನೆ.

ವಚನ: ಪಾೞಿಯ–ಕ್ರಮದ, ಧರ್ಮದ; ಪಸುಗೆಯ–ವಿವೇಕದ; ಮನದೆಗೊಂಡು – ಮನಸ್ಸಿನಲ್ಲಿ ಒಪ್ಪಿ, ಮೆಚ್ಚಿ, ಉಭಯ ಕುಲಶುದ್ಧಂ – ತಂದೆ ತಾಯಿಗಳಿಬ್ಬರ ಕುಲಗಳಿಂದಲೂ ನಿರ್ಮಲನಾದವನು; [ಎಂ]ಬು ಕೆಯ್ವೊಡಂ – ಹೇಳಿದ್ದನ್ನು ಮಾಡುವ ಪಕ್ಷದಲ್ಲೂ; ಮಕರವ್ಯೂಹ–ಮೊಸಳೆಯಾಕಾರದ ಸೇನಾರಚನೆ; ಪರಸೈನ್ಯ ಭೈರವಂ–ಶತ್ರುಸೈನ್ಯಗಳಿಗೆ ಭಯಪ್ರದನಾದವನು, ಅರ್ಜುನ.

೬೦. ಸಂಸಪ್ತಕರ್ಕಳ್–ಸಂಸಪ್ತಕರು, ಪಿರಿದುಂ–ಹಿರಿದಾದ, ಕಾಯ್ಪಿಂದಂ–ಕೋಪದಿಂದ, ಎನ್ನೊಳ್ ನೆರೆದು–ನನ್ನಲ್ಲಿ ಸೇರಿ, ಎದುರಿಸಿ, ಇಱಿಯಲ್–ಯುದ್ಧ ಮಾಡಲು, ಪೂಣ್ದು–ಪ್ರತಿಜ್ಞೆಮಾಡಿ, ಅತ್ತ–ಅತ್ತಕಡೆಗೆ, ಕರೆವರ್–ಕರೆಯುತ್ತಿದ್ದಾರೆ; ಮತ್ತೆ–ಪುನಃ, ಇತ್ತ–ಇತ್ತಕಡೆ, ಕರ್ಣಂ–ಕರ್ಣನು, ಚಲ ಚಲದೆ–ಅತಿಶಯವಾದ ಛಲದಿಂದ, ಇಱಿಯಲ್ ಯುದ್ಧಮಾಡಲು, ನಿಂದಂ–ನಿಂತನು; ಎಗೆಯ್ವುದು – ಈಗ ಏನು ಮಾಡುವುದು, ಎಂ[ದ]–ಎಂದು ಹೇಳಿದ, ಆನರನಂ – ಆ ಅರ್ಜುನನನ್ನು, ಮುನ್ನಂ–ಮೊದಲು, ತ್ರಿಗರ್ತಾಧಿಪಬಲಮುಂ–ತ್ರಿಗರ್ತ ದೇಶದ ರಾಜನ ಸೈನ್ಯವನ್ನು, ಅದಂ–ಅದನ್ನು, ನೀಂ–ನೀನು, ನುರ್ಗು–ಧ್ವಂಸ ಮಾಡು,

ಎಂದು–ಎಂದು ಹೇಳಿ, ತೇರಂ–ರಥವನ್ನು, ಹರಿ–ಕೃಷ್ಣನು, ಕೊಂಡು–ಓಡಿಸಿ ಕೊಂಡು, ಅತ್ತ–ಆ ಕಡೆಗೆ, ಉಯ್ಪಂ–ತೆಗೆದುಕೊಂಡು ಹೋದನು ; ಇತ್ತ–ಇತ್ತ ಕಡೆ, ಒರ್ಮೊದಲ್–ಕೂಡಲೇ, ಉಭಯಬಲಂ–ಎರಡು ಸೈನ್ಯಗಳೂ, ತಾಗಿ–ಸಂಘಟಿಸಿ, ಬೇಗಂ–ವೇಗವಾಗಿ, ಕಾದಿತ್ತು–ಯುದ್ಧ ಮಾಡಿತು.

**ವಚನ :** ಚತುರ್ವಲಂಗಳ್–ಚತುರಂಗ ಸೈನ್ಯಗಳು ; ನಟ್ಟಸರಲ್ವಿಡಿದು–ನಾಟಿದ ಬಾಣವನ್ನು ಅನುಸರಿಸಿ, ಕರಗದ ಧಾರೆಯಂತೆ–ಕಳಶದಿಂದ ಸುರಿಯುವ ಧಾರೆಯಂತೆ ; ಅಂಬಿರಿವಿಡುವಿಸಂ–ಪ್ರವಾಹವಾಗಿ ಹರಿಯುತ್ತಿರಲು ; ಉರ್ಚಿ ವೋಪ–ಭೇದಿಸಿಕೊಂಡು ಹೋಗುವ, ಕಿತ್ತಂಬುಗಳಿಂ–ಸಣ್ಣ ಬಾಣಗಳಿಂದ ; ಧನು ರ್ಧರರ್–ಬಿಲ್ಗಾರರು, ಶರನಿಕರಂಗಳಿಂ–ಬಾಣಗಳ ಸಮೂಹದಿಂದ, [ಎ]ಯ್–ಮುಳ್ಳುಹಂದಿಯು, ಪೇಱುವಂತೆ–ಹೊರುವ ಹಾಗೆ, ಅಂಬನೆ–ಬಾಣಗಳನ್ನೇ, ಪೇಱಿ–ಹೊತ್ತು ; ಪೆಱಗೆಡೆದ–ಹಿಂದೆಬಿದ್ದ, ತುರುಷ್ಕ ತುರಂಗಂಗಳುಮಂ–ತುರ್ಕಿ ದೇಶದ ಕುದುರೆಗಳನ್ನು ; ತೊತ್ತಱದುಱಿವ–ಚೆನ್ನಾಗಿ ತುಳಿಯುವ, ಸೊಪ್ಪಾಗುವಂತೆ ತುಳಿಯುವ ; ಬಿಟ್ಟೆಕ್ಕುವ–ತೋರಿ ಬಿಡುವ, ಛೂ ಬಿಡುವ ; ನಿಷಾದಿಗಳ್–ಮಾವಟಿಗರು ; ಪೊರಜೆವಿಡಿದು–ಹಗ್ಗವನ್ನು (ಆನೆಗೆ ಕಟ್ಟಿರುವ) ಹಿಡಿದು ; ಕೊರಲ ಬಳೆಗಳೊಳೆ–ಕೊರಳ ಬಳೆಗಳಲ್ಲಿಯೇ, ಕಾಲ್ಗೋದು–ಕಾಲನ್ನು ತೂರಿಸಿ ; ಪರಿಯಿ ಸುವ–ಓಡಿಸುವ, ರಸತ್ರಾರುಗರುಮಂ–ಆನೆಯ ಮೇಲೆ ಕುಳಿತು ಯುದ್ಧ ಮಾಡು ವವರನ್ನು (?), ಇಡುವಿಟ್ಟಿಯು–ಇಡುವ ಈಟಿಯು ; ಪಿಡಿಕುತ್ತಿನ–ಹಿಡಿಯನುಳ್ಳ ಚುಚ್ಚುವ ಆಯುಧದ ; ಕಕ್ಕಡೆಯು–ಕಕ್ಕಡೆಯೆಂಬ ಆಯುಧದ ; ಕೋಳ್ಗೆ–ಹೊಡೆತಕ್ಕೆ ; ಮರಪಟಲಂ ಪಾಯ್ದು – ದೊಡ್ಡ ಪೆಟಲಿನಿಂದ . ಚಿಮ್ಮುವ ಕಾಯಂತೆ ಹಾರಿ (?) ; ಕೆಡೆದು–ಕೆಳಗೆ ಬಿದ್ದು, ಅನಾರೂಢಂ–ವಾಹಕರಿಲ್ಲದೆ (?), ಪೇಸೇಱೆ–ಹೇಸಿಗೆ ಅತಿಶಯವಾಗಲು, ತುಱಿದುಕೊಲ್ವ ಕರಿಗಳ–ತುಳಿದು ಕೊಲ್ಲುವ ಆನೆಗಳ ; ಕರ–ಸೊಂಡಿಲು, ರದನ–ದಂತ ; ಲಾಂಗೂಲ–ಬಾಲ ; ಘಾತದಿಂದಂ–ಏಟಿ ನಿಂದ ; ಇಟ್ಟೆಡೆಯೊಳ್–ಇಕ್ಕಟ್ಟುಗಳಲ್ಲಿ ; ಕಿಂಕೊಟಿಯಾಗಿ–(?) ; ಪೆತ್ತ–ಗಟ್ಟಿ ಯಾದ, ಹೆತ್ತುಕೊಂಡ ; ಕೆನ್ನೆತ್ತರೊಳ್–ಕೆಂಪುರಕ್ತದಲ್ಲಿ ; ರೂಪಱಿಯಲಾಗ ದಂತಿರ್ದ–ಆಕಾರವನ್ನು ತಿಳಿಯಲು ಆಗದಂತಿದ್ದ ; ಅಗುರ್ವಂ–ಭಯವನ್ನು ; ವಿಕರ್ಣ ಕೋಟಿಗಳಿಂ–ಅಸಂಖ್ಯಾತ ಬಾಣಗಳಿಂದ ; ಅಸುಂಗೊಳೆ–ಪ್ರಾಣಾಪಹರಣ ಮಾಡುವಂತೆ ; ಅಱಿಕೆಯ ನಾಯಕಂ–ಪ್ರಸಿದ್ಧ ನಾಯಕನಾದ ; ಅಗುರ್ವಾಗೆ–ಭಯವುಂಟಾಗುವ ಹಾಗೆ ; ಈ ಗದ್ಯದಲ್ಲಿ ಕೆಲವು ವಿಶೇಷಗಳಿವೆ ; ಬಾಣಗಳು ನಾಟಿಕೊಂಡು ಕೆಳಗೆ ಬಿದ್ದ ಕುದುರೆಗಳು ಮುಳ್ಳುಗಳನ್ನು ಕೆದರಿಕೊಂಡಿರುವ ಮುಳ್ಳುಹಂದಿಗಳಂತೆ ಕಾಣುತ್ತಿದ್ದವು, ಕುಲಮುದ್ದನೆಂಬ ವೀರ ಕಾಳಗದಲ್ಲಿ ಹಲ ವರನ್ನು ಕೊಂದು ‹‹ ತಾನುಂ ಪಲವುಂ ಏಸುವೆತ್ತು ಎಯ್ಪೊಡೆದಪ್ಪಿದಪ್ಪೊಲ್ ಕಣೆ ಪಂಜರದೊಳೊಱಗಿ ಭೀಷ್ಮನ್ ವಿಬ್ಬಂತೆ ನೆಲಮುಟ್ಟದೆ ವಿಟ್ಟೊನ್ ” ಎಂಬ ಶಾಸನ

ವಾಕ್ಯವನ್ನು ಇಲ್ಲಿರುವ ಉಪಮೆಯೊಡನೆ ಹೋಲಿಸಬಹುದು [ಸೊರಬ ೧೦, ಕಾಲ 800 ಕ್ರಿ.ಶ.]; ಆನೆಯ ಹೊರಜಿಗಳು: ಬಲವೊರಜೆ ಎಡವೊರಜೆ ಬೆನ್ನಿನ ಮಿಳಿಯ ಜಾಳಿಗೆ ವೊರಜೆ (ಕುವ್ಯಾಪ್ರೊ ೩-೨); ರಸತ್ತ್ರುಗ ಶಬ್ದದ ಅರ್ಥ ಅನಿರ್ದಿಷ್ಟ; 'ಮರಪಟಲಂ' ಎಂಬುದು 'ಮರಪೆಟಲಂ' ಎಂದಿರಬಹುದು; ಮರ-ದೊಡ್ಡದಾದ, ಪೆಟಲಂ-ಪೆಟಲನ್ನು; ಕಿಂಕೊಟ್ಟಿ, ಬಹುಶಃ ಇದು ಕೀಟ್+ = ಕೀಟಿಕ್ಕೊಟ್ಟಿ ಆಗಿರಬಹುದು, ಕೀಳಾದ ಕೊಳೆ ಎಂದರೆ ಜೀರ್ಣವಾದ ವಸ್ತು ಎಂಬರ್ಥವಾಗಬಹುದು.

೬೧. ಎಱಿಪ ಪತತ್ರಿಗಳಂ-ಮೇಲೆ ಬೀಳುವ ಬಾಣಗಳನ್ನು, ಚಿತ್ರ ಪತತ್ರಿಯೊಳ್-ವಿಚಿತ್ರವಾದ ಎಂದರೆ ನಾನಾ ಆಕಾರದ ಬಾಣಗಳಿಂದ, ಕಡಿದು-ಕತ್ತರಿಸಿ, ಆಗಳ್-ಆಗ, ಚಿತ್ರಸೇನನಂ-ಚಿತ್ರಸೇನನನ್ನು, ಚಿತ್ರ ವಿಧಮಾಗಿ-ನಾನಾರೀತಿಯಾಗಿ, ಕೊಂದೊಡೆ-ಕೊಂದರೆ, ಅವನಾ-ಅವನ (ಕೃತವರ್ಮನ) ಭುಜ ಬಲಂ-ಬಾಹು ಬಲವು, ಧಾತ್ರಿಗೆ-ಲೋಕಕ್ಕೆ, ತಾಂ-ತಾನು, ಚಿತ್ರಮಾಯ್ತು-ಆಶ್ಚರ್ಯಕರವಾಯಿತು.

**ವಚನ:** ಅತೀತನಾದುದರ್ಕೆ-ಸತ್ತುದಕ್ಕೆ; ಏವೈಸಿ-ದುಃಖಪಟ್ಟು ಮತ್ತು ಕೆರಳಿ.

೬೨. ಚಿತ್ರನ-ಚಿತ್ರನೆಂಬವನ, ವಿಶ್ರುತಶೌರ್ಯಂ-ಪ್ರಸಿದ್ಧವಾದ ಪರಾಕ್ರಮ, ಅತಿಚಿತ್ರಂ-ಅತಿ ಆಶ್ಚರ್ಯಕರ, ಇದು ಎನಿಸಿ-ಇದು ಎನ್ನಿಸಿ, ತಾಪ-ಎದುರಾಗುವ, ಚಿತ್ರನಂ-ಚಿತ್ರನೆಂಬವನನ್ನು, ಅಂತು-ಹಾಗೆ, ಆ ಪ್ರತಿವಿಂಧ್ಯಂ-ಆ ಪ್ರತಿವಿಂಧ್ಯ ನೆಂಬವನು, ವಿಂಧ್ಯಾಚಲಪತಿಯವೊಲ್ – ಶ್ರೇಷ್ಠವಾದ ವಿಂಧ್ಯಪರ್ವತದಂತೆ, ಅವಿಚಳಿತಂ-ಸ್ಥಿರನಾಗಿರುವವನು, ಆತನಂ-ಆ ಚಿತ್ರನನ್ನು, ಬಂದಾಂತಂ-ಬಂದು ಎದುರಿಸಿದನು.

೬೩. ಆಂತು-ಎದುರಿಸಿ, ಅವನ ಮೇಗೆ-ಆ ಪ್ರತಿವಿಂಧ್ಯನ ಮೇಲೆ, ಶಿತಶರ ಸಂತತಿಯಂ-ಹರಿತವಾದ ಬಾಣಗಳ ಸಮೂಹವನ್ನು, ಸುರಿಯೆ-ಕರೆಯಲು, ನೋಡಿ, ತಾಂ-ತಾನು, ಶರಪರಿಣತಿಯಂ-ಬಿಲ್ವಿದ್ಯೆಯ ನೈಪುಣ್ಯವನ್ನು, ಎನಗೆ-ನನಗೆ, ತೋರ್ಪಂ-ತೋರಿಸುತ್ತಾನೆ, ಎನುತ್ತೆ-ಎನ್ನುತ್ತ, ಇರದೆ, ಅಂತು-ಹಾಗೆ, ಅನಿತುಮಂ-ಅಷ್ಟು ಬಾಣಗಳನ್ನು, ಒಡನೆ-ಕೂಡಲೆ, ಎಡೆಯೊಳೆ-ನಡುವೆಯೇ, ಚಿತ್ರಂ-ಚಿತ್ರನು, ಒರ್ಮೆಯೆ-ಒಂದೇ ಸಲಕ್ಕೆ, ಕಡಿದಂ-ಕತ್ತರಿಸಿದನು.

೬೪. ಕಡಿದೊಡೆ-ಕತ್ತರಿಸಿದರೆ, ಕಡುಪಿಂದಂ-ತೀವ್ರತೆಯಿಂದ ಪ್ರತಿ ವಿಂಧ್ಯಂ-ಪ್ರತಿವಿಂಧ್ಯನು, ಕಿಡಿಕಿಡಿಯಾಗಿ-ಕೋಪಿಸಿ, ಶಿತಾಸ್ತ್ರನಿಕರಮಂ-ಹರಿತವಾದ ಬಾಣಜಾಲವನ್ನು, ಕಡಿದು-ಕತ್ತರಿಸಿ, ಅವನ ರಥಮಂ-ಅವನ ರಥವನ್ನು, ತಲೆಯುಮಂ-ತಲೆಯನ್ನೂ, ಅದೊಂದು ದಾರುಣ ಶರದಿಂ-ಅದೊಂದು ಕ್ರೂರವಾದ ಬಾಣದಿಂದ, ಕಡಿದಂ-ಕತ್ತರಿಸಿದನು.

**ವಚನ:** ಅವಂಧ್ಯ–ಬಂಜೆಯಾಗದ ಎಂದರೆ ವ್ಯರ್ಥವಾಗದ; ಆಸ್ಫೋಟಿಸಿ–ಸಿಡಿಯಿಸಿ ಅಥವಾ ಸಿಡಿದು

**೬೫.** ಕುರುಸೈನ್ಯಾಂಭೋಧಿ–ಕೌರವ ಸೈನ್ಯಸಾಗರವು, ತೂಳ್ದು–ತಳ್ಳಲ್ಪಟ್ಟು, ಎಯ್ದೆ–ಚೆನ್ನಾಗಿ, ಉಗಿದಪುದು–ಆಕರ್ಷಿತವಾಗುತ್ತದೆ; ಇಲ್ಲಿ–ಈ ಯುದ್ಧದಲ್ಲಿ, ಇದಂ – ಈ ಸೈನ್ಯವನ್ನು, ಕೆಯ್ಕೊಳ್ವರ್ – ಸಹಾಯವಾಗಿ ಬಂದು ರಕ್ಷಿಸುವವರು, ಆರ್–ಯಾರು? ಈ ಸಂಗರದೊಳ್ – ಈ ಕಾಳಗದಲ್ಲಿ, ನಿಲ್ವನ್ನರ್ – ಸ್ಥಿರವಾಗಿ ನಿಲ್ಲುವವರು, ಆರ್ – ಯಾರು? ಎಂಬೆಡೆಯೊಳ್ – ಎನ್ನುವ ಸಮಯಕ್ಕೆ, ಆಚಾರ್ಯ ಪುತ್ರಂ–ದ್ರೋಣನ ಮಗ ಅಶ್ವತ್ಥಾಮನು, ಇದಿರೊಳ್ – ಎದುರಿಗೆ, ಆನಲ್ತೆ–ನಾನಲ್ಲವೆ? ಬಂದಿರ್ದೆಂ–ಬಂದಿದ್ದೇನೆ, ಎಂದು, ಎಲ್ಲರುಮಂ–ಎಲ್ಲರನ್ನೂ, ಸಂತೈಸಿ–ಸಮಾಧಾನ ಪಡಿಸಿ, ಕಣ್ – ಮೂರು ಕಣ್ಣುಗಳು, ನೊಸಲೊಳ್ – ಹಣೆಯಲ್ಲಿ; ಬಿಲ್–ಬಿಲ್ಲು, ಚಂಡದೋರ್ದಂಡದೊಳ್–ಉಗ್ರವಾದ ಬಾಹುದಂಡಗಳಲ್ಲಿ; ಕಱ–ಕಪ್ಪು ಮಚ್ಚೆ, (ವಿಷದ ಮಚ್ಚೆ), ಕಂಧರದೊಳ್–ಕೊರಳಿನಲ್ಲಿ, ಪೆಱ–ಅರ್ಧ ಚಂದ್ರ, ತನ್ನುತ್ತಮಾಂಗಾತಂರದೊಳ್-ತನ್ನ ತಲೆಯ ನಡುವೆ, ಎಸೆಯೆ–ಪ್ರಕಾಶಿಸಲು, ನಿಂದು–ನಿಂತು, ಆಂತಂ–ಎದುರಿಸಿದನು.

**ವಚನ:** ಎಡಗಲಿಸಿದ–ದಾಟಿದ (?); ತಡೆಯದೆ–ತಡಮಾಡದೆ, ಎಡಗಲಿಸಿ–ದಾಟಿ ಎಂದರೆ ಪ್ರತಿವಿಂಧ್ಯನ ಮೇಲೆ ಹಾರಿ ಅವನಿಗೂ ಅಶ್ವತ್ಥಾಮನಿಗೂ ನಡುವೆ ಭೀಮಸೇನನು ಬಂದು ನಿಂತನೆಂದು ಅಭಿಪ್ರಾಯ; ಅದಿರದೆ–ಹೆದರದೆ;

**೬೬.** ಏನುಮಲ್ಲದ–ಏನೂ ಅಲ್ಲದ ಎಂದರೆ ನಿಷ್ಪ್ರಯೋಜಕವಾದ, ಅಱಿ ಗಂಡರ್–ಅಲ್ಪಶೂರರು, ಉಜದೆ–ಇರದೆ, ನಿನಗೆ, ಇದಿರ್ಚುವರಲ್ಲರ್–ಎದುರಿಸುವವರಲ್ಲ; ಎನ್ನಂ–ನನ್ನನ್ನು, ಆಂಪನಿತು–ಎದುರಿಸುವಷ್ಟು, ಅಳವು–ಶಕ್ತಿಯು, ಉಳ್ಳೊಡೆ–ಇರುವ ಪಕ್ಷದಲ್ಲಿ, ಇತ್ತಮಗುಱ್–ಇತ್ತಕಡೆ ತಿರುಗು, ಎಂದು–ಹೇಳಿ, ಶರಾವಳಿಯಿಂದೆ–ಬಾಣನಿಕರಗಳಿಂದ, ಪೂಱ್ದೊಡೆ–ಹೂಳಿದರೆ, ಅಂಬಿನ ಸರಿ ಸೋನ ತಂದಲ್–ಬಾಣಗಳ ಮಳೆ ಜಡಿಮಳೆ ತುಂತುರು ಮಳೆಗಳು, ದಲ್–ದಿಟವಾಗಿಯೂ, ಕಂಡರೆಲ್ಲಂ–ನೋಡಿದವರೆಲ್ಲ, ಪೊಸತಾಯ್ತು–ಹೊಸದಾಯಿತು, ಎನೆ–ಎನ್ನಲು, ಕುರುಭೂಮಿಗೆ–ಕುರುಕ್ಷೇತ್ರಕ್ಕೆ, ಅಂಬಿನ–ಬಾಣಗಳ, ಮಱಿಗಾಲವಾಯ್ತು, ಮಳೆಯಕಾಲವಾಯಿತು; ಭೀಮ–ಭೀಮನು, ಅದೇಂ ಪ್ರತಾಪಿಯೋ–ಅದೇನು ಪ್ರತಾಪಶಾಲಿಯೋ!

**೬೭.** ಪವನನಂದನಂ–ಭೀಮಸೇನನು, ಗದೆಯೊಳೆ–ಗದಾಯುಧದಲ್ಲಿಯೇ, ಜೆಟ್ಟಿಗಂ – ಶೂರನು, ಎಂಬರ ಮಾತು – ಎನ್ನುವವರ ಮಾತು, ಮಾತದಲ್ಲದು–ಮಾತು ಅಲ್ಲ; ಸುರ....ರ್ಕಳ್ :– ಸುರಸಿಂಧುಪುತ್ರ–ಭೀಷ್ಮ, ಗುರು–ದ್ರೋಣ, ಕೃಪ, ಕರ್ಣ ಎಂಬ ಪ್ರಮುಖರು, ಶರಾಸನಾಗಮದೊಳ್ – ಧನುರ್ವಿದ್ಯೆಯಲ್ಲಿ, ಇಂತು–ಹೀಗೆ, ನೇಂದರೆ–ಕಲಿತವರೆ, ಪರಿಣತರಾದವರೆ? ಸುರರ್ಕಳ್–ದೇವತೆಗಳು,

ಅಂಬರದೊಳ್–ಆಕಾಶದಲ್ಲಿ, ಎಂಬಿನಂ–ಎನ್ನುತ್ತಿರಲು, ಮರುತ್ಸುತಂ–ಭೀಮಸೇನನು, ಗುರುಪ್ರಿಯನಂದನನಂ – ಅಶ್ವತ್ಥಾಮನನ್ನು, ಬಾಣಜಾಲದೆ – ಬಾಣಗಳ ಸಮೂಹ ಗಳಿಂದ, ಏಂ ಪುದಿದನೋ–ಏನು ಮುಚ್ಚಿದನೋ! ನೇರಿಪರ್ < ನೇರಿದು + ಅರ್; ನೇರ್ =(ತೆ) ನೇರ್ಚು – ಕಲಿ, ಅಭ್ಯಾಸ ಮಾಡು; ಅಥವಾ ನೇರಿದು – ನೇರಾದ, ಸಪ್ಪೂದ; ನೇರಿದರ್–ನೆಟ್ಟಗೆ ಇರುವವರು, ವಕ್ರವಿಲ್ಲದವರು.

ವಚನ: ಭೀಮೋದ್ದಾಮ........ಳಿಯ; ಭೀಮ–ಭೀಮನೆಂಬ, ಉದ್ದಾಮ–ವಿಶಾಲವಾದ, ಶಾಮಜಳಧರ – ನೀಲ ಮೇಘದಿಂದ, ವಿಮುಕ್ತ – ಬಿಡಲ್ಪಟ್ಟ, ಶರಾವಳಿಯ–ಬಾಣದ ಸಮೂಹದ, ಬಳಸಂ–ಆವರಿಸುವಿಕೆಯನ್ನು, ಬಳಸಿದಪ್ಪಂ–ಸುತ್ತಲೂ ಮುಚ್ಚುತ್ತಾನೆ.

೬೮. ಅನಳಶಿಖಾಕಳಾಪವನೆ – ಅಗ್ನಿಜ್ವಾಲೆಗಳ ಸಮೂಹವನ್ನೇ, ಭೋರ್ಗರೆದು–ಭೋರೆಂದು ಶಬ್ದಮಾಡಿ, ಉಗುಳ್ವಿನ್ನಮಪ್ಪ–ಉಗುಳುವಂಥವುವಾದ, ಅಗುರ್ವಿನ–ಭಯಂಕರವಾದ, ಶರಸಂಕುಳಂಗಳೊಳೆ–ಬಾಣಗಳ ಗುಂಪುಗಳಲ್ಲಿಯೇ, ಭೋರ್ಗರೆದು – ಭೋರೆಂದು, ಆರ್ದು – ಗರ್ಜಿಸಿ, ಇಸೆ – ಪ್ರಯೋಗಿಸಲು, ಭೀಮನೆಚ್ಚ–ಭೀಮನು ಪ್ರಯೋಗಿಸಿದ, ನಚ್ಚಿನ–ನಂಬಿಕೆಗರ್ಹವಾದ, ಘನಬಾಣ ಜಾಳಮದು–ಆ ಹಿರಿದಾದ ಬಾಣಗಳ ಸಮೂಹ, ನೋಡುವೊಡೆ–ನೋಡುವುದಾದರೆ, ಆಳಜಾಳವಾಯ್ತು – ಸುಳ್ಳಾದ ಬಲೆಯಾಯಿತು; ಎನೆ – ಎನ್ನಲು, ಗುರುಪುತ್ರ ನಂಬುಗಳ್–ಅಶ್ವತ್ಥಾಮನ ಬಾಣಗಳು, ಪತತ್ರಿಗಳಂ–(ಭೀಮನ) ಬಾಣಗಳನ್ನು, ಕಡಿದು–ಕತ್ತರಿಸಿ, ಒಟ್ಟಿ – ರಾಶಿಮಾಡಿ, ಸುಟ್ಟುವು – ಉರಿಸಿದುವು. ಆಲಜಾಲ (ಸಂ) < ಆಳಜಾಳ; ಆಲ ಎಂದರೆ ಸುಳ್ಳು, ಮಿಥ್ಯೆ; ಜಾಲವೆಂಬುದನ್ನು ಇಲ್ಲಿ ಹಂದರ ಎಂಬರ್ಥದಲ್ಲಿ ಗ್ರಹಿಸಬೇಕು. ಸಮೂಹಾರ್ಥದಲ್ಲಿ ಮಿಥ್ಯೆಯ ಗುಂಪು ಎಂದಾಗುತ್ತದೆ; ಬಾಣನ ಕಾದಂಬರಿಯಲ್ಲಿ "ಅನ್ಯಾನಿಚಾಲಜಾಲಾನಿ ದುರ್ಜೀವಿತ ಗೃಹೀತಾ ಚಿಂತಯನ್ತೀ" ಎಂದು ಪ್ರಯೋಗವಿದೆ; "ಆಲಜಾಲಾನಿ ನಿಸ್ಸಾರಾಣಿ" ಎಂದು ಒಬ್ಬ ವ್ಯಾಖ್ಯಾಕಾರ (ಮಯೂರೇಶ್ವರ) ಹೇಳುತ್ತಾನೆ; "ಪಲವುಮಾಲ ಜಾಲಂಗಳಂ ದುರ್ಜೀವಿತಾಗೃಹೀತೆಯೆನೆನ್ನೊಳ್ ಚಿಂತಿಸುತ್ತಾಮಿರ್ಪನ್ನೆಗಂ" ಎಂದು ಕನ್ನಡ ಕಾದಂಬರಿಯಲ್ಲಿ ಬರುತ್ತದೆ; ಇಲ್ಲಿ ಪಲವುಮಾಲಜಾಲಂಗಳಂ ಎಂಬುದನ್ನು ಅನೇಕ ಮಿಥ್ಯಾಭಿಲಾಷೆಗಳನ್ನು ಎಂದು ಅರ್ಥೈಸಿದ್ದಾರೆ (ಬಿ. ಮಲ್ಲಪ್ಪ ನವರು, ಕರ್ಣಾಟಕ ಕಾದಂಬರಿ ಉತ್ತರಭಾಗ ೫೬೭); ಟಿಕಾರಕ್ಕೆ ಸಂದೇಹ ಇರುವ ಶಬ್ದಗಳಲ್ಲಿ "ಆಳಮಾಳಮೆಂದು ಠಮಾಳಂ" ಎಂದು ಕೇಶಿರಾಜ ಹೇಳು ತ್ತಾನೆ; ಇಲ್ಲಿ ಆಳಂ ಎಂದರೆ ಠಮಾಳಂ–ಮೋಸ, ಸುಳ್ಳು, ಮಿಥ್ಯೆ; ಆದ್ದರಿಂದ ಆಳಜಾಳ ಎಂದರೆ ನಿಸ್ಸಾರ ಅಥವಾ ಮಿಥ್ಯಾಜಾಲ, ಸುಳ್ಳಿನ ಪಂಜರ ಎಂದರ್ಥ ವಾಗುತ್ತದೆ. ಛಿನ್ನಾಭಿನ್ನ (?) ಎಂದು ಪಂಪಭಾರತ ಕೋಶದಲ್ಲಿ ಕಾಣಿಸಿರುವ ಅರ್ಥ ಊಹೆಯದು.

**ವಚನ :** ನಿಶಾತವಿಶಿಖ ಪಂಜರಮುಂ-ಹರಿತವಾದ ಬಾಣಗಳ ಹಂದರವನ್ನು ; ಕಲಿಕುಲಿಂಮಾಡಿಯುಂ-ತಾರುಮಾರಾಗಿಸಿಯೂ ;

೧೯. ತೇರಂ – ರಥವನ್ನು , ಕುದುರೆಯಂ – ಕುದುರೆಗಳನ್ನು, ಎಸಗುವ– ಚೋದಿಸುವ, ಸಾರಥಿಯಂ – ಸಾರಥಿಯನ್ನು, ಪೊಡರ್ಪ – ಶಕ್ತಿಯನ್ನು, ಅಯ್ದು ಬಾಣದೊಳ್ – ಐದು ಬಾಣಗಳಲ್ಲಿ, ಉಪಸಂಹಾರಿಸಿ – ನಾಶಮಾಡಿ, ತಳತಳಿ ತೊಳಗುವ–ಥಳಥಳ ಹೊಳೆಯುವ, ನಾರಾಚದಿಂ–ಬಾಣದಿಂದ, ಭೀಮನ ನೊಸಲಂ –ಭೀಮನ ಹಣೆಯನ್ನು, ಊಜಿ ಎಚ್ಚಂ–ನಾಟಿಸಿ ಪ್ರಯೋಗ ಮಾಡಿದನು ;

೭೦. ಮಿಸಗುವ ನೊಸಲಂ-ಹೊಳೆಯುವ ಹಣೆಯನ್ನು, ನಟ್ಟು – ನಾಟಿ, ಅರ್ವಿಸುವಿನೆಗಂ–ವ್ಯಾಪಿಸುತ್ತಿರಲು, ತೂಗಿ–ತೂಗಾಡಿ, ತೊನೆವ–ಅತ್ತಿತ್ತ ಚಲಿಸುವ, ನಾರಾಚಂ–ಬಾಣವು, ಅದು, ತದ್ವದನಾಂಭೋಜ ಸೌರಭಾಕೃಷ್ಟಮಧುಪಮಾಲಾ ಕೃತಿಯಿಂ–ಅವನ ಮುಖ ಕಮಲದ ಸುಗಂಧದಿಂದ ಆಕರ್ಷಿತವಾದ ದುಂಬಿಗಳ ಮಾಲೆಯ ಆಕಾರದಿಂದ, ಏನ್ ಎಸೆದುದೋ–ಏನು ಸೊಗಸಾಯಿತೋ ?

೭೧. ನಡೆ – ನಾಟಲು, ನಾರಾಚದ–ಬಾಣದ, ನೋವಿನ–ಯಾತನೆಯು, ನಡುಕಂ – ದುಡಿತವು, ಪಿರಿದಾಯ್ತು – ಹೆಚ್ಚಾಯಿತು, ಸರ್ಪರೋಗಿಯ – ವಿಸರ್ಪಿ ಯೆಂಬ ರೋಗವನ್ನುಳ್ಳವನ, ಸೆರೆಯಂ–ರಕ್ತನಾಳವನ್ನು, ಬಿಡಿಸಿದವೊಲ್–ಕತ್ತರಿಸಿ ದಂತೆ, ಕಡುಪ್ಪ ಕೃಷ್ಣರುಧಿರಜಲೌಘಂ–ಉಗುರು ಬೆಚ್ಚಗಿರುವ ಕರಿದಾದ ನೆತ್ತರ ನೀರ ಸಮೂಹವು, ಒಡನೆ – ಕೂಡಲೆ, ಎಚ್ಚು–ಸೂಸಿ, ಪಾಯ್ದುತ್ತು–ಹರಿಯಿತು. ಇಲ್ಲಿನ ಉಪಮೆ ಪಂಪನಿಗಿದ್ದ ವೈದ್ಯಶಾಸ್ತ್ರದ ಪರಿಚಯವನ್ನು ತೋರಿಸುತ್ತದೆ.

೭೨. ಆ ಮಾರ್ಗಣದಿಂ–ಆ ಬಾಣದಿಂದ, ಎರ್ದೆ–ಎದೆಯು, ನಡುಗಲ್ಕೆ– ನಡುಗುವುದಕ್ಕೆ, ತನು–ಮೈ, ಬೆಮರಲ್–ಬೆವರುವುದಕ್ಕೆ, ನಾಲಗೆ–ನಾಲಗೆಯು, ತೊಡರಲ್ – ತೊಡರಿಕೊಳ್ಳುವುದಕ್ಕೆ, ತಗುಳ್ದುದು – ಮೊದಲಿಟ್ಟಿತು ; ಗುರು ತನಯಂ–ಅಶ್ವತ್ಥಾಮನು, ಎಚ್ಚ–ಹೊಡೆದ, ಶಿತನಾರಾಚಂ–ಹರಿತವಾದ ಬಾಣ, ಮತ್ತೆ, ಉಳಿದರಂ–ಉಳಿದವರನ್ನು, ಇತರರನ್ನು, ಎಂತುಂ ಮಡಿಪದೆ ಗಡ–ಹೇಗೂ ಕೊಲ್ಲದಿರುತ್ತದೆಯೆ ?

**ವಚನ :** ನಾರಾಚ ಘಾತದಿಂ–ಬಾಣದ ಏಟಿನಿಂದ ; ಪುಣ್ಗೊರ್ತು–ಗಾಯ ವನ್ನು ಹೊಂದಿ (?) ; ಬಿಲ್ಲಕೊಪ್ಪಂ–ಬಿಲ್ಲಿನ ಅಗ್ರಭಾಗವನ್ನು ; ಕಿಱಿದಾನುಂ ಬೇಗಂ–ಸ್ವಲ್ಪವಾದರೂ ಹೊತ್ತು ; ಎಂತಾನುಂ–ಹೇಗಾದರೂ ;

೭೩. ಖರಕರಬಿಂಬದಿಂ–ಸೂರ್ಯ ಮಂಡಲದಿಂದ, ಕಿರಣ ಸಂತತಿಗಳ್–ಕಿರಣ ಗಳ ಸಮೂಹಗಳು, ಪೊಱಪೊಣ್ಮೆದಪ್ಪುವು – ಹೊರಕ್ಕೆ ಹೊರಟು ಬರುತ್ತವೆ, ಎಂಬರ–ಎನ್ನುವವರ, ನುಡಿ–ಮಾತು, ಪೋಲ್ವೆವೆತ್ತುದು – ಸಾಟಿಯಾಯಿತು, ಎನೆ – ಎನ್ನಲು, ಬಾಣಧಿಯಿಂದೆ – ಬತ್ತಳಿಕೆಯಿಂದ, ಇರದೆ – ಬಿಡದೆ, ವಿಸ್ಫುರಿತಶರಂ ಗಳೆಂಟರ–ಎಂಟು ತೊಳಗುವ ಬಾಣಗಳನ್ನು , ಉರ್ಚಿಕೊಂಡು – ಸೆಳೆದುಕೊಂಡು,

ಅವಱೊಳ್–ಆ ಬಾಣಗಳಲ್ಲಿ, ಸೂಳೆವ–ಹೊಳೆಯುವ, ಆಯ್ದು ಶರಂಗಳಿಂ–ಐದು ಬಾಣಗಳಿಂದ, ಆ ದ್ವಿಜನ – ಆ ಅಶ್ವತ್ಥಾಮನ, ಸೂತವರೂಥತುರಂಗಮಂಗಳಂ – ಸಾರಥಿ ರಥ ಕುದುರೆಗಳನ್ನು, ಸುರುಳ್ದು – ಸುತ್ತಿ, ಉರುಳ್ದಿನಂ – ಬೀಳುತ್ತಿರಲು, ಎಚ್ಚಂ–ಪ್ರಯೋಗಿಸಿದನು.

೭೪. ಉಱದ–ಮಿಕ್ಕ, ಪೆಱವು–ಬೇರೆಯಾದ, ಮೂಱು–ಮೂರು, ಮಿಱು ಮಿಱುಮಿಱುಪ–ಹೊಳೆಹೊಳೆಯುತ್ತಿರುವ, ಶಿತಾಸ್ತ್ರಂಗಳಿಂ – ಕೂರ್ಗಣೆಗಳಿಂದ, ದ್ವಿಜನ್ಮನಸೂಸಲಂ–ಹಾರುವ ಅಶ್ವತ್ಥಾಮನ ಹಣೆಯನ್ನು, ನೆಱಗೊಳ್ವಿನಂ–ಮರ್ಮ ವನ್ನು ಛೇದಿಸುವಂತೆ, ಎಚ್ಚೊಡೆ–ಪ್ರಯೋಗಿಸಿದರೆ, ಆ ಮಾರುತಿಯಾ–ಆ ಭೀಮ ಸೇನನ, ಅದಟುಂ ಅಳವುಂ–ಪರಾಕ್ರಮವೂ ಶಕ್ತಿಯೂ, ಕಣ್ದೆಱೆದವೊಲಾಯ್ತು– ಕಣ್ಣುಬಿಟ್ಟ ಹಾಗಾಯಿತು, ಎಂದರೆ ಚೈತನ್ಯಮಯವಾಯಿತು.

**ವಚನ:** ಹೇಮಪುಂಖಾಂಕಿತಂ – ಚಿನ್ನದ ಗರಿಗಳಿಂದ ಕೂಡಿದ ಬಾಣದ ಹಿಂಭಾಗ; ನಿರ್ಘಾತದಿಂದೆ – ಪೆಟ್ಟಿನಿಂದ; ಅಱೆಯೆನೊಂದು – ಸಾಯುವಂತೆ ನೊಂದು; ಸೀಂಟಿ ಕಳೆದು – ಒರಸಿ ನೀಗಿ; ನಡುಕೋಲ್ವರಂ – ಬಾಣದ ಮಧ್ಯದ ವರೆಗೆ; ಕೂರ್ಗಣೆಗಳಂ–ಹರಿತವಾದ ಬಾಣಗಳನ್ನು; ಗಱುವೆರಸು–ಗರಿ ಸಮೇತ ವಾಗಿ; ಕೊಱೆದು–ಕತ್ತರಿಸಿ, ಕಳೆದು–ತೆಗೆದು ಹಾಕಿ;

೭೫. ಅಳವೆನಿತು – ಶಕ್ತಿಯೆಷ್ಟು, ಚಾಪವಿದ್ಯಾಬಳಮೆನಿತು – ಬಿಲ್ವಿದ್ಯೆಯ ಬಲ್ಮೆಯೆಷ್ಟು, ಉಂಟು–ಇದೆಯೋ, ಅನಿತುಂ–ಅಷ್ಟೂ, ಎಯ್ದೆವಂದು–ಕೂಡಿಬಂದು, ಇಲ್ಲಿ– ಈ ಅಶ್ವತ್ಥಾಮನಲ್ಲಿ, ಪುದುಂಗೊಳಿಸಿದುದು – ಹುದುವಾಗಿ ಸೇರಿಕೊಂಡಿತು, ಎನೆ–ಎನ್ನಲು, ಅಶ್ವತ್ಥಾಮಂ – ಅಶ್ವತ್ಥಾಮನು, ಕಲ್ಪಾನಲವಿಳಯಾಂತಕ ರೂಪ ನಾದಂ – ಪ್ರಳಯಾಗ್ನಿಯ ಮತ್ತು ಪ್ರಳಯಕಾಲದ ಯಮನ ರೂಪವುಳ್ಳವ ನಾದನು.

**ವಚನ:** ಸವ್ಯ–ಎಡದಿಂದ ಬಲಕ್ಕೆ ಸುತ್ತುವ; ಅಪಸವ್ಯ–ಬಲದಿಂದ ಎಡಕ್ಕೆ ಸುತ್ತುವ; ಭ್ರಾಂತ – ತಿರುಗುವ; ಉದ್ಭ್ರಾಂತ–ಮೇಲೆ ಗಿರ್ರೆಂದು ತಿರುಗುವ; ರಥಕಲ್ಪ ವಿಶೇಷವಿನ್ಯಾಸಂಗಳಂ-ರಥವಿದ್ಯೆಯ ನಾನಾ ರಚನೆಗಳನ್ನು, ರೀತಿಗಳನ್ನು, ಸುಟ್ಟುರೆಯೊಳಗಣ–ಸುಂಟರಗಾಳಿಯಲ್ಲಿನ;

೭೬. ಮುಳಿಸಳುರ್ದು – ಕೋಪವು ವ್ಯಾಪಿಸಿ, ಎಯ್ದೆ–ಚೆನ್ನಾಗಿ, ಕಣ್ಗ ಳೊಳೆ–ಕಣ್ಣುಗಳಲ್ಲಿಯೇ, ಪೀರ್ವವೋಲ್–ಹೀರುವಂತೆ, ಕುಡಿಯುವಂತೆ; ಉಗ್ರ ಶರಾನಲಾರ್ಚಿಯಿಂದೆ – ಭಯಂಕರ ಬಾಣಾಗ್ನಿ ಜ್ವಾಲೆಯಿಂದ, ಅಳುರ್ವವೊಲ್ – ಸುಡುವಂತೆ, ವರೂಥಮಂ – ರಥಗಳನ್ನು, ಎಯ್ದೆಚೋದಿಸಿ – ಹತ್ತಿರ ಹರಿಯಿಸಿ, ಇಂ–ಇನ್ನು, ಬರ್ದುಕಾಡೆ–ತಪ್ಪಿಸಿಕೊಂಡು ಹೋಗೆ, ಎಂದು, ಅಸುಂಗೊಳೆ–ಪ್ರಾಣ ವನ್ನು ತೆಗೆಯುವಂತೆ, ಮೊನೆಯಂಬುಗಳ್–ಮೊನಚಾದ ಬಾಣಗಳು, ತನುವಂ– ಮೈಗಳನ್ನು, ಅೞ್ದು–ನಾಟಿ (ಮುಳುಗಿ), ಅೞಿವೋಪಿನಂ – ನಾಶವಾಗುತ್ತಿರಲು

(ಕಾಣಲಾಗದಂತಾಗಲು), ಎಚ್ಚು – ಬಾಣಪ್ರಯೋಗಮಾಡಿ, ನೆತ್ತರ್ – ರಕ್ತ, ಉಚ್ಚಳಿಸಿ – ಚಿಮ್ಮಿ, ರಥದೊಳ್ – ರಥಗಳಲ್ಲಿ, ಕೊಳಗೊಳುತ್ತಿರೆ – ಕೊಳವಾಗುತ್ತಿರಲು, ಒರ್ವರೊರ್ವರೊಳ್ – ಒಬ್ಬರೊಬ್ಬರಲ್ಲಿ, ಕಾದಿದರ್–ಯುದ್ಧ ಮಾಡಿದರು.

**ವಚನ :** ಮುಳಿಸಿನ–ಕೋಪದ ; ಮೋಪಿನ–(ಹೋರಾಡಬೇಕೆಂಬ) ಆಸಕ್ತಿಯುಳ್ಳ (?), ಗಂಡಮಚ್ಚರದ–ಪೌರುಷದ ಮಾತ್ಸರ್ಯವುಳ್ಳ : ಮೆಚ್ಚುವಣಿಗೆಯ–(ಪರಸ್ಪರ) ಮೆಚ್ಚುಗೆಯನ್ನುಳ್ಳ (?) ; ಅಂಕಕಾಱರ್–ಅಂಕವೆಂಬ ದ್ವಂದ್ವ ಯುದ್ಧವನ್ನು ಎಂದರೆ ಮಲ್ಲಗಾಳಗವನ್ನು ಮಾಡುವವರು ; ಎಕ್ಕತುಳಕ್ಕೆ – ಕುಸ್ತಿಯುದ್ಧಕ್ಕೆ ; ಎಕ್ಕೆಕ್ಕೆಯಿಂ–ಮೇಲಿಂದ ಮೇಲೆ ; ಸೂಟಿಸೇಱುವಂತೆ–ಸರದಿಪ್ರಕಾರ ಹೊಡೆದಾಟದಲ್ಲಿ ಹೊಡೆಯುವಂತೆ; ಇಲ್ಲಿ ಹಲವು ಶಬ್ದಗಳ ಅರ್ಥ ಅನಿರ್ದಿಷ್ಟ; ಮೋಪ್ಪು(ತ)–ಆಸೆ; ಅಂಕಃ–ಕೆ (ಯೇ)ನ ವಾ ಯುಧ್ಯಮೇತೇ ಸಾರ್ಥಕಃ ಖಲಕಧಾಮನಿ ಸಮೇನಾಸ್ತ್ರೇಣ ಯಸ್ತಜ್ಞ್ಯೈರಂಕಃ ಸಪರಿಕೀರ್ತಿತಃ ।। ಅಖಾಡದಲ್ಲಿ ಒಬ್ಬನು ಸಮಾನವಾದ ಆಯುಧವುಳ್ಳ ಇನ್ನೊಬ್ಬರೊಡನೆ ಯುದ್ಧ ಮಾಡುವುದು ; ಇಂಥವರಿಗೆ ಅಂಕ ಎಂದು ಹೆಸರು ; ಪರಿಭೂತಾಂಕ, ಮತ್ಸರಾಂಕ, ಭೂಮ್ಯಂಕ–ಎಂದು ಮೂರು ವಿಧ ; ಇವಲ್ಲದೆ ವಿರುಪ್ಯಾಂಕ, ವಿಧ್ಯಾಂಕ, ವೈರಾಂಕ, ದ್ರೋಹಾಂಕ, ಪ್ರಾಯಶ್ಚಿತ್ತಾಂಕ–ಎಂಬವೂ ಸೇರಿ ಎಂಟು ವಿಧ.

೭೭. ಸೂತರುರುಳ್ವಿನಂ – ಸಾರಥಿಗಳು ಉರುಳುತ್ತಿರಲು ; ರಥತುರಂಗಮರಾಜಿ – ರಥಗಳ ಕುದುರೆಗಳ ಸಮೂಹ, ಸುರುಳ್ವಿನಂ – ಸುರುಟಿಕೊಳ್ಳುತ್ತಿರಲು ; ಚಳತ್ಕೇತುಗಳ್–ಅಲುಗಾಡುತ್ತಿರುವ ಧ್ವಜಗಳು, ಎತ್ತಂ–ಎಲ್ಲೆಲ್ಲೂ, ಅವ್ವಳಿಸಿ–ಮುಂದೆಹಾರಿ, ಬೀೞ್ವಿನಂ–ಬೀಳುತ್ತಿರಲು ; ಅಳ್ಕುಱೆ–ಭಯವಾಗುವಂತೆ, ಕಾದಿ–ಹೋರಾಡಿ, ಬಾಣ ಸಂಘಾತದ ಕೋಳೊಳ್–ಬಾಣಗಳ ಸಮೂಹದ ಕಿವಿತದಲ್ಲಿ, ಉಚ್ಚಳಿಪ – ಚಿಮ್ಮುವ, ನೆತ್ತರೊಳ್–ರಕ್ತದಲ್ಲಿ, ಇಚ್ಚೆಯೆ – ಇಚ್ಛಾಶಕ್ತಿಗಳೇ, ಕೆಟ್ಟೊಡೆ–ನಷ್ಟವಾದರೆ, ಆತಂ–ಆ ಭೀಮನು, ಅತ್ತ–ಅತ್ತ ಕಡೆ, ಈತನುಂ–ಈ ಅಶ್ವತ್ಥಾಮನು, ಇತ್ತ–ಇತ್ತ ಕಡೆ, ಜೋಲ್ದ ರಣಮಂ–ಸೊರಗಿ ಬಿದ್ದ ಯುದ್ಧವನ್ನು, ದೇವಕೋಟಿಗಳ್ – ದೇವತೆಗಳ ಸಮೂಹವು, ಪೊಗೞುತ್ತಿರೆ–ಹೊಗಳುತ್ತಿರಲು,

**ವಚನ :** ಒಂದೊರ್ವರಂ – ಒಬ್ಬೊಬ್ಬರನ್ನು ; ಕೆಯ್ಕೊಂಡು – ರಕ್ಷಣೆಗಾಗಿ ಸ್ವೀಕರಿಸಿ ; ಆಳುರ್ದು – ಸುಟ್ಟು ; ಪೆಣೆದ–ಹೆಣೆದು ಯುದ್ಧಮಾಡಿದ ; ಉಪೇತ – ಕೂಡಿದ ;

೭೮. ಬಡಿಗೊಂಡು – ಪೆಟ್ಟನ್ನು ತಿಂದು, ಮುಸಗಿ – ಕೆರಳಿ, ಭೈತ್ರಮಂ–ನಾವೆಯನ್ನು, ಒಡೆವ–ಮುರಿಯುವ, ಮಹಾಮಕರದಂತೆ – ಮಹಾ ತಿಮಿಂಗಿಲದಂತೆ, ಪವನ ಸುತಂ–ಭೀಮಸೇನನು, ಕರಿಘಟೆಗಳಂ – ಆನೆಗಳ ಸೈನ್ಯವನ್ನು, ಆರ್ದು–ಗರ್ಜಿಸಿ, ಉಡಿಯೆ ಬಡಿದು–ನಾಶವಾಗುವಂತೆ ಹೊಡೆದು, ಕ್ಷೇಮಘಾತಿಯುಂ–

ಕ್ಷೇಮಧೂರ್ತಿಯೆಂಬವನನ್ನು, ಆಗಡೆ–ಆಗಲೇ, ಆನೆವೆರಸು – ಆನೆ ಸಹಿತವಾಗಿ, ಕೊಂದಂ–ಕೊಂದನು.

ವಚನ : ಆಱಸುತ್ತುಂಬರ್ಪ–ಹುಡುಕುತ್ತ ಬರುವ; ಎಡೆಗೊಂಡು–ನಡುವೆ ಕೈಕೊಂಡು; ಮಾರ್ಕೊಂಡು–ಪ್ರತಿಭಟಿಸಿ.

೭೯. ನೀನಲ್ಲದೆ–ನೀನು ಅಲ್ಲದೆ, ಎನ್ನಶರಸಂಧಾನಮಂ–ನನ್ನ ಬಾಣದ ಸಂಧಾನವನ್ನು, ಆನಲ್ಕೆ – ತಾಳುವುದಕ್ಕೆ, ಈ ಪಡೆಯೊಳ್ – ಈ ಸೈನ್ಯದಲ್ಲಿ, ನೆಱೆವರ್–ಸಮರ್ಥರಾದವರು, ಇಲ್ಲ; ನೀಂ – ನೀನು, ಇನಿಸಂ–ಒಂದಿಷ್ಟನ್ನು, ಆಂಪುದು–ತಾಳುವುದು, ಎಂಬುದುಂ–ಎನ್ನುತ್ತಲೂ, ಆನಲ್ಲದೆ–ನಾನಲ್ಲದೆ, ನಿನ್ನಂ–ನಿನ್ನನ್ನು, ಆಂಪ–ಎದುರಿಸುವ, ಗಂಡರುಂ–ಶೂರರೂ, ಒಳರೇ-ಇರುವರೇ?

೮೦. ಎನೆ–ಎನ್ನಲು, ಬೆಳ್ಮಸೆಯಂಬಿನ–ಬೆಳ್ಳಗೆ ಮಸೆದಿರುವ ಬಾಣಗಳ, ಸರಿ-ಮಳೆ, ಮೊನೆಯಂಬಿನ ಸೋನೆ – ಮೊನಚಾದ ಬಾಣಗಳ ಜಡಿಮಳೆ, ಪಾರೆಯಂಬಿನ ತಂದಲ್–ಹಾರೆಯಾಕಾರದ ಬಾಣಗಳ ತುಂತುರು ಮಳೆ : ಘನ ಮಾದುದು–ಅತಿಶಯ ವಾಯಿತು ; ಪಾಂಡ್ಯಂ – ಪಾಂಡ್ಯನು, ಕಿತ್ತಂಬಿನ – ಕಿರಿಯ ಬಾಣಗಳ, ಬಡಪಮಿದು ಎನಿಸಿ–ನಿರಂತರವಾದ ಮಳೆ, ಇದು, ಎನ್ನಿಸಿ, ಅಂಬಂ–ಬಾಣಗಳನ್ನು, ಕಱೆದಂ–ಸುರಿದನು. ಬಡಪ<ಪ್ರಾ. ವಡಪ್ಪಂ–ಝೂಡಝೂಡೀಸು ವಡಪ್ಪಂ. ವಡಪ್ಪಂ ಲತಾಗಹನಂ ನಿರಂತರಂ ವೃಷ್ಟಿಶ್ಚ ಎಂದು ಹೇಮಚಂದ್ರ; ಕಿತ್ತಂಬು<ಕಿಱಿದು+ಅಂಬು.

೮೧. ಕಱೆದೊಡೆ – ಸುರಿಸಿದರೆ, ಅವುಅನಿತುಮಂ – ಅವುಗಳಷ್ಟನ್ನು, ಅಂತಂತೆ – ಹಾಗೆಹಾಗೆಯೇ, ಉಱದೆ – ಇರದೆ, ಎಚ್ಚು–ಹೊಡೆದು, ಕಡಂಗಿ–ಉತ್ಸಾಹಿಸಿ, ತಱಿದು–ಕತ್ತರಿಸಿ, ಶರವರ್ಷದಿಂ–ಬಾಣದ ಮಳೆಯಿಂದ, ಅಂದು, ಅಱಿಯೆ–ತಿಳಿಯುವಂತೆ, ಕಡಿಕೆಯ್ದು–ತುಂಡು ತುಂಡುಮಾಡಿ, ಬಿಡದೆ–ನಿಲ್ಲದೆ, ಗುರುತನೂಜನ ಕಣೆಗಳ್–ಅಶ್ವತ್ಥಾಮನ ಬಾಣಗಳು, ಎಡೆವಱಸಂ–ನಡುವೆ ಬರಿ ದಾಗುವುದನ್ನು ಎಂದರೆ ಬರವನ್ನು, ಬರಗಾಲವನ್ನು, ಮಾಡಿದವು – ಉಂಟು ಮಾಡಿದವು. ಎಂದರೆ ಪಾಂಡ್ಯನು ಸೃಷ್ಟಿಸಿದ ಬಾಣಗಳ ಮಳೆಗಾಲವನ್ನು ಅಶ್ವತ್ಥಾಮನ ಬಾಣಗಳು ನಡುವೆಯೆ ನಾಶಮಾಡಿ ಬರಗಾಲವಾಗಿಸಿದುವು ಎಂದು ಅಭಿಪ್ರಾಯ.

೮೨. ಎಡೆವಱದೊಳ್ – (ಹೀಗೆ ಉಂಟಾದ)ನಡುವಣ ಬರದಲ್ಲಿ, ಬಱ ಸಿಡಿಲ್ – ಮಳೆಯಿಲ್ಲದೆ ಬೀಳುವ ಸಿಡಿಲು, ಇಡುಮುಡುಕನೆ – ಛಿಳಿಛಿಟೀರೆನ್ನಲು, ಪೊಡೆದುದೆನಿಸಿ–ಹೊಡೆಯಿತು ಎನ್ನಿಸಿ, ಪಾಂಡ್ಯನ, ರಥದ, ಅಚ್ಚು–ಅಚ್ಚುಮರ, ಉಡಿದು–ಮುರಿದು, ಅೞ್ಗಿ–ನಾಶವಾಗಿ, ತಱ್ಗಿ–ತಗ್ಗಲು, ಕುಗ್ಗಲು, ಗುರು ತನೂಜನ–ಅಶ್ವತ್ಥಾಮನ, ಕಡುಗೂರಿದುವು–ಅತ್ಯಂತ ಹರಿತವಾದುವು, ಎನಿಪ–ಎನ್ನಿಸಿಕೊಳ್ಳುವ ಕಣೆಗಳ್–ಬಾಣಗಳು, ಕೊಂಡವು–ಹೊಡೆದುವು. 'ಎಡೆವಱ'

ಎಂದು ಎರಡು ಸಲ(ಲಗ, ಲ೨) ಪ್ರಯೋಗವಾಗಿದೆ: ಎಡೆ+ಬಱ—ನಡುವಣ ಬರ, ಬಱ=(ತ)ವಱಂ—ನೀರಿಲ್ಲದಿರುವುದು, ಒಣಗಲು, ಎಡೆವಱಿ ಎಂದು ಇದರ ಕ್ರಿಯಾ ರೂಪ; ನಡುವೆ ಬತ್ತು ಎಂದರ್ಥ, ಇಡೈವಱು ಎಂಬುದು ಸಮಾನ ತಮಿಳು ಶಬ್ದ; ಭಾರತ ವಿನುತ ಕುಲಜಲರಾಶಿಯೆಡೆವಱಿತುದು ವಿಚಿತ್ರದಲಿ ಎಂದು ಕುಮಾರ ವ್ಯಾಸನ ಪ್ರಯೋಗ (೮.೩—೪); ಇಲ್ಲಿರುವ ಎಡೆವರಿತುದು, ಎಡೆವೈತುದು, ಎಂಬ ಪಾಠಭೇದಗಳು, ಗಮನಾರ್ಹವಲ್ಲ. ಇಡುಮುಡುಕನೆ=ಇಡುಮುಡುಕು+ಅನೆ; ಇಡುಮುಡುಕು (ತ)ಇಡಿಮುಟಿಕ್ಕಂ—ಇಡಿಯೊಲಿ=ಸಿಡಿಲಿನಬ್ಬರ; ಇಡಿ=ಸಿಡಿಲು, ಮುಟಿಕ್ಕಂ=ಮೊಳಗು, ದೊಡ್ಡ ಶಬ್ದ, ಪೇರುಲಿ.

೪೩. ವಿರಥಂ—ರಥವಿಲ್ಲದ, ಕೋಪಸ್ಫುರಿತಾಧರಂ—ಕೋಪದಿಂದ ನಡಗುವ ತುಟಿಯುಳ್ಳ, ಪಾಂಡ್ಯಂ—ಪಾಂಡ್ಯನು, ಕೆಡೆಯೆ—ಬೀಳಲು, ಪೞಯಿಗೆಯುಂ—ಬಾವುಟವೂ, ಬಿಬ್ಬರಬಿರಿಯೆ—ಬಿರಿದು ಬಿರಿದು ಮುರಿಯಲು, ಗುರುತನೂಜನ—ಅಶ್ವತ್ಥಾಮನ, ಉರಮಂ—ಎದೆಯನ್ನು, ಬಿರಿಯೆಚ್ಚು—ಬಿರಿಯುವಂತೆ ಬಾಣ ಪ್ರಯೋಗಮಾಡಿ, ಗಜಪಾ—ಆನೆಯ, ಬೆಂಗೆವಂದಂ—ಬೆನ್ನಿಗೆ ಬಂದನು ಎಂದರೆ ಆನೆಯ ಮೇಲೆ ಹತ್ತಿದನು.

ವಚನ: ತನ್ನ ನಚ್ಚುವ—ತಾನು ನಂಬುವ, ಕೆಯ್ದುಗಳನಿ[ತುಂ]—ಅಷ್ಟು ಆಯುಧಗಳೂ; ಪೊಳೆಯೆ ಮಸೆದು—ಹೊಳೆಯುವಂತೆ; ಮತ್ತ ಹಸ್ತಿಯಂ—ಮದ್ದಾನೆಯನ್ನು; ಅಣೆದು—(ಅಂಕುಶದಿಂದ) ಮುಟ್ಟಿ, ತಿವಿದು; ತೋಱುಕೊಟ್ಟಾಗಳ್—ಥೂ ಬಿಟ್ಟಾಗ;

೪೪. ಈ ಮದದಂತಿಯ—ಈ ಸೊಕ್ಕಾನೆಯ, ಎಟ್ಟುರವುಂ—ಬರುವಿಕೆಯೂ, ಈತನ—ಇವನ (ಪಾಂಡ್ಯನ), ಶೌರ್ಯಮುಂ—ಪ್ರತಾಪವೂ, ಈ ಮಹೋಗ್ರ ಸಂಗ್ರಾಮದೊಳ್—ಈ ಮಹಾ ಭಯಂಕರ ಯುದ್ಧದಲ್ಲಿ, ಎನ್ನುಮಂ—ನನ್ನನ್ನೂ, ಚಳಿಯಿಸಲ್—ಶಕ್ತಿ ಹೀನನನ್ನಾಗಿ ಮಾಡಲು, ಬಗೆದಪ್ಪುದು—ಬಗೆಯುತ್ತಿದೆ; ಇಂ—ಇನ್ನು, ಪಾಂಡ್ಯನನ್ನಂ—ಪಾಂಡ್ಯನಂಥವನು, ಈ ಮಹಿಯೊಳ್—ಈ ಭೂಮಿಯಲ್ಲಿ, ಪೆಱಂ—ಇತರನು, ಕಲಿಯೆ—ಶೂರನೇ? ಸೆಟ್ಟನೆ—ನೇರಾಗಿ, ಇದಿರ್ಚುವ—ಎದುರಿಸುವ, ನಿಚ್ಚಟಿಕ್ಕೆಯೊಳ್—ನಿಶ್ಚಲತ್ವದಲ್ಲಿ ಎಂದರೆ ಸ್ಥಿರತೆಯಲ್ಲಿ, ಭೀಮನುಂ—ಭೀಮನು ಕೂಡ, ಇನ್ನಂ—ಇಂಥವನು, ಅಲ್ಲನ್—ಅಲ್ಲನು; ಎನೆ—ಎನ್ನಲು, ಪೋಲ್ವೆಗೆ—ಹೋಲಿಕೆಗೆ, ಗಂಡರ್ ಎಂಬರ್—ಶೂರರೆನ್ನುವವರು, ಆರ್—ಯಾರು?

ವಚನ: ಮುಟ್ಟೆವಂದು—ಸಮೀಪಿಸಿ, ಹತ್ತಿರಬಂದು,

೪೫. ವಿಳಯಾನಳ ವಿಳಸನ ವಿಸ್ಫುಲಿಂಗ ಸಂಘಾತದಿಂ—ಪ್ರಳಯಾಗ್ನಿಯ ಪ್ರಕಾಶವುಳ್ಳ ಕಿಡಿಗಳ ಸಮೂಹದಿಂದ, ತಗುಳ್ದು—ಹಿಂಬಾಲಿಸಲ್ಪಟ್ಟು, ಅಡರ್ವ—ಮೇಲೇರುವ, ಅನಿತೊಂದು—ಅಷ್ಟೊಂದು, ಅಳವಿಯ—ಶಕ್ತಿಯುಳ್ಳ, ತೋಮರದಿಂದೆ—ತೋಮರವೆಂಬ ಆಯುಧದಿಂದ, ಇಡೆ—ಬೀಸಿ ಹೊಡೆಯಲು, ಗುರುತನೂಜಂ—

ಅಶ್ವತ್ಥಾಮನು, ಎಡೆಯೊಳೆ–ನಡುವೆಯೇ, ಪೋಳಿವ ಅಸ್ತ್ರದೆ–ಹೊಳೆಯುವ ಬಾಣಗಳಿಂದ, ಕಡಿದಂ–ಕತ್ತರಿಸಿದನು.

**ವಚನ** : ಕೂರಿದುವುಂ–ಹರಿತವೂ, ನೇರಿದುವುಂ–ನೇರವಾಗಿರುವುವೂ, ಅಪ್ಪ–ಆದ ; ಬಾಣಾಳಿಯಿಂದೆ–ಬತ್ತಳಿಕೆಯಿಂದ ; ಉರ್ಚಿಕೊಂಡು–ಸೆಳೆದು, ಸಮಕಟ್ಟಿಕೊಂಡು–ವಿಧಾನವನ್ನು ತಿಳಿದು,

**೮೬.** ಕರಿಕರಮುಂ–ಆನೆಯ ಸೊಂಡಿಲೂ, ಮಾವಂತನ–ಮಾವಟಿಗನ, ಕರಮುಂ–ಕೈಯೂ, ತತ್ಪಾಂಡ್ಯಶಿರಮುಂ–ಆ ಪಾಂಡ್ಯರಾಜನ ತಲೆಯೂ, ಒಡನೆ ಉರುಳೆ–ಜೊತೆಯಾಗಿಯೇ ಉರುಳಲು, ಭಯಂಕರಮುಮಂ–ಭಯಂಕರತೆಯನ್ನು, ಉರ್ವಿಗೆ–ಲೋಕಕ್ಕೆ, ಅಗುರ್ವುಮಂ–ಅದ್ಭುತವನ್ನೂ, ಗುರುತನಯಂ–ಅಶ್ವತ್ಥಾಮನು, ಪಡೆಗಳ್ಗೆ–ಸೈನ್ಯಗಳಿಗೆ, ತೋಱಿದಂ–ತೋರಿಸಿದನು.

**ವಚನ**: ಅನ್ನೆಗಂ–ಅಷ್ಟರಲ್ಲಿ ; ಸಂಸಪ್ತಕ ನಿಕಾಯಮಂ–ಸಂಸಪ್ತಕರ ಸಮೂಹವನ್ನು ; ಸಾಯಕ–ಬಾಣ ; ಕಳವಳಮಂ–ಅಬ್ಬರವನ್ನು ; ಗಂಡಗುಣಕ್ಕೆ–ಪೌರುಷಕ್ಕೆ ; ಪ್ರಚಂಡವೇತಂಡಮಂ–ಅತಿ ತೀಕ್ಷ್ಣವಾದ ಆನೆಯನ್ನು ; ಅಣೆದು–ತಿವಿದು, ಬಿಟ್ಟಕ್ಕಿದಾಗಳ್–ತೋರಿಕೊಟ್ಟಾಗ ;

**೮೭.** ಕಾದಲ್–ಯುದ್ಧ ಮಾಡುವುದಕ್ಕೆ, ಇದಿರ್ಚಿ–ಎದುರಾಗಿ, ಬಂದ ಪಗೆ–ಬಂದ ಶತ್ರು, ಸಂಪಗೆಯಂತೆ–ಸಂಪಗೆಯ ಹೂವಿನಂತೆ, ಶಿಳೀಮುಖಕ್ಕೆ–ದುಂಬಿಗೆ, ಬಾಣಗಳಿಗೆ, ಗೆಂಟಾದುದು–ದೂರವಾಯಿತು ; ಇದೊಂದೆ–ಇದು ಒಂದೇ, ಸಿಂಧುರದೊಳ್–ಆನೆಯಲ್ಲಿ, ಇಂತು–ಹೀಗೆ, ಇವನೊರ್ವನೆ–ಇವನೊಬ್ಬನೇ, ತಳ್ತನಾದೊಡೆ–ಎದುರಿಸಿದವನಾದರೆ, ಏನಾದುದೋ–ಏನಾಯಿತೋ, ಬಲ್ಲೆನೆಂದು–ಬಲ್ಲೆನು ಎಂದು, ಮುಳಿದು–ಕೆರಳಿ, ಎಚ್ಚೊಡೆ–ಬಾಣಪ್ರಯೋಗಮಾಡಿದರೆ, ದಂಡಧಾರ ಗಜಂ–ದಂಡಧಾರನೆಂಬಾತನ ಆನೆಯು, ಆತನ ಒಡಲ್ವೆರಸು–ಅವನ ದೇಹ ಸಮೇತವಾಗಿ, ಅಂದು, ಸೌಳನೆ ಸೀಳ್ದು–ಸೌಳೆಂದು ಸೀಳಿ, ಪಚ್ಚವೋಲ್–ವಿಭಾಗಿಸಿದಂತೆ, ಪಾರ್ಥನಿಂ–ಅರ್ಜುನನಿಂದ, ಆದುದು–ಆಯಿತು.

**ವಚನ** : ಕೃತಾಂತನಿವಾಸಮಂ–ಯಮನ ಮನೆಯನ್ನು, ಎಯ್ದುವುದುಂ–ಸೇರುತ್ತಲು, ಎಂದರೆ ಸಾಯಲು,

**೮೮.** ಇನ್ನಿನಿಸನಿರ್ದೊಡೆ–ಇನ್ನು ಸ್ವಲ್ಪ ಕಾಲವಿದ್ದರೆ, ಆಜಿಯೊಳ್–ಯುದ್ಧದಲ್ಲಿ, ಎನ್ನ ತನೂಜನುಮಂ–ನನ್ನ ಮಗನಾದ ಕರ್ಣನನ್ನೂ, ನರಂ–ಅರ್ಜುನನು, ಅೞಿಪಂ–ನಾಶಮಾಡುತ್ತಾನೆ, ಅದಂ ಇಂ ಆಂ ನೋಡಲಾಱೆಂ–ಅದನ್ನು ಇನ್ನು ನಾನು ನೋಡಲಾರೆನು, ಎಂಬವೊಲ್–ಎನ್ನುವಂತೆ, ದಿನಪಂ–ಸೂರ್ಯ, ಅನ್ನೆಗಂ–ಅಷ್ಟರಲ್ಲಿ, ಅಸ್ತಾಚಳಸ್ಥನಾದಂ – ಮುಳುಗುವ ಬೆಟ್ಟದ ಮೇಲೆ ನಿಂತವನಾದನು, ಎಂದರೆ ಮುಳುಗಲು ಸಿದ್ಧನಾದನು.

**ವಚನ**: ಪತಂಗಮಂಡಲಂ–ಸೂರ್ಯಬಿಂಬವು, ಅಪರಗಿರಿ ತಟಮಂ–ಪಶ್ಚಿಮ

ಪರ್ವತದ ಪ್ರದೇಶವನ್ನು, ಹಯೋಪಾಯ ಕುಶಲರಪ್ಪ–ಅಶ್ವವಿದ್ಯಾ ನಿಪುಣರಾದ; ಅಶ್ವಹೃದಯದೊಳಂ–ಅಶ್ವ ಹೃದಯವೆಂಬ ವಿದ್ಯೆಯಲ್ಲೂ; ರಥಕಲ್ಪದೊಳಂ–ರಥ ಚೋದನ ವಿದ್ಯೆಯಲ್ಲೂ; ಪಣ್ಣಿಗೆಯ–ಅಲಂಕಾರದ; ಪಿಡಿಯಂ–ಹಗ್ಗಾಸೆಯನ್ನು; ಬಿಡಿದಪ್ಪಿದ–ವಾರಿತಪ್ಪಿದ; ಮಾನಸರ್ವೆರಸು–ಮನುಷ್ಯರೊಡನೆ;

೮೯. ಶಲ್ಯನನ್ನು ಸಾರಥಿಯಾಗಿ ಮಾಡುವ ಸಂದರ್ಭ: ಅಂತೆ–ಹಾಗೆಯೇ, ಕುಳ್ಳಿರಿಸಲ್ವೇಡ–ಕುಳಿತುಕೊಳ್ಳದೆ ಇರುವಿರಾದರೆ, ಇಂ–ಇನ್ನು, ನಿಮಗೆ, ಆಣೆ–ನನ್ನಾಣೆ, ಎಂದು ಹೇಳಿ, ಇರವೇಳ್ಬು–ಕುಳ್ಳಿರುವಂತೆ ಹೇಳಿ, ಇಳಾಕಾಂತನುಂ–ರಾಜ ದುರ್ಯೋಧನನೂ, ತೊಡೆಸೋಂಕಿ–ತೊಡೆಮುಟ್ಟಿ ಎಂದರೆ ಅಷ್ಟು ಸಮೀಪವಾಗಿ, ಕುಳ್ಳಿರೆ–ಕುಳ್ಳಿರಲು, ಬಾಚಿತ್ತಿಯುಳ್ಳೊಡೆ–ಕಾರ್ಯವಿದ್ದರೆ, ನೀನೆ–ನೀನೇ, ಬರ್ಪಂತುಟು–ಬರುವ ಹಾಗೆ, ಆದುದೆ–ಆಯಿತೇ, ಪೇಳಿ–ಹೇಳು; ನೀಂ–ನೀನು, ಕಿಮ್ಮನೆ–ಸುಮ್ಮನೆ, ಬಿಟಿಯಟ್ಟಲಾಗದೆ–ದೂತನನ್ನು ಕಳುಹಿಸಬಾರದಾಗಿತ್ತೆ? ಇಂ–ಇನ್ನು, ಎಂದರೆ ನೀನೇ ಬಂದ ಮೇಲೆ, ಎಂತುಂ–ಹೇಗೂ; ಏಂ–ಏನು? ಇಳಾಧಿಪಾ–ರಾಜನೇ, ಏಂ–ಮನೆವಾಚಿತ್ತಿಯುಂ–ಏನು ಮನೆವಾರ್ತೆಯನ್ನು. ಏನು ಮನೆ ಕಾರ್ಯವನ್ನು, ಬೆಸಸಲ್ಕೆ–ಹೇಳುವುದಕ್ಕೆ, ಬಂದೆ–ಬಂದಿರುವೆ?

೯೦. ಬೆಸನು–ಹೇಳು, ಎನೆಯುಂ–ಎಂದರೂ. ಆಂ–ನಾನು, ನುಡಿಯಲ್–ಹೇಳಲು, ಶಂಕಿಸಿದಪೆಂ–ಹೆದರುತ್ತಿರುವೆನು, ಎಂದೊಡೆ–ಎಂದರೆ, ಏಕೆ ಶಂಕಿಸುವಯ್–ಏಕೆ ಹೆದರುತ್ತೀಯ? ನೀಂ–ನೀನು, ಬೆಸವೇಟ್–ಕಾರ್ಯವನ್ನು ತಿಳಿಸು, ಎನೆ–ಎನ್ನಲು. ಮಾವ–ಮಾವನೇ, ನಿಮ್ಮ ದಯೆಯಿಂದಂ–ಕರುಣೆಯಿಂದ, ಜಯವಧು–ಜಯಶ್ರೀ, ಎಮ್ಮಂ–ನಮ್ಮನ್ನು, ಕೂರ್ತು–ಪ್ರೀತಿಸಿ, ಒಸೆದುಂ–ರಾಗಿಸಿ, ಇರ್ಕುಂ–ಇರುವಳು.

೯೧. ರಥಮುಂ–(ಅರ್ಜುನನ) ರಥವನ್ನು, ಹರಿ–ಕೃಷ್ಣ, ಪುಸಿಯೆನೆ–ಸುಳ್ಳು ಎನ್ನಲು, ಚೋದಿಸುವಂತೆವೊಲ್–ನಡೆಸುವವನಂತೆ, ಇರ್ದು–ಇದ್ದು, ಅದೆಂತು–ಅದು ಹೇಗೆ, ನರನಂ–ಅರ್ಜುನನನ್ನು, ಗೆಲಿಪಂ–ಗೆಲ್ಲುವಂತೆ ಮಾಡುವನೋ, ಅಂತೆ–ಹಾಗೆ, ವಿಸಸನದೊಳ್–ಯುದ್ಧರಂಗದಲ್ಲಿ, ನೀಮುಂ–ನೀವು ಕೂಡ, ಕರ್ಣಂಗೆ–ಕರ್ಣನಿಗೆ, ಪೆಸರಂ ಮಾಡಿ–ಹೆಸರನ್ನು ಎಂದರೆ ಕೀರ್ತಿಯನ್ನು ಉಂಟುಮಾಡಿ, ಗೆಲ್ಲಂಗೊಳ್ಳಿಂ–ವಿಜಯವನ್ನು ಸಂಪಾದಿಸಿರಿ.

ವಚನ: ಉಮ್ಮಚ್ಚದೊಳ್–ಕೋಪದಲ್ಲಿ; ಉಮ್ಮನೆ–ಬಿಸಿಬಿಸಿಯಾಗಿ; ಬೆಮರ್ತು–ಬೆವರಿ; ಕಿನಿಸಿ–ಕೆರಳಿ, ಕಿಂಕಿರಿವೋಗಿ–ಕಿರಿಕಿರಿಯಾಗಿ ಎಂದರೆ ವ್ಯಾಕುಲಿತನಾಗಿ; (ಸಂ) ಊಷ್ಮ > ಉಮ್ಮ: ಅನೆ ಸೇರಿ ಉಮ್ಮನೆ, ಅವ್ಯಯ.

೯೨. ಕಲಿಯನೆ ಪಂದೆಮಾಳ್ಪ–ಶೂರನನ್ನು ಹೇಡಿಯಾಗಿ ಮಾಡುವ; ಕಡುಮುದೆಯನೊಳ್ಗಲಿಮಾಳ್ಪ – ಅತಿ ಹೇಡಿಯನ್ನು ಒಳ್ಳೆಯ ಶೂರನನ್ನಾಗಿ ಮಾಡುವ; ತಕ್ಕನಂ ಪೊಲೆಯನೆ ಮಾಳ್ಪ–ಯೋಗ್ಯನನ್ನು ಹೊಲೆಯನನ್ನಾಗಿ

ಮಾಡುವ ; ಪುಂಂ ಪೊಲಿಯುಸಂ ನೆಱೆ ತಕ್ಕನೆ ಮಾಳ್ಪ–ಹೊಲಸು ಹೊಲೆಯ ನಾದವನನ್ನು ಪೂರ್ಣ ಯೋಗ್ಯನನ್ನಾಗಿ ಮಾಡುವ, ತಮ್ಮೊಳ್–ತಮ್ಮಲ್ಲಿ, ಅಗ್ಗಳಿಸಿ–ಅಧಿಕವಾಗಿ, ಪೊದಳ್ದು–ವ್ಯಾಪಿಸಿ, ಪರ್ವಿದ–ಹಬ್ಬಿದ, ಅವಿವೇಕತೆಯಿಂ–ಅವಿವೇಕದಿಂದೆ, ನೃಪಚಿತ್ತವೃತ್ತಿ–ರಾಜರ ಮನೋವ್ಯಾಪಾರಗಳು, ಸಂಚಲಂ–ಅಸ್ಥಿರವಾದುದು ; ಅದಱಿಂದೆ–ಆದ್ದರಿಂದ, ಇಳಾದಿನಾಥರಂ–ರಾಜರನ್ನು, ಓಲಗಿಸಿ–ಸೇವೆಮಾಡಿ, ಬಾಳ್ವುದೆ–ಬದುಕುವುದೇ, ಕಷ್ಟಂ–ಕಷ್ಟ.

೯೩. ಅನುಪಮ ವಿಕ್ರಮಕ್ರಮಂ– ಅಸದೃಶವಾದ ಪರಾಕ್ರಮದ ರೀತಿ, ಉದಾರ ಗುಣಂ–ವಿಶಾಲವಾದ ತ್ಯಾಗದ ಗುಣ, ಋತವಾಕ್ಯಂ–ನೇರಾದ ಭಾಷೆ ಎಂದರೆ ಸತ್ಯ, ಎಂಬ ಪೆಂಪು–ಎನ್ನುವ ಹಿರಿಮೆ, ಮೂಱೆನಾಲ್ಕೆಗುಣಂ–ಇವೇ ಮೂರು ಅಥವಾ ನಾಲ್ಕು ಗುಣಗಳು ; ಅತ್ತ–ಇನ್ನೊಂದು ಕಡೆ, ರಾಜಬೀಜ ಸಂಜನಿತಗುಣಂ–ಅರಸು ಕುಲದಲ್ಲಿ ಹುಟ್ಟಿದ್ದರ ಗುಣವು, ಮದಂ–ಮದವು, ಗರ್ವವು ; ಮದಮನಾಳ್ದ–ಮದವನ್ನು ಹೊಂದಿರುವ, ಅವಿವೇಕತೆಯಿಂದಂ–ವಿವೇಕ ಶೂನ್ಯತೆಯಿಂದ, ತೊೞ್ತಿನ–ತೊತ್ತಿನ, ಮೊಲೆವಾಲನುಂಡ–ಮೊಲೆಹಾಲನ್ನು ಕುಡಿದ, ಗುಣಂ ಅಲ್ತೆ–ಗುಣವಲ್ಲವೇ ? ಇವನ್–ಇವುಗಳನ್ನು, ನರೇಂದ್ರರೊಳ್–ರಾಜರಲ್ಲಿ, ಆರ್ ಕಿಡಿಪರ್–ಯಾರು ಹೋಗಲಾಡಿಸುವವರು.

೯೪. ಪಿಂದೆ–ಹಿಂದುಗಡೆ, ಕದಂಗಿ–ಉತ್ಸಾಹಿಸಿ, ತೇರಂ ಎಸಗು–ರಥವನ್ನು ಹಾಯಿಸು, ಎಂಬವಂ–ಎನ್ನುವವನು, ಅಂಬಿಗಂ–ದೋಣಿ ನಡೆಸುವವನು, ಬೆಸ್ತರವನು; ಆಜಿರಂಗದೊಳ್–ಯುದ್ಧರಂಗದಲ್ಲಿ, ಮುಂದೆ–ಸಮ್ಮುಖದಲ್ಲಿ, ಸಮಾನನಾಗಿ–ಸಮಾನನಾಗಿ ಎಂದರೆ ನನ್ನಂತೆ ಸಾರಥಿಯಾಗಿ, ಬೆಸದೆ–ಕೆಲಸದಲ್ಲಿ (ಸಾರಥಿಯ ಕೆಲಸದಲ್ಲಿ) ಇರ್ಪವನುಂ – ಇರುವವನೂ, ತುಱುಕಾಱನಾಗೆ – ದನಗಾಹಿಯಾಗಲು ಎಂದರೆ ಗೋಪಾಲ ಕೃಷ್ಣನಾಗಿರಲು, ಮತ್ಸ್ಯಂದನ ಚೋದನ ಕ್ರಮಂ–ರಥವನ್ನು ಹಾಯಿಸುವ ನನ್ನ ರೀತಿ, ಅದುಂ–ಅದೂ, ಪೊಲೆಯಂಗೆ–ಹೊಲೆಯನಿಗೆ, ಅಮರ್ದು–ಸೇರಿ, ಒಪ್ಪಿ, ಇರ್ಕುಂ–ಇರುತ್ತದೆ ; ಅಂತುಟಂ–ಅಷ್ಟನ್ನು, ನೀಂ–ನೀನು, ದಯೆಗೆಯ್ದು ಪೇೞ್ದೆ–ದಯೆತೋರಿಸಿ ಹೇಳಿದೆ ; ಫಣಿರಾಜಕೇತನಾ–ದುರ್ಯೋಧನನೇ, ಇದಂ–ಇಂಥದನ್ನು ಎಂದರೆ ಇಂತಹ ಸೌಭಾಗ್ಯವನ್ನು, ಆರ್ ಪಡೆವರ್–ಯಾರು ಪಡೆಯುತ್ತಾರೆ ?

೯೫. ಎನಿತು–ಎಷ್ಟು, ಒಲ್ಲದಿರ್ದೊಡಂ–ಒಪ್ಪದಿದ್ದರೂ, ಸಜ್ಜನರುಂ–ಸತ್ಪುರುಷರೂ, ಪತಿಹಿತರುಂ–ಸ್ವಾಮಿಗೆ ಹಿತವರಾದವರೂ, ಅಱಿಯವೇೞ್ಕುಂ–ತಿಳಿಯಬೇಕು ; ನೀಂ–ನೀನು, ಇಂ–ಇನ್ನು, ಎನಿತುಂ–ಎಷ್ಟೂ, ಕೂರದೊಡಂ–ಪ್ರೀತಿಸದಿದ್ದರೂ, ನಿನ್ನ ನುಡಿಯಂ–ನಿನ್ನ ಮಾತನ್ನು, ಆಂ–ನಾನು, ಆಜಿರಂಗದೊಳ್–ಯುದ್ಧರಂಗದಲ್ಲಿ, ಮೀಱುವೆನೇ–ಮೀರುತ್ತೇನೆಯೆ ?

೯೬. ಮಾಮ–ಮಾವನೇ, ನೀಂ–ನೀವು, ಇನಿತಂ–ಇಷ್ಟನ್ನು, ಕೆಮ್ಮನೆ–

ಸುಮ್ಮಸೆ, ಎನಗೆ – ನನಗೆ, ಮನಂಸೊಂದು – ಮನಸ್ಸು ನೊಂದು, ಬೆಸಸಿದಿರ್– ಹೇಳಿದಿರಿ; ಬಿನ್ನಪವಂ – (ನನ್ನ) ಬಿನ್ನಹವನ್ನು, ನೀಂ – ನೀವು, ಅವಧಾರಿಸಿಂ– ಕೇಳಿರಿ : ಎಂತೆನೆ–ಹೇಗೆನ್ನಲು, ಅಂಗಮಹೀಶಂ–ಅಂಗರಾಜ ಕರ್ಣನು, ಸಾಮಾನ್ಯದ ಮನುಜನಲ್ಲಂ–ಸಾಧಾರಣ ಮನುಷ್ಯನಲ್ಲ.

೯೭. ಕುಲಹೀನನೆ – ಹೀನಕುಲದವನೇ, ಅಪ್ಪೊಡೆ – ಆಗಿದ್ದರೆ, ಕೇವಲ ಬೋಧಂ – ಕೇವಲ ಜ್ಞಾನವುಳ್ಳ, ಎಂದರೆ ಸರ್ವಜ್ಞನಾದ, ಪರಶುರಾಮಂ– ಪರಶುರಾಮನು, ನಿರ್ಮಲಿನ ಕುಲಂಗಲ್ಲದೆ – ಪರಿಶುದ್ಧವಾದ ಕುಲದವನಿಗಲ್ಲದೆ, ಪಿಡಿಯಲ್–ಹಿಡಿಯಲು, ಅಲ್ಲದಂತಪ್ಪ–ಅಲ್ಲದಂತಾಗಿರುವ, ದಿವ್ಯಬಾಣಾವಳಿಯುಂ– ದಿವ್ಯವಾದ ಬಾಣಗಳ ಸಮೂಹವನ್ನು, ಏನ್ ಈಗುವೇ–ಏನು ಕೊಡುವನೆ?

೯೮. ಮಣಿಕುಂಡಲಮುಂ – ರತ್ನಕುಂಡಲವೂ, ಕವಚಂ – ಕವಚವೂ, ಮಣಿಯದ ಚಾರಿತ್ರಂ – ಬಾಗದ ಎಂದರೆ ಕುಗ್ಗದ ನಡತೆಯೂ, ಉಗ್ರತೇಜಮುಂ– ಭಯಂಕರ ತೇಜಸ್ಸೂ, ಈ ಒಳ್ಗುಣಮುಂ–ಈ ಒಳ್ಳೆಯ ಗುಣವೂ, ಕಲಿತನಮುಂ– ಶೌರ್ಯವೂ, ಪ್ರಣತಾರೀ – ವಿಧೇಯರಾದ ಶತ್ರುಗಳನ್ನುಳ್ಳ ಶಲ್ಯನೇ, ಸೂತಸುತ ನೊಳ್–ಸೂತಪುತ್ರ ಕರ್ಣನಲ್ಲಿ, ಇವು–ಈ ಗುಣಗಳಿಲ್ಲ, ಏಂ ಒಡವುಟ್ಟುಗುಮೇ– ಜೊತೆಯಲ್ಲಿಯೇ ಹುಟ್ಟುವುವೇ ಏನು?

೯೯. ಕಲಿತನದ–ಪರಾಕ್ರಮದ, ನೆಗಟ್ದ – ಪ್ರಸಿದ್ಧವಾದ, ಕಸವರಗಲಿ ತನದ–ದಾನಶೂರತೆಯ, ಪೊದಳ್ದ–ವ್ಯಾಪಿಸಿದ, ಪರಮಕೋಟಿಗೆ – ಪರಾಕಾಷ್ಠತೆಗೆ, ಸಲೆ–ಸಲ್ಲಲು, ಕರ್ಣನಲ್ಲದೆ, ಪೆಱರ್–ಇತರರು, ಆರ್–ಯಾರು? ಎನಿಸುವ– ಎನ್ನಿಸುವ, ಕಲಿತನಮುಂ – ಶೌರ್ಯವನ್ನು, ಹರಿಗೆ – ಇಂದ್ರನಿಗೆ, ಕವಚಮಿತ್ತುದೆ– ಕವಚವನ್ನು ಕೊಟ್ಟದ್ದೇ, ಪೆಟ್ಗುಂ–ಹೇಳುತ್ತದೆ. ಕಸವರ>(ಸಂ)ಕಾರ್ತಸ್ವರ= ಚಿನ್ನ; ಅದರಲ್ಲಿ ಕಲಿತನ ಕಸವರಗಲಿತನ.

**ವಚನ :** ಹೃಚ್ಛಲ್ಯಮಿಲ್ಲಮುಂ – ಹೃದಯಕ್ಕೆ ನಾಟುವ ಮುಳ್ಳುಗಳಿಲ್ಲ ಎಂದರೆ ಹೃದಯದ ನೋವನ್ನೆಲ್ಲ; ಕಟಿಲೆ – ಸಡಿಲವಾಗುವಂತೆ, ನುಡಿದೊಡೆ– ಹೇಳಿದರೆ

೧೦೦. ನೃಪ–ರಾಜನೇ, ನೀಂ–ನೀನು, ಅಱಿಯದೆಯುಂ–ತಿಳಿಯದೆಯೂ, ವಿಚಾರಿಸದೆಯುಂ – ವಿಚಾರಮಾಡದೆಯೂ, ನೆಗಟ್ಟಿನ್ನಂ – ಕಾರ್ಯಮಾಡುವಂಥವನು, ಅಲ್ಲೆ, (ಅಲ್ಲಯ್)–ಅಲ್ಲ; ಆನಱಿವೆಂ - ನಾನು ತಿಳಿಯುವೆನು, ಅದಂತೆ – ಅದು ಹಾಗೆಯೇ ಎಂದರೆ ಕರ್ಣನ ವಿಷಯವಾಗಿ ನೀನು ಹೇಳಿದ್ದೆಲ್ಲ ವಾಸ್ತವವೇ; ಕರ್ಣನ, ಎಣೆಗಂತ್ರೊಣೆಗಂ – ಸರಿಸಮಾನಕ್ಕೆ, ನೃಪರ್ – ರಾಜರು, ಆರುಂ–ಯಾರೂ ಇಲ್ಲ; ತೇರಂ–ರಥವನ್ನು, ಒಸೆದು–ರಾಗಿಸಿ, ಆಂ–ನಾನು, ಎಸಗುತ್ತಿರೆ–ಚೋದಿ ಸುತ್ತಿರಲು, ರಿಪುಸೇನೆ–ಶತ್ರುಸೈನ್ಯ, ಬೆಳ್ಕುಜಿ–ಭಯವನ್ನು ಹೊಂದಲು, ನಾಳೆ– ನಾಳೆಯದಿನ, ಕರ್ಣನಂ–ಕರ್ಣನನ್ನು, ಗೆಲಲ್–ಗೆಲ್ಲಲು, ರಣರಂಗ ಭೂಮಿಯೊಳ್–

ಯುದ್ಧರಂಗದ ಕ್ಷೇತ್ರದಲ್ಲಿ, ಫಲ್ಗುಣನುಮಚ್ಯುತನುಂ-ಅರ್ಜುನನೂ, ಕೃಷ್ಣನೂ. ನೆಱೆವರೆ ಸಮರ್ಥರಾಗುವರೆ ಇಲ್ಲ.

೧೦೧. ಒಂದೆ ಗಡ-ಒಂದೇ ಅಲ್ಲವೆ, ಎಂದರೆ ಒಂದೇ ಒಂದು ವಿಷಯವಿದೆ, ನರಂ-ಅರ್ಜುನನ, ಹರಿಯ ಪೇೞ್ದ-ಕೃಷ್ಣನು ಹೇಳಿದ. ಒಂದಂದದೆ-ಒಂದು ರೀತಿಯಿಂದ, ಎಸಗುವಂತೆ-ಮಾಡುವ ಹಾಗೆ, ಕರ್ಣನುಂ-ಕರ್ಣನು ಕೂಡ, ಎನ್ನಿಂದ-ನಾನು ಹೇಳಿದ, ಒಂದು ಓಜೆಯೊಳ್-ಒಂದು ಕ್ರಮದಲ್ಲಿ, ಎಸಗದೊಡೆ-ಮಾಡದಿದ್ದರೆ, ಸ್ಯಂದನದಿಂದೆ - ರಥದಿಂದ, ಇೞಿದುಪೋಪೆಂ - ಇಳಿದು ಹೋಗುತ್ತೇನೆ. ತೇರಂ-ರಥವನ್ನು, ಎಸಗೆಂ-ಹಾಯಿಸೆನು, ನಡೆಯಿಸೆನು.

೧೦೨. ಎಂಬುದುಂ-(ಎಂದು ಶಲ್ಯನು) ಹೇಳುತ್ತಲೂ, ಭೂಭುಜಂ-ರಾಜ ದುರ್ಯೋಧನ, ಅಂಗಮಹೀಪತಿಯಂ-ಅಂಗರಾಜ ಕರ್ಣನನ್ನು, ಬರಿಸಿ-ಬರಮಾಡಿ, ಮಹಾಜಿಯುಲ್ಲಿ-ಮಹಾಯುದ್ಧದಲ್ಲಿ, ಮಾವಂ-ಮಾವನಾದ ಶಲ್ಯ, ತಾನೇನೆಂಬಂ-ತಾನು ಏನು ಹೇಳುವನೊ, ಅದಂ-ಅದನ್ನು, ಅಂತೆ-ಹಾಗೆಯೇ, ಮೀಱದೆ-ದಾಟದೆ, ಉಲ್ಲಂಘಿಸದೆ, ನೀನ್ - ನೀನು, ಒಡಂಬಡು - ಒಪ್ಪು, ಎಂದು - ಎಂಬುದಾಗಿ, ಪ್ರಾರ್ಥಿಸಿದಂ-ಬೇಡಿದನು.

ಕರ್ಣನಿಗೆ ಸಾರಥಿಯಾಗುವಂತೆ ಶಲ್ಯನನ್ನು ದುರ್ಯೋಧನ ಒಡಂಬಡಿಸಿದ ಈ ಸನ್ನಿವೇಶ ನಾಟಕದ ದೃಶ್ಯವೊಂದೆಂಬತೆ ರಮಣೀಯವಾಗಿದೆ. ಶಲ್ಯನೊಡನೆ ಮಾತಾಡುವಾಗ ದುರ್ಯೋಧನ ತೋರಿಸುವ ನಯವಿನಯಗಳೂ, ಹೊಗಳಿಕೆಯಿಂದ ಕಾರ್ಯಸಾಧನೆಯಾಗುವುದೆಂಬ ಅವನ ಲೋಕಜ್ಞಾನವೂ ಇಲ್ಲಿ ರೂಪಗೊಂಡಿವೆ. ಶಲ್ಯನ ಮಾತಿನಲ್ಲಿ ಅಸಹನೆಯೂ, ಕೋಪವೂ, ವಿಡಂಬನೆಯೂ, ತಿರಸ್ಕಾರವೂ ತನ್ನ ಕುಲಐಶ್ವರ್ಯ ಜ್ಞಾನಗಳಲ್ಲಿ ಅಭಿಮಾನ ಗರ್ವಗಳೂ ಅಭಿವ್ಯಕ್ತವಾಗಿವೆ. ದುರ್ಯೋಧನನಿಗೆ ಕರ್ಣನಲ್ಲಿದ್ದ ಪ್ರೀತಿ ಗೌರವ ಆದರ ಸ್ನೇಹ ಭಾವಗಳು, 'ಸಾಮಾನ್ಯದ ಮನುಜನಲ್ಲಂಗಮಹೀಶಂ' ಎಂದು ಮುಂತಾಗಿ ಶಲ್ಯನೊಡನೆ ಹೇಳುವಾಗ ಹೊರಸೂಸಿವೆ. ತನಗಿಷ್ಟವಿಲ್ಲದಿದ್ದರೂ ಶಲ್ಯನು ಸಾರಥಿತನಕ್ಕೆ ಒಪ್ಪಿಕೊಂಡದ್ದು ದುರ್ಯೋಧನನ ಮಾತನ್ನು ಮೀರಬಾರದೆಂಬ ದೃಷ್ಟಿಯಿಂದ. ದುರ್ಯೋಧನ ಅದನ್ನು ನಿಜವೆಂದು ಭಾವಿಸುತ್ತಾನೆ. ವ್ಯಾಸಭಾರತದಲ್ಲಿ ದುರ್ಯೋಧನ ಶಲ್ಯನನ್ನು ಒಪ್ಪಿಸುವ ಸಲುವಾಗಿ ತ್ರಿಪುರೋತ್ಪತ್ತಿಯ ಕಥೆಯನ್ನು, ದೇವತೆಗಳು ಶಿವನಿಗೆ ಮೊರೆಯಿಡುವುದನ್ನು, ತ್ರಿಪುರ ಸಂಹಾರವನ್ನು, ಇನ್ನು ಅನೇಕ ಕಥೆಗಳನ್ನು ಹೇಳುತ್ತಾನೆ. ಇವೆಲ್ಲ ಪಂಪನಿಂದ ಸ್ವೀಕೃತವಾಗಿಲ್ಲ. ಅವು ಭಾರತದ ಮುಖ್ಯ ಕಥೆಗೆ ಹೊರಗಾದುವು, ಅವನ್ನು ಅವನು ಬಿಟ್ಟಿರುವುದು ಉಚಿತವಾಗಿಯೇ ಇದೆ. ದುರ್ಯೋಧನ ಶಲ್ಯರ ವ್ಯಕ್ತಿ ಚಿತ್ರಗಳು ಇಲ್ಲಿ ಪರಿಸ್ಫುಟವಾಗಿವೆ. ಸಂಭಾಷಣೆಯು ಎಷ್ಟು ಬೇಕೊ ಅಷ್ಟೆ ಇದ್ದು ಪರಿಣಾಮಕಾರಿಯಾಗಿದೆ. ಶಲ್ಯನ ಬಾಯಲ್ಲಿ ಬರುವ ರಾಜಗುಣಾವಗಳ ನಿರೂಪಣೆ ಪಂಪನಿಂದ ನಿಯೋಜಿತ

ವಾದುದು. ಈ ಪದ್ಯಗಳನ್ನು ಅವನು ಅರಿಕೇಸರಿಯ ಮುಂದೆ ಓದುವಾಗ ಆ ರಾಜ ನಿಜವಾಗಿಯೂ ಚಕಿತನಾಗಿರಬೇಕು.

**ವಚನ**: ನಿವಾಸಂಗಳ್ಗೆ-ಮನೆಗಳಿಗೆ, ಪಡೆಮಾತಂ-ಸುದ್ದಿಯನ್ನು; ಬಟ್ಟೆಯನಟ್ಟಿ-ದೂತನನ್ನು ಕಳುಹಿಸಿ.

**೧೦೩.** ರಣರಂಗದೊಳ್-ಯುದ್ಧಭೂಮಿಯಲ್ಲಿ ಸೂತಸುತನಂ-ಕರ್ಣನನ್ನು, ಉಂತೆ-ಸುಮ್ಮನೆ ಎಂದರೆ ಸುಲಭವಾಗಿ, ಗೆಲಲ್-ಗೆಲ್ಲಲು, ಅರಿದು – ಅಸಾಧ್ಯ; ಎಂಬುದು – ಎನ್ನುವುದನ್ನು, ಒಂದು ಪಂಬಲೆ – ಒಂದು ಹಂಬಲವೇ, ಪಿರಿದು – ಹಿರಿದಾಗಿದೆ; ಆತಂಗೆ-ಅವನಿಗೆ, ನಾಳೆ-ನಾಳೆಯ ದಿನ, ಶಲ್ಯಂ-ಶಲ್ಯನು, ಒಸೆದು-ಸಂತೋಷಿಸಿ, ತೇರೆಸಪಂಗಡಂ – ತೇರನ್ನು ನಡೆಸುತ್ತಾನೆ ಅಲ್ಲವೆ? ಈ ಕಲಹಂ-ಈ ಯುದ್ಧ, ಇದೆಂತು ದಲ್-ಇದು ಹೇಗೋ ದಿಟವಾಗಿಯೂ, ಬಿದಿರ ಗಂಟುಗಳಂ-ಬಿದಿರಿನ ಗೆಣ್ಣುಗಳನ್ನು, ಕಳೆದಂತೆ-ತೆಗೆದುಹಾಕುವ ಹಾಗೆ, ಮನ್ಮನಃಸ್ಖಲನೆಯಂ-ನನ್ನ ಮನಸ್ಸು ಸಡಿಲವಾಗುವುದನ್ನು, ಉಂಟುಮಾಡಿದಪುದು-ಉಂಟುಮಾಡುತ್ತಿದೆ; ಅಚ್ಯುತಾ-ಕೃಷ್ಣನೇ, ಇಲ್ಲಿಗೆ-ಈ ಸಮಯಕ್ಕೆ, ಕಜ್ಜಂ-ಮಾಡಬೇಕಾದ ಕಾರ್ಯ; ಆವುದು-ಯಾವುದು?

**ವಚನ**: ರಥಕಲ್ಪಮೆಂಬುದು-ರಥವಿದ್ಯೆಯೆಂಬುದು. ಒಡವುಟ್ಟಿದುದು-ಒಡನೆ ಹುಟ್ಟಿದ್ದು; ಮೂಗುದುಱಿಸಲಾಗದ-ಮೂಗನ್ನು ಕೆರೆಯಲಾಗದ; ಕಷ್ಟಂ-ದ್ವೇಷ, ಮಾತ್ಸರ್ಯ (?); ಒಡಂಬಡು-ಸಮ್ಮತವು, ಒಪ್ಪಿಗೆಯು;

**೧೦೪.** ಗಂಡರ್-ಶೂರರು, ಕರ್ಣಂಗಂಡು-ಕರ್ಣನನ್ನು ನೋಡಿ, ನುಡಿವ-ಮಾತಾಡುವ, ಪಸುಗೆಯಂ – ವಿವೇಕವನ್ನು, ಕಲ್ತರ್‌ಅಲ್ತೆ – ಕಲಿತರಲ್ಲವೆ? ಆ ಗಂಡವಾತುಂ – ಆ ಪೌರುಷದ ಮಾತೂ, ಮುಂ – ಮೊದಲು, ಕರ್ಣಂ-ಕರ್ಣನು, ಪುಟ್ಟೆ-ಹುಟ್ಟಲು, ಪುಟ್ಟಿತ್ತು-ಹುಟ್ಟಿತು; ಅಳವು ಅಮರ್ದು-ಪ್ರತಾಪ ಸಹಿತವಾಗಿ, ಪೂಣ್ದೀವ-ಪ್ರತಿಜ್ಞೆ ಮಾಡಿ ಕೊಡುವ, ಚಾಗಂ-ದಾನವು, ಒಡವುಟ್ಟಿತ್ತು-ಜೊತೆಯಲ್ಲಿ ಹುಟ್ಟಿತು, ಭಾರತಂ-ಮಹಾಭಾರತವು, ಕರ್ಣಂಗೆ-ಕರ್ಣನಿಗಾಗಿ, ಒಡ್ಡಿತ್ತು ದಲ್-ಚಾಚಿತ್ತಲ್ಲವೆ, ಏರ್ಪಟ್ಟಿತ್ತಲ್ಲವೆ? ಎನೆ – ಎನ್ನಲು, ಜಗದೊಳ್ – ಲೋಕದಲ್ಲಿ, ಸಂದಂ – ಸಂದನು, ಪ್ರಸಿದ್ಧನಾದನು, ಸಂದೊಡೆ – ಪ್ರಸಿದ್ಧನಾದರೆ, ಏಂ – ಏನು? ನಾಳೆ – ನಾಳೆಯದಿನ, ಹರಿಗಂ – ಅರ್ಜುನ, ಆಂತು – ಎದುರಿಸಿ, ಕರ್ಣಾಂತಾಕೃಷ್ಟ ಬಾಣಾವಳಿಯೊಳೆ – ಕಿವಿವರೆಗೂ ಸೆಳೆದು ಬಿಡುವ ಬಾಣದ ಸಾಲುಗಳಿಂದಲೇ, ಕರ್ಣನಂ-ಕರ್ಣನನ್ನು, ಕೊಲ್ಗುಂ-ಕೊಲ್ಲುತ್ತಾನೆ.

**೧೦೫.** ಎಂಬಿನೆಗಂ-ಎನ್ನುತಿರಲು, ಆಗಳ್-ಆಗ, ಪ್ರಭಾತಸಮೀರಂ-ಪ್ರಾತಃಕಾಲದ ಗಾಳಿ, ವಿಕಚಾಂಬುಜ ಸೌರಭಮಂ-ಅರಳಿದ ತಾವರೆಗಳ ಸುಗಂಧವನ್ನು, ಒಸೆದು-ಸಂತೋಷಿಸಿ, ಸೇವಿಸುವ-ಮೂಸಿನೋಡುವ. ಆ ಪೆಣ್ದುಂಬಿಗಳ-ಆ ಹೆಣ್ಣು ದುಂಬಿಗಳ, ಸರಮಂ – ನಾದವನ್ನು, ಎತ್ತಿ – ಎಬ್ಬಿಸಿ, ತಱುಂಬುತ್ತು – ಅಟ್ಟುತ್ತ,

ಬಂದುದು–ಬಂತು, ಬೀಸಿತು. 'ತಱಿಂಬು–ಗತಿಸ್ತಂಭೇ' ಎಂದಿದ್ದರೂ ತೆಲುಗಿನ ತಱುಮು ಎಂಬುದಕ್ಕೆ ಅಟ್ಟು, ಹಿಂದೆ ಓಡು ಎಂಬರ್ಥವಿರುವುದರಿಂದ ಅದೇ ಅರ್ಥವನ್ನು ಇಲ್ಲಿ ಸ್ವೀಕರಿಸಿದೆ.

೧೦೬. ಸೂತ, ನಟ, ವಂದಿ, ಮಾಗಧ, ವೈತಾಳಿಕ, ಕಥಕ, ಪುಣ್ಯ ಪಾಠಕ ವಿಪ್ರೋದ್ಘೋತರವಂ–ಗಾಯಕರು, ನಟಿಸುವರು, ಹೊಗಳುಭಟ್ಟರು, ಸ್ತೋತ್ರ ಮಾಡುವವರು, ಹಾಡುವವರು, ಕಥೆ ಹೇಳುವವರು, ಸ್ವಸ್ತಿವಾಚನವನ್ನು ಮಾಡುವವರು, ಬ್ರಾಹ್ಮಣರು–ಇವರಿಂದ ಉತ್ಪನ್ನವಾದ ಶಬ್ದವು, ಜಯಜಯಗೀತಿಗಳ್–ಜಯವನ್ನು ಹೇಳುವ ಸಂಗೀತಗಳು, ಎರಡುಂ ಪಡೆಯೊಳ್–ಉಭಯ ಸೈನ್ಯಗಳಲ್ಲೂ, ತಡೆಯದೆ–ತಡಮಾಡದೆ, ಒರ್ಮೊದಲೆ–ಒಟ್ಟಿಗೆ, ಏಕಕಾಲದಲ್ಲೇ, ಎಸೆಯೆ–ಶಬ್ದ ಮಾಡುತ್ತಿರಲು,

೧೦೭. ಈ ಪದ್ಯದ ಪಾಠ ತುಂಬ ಕೆಟ್ಟಿದೆ; ಅರ್ಥವಾಗುವುದೇ ಕಷ್ಟ; ಕೌರವ ಸೈನ್ಯದ ಆನೆಗಳೂ ಕುದುರೆಗಳೂ ಅಪಶಕುನ ಸೂಚನೆಯನ್ನು ಮಾಡಿದಂತೆ ತೋರುತ್ತದೆ. ಎರಡುಂ ಪಕ್ಕಮನೆಱಗಿದ–ಎರಡು ಪಾರ್ಶ್ವಗಳಲ್ಲೂ ಬಾಗಿದ; ಕರಿಗಳ್–ಆನೆಗಳು, ಪಾರ್ದು–ನಿರೀಕ್ಷಿಸಿ, ಎಯ್ದೆವೇೞ್ದ–ಐದುವಂತೆ ಹೇಳಿದ, ಕೊರಲ ಸರಂಬೆತ್ತಿರೆ–ಕೊರಳಿನ ಧ್ವನಿಯನ್ನು ಹೊಂದಿರಲು, ಮು[ಱು]ವಿಟ್ಟು–ಆಹಾರವನ್ನು ಬಿಟ್ಟು, ನೃಪತುರಗಂಗಳ್–ದುರ್ಯೋಧನನ ಕಡೆಯ ಕುದುರೆಗಳು, ಅಲ್ಲಿ ಹೇಷಾಸ್ವರಮಂ ತೋಱದಪುವು–ಅಲ್ಲಿ ಕೆನೆಯುವ ಶಬ್ದವನ್ನು ತೋರಿಸುತ್ತಿವೆ. ಕರ್ಣನು ಯುದ್ಧರಂಗಕ್ಕೆ ಹೊರಡುವಾಗ ಅನೇಕ ಅಪಶಕುನಗಳಾದುವು; ಅವುಗಳಲ್ಲಿ "ಪ್ರಸ್ಥಿತಸ್ಯ ಕರ್ಣಸ್ಯ ನಿಪೇತುಸ್ತುರಗಾ ಭುವಿ, ಅಶ್ರೂಣಿ ಚ ವಿಮುಂಚಂತ ವಾಹನಾನಿ ವಿಶಾಂಪತೇ" ಎಂಬಿವು ಎರಡು (ವ್ಯಾಸಭಾರತ). ಬಗೆಬಗೆಯಾದ ಸೊಪ್ಪುಗಳನ್ನು ಬೇಯಿಸಿ ಮುದ್ದೆ ಮಾಡಿ ದನಗಳಿಗೆ ಆಹಾರವಾಗಿ ಕೊಡುತ್ತಾರೆ; ಇದಕ್ಕೆ ಮುಱು ಎಂದು ಹೆಸರು; 'ಎಳಗಱುವಂ ಬಿಡು ಮುಱುವಂತಳಿದು' ಎಂದು ಸುರಂಗನ ಪ್ರಯೋಗವಿದೆ (ತ್ರಿಪುವಿ ೧೬–೧೩); 'ತಡೆಯದೆ ಮುಱುವಂ ಸುರಿಯೆಂಬ ಸರಮೆ ತುಱುಗಾರ್ತಿಯರೊಳ್' ಎಂದು ನೇಮಿಚಂದ್ರನ ಪ್ರಯೋಗ (ಲೀಲಾವತಿ ೨– ).

೧೦೮. ಇಂದು–ಈ ದಿನ, ಎನ್ನ ಮಗನಂ–ನನ್ನ ಮಗನಾದ ಕರ್ಣನನ್ನು, ಅರ್ಜುನಂ–ಅರ್ಜುನನು, ಒಂದುಂ–ಒಂದೂ, ತಳ್ವಿಲ್ಲದೆ–ತಡಮಾಡದೆ, ಅಱಿವಂ–ಕೊಲ್ಲುತ್ತಾನೆ, ಅವನಂ–ಅವನನ್ನು, ನೀಂ–ನೀನು, ಕಾಯೆಂದು–ರಕ್ಷಿಸು ಎಂಬುದಾಗಿ, ಪಸರಿಪ–ಹರಡುತ್ತಿರುವ, ಇನಕಿರಣಂಗಳ್–ಸೂರ್ಯನ ಕಿರಣಗಳು, ಸುರಪತಿಯ–ಇಂದ್ರನ, ಕಾಲ್ವಿಡಿವ ಅಂದಮುಂ–ಕಾಲು ಹಿಡಿಯುವ ರೀತಿಯನ್ನು, ಇಳಿಸಿದುವು–ಕೀಳ್ಮಾಡಿದುವು.

ವಚನ: ಪರಿಚ್ಛೇದಿಸಿ–ನಿಶ್ಚಯಿಸಿ; ಆಜ್ಯಾವೇಕ್ಷಣಂಗೆಯ್ದು–ತುಪ್ಪದಲ್ಲಿ

ಮುಖವನ್ನು ನೋಡಿಕೊಂಡು; ಸವತ್ಸಸುರಭಿಯಂ – ಕರುಸಮೇತವಾದ ಗೋವನ್ನು: ಪಸುರ್ಮಣಿಯನಪ್ಪೊಡಂ – ಹಸುರುಮಣಿಯಾದರೂ; ಪಯಿಗೆಯು ನೆತ್ತಿಸಿ–ಬಾವುಟವನ್ನೇರಿಸಿ; ದುಕೂಲಾಂಬರಮಂ–ರೇಷ್ಮೆವಸ್ತ್ರವನ್ನು; ಪೊಸವಾವು ಗೆಯುಂ–ಹೊಸದಾದ ಪಾದುಕೆಯನ್ನು; ಕನಕಸಂವ್ಯಾನ ಸೂತ್ರಂ–ಚಿನ್ನದ ಉತ್ತ ರೀಯವನ್ನೂ ಜನ್ನಿವಾರವನ್ನೂ ಉಳ್ಳವನು; ಆಚಮಿಸಿ–ಆಚಮನವಾಡಿ; ಚಲ್ಲಣಮನುಟ್ಟು–ಚಡ್ಡಿಯನ್ನು ಧರಿಸಿ; ಪುಡಿಗತ್ತುರಿಯಂ–ಕಸ್ತೂರಿಯ ಪುಡಿ ಯನ್ನು; ಪಸಿಯ ನೇತ್ರದ–ಹಸಿರು ಬಣ್ಣದ ವಸ್ತ್ರದ, ಅಸಿಯ ಪಾಳಿಯೊಳ್–ಸಪು ರಾದ ಪಟ್ಟಿಯಲ್ಲಿ (ಹಾಳಿಯಲ್ಲಿ), ನವಿರಂ–ಕೂದಲನ್ನು, ಪಚ್ಚುಗಂಟಿಕ್ಕಿ–ಎರಡು ಭಾಗವಮಾಡಿ ಗಂಟುಹಾಕಿ; ಮಕುಟಮಂ ಕವಿದು – ಕಿರೀಟವನ್ನು ಧರಿಸಿ; ಕಾಯಿಂ–ಕಾಯಿಗಿಂತ; ಎಟಿಲಿಕ್ಕಿ–ಜೋಲುವಂತೆ ಹಾಕಿ; ಪಸದನಂ–ಅಲಂಕಾರ; ನೆಱೆಯೆ–ಪೂರ್ಣವಾಗಿ, ಕೆಯ್ಗೆಯ್ದು–ಸಿಂಗರಿಸಿಕೊಂಡು; ಸನ್ನಣಂಗಳೆಲ್ಲಮಂ– ಕವಚಗಳನ್ನೆಲ್ಲ;

೧೦೯. ಮುನ್ನ–ಮೊದಲು, ಅಮರಪತಿಗೆ–ಇಂದ್ರನಿಗೆ, ಒಡವುಟ್ಟಿದಕವಚ ಮಂ–ಸಹಜ ಕವಚವನ್ನು; ತಿದಿಯುಗಿದು–ಚರ್ಮ ಸುಲಿಯುವಂತೆ ಸುಲಿದು, ಕೊಟ್ಟೆಂ–ದಾನವಾಗಿ ಕೊಟ್ಟೆನು; ಎನಗೆ–ನನಗೆ, ಇಂ–ಇನ್ನು, ಮಱೆಯಂ–ಮೈಗೆ ಮರೆಯಾದ ಕವಚಾದಿಗಳನ್ನು, ಆಸೆವಡಲ್–ಬಯಸಲು, ಒಪ್ಪದು–ಒಪ್ಪುವುದಿಲ್ಲ, ಎಂದು, ಅದಟಂ–ಶೂರನಾದ, ರಾಧೇಯಂ–ಕರ್ಣನು, ಕವಚಮಂ–ಕವಚವನ್ನು, ಅಣಂ–ಸ್ವಲ್ಪವಾಗಿಯೂ, ತುಡನೆ–ಧರಿಸನೇ!

**ವಚನ:** ಕಕ್ಷ–ಪಾರ್ಶ್ವದ; ಸಗ್ಗಮನೇಱುವುದಂ – ಸ್ವರ್ಗಾರೋಹಣ ಮಾಡುವುದನ್ನು; ನೆಲನ್–ನೆಲವು; ಅಂಬರದೆಡೆಗೆ–ಆಕಾಶ ಪ್ರದೇಶಕ್ಕೆ, ಬರ್ಪಂತೆ– ಬರುವ ಹಾಗೆ, ಧ್ವಜಿನಿಯಂ–ಸೈನ್ಯವನ್ನು;

೧೧೦. ಪರಿವಿಧ್ವಂಸಿತ ರಿಪುನೃಪಸಮೂಹಂ – ಧ್ವಂಸಮಾಡಲ್ಪಟ್ಟ ಶತ್ರು ರಾಜರ ಸಮೂಹವುಳ್ಳವನು ಆದ, ಉತ್ತುಂಗಾಂಸಂ – ಎತ್ತರವಾದ ಹೆಗಲುಳ್ಳ, ವಿಬುಧವನಜವನ ಕಳಹಂಸಂ – ಪಂಡಿತರೆಂಬ ತಾವರೆಯ ತೋಟದಲ್ಲಿ ಕಲಹಂಸ ನಾದ, ಕಂಸಾರಿ ಸಖಂ–ಶ್ರೀ ಕೃಷ್ಣನ ಸ್ನೇಹಿತನಾದ ಅರ್ಜುನನು, ಆಗಳ್–ಆಗ, ಹಂಸವ್ಯೂಹಮಂ – ಹಂಸಾಕಾರದ ಸೇನಾ ರಚನೆಯನ್ನು, ಒಡ್ಡಿದಂ – ಮುಂದೆ ಚಾಚಿದನು.

**ವಚನ:** ಬೀಸುವಂತೆ–ಗಾಳಿಯನ್ನು ಊದಿ ಉರಿಯನ್ನು ಎಬ್ಬಿಸುವಂತೆ; ಕೆಯ್ವೀಸಿದಾಗಳ್–ಯುದ್ಧಾರಂಭವಾಗಲಿ ಎಂದು ಕೈಬೀಸಿ ಸೂಚಿಸಿದಾಗ;

೧೧೧. ಕರದಸಿಗಳ್ – ಕೈಗತ್ತಿಗಳು, ಪೞಂಚೆ – ತಾಗಲು, ಕಿಡಿವಿಟ್ಟು–ಕಿಡಿ ಗಳನ್ನು ಚಿಮ್ಮಿ, ಒಗೆದ – ಹುಟ್ಟಿದ, ಒಳ್ಗಿಡಿ – ಒಳ್ಳೆಯ ಕಿಡಿಗಳು, ತಾರಕಾಳಿ ಯಂತಿರೆ – ನಕ್ಷತ್ರಗಳ ಸಮೂಹದಂತಿರಲು, ಬಾಳುಡಿ – ಕತ್ತಿಗಳ ಚೂರುಗಳು,

ಪಾಱುವ--ಹಾರಾಡುವ, ಉಳ್ಕದಂತಿರೆ–ಬೀಳುವ ನಕ್ಷತ್ರದಂತಿರಲು, ಅಂಬರದೊಳ್–ಆಕಾಶದಲ್ಲಿ, ಅಂಬರಂ–ಆಕಾಶವು, ತಡವಮಾದುದು-ಸಮಾನವಾಯಿತು, ಎಂಬಿನೆಗಂ–ಎನ್ನುತ್ತಿರಲು, ಜಗತ್ರಯಂಬರಂ – ಮೂರು ಲೋಕಗಳವರೆಗೂ, ಎಸೆವಂತು–ಸೊಗಸಾಗುವ ಹಾಗೆ, ಎರಡುಂ ಬಲಂ–ಎರಡು ಸೈನ್ಯಗಳೂ, ಉಗ್ರಕೋಪದಿಂ–ಭಯಂಕರ ಕೋಪದಿಂದ, ಅಂದು–ಆ ದಿನ, ತಳ್ತು–ತಾಗಿ, ಇಱಿದವು–ಹೋರಾಡಿದುವು.

ವಚನ : ಅತಿರಥಮಥನನ – ಅರ್ಜುನನ ; ತಮ್ಮತ್ತ – ತಮ್ಮ ಕಡೆಗೆ ; ತೆಗೆಯಲೊಡಂ–ತೆಗೆದುಕೊಂಡು ಹೋದ ಕೂಡಲೇ ; ಅಮ್ಮನಗಂಧವಾರಣಂ–ತಂದೆಯ ಮದ್ದಾನೆಯಾದ ಅರ್ಜುನ (ಇದು ಅರಿಕೇಸರಿಯ ಒಂದು ಬಿರದು).

೧೧೨. ಇವಂದಿರ ಕಾರಣದಿಂದ–ಇವರ ಎಂದರೆ ಸಂಸಪ್ತಕರ ಕಾರಣದಿಂದ, ಭಾರತಂ – ಭಾರತ ಯುದ್ಧವು, ಪಱಿಪಡದೆ ಆಯ್ತು – ಖಂಡಿತವಾಗವಾಯಿತು ಎಂದರೆ ನಿರ್ಣಾಯಕವಾಗದಂತೆ ಆಯಿತು ; ಇವಂದಿರಂ–ಇವರನ್ನು ಎಂದರೆ ಸಂಸಪ್ತಕರನ್ನು, ಪಱಿಪಡೆ–ಕತ್ತರಿಸಿ ಬೀಳುವಂತೆ, ಕೊಂದು, ಅಮೋಘಂ–ವ್ಯರ್ಥವಿಲ್ಲದೆ, ಕರ್ಣನೊಳೆ–ಕರ್ಣನಲ್ಲಿಯೇ, ಕಾದಲೆವೇೞ್ಕುಂ–ಯುದ್ಧಮಾಡಲೇ ಬೇಕು, ಎಂದು–ಎಂದು ಹೇಳುತ್ತ, ಕೆಂಗಱಿಗಳ–ಕೆಂಪಾದಗಱಿಗಳನ್ನುಳ್ಳ, ಪಾರೆಯಂಬುಗಳೊಳ್–ಹಾರೆಯಾಕಾರದ ಬಾಣಗಳಲ್ಲಿ, ಊಱಿ–ಅದುಮಿ, ಕಱುತ್ತು – ಕೆರಳಿ, ಇಸೆ–ಪ್ರಯೋಗಿಸಲು, ಪರ್ದೆಱಗೆ–ಹದ್ದು ಮೇಲೆ ಬೀಳಲು, ಸುರುಳ್ತು–ಸುರುಟಿ, ಬೀೞ್ವ – ಬೀಳುವ, ಕಿಱುವಕ್ಕಿವೊಲ್ – ಸಣ್ಣ ಹಕ್ಕಿಗಳಂತೆ, ಉಗ್ರವಿರೋಧಿನಾಯಕರ್ – ಭಯಂಕರರಾದ ಶತ್ರು ಸೇನಾನಾಯಕರು, ಎಯ್ದೆ – ಚೆನ್ನಾಗಿ, ಬಿಟ್ಟರ್–ಕೆಳಗೆ ಬಿದ್ದರು.

೧೧೩. ಕಱಿಕುಱಿಮಾದ ರಥಂಗಳಿಂ – ಸ್ಥಾನ ತಪ್ಪಿದ, ತಾರುಮಾರಾದ, ರಥಗಳಿಂದಲೂ, ಅೞಿದ – ಸತ್ತ, ಅರಿಭಟರಿಂ – ಶತ್ರುಸೈನಿಕರಿಂದಲೂ ಸುರುಳ್ದ – ಸುಕ್ಕಿಬಿದ್ದ, ಮದಗಜಘಟೆಯಿಂ – ಸೊಕ್ಕಾನೆಗಳ ಹಿಂಡಿನಿಂದಲೂ, ರುಧಿರಜಳಂ–ರಕ್ತದ ನೀರು, ಕಲ್ಪಟ್ಟೆಯೊಳ್–ಕಲ್ಲುಗಳ ದಾರಿಯಲ್ಲಿ ಎಂದರೆ ಶಿಲಾಮಯವಾದ ಪಾತ್ರದಲ್ಲಿ, ಭೋರ್ಗರೆವ – ಭೋರೆಂದು ಶಬ್ದಮಾಡುವ, ತೊಱೆಯವೊಲ್–ನದಿಯಂತೆ, ಸುೞಿಸುೞಿದು–ಸುತ್ತಿ ಸುತ್ತಿ, ಒಡವರಿದುದು – ಕೂಡ ಹರಿಯಿತು.

೧೧೪. ಪಿರಿದು–ಹಿರಿದಾಗಿ, ಪೊಗೞಿಸಿದ–ಹೊಗಳಿಸಿಕೊಂಡ, ಪಾಡಿಸಿದ–ಹಾಡಿಸಿಕೊಂಡ, ಅರಿಯರಂ–ಅಸಾಧ್ಯರಾದವರನ್ನು, ಆನಲ್ಕೆ–ಎದುರಿಸಲು, ಪಿರಿಯರಂ–ದೊಡ್ಡವರಾದವರನ್ನು, ಪೂಣಿಗರಂ–ಶೂರರನ್ನು, ಬಿರುದರಂ – ಬಿರುದುಳ್ಳವರನ್ನು, ಅದಟಿನೊಳ್ – ಶೌರ್ಯದಲ್ಲಿ, ಉಬ್ಬರಮುರಿವರಂ – ಅಧಿಕವಾಗಿ ಉರಿಯು

ವವರನ್ನು, ಅರಿಗನ ಕಣೆಗಳ್–ಅರ್ಜುನನ ಬಾಣಗಳು, ಆಯ್ದು–ಆರಿಸಿಕೊಂಡು, ಅಱಸಿ–ಹುಡುಕಿಕೊಂಡು ಬಂದು, ಕೊಂಡುವು–ನಾಟಿದುವು.

೧೧೫. ಕಣೆಕೊಳೆ–ಬಾಣಗಳು ಹೊಡೆಪಾಗ, ಪಱಿದ–ಕತ್ತರಿಸಿದ, ಅರಿನರಪರ – ಶತ್ರುರಾಜರ, ಕಣೆಗಾಲ್ಗಳ – ಕಾಲುಗಳ ಕೆಳಭಾಗದ, ಬೆರಲ ರತ್ನಮುದ್ರಿಕೆಗಳ–ಬೆರಳುಗಳಿಗೆ ಹಾಕಿರುವ ರತ್ನದುಂಗುರಗಳ, ಸಂದಣಿಯ – ಗುಂಪಿನ, ಬೆಳಗುಗಳಿಂ–ಕಾಂತಿಗಳಿಂದ, ರಣರಂಗದೊಳ್ – ಯುದ್ಧರಂಗದಲ್ಲಿ, ಆಯ್ದು ಪೆಡೆಯ – ಅಯ್ದು ಹೆಡೆಗಳನ್ನುಳ್ಳ, ನಾಗಂಗಳವೋಲ್ – ಸರ್ಪಗಳಂತೆ, ಎಸೆದುವು–ಪ್ರಕಾಶಿಸಿದುವು.

೧೧೬. ಆಗಳ್–ಆಗ, ವಿಜಯನ ವೀರಶ್ರೀಗೆ–ಅರ್ಜುನನ ಪರಾಕ್ರಮದ ಸಂಪತ್ತಿಗೆ, ಕರಂ ಕಿನಿಸಿ – ವಿಶೇಷವಾಗಿ ಕೆರಳಿ, ಕಲಿ ಸುಶರ್ಮಂ – ಶೂರನಾದ ಸುಶರ್ಮನು, ಮೆಯ್ಯೊಳ್ತಾಗೆ – ಮೈಯಲ್ಲಿ ಎದುರಿಸಲು, ಪಗೆ – ದ್ವೇಷವು, ನೀಗೆ–ತೀರುವಂತೆ, ಅದೊಂದು–ಅದು ಒಂದು, ಪರಶು ದಾರುಣ ಶರದಿಂ–ಕೊಡಲಿಯಾಕಾರದ ಕ್ರೂರವಾದ ಬಾಣದಿಂದ, ತಲೆಯಂ–ತಲೆಯನ್ನು, ಪೋಗೆಚ್ಚಂ – ಕತ್ತರಿಸಿ ಹೋಗುವಂತೆ ಹೊಡೆದನು.

**ವಚನ:** ಆಳ್ದನಾಗಿರ್ದ–ಸ್ವಾಮಿಯಾಗಿದ್ದ ; ಉದೀರ್ಣ – ಅಧಿಕವಾಗುತ್ತಿರುವ ; ಸುರಿಗೆಗಾಳೆಗಮುಂ–ಕತ್ತಿಯ ದ್ವಂದ್ವ ಯುದ್ಧವನ್ನು ; ಮಿೞ್ತು ಬರ್ಪಂತೆ–ಮೃತ್ಯು ಬರುವ ಹಾಗೆ ; ಪೆಸರ–ಹೆಸರುಳ್ಳ ; ಅಱಿಕೆಯ ನಾಯಕರಂ–ಪ್ರಸಿದ್ಧರಾದ ಸೇನಾನಾಯಕರನ್ನು ; ನಿಟ್ಟಾಲಿಗೊಂಡು–ಉದ್ದಕ್ಕೂ ನೋಡಿ ; ಮುಟ್ಟಿವಂದಾಗಳ್–ಮುಟ್ಟುವಂತೆ ಬಂದಾಗ ಎಂದರೆ ಹತ್ತಿರ ಬಂದಾಗ ;

೧೧೭. ಯಮಸುತಂ–ಧರ್ಮರಾಜನು, ಅಣ್ಮಿ – ಪೌರುಷವನ್ನು ತೋರಿ, ಸತ್ತೆಯೆನುತುಂ – (ನೀನು, ಕರ್ಣನು) ಸತ್ತೆ ಎನ್ನುತ್ತ, ನಿಶಿತಾಸ್ತ್ರಮುಂ – ಹರಿತವಾದ ಬಾಣವನ್ನು, ಉರ್ಚಿಕೊಂಡು – ಸೆಳೆದುಕೊಂಡು, ವಕ್ಷಮಂ – ಎದೆಯನ್ನು, ಇರದೆ–ಬಿಡದೆ, ಎಚ್ಚೊಡೆ–ಹೊಡೆದರೆ, ಶರಮುಂ–ಬಾಣವನ್ನು, ಕಲಿ – ಶೂರನಾದ, (ಕರ್ಣ), ಚಕ್ಕನೆ–ಚಕ್ಕೆಂದು, ಕಿೞ್ತು–ಕಿತ್ತು, ಉರಃ ಪ್ರದೇಶಮನಿಸೆ–(ಧರ್ಮಜನ) ಎದೆಯ ಪ್ರದೇಶವನ್ನು ಹೊಡೆಯಲು, ನೆತ್ತರೊಕ್ಕು – ರಕ್ತವು ಸುರಿದು, ಪತಿ – ಧರ್ಮಜನು, ಮುೞ್ಛೆಯೊಳ್ – ಮೂರ್ಛೆಯಲ್ಲಿ, ಇಚ್ಚೆಯಿಗೆಟ್ಟು – ಇಚ್ಛಾಶಕ್ತಿ ಉಡುಗಿ ಹೋಗಿ, ಜೋಲ್ದೊಡೆ–ಸೋತು ಬಿದ್ದರೆ, ದಿನೇಶಜಂ–ಕರ್ಣ, ನೆಸುನೊಂದು –ಸ್ವಲ್ಪವ್ಯಥೆಪಟ್ಟು, ನಂದಿಸದೆ–ಆರಿಸದೆ, ಎಂದರೆ ಪ್ರಾಣವನ್ನು ತೆಗೆಯದೆ, ತನ್ನನೆ –ತನ್ನನ್ನೇ, ಆದಮ–ವಿಶೇಷವಾಗಿಯೇ, ನಿಂದಿಸಿದಂ– ಹಳಿದುಕೊಂಡನು.

**ವಚನ:** ನನ್ನಿಗೆ–ಸತ್ಯಕ್ಕೆ ; ಬನ್ನಂ ಬಂದಪುದು–ಭಂಗವುಂಟಾಗುತ್ತದೆ ; ಪೆಱಗಿಕ್ಕಿ–ಹಿಂದಿಟ್ಟು ; ಸಾವಿಂಗಾಱದೆ–ಸಾವಿಗೆ ಸೈರಿಸಲಾರದೆ.

೧೧೮. ಎರೆದನ–ಬೇಡಿದವನ, ಪೆಂಪುಂ–ಹಿರಿಮೆಯೂ, ಅಂತ–ಎದುರಿಸಿದ,

ಅಧಿಕಸಪ್ಪನ – ಮೇಲಾದವನ, ಪೆಂಪುಂ – ಹಿರಿಮೆಯೂ, ಈವ – ದಾನಕೊಡುವ, ಕಾವ – ರಕ್ಷಿಸುವ, ನಿನ್ನ, ಎರಡು ಗುಣಂಗಳುಂ – ಎರಡು ಗುಣಗಳೂ, ಬಯಸುತಿರ್ಪ್ಪುವು–ಬಯಸುತ್ತಿವೆ ; ನಿನ್ನೊಳ್–ನಿನ್ನಲ್ಲಿ, ಇವಂದಿರ್–ಇವರು (ನಕುಲ ಸಹದೇವರು), ಏತಜೊಳ್ – ಯಾವುದರಲ್ಲಿ, ದೊರೆ–ಸಮಾನ ; ದೊರೆವೆತ್ತ – ಸಮಾನತೆಯನ್ನು ಪಡೆದ ; ನಿನ್ನೊಳಂ – ನಿನ್ನಲ್ಲಿಯೂ, ನರನೊಳಂ – ಅರ್ಜುನನಲ್ಲೂ, ಗೆಲ್ಲದ–ಗೆಲುವಿನ, ಸೋಲದ–ಸೋಲಿನ, ಮಾತು, ಇರ್ದುದು–ಇದೆ ; ಸಿಸುಗಳ್–ಮಕ್ಕಳು, (ನಕುಲಸಹದೇವರು), ಬಜಿಲ್ದ ಭೂಪನಂ – ಆಯಾಸಗೊಂಡಿರುವ, ರಾಜ ಧರ್ಮಜನನ್ನು, ಸಿಬಿರಕ್ಕೆ–ಪಾಳೆಯಕ್ಕೆ, ಉಯ್ಗೆ – ಒಯ್ಯಲಿ.

**ವಚನ :** ಅಸುವಱಂ – ಯುದ್ಧವು, ಪೊಣರ್ದು – ಕೂಡಿ ; ಕೆಯ್ಕೊಳ್ವಂ – ರಕ್ಷಿಸೋಣ, ಸಹಾಯಕ್ಕೆ ಹೋಗೋಣ ; ಉತ್ತಾಯಕರಾಗಿ–ಪ್ರತಿಭಟಿಸಿದವರಾಗಿ ; ಕಾಲಾಗ್ನಿಯಂ [ಕೀ]ಡಿ ಸುತ್ತುವಂತೆ – ಪ್ರಳಯ ಕಾಲದ ಅಗ್ನಿಯನ್ನು ಕೀಟವು ಮುತ್ತಿಕೊಳ್ಳುವ ಹಾಗೆ ; ಇಟ್ಟುಂ–ಹೊಡೆದೂ ; ಎಚ್ಚುಂ–ಪ್ರಯೋಗಮಾಡಿಯೂ ; ಇಱಿದುಂ–ತಿವಿದೂ ; ಅಗುರ್ವುಂ–ಭಯವೂ.

೧೧೯. ಎನಗಂ – ನನಗೂ, ಅರಾತಿ ಸಾಧನಂ – ಶತ್ರುಸೈನ್ಯವು, ಇದಿರ್ಚುಗುಂ–ಎದುರಿಸುತ್ತದೆ ; ಅಳ್ಕದೆ–ಹೆದರದೆ, ಇದಿರ್ಚಿ – ಎದುರಿಸಿ, ಬಾಟ್ಗುಂ–ಬದುಕುತ್ತದೆ, ಇನ್ನೆಸೆ–ಇನ್ನು ಎಂದು ಹೇಳಲು, ದೋಷಂ – ಕಳಂಕವು, ಪೆಱತು ಉಂಟೆ–ಬೇರೆ ಇದೆಯೆ ? ಎನಗೆ ಅಂತು ಆದೆ ದೋಷಂ–ನನಗೆ ಹಾಗೆ ಅದೇ ಕಳಂಕವು ; ಅದು ಆಗಲ್ ಆಗದು–ಅದು ಉಂಟಾಗಬಾರದು ; ಎಂದು, ಇನತನಯಂ–ಕರ್ಣನು, ತಗುಳ್ದು–ಅಟ್ಟಿ, ಇಸೆ–ಬಾಣಗಳನ್ನು ಪ್ರಯೋಗಿಸಲು, ನಿಶಾತಶರಾಳಿಗಳ್–ಕ್ರೂರವಾದ ಬಾಣಗಳ ಸಮೂಹ, ಎಯ್ದೆ–ಚೆನ್ನಾಗಿ, ಚಕ್ಕು ಚಕ್ಕನೆ–ಚಕ್ ಚಕ್ ಎಂದು, ಕೊಳೆ–ಕತ್ತರಿಸಲು, ವೈರಿ ಭೂಪರಾ–ಶತ್ರುರಾಜರ, ಶಿರಂಗಳ್–ತಲೆಗಳು, ಪೊಕ್ಕು ಪೊಕ್ಕನೆ – ಪೊಕ್ ಪೊಕ್ ಎಂದು, ಉರುಳ್ದುವು – ಉರುಳಿದುವು.

**ವಚನ :** ಆ ಪ್ರಸ್ತಾವದೊಳ್–ಆ ಸಮಯದಲ್ಲಿ,

೧೨೦. ಮಂತ್ರ . . . . . ಮಂತ್ರಂ : ಮಂತ್ರಪದ–ಮಂತ್ರದ ಪದಗಳಲ್ಲಿ ; ಪ್ರವೀಣ–ಚತುರರಾದ, ಬಹುಸಾಧನ–ಅನೇಕ ಸೈನಿಕರ, ಹೂಂಕರಣಾದಿ–ಹುಂಕಾರವೇ ಮುಂತಾದ, ಮಂತ್ರಂ–ಮಂತ್ರವನ್ನುಳ್ಳ ; ಆಮಂ....ಷಣಂ : ಆ ಮಂತ್ರಿತ–ಆಹ್ವಾನಿಸಲ್ಪಟ್ಟ ಡಾಕಿನೀ–ಪಿಶಾಚಿಗಳ, ದಶನ–ಹಲ್ಲುಗಳ, ಘಟ್ಟನ–ಘರ್ಷಣದಿಂದ, ಜಾತ – ಹುಟ್ಟಿದ, ವಿಭೀಷಣ – ಭಯಂಕರವಾದ, ಮದೇಭಾಂ . . . . ತಂತ್ರ : ಮದೇಭ – ಸೊಕ್ಕಾನೆಗಳ, ಅಂತ್ರ – ಕರುಳುಗಳಿಂದ, ನಿಯಂತ್ರಿತ – ಕಟ್ಟಲ್ಪಟ್ಟ, ಅಶ್ವ – ಕುದುರೆಗಳ, ಶವ – ಹೆಣಗಳ, ಮಾಂಸರಸ – ಸಾರವುಳ್ಳ ಮಾಂಸದಿಂದ: ಮತ್ತ–ಸೊಕ್ಕಿದ, ಯೋಗಿನೀ–ಜೋಗಿಣಿ ಎಂಬ ಮರುಳುಗಳ, ತಂತ್ರಂ–ಸಮೂಹ

ವನ್ನುಳ್ಳ ; ಕರ್ಣನು ಗೆಲ್ದ—ಕರ್ಣನು ಗೆದ್ದ ; ಕೊಳ್ಗುಳಂ—ಯುದ್ಧ ಭೂಮಿಯು, ಏಂ, ಅಗುರ್ವಂ ಒಳಕೊಂಡುದೊ—ಏನು ಭಯವನ್ನು ಒಳಕೊಂಡಿತೋ !

ವಚನ : ನಿಕುರುಂಬದೊಳಗೆ-ಸಮೂಹದಲ್ಲಿ ; ಕಿಱುವೀೞಲೀಯದೆ-ಸ್ವಲ್ಪವೂ ಬೀಳದಂತೆ ಎಂದರೆ ತಪ್ಪಿಸಿಕೊಳ್ಳದಂತೆ ; ರಸಮಂ—ಪಾದರಸವನ್ನು, ಕೊಲ್ವಂತೆ—ಮರ್ದಿಸುವಹಾಗೆ ; ಎಂತಾನು — ಹೇಗಾದರೂ; ಪೊಣರಲ್ - ಹೋರಾಡಲು; ಬಳ್ವಳ ಬಳೆದು—ಅತಿಶಯವಾಗಿ ಬೆಳೆದು, ಒಗೆದ—ನೆಗೆದ, ಕೇಸುರಿಯಂತೆ— ಕೆಂಪಾದ ಉರಿಯ ಹಾಗೆ ; ಮಿಳಿರ್ವ—ಅಲುಗಾಡುವ ; ಕೇಸರಿಕೇತನ—ಸಿಂಹದ ಬಾವುಟ ; ಮುಟ್ಟೆವರ್ಪನ್ನೆಗಂ—ಹತ್ತಿರ ಬರುತ್ತಿರಲು ; ಅರವಿಂದ ಬಾಂಧವ ತನೂಜನ—ಸೂರ್ಯ ಪುತ್ರ ಕರ್ಣನ ; ಮಹಾ ಪ್ರಹರಣ—ಬಲವಾದ ಏಟಿನ ;

೧೨೧. ಪವನಸುತಂಗೆ—ಭೀಮನಿಗೆ, ಪಾಸಟಿಗಳ್—ಸಮಾನರು, ಒರ್ವರುಮಿಲ್ಲ—ಒಬ್ಬರೂ ಇಲ್ಲ ; ಆಡಱಿಂದಂ—ಆದ್ದರಿಂದ, ಅಂತ ಕೌರವಬಲದ—ಎದುರಿಸಿದ ಕೌರವ ಸೈನ್ಯದ, ಉರ್ಕಂ—ಗರ್ವವನ್ನು, ಒಂದಿನಿಸು—ಒಂದಿಷ್ಟು, ಮಾಣಿಸಿ—ನಿಲ್ಲಿಸಿ, ಇಳೇಶ್ವರನಲ್ಲಿಗೆ—ರಾಜ ಧರ್ಮಪುತ್ರನ ಬಳಿಗೆ, ಪೋಪಂ—ಹೋಗೋಣ, ಎಂದು, ಅವನತ ವೈರಿ—ಬಗ್ಗಿಸಲ್ಪಟ್ಟ ಶತ್ರುಗಳನ್ನುಳ್ಳವನು, ಅರ್ಜುನ, ವೈರಿಬಲ ವಾರಿಧಿಯಂ—ಶತ್ರು ಸೈನ್ಯ ಸಾಗರವನ್ನು, ವಿಶಿಖೌರ್ವವಹ್ನಿಯಿಂ—ಬಾಣಗಳ ಬಡಬಾನಲದಿಂದ, ತವಿಸಿ—ನಾಶಮಾಡಿ, ಅಲ್ಲಿಗೆ—ಆ ಯುದ್ಧಕ್ಕೆ, ಮರುತ್ತನೂಭವನಂ—ಭೀಮನನ್ನು, ಪೇೞ್ದು—ನಿಯಮಿಸಿ, ಭೂಪನಂ—ಧರ್ಮರಾಜನನ್ನು, ಇರದೆ, ಎಯ್ದಿ—ಸಮೀಪಿಸಿ.

೧೨೨. ತಾನುಂ ಹರಿಯುಂ—ತಾನೂ ಶ್ರೀಕೃಷ್ಣನೂ, ಭೂಪತಿಗೆ—ಧರ್ಮರಾಜನಿಗೆ ಆನತರಾಗಲೊಡಂ— ನಮಸ್ಕರಿಸಿದವರಾದ ಕೂಡಲೆ, ಪತಿ—ಪ್ರಭುವು, ಒಸೆದು—ಸಂತೋಷಿಸಿ, ಪರಸಿ—ಆಶೀರ್ವದಿಸಿ, ಕಾನೀನನ ದೊರೆಯ—ಕರ್ಣನಂಥ ಯೋಗ್ಯತೆಯುಳ್ಳ, ಕಲಿಯಂ — ಶೂರನನ್ನು, ಉಗ್ರಾಹವದೊಳ್ — ಭಯಂಕರ ಯುದ್ಧದಲ್ಲಿ, ಯಮಸ್ಥಾನಮಂ—ಯಮನೆಡೆಯನ್ನು ಎಂದರೆ ಯಮಲೋಕವನ್ನು, ಎಂತು—ಹೇಗೆ, ಎಯ್ದಿಸಿದಿರೊ—ಸೇರಿಸಿದಿರೋ !

೧೨೩. ನರನಾರಾಯಣರೆಂಬಿರ್ವರು—ನರ, ನಾರಾಯಣ ಎಂಬ ನೀವಿಬ್ಬರೂ, ಒಡಗೂಡಿಪೊಡೆ—ಜೊತೆಯಾಗಿ ಸೇರಿದರೆ, ಉರ್ವರೆಯೊಳ್—ಲೋಕದಲ್ಲಿ, ನಿಡುತಂ—ನಿಶ್ಚಯವಾಗಿಯೂ, ಗೆಲ್ವರ್—ಗೆಲ್ಲುವವರು, ಆರ್ ಎನೆ—ಯಾರು ಎನ್ನಲು, ನೆಗೞ್ದ—ಪ್ರಸಿದ್ಧರಾದ, ನಿಮ್ಮಿರ್ವರದೊರೆಗಂ—ನಿಮ್ಮಿಬ್ಬರ ಸಾಟಿಗೂ, ಬಗೆವೊಡೆ—ಭಾವಿಸಿದರೆ, ಅಗ್ಗಳಂ—ಮಿಗಿಲಾದ, ನರರ್—ಮನುಷ್ಯರು, ಒಳರೇ—ಇರುವರೇ ?

೧೨೪. ಎಂತೆನೆ—ಹೇಗೆನ್ನಲು, ಮುಯ್ಯೇಱಿಸೂಟ್ — ಇಪ್ಪತ್ತೊಂದುಸಲ, ಎಳೆಯಂ — ಭೂಮಿಯನ್ನು, ತಳದೊಳೆ — ಅಂಗೈಯಲ್ಲಿಯೇ, ಅತಂ — ಅವನು (ಕರ್ಣನು), ಪಿಡಿದಂ—ಹಿಡಿದನು, ಎಂಬುದಂ—ಎಂಬುದನ್ನು, ಆಂ—ನಾನು,

ಮುನ್ನ–ಮೊದಲು, ಎಂತುಂ–ಹೇಗೂ, ನಂಬೆನೆ–ನಂಬಲಿಲ್ಲ ; ಇಂದಿನ–ಇವತ್ತಿನ, ಗಂಡವಾತಿನೊಳ್–ಪೌರುಷದ ಸುದ್ದಿಯಲ್ಲಿ, ಸೂತಜನಂ–ಕರ್ಣನನ್ನು, ನಂಬಿದೆಂ –ನಂಬಿದೆನು, ಎಂದರೆ ಇಂದಿನ ಯುದ್ಧದಲ್ಲಿ ಕರ್ಣನ ಪರಾಕ್ರಮವನ್ನು ಕಂಡು ಅವನು ಮಹಾಶೂರನೆಂಬ ನಂಬಿಕೆ ನನ್ನಲ್ಲಿ ಉಂಟಾಯಿತು ; ಅಂಥ ನಂಬಿಕೆ ನನಗೆ ಮೊದಲು ಇರಲಿಲ್ಲ.

೧೨೫. ಮಕ್ಕಳ್ಪೆತ್ತರೊಳ್–ಮಕ್ಕಳನ್ನು ಹೆತ್ತವರಲ್ಲಿ, ಕುಂತಿಯೆ–ಕುಂತಿಯೇ, ಪೆತ್ತಳ್–ಹೆತ್ತವಳು ; ಎಂಬವರೆ–ಎಂದು ಹೇಳುವವರೆ, ಕರ್ಣಂಪೆತ್ತ – ಕರ್ಣನನ್ನು ಹೆತ್ತ, ಅಕ್ಕನೆ–ಅಕ್ಕನೆ, ಕೊಂತಿಮಹಾದೇವಿಗಂ–ಕುಂತಿ ಮಹಾದೇವಿಗೂ ಒಂದು, ಉತ್ತರಮಾದಳ್ – ಅತಿಶಯವಾದಳು, ಎಂದು, ಎರಡುಂ ಪಡೆಗಳ್ – ಎರಡು ಸೈನ್ಯಗಳೂ, ಪೊಗಳ್ದುವು–ಹೊಗಳಿದವು. ಮಕ್ಕಳನ್ನು ಹಡೆದವರಲ್ಲಿ ನಿಜ ವಾಗಿಯೂ ಕುಂತಿಯೇ ಹಡೆದವಳು, ಪಾಂಡವರಂಥ ಮಕ್ಕಳನ್ನು ಯಾರು ತಾನೆ ಹಡೆದಿದ್ದಾರೆ ಎಂಬುದರಿಂದ ; ಇಂಥ ವೀರಮಾತೆಕುಂತಿಗಿಂತಲೂ ಕರ್ಣನನ್ನು ಹೆತ್ತ ತಾಯಿಯೇ ಶ್ರೇಷ್ಠಳು–ಏಕೆಂದರೆ ಕರ್ಣನು ಪಾಂಡವರಿಗಿಂತ ಅಧಿಕ ಶೂರ ಎಂದು ತಾತ್ಪರ್ಯ.

೧೨೬. ಇನ್ನುಂ–ಇನ್ನೂ, ಕರ್ಣನ ರೂಪೆ–ಕರ್ಣನ ಆಕಾರವೇ, ದಲ್–ದಿಟ ವಾಗಿಯೂ, ಎನ್ನೆರ್ದೆಯೊಳಂ–ನನ್ನ ಎದೆಯಲ್ಲೂ, ಕಣ್ಗಳೊಳಂ–ಕಣ್ಣುಗಳಲ್ಲೂ, ಸುಳಿದಪುದು–ಸುಳಿದಾಡುತ್ತಿದೆ ; ಆಂತು–ಎದುರಿಸಿ, ಎನ್ನೆಚ್ಚ–ನಾನು ಪ್ರಯೋಗಿಸಿದ, ಶರಮುಮಂ–ಬಾಣವನ್ನು, ಗೆಲ್ದು–ಗೆದ್ದು, ಎನ್ನುಮಂ–ನನ್ನನ್ನು, ಅಂಜಿಸಿ ದನೆಂಪೊಡೆ–ಹೆದರಿಸಿದನೆಂದು ಹೇಳಿದರೆ, ಇನ್ನೇನೆಂಬೆಂ–ಇನ್ನೇನನ್ನು ಹೇಳುವೆನು ?

೧೨೭. ಅಂತಪ್ಪ ಅದಟನಂ–ಅಂಥ ಶೂರನನ್ನು ಆಜಿಯೊಳ್–ಯುದ್ಧದಲ್ಲಿ, ಎಂತೆಂತು–ಹೇಗೆ ಹೇಗೆ, ಇದಿರಾಂತು–ಇದಿರಿಗೆ ನಿಂತು, ಗೆಲ್ದಿರ್–ಗೆದ್ದಿರಿ, ಎನೆ– ಎನ್ನಲು, ಕಂಸಾಂತಕಂ–ಕೃಷ್ಣನು, ನೃಪನಂ–ರಾಜನನ್ನು (ಕುರಿತು), ಎಂದಂ– ಹೇಳಿದನು, ಕರ್ಣನುಂ–ಕರ್ಣನೂ, ಆಂತಿರೆ–(ನಿಮ್ಮನ್ನು) ಎದುರಿಸಲು, ಇಂದು– ಈದಿನ, ನೀಂ–ನೀವು, ನೊಂದುದಂ – ನೋವುಪಟ್ಟದ್ದನ್ನು, ಕೇಳ್ದು – ಕೇಳಿ, ಈಗಳ್–ಈಗ

೧೨೮. ಆರಯ್ಯಲೆಂದು ಬಂದೆವು–ವಿಚಾರಿಸಬೇಕೆಂದು ಬಂದೆವು; ಅಪಾರ ಗುಣಾ–ಅಪಾರ ಗುಣವುಳ್ಳವನೇ, ಕೊಂದೆವಿಲ್ಲವಿನ್ನುಂ – ಇನ್ನೂ (ಕರ್ಣನನ್ನು) ಕೊಂದೆವಿಲ್ಲ; ಬಳವತ್ – ಶಕ್ತಿಯುತನಾದ, ಕ್ರೂರಾರಾತಿಯಂ – ನಿಷ್ಠುರನಾದ ಶತ್ರುವನ್ನು, ಉಪಸಂಹರಿಪೆವು – ಉಡುಗಿಸುತ್ತೇವೆ, ಎಂದರೆ ಕೊಲ್ಲುತ್ತೇವೆ, ಏಂ ಪಿರಿಯನಾದನ್–ಅವನೇನು ದೊಡ್ಡವನು ? ಮಹಾ ? ಎಂಬುದಂ–ಎನ್ನುತ್ತಲೂ ಆಗಳ್–ಆಗ

೧೨೯. ನರಕಾಂತಕನಂ–ಶ್ರೀಕೃಷ್ಣನನ್ನು (ಕುರಿತು), ನರೇಂದ್ರಂ–ಧರ್ಮ

ರಾಜನು, ನುಡಿದಂ–ಹೇಳಿದನು ; ಆಂ–ನಾನು, ಅರಸುಗೆಯ್ಪು–ದೊರೆತನವನ್ನು ಮಾಡುವ, ಪಬುವಗೆಯನದಂ–ಆ ಕಾಡೆಣಿಕೆಯನ್ನು, ಪರಿಹರಿಸಿದೆಂ–ಬಿಟ್ಟೆನು ; ಆತನಂ–ಅವನನ್ನು, ಈ ಕಿರೀಟಿ–ಈ ಅರ್ಜುನ, ಗೆಲ್ದು–ಗೆದ್ದು, ಎನಗೆ–ನನಗೆ, ಪಟ್ಟವಂ–ಪಟ್ಟಾಭಿಷೇಕವಂ, ಮಾಡುವನೇ–ಮಾಡುತ್ತಾನೆಯೇ ?

೧೩೦. ಏಂ ಮೊಗ್ಗೆ–ಏನು ಸಾಧ್ಯನೆ ? ಕರ್ಣಂ–ಕರ್ಣಂ, ಇಂತು ಹೀಗೆ, ನಿಮ್ಮಂದಿಗರ್–ನಿಮ್ಮ ತೆರೆನಾದವರು, ಎಂದರೆ ನಿಮ್ಮಂಥವರು, ಇಱಿಯೆ–ಯುದ್ಧ ಮಾಡಲು, ಸಾವನೇ–ಸಾಯುತ್ತಾನೆಯೆ ? ಇಂ–ಇನ್ನು, ಅಮ್ಮ–ಅಪ್ಪಗಳಿರಾ, ಸುಯೋಧನನೊಳ್–ದುರ್ಯೋಧನನಲ್ಲಿ (ಸೇರಿ), ಸುಖಮಿರಿ–ಸುಖವಾಗಿ ಇರಿ ; ಆನುಂ–ನಾನು ಕೂಡ, ಪಗೆಯಂ–ದ್ವೇಷವನ್ನು, ಮಱೆದು–ಮರೆತು, ತಪೋನಿಯೋಗದೊಳ್–ತಪಸ್ಸಿನ ಉದ್ಯೋಗದಲ್ಲಿ, ಇರ್ಪೆಂ–ಇರುತ್ತೇನೆ.

ವಚನ : ನಿಜಾಗ್ರಜನ–ತನ್ನ ಅಣ್ಣನ ; ಮನದೊಳ್ ಏವೈಸಿ–ಮನಸ್ಸಿನಲ್ಲಿ ಕೋಪಿಸಿ ; ಏವೈಸದೆ–ಕೋಪವನ್ನು ತೋರಿಸದೆ, ವಿನಯವನೆ–ವಿನೀತ ಭಾವವನ್ನೇ, ಮುಂದಿಟ್ಟು–ಮುಂದು ಮಾಡಿ, ವಿನಯ ವಿಭೂಷಣಂ–ಅರ್ಜುನನು, ಏವಂ ಎಂದರೆ ದ್ವೇಷ, ಜುಗುಪ್ಸೆ, ಮನೋವಿಕಾರ ಎಂಬರ್ಥಗಳಿವೆ ; ತೆಲುಗಿನಲ್ಲೂ ಈ ಅರ್ಥಗಳುಂಟು ; ಏವೈಸು =(ತೆ) ಏವಗಿಂಚು.

೧೩೧. ಮುಳಿದು–ಕೋಪಗೊಂಡು, ಇಂತು–ಹೀಗೆ, ಬೆಸಸೆ–(ನೀವು) ಹೇಳಲು, ನಿಮ್ಮಡಿಯೊಳ್–ನಿಮ್ಮ ಪಾದಗಳಲ್ಲಿಯೇ, ಮಾರ್ಕೊಂಡು–ಎದುರಾಗಿ, ಪ್ರತಿಭಟಿಸಿ, ಎಂತು–ಹೇಗೆ, ನುಡಿವೆಂ–ಮಾತಾಡುವೆನು ; , ಉಸಿರೆಂ–ಉಸಿರೆನು, ಹೇಳೆನು ; ನಿಮ್ಮಂ–ನಿಮ್ಮನ್ನು, ಮುಳಿಯಿಸಿದ–ಕೆರಳಿಸಿದ, ಸುರಾಸುರರುಮಂ–ದೇವದಾನವರನ್ನು, ಒಳರ್–ಜೀವಿಸಿರುವವರು, ಎನಿಸೆಂ–(ನಾನು) ಎನ್ನಿಸೆನು ; ಕರ್ಣನೆಂಬಂ–ಕರ್ಣನೆಂಬವನು, ಎನಗೆ–ನನಗೆ, ಏವಿರಿಯಂ–ಏನು ದೊಡ್ಡವನು ! ಅವನನ್ನು ಕೊಲ್ಲುವುದೇನು ನನಗೆ ಗಹನವೇ ಎಂದು ಭಾವ.

೧೩೨. ನರಸಿಂಗಂಗಂ–ನರಸಿಂಹನಿಗೂ, ಜಾಕಬ್ಬರಸಿಗಂ – ಜಾಕಬ್ಬೆಯೆಂಬ ರಾಣಿಗೂ, ಅಳವು–ಪರಾಕ್ರಮವು, ಒದವೆ–ಉಂಟಾಗಲು, ಪುಟ್ಟಿ–ಹುಟ್ಟಿ, ಪುಟ್ಟಿಯುಂ–ಹುಟ್ಟಿಯು ಕೂಡ, ಅರಿಕೇಸರಿಯೆನೆ–ಅರಿಕೇಸರಿಯೆಂದು, ನೆಗಟ್ಟಂ –ಪ್ರಸಿದ್ಧನಾಗಿಯೂ, ಅರಾತಿಯ–ಶತ್ರುವಿನ, ಸರಿದೊರೆಗಂ–ಸರಿಸಮಾನರ್ಗ್ಗೂ, ಬಂದೆನಪ್ಪೊಡೆ–ಬಂದೆನಾದರೆ, ಆಗಳ್–ಆಗ, ನಗಿರಿ, ಪರಿಹಾಸ ಮಾಡಿರಿ ; (ತಿರಸ್ಕಾರದಿಂದ)

೧೩೩. ಪುಟ್ಟೆ–ಹುಟ್ಟಲು, ಮುಳಿಸು ಒಸಗೆಗಳ್–ಕೋಪ ಪ್ರಸಾದಗಳ್, ಕಡುಗಟ್ಟಂ–ಅತಿಶಯವಾದ ಕಷ್ಟಗಳು ; ಮುಳಿಸೆ–ಕೋಪವೆ, ಒಸಗೆ–ಪ್ರಸಾದ ಅಥವಾ ಸಂತೋಷ, ಎಂಬ–ಎನ್ನುವ, ನೃಪತನಯನವಂ–ಆ ರಾಜಕುಮಾರನು, ಮುಟ್ಟುಗಿಡೆ–ಮುಟ್ಟಾಗುವುದು ಕೆಡಲು, ನಿಸ್ಸಹಾಯಕನಾಗಲು (?), ಪಾರದರ

ದೊಳ್ — ಹಾದರದಲ್ಲಿ, ಪುಟ್ಟಿದಂ — ಪುಟ್ಟಿದವನು ; ಅರಸಂಗಂ — ರಾಜನಿಗೂ, ಅರಸಿಂಗಂ-ರಾಣಿಗೂ, ಪುಟ್ಟಿದನೇ-ಹುಟ್ಟಿದನೇ ?

ಪಂಪ ಅರ್ಜುನನಿಂದ ಹೇಳಿಸಿರುವ ಮೇಲಿನ ಎರಡು ಪದ್ಯಗಳು ಉಚಿತ ವಾಗಿರುವಂತೆ ತೋರುವುದಿಲ್ಲ. ಅರ್ಜುನನ ತಂದೆ ತಾಯಿಗಳು ನರಸಿಂಹ ಜಾಕಬ್ಬೆ ಯರೆಂದು ಹೇಗೆ ತಾನೆ ನಂಬಿಕೆ ಉಂಟಾದೀತು ; ಅರಿಕೇಸರಿಗೇನೋ ಆ ತಂದೆ ತಾಯಿಗಳು ಇರಬಹುದು. ಅರಿಕೇಸರಿ—ಅರ್ಜುನರ ಸಮೀಕರಣವನ್ನು ಇದುವರೆಗೆ ಹೇಗೋ ಪಾಲಿಸಿಕೊಂಡು ಬಂದ ಕವಿ ಇಲ್ಲಿ ಅದನ್ನು ಪಾಲಿಸಲಾಗದೆ ಅತಿಗೆ ಹೋಗಿರುವಂತೆ ಕಾಣುತ್ತದೆ, "ಮುಟ್ಟುಗಿಡೆ ಪಾರದರದೊಳ್ ಪುಟ್ಟಿದಂ" ಎಂಬ ಮಾತುಗಳು ಧರ್ಮರಾಜನ ಭಯ ದುಃಖ ಗಾಬರಿಗಳನ್ನು ಸಮಾಧಾನ ಪಡಿಸುವ ಈ ಸಂದರ್ಭದಲ್ಲಿ, ಅರ್ಜುನನ ಬಾಯಿಂದ ಬರುವುದು ಅವನಿಗೆ ಅಸಭ್ಯತನವನ್ನು ಆರೋಪಿಸಿದಂತಾಗುತ್ತದೆ. ಇವನ್ನು ಓದಿ 'ನಗಿರೇ' ಎಂದು ಹೇಳಬಹುದು.

೧೩೪. ಎಂದು—ಎಂದು ಹೇಳಿ, ಅರಸ—ರಾಜಧರ್ಮಪುತ್ರನೇ, ನೇಸಱಂ ದೊಳಗೆ—ಎಂದರೆ ಸೂರ್ಯನು ಮುಳುಗುವಷ್ಟರಲ್ಲಿ, ಆಂ—ನಾನು, ದಿನಕರ ಸುತನಂ— ಕರ್ಣನನ್ನು, ಇಕ್ಕಿಬಂದಲ್ಲದೆ—ಕೊಂದು ಬಂದಲ್ಲದೆ, ಭವತ್ಪದಾಬ್ಜಮಂ—ನಿನ್ನ ಪಾದ ಕಮಲಗಳನ್ನು, ಕಾಣೆಂ—ನೋಡೆನು, ದಲ್—ದಿಟವಾಗಿಯೂ ; ಎಂದು, ಉದಶ್ರು ಜಳಲವಾರ್ದ್ರಕಪೋಳಂ-ಚಿಮ್ಮುವ ಕಣ್ಣೀರ ಹನಿಗಳಿಂದ ಒದ್ದೆಯಾದ ಕೆನ್ನೆಯುಳ್ಳ ಅರ್ಜುನನು, ಎ[illegible]—ಎದ್ದು ನಿಂತನು.

ವಚನ : ಕಿಡೆನುಡಿದು—ತಿರಸ್ಕರಿಸಿ ಮಾತಾಡಿ ; ನಿಂದಿರ್ದನಂ—ನಿಂತ ಧರ್ಮ ರಾಜನನ್ನು ; ಪೊಡೆವಟ್ಟು—ನಮಸ್ಕರಿಸಿ ; ಸಮಾವಸ್ಥೆಯಂ—ಸಮುಸ್ಥಿತಿಯನ್ನು ; ಅನುವರಮೆಲ್ಲಮಂ—ಯುದ್ಧವನ್ನೆಲ್ಲ ; ನಿಮ್ಮೊರ್ವರ ಮೇಲಿಕ್ಕಿ—ನಿಮ್ಮೊಬ್ಬರ ಮೇಲೆ ಹಾಕಿ ; ಪಿರಿದುಂ ಪೊ[illegible]—ಬಲುಹೊತ್ತು, ತಡೆದಿರ್ಪೆವು—ತಡಮಾಡುತ್ತೇವೆ, ಹಿಡಿಂಬಾಂತಕಂ—ಭೀಮಸೇನನು.

೧೩೫. ನರಮಾತಂಗ ತುರಂಗ ಸೈನ್ಯಂ—ಪದಾತಿಗಳ ಆನೆಗಳ ಕುದುರೆಗಳ ಸೈನ್ಯಗಳು, ಇದಿರಾಂತು—ಎದುರಿಸಿ, ಈರೆಂಟು ಲಕ್ಕಂಬರಂ—ಹದಿನಾರು ಲಕ್ಷದ ವರೆಗೆ, ಎನ್ನ—ನನ್ನ, ನಿಶಾತಹೇತಿಹತಿಯಿಂ—ಹರಿತವಾದ ಆಯುಧಗಳ ಹೊಡೆತ ದಿಂದ, ಕರಗಿತ್ತು—ಕರಗಿತು ; ಮತ್ತೆ, ಅಂತುಂ—ಹಾಗೆ, ಈ ತೋಳ್ ತೀನ್—ಈ ಬಾಹುಗಳ ತೀಟೆ, ಕರಗಲ್ಕೆ—ಕರಗುವುದಕ್ಕೆ, ಆರ್ತಪುದು ಇಲ್ಲ—ಸಮರ್ಥವಾದು ದಾಗಲಿಲ್ಲ ; ಅರಿಗ—ಅರ್ಜುನನೇ, ಅದಕ್ಕೆ—ಆ ಸೈನ್ಯಕ್ಕೆ, ನೀಂ—ನೀನು, ವೇಳ್ಪುದೇ— ಬೇಕೇ ? ಎಂದರೆ ಆ ಸೈನ್ಯವನ್ನು ನಾಶಮಾಡುವುದಕ್ಕೆ ನಾನೊಬ್ಬನೇ ಸಾಕು, ನೀನು ಬರುವ ಅವಶ್ಯಕತೆಯಿಲ್ಲ, ಎಂದು ಭಾವ : ಸಂಗರಾಜಿರದೊಳ್—ಯುದ್ಧಾಂ ಗಣದಲ್ಲಿ, ಕೌರವರೆಂಬ ಕಾಕಕುಳಕೆ—ಕೌರವರೆಂಬ ಕಾಗೆಗಳ ಗುಂಪಿಗೆ, ಎನ್ನ—ನನ್ನ, ಈ ಒಂದೆ ಬಿಲ್—ಈ ಒಂದೇ ಬಿಲ್ಲು, ಸಾಲದೇ—ಸಾಕಾಗದೇ ?

**ವಚನ :** ಅಕಲಂಕರಾಮಂ–ಅರಿಕೇಸರಿಯ ಒಂದು ಬಿರುದು, ಇಲ್ಲಿ ಅರ್ಜುನ; ಅದೇ ವಿರಿದು–ಅದೇನು ದೊಡ್ಡದು, ತೊಡೆಯಂ ಪೊಯ್ದು–ತೊಡೆಗಳನ್ನು ತಟ್ಟಿ ಕೊಂಡು ; ಆರ್ದು–ಕೂಗಿ ; ಪವನಜವದಿಂ–ವಾಯುವೇಗದಿಂದ ; ಒಲ್ಲನೆ–ಸದ್ದಿಲ್ಲದೆ; ವೈಕರ್ತನನ–ಕರ್ಣನ ; ಮದೀಯ–ನನ್ನ ; ಎರಡು ಮುಯ್ಯುವಂ–ಎರಡು ಹೆಗಲ ಗಳನ್ನು ; ಸಮರಾನಂದಂ ಬೆರಸು–ಯುದ್ಧದ ಆನಂದದಿಂದ ಕೂಡಿ ; ದೊಣೆಗಳಂ–ಬತ್ತಳಿಕೆಗಳನ್ನು ; ತಾಳವಟ್ಟದ ಬಿಲ್ಲಂ–ತಾಳವಟ್ಟವೆಂಬ ಬಿಲ್ಲನ್ನು ; ಕೆಂದಳದೊಳ್ ಕೆಂಪಾದ ಅಂಗೈಯಲ್ಲಿ ; ಜೇವೊಡೆದಾಗಳ್–ಬಿಲ್ಲಿನ ಹೆದೆಯನ್ನು ಮಿಡಿದಾಗ ; ಕರ್ಣನ ಬಿಲ್ಲಿನ ಹೆಸರು ತಾಳವಟ್ಟವೆಂದು ಇಲ್ಲಿದೆ ; ಹೀಗೆಯೇ ಗದಾಯುದ್ಧದಲ್ಲೂ ಹೇಳಿದೆ (೨–೧೦ ; ಗದ್ಯ) ; 'ವೇಣೀಸಂಹಾರ'ದ ೪ ನೆಯ ಅಂಕದಲ್ಲಿ, 'ಸ್ವಾಮಿ ನಾಪಿ ಸಜ್ಜೀಕೃತಂ ಕಾಲಪೃಷ್ಠಂ' ಎಂದಿದೆ.

೧೩೬. ಮಹಾ ಪ್ರಳಯ ಭೈರವಕ್ಷುಭಿತ ಪುಷ್ಕಲಾವರ್ತಂ–ಮಹಾ ಪ್ರಳಯ ವೆಂಬ ಭೈರವನಿಂದ ರೇಗಿಸಲ್ಪಟ್ಟ ಪುಷ್ಕಲಾವರ್ತ ಮೇಘವನ್ನುಳ್ಳ, ಆ ಮಹೋಗ್ರ ... ಡಂಬರಂ ; ಆ, ಮಹೋಗ್ರ–ಭಯಂಕರವಾದ, ರಿಪುಭೂಭುಜ–ಶತ್ರುರಾಜರ, ಶ್ರವಣ –ಕಿವಿಗಳಿಗೆ, ಭೈರವ–ಭಯಂಕರವಾದ, ಆಡಂಬರಂ–ಆಟೋಪವನ್ನುಳ್ಳ, ಗುಹಾಗಹನ ಗಹ್ವರೋದರ ವಿಶೀರ್ಣಂ–ಗುಹೆಗಳ ಆಳವಾದ ಕಣಿವೆಗಳ ಒಳಗನ್ನು ಭೇದಿಸುತ್ತಿರುವ, ರವಿತನೂಭವಜ್ಯಾರವಂ–ಕರ್ಣನ ಬಿಲ್ಲ ಹೆದೆಯ ಟಂಕಾರವು, ಆದಂ–ವಿಶೇಷವಾಗಿ, ಅಂದು–ಆದಿನ, ಏಂಮುಹುಃ ಪ್ರಕಟಮಾದುದು–ಏನು ಪುನಃ ಪುನಃ ಮೊರೆಯುವು ದಾಯಿತು.

**ವಚನ :** ಯುಗಾಂತವಾತಾಹತ–ಪ್ರಳಯಕಾಲದ ಗಾಳಿಯಿಂದ ಅಪ್ಪಳಿಸ ಲ್ಪಟ್ಟ ; ನೆಲೆಯಿಂ ತಳರ್ವಂತೆ–ಸ್ಥಳದಿಂದ ಚಲಿಸುವ ಹಾಗೆ ; ಧ್ವಾಂಕ್ಷಧ್ವಜಂ–ಕಾಗೆಯ ಬಾವುಟ ; ಮಿಳಿರೆ–ಅಲ್ಲಾಡಲು ; ಆಸನ್ನಮಾಗೆ–ಸಮೀಪವಾಗುವಂತೆ ;

೧೩೭. ಆ ಬ್ರಹ್ಮಾಂಡದಿಂದೆ–ಆ ಬ್ರಹ್ಮಾಂಡದಿಂದ, ಇತ್ತ–ಇತ್ತ ಕಡೆಗೆ, ಉದಧಿ ಕುಲನಗ ದ್ವೀಪ ಸಂಘಾತಂ–ಸಮುದ್ರಗಳು, ಕುಲಪರ್ವತಗಳು, ದ್ವೀಪ ಸಮೂಹಗಳು, ಎನಿತು–ಎಷ್ಟು, ಅಂತು ಅನಿತು–ಹಾಗೆ ಅಷ್ಟೂ, ಬತ್ತಿತ್ತು–ಇಂಗಿ ಹೋಯಿತು, ತೂಳ್ದತ್ತು–ತಳ್ಳಲ್ಪಟ್ಟಿತು, ಉಡುಗಿದುದು–ಸುಕ್ಕಿ ಹೋದುವು, ಎಂದು, ದಿಕ್ಪಾಲರ್–ದಿಗ್ದೇವತೆಗಳು, ಎನೆ–ಎನ್ನಲು, ದೇವದತ್ತಧ್ವನಿ ಸಂಮಿಶ್ರಂ–ದೇವದತ್ತ ವೆಂಬ ಶಂಖದ ಧ್ವನಿ ಬೆರೆತಿರುವ, ಅಕಾಂಡ ಪ್ರಳಯ ಘನಘಟಾಟೋಪ ಗಂಭೀರ ನಾದಂ–ಅಕಾಲದಲ್ಲುಂಟಾದ ಪ್ರಳಯ ಮೇಘ ಸಮೂಹಗಳ ಆಡಂಬರವನ್ನುಳ್ಳ, ಗಂಭೀರವಾದ ಶಬ್ದವನ್ನುಳ್ಳ, ಸಮುದ್ಯ . . . . ನಿನದಂ : ಸಮುದ್ಯತ್–ಅತಿ ಎತ್ತರ ವಾದ, ರಜತಗಿರಿ–ಕೈಲಾಸ ಪರ್ವತದ, ತಟ–ಪ್ರದೇಶದಲ್ಲಿ, ಸ್ಪಷ್ಟ–ಪ್ರಕಟಿತವಾದ, ಸಂಶ್ಲಿಷ್ಟ–ಚೆನ್ನಾಗಿ ಸೇರಿಸಿದ, ಮೌರ್ವೀ–ಬಿಲ್ಲಿನ ಹೆದೆಯ, ನಿನದಂ–ಟಂಕಾರವು, ಪರ್ವಿತ್ತು–ಹಬ್ಬಿತ್ತು.

ಕರ್ಣಾರ್ಜುನರ ಬಿಲ್ಟಂಕಾರಗಳಲ್ಲಿ ಯಾವುದು ಅತಿಭಯಂಕರ? ಕರ್ಣನ ಧನುಷ್ಟಂಕಾರವನ್ನು ವರ್ಣಿಸುವಾಗ ಪಂಪ ವೇಣೀಸಂಹಾರದ ಪದ್ಯವನ್ನು [೩-೪] ಅನುಕರಿಸಿದ್ದರೆ, ಅರ್ಜುನನ ಧನುಷ್ಟಂಕಾರದ ವರ್ಣನೆಗೆ ಸ್ವತಂತ್ರವಾದ ಪದ್ಯವನ್ನು ಬರೆದಿರುವನು; ಇಷ್ಟೇ ಸಾಕು ಅರ್ಜುನನ ಗಾಂಡೀವದ ಟಂಕಾರ ಕರ್ಣನ ಧನುಷ್ಟಂಕಾರಕ್ಕಿಂತ ಭಯಂಕರವೆಂದು ತಿಳಿಸುವುದಕ್ಕೆ.

ವಚನ: ಮಿಟ್ಟೆಂದು ಮಿಡುಕಲಪ್ಪೊಡಂ–ಮಿಟ್ಟು ಎಂದು ಎಂದರೆ ಅಲುಗಾಡುವುದಕ್ಕೂ, ದೇವರಿಲ್ಲದಂತು–ದೇವತೆಗಳಿಲ್ಲದಿರುವ ಹಾಗೆ; ದೇವನಿಕಾಯಂ ಬೆರಸು–ದೇವತೆಗಳ ಸಮೂಹದೊಡನೆ;

ಕರ್ಣಾರ್ಜುನರ ಕಾಳಗವನ್ನು ನೋಡುವುದಕ್ಕೆ ದೇವತೆಗಳೂ, ಬ್ರಹ್ಮರುದ್ರರೂ, ನಾರದರೂ, ಪಾತಾಳದ ವಾಸುಕಿಯೂ ಮುಂತಾದವರು ನೆರೆದರು. ಈ ಪ್ರೇಕ್ಷಕ ವೃಂದ ಒದಗಿದ್ದು ಭೀಮಸೇನನಿಗೆ ಒಳ್ಳೆಯ ಸಮಯವಾಯಿತು. ದುಶ್ಶಾಸನನನ್ನು ಕೊಂದು ತನ್ನ ಪ್ರತಿಜ್ಞೆಗಳಲ್ಲಿ ಒಂದನ್ನು ತೀರಿಸುವುದಕ್ಕೆ ಈ ಹಿನ್ನೆಲೆಯ ಪರಿಕಲ್ಪನೆ ಬಹುರಮ್ಯವಾಗಿ ನಡೆದಿದೆ ಪಂಪನಿಂದ.

೧೩೮. ದೇವ ಬ್ರಹ್ಮಮುನೀಂಪ್ರಾಸೇವಿತಂ–ದೇವತೆಗಳು, ಬ್ರಹ್ಮ, ಋಷಿಶ್ರೇಷ್ಠರುಗಳಿಂದ ಸೇವಿಸಲ್ಪಟ್ಟವನು, ಉತ್ತಪ್ತಕನಕವರ್ಣಂ–ಚೆನ್ನಾಗಿ ಕಾಸಿದ ಚಿನ್ನದ ಬಣ್ಣವುಳ್ಳವನು, ಹಂಸಗ್ರೀವನಿಹಿತ ಏಕಪಾದಂ–ಹಂಸ ಪಕ್ಷಿಯ ಕೊರಳಲ್ಲಿ ಇಟ್ಟ ಒಂದು ಪಾದವುಳ್ಳವನು, ಇಳಾವಂದ್ಯಂ–ಲೋಕದಿಂದ ನಮಸ್ಕರಿಸಲ್ಪಟ್ಟವನು ಆದ, ಅಬ್ಜಗರ್ಭಂ–ತಾವರೆಯಲ್ಲಿ ಹುಟ್ಟಿದ ಬ್ರಹ್ಮನು, ಬಂದಂ–ಬಂದನು. ಬ್ರಹ್ಮನು ತನ್ನ ವಾಹನವಾದ ಹಂಸಪಕ್ಷಿಯ ಕೊರಳ ಮೇಲೆ ಒಂದು ಕಾಲನ್ನು ಇಟ್ಟುಕೊಂಡು ಇನ್ನೊಂದನ್ನು ಇಳಿಯ ಬಿಟ್ಟು ಕುಳಿತಿರುವ ದೃಶ್ಯ ಚೆನ್ನಾಗಿದೆ.

೧೩೯. ಭೂತನಾಥಂ–ಶಿವನು, ನಂದಿಯಂ–ತನ್ನ ವಾಹನವಾದ ನಂದಿಯನ್ನು, ಏಱಿಯೆ–ಹತ್ತಿಕೊಂಡೇ, ಪೆಱಗೇಱಿದ–ಹಿಂದೆ ಹತ್ತಿಕುಳಿತ, ಗಿರಿಸುತೆಯು–ಪಾರ್ವತಿಯು, ಮೊಲೆಗಳ್–ಮೊಲೆಗಳು, ಅಳ್ಕೆಱೆಯಂ–ನಯವಾದ ತಿವಿತದಿಂದ, ನಿಃರೇಱಿಸುತಿರೆ–ರಸವನ್ನು ಉಕ್ಕಿಸುತ್ತಿರಲು, ಕರ್ಣಾರ್ಜುನರ–ಕರ್ಣನ ಮತ್ತು ಅರ್ಜುನನ, ಏಱಂ–ಯುದ್ಧವನ್ನು, ನೋಡಲ್ಕೆ–ನೋಡುವುದಕ್ಕೆ, ಬಂದಂ–ಬಂದನು

೧೪೦. ಆರ ಅನುವರದೊಳಂ–ಯಾರ ಯುದ್ಧದಲ್ಲೂ, ಎನಗೆ–ನನಗೆ, ಆರದ–ತುಂಬದ, ಕಣ್ಮಲರ್ಗಳ್–ಹೂವಿನಂತಿರುವ ಕಣ್ಣುಗಳು, ಅರಿಗನಿಂ–ಅರ್ಜುನನಿಂದ, ಆರ್ಗುಂ–ತುಂಬುತ್ತದೆ, ಎನುತುಂ–ಎಂದು ಹೇಳುತ್ತ, ನೀರದ ಪಥದೊಳ್–ಮೇಘಮಾರ್ಗದಲ್ಲಿ ಎಂದರೆ ಆಕಾಶದಲ್ಲಿ, ಮುತ್ತಿನ ಹಾರದ, ಬೆಳಗು–ಪ್ರಕಾಶವು, ಎಸೆಯೆ–ಸೊಗಸಾಗಲು, ನಾರದಂ–ನಾರದನು, ಬಂದು, ಇರ್ದಂ–ಇದ್ದನು.

೧೪೧. ರಸೆಯಿಂದಂ–ಪಾತಾಳಲೋಕದಿಂದ, ಒಗೆದು–ಮೂಡಿ, ಪೆಡೆ

ಗ[ಳ್]-ಹೆಡೆಗಳು, ಪೊಸಮಾಣಿಕದ-ಹೊಸ ರತ್ನಗಳ, ಎಳವಿಸಿಲ್ಗಳೊಳ್-ಎಳೆಯ (ಕೆಂಪಾದ) ಬಿಸಿಲುಗಳಲ್ಲಿ, ಪೊಸದಳಿರೊಳ್-ಹೊಸ ಚಿಗುರುಗಳಲ್ಲಿ, ಮುಸುಕಿದ ತೆಱದಿಂದೆ-ಮುಚ್ಚಿದ ರೀತಿಯಿಂದ, ಎಸೆದಿರೆ-ಸೊಗಸುತ್ತಿರಲು, ಪೊಸತೆನೆ-ಹೊಸತು ಎನ್ನಲು, ನಡೆನೋಡಲ್-ಚೆನ್ನಾಗಿ ನೋಡುವುದಕ್ಕೆ, ಉರಗರಾಜಂ-ಸರ್ಪರಾಜನಾದ ವಾಸುಕಿ, ಬಂದಂ-ಬಂದನು.

೧೪೨. ದಿನಕರನುಂ-ಸೂರ್ಯನೂ, ಇಂದ್ರನುಂ-ಇಂದ್ರನೂ, ನಿಜತನಯರ-ತಂತಮ್ಮ ಮಕ್ಕಳ, ದೆಸೆಗೆ-ಕಡೆಗೆ, ಎಱಗಿದ-ಬಾಗಿದ, ಎಱಕದಿಂ - ಪ್ರೀತಿಯಿಂದ, ಗೆಲವಿನ - ಜಯದ, ಮಾತನೆ - ಮಾತನ್ನೇ, ನುಡಿಯುತ್ತಿರೆ - ಹೇಳುತ್ತಿರಲು, ನುಡಿದ-ಹೇಳಿದ, ಜಗಳಮದು-ಆ ಜಗಳವು, ತ್ರಿಪುರಹರನ-ಶಿವನ, ಕಿವಿಗೆ-ಕಿವಿಗಳಿಗೆ, ಎಯ್ದುವುದುಂ-ಮುಟ್ಟುತ್ತಲೂ ; ಸೂರ್ಯ ತನ್ನ ಮಗ ಕರ್ಣ ಗೆಲ್ಲುತ್ತಾನೆ ಎಂದೂ ಇಂದ್ರ ತನ್ನ ಮಗ ಅರ್ಜುನ ಗೆಲ್ಲುತ್ತಾನೆ ಎಂದೂ ಆರಂಭಿಸಿದ ಮಾತಿನ ಜಗಳ ಶಿವನ ಕಿವಿಗೆ ಬೀಳುತ್ತದೆ.

ವಚನ: ದೇವೇಂದ್ರಂಗಂ - ಇಂದ್ರನಿಗೂ, ದಿವಸೇಂದ್ರಗಂ - ಸೂರ್ಯನಿಗೂ, ಬೞಿಯನಟ್ಟಿ-ದೂತನನ್ನು ಕಳುಹಿಸಿ, ಬರಿಸಿ-ಬರಮಾಡಿಕೊಂಡು ; ಈ ಜಗಳದ ವಿಷಯ ವ್ಯಾಸಭಾರತದಲ್ಲಿ ಇದೆ: ಹತ್ವಾರ್ಜುನಂ ಮಮ ಸುತಃ ಕರ್ಣೋಽ ಜಯತು ಸಂಯುಗೇ। ಹತ್ವಾ ಕರ್ಣಂ ಜಯತ್ವದ್ಯ ಮಮ ಪುತ್ರೋಽ ಧನಂಜಯಃ॥ ಇತಿ ಸೂರ್ಯಸ್ಯ ಚೈವಾಸೀತ್ ವಿವಾದೋ ವಾಸವಸ್ಯ ಚ॥ (ಕರ್ಣಪರ್ವ ೮೭- ೯, ೬೦).

೧೪೩. ದಿನಕರ-ಸೂರ್ಯನೇ, ಇದೇಂ ಜಗಳಂ-ಇದೇನು ಜಗಳ, ನಿಜತನೂಭವಂ-ನಿನ್ನ ಮಗ ಕರ್ಣ, ಹರಿಗನೊಳ್-ಅರ್ಜುನನಲ್ಲಿ, ಪೊಣರ್ದು-ಯುದ್ಧಮಾಡಿ, ಗೆಲ್ವನೇ-ಗೆಲ್ಲುತ್ತಾನೆಯೆ? ಏಂ ಬಗೆಗೆಟ್ಟೆಯೋ-ಏನು ಬುದ್ಧಿಹೀನನಾದೆಯೋ! ಅವಂ - ಅರ್ಜುನ, ಘುರದೊಳ್ - ಯುದ್ಧದಲ್ಲಿ, ಎನಗೆ-ನನಗೆ, ಮಿಗಿಲ್-ಮೀರಿದವನು, ಎನೆ-ಎನ್ನಲು, ನಿನಗೆ, ಪಗಲೊಳ್-ಹಗಲಿನಲ್ಲಿ, ಏಂ ಕತ್ತಲೆಯೆ-ಕತ್ತಲೆಯೇನು!

ವಚನ. ಪತ್ತುವಿಡೆ ನುಡಿಮ - ಕಲಹವು ಹೋಗುವಂತೆ ಮಾತಾಡಿ; ನಿಲ್ಲುವಂತೆ ಹೇಳಿ. "ಪತ್ತು-ಸಂಶ್ಲೇಷೇ ಕಲಹ ಸಂಖ್ಯಯೋಃ" : ಜಗಳ > ಪ್ರಾ. ದೇ. ಝಗಡ ; (ತೆ) ಜಗಡಮು, (ಮರಾ) ಝಗಡ-ಕಲಹ.

೧೪೪. ಅಳವಿನೊಳ್-ಶಕ್ತಿಯಲ್ಲಿ, ಎನ್ನುಮಂ-ನನ್ನನ್ನೂ, ಇನಿಸು--ಸ್ವಲ್ಪ, ಅಗ್ಗಳಿಸಿದ-ಮೀರಿದ, ಅಧಿಕನಾದ, ಹರಿಗನೊಳ್-ಅರ್ಜುನನಲ್ಲಿ, ಇದಿರ್ಚಿ - ಎದುರಿಸಿ, ಕರ್ಣಂ-ಕರ್ಣನು, ಗೆಲಲ್-ಗೆಲ್ಲಲು, ಉಮ್ಮಳಿಪಂ ಗಡಂ-ಚಿಂತಿಸುತ್ತಿರುವನಲ್ಲವೆ, ಎಂದು, ಈಶ್ವರಂ-ಶಿವನು, ಓಪಳ-ತನ್ನ ಪ್ರಿಯಳಾದ ಪಾರ್ವತಿಯ, ಕರತಳಮಂ - ಅಂಗೈಯನ್ನು, ಪೊಯ್ದು-ತಟ್ಟಿ, ಮುಗುಳ್ನಗೆ ನಕ್ಕಂ-ಮುಗುಳುನಗೆಯನ್ನು ನಕ್ಕನು.

ವಚನ : ಮುಗಿಲೂಜ಼ಿದ–ಮೇಘಗಳನ್ನು ಆಶ್ರಯಿಸಿದ ಎಂದರೆ ಆಕಾಶದಲ್ಲಿ ಸೆರೆದ ; ನೆರವಿವಡೆದು–ಪ್ರೇಕ್ಷಕರ ಸಮೂಹವನ್ನು ಪಡೆದು ; ನೆಜಪಲ್–ಮುಗಿಸಲು, ಪೂರ್ಣಮಾಡಲು ; ಅವಸರಂಬಡೆದೆಂ – ಅವಕಾಶವನ್ನು ಪಡೆದೆನು ; ಕೌರವ . . . ನಪ್ಪ ; ಕೌರವಕುಲ – ಕುರುವಂಶವೆಂಬ, ಹಿಮಕರ – ಚಂದ್ರನ, ಆವಿಲ ಪ್ರಚಯ – ಕಶ್ಮಲದ ಸಮೂಹಕ್ಕೆ, ವರ್ಷವಾರಿದನಪ್ಪ – ಮಳೆಗಾಲದ ಮೋಡವಾಗಿರುವ, ಪವನತನಯಂ – ಭೀಮಸೇನನು ; ಬದ್ಧವಪ್ರವಾಗಿ – ಸ್ಥಿರ ಶರೀರದವನಾಗಿ ; ಪೆಸರ್ವೆಸರೊಳೆ – ಹೆಸರು ಹೆಸರಿನಲ್ಲಿಯೇ ಎಂದರೆ ಹೆಸರು ಹಿಡಿದು, ಮೂದಲಿಸಿದೊಡೆ – ಹೀಯಾಳಿಸಿದರೆ ; ತಾಗಿದಾಗಳ್ – ಸಂಘಟ್ಟಿಸಿದಾಗ.

೧೪೫. ಮಸಕಂಗುಂದದೆ – ರಭಸವು ಕಡಮೆಯಾಗದೆ, ಪಾಯ್ವ–ನುಗ್ಗಿ ಬರುವ, ಆರಾತಿಶರಸಂಘಾತಂಗಳಂ – ಶತ್ರುಗಳ ಬಾಣ ಜಾಲವನ್ನು, ಕೂಡೆ – ಕೂಡಲೆ, ಖಂಡಿಸಿ–ಕತ್ತರಿಸಿ, ಬಿಲ್ಲಂ–ಬಿಲ್ಲನ್ನು, ಮುಱಿಯೆಚ್ಚೊಡೆ – ಮುರಿಯುವಂತೆ ಹೊಡೆದರೆ, ಅಂತು–ಹಾಗೆ, ಅನಿಬರುಂ–ಅಷ್ಟುಜನ ದುರ್ಯೋಧನನ ತಮ್ಮಂದಿರೂ, ಬಾಳ್ಗಿಟ್ಟು–ಕತ್ತಿಯನ್ನು ಸೆಳೆದು, ಮೇಲ್ವಾಯ್ದೊಡೆ–ಮೇಲೆ ನುಗ್ಗಿದರೆ, ಅರ್ಬಿಸೆ–ಅತಿಕ್ರಮಿಸಲು, ತಿಣ್ಣಂ–ತೀವ್ರವಾಗಿ, ತೆಗೆದು – ಬತ್ತಳಿಕೆಯಿಂದ ತೆಗೆದುಕೊಂಡು, ಅರ್ಧಚಂದ್ರಶರದಿಂ – ಅರ್ಧಚಂದ್ರಾಕಾರದ ಬಾಣದಿಂದ, ಸೂಟ್ಸೂಟೊಳ್ – ಬಾರಿ ಬಾರಿಗೆ, ಎಚ್ಚಾಗಳ್ – ಪ್ರಯೋಗಿಸಿದಾಗ, ಉರುಳ್ದ – ಉರುಳಿದ, ಕೌರವಶಿರಃ ಪದ್ಮಂಗಳಿಂ – ಕೌರವರ ತಲೆಗಳೆಂಬ ತಾವರೆಗಳಿಂದ, ಕೊಳ್ಗುಳಂ–ಕದನ ಭೂಮಿ, ಅರ್ಚಿಸಿದಂತೆ–ಪೂಜಿಸಲ್ಪಟ್ಟಂತೆ, ಇರ್ದುದು–ಇತ್ತು.

ವಚನ : ಜೀರಗೆಯೊಕ್ಕಲ್ ಮಾಡಿ – ಜೀರಿಗೆಯನ್ನು ಒಕ್ಕುವಂತೆ ಒಕ್ಕಿ, ಕೆಡೆದ–ಬಿದ್ದ, ಎಡಗಲಿಸಿ–ದಾಟಿ (?)

೧೪೬. ಇಲ್ಲಿಂದ ದುಶ್ಶಾಸನನ ವಧೆಯ ಪ್ರಸಂಗ : ಚಲದಿಂ – ಮಾತ್ಸರ್ಯದಿಂದ, ಕೃಷ್ಣೆಯ – ದ್ರೌಪದಿಯ, ಕೇಶಮಂ – ಕುರುಳುಗಳನ್ನು, ಪಿಡಿದ – ಹಿಡಿದೆಳೆದ, ನಿನ್ನಿಂದೆ–ನಿನ್ನಿಂದ, ಆದ, ಅಟಲ್ – ದುಃಖವು, ನಿನ್ನುರಃಸ್ಥಲಮಂ–ನಿನ್ನ ಎದೆಯ ಪ್ರದೇಶವನ್ನು, ಪೋಬಿದೆ–ಹೋಳು ಮಾಡದೆ, ಪೋಪುದಲ್ತು–ಹೋಗುವಂಥದಲ್ಲ ; ಎನಗೆ–ನನಗೆ, ಅಳ್ಕಿ–ಹೆದರಿ, ಅದೇಕೆ–ಅದೇತಕ್ಕೆ, ಇರ್ದಪಯ್ – ಇರುವೆ ?, ನಿನ್ನನುಜರಂ–ನಿನ್ನ ತಮ್ಮಂದಿರನ್ನು (ಅವರಿಗಾದ ಅವಸ್ಥೆಯನ್ನು), ಕಂಡು – ನೋಡಿ, ಬಾಳ್ವ ಪಂಬಲ್ – ಬಾಳುವ ಹಂಬಲ, ನಿನಗೆ, ಅದೇಂ ಇಂ ಉಂಟೆ – ಅದೇನು ಇನ್ನೂ ಇದೆಯೆ ? ಎಂತುಂ ಏನ್–ಹೇಗೂ ಏನು ? ಎನ್ನತೋಳ್ವಲೆಯೊಳ್ – ನನ್ನ ಬಾಹುಗಳ ಬಲೆಯಲ್ಲಿ, ಸಿಲ್ಕಿದೆ–ಸಿಕ್ಕಿಕೊಂಡೆ, ಎಂದು, ಮೂದಲಿಪುದುಂ–ತೆಗಳಲು (ಸವಾಲು ಮಾಡಲು), ದುಶ್ಶಾಸನಂ–ದುಶ್ಶಾಸನನು, ತಾಗಿದಂ–ಸಂಘಟ್ಟಿಸಿದನು.

“ ಯೇ ರಾಜಸೂಯಾವಭೃಥೇ ಪವಿತ್ರಾ । ಜಾತಾಃ ಕಚಾ ಯಾಜ್ಞಸೇನ್ಯಾ

ದುರಾತ್ಮನ್ ॥ ತೇ ಪಾಣಿನಾ ಕತರೇಣಾವಕೃಷ್ಟಾಃ । ಸ್ವಾದ್ ಬ್ರೂಹಿ ತ್ವಾಂ ಪೃಚ್ಛತಿ ಭೀಮಸೇನಃ" ॥ ಎಂದು ವ್ಯಾಸ ಭಾರತದಲ್ಲಿದೆ.

೧೪೭. ಕಱುಪಿ–ಕೆರಳಿ, ಎೞ್ದು–ಎದ್ದು, ಎಂದರೆ ವೃದ್ಧಿಯಾದ, ಪಗೆಯ–ಹಗೆತನದ; ಬೇರ್ವರಿದ–ಬೇರುಬಿಟ್ಟ, ಉಱುಮಿಕೆಯ–ಗರ್ಜನೆಯ ? ; ಪೊದಳ್ದ–ವ್ಯಾಪಿಸಿದ, ಗಂಡಮುಚ್ಚರದ – ಪೌರುಷ ವಿದ್ವೇಷದ, ಒದವಿಂ – ಉಂಟಾಗುವಿಕೆಯಿಂದ, ನೆಱನನೆ – ಮರ್ಮವನ್ನೇ, ಮೂದಲಿಸುತ್ತುಂ – ಅವಹೇಳನ ಮಾಡುತ್ತ, ನೆಱನನೆ–ಮರ್ಮಸ್ಥಾನವನ್ನೇ, ಆಗಳ್–ಆಗ, ಒರ್ವರೊರ್ವರಂ–ಒಬ್ಬರೊಬ್ಬರನ್ನು, ತೆಗೆದು–ಹೆದೆಯನ್ನು ಸೆಳೆದು, ಎಚ್ಚರ್–ಬಾಣ ಪ್ರಯೋಗ ಮಾಡಿದರು. ಇಲ್ಲಿ ಉಱುಮಿಕೆ ಶಬ್ದದ ಅರ್ಥ ಚಿಂತನೀಯ ; ಉಱುಮು + ಇಕೆ ; ಉಱುಮುದಲ್ (ತ) – (೧) ಗರ್ಜನೆ (೨) ಕೋಪದಿಂದ ಗೊಣಗುಟ್ಟುವುದು ; (ತೆ) ಉಱುಮು – ಗರ್ಜಿಸು, ಮೊಳಗು ; (ಮ) ಉಱುಂಪಲ್ – ಹುಲಿಯ ಗರ್ಜನೆ ; (ಸಂಭಾಕೋ) ದಲ್ಲಿ ಆಧಿಕ್ಯ ಎಂದು ಅರ್ಥ ಹೇಳಿದೆ.

೧೪೮. ಸುರಿಗಿಱಿವ ತೆಱದಿಂ – ಕತ್ತಿಯಿಂದ ಹೊಯ್ದಾಡುವಂತೆ. ಒರೊರ್ವರಂ–ಒಬ್ಬರೊಬ್ಬರನ್ನು, ಇಸೆ–ಬಾಣಗಳಿಂದ ಹೊಡೆಯಲು, ನಡೆ–ನಾಟಿಸಲು, ನಟ್ಟಕೋಲ – ನಾಟಿದ ಬಾಣಗಳ, ಬೞಿವಿಡಿದು–ದಾರಿಯನ್ನು ಹಿಡಿದು, ಎಂದರೆ ಅನುಸರಿಸಿ, ಎತ್ತಂ – ಎಲ್ಲೆಲ್ಲೂ, ಅವಂದಿರ – ಅವರ, ನವರುಧಿರಂಗಳ್ – ಹೊಸ ರಕ್ತಗಳು, ಮುಳಿಸಿನ–ಕೋಪದ, ತೆರಳ್ದ–ಉಂಡೆಯಾದ, ದಳ್ಳುರಿಗಳಂ–ಜ್ವಲಿಸುವ ಉರಿಗಳನ್ನು, ಇಳಿಸಿ–ಕೀಳ್ಮಾಡಿ, ಸುರಿದವು–ಸೋರಿದುವು, ಸೂಸಿದುವು.

**ವಚನ**: ನಿಶಿತಮಾರ್ಗಣಂಗಳಿಂದ – ಹರಿತವಾದ ಬಾಣಗಳಿಂದ ; ಅಂಬು ತಪ್ಪೆ–ಬಾಣಗಳು ಮುಗಿದುಹೋಗಲು, ಜಟ್ಟಿಗ ಬಿಲ್ಲಾಳಂತೆ–ಶೂರನಾದ ಬಿಲ್ಗಾರನ ಹಾಗೆ, ಎಚ್ಚು – ಪ್ರಯೋಗಮಾಡಿ, ಪಾಯ್ವ–ಮುನ್ನುಗ್ಗುವ, ಅರಾತಿಯ–ಹಗೆಯಾದ ದುಶ್ಶಾಸನನ ; ನೆತ್ತರಂ–ರಕ್ತವನ್ನು ; ಸೂೞೆಸಿನೊಳ್–ಬಾರಿಬಾರಿಯ ಬಾಣ ಪ್ರಹಾರದಲ್ಲಿ ; ಒಕ್ಕೊಡಂ – ಸುರಿದರೂ ; ಬಸಿಱಾರೆ – ಹೊಟ್ಟೆತುಂಬಲು ; ತೊಯ್ದು – ಒದ್ದೆಮಾಡಿ ; ಮುಡಿಯಲುಂ – ಕಟ್ಟುವುದಕ್ಕೂ, ನೆಱಯದು – ಸಾಲದು, ತಪ್ಪು < ತವು + ದ + ಉ ; ತವು ಇತ್ಯಸ್ಯ ಧಾತೋಃ ದೋಃ ಪಕಾರಪೇಶೋಭವತಿ ದಕಾರಾದಿ ಪ್ರತ್ಯಯೇ ಪರೇ (ಶಬ್ದಾನು. ಸೂ ೪೮೦)

೧೪೯. ಅವನಂ – ದುಶ್ಶಾಸನನನ್ನು, ಬಂಚಿಸಿ – ವಂಚಿಸಿ, ಗದೆಗೊಂಡು–ಗದೆಯನ್ನೆತ್ತಿಕೊಂಡು, ಅವನ – ದುಶ್ಶಾಸನನ, ವರೂಥಮನೆ–ರಥವನ್ನೇ, ತಿಣ್ಣಂ–ತೀಕ್ಷ್ಣವಾಗಿ, ಇಟ್ಟೊಡೆ – ಹೊಡೆದರೆ, ಅವಂ – ದುಶ್ಶಾಸನ, ಗದೆಗೊಂಡು–ಗದೆಯನ್ನು ಹಿಡಿದು, ಎಯ್ತರೆ–ಹತ್ತಿರ ಬರಲು, ಪವನಸುತಂ–ಭೀಮನು, ರಥದಿಂದೆ–ತೇರಿನಿಂದ, ಇೞಿದು–ಕೆಳಗಿಳಿದು, ಅವನಿಯೊಳ್–ನೆಲದ ಮೇಲೆ, ಅವನುಮಂ – ಅವನನ್ನೂ, ಉರುಳ್ಚಿದಂ–ಹೊರಳಿಸಿದನು.

೧೫೦. ಬಳೆ-(ಗಂಟಲ) ಬಳೆಗಳು, ನಂಗುರ್ತ್ತಿರೆ – ಜಜ್ಜಿ ಹೋಗುತ್ತಿರಲು, ಗಂಟಲಂ–ಗಂಟಲನ್ನು. ಮೆಟ್ಟಿ–ತುಳಿದು, ಇವಂ ದುಶ್ಶಾಸನಂ–ಇವನು ದುಶ್ಶಾಸನ, ಭೀಮನಿಂ – ಭೀಮನಿಗಿಂತ, ಬಳಸಂಪನ್ನಂ – ಶಕ್ತಿಸಂಪನ್ನನಾದವನು, ಅಪ್ಪಂಕಿ– ಅಮುಕಿ, ಮರ್ದನ ಮಾಡಿ, ಕೊಂದ[ಪೆ]ನ್ – ಕೊಲ್ಲುತ್ತೇನೆ, ಇದಂ – ಇದನ್ನು, ಮಾರ್ಕೊಳ್ವ–ಪ್ರತಿಭಟಿಸುವ, ಬಲ್ಲಾಳ್ಗೆ–ಶೂರನಿಗೆ, ಅಸುಂಗೊಳೆ – ಪ್ರಾಣವನ್ನು ತೆಗೆಯಲು, ಬಾಳೆತ್ತಿದೆಂ–ಕತ್ತಿಯನ್ನು ಎತ್ತಿದ್ದೇನೆ; ಪಿಂಗಾಕ್ಷ – ದುರ್ಯೋಧನನೇ, ಏಕೆ ಕಣ್ಣ ಮಿಡುಕಯ್ – ಏಕೆ ಕಣ್ಣನ್ನು ಮಿಟುಕಿಸುವುದಿಲ್ಲ? ; ನೀಂ–ನೀನು, ಏಕೆ–ಏತಕ್ಕೆ, ಮಿಳ್ಮಿಳ ನೋಡುತ್ತು–ಮಿಳಮಿಳ ನೋಡುತ್ತ, ಉಳನೆ–(ಸೈನ್ಯದ) ಒಳಗಡೆಯೆ, ಇರ್ದೆ–ಇದ್ದೀಯಾ? (ಹೊರಕ್ಕೆ ಬಾ, ಸೇನೆಯ ನಡುವೆ ಅಡಗಿರ ಬೇಡ), ಎಂದು, ಅದಟರಂ–ಶೂರರನ್ನು, ಭೀಮಂ-ಭೀಮನು, ಪಳಂಚಿ–ಪ್ರತಿಭಟಿಸಿ, ಅಲ್ವಿದಂ–ಗರ್ಜಿಸಿದನು : ಇಲ್ಲಿ ಉಳನೆ ಎಂಬುದು ಉಳ್–ಒಳಗಡೆ ಎಂಬುದರಿಂದ ಬಂದಿರಬಹುದು ; ಅಲ್ವಿದಂ : ಪಾಠಾಂತರಗಳು, ಅರ್ಲ್ವಿನಂ, ಅಲ್ವಿನಂ ; ಅರ್ಲ್ವಿನಂ –ಎಂದರೆ ಗರ್ಜಿಸುತ್ತಿರಲು, ಇದು ಅಲ್ವಿನಂ ಎಂದಾಗಬಹುದು : ಆದರೆ ಕ್ರಿಯಾ ಪದವಾದರೆ ಆರ್ದಂ, ಅಲ್ದಂ ಎಂದಿರಬೇಕು ; ಇಲ್ಲಿ ಬಹುಶಃ ಆರಿದಂ, ಅಲಿದಂ ಎಂಬ ನಡುಗನ್ನಡದರೂಪ, ಜನರ ಮಾತಿನಲ್ಲಿ ಇದ್ದಿರಬಹುದಾದದ್ದು, ಬಂದಿರ ಬಹುದು ; ಛಂದಸ್ಸಿಗಾಗಿ. ಅಂತು 'ಅಲ್ವಿನಂ' ಪ್ರಯೋಗ ಸಂದೇಹಗ್ರಸ್ತ.

ವಚನ : ಆಟೋಪಮಂ–ಆಡಂಬರವನ್ನು ; ಮಿಟ್ಟೆಂದು ಮಿಡುಕಲಣ್ಮದಿರೆ– ಮಿಟ್ಟೆಂದು ಅಲುಗಾಡಲು ಕೂಡ ಪೌರುಷವಿಲ್ಲದೆ ಇರಲು ;

೧೫೧. ಉಸಿರೊತ್ತಿಂ – ಉಸಿರಿನ ಒತ್ತಡದಿಂದ, ತಿದಿಯಂತಿರೆ – ತಿದಿಯ ಹಾಗೆ, ಒತ್ತಿದ–ಅಮುಕಿದ, ಬಸಿಱ್–ಹೊಟ್ಟೆ, ಪೋತಂದ–ಹೊರಕ್ಕೆ ಹೊರಟಿರುವ, ಕಣ್ಣು–ಕಣ್ಣುಗಳು ; ಬಿಟ್ಟಬಾಯ್–ತೆರೆದ ಬಾಯಿ ; ಮುಸಕಂಗುಂದಿದ – ಶಕ್ತಿ ಗುಂದಿದ, ಮೆಯ್ – ದೇಹ ; ವಲಂ–ಚೆನ್ನಾಗಿ, ಬಡಿವ–ಬಡಿಯುತ್ತಿರುವ, ಕಾಲ್– ಕಾಲುಗಳು ; ಭೂಭಾಗದೊಳ್–ನೆಲದ ಮೇಲೆ, ತಂದು–ಹಾಕಿ, ತಾಟಿಸುತುಂ– ಹೊಡೆಯಲ್ಪಡುತ್ತ, ಕೋಟಲೆಗೊಳ್ವ – ಹಿಂಸೆಗೆ ಒಳಗಾಗಿರುವ, ರತ್ನಮಕುಟ ದ್ಯೋತೋತ್ತಮಾಂಗಂ–ರತ್ನ ಖಚಿತ ಕಿರೀಟದಿಂದ ಪ್ರಕಾಶಿತವಾದ ತಲೆ, ಇವೆಲ್ಲ, ವಿರಾಜಿಸುವನ್ನಂ–ಶೋಭಿಸುತ್ತಿರಲು, ಪುಡಿಯೊಳ್–ದೂಳಿನಲ್ಲಿ, ಪೊರಳ್ವ– ಹೊರಳುವ, ಪಗೆಯಂ–ಹಗೆಯನ್ನು, ಕಣ್ಣಾರ್ವಿನಂ–ಕಣ್ಣು ತುಂಬುತ್ತಿರಲು. ಕಣ್ಣುಗಳಿಗೆ ತೃಪ್ತಿಯಾಗುತ್ತಿರಲು, ನೋಡಿದಳ್–(ದ್ರೌಪದಿಯು) ನೋಡಿದಳು.

೧೫೨. ಆಸತ್ತು–ಆಯಾಸಗೊಂಡು, ತಿರಿದ–ಅಲೆದಾಡಿದ, ಅರಣ್ಯಾವಾಸದ– ಕಾಡಿನಲ್ಲಿ ವಾಸಮಾಡುವುದರ, ಪರಿಭವದ – ಅವಮಾನದ, ಕುದಿಪಮಂ – ಸಂಕಟ ವನ್ನು, ನೀಗಿ – ಕಳೆದು, ದುಶ್ಶಾಸನನ ಇರ್ದ – ದುಶ್ಶಾಸನನು ಇದ್ದ, ಇರವಂ– ಅವಸ್ಥೆಯೂ, ಆ ದ್ರೌಪದಿಯಾ–ಆ ದ್ರೌಪದಿಯ, ಮನದೊಳ್ – ಮನಸ್ಸಿನಲ್ಲಿ,

ಸುಖಾವಾಸಮುಂ-ಸುಖದ ನೆಲೆಯನ್ನು, ಎಯ್ದಿಸಿದುದು-ಮುಟ್ಟಿಸಿತು, ಸೇರಿಸಿತು. ಈ ಪದ್ಯದ ದೀರ್ಘಾಕ್ಷರಗಳ ವಿಳಂಬ ಗತಿ ದ್ರೌಪದಿಯು ಪಟ್ಟ ಕಷ್ಟಗಳ ಪ್ರಮಾಣ ಘನ್ನೂ ದೀರ್ಘಕಾಲಿಕತೆಯನ್ನೂ ಅನುಭವಕ್ಕೆ ತಂದುಕೊಡುತ್ತಿರುವುದೇ ಅಲ್ಲದೆ, ಅವಳಿಗುಂಟಾದ ಕಿಂಚಿತ್ಸುಖಕ್ಕೆ ಅವರ ಅರ್ಹತೆಯನ್ನೂ ಧ್ವನಿಸುತ್ತಿದೆ.

**ವಚನ :** ನೆಱಪುವಂ – ಪೂರ್ತಿಮಾಡೋಣ ; ದೃಢಕಠಿನ ಹೃದಯನಪ್ಪ-ದೃಢವೂ ಕಠಿಣವೂ ಆದ ಎದೆಯುಳ್ಳ ; ಪೋಲ್ವ-ಸೀಳುವ.

೧೫೩. ಸುರಿಗೆಯೊಳ್-ಕತ್ತಿಯಲ್ಲಿ, ಉರಮುಂ-ಎದೆಯನ್ನು, ಡೊಕ್ಕನೆ-ಡೊಕ್ಕೆಂದು, ಬಿಕ್ಕನೆಬಿರಿಯಿಱಿದು-ಬಿರುಬಿರನೆ ಬಿರಿಯುವಂತೆ ತಿವಿದು, ಬರಿಯಂ-ಪಕ್ಕೆಗಳನ್ನು, ಅಗಲೊತ್ತಿ-ಅಗಲವಾಗಿ ತಳ್ಳಿ, ಮನಂ-ಮನಸ್ಸು, ಕೊಕ್ಕರಿಸದೆ-ಹೇಸದೆ, ಬಗಸೆರೆಯಿಂ – ಬೊಗಸೆಯಿಂದ, ಪವನಸುತಂ – ಭೀಮನು, ನೆತ್ತರಂ-ರಕ್ತವನ್ನು, ಅಳುರ್ಕೆಯೆ-ಆಧಿಕ್ಯದಿಂದ, ನೊಗೆನೊಗೆದು-ತುಂಬಿ ತುಂಬಿ

೧೫೪. ನೆತ್ತಿಯೊಳ್ – (ದ್ರೌಪದಿಯ) ತಲೆಯಮೇಲೆ, ಎಱೆದೆಱೆದು-ಹೊಯ್ದು ಹೊಯ್ದು, ಇನಿಸು-ಸ್ವಲ್ಪ, ಅಱೆಯೊತ್ತಿ – ತಟ್ಟಿ ಒಳಕ್ಕಿಳಿಯುವಂತೆ ಮಾಡಿ, ಬೞಿಕ್ಕೆ-ಆಮೇಲೆ, ಇೞಿಯೆ-ಕೆಳಕ್ಕೆ ಸೇರಲು, ಸೊಸೆದು-ಹೆಣೆದುಕೊಂಡು, ಜಡೆಗೊಂಡಿರ್ದ-ಸಿಕ್ಕಾಗಿದ್ದ, ಉದ್ವೃತ್ತಕುಚಯುಗೆಯ – ಗರ್ವಿತ ಸ್ತನಗಳುಳ್ಳ ದ್ರೌಪದಿಯ, ಕೇಶಮಂ-ಕುರುಳೋಳಿಗಳನ್ನು, ಎಯ್ದೆ-ಚೆನ್ನಾಗಿ, ಪಸರಿಸಿದ-ವ್ಯಾಪಿಸಿದ, ಅದಟಿಂ – ಪರಾಕ್ರಮದಿಂದ, ಎತ್ತಂ – ಎಲ್ಲಕಡೆಯೂ, ಪಸರಿಸಿದಂ-ಬಿಡಿಸಿದನು, ಹರವಿದನು.

೧೫೫ ಪಸರಿಸಿ – ಸಿಕ್ಕನ್ನು ಬಿಡಿಸಿ, ಪಂದಲೆಯಂ (ದುಶ್ಶಾಸನನ) ಹಸಿತಲೆಯನ್ನು, ಮೆಟ್ಟಿಸಿ-(ದ್ರೌಪದಿಯಿಂದ) ತುಳಿಯಿಸಿ, ವೈರಿಯ-ಶತ್ರುವಿನ, ಪಲ್ಲಪಣಿಗೆಯಿಂ-ಹಲ್ಲುಗಳೆಂಬ ಬಾಚಣಿಗೆಯಿಂದ, ಬಾರ್ಚಿ-ತಲೆಯನ್ನು ಬಾಚಿ, ಪೊದಳ್ದ-ವ್ಯಾಪಿಸಿದ, ಒಸಗೆಯಿಂ – ಸಂತೋಷದಿಂದ, ಅವನ ಕರುಳ್ಗಳೆ – ಆ ದುಶ್ಶಾಸನನ ಕರಳುಗಳೆ, ಸೊಸವಾಸಿಗವಾಗೆ – ಹೊಸ ಹೂವಿನ ದಂಡೆಯಾಗಲು, ಕೃಷ್ಣೆಯಂ-ದ್ರೌಪದಿಯನ್ನು, ಮುಡಿಯಿಸಿದಂ-ತಾನೇ ಮುಡಿಯಿಸಿದನು. ದ್ರೌಪದಿಯ ತುಳಿತದಿಂದ ದುಶ್ಶಾಸನನ ಹಲ್ಲುಗಳ ಸಾಲುಗಳು ಕಳಚಿ ಬಿದ್ದವು ; ಅದೇ ಬಾಚಣಿಗೆಯಾಯಿತು ಎಂದು ಭಾವ. ಬಾಸಿಗ= (ತ) ವಾಶಿಕೈ-ಹೂವಿನಸರ, ದಂಡೆ.

ದುಶ್ಶಾಸನನ ರಕ್ತಪಾನವನ್ನು ಭೀಮನು ಮಾಡಿದ ಪ್ರಸಂಗ ಭಾರತದಲ್ಲಿದೆ ; ಆದರೆ ಆ ರಕ್ತವನ್ನು ಹೊಯ್ದು ದ್ರೌಪದಿಯ ತಲೆಯನ್ನು ಬಾಚಿದ್ದೂ ಅವನ ಕರುಳುಗಳನ್ನು ಅವಳ ತಲೆಗೆ ಮುಡಿಸಿದ್ದೂ ಅಲ್ಲಿ ಕಂಡು ಬರುವುದಿಲ್ಲ.

**ವಚನ :** ಪಗೆಯುಂ ಬಗೆಯುಂ-ವೈರಿಯೂ ಮನೋರಥವೂ ; ಒಡನೊಡನೆ ಮುಡಿಯೆ-ಜೊತೆಯಾಗಿಯೇ, ತೀರಲು ; ತದೀಯಾಂತ್ರ-ಆತನ ಕರಳುಗಳ ;

೧೫೬. ಇದಱೊಳ್ – ಈ ಮುಡಿಯಲ್ಲಿ, ಶ್ವೇತಾತಪತ್ರಸ್ಥಗಿತದಶದಿಶಾ

ಮಂಡಲಂ-ಬೆಳ್ಗೊಡೆಗಳು ತೆತ್ತಿಸಿದ ಹತ್ತು ದಿಕ್ಕುಗಳನ್ನುಳ್ಳ, ರಾಜಚಕ್ರ-ರಾಜರ ಸಮೂಹ, ಪುದಿದು-ಸೇರಿ, ಅಟ್ಟೊಡಿತ್ತು-ನಾಶವಾಯಿತು; ಇದಱೊಳೆ-ಇದರಲ್ಲಿಯೇ, ಕುರುರಾಜಾನ್ವಯಂ – ಕೌರವ ರಾಜಕುಲವು, ಅಡಂಗಿತು – ಮರೆಯಾಯಿತು; ಇದಱಿಂದಂ-ಇದರಿಂದ, ಮತ್ಪ್ರತಾಪಕ್ಕೆ-ನನ್ನ ಶೌರ್ಯಕ್ಕೆ, ಅಗುರ್ವು-ಅತಿಶಯವು, ಅಥವಾ ಭಯವು, ಉರ್ವಿದುದು-ವೆಗ್ಗಳವಾಯಿತು; ಅಬ್ಜದಳಾಕ್ಷೀ-ಕಮಲನೇತ್ರೆ ದ್ರೌಪದಿಯೇ, ನೋಡ-ನೋಡು, ಇದುವೆ – ಇದೇ, ಮಹಾಭಾರತಕ್ಕೆ – ಮಹಾ ಭಾರತದ ಯುದ್ಧಕ್ಕೆ, ಆದಿಯಾಯ್ತು-ಮೊದಲು ಆಯಿತು, ಎಂದರೆ ಬೀಜ ವಾಯಿತು; ಭವತ್ಕೇಶಪಾಶಪ್ರಪಂಚಂ – ನಿನ್ನ ಕುರುಳೋಳಿಯ ವಿಸ್ತಾರವು, ಬಗೆಯೆ-ಭಾವಿಸಿದರೆ, ಸಾಮಾನ್ಯಮೆ-ಸಾಧಾರಣವಾದದ್ದೇ, ಪೇೞ-ಹೇಳು.

ವಚನ: ನೆಱಪಿದೆ-ಪೂರೈಸಿದೆ, ಪಿಡಿಯನೇಱಿಸಿ-ಹೆಣ್ಣಾನೆಯ ಮೇಲೆ ಹತ್ತಿಸಿ;

೧೫೭. ಒಸರ್ವ ಬಿಸುನೆತ್ತರಂ-ಸುರಿಯುವ ಬಿಸಿರಕ್ತವನ್ನು; ರಕ್ಕಸನಂದದೆ-ರಾಕ್ಷಸನಂತೆ, ಕುಡಿದು-ಕುಡಿದು, ಕಂಡಂಗಳಂ-ಮಾಂಸಖಂಡಗಳನ್ನು, ಅರ್ವಿಸೆ-ಮಿತಿಮೀರಿ, ಮೆಲ್ದು ಮೆಲ್ದು-ಅಗಿದು ಅಗಿದು, ಕರ್ಬಿನ ರಸಕ್ಕಂ-ಕಬ್ಬಿನ ರಸಕ್ಕೂ, ಇನಿಸು-ಇಷ್ಟು, ಇಂಪುಗಾಣೆಂ-ರುಚಿಯನ್ನು ನೋಡೆನು, ಎಂದು ಅನಿಲಸುತಂ-ಭೀಮನು,

೧೫೮. ಸವಿಸವಿದು-ರುಚಿನೋಡಿ ರುಚಿನೋಡಿ, ಬಿಕ್ಕ ಬಿಕ್ಕನೆ-ಎದೆಯ ಮುಂತಾದ ಬಗೆಬಗೆಯ ಮಾಂಸಗಳನ್ನು, ಸವಿನೋಡು-ರುಚಿನೋಡು, ಎನ್ನಾಣೆ-ನನ್ನಾಣೆ, ಎಂದು-ಎಂದು ಹೇಳಿ, ರಕ್ಕಸಿಗಂ-ರಾಕ್ಷಸಿ ಹಿಡಿಂಬೆಗೂ, ಅದಂ-ಅದನ್ನು, ಸವಿದೋಱ-ರುಚಿ ತೋರಿಸಿ, ನೆತ್ತರೆಲ್ಲಂ ತವೆ-ರಕ್ತವೆಲ್ಲಾ ಮುಗಿಯಲು, ಕರುಳ-ಕರುಳುಗಳ, ಪಿಣಿಲಂ-ಗೋಜುಗಳನ್ನು, ನೊಣೆದಂ-ನುಂಗಿದನು.

ವಚನ: ರುಧಿರಾಸವದೊಳ್-ರಕ್ತವೆಂಬ ಮದ್ಯದಲ್ಲಿ; ಅಳವಿಗಟ್ಟಿಯೆ-ಮಿತಿ ಮೀರಿ, ಅಳತೆ ಮೀರಿ; ಸೊರ್ಕಿ-ಉನ್ಮತ್ತನಾಗಿ; ಬರಿಯ-ಪಕ್ಕೆಗಳ, ನರವಿನ-ನರಗಳ, ಅಡಗಿನ-ಮಾಂಸಗಳ, ಇಡುವಿನ ಎಡೆಯ-ಸಂದಿಗಳಲ್ಲಿರುವ, ಕೆನ್ನೆತ್ತ ರೊಳ್-ಕೆಂಪುರಕ್ತದಲ್ಲಿ; ತಳ್ತಿಱದುಂ-ಮೈಗೆ ಬಳಿದೂ, ಲೇಪಿಸಿಯೂ; ಜೊಬ್ಬಿ ಱದುಂ-ಗಟ್ಟಿಯಾಗಿ ಅರಚಿಯೂ, ತ್ರಿಪುಂಡ್ರಮಿಟ್ಟುಂ-ಹಣೆಯಲ್ಲಿ ಮೂರು ಗೆರೆ ಗಳನ್ನು ಎಳೆದೂ; ಕೂಕಿಱದುಂ-ಆರ್ಭಟಿಸಿಯೂ (?), ತೇಗಿಯುಂ-ತೇಗನ್ನು ಬಿಟ್ಟೂ; ಸಸಿನೆವರಿದುಂ-ನೇರವಾಗಿ ಓಡಿಯೂ, ಬವಳಿವರಿದುಂ-ಸುತ್ತ ತಿರುಗಿಯೂ, ಬಾನಂಗುಳಿಗೆ ವರಿದುಂ-ನಕ್ಷತ್ರ ಮಂಡಲಕ್ಕೆ ನೆಗೆದೂ, ಸೂಬ್ಬರಿದುಂ-ಒಬ್ಬರಾದ ನಂತರ ಇನ್ನೊಬ್ಬರು ಓಡಿಯೂ, ಬೆಕ್ಕಸಂಬಟ್ಟು-ಆಶ್ಚರ್ಯವನ್ನು ಹೊಂದಿ.

ಭೀಮಸೇನನು ಯುದ್ಧಭೂಮಿಗೆ ಹಿಡಿಂಬೆಯನ್ನು ಬರಿಸಿ ಅವಳೊಡನೆ ಸೇರಿ ರಾಕ್ಷಸಕ್ರೀಡೆಯಾಡಿ ನೆತ್ತರು ಮಾಂಸಗಳನ್ನು ಕುಡಿದು ಮೆದ್ದ ಸಂದರ್ಭ ವ್ಯಾಸ

ಭಾರತದಲ್ಲಿಲ್ಲ. ಆ ರಕ್ತದ ರುಚಿ ಭೀಮಸೇನನಿಗೆ ಹೇಗಿತ್ತೆಂಬುದನ್ನು ಅಲ್ಲಿ ವರ್ಣಿಸಿದೆ; ಆದರೆ ಅಲ್ಲಿ ಕಬ್ಬಿನ ರಸವನ್ನು ಹೇಳಿಲ್ಲ; ಸ್ತನ್ಯಸ್ಯ ಮಾತುರ್ಮಧುಸರ್ಪಿಷೋರ್ವಾ, ಮಾಧ್ವೀಕ ಪಾನಸ್ಯ ಚ ಸತ್ಕೃತಸ್ಯ । ದಿವ್ಯಸ್ಯ ವಾ ತೋಯ ರಸಸ್ಯ ಚ ಯಾನಿ ಲೋಕೇ ಸುಧಾಮೃತಾಸ್ವಾದುರಸಾನಿ ತೇಭ್ಯಃ । ಸರ್ವೇಭ್ಯ ಏವಾಭ್ಯಧಿಕೋರಸೋಽಯಂ, ಮಮಾದ್ಯ ಚಾಸ್ಯಾಹಿತ ಲೋಹಿತಸ್ಯ ॥

ಮೇಲಿನ ಗದ್ಯದಲ್ಲಿ ಕೆಲವು ಕ್ಲಿಷ್ಟಶಬ್ದಗಳಿವೆ; ಅವುಗಳ ಅರ್ಥಗಳು ಅವ್ಯಕ್ತವಾಗಿವೆ; (೧) ತಳ್ಕಿಱು=ತಳ್ಕು+ಇಱು; ತಳ್ಕು ಎಂದರೆ ಲೇಪನ; "ಚಂದನದ ತಳ್ಕಬಲಾನಿಕರಕ್ಕದೀಗಳೀಗಳೆ ನೆಗಟ್ಟುತ್ತಲೇ ಪುಗಿಲದಾಗಲೆ ವೇಡ ವಸಂತರಾಜನಾ" ಎಂದು ಆದಿಪುರಾಣದ ಪ್ರಯೋಗವಿದೆ; ತಳ್ಕಿಱು–ಲೇಪಿಸು ಎಂದಷ್ಟೇ ಅರ್ಥ (೨) ಕೂಕಿಱು=ಕೂಕು+ಇಱು; ಕೂಕು=ಕೂಗು; ಆದ್ದರಿಂದ ಶಬ್ದ ಮಾಡು ಆರ್ಭಟಿಸು ಎಂದು ಅರ್ಥೈಸಿದೆ. (ಪಂಭಾಕೋ) ದಲ್ಲಿ; ಆದರೆ ಕೂಂಕು ಶಬ್ದವೊಂದಿದೆ, "ನಕ್ತಂಚರೀ ಮುಖದೊಳ್ ಕೂಂಕುವುದಾಂತರಂ ರಣಮುಖೋತ್ಖಾತಾಸಿಧಾರಾಮುಖಂ" (ಪಂಪರಾ, ೧೦–೨೨೩) ಇಲ್ಲಿ ಕೂಗು ಎಂಬರ್ಥ ಹೊಂದುವುದಿಲ್ಲ; ಗಿಡಿ, ತುರುಕು ಎಂದಾಗಬಹುದು. (೩) ಬಾನಂಗುಱಿಗೆ–ಒಂದು ಬಗೆಯಾದ ನಡಿಗೆ ಎಂದು ಹೇಳಿದೆ (ಪಂಭಾಕೋ), ಶಬ್ದರೂಪ ಬಾನಂಗುಳಿಗೆ ಎಂದಿರಬೇಕು; (ಶಮದ.೧೮೩ ಸೂ); ಅರ್ಥದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ (೧) ನಕ್ಷತ್ರ ಎಂಬ ಒಂದು ಟಿಪ್ಪಣಿ ಇದೆ (ಶಮದ. ೧೮೩); (೨) ಸಗಣಿಯ ಉಂಡೆ ಅಥವಾ ಬೆರಣಿ; ಸಗಣಿಯ ಗುಳಿಗೆ>ಘಟಿಕಾ ಎಂದು ಕಿಟ್ಟೆಲ್ ಅವರು ಅರ್ಥ ಹೇಳಿದ್ದಾರೆ. ಈ ಶಬ್ದವಲ್ಲದೆ ಬಾನಂಗುಱು ಎಂಬ ಒಂದು ಶಬ್ದವೂ ಇರುವಂತೆ ಕಾಣುತ್ತದೆ; ಬಾನಂಗುಱು, ಬಾಂಗುಱು ಎಂದು ಭಟ್ಟಾಕಳಂಕ ಪ್ರಯೋಗವನ್ನು ಕಾಣಿಸಿ (ಸೂ ೩೪೬) ವ್ಯಾಖ್ಯಾನದಲ್ಲಿ "ಬಾನಂಗುಱು ಅತ್ರ ಗುಱುರಿತಿ ನ ಪ್ರತ್ಯಯಃ, ಕಿಂತು ಗರ್ತವಾಚೀ ಕುಱು ಶಬ್ದಃ, ಕತಪಃ ಇತ್ಯಾದಿನಾ ಕಸ್ಯ ಗಾದೇಶಃ, ಗಗನಗರ್ತ ಇತ್ಯರ್ಥಃ" ಎಂದು ಹೇಳಿದ್ದಾನೆ, ಹೀಗೆ ಭಾವಿಸುವುದಾದರೆ ಆಕಾಶದ(ದಲ್ಲಿರುವ) ಗುಣಿ ಎಂದರ್ಥವಾಗುತ್ತದೆ. ಆಕಾಶದಲ್ಲಿ ಗುಣಿ ಎಂದರೇನು? ನೇಮಿಚಂದ್ರನ ಅರ್ಧನೇಮಿಯ ಈ ಕೆಳಗಣ ಪ್ರಯೋಗವನ್ನೂ ನೋಡಬಹುದು:

> ಬರಿಯೆಲ್ ಬೇಱಿರ್ದ ಕಂಕಾಳಿಕೆ ಪೆಡತಲೆಯೊಳ್ ಪೊಕ್ಕ ಕಣ್ ತೋರ್ಪ ಕೈಕಾಲ್
> ಸೆರೆ ಪಾತಾಳಕ್ಕೆ ಪೊಕ್ಕಿರ್ದೊಣವಸಿಱುಡುಗಿರ್ದೊಂದುರಂ ಪೊಟ್ಟೆಬಾಯ್ ಬೇ
> ಕರಿಯೋದಂತಿರ್ದ ಬಾನಂಗುಳಿ ಗಿಟಿ ಗಿಟಿ ಜಂತ್ರಂಬೊಲಾಗಿರ್ದಮೆಯ್ ವೈ
> ಸಿರಿ ಚಿದ್ರೂಪಕೆ ಪಕ್ಕಾಗಿರೆ ಚರಿಗೆಗಾಣಲ್ಬಂದನೊರ್ವಂ ಮುನೀಂದ್ರಂ ॥

ಈ ಪದ್ಯದಲ್ಲಿ ಉಪವಾಸದಿಂದ ಒಣಗಿದ ದೇಹವುಳ್ಳ ಒಬ್ಬ ಜೈನಯತಿಯ ವರ್ಣನೆ

ಇದೆ; ಇಲ್ಲಿ ಬರುವ ಬಾಸಂಗುಳಿ ಎಂಬುದು ಪೈಯ ಒಂದು ಭಾಗವಿರುವಂತೆ ತೋರುತ್ತದೆ.

೧೫೯. ಆದ ಮುಳಿಸಿಂದಂ–ಉಂಟಾದ–ಅಥವಾ ವರ್ಧಿಸಿದ ಕೋಪದಿಂದ, ಎಲ್ವಂ–ಮೂಳೆಯನ್ನು, ತೇದುಂ–ತೆಯ್ದೂ, ಕುಡಿಯಲ್ಕೆ–ಕುಡಿಯುವುದಕ್ಕೆ, ತಕ್ಕ–ತಕ್ಕವನಾದ, ಪಗೆವನ–ಶತ್ರುವಿನ, ರುಧಿರಾಜ್ಯೋದಮಸ–ರಕ್ತವೆಂಬ ಸಿರ್ಮೀಲವಾದ ನೀರನ್ನೇ, ಕುಡಿದು, ಪೂಣ್ದು–ಬಿಟ್ಟ, ನಿಂತ, ವೃಕೋದರಂ–ಭೀಮನು, ಆವತೆ ಜೊಳಂ–ಯಾವ ರೀತಿಯಲ್ಲೂ, ಏಂ ದೋಷಿಗನೆ–ಏನು ದೋಷವುಳ್ಳವನೇ? ಅಲ್ಲ ಎಂದು ಭಾವ. ದುಶ್ಶಾಸನನ ಮೂಳೆಗಳನ್ನು ಅರೆದು ಕುಡಿದಿದ್ದರೂ ಭೀಮನಿಗೆ ಏನೂ ಅಪವಾದ ಬರುತ್ತಿರಲಿಲ್ಲ; ಅಂಥ ಶತ್ರು ದುಶ್ಶಾಸನ.

೧೬೦. ಮುಳಿಸಂ ಮಾಡಿದ–ಕೋಪವನ್ನುಂಟುಮಾಡಿದ, ಅರಾತಿನಾಥರ–ಶತ್ರುರಾಜರ, ಅಡಗಂ–ಮಾಂಸವನ್ನು, ಸುಪ್ಪಲ್ಗೆ–ಉಪ್ಪುಹಾಕಿದ ಖಾದ್ಯಕ್ಕೆ, ಚಾಕಣಕ್ಕೆ; ಕೆನ್ನೆತ್ತರಂ–ಕೆಂಪು ರಕ್ತವನ್ನು, ಕೆನೆಗೊಂಡು–ಕೆನೆಗಟ್ಟಿ, ಆರಿದ–ತಣ್ಣಗಾದ, ಪಾಲ್ಗೆ–ಹಾಲಿಗೆ; ಜೊಂಡೆಗರುಳಂ–ಶ್ಲೇಷ್ಮದಿಂದ ಕೂಡಿರುವ ಕರುಳನ್ನು, ಕರ್ಬಿಂಗೆ–ಕಬ್ಬಿಗ; ಲೆಕ್ಕಕ್ಕೆ ತಂದು–ಗಣನೆಗೆ ತಂದು, ಇನಿಸುಂ–ಸ್ವಲ್ಪವೂ, ಮಾಣದೆ–ನಿಲ್ಲದೆ, ಪೀರ್ದು ಪೀರ್ದು–ಹೀರಿ ಹೀರಿ, ನೊಣೆದು–ನುಂಗಿ, ಅಂತೆ–ಹಾಗೆ, ಈ ಮಾಳ್ಕೆಯಿಂ–ಈ ರೀತಿಯಿಂದ, ಭೀಮಸೇನನವೋಲ್–ಭೀಮಸೇನನಂತೆ, ಪೂಣ್ದುದಂ–ಪ್ರತಿಜ್ಞೆ ಮಾಡಿದ್ದನ್ನು, ಎಯ್ದೆ–ಚೆನ್ನಾಗಿ, ಪೂಣ್ದು–ಮಾಡಿ ಮುಗಿಸಿದ, ನೆರವೇರಿಸಿದ, ಪಗೆಯಂ–ಹಗೆತನವನ್ನು, ಕೊಂಡಾಡದಂ–ಹೊಗಳದವನು, ಗಂಡನೇ–ಶೂರನೇ, ಗಂಡುಸೇ? ಸುಪ್ಪಲ್ ಎಂಬುದು ಒಂದು ಅಪೂರ್ವ ಶಬ್ದ; ಉಪ್ಪು ಎಂಬ ತಮಿಳು ತೆಲುಗು ಕನ್ನಡ ಮಲೆಯಾಳ ತುಳು ಶಬ್ದಕ್ಕೆ ಉತ್ತರ ದ್ರಾವಿಡ ಭಾಷೆಗಳಲ್ಲಿ ಸುಪ್ಪು ಎಂದಿದೆ; ಉತ್ತರ ದ್ರಾವಿಡದ ಆದಿ ಸಕಾರ ದಕ್ಷಿಣ ದ್ರಾವಿಡದಲ್ಲಿ ಲೋಪವಾಗುವುದೆಂಬ ನಿಯಮದಂತೆ ಸುಪ್ಪು > ಉಪ್ಪು ಆಗುತ್ತದೆ; ಈ ಸುಪ್ಪು + ಅಲ್ ಎನ್ನುವುದು ಕನ್ನಡದಲ್ಲಿ ಇದೊಂದೆಡೆ ಉಳಿದು ಕೊಂಡಿದೆ; ಇದು ಬಹುಶಃ ಪ್ರಾಚೀನ ದ್ರಾವಿಡದ ಅವಶೇಷ. ಜೊಂಡೆ=ತೊಂಡೆ, ಶ್ಲೇಷ್ಮ; ಪೂಣ್–ತೊಡು, ಮೊಗಕ್ಕೆ ಸಿಕ್ಕು, ಬಳಸು, ಮೇಲ್ಕೊಳ್ಳುದಲ್ ಕೆಲಸಕ್ಕೆ ಮುಂತಾದುದನ್ನು ತನ್ನಮೇಲೆ ಎಳೆದುಕೊಳ್ಳುವುದು, ಉಳ್ಳುದಾಗು, ಸಿಕ್ಕಿಕೊಳ್ಳು, ಒಂಪಾಗಿ ಸೇರು ಎಂಬ ಅರ್ಥಗಳು ತಮಿಳಿನಲ್ಲಿವೆ; ಇವುಗಳಲ್ಲಿ ತೊಡು, ಧರಿಸು ಎಂಬುದರಿಂದ ಪ್ರತಿಜ್ಞೆಮಾಡು, ಮೇಲ್ಕೊಳ್ಳು ಎಂಬುದರಿಂದ ಜವಾಬುದಾರಿಯನ್ನು ಹೊತ್ತುಕೊ, ನಿರ್ವಹಿಸು, ನೆರವೇರಿಸು ಎಂಬರ್ಥಗಳು ಬೆಳೆದು ಬರಲು ಸಾಧ್ಯ.

ವಚನ: ಜರಾಸಂಧಾರಿಯ – ಭೀಮಸೇನನ; ಗಂಡವಾತಂ – ಪೌರುಷದ ಮಾತನ್ನು, ಸುದ್ದಿಯನ್ನು.

೧೬೧. ಪೊಲ್ಲದು ಪ್ರೊಣ್ಬು–ಕೆಟ್ಟದನ್ನು ಪ್ರತಿಜ್ಞೆ ಮಾಡಿ ಎಂದರೆ ದುಷ್ಟ ಪ್ರತಿಜ್ಞೆಯನ್ನು ಮಾಡಿ, ಪುಜ್ಜಟಿಯದೆ–ಕೇಡು ಉಂಟಾಗದೆ, ಊರ್ಜಿದ–ಗರ್ವಿತ ರಾದ, ಕೌರವರಂ–ಕೌರವರನ್ನು, ಪೊರಳ್ಚಿ–ನೆಲದ ಮೇಲೆ ಹೊರಳಿಸಿ, ಕೊಂದು-ಸಾಯಿಸಿ, ಇಲ್ಲಿಯೆ–ಇಲ್ಲಿಯೇ, ವೈರಿಶೋಣಿತಮಂ–ಹಗೆಯ ರಕ್ತವನ್ನು, ಈಂಟಿ-ಕುಡಿದು, ತದಂತ್ರದೆ–ಅವನ ಕರಳುಗಳಿಂದ, ಕೃಷ್ಣೆಗೆ–ದ್ರೌಪದಿಗೆ, ಧಮ್ಮಿಲ್ಲಮಂ-ತುರುಬನ್ನು, ಇಂಬಿನಿಂ–ಸೊಗಸಿನಿಂದ, ಮುಡಿಸಿ – ಸೂಡಿ, ಕೌರವನಾಯಕನ-ದುರ್ಯೋಧನನ, ಊರುಭಂಗಂ–ತೊಡೆಯನ್ನು ಮುರಿಯುವುದು, ಒಂದಲ್ಲದುದು–ಒಂದಲ್ಲದ್ದನ್ನು ಎಂದರೆ ಒಂದನ್ನು ಬಿಟ್ಟು, ಎಲ್ಲಮಂ–ಪ್ರತಿಜ್ಞೆಗಳನ್ನೆಲ್ಲ, ಓಳಿಯ-ಕ್ರಮವಾಗಿ, ನೆಱಪಿದೆಂ ಗಡ–ಪೂರೈಸಿದೆನಲ್ಲವೆ? ಎಲ್ಲರುಂ ಕೇಳಿ – ಎಲ್ಲರೂ ಕೇಳಿರಿ. "ಮುಕುಟ ತಾಡಿತಕ" ಎಂಬೊಂದು ನಷ್ಟ ನಾಟಕದಲ್ಲಿ ಇರುವುದೆಂದು ಹೇಳಲಾಗಿರುವ ಈ ಕೆಳಗಿನ ಪದ್ಯದೊಡನೆ ಇವನ್ನು ಹೋಲಿಸಬಹುದು:

ಧ್ವಸ್ತಾಃ ಕ್ಷುದ್ರಾಃ ಧಾರ್ತರಾಷ್ಟ್ರಾಃ ಸಮಸ್ತಾಃ
ಪೀತಂ ರಕ್ತಂ ಸಾಧು ದುಶ್ಶಾಸನಸ್ಯ ।
ಪೂರ್ಣಾ ಕೃಷ್ಣಾ ಕೇಶಬಂಧ ಪ್ರತಿಜ್ಞಾ
ತಿಷ್ಠತ್ಯೇಕಃ ಕೌರವಸ್ಯೋರು ಭಂಗಃ ॥

ವಚನ: ಕಾಲದಂಡಮಂ–ಯಮನ ದಂಡವನ್ನು.

೧೬೨. ಕರ್ಣನ ಮಗ ವೃಷಸೇನನ ಮರಣ: ದಡಿಗನ–ದಾಂಡಿಗನಾದ ಭೀಮನ, ಮಿೞ್ತುವಂ–ಮೃತ್ಯುವನ್ನು, ಮಿದಿದೊಡಲ್ಲದೆ–ಕುಟ್ಟಿಯಲ್ಲದೆ, ಮಾಣೆಂ–ಬಿಡೆನು, ಎಂದು, ಕೂರ್ಪು–ತೀಕ್ಷ್ಣತೆಯು, ಉಡುಗದೆ–ಕಡಿಮೆಯಾಗದೆ, ಬಂದು, ತಾಗೆ–(ವೃಷಸೇನನು) ಎದುರಿಸಲು, ಯಮಳರ್–ನಕುಲ ಸಹದೇವರು, ತಡೆಗೊಂಡೊಡೆ–ಅಡ್ಡಗಟ್ಟಿದರೆ, ತಾವುಂ–ತಾವೂ ಕೂಡ, ಎಮ್ಮೊಳಂ–ನಮ್ಮಲ್ಲಿಯೂ, ತೊಡರ್ದಪರ್–ಹೆಣಗುತ್ತಾರೆ, ಎಂದು, ಅವಂದಿರ–ಅವರ, ರಥಂಗಳಂ–ರಥಗಳನ್ನು, ಅಚ್ಚುಡಿಯೆಚ್ಚು–ಅಚ್ಚು ಮುರಿಯುವ ಹಾಗೆ ಹೊಡೆದು, ಭೀಮನಂ–ಭೀಮಸೇನನನ್ನು, ತಡೆಯದೆ–ತಡಮಾಡದೆ, ಮುಟ್ಟೆ – ಸಮೀಪಿಸಿ, ಪೆರ್ಚೆ–ಹೆಚ್ಚಳವನ್ನು, ತೋಱಲು, ಮುರಾಂತಕಂ–ಕೃಷ್ಣ, ಕಪಿಕೇತನನಂ–ಅರ್ಜುನನನ್ನು ಕುರಿತು, ನುಡಿದಂ–ಹೇಳಿದನು.

೧೬೩. ಇವನ–ವೃಷಸೇನನ, ಶರಕಲ್ಪಂ–ಬಾಣವಿದ್ಯೆ, ಇವನ ಅದಟು–ಇವನ ಪರಾಕ್ರಮ, ಇವನಳವು–ಇವನ ಶಕ್ತಿ, ಇವನಣ್ಮು–ಇವನ ಪೌರುಷ, ನಿನಗಂ–ನಿನಗಿಂತಲೂ, ಅಗ್ಗಳಂ–ಅಧಿಕವಾದದ್ದು; ಇವನಂ–ಇವನನ್ನು, ಪವನಸುತಂ–ಭೀಮಸೇನನು, ಗೆಲ್ಲಂ–ಗೆಲ್ಲನು ಎಂದರೆ ಗೆಲ್ಲಲಾರನು: ನೀಂ–ನೀನು, ಇವನೊಳ್–ಇವನಲ್ಲಿ, ಪೊಣರ್–ಯುದ್ಧಮಾಡು, ಎಂದೊಡೆ–ಎಂದು ಹೇಳಿದರೆ, ಅವನೊಳ್–ವೃಷಸೇನನಲ್ಲಿ, ಅರಿಗಂ–ಅರ್ಜುನನು, ಪೊಣರ್ದಂ–ಕಾದಿದನು.

೧೬೪. ಪೊಣರ್ಪೊಡಂ–ಕಾದಿದರೂ, ಅನುಪರಂ–ಯುದ್ಧವು, ಇವನೊಳ್–ಇವನಲ್ಲಿ (ಎಂದರೆ ಅರ್ಜುನನಲ್ಲಿ), ಎನಗೆ–ನನಗೆ, ನರನೊಳ್–ಅರ್ಜುನನಲ್ಲಿ, ತೊಣೆವೆತ್ತಪ್ಪುದು – ಸಮಾನತೆಯನ್ನು ಪಡೆಯುತ್ತದೆ, ಎಂದು – ಎಂದು ಹೇಳಿ, ಅಱಿಕೆಯ – ಪ್ರಸಿದ್ಧವಾದ, ಕೂರ್ಗಣೆಗಳೊಳೆ – ಹರಿತವಾದ ಬಾಣಗಳಲ್ಲಿಯೇ, ಪೂೞ್ದು–ಹೂಳಿ, ತನ್ನಳವು–ತನ್ನಶಕ್ತಿಯು, ಅಣಿಯರಂ–ಅತಿಶಯ, ಎಸೆ–ಎನ್ನಲು, ನಾಲ್ಕು ಶರದೆ–ನಾಲ್ಕು ಬಾಣಗಳಿಂದ, ಪಾರ್ಥನಂ–ಅರ್ಜುನನನ್ನು, ಎಚ್ಚಂ–ಹೊಡೆದನು.

೧೬೫. ಇಸೆ – ಪ್ರಯೋಗಿಸಲು, ನರರಥತುರಂಗಪುಂಗಳಂ – ಅರ್ಜುನನ ರಥದ ಕುದುರೆಗಳನ್ನು, ಮುತ್ತಿಮುಸಱಿ–ಸುತ್ತಲೂ ದಟ್ಟವಾಗಿ ಆವರಿಸಿಕೊಂಡು, ಪರಿಬಂಧಿಸಿದುವು – ಕಟ್ಟಿಬಿಟ್ಟವು ಎಂದರೆ ಗತಿಸ್ತಂಭನ ಮಾಡಿದುವು; ಅಂತು–ಹಾಗೆ, ಆರ್ದು–ಗರ್ಜಿಸಿ, ಎಸಗಲ್–ರಥವನ್ನು ನಡೆಸುವುದಕ್ಕೆ, ಪೊಣರಲ್–ಹೋರಾಡುವುದಕ್ಕೆ, ಮಿಡುಕಲ್ – ಅಲುಗಾಡುವುದಕ್ಕೆ, ಮಿಸುಕಲ್ – ಚಲಿಸುವುದಕ್ಕೆ, ಅವನ ಸರಲ್ಗಳ್–ವೃಷಸೇನನ ಬಾಣಗಳು, ಅಣಂ–ಸ್ವಲ್ಪವೂ, ಈಯವೆ ಆದುವು–ಅವಕಾಶವನ್ನು ಕೊಡದಾದವು.

೧೬೬. ಸ್ಯಂದನಬಂಧನಮೆಂಬುದಂ – ರಥದ ಗತಿ ಸ್ತಂಭನವೆಂಬುದನ್ನು, ಇಂದು–ಈದಿನ, ಈ ವೃಷಸೇನನಿಂದಂ–ಈ ವೃಷಸೇನನಿಂದ, ಅಱಿದೆಂ–ತಿಳಿದೆನು; ಇದಂ–ಇದನ್ನು, ಮುನ್ನೆ–ಮೊದಲು, ಎಂದುಂ–ಯಾವಾಗಲೂ, ಕಂಡಱಿಯೆಂ–ನೋಡಿ ತಿಳಿಯೆನು; ಇದರ್ಕೆ–ಇದಕ್ಕೆ, ಆಂ–ನಾನು, ಬೆಱಗಾದೆಂ ದಲ್–ಅಚ್ಚರಿಪಟ್ಟೆನು, ದಿಟವಾಗಿಯೂ; ಮುಕುಂದಾ–ಶ್ರೀಕೃಷ್ಣನೇ, ಎನಗೆ–ನನಗೆ, ಬೆಸಸು–ಮುಂದೇನು ಮಾಡಬೇಕೆಂಬುದನ್ನು ಹೇಳು.

೧೬೭. ಎನೆ–ಎನ್ನಲು, ಪರಶುರಾಮುನಿಂ–ಪರಶುರಾಮನಿಂದ, ಕರ್ಣನೆ–ಕರ್ಣನೇ, ಚಾಪವಿದ್ಯೆಯಂ–ಬಿಲ್ವಿದ್ಯೆಯನ್ನು, ಬಲ್ಲಂ–ತಿಳಿದವನು, ಕರ್ಣನಿಂ–ಕರ್ಣನಿಂದ, ಈತನೆ–ಇವನೇ, ಬಲ್ಲಂ–ತಿಳಿದವನು; ಇವನ ಸರಲ್ ಎನಿತು–ಇವನ ಬಾಣಗಳು ಎಷ್ಟೋ, ಅನಿತುಮಂ–ಅಷ್ಟನ್ನು, ಎಡೆವಿಡದೆ–ನಿರಂತರವಾಗಿ, ತಱಿದು–ಕತ್ತರಿಸಿ, ತಲೆಯಂ–ತಲೆಯನ್ನು, ತಱಿಯಾ–ಕತ್ತರಿಸು.

**ವಚನ :** ಅಳವಿಗೞಿಯೆ–ಅಳತೆ ಮೀರಿ, ವಿಶೇಷವಾಗಿ; ಪುದುಂಗೊಳಿಸಿದ–ಒತ್ತಾಗಿ ದಟ್ಟವಾಗಿ ಬೆಳೆದ, ಬಿದಿರ ಸಿಡುಂಬಂ–ಬಿದಿರ ಮೆಳೆಯನ್ನು, ಪೋಡುಂಗಾಱನಂತೆ–ಕಾಡನ್ನು ಕತ್ತರಿಸುವವನಂತೆ; ಪರಶು–ಕೊಡಲಿ; ಅಸಿಧೇನು–ಕತ್ತಿ; ತೋಡುಂಬೀಡಿಂಗಂ–ಬಾಣ ಸಂಧಾನಕ್ಕೂ ಮೋಚನಕ್ಕೂ; ರಥಮನೆಸಗುವ–ರಥವನ್ನು ನಡೆಸುವ, ಕೆಯ್ಗಂ–ಕೈಗಳಿಗೂ ಎಂದರೆ ಕೈಗಳನ್ನಾಡಿಸುವುದಕ್ಕೂ, ಎಡೆಮಾಡಿ–ಅವಕಾಶವನ್ನು ಉಂಟುಮಾಡಿ;

೧೬೮. ವಿನಾಯಕಂ – ಗಣೇಶನು, ತನಗೆ, ದಯೆಯಿಂ–ಕರುಣೆಯಿಂದ

ಇತ್ತ–ಕೊಟ್ಟ, ಜಯಾಸ್ತ್ರಮಂ–ಜಯವೆಂಬ ಬಾಣವನ್ನು, ಭೋಂಕನೆ–ಬೇಗನೆ, ದೊಣೆಯಿಂ–ಬತ್ತಳಿಕೆಯಿಂದ, ಉರ್ಚಿಕೊಂಡು–ಸೆಳೆದುಕೊಂಡು, ಶರಾಸನದೊಳ್,–ಬಿಲ್ಲಿನಲ್ಲಿ, ಅಂತು–ಹಾಗೆ, ಅದಂ–ಅದನ್ನು, ಆಗಡೆ–ಆಗಲೇ, ಪೂಡಿ–ಸಂಧಾನಮಾಡಿ, ಧಾತ್ರಿ–ಭೂಮಿಯು, ತಿಱ್ರನೆ–ಗಿರ್ರೆಂದು, ತಿರಿವನ್ನೆಗಂ–ಸುತ್ತುತ್ತಿರಲು, ತೆಗೆದು–ಬಿಲ್ಲಿನ ಹೆದೆಯನ್ನು ಎಳೆದು, ಕಂಧರ ಸಂಧಿಯಂ–ಕೊರಳ ಕೀಲನ್ನು, ಎಯ್ದೆ ನೋಡಿ–ಚೆನ್ನಾಗಿನೋಡಿ, ಗುರಿಯಿಟ್ಟು, ತೊಟ್ಟನೆ–ಬೇಗನೆ, ನರಂ–ಅರ್ಜುನ, ಎಚ್ಚೊಡೆ–ಹೊಡೆದರೆ, ವೈರಿಶಿರಸ್ಸರೋರುಹಂ–ಹಗೆಯ ತಲೆಯೆಂಬ ಕಮಲವು, ಉಚ್ಚಳಿಸಿ–ಮೇಲಕ್ಕೆ ಹಾರಿ, ಬಿಜ್ದುದು–ಬಿತ್ತು.

೧೬೯. ಅಂತೆ–ಹಾಗೆ, ಅತ್ತ–ಅತ್ತಕಡೆಗೆ, ಪರಿದ–ಓಡಿದ, ತಲೆಯನದಂ–ಆ ತಲೆಯನ್ನು, ಸುರಗಣಿಕೆಯರ್ – ದೇವಸ್ತ್ರೀಯರು, ತಂದು – ತೆಗೆದುಕೊಂಡ್ ಬಂದು, ಅಟ್ಟೆಯೊಳ್–ಮುಂಡದಲ್ಲಿ, ಅಮರ್ಚಿ–ಸೇರಿಸಿ, ಅಭ್ರಾಂತದೊಳೆ–ಮೋಡಗಳ ನಡುವೆಯೇ, ತಮ್ಮ ವಿಮಾನಾಂತರದೊಳಗಿಟ್ಟು–ತಮ್ಮ ವಿಮಾನದೊಳಗೆ ಇಟ್ಟು, ಕರ್ಣತನಯನಂ–ಕರ್ಣನ ಮಗ ವೃಷಸೇನನನ್ನು, ಉಯ್ದರ್–ಒಯ್ದರು.

ವ್ಯಾಸಭಾರತದಲ್ಲಿ ವೃಷಸೇನನ ವಧೆಯ ಪ್ರಸಂಗ ಬೇರೆ ರೀತಿಯಲ್ಲಿದೆ. ವೃಷಸೇನನ ರಥಕಲ್ಪದ ಮಹಿಮೆಯಾಗಲಿ, ಆದರಿಂದ ಆವನು ರಥಸ್ತಂಭನವನ್ನು ಮಾಡಿದ್ದಾಗಲಿ, ಅರ್ಜುನ ಆಚ್ಚರಿಪಟ್ಟುದಾಗಲಿ, ಮುಕುಂದನ ಸಲಹೆಯನ್ನು ಕೇಳಿ ಪಡೆದದ್ದಾಗಲಿ, ವಿನಾಯಕಾಸ್ತ್ರದಿಂದ ಅವನ ತಲೆಯನ್ನು ಕತ್ತರಿಸಿದ್ದಾಗಲಿ, ಅವನನ್ನು ಸುರಸ್ತ್ರೀಯರು ಸ್ವರ್ಗಕ್ಕೆ ಒಯ್ದುದ್ದಾಗಲಿ–ಯಾವುದೂ ಅಲ್ಲಿಲ್ಲ. ಆರಕ್ತ ನೇತ್ರನಾದ ಅರ್ಜುನ ಕರ್ಣ ದುರ್ಯೋಧನ ಅಶ್ವತ್ಥಾಮಾದಿಗಳನ್ನು ಕೂಗಿ ಕರೆಯುತ್ತ ನಿಮ್ಮೆದುರಿಗೇ ವೃಷಸೇನನ್ನು ಕೊಲ್ಲುತ್ತೇನೆ ಎಂದು ಹೇಳುತ್ತ "ಸಸರ್ಜ ಬಾಣಾನ್ ವಿಶಿಖಾನ್ ಮಹಾತ್ಮಾ, ವಧಾಯ ರಾಜನ್ ಕರ್ಣಸುತಸ್ಯ ಸಂಖ್ಯೇ। ವಿವ್ಯಾಧ ಚೈನಂ ದಶಭಿಃ ಪೃಷತ್ಕೈಃ ಮರ್ಮಸ್ವಶಂಕಂ ಪ್ರಹಸನ್ ಕಿರೀಟೀ ॥ ಚಿಚ್ಛೇದ ಚಾಸ್ಯೇಷ್ವಸನಂ ಭುಜೌ ಚ, ಕ್ಷುರೈಶ್ಚತುರ್ಭಿರ್ನಿಶಿತೈಃ ಶಿರಶ್ಚ । ಸ ಪಾರ್ಥ ಬಾಣಾಭಿಹತಃ ಪಪಾತ, ರಥಾದ್ ವಿಬಾಹುಃ ವಿಶಿರಾ ಧರಾಯಾಂ ॥" ಇಷ್ಟೇ ಅಲ್ಲಿರುವುದು.

**ವಚನ :** ಅಂತಕನ–ಯಮನ, ಅಣಲೊಳ್–ಗಂಟಲಿನಲ್ಲಿ, ಅಡಸಿ–ತುರುಕಿ.

೧೭೦. ಮಗನ ಅಱಲ್ ಒಂದು–ಮಗನು ಸತ್ತ ದುಃಖವೊಂದು ; ಭೂಪತಿಯ ತಮ್ಮನೊಳ್–ದುಶ್ಶಾಸನನಲ್ಲಿ (ಅವನ ಸಾವಿನಲ್ಲಿ), ಆದ–ಉಂಟಾದ, ಅಱಲೊಂದು–ದುಃಖವೊಂದು, ನೊಂದು ಬಿನ್ನಗೆ ಮೊಗದಿಂದೆ ಕುಂದಿ–ವ್ಯಥೆಪಟ್ಟು ಮೌನದಿಂದಿರುವ ಮುಖದಲ್ಲಿ ಕಳೆಗುಂದಿ, ಫಣಿಕೇತನಂ–ದುರ್ಯೋಧನ, ಇರ್ದ–ಇದ್ದ, ಅಱಲೊಂದು–ದುಃಖವೊಂದು, ಈ ಮೂರು, ತನ್ನಂ–ತನ್ನನ್ನು, ಆವಗೆಯ – ಮಡಕೆ ಸುಡುವ ಒಲೆಯ, ಉರಿ–ಬೇಗೆ, ಅಱ್ವವೋಲ್ – ಸುಡುವಹಾಗೆ,

ಅಳುರೆ–ವ್ಯಾಪಿಸಲು, ತನ್ನ, ನೆಗೞ್ತೆಗೆ–ಕೀರ್ತಿಗೆ, ಮುಯ್ಪನಾಂತು–ಹೆಗಲನ್ನು ಹೊತ್ತು (ಎಂದರೆ ಹೆಗಲನ್ನು ನೋಡಿಕೊಂಡು); ಮುಂ–ಹಿಂದಿನ ಕಾಲದಲ್ಲಿ, ಪೊಗೞಿಸಿ–ಹೊಗಳಿಸಿಕೊಂಡು, ಬೞ್ದುದಂ–ಬಾಳಿದ್ದನ್ನು, ನೆನೆದು–ಜ್ಞಾಪ್ತಿಗೆ ತಂದು ಕೊಂಡು, ಕರ್ಣಂ–ಕರ್ಣನು, ಅಸುಂಗೊಳೆ–ಅರ್ಜುನನ ಪ್ರಾಣಾಪಹಾರ ಮಾಡಲು, ಬಂದು–ಎದುರಾಗಿ ಬಂದು, ತಾಗಿದಂ–ಸಂಘಟ್ಟಿಸಿದನು.

೧೭೧. ಬಧಿರಿತ ಸಮಸ್ತ ದಿಕ್ತಟಂ–ಕಿವುಡು ಮಾಡಲ್ಪಟ್ಟ ಎಲ್ಲಾ ದಿಕ್ಪ್ರದೇಶ ಗಳುಳ್ಳ, ಅಧರಿತ ಸರ್ವೇಭ್ಯಗರ್ಜಿತಂ–ಕೀಳ್ಮಾಡಲ್ಪಟ್ಟ ಎಲ್ಲಾ ಆನೆಗಳ ಘೀಂಕಾರ ವನ್ನುಳ್ಳ, ಕ್ಷುಭಿತಾಂಭೋನಿಧಿ ಸಲಿಲಂ–ಕದಡಲ್ಪಟ್ಟ ಸಮುದ್ರದ ನೀರುಗಳನ್ನುಳ್ಳ, ಧುರ ವಿಧಾನ ಪಟುಪಟಹ ಕಹಳ ಭೇರೀರಭಸಂ–ಯುದ್ಧಕ್ರಮದಲ್ಲಿ ಸಮರ್ಥವಾದ ತಮ್ಮಟೆ ಕಹಳೆ ಭೇರೀವಾದ್ಯಗಳ ರಭಸವು, ಪರೆದುದು–ವ್ಯಾಪಿಸಿತು. ಈ ಪದ್ಯದಲ್ಲಿ ಬರುವ ಪವರ್ಗಾಕ್ಷರಗಳ ಮತ್ತು ಮಹಾಪ್ರಾಣಗಳ ವಿನ್ಯಾಸ ವಾದ್ಯಗಳ ಗಡಾ ಪಣೆಯನ್ನು ಓದಿದ ಮಾತ್ರದಿಂದಲೇ ಅನುಭವಕ್ಕೆ ಗೋಚರವಾಗಿಸುತ್ತದೆ.

೧೭೨. ಧುರದೊಳ್ – ಯುದ್ಧದಲ್ಲಿ, ಹರಿಯುಂ ಶಲ್ಯನುಂ – ಕೃಷ್ಣನೂ, ಶಲ್ಯನೂ, ನರನ ದಿನಪತನಯನ–ಅರ್ಜುನನ ಮತ್ತು ಕರ್ಣನ, ರಥಮಂ–ರಥ ಗಳನ್ನು, ಆದರದಿಂ–ಆಸಕ್ತಿಯಿಂದ, ಜೋದಿಸೆ–ಹಾಯಿಸಲು, ಆದಿತ್ಯನ ಸಾರಥಿ– ಸೂರ್ಯನ ಸಾರಥಿ, ಅರುಣ, ಬೆಜಗಾದಂ–ಅಚ್ಚರಿಪಟ್ಟನು; ಮಾತಾಳಿ–ಮಾತಿನ ಮಲ್ಲನು ಎಂದರೆ ಇಂದ್ರನ ಸಾರಥಿ ಮಾತಲಿ, ಮಾತುಗೆಟ್ಟಂ–ಮೂಕನಾದನು; ಇಲ್ಲಿ ಮಾತಲಿಗೆ ಮಾತಾಳಿಯೆಂದು ಮಾಡಿರುವ ಪ್ರಯೋಗ ರಮ್ಯವಾಗಿದೆ.

ವಚನ: ಒರ್ವರೊರ್ವರಂ–ಒಬ್ಬರೊಬ್ಬರನ್ನು; ಮುಟ್ಟೆವಂದಲ್ಲಿ–ಸಮೀಪಿಸಿ ದಾಗ,

೧೭೩. ಇಲ್ಲಿಂದ ಕರ್ಣಾರ್ಜುನರ ಕಾಳಗ; ಕರ್ಣನ ಸೂರ್ಯಲೋಕ ಪ್ರಾಪ್ತಿ; ನಿನ್ನಂ–ನಿನ್ನನ್ನು, ದುರ್ಯೋಧನ–ದುರ್ಯೋಧನನು, ಪಿರಿದು ಪೊರೆದಂ–ಹಿರಿದಾಗಿ ಸಲಹಿದನು; ನಿನಗೆ, ಎನ್ನೊಳಂ–ನನ್ನಲ್ಲಿಯೂ, ಕಲುಷಂ–ದ್ವೇಷವು, ಪಿರಿದು– ಹಿರಿದು; ಕರ್ಣಂಗೆ–ಕರ್ಣನಿಗಾಗಿ, ಭಾರತಂ–ಭಾರತ ಯುದ್ಧವು, ಒಡ್ಡಿತ್ತು– ಚಾಚಿತು, ಏರ್ಪಟ್ಟಿತು; ನಿನಗಂ–ನಿನಗೂ, ಏಂ ಬೆಸಂ ಪಿರಿದು–ಯುದ್ಧ ಕಾರ್ಯ ವೇನು ಹಿರಿದು? ರಾಗಂ ಮಿಕ್ಕಿರ್ದ–ಪ್ರೀತಿ ಅತಿಶಯವಾಗಿದ್ದ, ಅಗುರ್ವಿನಸೂನು– ಪ್ರಚಂಡನಾದ ಮಗ, ನಿರ್ನೆರಂ–ನಿಷ್ಕಾರಣವಾಗಿ, ಅೞಿಯೆಯುಂ–ಸತ್ತರೂ, ನೋಡುತ್ತೆ – ನೋಡುತ್ತ, ಇಂತು – ಹೀಗೆ, ಇರ್ದೆ–ಇದ್ದೆ; ಇರ್ಪುದು–ಹಾಗೆ ಇರುವುದು, ಪಾೞಿಯೇ–ಧರ್ಮವೇ?

೧೭೪. ಎನ್ನ ಪೆಸರ್ಗೇಳ್ದು–ನನ್ನ ಹೆಸರನ್ನು ಹೇಳಿ, ಸೈರಿಸದಂ–ಸಹಿಸದವನು, ನಯದೆ–ನಯದಿಂದ ಎಂದರೆ ನಯ ಭಾವದಿಂದ, ಈಗಳ್–ಈಗ, ಎನ್ನರೂಪಂ ಕಂಡುಂ–ನನ್ನ ಮೂರ್ತಿಯನ್ನು ನೋಡಿಯೂ, ನಿನ್ನರಸನ–ನಿನ್ನ ದೊರೆ ದುರ್ಯೋ

ಧನನ, ಅಣುಗದಮ್ಮನ–ಪ್ರೀತಿ ಪಾತ್ರನಾದ ದುಶ್ಶಾಸನನ, ನಿನ್ನತನೂಭವನ–ನಿನ್ನ ಮಗನ, ಸಾವುಗಂಡುಂ–ಸಾವನ್ನು ನೋಡಿಯೂ, ಎಂತು ಪೂಣ್ಬಾ–ಹೇಗೆ ತಡಮಾಡುವೆ ?

೧೭೫. ಭಯಮೇಕಕ್ಕುಂ–ಭಯವು ಏಕಾಗುತ್ತದೆ ? ಅದೆಂತುಟು–ಅದು ಹೇಗಿದೆ ? ಎಂದು–ಎಂಬುವಾಗಿ, ಅದಟುಮಂ–ಪರಾಕ್ರಮವನ್ನು, ಪೆರ್ಮಾತುಮಂ–ದೊಡ್ಡ ಮಾತುಗಳನ್ನು, ಈ ಭೂತಧಾತ್ರಿಯೊಳ್–ಈ ಸಚರಾಚರ ಭೂಮಿಯಲ್ಲಿ, ಮುನ್ನೆ – ಮೊದಲು, ಓರಂತೆ – ಕ್ರಮವಾಗಿ, ನೆಗಟ್ಚಿ – ಮಾಡಿಯಾಡಿ, ಬಟಿಯಂ–ಅನಂತರ, ಕಾನೀನ–ಕರ್ಣನೇ, ನೀಂ–ನೀನು, ಈ ಮಹಾಜಿಯೊಳ್–ಈ ಮಹಾ ಯುದ್ಧದಲ್ಲಿ, ಎನಗಂಜಿ–ನನಗೆ ಹೆದರಿ, ಇಂತೇಂ ಪೂಣ್ದೆ–ಹೀಗೆ ಏನು ತಡಮಾಡಿದೆ ? ಪೆಜತೇಂ – ಬೇರೇನು ? ಪೋ – ಹೋಗು ! ಅಣ್ಣ–ಅಣ್ಣನೇ, ಮಾತು ಲೇಸು–ಮಾತು ಚೆನ್ನಾಗಿದೆ, ಸೆಟ್ಟಿಯ ಬಳ್ಳಂ ಕಿಱಿದು–ಸೆಟ್ಟಿಯ ಅಳತೆಯ ಬಳ್ಳ ಚಿಕ್ಕದು ; ಎಂಬುದೊಂದು–ಎಂಬ ಒಂದು, ನುಡಿಯಂ–ಗಾದೆಯನ್ನು, ನೀಂ – ನೀನು ನಿಕ್ಕುವಂ – ನಿಜವನ್ನಾಗಿ, ಮಾಡಿದಯ್–ಮಾಡಿದೆ.

೧೭೬. ಪೆಸರೆಸೆಯೆ–ಹೆಸರು ಪ್ರಕಾಶವಾಗಲು, ಬೀರಮಂ–ಶೌರ್ಯವನ್ನು, ಪಾಡಿಸಿಯುಂ–ಹಾಡಿಸಿಯೂ, ಪೊಗೞಿಸಿಯುಂ–ಹೊಗಳು ಭಟ್ಟರಿಂದ ಹೇಳಿಸಿಯೂ, ಉರ್ಕಿ ಬಿಟ್ಟು–ಔದ್ಧತ್ಯದಿಂದ ಹೊರಳಾಡಿ, ಆಹವದೊಳ್–ಯುದ್ಧದಲ್ಲಿ, ಕುಸಿದು–ಕುಗ್ಗಿ, ಪೆಱಪಿಂಗೆ–ಹಿಂಜರಿಯಲು, ಪೇೞ್–ಹೇಳು, ಮಾನಸರ್–ಮನುಷ್ಯರು, ಇನ್ನೂಱು ವರ್ಷಮಂ–ಇನ್ನೂರು ವರ್ಷಗಳನ್ನು, ಏಂ ಬಟ್ಟಿಪರೇ–ಏನು ಬದುಕುತ್ತಾರೆಯೇ ?

ವಚನ : ನೃಪ ಪರಮಾತ್ಮನ – ಅರ್ಜುನನ ; ಪಾಟಿಯ–ಧರ್ಮದ ; ಪಸುಗೆಯ–ವಿವೇಕದ ; ಪರಮಾರ್ತನಾಗಿ–ಅತ್ಯಂತ ವ್ಯಾಕುಲಿತನಾಗಿ ; ಉದ್ಘಾಟಿಸಿ ನುಡಿದೊಡೆ–ತೆರೆದು ಎಂದರೆ ಪ್ರಕಟವಾಗಿ ಮಾತಾಡಿದರೆ ; ಉಮ್ಮಚ್ಚದೊಳ್–ಕೋಪದಲ್ಲಿ ; ಮೆಚ್ಚದೆ–ಮೆಚ್ಚಿಕೊಳ್ಳದೆ ; ದರಹಸಿತ–ಅರೆ ನಗುವಿನಿಂದ ಕೂಡಿದ ; ದಶಶತಕರತನೂಜಂ–ಸೂರ್ಯನ ಮಗ ಕರ್ಣ

೧೭೭. ಎಳೆಯಂ–ನೆಲವನ್ನು, ರಾಜ್ಯವನ್ನು, ಮುಂ–ಮೊದಲು, ಕೋಳ್ಪಟ್ಟುಂ–ಇತರರ ಹಿಡಿತಕ್ಕೆ ಒಳಪಡಿಸಿಯೂ ; ಬಳೆದೊಟ್ಟುಂ–ಬಳೆಯನ್ನು ತೊಟ್ಟೂ, ಮುಟ್ಟುಗೆಟ್ಟುಂ–ನಿರಾಯುಧರಾಗಿಯೂ, ಇರ್ದು–ಇದ್ದು, ಈಗಳ್–ಈಗ, ಬಳ್ಳಿಳನೆ ನುಡಿದಪುದೆ–ಅತಿಯಾಗಿ ಮಾತಾಡುವುದೆ ? ನುಡಿವಂತೆ–ಮಾತಾಡುವಂತೆ, ಅಳಪುಂ–ಶಕ್ತಿಯೂ, ಪೆರ್ಮಾತುಂ–ದೊಡ್ಡ ಮಾತುಗಳೂ, ಆಯಮುಂ–ಹೆಚ್ಚಳವೂ, ನಿನಗಾಯ್ತೇ–ನಿನಗೆ ಆಯಿತೇ ? ಕೋಳ್ಪಡು–ಇತರರ ಆಕ್ರಮಣಕ್ಕೆ ಸಿಕ್ಕು ; ಕೋಳ್ >ಕೋಳ್ + ಪಡು ; "ಮಹಾರಾಜಾ, ಆಂ ಬತ್ತಲೆ ಸವಣರಿಂದಂ ಕೋಳ್ಪಟ್ಟೆಂ,

ಎನ್ನ ಮಗಳ್ ನಾಗಶ್ರೀಯಂ ತನ್ನ ಮಗಳೆಂದು ಕೈಕೊಂಡಿರ್ದರ್'' ಎಂದು ಪ್ರಯೋಗ (ವಡ್ಡಾ! ೨೩).

೧೭೮. ಮದೀಯನಾಥಂ–ನನ್ನ ರಾಜ ದುರ್ಯೋಧನ, ನಿಮ್ಮಂ–ನಿಮ್ಮನ್ನು ಏೞ್ಪಟ್ಟಂ–ವರ್ಷಗಳ ಅವಧಿಯ ಕಟ್ಟುಪಾಡಿನಿಂದ, ಎೞಿದು–ಸೆಳೆದು, ನಾೞ್ಕಡಿಗಟ್ಟದೊಡೆ–ನಾಡಗಡಿಯಿಂದ ದೂರ ಹೋಗಿಸಿದರೆ, ಬೇರಂ ಬಿೞಿಕ್ಕೆಯುಸ್–ಬೇರನ್ನೂ ಬಿಕ್ಕೆ ಕಾಯನ್ನೂ, ತಿಂದದೆವಸದೊಳ್–ತಿಂದ ದಿನಗಳಲ್ಲಿ, ಅೞಿಪ್ಪಿಡಿದ–ನಾಶವಾದ, ಬೀರಂ–ಶೌರ್ಯ, ಈಗಳ್–ಈಗ, ಏಂ ಪೊಸತಾಯ್ತೇ–ಏನು ಹೊಸದಾಗಿ ಆಯಿತೇ? ಏೞ್ಪಟ್ಟ < ಏಡು + ಕಟ್ಟು ; ಏಡು = (ತ) ಯಾಣ್ಡು, ಆಣ್ಡು = (ತೆ) ಏಡು = (ಕೊಡ) ಆಣ್ಡಿ–ವರ್ಷ. ಈ ಅರ್ಥದಲ್ಲಿ ಯಾಂಡು ಎಂಬ ಶಬ್ದ ಕೆಲವು ಶಾಸನಗಳಲ್ಲಿ ದೊರೆಯುತ್ತದೆ (ನಂಜನಗೂಡು ೧೬೪, ಶಕ ೯೫೩) ; ಮೊನೆಯೇಡು ಎಂಬ ಶಬ್ದ (ಶಮದ ೩೩೭) ಕಾಲವಾಚಿಯಾದದ್ದು ; ಅಲ್ಲಿರುವ ಎರಡನೆಯ ಶಬ್ದ ಏಡು ಎಂಬುದು ವರ್ಷವಾಚಿ ಎಂದು ತೋರುತ್ತದೆ. ಈ ಪದ್ಯವನ್ನು (ಗದಾ. ೭–೩೮) ರೊಡನೆ ಹೋಲಿಸಬಹುದು.

೧೭೯. ಮತ್ತನಯನ–ನನ್ನ ಮಗನ, ಅರಸನನುಜನ–ನನ್ನ ರಾಜನ ತಮ್ಮ ದುಶ್ಶಾಸನನ, ಸತ್ತ–ಮರಣವನ್ನು ಹೊಂದಿದ, ಅೞಲಂ–ದುಃಖವನ್ನು, ನಿನ್ನೊಳ್–ನಿನ್ನಲ್ಲಿ, ಅಱಸಲೆಂದು – ಹುಡುಕಬೇಕೆಂದು, ಇರ್ದೆಂ–ಇದ್ದೆನು ; ಬೆಳ್ಕುತ್ತು–ಹೆದರಿ, ಇರ್ದೆನಪ್ಪೊಡೆ–ಇದ್ದೆನಾದರೆ, ಏ ತೊದಳ್–ಏನು ಸುಳ್ಳು, ಇತ್ತಣ–ಇತ್ತ ಕಡೆಯ, ದಿನನಾಥಂ–ಸೂರ್ಯ, ಇತ್ತ–ಇತ್ತಕಡೆ, ಮೂಡುಗುಮಲ್ತೇ–ಹುಟ್ಟುತ್ತಾನೆಯಲ್ಲವೇ?

೧೮೦. ಕಸವರದ–ಚಿನ್ನದ, ಸವಿಯುಮಂ–ರುಚಿಯನ್ನೂ, ಭಯರಸಕದ ಸವಿಯುಮಂ–ಭೀತಿಭಾವದ ರುಚಿಯನ್ನೂ, ಅದೆಂತು–ಅದು ಹೇಗೂ, ಆನಱಿಯದುದಂ–ನಾನು ತಿಳಿಯದುದನ್ನು, ವಸುಮತಿ–ಭೂಮಿಯು, ಲೋಕವು, ಅಱಿವುದು –ತಿಳಿಯುತ್ತದೆ ; ನೀಂ–ನೀನು, ಪುರುಡಿಸಿ–ಮತ್ಸರಿಸಿ, ನುಡಿದೊಡೆ–ಆಡಿದರೆ, ನಿನ್ನ ನುಡಿದ ಮಾತು–ನೀನು ಹೇಳಿದ ಮಾತು, ಏಱುಗುಮೇ–ಏರುತ್ತದೆಯೇ? ಎಂದರೆ ವೃದ್ಧಿಯಾಗುತ್ತದೆಯೇ ; ಕರ್ಣ ದಾನಶೂರನಾಗಿದ್ದುದರಿಂದ ತನ್ನ ಐಶ್ವರ್ಯದ ಸವಿಯನ್ನು ತಾನು ಅನುಭವಿಸಲಿಲ್ಲ. ಇತರರಿಗೆ ಕೊಡುವುದರಲ್ಲಿಯೇ ಅವನಿಗೆ ಸಂತೋಷ ; ಸ್ವಾರ್ಥಕ್ಕಾಗಿ ಅದನ್ನು ಬಳಸಲಿಲ್ಲ ; ಹೀಗೆಯೇ ಅವನ ಶೂರತನಕ್ಕೆ ಭಯವು ಅಪರಿಚಿತವಾಗಿತ್ತು ಎಂದು ಪದ್ಯದ ತಾತ್ಪರ್ಯ. ಲೋಕಕ್ಕೆ ತಿಳಿದಿರುವ ಈ ವಿಷಯವನ್ನು ಅರ್ಜುನ ಕಡೆಗಣಿಸಿ ಮಾತನಾಡಿದರೆ ಅವನ ಮಾತಿಗೆ ಬೆಲೆ ಬರುತ್ತದೆಯೆ?

೧೮೧. ಒಡಲುಂ ಪ್ರಾಣಮುಂ–ದೇಹವೂ ಪ್ರಾಣವೂ, ಎಂಬ ಇವು, ಕಿಡಲ್ ಆದುವು–ನಾಶವಾಗುವುದಕ್ಕೆ ಹುಟ್ಟಿದವು ; ಜಸಂ–ಕೀರ್ತಿ, ಅದೊಂದೆ–

ಅದೊಂದೇ, ಕಿಡದು–ಹಾಳಾಗದು ; ಅದಂ–ಅದನ್ನು, ಆಂ–ನಾನು, ಬಲ್ಪಿಡಿವಿಡಿದು –ಬಲವಾದ ಮುಷ್ಟಿಯಿಂದ ಹಿಡಿದುಕೊಂಡು, ಸೆಗಟ್ಟೆಂ–ನಡೆಸೆನು ; ಉಱದ– ಮಿಕ್ಕ, ಅಱವಡೆಮಾತಂ–ಹೀನವಾದ ಸುದ್ದಿಯನ್ನು, ಮಾಡಿ–ಹುಟ್ಟಿಸಿ, ನೀನೆ– ನೀನೇ, ಕೆಮ್ಮನೆ–ಸುಮ್ಮನೆ, ನುಡಿವಯ್–ಮಾತಾಡುತ್ತೀಯೆ ?

೧೮೨. ಪುಟ್ಟುವುದು – ಹುಟ್ಟುವುದು, ಬಿದಿವಸದಿಂದೆ – ದೈವವಶದಿಂದ ; ಬಿದಿ – ವಿಧಿಯು, ಪುಟ್ಟಿಸುವಂ – ಹುಟ್ಟಿಸುತ್ತಾನೆ ; ಪುಟ್ಟಿದಂದು – ಹುಟ್ಟಿದಾಗ, ಇವಂಗೆ–ಇವನಿಗೆ, ಬಿಯಂ–ವೆಚ್ಚ (ಐಶ್ವರ್ಯ), ಇದು ; ಇವಂಗೆ–ಇವನಿಗೆ, ಒಳ್ಪು– ಮಂಗಳವು, ಇದು ; ಇವಂಗೆ–ಇವನಿಗೆ, ವಿನೋದಂ – ಸಂತೋಷವು, ಇದು ; ಇವಂಗೆ–ಇವನಿಗೆ, ಸಾವ ಪಾಂಗು–ಸಾಯುವ ರೀತಿ, ಇದು ; ಇವಂಗೆ–ಇವನಿಗೆ, ಪಡೆಮಾತು–ಜನಜನಿತವಾದ ಮಾತು ಎಂದರೆ ಕೀರ್ತಿ ಇದು ; ಪರಾಕ್ರಮಂ– ಪ್ರತಾಪವು, ಇದು ; ಎಂಬುದಂ–ಎಂದು ಹೇಳುವುದನ್ನು, ಎಲ್ಲ ಮಾಱ್ಕೆಯಿಂ– ಎಲ್ಲ ರೀತಿಗಳಿಂದಲೂ, ಬಿದಿ–ದೈವ, ಸಮಕಟ್ಟಿ–ಏರ್ಪಡಿಸಿ, ಕೊಟ್ಟೊಡೆ–ಕೊಟ್ಟರೆ, ಎಡೆಯೊಳ್–ನಡುವೆ, ಕಿಡಿಸಲ್–ಕೆಡಿಸುವುದಕ್ಕಾಗಲಿ, ಕುಡಿಸಲ್–ಕೊಡಿಸುವುದ ಕ್ಕಾಗಲಿ, ಆರ್ ಸಮರ್ಥರ್–ಯಾರು ಶಕ್ತರು ? ಈ ಪದ್ಯದಲ್ಲಿ ಕರ್ಣನ ಜೀವನ ಸಿದ್ಧಾಂತವನ್ನು ಪಂಪ ಮನೋಜ್ಞವಾಗಿ ನಿರೂಪಿಸಿದ್ದಾನೆ : ಮನುಷ್ಯನ ಆಗು ಹೋಗುಗಳೆಲ್ಲ ದೈವಾಯತ್ತ ; ಅವನು ಹುಟ್ಟುವಾಗಲೇ ಅವನ ಇತಿ ಮಿತಿಗಳನ್ನು ದೈವ ನಿರ್ಧರಿಸುತ್ತದೆ; ಅವನ್ನು ಕೆಡಿಸುವುದಕ್ಕಾಗಲಿ, ಇನ್ನೊಬ್ಬರಿಂದ ಪಡೆಯು ವುದಾಗಲಿ ಸಾಧ್ಯವಿಲ್ಲ. ಇದು ದೈವವಾದ. ಕರ್ಣನ ಜೀವನಕ್ಕೆ ಈ ದೈವವಾದ ವನ್ನು ಅನ್ವಯಗೊಳಿಸಿ ಭಾವಿಸಿದರೆ ಅವನ ಬಾಳು ದಾರುಣವಾದ ಕರುಣ ಕಥೆಯೆಂಬುದು ವೇದ್ಯವಾಗುತ್ತದೆ. ಅದರಲ್ಲಿ ನಮ್ಮ ಅನುಕಂಪೆ ತುಂಬಿ ಹರಿಯುತ್ತದೆ.

೧೮೩. ಎಂದು–ಎಂದುಹೇಳಿ, ಅಮ್ಮ–ಅಪ್ಪನೇ, ಈ ಬಾಯ್ವಾತಿನೊಳ್– ಈ ಬಾಯ್ಮಾತುಗಳಲ್ಲಿ, ಏವಂದಪುದು–ಏನು ಬರುತ್ತದೆ ಎಂದರೆ ಏನು ಪ್ರಯೋಜನ ? ಆಣ್ಮೆ–ಪೌರುಷವನ್ನು ತೋರಿಸಿ, ಕಾದುಕೊಳ್–(ನಿನ್ನನ್ನು ನೀನು) ರಕ್ಷಿಸಿಕೋ ; ಎನುತಂ–ಎನ್ನುತ್ತ, ಭೋರೆಂದು–ಭೋರೆಂದು ಶಬ್ದ ಮಾಡುತ್ತ, ಇಸೆ–ಬಾಣಪ್ರಯೋಗ ಮಾಡಲು, ಪೊಸಮಸೆಯಂಬಿನ–ಹೊಸದಾದ ಮಸೆತವನ್ನುಳ್ಳ ಬಾಣಗಳ, ತಂದಲ– ಧಾರೆಗಳ, ಬೆಳ್ಸರಿಗಳ್–ಬಿಳಿಯ ಮಳೆಗಳು, ನರನಂ–ಅರ್ಜುನನನ್ನು, ಕವಿದುವು– ಮುಚ್ಚಿದುವು.

೧೮೪. ದೊಣೆಗಳಿಂ–ಬತ್ತಳಿಕೆಗಳಿಂದ, ಉರ್ಚುವ–ಬಾಣಗಳನ್ನು ಸೆಳೆದು ಕೊಳ್ಳುವ, ತಿರುವಾಯ್ಪೊಣರ್ಚೆ–ಬಿಲ್ಲಿನ ಹೆದೆಯ ಬಾಯಿಗೆ ಸೇರಿಸಿ, ತೆಗೆನೆಱವ– ಕಿವಿವರೆಗೂ ಎಳೆಯುವ, ಬೇಗಮಂ–ವೇಗವನ್ನು, ಕಾಣದೆ–ನೋಡದೆ, ದೇವಗಣಂ –ದೇವತೆಗಳ ಸಮೂಹ, ಇನಸುತನಾ–ಕರ್ಣನ, ಕೂರ್ಗಣೆಗಳ–ಹರಿತವಾದ ಬಾಣ

ಗಳ, ಪಂಜರನೆ – ಪಂಜರವನ್ನೇ, ನಭೋಂಗಣದೊಳ್ – ಆಕಾಶ ಪ್ರದೇಶದಲ್ಲಿ, ಕಂಡತ್ತು–ನೋಡಿತು.

೧೮೫. ಪಾತಂ–ಬೀಳುವುದು, ಲಕ್ಷ್ಯಂ–ಗುರಿತಾಕುವುದು, ಶೀಘ್ರಂ–ವೇಗತ್ವ, ಘಾತಂ–ಸಂಘಟನೆ, ಬಹುವೇಗಂ–ಅತಿಶಯವೇಗ, ಎಂಬ, ಇವು, ಅಯ್ದು–ಐದು, ಏಸಿನೊಳಂ–ಬಾಣಪ್ರಯೋಗಗಳಲ್ಲಿಯೂ, ಅಂತು–ಹಾಗೆ, ಈತನ ದೊರೆಯಿಲ್ಲ–ಈತನ ಸಮಾನವಿಲ್ಲ, ಎಂದೂ, ಆತನ–ಕರ್ಣನ, ಬಿಲ್ಬಲ್ಮೆ–ಬಿಲ್ವಿದ್ಯೆಯ ಕೌಶಲ, ಅಂಬರತಲ ದೊಳ್–ಆಕಾಶದಲ್ಲಿ, ಸುರರಿಂ–ದೇವತೆಗಳಿಂದ, ಎನಿಸಿದುದು–ಎನ್ನಿಸಿತು, ಹೇಳಿಸಿತು. ಈ ಪದ್ಯದಲ್ಲಿರುವ ಪಾತಂ ಮುಂತಾದ ಐದು ಶಬ್ದಗಳು ಧನುರ್ವೇದದ ಪರಿಭಾಷೆ ಯಂತಿವೆ; ಅವುಗಳ ಅರ್ಥವನ್ನು ಆ ಶಾಸ್ತ್ರವನ್ನು ನೋಡಿ ಹೇಳಬೇಕು ; ಇಲ್ಲಿರುವುದು ಸಾಮಾನ್ಯಾರ್ಥಗಳು.

೧೮೬. ಶರಸಂಧಾನಾಕರ್ಷಣ ಹರಣಾದಿ – ಬಾಣಗಳನ್ನು ಹೂಡುವುದು ಎಳೆಯುವುದು, ಹರಣವೇ ಮೊದಲಾದ, ವಿಶೇ....ತಿಯಂ–ವಿಶೇಷ ವಿವಿಧ ಸಂಕಲ್ಪಗಳ ಕಲಾ ಪ್ರೌಢಿಮೆಯನ್ನು, ಅರಿಗಂ–ಅರ್ಜುನ, ತರತರದೊಳೆ–ಸಾಲುಸಾಲಾಗಿಯೆ, ಮುಳಿದು–ಕೆರಳಿ, ಇಸುವ–ಪ್ರಯೋಗಿಸುವ, ಶರನಿಕರಂಗಳ್–ಬಾಣಗಳ ಸಮೂಹಗಳು, ಮೆಱೆದುದು–ಪ್ರಕಟಿಸಿದುವು.

೧೮೭. ಮುನಿದು–ಕೋಪಿಸಿ, ಇಸುವ–ಪ್ರಯೋಗಿಸುವ, ಇನಜನ–ಕರ್ಣನ, ಸರಲಂ–ಬಾಣಗಳನ್ನು, ಮೊನೆಯಿಂ ಗಱಿವರೆಗಂ–ತುದಿಯಿಂದ ಹಿಡಿದು ಗರಿಗಳ ವರೆಗೆ, ಎಯ್ದೆ ಸೀಳ್ದುವು–ಚೆನ್ನಾಗಿ ಸೀಳಿದುವು, ಕಣೆಗಳ್–ಬಾಣಗಳು, ಘನಪಥಮಂ–ಆಕಾಶವನ್ನು, ಅಳುರ್ದು–ವ್ಯಾಪಿಸಿ, ಸುಟ್ಟಪುವು–ಸುಡುತ್ತವೆ, ಎನೆ–ಎನ್ನಲು, ಕೋಲ ಪೊಗೆಯುಂ–ಬಾಣಗಳ ಹೊಗೆಯೂ, ಅಂಬಿನ–ಬಾಣಗಳ, ಕಿಡಿಯುಂ–ಕಿಡಿಗಳೂ, ನೆಗೆದುವು–ಮೇಲಕ್ಕೆದ್ದವು,

೧೮೮. ಕೂಡೆ–ಕೂಡಲೇ, ಕಡಿವ–ಕತ್ತರಿಸುವ, ಅಂಬಂ–ಬಾಣಗಳನ್ನು, ಅಂಬು–ಬಾಣಗಳು, ಎಡೆಮಾಡದೆ–ಅವಕಾಶವನ್ನು ಕೊಡದೆ, ಬಿಡದೆ–ತಪ್ಪದೆ, ಒದವೆ –ಉಜ್ವಲು, ಪುಟ್ಟಿದ–ಹುಟ್ಟಿದ, ಉರಿಗಳ್–ಜ್ವಾಲೆಗಳು, ಅಗುರ್ವಂಮಾಡೆ–ಭಯ ವನ್ನುಂಟು ಮಾಡಲು, ಕವಿದು–ಆವರಿಸಿ, ಅಳುರ್ವ–ಸುಡುವ, ಪೆಂಕಿಯೊಳ್–ಉರಿ ಯಲ್ಲಿ, ಅಮರ ಸುಂದರಿಯರ್ಕಳ್–ದೇವ ಸುಂದರಿಯರು, ಮೊಗಮಂ–ತಮ್ಮ ಮುಖ ಗಳನ್ನು, ಆಡಿಸಿದರ್–ಅತ್ತ ಇತ್ತ ಅಲುಗಾಡಿಸಿದರು.

೧೮೯. ಮೊನೆಯಂಬಿನ – ಮೊನಚಾದ ಬಾಣಗಳ, ತಂದಲೊಳ್ – ಮಳೆ ಯಲ್ಲಿ, ಅರ್ಜುನನಂ ಕರ್ಣನುಮಂ–ಅರ್ಜುನನನ್ನೂ ಕರ್ಣನನ್ನೂ, ಇನಿಸುಕಾಣದೆ –ಸ್ವಲ್ಪವೂ ನೋಡದೆ, ಅಣಂ–ಸ್ವಲ್ಪವೂ, ಮೆಲ್ಲನೆ–ಸದ್ದಿಲ್ಲದೆ, ಬಗಿದುನೋಡಿ–ತೋಡಿ ನೋಡಿ, ಕುಡುಮಿಂಚಿನಂತೆ–ವಕ್ರವಾದ ಮಿಂಚಿನಂತೆ, ಮೇಗೊಗೆದು–ಮೇಲಕ್ಕೆ ನೆಗೆದು, ನಾರದಂ–ನಾರದನು, ನರ್ತಿಸಿದಂ–ಕುಣಿದನು.

೧೯೦ ಕವಿವ ಶರಾಳಿಯುಂ – ಮುಸುರುವ ಬಾಣಗಳ ಸಮೂಹವನ್ನು (ಕರ್ಣನ), ನಿಜಶರಾಳಿಗಳ್ – ತನ್ನ ಬಾಣಾವಳಿಗಳು, ಅಪ್ಪಿ – ಆಕ್ರಮಿಸಿ, ತೆರಳ್ಚಿ–ಓಡಿಸಿ, ತೂಳ್ದಿ–ತಳ್ಳಿ, ಮಾರ್ಕಪಿದು–ಪ್ರತಿಯಾಗಿ ಮುಚ್ಚಿ, ಪಳಂಚಿ–ತಗುಲಿ, ಹಾಯ್ದು–ನುಗ್ಗಿ, ಒರಸೆ–ಉಜ್ಜಲು, ಪುಟ್ಟಿದ ಕಿರ್ಚು–ಹುಟ್ಟಿದ ಉರಿ, ಅಳರ್ದು – ವ್ಯಾಪಿಸಿ, ಎಬ್ದು – ಮೇಲಕ್ಕೆ ನೆಗೆದು, ಅಜಾಂಡದ – ಬ್ರಹ್ಮಾಂಡದ, ಅಂತುವರಂ – ಕೊನೆಯವರೆಗೂ, ಅಗುರ್ವು – ಭಯವು, ಪರ್ವೆ – ಹಬ್ಬುತ್ತಿರಲು, ದಳ್ಳುರಿ – ಜ್ವಾಲೆ, ಪೆರ್ಚೆ – ಅಧಿಕವಾಗಿ, ಕರ – ವಿಶೇಷವಾಗಿ, ಅರ್ಪಿಸೆ – ಸುಡಲು, ಕಂಡು – ನೋಡಿ, ಗುಣಾರ್ಣವನ – ಅರ್ಜುನನ, ಅಸ್ತ್ರಕೌಶಲಂ – ಬಾಣಪಾಂಡಿತ್ಯ, ಖಾಂಡವವನದಾಹಮುಂ–ಖಾಂಡವ ವನದ ದಹನವನ್ನು, ನೆನೆಯಿಸಿತ್ತು–ನೆನೆಯಿಸಿತು. ನೆನಪಿಗೆ ತಂದುಕೊಟ್ಟಿತು.

ವಚನ : ಈ ಅಂಬುಗಳೊಳೇಂ–ಈ ಬಾಣಗಳಲ್ಲೇನು? ತೀರ್ದಪುದು–ಮುಗಿಯುತ್ತದೆ ; ನುಡಿವಳಿಯಂ–ಭಾಷೆಯನ್ನು ; ಪುರಿಗಣೆಯ–ದಿವ್ಯಾಸ್ತ್ರದ (?), ದೊಣೆಗೆ–ಬತ್ತಳಿಕೆಗೆ ;

೧೯೧. ಮುಳಿಸಂ ನೆಱಪಲ್ಕೆ–ಕೋಪವನ್ನು ತೀರಿಸಿಕೊಳ್ಳುವುದಕ್ಕೆ, ವಿಸ್ಫುಲಿಂಗ ಪಿಂಗಲಿತ ಭುವನ ಭವನಾ ಭೋಗಂ : ವಿಸ್ಫುಲಿಂಗ–ಕಿಡಿಗಳಿಂದ, ಪಿಂಗಲಿತ ಕೆಂಪು ಕಪ್ಪುಮಿಶ್ರವಾದ ಕಾಂತಿಯನ್ನುಳ್ಳ, ಭವನ–ಪ್ರಪಂಚವೆಂಬ ಮನೆಯ, ಆಭೋಗಂ–ವಿಸ್ತಾರವನ್ನುಳ್ಳ, ಅರ್ಧಾವಲೀಕ ಶರರೂಪದಿಂದೆ–ಅರ್ಧಾವಲೀಕವೆಂಬ ಬಾಣದ ಆಕಾರದಿಂದ, ದೊಣೆಯಿಂದ–ಬತ್ತಳಿಕೆಯಿಂದ, ತಾಂ–ತಾನು, ಪೊಱಮಡು–ಹೊರಟು, ಅಥವಾ ಹೊರಳಿ, ಅಸುಂಗೊಳೆ – ಪ್ರಾಣಾಪಹಾರ ಮಾಡಲು, ಕಯ್ಗೆ ಬರೆ–ಕೈಗೆ ಬರಲು,

೧೯೨. ಅದಂ–ಅದನ್ನು, ತಿರಿಪಿದೊಡೆ–ತಿರುಗಿಸಿದರೆ, ಇಳೆ–ಭೂಮಿ, ತಿರ್ರನೆ –ಗಿರ್ರೆಂದು, ತಿರಿದುದು–ತಿರುಗಿತು ; ತಿರುವಾಯೊಳಿಡೆ–ಅದನ್ನು ಬಿಲ್ಲಿನ ಹೆದೆಗೆ ಸೇರಿಸಲು, ಸುರರ್ – ದೇವತೆಗಳು ; ಮೊಱೆಯಿಟ್ಟರ್ – ಗಟ್ಟಿಯಾಗಿ ಕೂಗಿಕೊಂಡರು ; ಭರದೆ – ವೇಗದಿಂದ, ತೆಗೆನೆಱೆಯೆ–ಬಿಲ್ಲ ಹಗ್ಗವನ್ನು ಕಿವಿವರೆಗೆ ಸೆಳೆಯಲು, ಮೆಯ್ದೆಗೆದ–ಮೈಯಿಳಿದ ಎಂದರೆ ಗರ್ಭಸ್ರಾವವಾದ, ಅಂಬುಜೋದ್ಭವನಿಂ–ಬ್ರಹ್ಮನಿಂದ, ಆ ಬ್ರಹ್ಮಾಂಡಂ–ಆ ಬ್ರಹ್ಮಾಂಡವು, ಒಗೆದುದು–ಹುಟ್ಟಿತು

೧೯೩. ಅದಂ–ಆ ರೌದ್ರಶರವನ್ನು, ಕರ್ಣಂ–ಕರ್ಣನು, ತುಡೆ–ಹೂಡಲು, ಸುಯೋಧನನ ಸಕಲ ರಾಜ್ಯಶ್ರೀಯುಂ – ದುರ್ಯೋಧನನ ಸಮಸ್ತ ರಾಜ್ಯಲಕ್ಷ್ಮಿಯೂ, ನಡನಡನಡುಗಿ – ನಡುಗಿ ನಡುಗಿ ಎಂದರೆ ವಿಶೇಷವಾಗಿ ಹೆದರಿ, ಸಡಿಲಿಸಿದ–ಸಡಿಲವಾದ, ತೋಳಂ–ತೋಳನ್ನು, ಸಡಿಲಿಸಲ್–ಪ್ರೀತಿ ಸಡಿಲಿಸಲು, ಆಗಳ್–ಆಗ, ಅಣ್ಮಳೆ–ಪ್ರಯತ್ನ ಪಡಳೆ! ದಲ್ – ದಿಟವಾಗಿಯೂ, ಅದಱ–ಆ ಬಾಣದ, ಅಗುರ್ವು–ಭೀಕರತೆಯು, ಏಂ ಪಿರಿದೋ–ಹಿರಿದೋ!

೧೯೪. ಆ ಕರ್ಣಂ–ಆ ಕರ್ಣನು, ಆ ಕರ್ಣಾಂತಂ ತೆಗೆ ನೆಱೆದು–ಕಿವಿವರೆಗೆ ಬಾಣವನ್ನು ಸೆಳೆದು, ಇಸಲ್ಕೆ – ಪ್ರಯೋಗಿಸಲು, ಬಗೆದೊಡೆ – ಯೋಚಿಸಿದರೆ, ಉಡುಗು ಉಡುಗು–ಸಂಕೋಚ ಮಾಡು ಸಂಕೋಚ ಮಾಡು ಎಂದರೆ ಒಂದಕ್ಕೆ ತೆಗೆದುಕೋ, ಇಸಲ್–ಪ್ರಯೋಗಿಸಬೇಡ; ಈ ಭೀಕರ ಬಾಣಮಂ–ಈ ಭಯಂಕರ ವಾದ ಬಾಣವನ್ನು, ಆದ ವಿವೇಕದೆ–ಉಂಟಾದ ವಿವೇಕದಿಂದ, ಉರದೆಡೆಗೆ ತುಡದೆ –ಎದೆಯ ಪ್ರದೇಶಕ್ಕೆ ಗುರಿಯಿಟ್ಟು ಹೂಡದೆ, ತಲೆಗೆಯೆ–ತಲೆಗೇ, ತುಡುಪಾ– ತೊಡುತ್ತೀಯಾ, ಹೂಡುತ್ತೀಯಾ?

೧೯೫. ಉರದೆಡೆಗೆ ತುಡೆ–ಎದೆಗೆ ಸಂಧಾನ ಮಾಡಲು, ಜಯಶ್ರೀಗೆ–ಜಯಲಕ್ಷ್ಮಿಗೆ, ಇರಲ್–ಇರಲು, ಎಡೆ–ಸ್ಥಳವು, ನಿನಗಪ್ಪುದು–ನಿನಗಾಗುತ್ತದೆ; ಆ ಸುಯೋಧನನೊಳ್–ಆ ದುರ್ಯೋಧನನಲ್ಲಿ, ಶ್ರೀಗೆ–ರಾಜ್ಯಲಕ್ಷ್ಮಿಗೆ, ಇರಲು, ಎಡೆಯಪ್ಪುದು–ಅವಕಾಶವಾಗುತ್ತದೆ; ಮೇಣ್–ಅಥವಾ, ದಿನಕರಸುತ–ಕರ್ಣನೇ, ತೊದಳುಂಟೆ–ಸುಳ್ಳಾಗುವುದೇ, ಬಗೆಯ ಸಂದೆಯಮುಂಟೇ–ಮನದ ಸಂಶಯ ವಿದೆಯೇ?

೧೯೬. ಎನಿತುಂ–ಎಷ್ಟೂ, ಶಲ್ಯನ ಪೇೞ್ದ ಪಾಂಗೆ–ಶಲ್ಯನು ಹೇಳಿದ ರೀತಿಯೇ ಎಂದರೆ ಎಲ್ಲವೂ ಶಲ್ಯನು ಹೇಳಿದ ಹಾಗೆಯೇ, ಸರಿ; ತೊದಳಿಲ್ಲ–ಸುಳ್ಳಿಲ್ಲ; ಅಂತಾದೊಡೆ–ಹಾಗಾದರೆ ಎಂದರೆ ಶಲ್ಯನು ಹೇಳಿದಂತೆ ಮಾಡಿದರೆ, ಆ ಶಕ್ರಪುತ್ರನಂ–ಆ ಇಂದ್ರಸೂನು ಅರ್ಜುನನನ್ನು, ಆಂ–ನಾನು, ಕೊಂದೊಡೆ–ಕೊಂದರೆ, ಧರ್ಮ ಪುತ್ರನೞಿಗುಂ–ಧರ್ಮರಾಜನು ಸಾಯುವನು; ತಾಯೆಂದೆ–ತಾಯಿ ಎಂದೇ ಹೇಳಿಕೊಂಡು, ಮುಂ–ಮೊದಲು, ಕೊಂತಿ–ಕುಂತಿದೇವಿಯು, ಬಂದು, ಎನ್ನಂ–ನನ್ನನ್ನು, ಇನಿಸಂ–ಇಷ್ಟನ್ನು, ಪ್ರಾರ್ಥಿಸಿ–ಬೇಡಿ, ಪೋದಳ್–ಹೋದಳು; ಅದಂ–ಅದನ್ನು ಎಂದರೆ ಶಲ್ಯನ ಮಾತನ್ನು, ಆಂ–ನಾನು, ಮಾಣ್ದಿರ್ದೆಂ–ಬಿಟ್ಟಿದ್ದೇನೆ; ಇರ್ದಾಗಳ್ – ಇದ್ದಾಗ, ಒಳ್ಪಿನ – ಒಳ್ಳೆಯತನದ, ಪೆರ್ಮಾತಿನ – ಹೆಮ್ಮಾತಿನ, ದೊಡ್ಡ ಮಾತಿನ, ನನ್ನಿ – ಸತ್ಯವು, ಬನ್ನದೊಳ್–ನಾಶದಲ್ಲಿ, ಒಡಂಬಟ್ಟು–ಒಡಗೂಡಿ, ಒಂದಾಗಿ ಸೇರಿ, ಇರ್ಪುದಂ–ಇರುವುದನ್ನು, ಮಾೞ್ಪೆನೇ–ಮಾಡುತ್ತೇನೆಯೇ? ಇಲ್ಲ. ನನ್ನ ಸತ್ಯವಾಕ್ಯಕ್ಕೆ ಭಂಗವುಂಟಾಗುವಂತೆ ನಾನು ಮಾಡಲಾರೆನು ಎಂಬ ಭಾವ.

೧೯೭. ತನಗೆ, ಉೞುವಂತುಟಾಗೆ – ಇರುವಷ್ಟಾಗಲು, ಕಡುನನ್ನಿಯ–ತೀವ್ರ ಸತ್ಯದ, ಪೆಂಪುಮಂ–ಆಧಿಕ್ಯವನ್ನು, ಅಂತು–ಹೊಂದಿ, ಎಂದರೆ ತನಗೆ ಎಷ್ಟು ಸಾಧ್ಯವೋ ಅಷ್ಟು ಸತ್ಯದ ಹಿರಿಮೆಯನ್ನು ಹೊಂದಿ, ಭೂಭುಜರ್–ರಾಜರು; ತನಗೆ, ಇನಿತು–ಒಂದಿಷ್ಟು, ಊನಮಾಗೆ–ಕಡಿಮೆಯಾಗಲು, ಎಂದರೆ ಅವಜ್ಞೆಗೆ ಈಡಾಗಲು, ಮೆಱೆದ–ಪ್ರದರ್ಶಿಸಿದ, ಆ ಭುಜವೀರ್ಯಮಂ – ಆ ತೋಳ ಬಲವನ್ನು, ಅಂತು–ಹೊಂದಿ, ಮಾಣ್ಪದೇಂ – ತಡಮಾಡುವುದೇನು? ತನಗುೞುವ

–ತನಗೆ ಸೇರಿದುವ, ಒಂದು, ನನ್ನಿಯನೆ–ಸತ್ಯವನ್ನೆ, ಪೂಣ್ದು–ಮೇಲೆ ಹೊತ್ತು ಕೊಂಡು ಎಂದರೆ ವಹಿಸಿಕೊಂಡು, ಪಿರಿದುಂ ಬಲಸ್ಥನಪ್ಪನನೆ–ಹಿರಿದು ಸೈನ್ಯದಿಂದ ಕೂಡಿದವನನ್ನೇ ಅಥವಾ ಅಧಿಕ ಬಲಶಾಲಿಯಾದವನನ್ನೇ, ಕಱುತ್ತು–ಕೋಪಿಸಿ, ಕಾದಿ–ಯುದ್ಧಮಾಡಿ, ನೆಗೞ್ದಾತನೆ–ಮಾಡಿದವನೆ ಎಂದರೆ ಮಾಡಿ ತೋರಿಸಿದವನೇ, ನನ್ನಿಯ–ಸತ್ಯದ, ಬೀರದ–ಶೌರ್ಯದ, ಆಗರಂ–ಮನೆ, ವಾಸಸ್ಥಾನ.

೧೯೮. ಪಾಂಡವರ್–ಪಾಂಡವರು, ಎನ್ನಂ–ನನ್ನನ್ನು, ಇನ್ನು–ಇನ್ನೂ, ಅಱಿಯರ್ – ತಿಳಿಯರು, ನೀಂ – ನೀವು, ಅಱಿಪಲ್ – ತಿಳಿಸಬೇಡಿರಿ, ಎಂದು, ಚಕ್ರಿಗೆ–ಶ್ರೀ ಕೃಷ್ಣನಿಗೆ, ಆಂ–ನಾನು, ಅಱಿಪಿರ್ದೆಂ–ತಿಳಿಸಿದ್ದೆನು; ಪೃಥೆಯುಂ–ಕುಂತಿಯೂ, ಮದೀಯ ಸುತರೊಳ್ – ನನ್ನ ಮಕ್ಕಳಲ್ಲಿ, ವೈಕರ್ತನಂ – ಸೂರ್ಯನ ಮಗ ಕರ್ಣ, ನನ್ನಿಯಂ–ಸತ್ಯವನ್ನು, ನಿಱಿಸಲ್ಕೆ–ಸ್ಥಾಪಿಸುವುದಕ್ಕೆ, ಅಮೋಘಂ–ವ್ಯರ್ಥವಲ್ಲದೆ, ಆರ್ಕುಂ – ಸಮರ್ಥನಾಗುತ್ತಾನೆ, ಎಂದು, ಮನದೊಳ್ – ಮನಸ್ಸಿನಲ್ಲಿ, ನಂಬಿರ್ದಳ್–ನಂಬಿದ್ದಾಳೆ; ಇಂ–ಇನ್ನು, ಪೆಂಪು–ಹಿರಿಮೆಯು, ಎಱಕಂಬೆತ್ತಿರೆ –ಎರಕಹೊಯ್ದಿರಲು ಅಥವಾ ಪ್ರೀತಿಯುಕ್ತವಾಗಿರಲು, ಎನ್ನ ನುಡಿಯಂ–ನನ್ನ ಭಾಷೆಯನ್ನು, ಕೆಯ್ಕೊಂಡ– ವಹಿಸಿಕೊಂಡ, ಕಟ್ಟಾಯಮಂ–ತೀವ್ರ ಸಾಮರ್ಥ್ಯವನ್ನೂ, ಕಾವೆಂ–ರಕ್ಷಿಸುತ್ತೇನೆ, ಕಾಪಾಡುತ್ತೇನೆ.

೧೯೯. ಎಂಬುದನೆ – ಎನ್ನುವುದನ್ನೇ, ಬಗೆದು – ಆಲೋಚಿಸಿ, ಪೆಱತಂ–ಬೇರೆ ಯಾವುದನ್ನೂ, ಅಣಂ–ಸ್ವಲ್ಪವೂ, ಬಗೆಯದೆ–ಭಾವಿಸದೆ, ಮದ್ರಪತಿಯುಂ–ಶಲ್ಯ ರಾಜನನ್ನು, ಎಂದಂ–ಕುರಿತು ಹೇಳಿದನು; ಕರ್ಣಂ–ಕರ್ಣನು, ಮುಂ ತೊಟ್ಟ–ಮೊದಲು ಗುರಿಯಿಟ್ಟು ಹೂಡಿದ, ಅಂಬಂ–ಬಾಣವನ್ನು, ಅದಂ–ಅದನ್ನು, ಉಗಿದು–ಕಿತ್ತು, ಭಯದಿಂ– ಹೆದರಿಕೆಯಿಂದ, ಕುಂದಿಸಿದಂ–ಕುಗ್ಗಿಸಿದನು, ಎಂದು ಲೋಕಂ–ಜನವು, ನಗದೇ–ನಗುವುದಿಲ್ಲವೆ?

೨೦೦. ಉಡುಗುಡುಗುಡುಗೆಂದಿಸೆ– ಕುಗ್ಗಿಸು ಕುಗ್ಗಿಸು ಕುಗ್ಗಿಸು ಎಂದು ಪ್ರಯೋಗಿಸಲು, ಬಱಸಿಡಿಲ್–ಬರಸಿಡಿಲು, ಎಱಪಂತೆ– ಎರಗುವ ಹಾಗೆ ಎಂದರೆ ಅಪ್ಪಳಿಸುವಂತೆ, ಎಱಪ – ಹೊಡೆಯುವ, ಸರಲಬರವಂ – ಬಾಣವು ಬರುವುದನ್ನು, ಕಂಡು–ನೋಡಿ, ಆಗಡೆ–ಆಗಲೇ, ಚಕ್ರಿ – ಕೃಷ್ಣನು, ನರರಥಮಂ – ಅರ್ಜುನನ ರಥವನ್ನು, ನೆಲನೊಳ್–ನೆಲದಲ್ಲಿ, ಎಣ್ಬೆರಲ್ ಅಡಂಗೆ–ಎಂಟು ಬೆರಳಷ್ಟು ಕುಸಿಯುವ ಹಾಗೆ, ನಿಪುಣತೆಯಿಂ–ಚಮತ್ಕಾರದಿಂದ, ಒತ್ತಿದಂ–ಅಮುಕಿದನು.

೨೦೧. ಒತ್ತುವುದಂ – ಅಮುಕುತ್ತಲು, ಶರ–ಬಾಣ, ಇರದೆ–ನಿಲ್ಲದೆ, ಎಯ್ದುತ್ತೆ–ಹತ್ತಿರಕ್ಕೆ ಬರುತ್ತಾ, ಕಿರೀಟಿಯ – ಅರ್ಜುನನ, ಕಿರೀಟಮಂ–ಕಿರೀಟವನ್ನು, ಕೊಱೆದೊಡೆ–ಕತ್ತರಿಸಿದರೆ, ಭಯಂ–ಭೀತಿಯು, ಇಂದ್ರನಂ–ಇಂದ್ರನನ್ನು ಪರ್ವಿತ್ತು–ವ್ಯಾಪಿಸಿತು; ಆಗಳ್ – ಆಗ, ಆ ಸಂಕಟದೊಳ್ – ಆ ಸಂಕಷ್ಟದಲ್ಲಿ, ಅೞಲ್–ದುಃಖ, ಈಶ್ವರನಂ–ಶಿವನನ್ನು, ಮುತ್ತಿತ್ತು–ಆವರಿಸಿಕೊಂಡಿತು.

೨೦೨. ಒಳಗಱಿಯದೆ–ಒಳಗನ್ನು ತಿಳಿಯದೆ, ಎಂದರೆ ರಹಸ್ಯವು ತಿಳಿಯದೆ. ಕೌರವಬಳಜಳನಿಧಿ–ಕೌರವ ಸೇನಾ ಸಮುದ್ರವು. ಬೊಬ್ಬಿಱಿದು – ಬೊಬ್ಬೆಯಿಟ್ಟು ಕೂಗಿ ಕೊಳ್ಳುತ್ತಾ. ಮೇಲುದಂ – ಉತ್ತರೀಯಗಳನ್ನು. ಬೀಸಿದೊಡೆ – ಬೀಸಿದರೆ, ಉಚ್ಚಳಿಸಿದ–ಮೇಲಕ್ಕೆ ನೆಗೆದ, ಮಕುಟದ – ಕಿರೀಟದ, ಮಣಿಗಳ – ರತ್ನಗಳ, ಪೊಳೆಪುಗಳಿಂದೆ–ಪ್ರಕಾಶದಿಂದ, ಎಂಟುಂ ದೆಸೆಯೊಳ್–ಎಂಟು ದಿಕ್ಕುಗಳಲ್ಲೂ, ಉಳ್ಕಂ ಎೞ್ದುವು–ಉಲ್ಕಾಪಾತಗಳು ಆವಿರ್ಭವಿಸಿದುವು.

ವಚನ : ರುಂದ್ರ – ವಿಸ್ತಾರವಾದ ; ರತ್ನಕೂಟಾಗ್ರ – ರತ್ನಮಯವಾದ ಶಿಖರದ ತುದಿ ; ಅರಾತಿ ಶಾತ ಶರದಿಂ–ಶತ್ರುವಿನ ಹರಿತವಾದ ಬಾಣಗಳಿಂದ : ಅಳಿ ನೀಲೋಜ್ವಳ–ದುಂಬಿಗಳ ಕಪ್ಪುಬಣ್ಣದಂತೆ ಪ್ರಕಾಶಮಾನವಾದ ; ಕುಂಪ ಳಂಗಳ್ – ಕೂಪಲುಗಳು ; ಪರಕಲಿಸಿ – ಕೆದರಿ. ಚೆದರಿ ; ಪೊಱಮುಯ್ವನ್ – ಹೆಗಲ ಹೊರಭಾಗವನ್ನು, ಅಳ್ಳಿಱಿಯೆ–ಚಲಿಸುತ್ತಾ ಸ್ಪರ್ಶಿಸಲು, ಪಚ್ಚು ಗಂಟಿಕ್ಕಿ– ಎರಡು ವಿಭಾಗದ ಗಂಟನ್ನು ಹಾಕಿ ; ಗಾಂಡೀವಧನ್ವಂ–ಅರ್ಜುನ.

೨೦೩. ಪುರಿಗಣೆಯಪ್ಪ–ದಿವ್ಯಾಸ್ತ್ರವಾಗಿರುವ (?) ; ಕಾರಣದಿಂ-ಕಾರಣದಿಂದ, ಅಂತು–ಹಾಗೆ, ಅದು–ಆ ರೌದ್ರಶರವು, ತಪ್ಪಿದೆಂ–ತಪ್ಪು ಮಾಡಿದೆನು, ಎಂದು, ನೊಂದು–ವ್ಯಥೆಪಟ್ಟು, ಪಲ್ಮೊರೆದು–ಹಲ್ಲನ್ನು ಉಜ್ಜಿ ಶಬ್ದಮಾಡುತ್ತಾ, ಅಹಿ ರೂಪದಿಂ–ಸರ್ಪಾಕಾರದಿಂದ, ಮಗುಬ್ದು–ಹಿಂತಿರುಗಿ, ಇನನಂದನನಲ್ಲಿಗೆ – ಕರ್ಣನ ಬಳಿಗೆ, ಬಂದು, ಎನ್ನ–ನನ್ನನ್ನು, ಅಂತರಿಸದೆ– ನಡುವೆ ಇಡದೆ, ಎಡೆಮಡಗದೆ, ತೊಟ್ಟು–ಬಿಲ್ಲಿನಲ್ಲಿ ಹೂಡಿ, ಬೇಗಂ–ಬೇಗನೆ, ಇಸು–ಪ್ರಯೋಗಿಸು ; ರಸಾಂಬರ ಧರಣೀ ವಿಭಾಗದೊಳಗೆ-ಪಾತಾಳ ಆಕಾಶ ಭೂಮಿಗಳ ಭಾಗಗಳಲ್ಲಿ, ಆವೆಡೆ ಪೊಕ್ಕೊಡಂ – ಯಾವ ಸ್ಥಳದಲ್ಲಿ ಹೊಕ್ಕಿದ್ದರೂ, ಅಂಗನಾಯಕಾ – ಕರ್ಣನೆ, ವೈರಿಯಂ–ಹಗೆಯನ್ನು, ಈಗಳೆ–ಈಗಲೇ, ಕೊಂದಪೆಂ–ಕೊಲ್ಲುವೆನು,

ವಚನ : ನಿನಾರ್ಗೆ–ನೀನು ಯಾರು ಎಂದರೆ ಯಾರಿಗೆ ಸಂಬಂಧಪಟ್ಟವನು ? ಏನೆಂಬೆ–ಹೆಸರೇನು ; ಎನ್ನದೊಣೆಯುಂ–ನನ್ನ ಬತ್ತಳಿಕೆಯನ್ನು ;

೨೦೪. ಶರರೂಪದೊಳಿರೆ – ಬಾಣದ ಆಕಾರದಲ್ಲಿರಲು, ನಿನ್ನಂ–ನಿನ್ನನ್ನು, ಆಂ–ನಾನು, ಶರಮೆಂದು-ಬಾಣವೆಂದು, ತೊಟ್ಟೆಂ – ಹೂಡಿದೆನು ; ಅಱಿದು– ತಿಳಿದು, ನಿನ್ನಂ–ನಿನ್ನನ್ನು, ತುಡುವೆನೆ–ಹೂಡುತ್ತೇನೆಯೆ ? ನೆರಪೊಳ್–ಸಹಾಯ ದಲ್ಲಿ, ಕೊಲ್ವಂತೆ–ಕೊಲ್ಲುವಷ್ಟು, ನನಗೆ, ಗಾಂಡೀವಧನ್ವಂ – ಅರ್ಜುನನು, ಏನರಿ ಯನೆ–ಏನು ಅಸಾಧ್ಯನೇ ? ಎಂಬುದುಂ-ಎನ್ನುತ್ತಲು, ಆಗಳ್–ಆಗ

೨೦೫. ನೀಂ–ನೀನು, ನಿನ್ನ, ಪಗೆಯುಂ–ದ್ವೇಷವನ್ನು, ಆರ್ಪೊಡೆ–ಸಮರ್ಥ ನಾದರೆ, ಅದಂ–ಅದನ್ನು, ನೆಱಪು – ಪೂರ್ಣಮಾಡು, ತೀರಿಸು, ಎನೆ–ಎನ್ನಲು, ನೆಗೆದು ಬರ್ಪ–ಹಾರಿ ಬರುವ, ವಿಷಪನ್ನಗನಂ–ವಿಷಸರ್ಪವನ್ನು, ಪನ್ನತಂ–ಶೂರ ನಾದ, ಅರಿಗಂ–ಅರ್ಜುನ, ಎಡೆಯೊಳ್–ನಡುವೆ, ತನ್ನಯ–ತನ್ನ, ಗರುಡಾಸ್ತ್ರ

ದಿಂದೆ–ಗರುಡ ಬಾಣದಿಂದ, ಕುಱಿದಱಿದಱಿದಂ – ಕುರಿಯನ್ನು ಕತ್ತರಿಸುವಂತೆ ಕತ್ತರಿಸಿದನು.

ವಚನ : ಕಿನಿಸಿ–ಕೋಪಿಸಿ: ಏಕಗ್ರಾಹಿಗಂ–ಹಿಡಿದ ಪಟ್ಟನ್ನೇ ಹಿಡಿಯುವ ಹಠಮಾರಿಗೂ; ಒರಂಟಂಗಂ – ಒರಟನಿಗೂ, ಎಸಗೆಸೆಂದುಂ – ನಡೆಯಿಸುವುದಿಲ್ಲ ವೆಂದು, ವರೂಥದಿಂದೆ–ರಥದಿಂದ. /

೨೦೬. ಅರಿಗನ–ಅರ್ಜುನನ, ಬಟ್ಟೆನಂಬುಗಳ–ದುಂಡಾದ ಮೊನೆಯುಳ್ಳ ಬಾಣಗಳ, ಬಲ್ಸರಿ–ದೊಡ್ಡ ಮಳೆಯು, ಸೋಂಕುಗುಂ–ತಟ್ಟುತ್ತದೆ, ಏೞುಂ–ಏಳಿರಿ, ಎನ್ನ–ನನ್ನ, ತೋಳ್–ಬಾಹುಗಳು. ನೆವೆನೆನಗೆ–ನನಗೆ ಸಹಾಯ : ಎನ್ನ ಬಿಲ್ಲೆ ನೆರಂ – ನನ್ನ ಬಿಲ್ಲೇ ಸಹಾಯ, ಎಂದು, ವರೂಥತುರಂಗಮಂಗಳಂ – ರಥದ ಕುದುರೆಗಳನ್ನು, ತುರಿಪಡೆ–ವೇಗವಾಗಿ, ತಾನೆ–ತಾನೇ, ಚೋದಿಸುತಂ–ಮುಂದಕ್ಕೆ ನಡೆಯಿಸುತ್ತ, ಅರ್ದು–ಗರ್ಜಿಸಿ, ಇಸುತುಂ – ಬಾಣಪ್ರಯೋಗ ಮಾಡುತ್ತ, ಕಡುಕೆಯ್ದು–ತೀವ್ರತೆಯಿಂದ, ಕಾದೆ–ಯುದ್ಧಮಾಡಲು. ಭೀಕರ ರಥಚಕ್ರಮಂ–ಭಯಂಕರವಾದ ರಥದ ಗಾಲಿಯನ್ನು, ಧಾತ್ರಿ–ನೆಲವು, ಭೂಮಿಯು, ಕೋಪದಿಂ–ಸಿಟ್ಟಿನಿಂದ, ಪಿಡಿದು–ಹಿಡಿದುಕೊಂಡು, ನುಂಗಿದಳ್–ನುಂಗಿದಳು, ಎಂದರೆ ಕರ್ಣನ ತೇರಿನ ಗಾಲಿಗಳು ನೆಲದಲ್ಲಿ ಹೂತುಕೊಂಡುವು ಎಂದು ಅಭಿಪ್ರಾಯ.

ವಚನ : ಮುಯ್ಯೇೞ್ಸೂೞ್ಪರಂ–ಇಪ್ಪತ್ತೊಂದು ಸಲದವರೆಗೆ; ಒಲ್ಲಣಿಗೆಯಂ ಪಿೞಿವಂತೆ–ಒದ್ದೆ ಬಟ್ಟೆಯನ್ನು ಹಿಂಡುವಂತೆ; ಪಿಡಿದ ಪಗೆಗೆ–ಹಿಡಿದ ದ್ವೇಷಕ್ಕೆ : ಕಡಿದೊಟ್ಟಿದಾಗಳ್ – ಕಡಿದು ರಾಶಿ ಮಾಡಿದಾಗ ; ಕೊಕ್ಕರಿಸಿ–ಅಸಹ್ಯಪಟ್ಟು,

೨೦೭. ಬಱಿವಂ–ಬರಿದಾದವನು, ನಿಸ್ಸಹಾಯಕನಾದವನು, ಸಾರಥಿಯಿಲ್ಲ–ಸಾರಥಿಯು ಇಲ್ಲ; ಮೆಯ್ಗೆ–ಮೈಗೆ, ಮಱೆಯುಂ – ಮರೆಯಾದ ಕವಚವೂ, ತಾನಿಲ್ಲ–ತಾನು ಇಲ್ಲ ; ಎಂತು ಈಗಳ್ ಆಂ ಇಸುವೆಂ–ಹೇಗೆ ಈಗ ನಾನು ಹೊಡೆಯುವೆನು ? ನೋಡಿರೆ–ನೋಡಿರಿ, ಮತ್ತಂ–ಮತ್ತೂ, ಒಂದನಿಸಲುಂ–ಒಂದು ಬಾಣವನ್ನು ಹೂಡುವುದಕ್ಕೂ, ಕೈಯೇೞದು–ಕೈ ಏಳುವುದಿಲ್ಲ ; ಏಕೆ ಎಂದುಂ ಆಂ ಅಱಿಯೆಂ–ಏಕೆ ಎಂದು ನಾನು ತಿಳಿಯೆನು ; ಕೂರ್ಮೆಯೆ–ಪ್ರೀತಿಯೆ, ಮಿಕ್ಕು–ಮೀರಿ, ಬಂದಪುದು–ಬರುತ್ತಿದೆ, ಇದರ್ಕೆ ಏಗೆಯ್ವೆನ್–ಇದಕ್ಕೆ ಏನು ಮಾಡುವೆನು, ಏನೆಂಬೆಂ–ಏನೆಂದು ಹೇಳುವೆ ? ಆಂ–ನಾನು, ಮುನ್ನಿನ ವೈರಮಂ–ಹಿಂದಿನ ದ್ವೇಷವನ್ನು, ಮಱೆದೆಂ ಮರೆತೆನು ; ಇದಿಂತು–ಇದು ಹೀಗೆ; ಭೂಧರಾ–ಗೋವಿಂದನೇ, ಏ ಕಾರಣಂ–ಏನು ಕಾರಣ ? ಈ ಪದ್ಯದಲ್ಲಿ ಸುಮಾರು ಹದಿಮೂರು ವಾಕ್ಯಗಳಿವೆ, ಪಾರ್ಥನ ಮನಸ್ಸಿನಲ್ಲಿ ಎದ್ದ ಭಾವಗಳ ಪರಂಪರೆಯ ವೇಗವನ್ನು ಇವು ತೋರಿಸುತ್ತವೆ; ತನಗೂ ಕರ್ಣನಿಗೂ ಏನೋ ಒಂದು ಅಜ್ಞಾತ ಮೈತ್ರಿ ಇದೆಯೆಂದು ಅವನಿಗೆ ತೋರಿ ಕರ್ಣನ ವಧೆಗೆ ಅವನು ಹಿಂತೆಗೆ

ಯುತ್ತಾನೆ, ಇಂಥ ಸಂದರ್ಭ ವ್ಯಾಸಭಾರತದಲ್ಲಿ ಕಾಣುವುದಿಲ್ಲ. ರಥದ ಗಾಲಿಯನ್ನು ನೆಲದಿಂದ ಕೀಳುವವರೆಗೆ ಸ್ವಲ್ಪ ತಾಳಬೇಕೆಂದು ಕರ್ಣ ಅರ್ಜುನನನ್ನು ಕೇಳುತ್ತಾನೆ, ಹಾಗೆ ಮಾಡುವುದು ಧರ್ಮವೆಂದೂ ಹೇಳುತ್ತಾನೆ; ಆಗ ಕೃಷ್ಣ ಕರ್ಣನು ದುರ್ಯೋಧನನನ್ನು ಸೇರಿ ಮಾಡಿದ ಅನ್ಯಾಯಗಳನ್ನು ಹೇಳುತ್ತ ಆಗ ನಿನ್ನ ಧರ್ಮ ಎಲ್ಲಿ ಹೋಯಿತು (ಕ್ವತೇ ಧರ್ಮ ಸ್ತದಾಗತಃ) ಎಂದು ಮೂದಲಿಸುತ್ತಾನೆ; ಅದಕ್ಕೆ ಕರ್ಣ ಏನು ಉತ್ತರವನ್ನು ಹೇಳದೆ, (ಲಜ್ಜಾವನತೋ ನೋತ್ತರಂ ಕಿಂಚಿದುಕ್ತವಾನ್) ಕ್ರೋಧದಿಂದ ತುಟಿಕಚ್ಚಿ ಧನಸ್ಸನ್ನು ಎತ್ತಿಕೊಂಡು ಯುದ್ಧ ಮಾಡುವನು, ಆಗ ಕೃಷ್ಣ ದಿವ್ಯಾಸ್ತ್ರದಿಂದ ಇವನನ್ನು ಸೀಳಿಬಿಸುಡು (ದಿವ್ಯಾಸ್ತ್ರೇಣ ನಿರ್ಭಿದ್ಯ ಪಾತಯಸ್ವ ಮಹಾಬಲ) ಎಂದೆನ್ನುವನು. ಅನೇಕ ಅಸ್ತ್ರ ಪ್ರತ್ಯಸ್ತ್ರಗಳ ಪ್ರಯೋಗವಾಗುತ್ತದೆ, ಕೊನೆಗೆ ಅರ್ಜುನ ಅಂಜಲಿಕಾಸ್ತ್ರವನ್ನು ಸೆಳೆದುಕೊಂಡು ಕರ್ಣನ ಶಿರವನ್ನು ಕತ್ತರಿಸುತ್ತಾನೆ. ಪಂಪನ ಪದ್ಯದಲ್ಲಿ ಕಾಣುವ ಅರ್ಜುನನ ಅನಿರೀಕ್ಷಿತ ಕರ್ಣಮೈತ್ರಿಯೂ ಅದರಿಂದ ಅವನಲ್ಲಿ ಉಂಟಾದ ಅನುಕಂಪೆಯೂ ಆ ಕವಿಯ ಪ್ರತಿಭಾ ಜ್ಯೋತಿಯೆಂದು ಕಾಣುತ್ತದೆ, ಇದು ಕುಮಾರವ್ಯಾಸನ ಪ್ರತಿಭೆಯಲ್ಲಿ ಮತ್ತಷ್ಟು ಹದಗೊಂಡು ಅರ್ಜುನನ ಕರ್ಣಸ್ನೇಹದ ಭಾವಗೀತೆಯಾಗಿ ಪರಿಣಮಿಸಿರುವಂತೆ ಮನಸ್ಸಿಗೆ ಅನುಭವವಾಗುತ್ತದೆ.

**ವಚನ :** ಸೋದರಿಕೆಯೆ – ಭ್ರಾತೃಭಾವವೇ; ಮಿಕ್ಕುಬರ್ಕುಮಾಗದೆ–ಮೀರಿ ಬರುತ್ತದಲ್ಲವೆ ? ಅಂತರ್ಗತದೊಳ್–ಮನಸ್ಸಿನಲ್ಲಿ ;

೨೦೮. ನೆಗೞ್ದಭಿಮನ್ಯುವಂ–ಪ್ರಸಿದ್ಧನಾದ ಅಭಿಮನ್ಯುವನ್ನು, ಚಲದಿಂ–ಮಾತ್ಸರ್ಯದಿಂದ, ಅಂದು–ಆದಿನ, ಇಱಿದು–ಕೊಂದು, ನಿಜಾಗ್ರಜಾತನಂ–ನಿನ್ನ ಅಣ್ಣ ಧರ್ಮರಾಜನನ್ನು, ಸುಗಿವಿನಂ–ಹೆದುರುವಂತೆ, ಎಚ್ಚು–ಬಾಣ ಪ್ರಹಾರ ಮಾಡಿ, ಬೀರದೊಳೆ – ಶೌರ್ಯದಲ್ಲಿಯೇ, ಬೀಗುವ – ಗರ್ವಿಸುವ, ಸೂತಸುತಂಗೆ–ರಥಕಾರನ ಮಗನಿಗೆ, ನೀನುಂ–ನೀನುಕೂಡ, ಆಜಿಗೆ–ಯುದ್ಧಕ್ಕೆ, ಸೆಡೆದಿರ್ದೆಯಪ್ಪೊಡೆ–ಭಯಪಡುತ್ತಿರುವೆಯಾದರೆ, ಇರು–ಹಾಗೆಯೆ ಇರು ; ಚಕ್ರನಿಘಾತದಿಂ–ಚಕ್ರಾಯುಧದ ಏಟನಿಂದ, ಇಕ್ಕಿ–ಹೊಡೆದು, ಬೀರಂ–ಶೌರ್ಯವು, ಉರ್ವಿಗೆ–ಲೋಕಕ್ಕೆ, ಪಡಿಚಂದಮಾಗೆ – ಪ್ರತಿಮೆಯಾಗಲು, ಮಾದರಿಯಾಗಲು, ತಱಿದೊಟ್ಟಿ–ಕತ್ತರಿಸಿಹಾಕಿ, ಜಯಾಂಗನೆಗೆ–ಜಯ ವನಿತೆಗೆ, ಆಣ್ಮನಾದಪೆಂ–ಸ್ವಾಮಿಯಾಗುತ್ತೇನೆ.

**ವಚನ :** ಎಂಬನ್ನೆಗಂ – ಎನ್ನುವಷ್ಟರಲ್ಲಿ ; ಧರಾತಳಂ – ಭೂಮಿಯು ; ಅಳಱಿ–ಕಂಪಿಸಲು ; ನಿಟ್ಟಾಲಿಯಾಗಿ–ದೀರ್ಘದೃಷ್ಟಿಯುಳ್ಳವನಾಗಿ ; ಮುಟ್ಟೆವಂದು–ಹತ್ತಿರಬಂದು ; ಮರ್ಮೋದ್ಘಾಟನಂಗೆಯ್ದು – ಮರ್ಮಭೇದಕವಾದ ಮಾತುಗಳನ್ನು ಆಡಿ ; ವನದಂತಿಯಂತೆ–ಕಾಡಾನೆಯಂತೆ ; ಧ್ವಾಂಕ್ಷಧ್ವಜಮುಂ–ಕಾಕಧ್ವಜವನ್ನು (ಕಾಗೆಯುನ್ನುಳ್ಳ ಧ್ವಜ) ; ಉಡಿದು–ಮುರಿದು ; ಕೆಡೆವಿನಂ–ಬೀಳುವಂತೆ.

೨೦೯. ಪಱಯಿಗೆ–ಬಾವುಟವು, ಬಿೞ್ದೊಡೆ–ಬಿದ್ದರೆ, ಬೀರದ–ಪ್ರತಾಪದ, ಪಱವಿಗೆಯಂ ಧ್ವಜವನ್ನು, ನಿಱಿಸಲೆಂದೆ – ಸ್ಥಾಪಿಸಬೇಕೆಂದೇ, ಹರಿವಕ್ಷಮಂ – ಕೃಷ್ಣನ ಎದೆಯನ್ನು, ಅ [ೞ್ದ]–ಮುಳುಗಿ, ನಾಟಿ; ಅಱಿವೋಗೆ–ಹೊರಕ್ಕೆ ಸೂಸು ವಂತೆ, ಎಚ್ಚು – ಪ್ರಯೋಗಮಾಡಿ, ಮುಳಿಸು – ಕೋಪವು,ಅವಗಱಿಯಿಸುತಿರೆ – ಅಧಿಕವಾಗುತ್ತಿರಲು, ನರನ ಬಿಲ್ಲ – ಅರ್ಜುನನ ಬಿಲ್ಲಿನ, ಗೊಣೆಯುಮಂ – ಹೆದೆಯನ್ನೂ, ಎಚ್ಚಂ–ಪ್ರಹಾರ ಮಾಡಿದನು ಎಂದರೆ ಕತ್ತರಿಸಿದನು.

೨೧೦. ಬೆಳಗುವ – ಉರಿಯುವ, ಸೊಡರ್ಗಳ–ದೀಪಗಳ, ಬೆಳಗು–ಪ್ರಕಾಶವು, ಪೋಪ ಪೊೞ್ತಱೊಳ್–ಆರಿಹೋಗುವ ಹೊತ್ತಿನಲ್ಲಿ, ಅಗ್ಗಳಿಸುವವೊಲ್ – ಹೆಚ್ಚಾಗುವ ಹಾಗೆ, ದಿನಪಸುತಂ–ಸೂರ್ಯನ ಮಗ ಕರ್ಣನು, ಅಸ್ತಮಯ ಸಮಯ ದೊಳ್ – ಮುಳುಗುವ ಸಮಯದಲ್ಲಿ ಎಂದರೆ ಸಾಯುವ ಹೊತ್ತಿನಲ್ಲಿ, ತೇಜಂ – ತೇಜಸ್ಸು, ಪಜ್ಜಳಿಸೆ–ಪ್ರಕಾಶಿಸಲು, ತೞತ‍ೞಿಸಿ–ಥಳಥಳ ಎಂದು, ತೊಳ ತೊಳ ತೊಳಗಿದಂ–ಮಿಗಿಲಾಗಿ ಪ್ರಕಾಶಿಸಿದನು.

**ವಚನ**: ನಿಶಿತವಿಕರ್ಣ ಹತಿಯಿಂದೆ – ಹರಿತವಾದ ಬಾಣದ ಘಾತದಿಂದ; ಕೞಯೆ ನೊಂದು–ಸಾಯುವಂತೆ ನೋವನ್ನು ಹೊಂದಿ.

೨೧೧. ಕಸೆಯಂ–ಚಾವಟಿಯನ್ನು, ಬಿಟ್ಟು–ಕೆಳಗಿಟ್ಟು, ಅಭಿಮಂತ್ರಿಸಿ – ಮಂತ್ರಹಾಕಿ, ಚಕ್ರಮಂ – ಚಕ್ರಾಯುಧವನ್ನು, ಅಸುರವೈರಿ – ಕೃಷ್ಣನು, ಇಡು ವಾಗಳ್ – ಎಸೆಯುವಾಗ, ಬಾರಿಸಿ – (ಅರ್ಜುನನು) ತಡೆದು, ಪೆಱತು – ಬೇರೆ, ಗೊಣೆಯದಿಂದೆ – ಬಿಲ್ಲಿನ ಹೆದೆಯಿಂದ, ಬಿಲ್ಲಂ – ಬಿಲ್ಲನ್ನು, ಏಱಿಸಿ – ಕಟ್ಟಿ, ತ್ರಿಭುವನಂಗಳ್ – ಮೂರು ಲೋಕಗಳು, ಅಳ್ಳಾಡುವಿನಂ – ಕಂಪಿಸುತ್ತಿರಲು,

**ವಚನ** : ಪಶುಪತಿಯಂ–ಶಿವನನ್ನು, ಆರಾಧಿಸಿ–ಪೂಜಿಸಿ, ಮೆಚ್ಚಿಸಿ, ತೆಲ್ಲಟಿಯೆಂದು–ಬಳುವಳಿಯೆಂದು.

೨೧೨. ಗಿರಿಜೆಯ -- ಪಾರ್ವತಿಯು, ಮೆಚ್ಚಿ ಕೊಟ್ಟ, ನಿಶಿತಾಸ್ತ್ರಮಂ – ಕ್ರೂರವಾದ ಬಾಣವನ್ನು, ಅಂಜಲಿಕಾಸ್ತ್ರಮಂ – ಅಂಜಲಿಕಾ ಎಂಬ ಹೆಸರುಳ್ಳ ಬಾಣವನ್ನು, ಭಯಂಕರತರಮಾಗೆ – ಅತಿಭೀಕರವಾಗಲು, ಕೊಂಡು – ಸೆಳೆದು ಕೊಂಡು, ವಿಧಿಯಿಂದೆ–ಬ್ರಹ್ಮಮಂತ್ರದಿಂದ, ಅಭಿಮಂತ್ರಿಸಿ–ಮಂತ್ರದಿಂದ ಆಹ್ವಾನ ಮಾಡಿ, ಬಿಲ್ಲೊಳ್–ಬಿಲ್ಲಿನಲ್ಲಿ, ಪೂಡೆ–ಹೂಡಲು, ಉರ್ವರೆ–ಭೂಮಿ, ನಡುಗಿತ್ತು– ನಡುಗಿತು ; ಅಜಾಂಡಂ–ಬ್ರಹ್ಮಾಂಡವು, ಒಡೆದತ್ತು–ಒಡೆಯಿತು ; ನೆಲಂ–ನೆಲವು, ಪಿಡುಗಿತ್ತು–ಸಿಡಿಲಿನಂತೆ ಸಿಡಿಯಿತು, ಸಪ್ತಸಾಗರಂ – ಏಳು ಸಮುದ್ರಗಳು. ಉಡುಗಿತ್ತು–ಸಂಕೋಚವಾದುವು ; ಕದನತ್ರಿಣೇತ್ರನಾ – ಅರ್ಜುನನ, ಸಾಹಸಂ – ಪರಾಕ್ರಮು, ಅದೇಂ ಪಿರಿದೋ–ಅದೇನು ಹಿರಿದಾದುದೋ !

**ವಚನ** : ಆಕರ್ಣಾಂತಂಬರಂ–ಕಿವಿಯ ಮೂಲದ ವರೆಗೆ ; ತೆಗೆದು–ಎಳೆದು ;

ಆ ಕರ್ಣಾಂತಂ ಮಾಡಲ್—ಆ ಕರ್ಣನನ್ನು ಕೊಲ್ಲಲು, ಕಂಧರಸಂಧಿಯಂ—ಕೊರಳಿನ ಸಂಧಿಯನ್ನು.

೨೧೩. ಮುಳಿದು—ಕೋಪಿಸಿ, ಎಚ್ಚಾಗಳ್—ಪ್ರಯೋಗಿಸಿದಾಗ, ಮಹೋಗ್ರ ಪ್ರಳಯ ಶಿಖಿ ಶಿಖಾನೀಕಮಂ—ಮಹಾಭಯಂಕರವಾದ ಪ್ರಳಯ ಕಾಲದ ಅಗ್ನಿಯ ಜ್ವಾಲಾಮಾಲೆಗಳನ್ನು, ವಿಸ್ಫುಲಿಂಗಂಗಳುಮಂ — ಕಿಡಿಗಳನ್ನು, ಬೀಱುತ್ತುಂ — ಎರಚುತ್ತ, ಔರ್ವಜ್ವಳನ ರುಚಿಯುಮಂ—ಬಾಡಬಾಗ್ನಿಯ ಪ್ರಕಾಶವನ್ನೂ, ತಾನೆ — ತಾನೇ, ತೋಱುತ್ತುಂ—ತೋರಿಸುತ್ತ, ಆಟಂದು—ಮೇಲೆಹಾಯ್ದು, ಅಳುರುತ್ತುಂ—ವ್ಯಾಪಿಸುತ್ತ, ಬಂದು, ಕೊಂಡಾಗಳೆ — ತಾಗಿದಕೂಡಲೇ, ತಾಗಿದಾಗ, ಪಾಯ್ದು—ಹರಿದ, ಕೆನ್ನೆತ್ತರಿಂದೆ — ಕೆಂಪುರಕ್ತದಿಂದ, ಗಗನತಳಂ—ಆಕಾಶ ಪ್ರದೇಶವು, ಉಚ್ಚಳಿಸುತ್ತಿರ್ಪನ್ನೆಗಂ — ಮೇಲು ಮೇಲಕ್ಕೆ ಹೋಗುತ್ತಿರಲು, ಕರ್ಣೋತ್ತಮಾಂಗಂ — ಕರ್ಣನ ತಲೆ, ಅತ್ತ—ಅತ್ತಕಡೆಗೆ, ಸಿಡಿಲ್ದು—ಸಿಡಿದುಹಾರಿ, ಭರದೆ — ವೇಗವಾಗಿ, ಬಿೞ್ದುದು — ಬಿದ್ದಿತು. ವ್ಯಾಸ ಭಾರತದಲ್ಲಿ ಕರ್ಣನ ಶಿರಸ್ಸು ಉರುಳಿದ್ದು ಹೀಗಿದೆ ;

ಮಹಾನಿಲೇನಾದ್ರಿಮಿವಾಪವಿದ್ಧಂ
ಯಜ್ಞಾವಸಾನೇ ಽಗ್ನಿಮಿವಾಪ್ರಶಾಂತಂ ।
ರರಾಜ ಕರ್ಣಸ್ಯ ಶಿರೋ ನಿಕೃತ್ತಂ
ಅಸ್ತಂಗತಂ ಭಾಸ್ಕರಸ್ಯೇವ ಬಿಂಬಂ ॥
ಸಹಸ್ರ ನೇತ್ರ ಪ್ರತಿಮಾನ ಕರ್ಮಣಃ
ಸಹಸ್ರ ನೇತ್ರ ಪ್ರತಿಮಾನನಂ ಶುಭಂ ।
ಸಹಸ್ರ ರಶ್ಮಿರ್ದಿನ ಸಂಚಯೇ ಯಥಾ
ತತೋಽಪತತ್ ಕರ್ಣಶಿರೋ ವಸುಂಧರಾಮ್ ॥

ವಚನ : ಅಗುಂದಲೆಯಾದ — ಅತಿಶಯವಾದ ; ತೊಲಗದ ನನ್ನಿಯಂ — ಸ್ಥಿರವಾದ ಸತ್ಯವನ್ನು ; ಅೞ್ಕಿಯುಂ — ಮುಂಡವೂ ; ಒಳ್ಪಿನ — ಒಳ್ಳೆಯತನದ ;

೨೧೪. ಚಾಗದ — ತ್ಯಾಗದ, ನನ್ನಿಯ — ಸತ್ಯದ, ಕಲಿತನದ — ಶೌರ್ಯದ, ಆಗರಂ—ನಿವಾಸಸ್ಥಾನ, ಎನೆ—ಎನ್ನಲು, ನೆಗೞ್ದ—ಪ್ರಸಿದ್ಧನಾದ, ಕರ್ಣನ ಒಡಲಿಂದೆ—ಕರ್ಣನ ದೇಹದಿಂದ, ಎಂತುಂ—ಹೇಗೂ, ಪೋಗಲ್ಕಱಿಯದೆ—ಹೋಗಲು ತಿಳಿಯದೆ, ಸಿರಿ — ಲಕ್ಷ್ಮಿ, ಆಗಳ್ — ಆಗ, ಕರಿಕರ್ಣತಾಳ ಸಂಚಳೆಯಾದಳ್ — ಆನೆಯ ಅಲುಗಾಡುವ ಕಿವಿಗಳಂತೆ ಸಂಚಲಳಾದಳು.

೨೧೫. ಕುಡುಮಿಂಚಿನ — ವಕ್ರವಾದ ಮಿಂಚನ್ನುಳ್ಳ, ಸಿಡಿಲುರುಳಿಯೊಳ್—ಸಿಡಿಲ ಉಂಡೆಯಲ್ಲಿ, ತೇಜೋರೂಪಂ—ತೇಜಸ್ಸಿನ ರೂಪವುಳ್ಳ, ಒಂದು ಮೂರ್ತಿ — ಒಂದು ಬಿಂಬವು, ಒಡಂಬಡಂ ಪಡೆಯೆ — ಒಪ್ಪುವುದಾಗಲು, ಹೊಂದಿಕೊಳ್ಳಲು,

ಕರ್ಣನ, ಒಡಲಿಂದೆ–ದೇಹದಿಂದ, ಆಗಳ್–ಆಗ, ನಡೆ ನೋಡೆ ನೋಡೆ–ಚೆನ್ನಾಗಿ ನೋಡ ನೋಡಲು, ದಿನಪನೊಳ್ – ಸೂರ್ಯನಲ್ಲಿ, ಒಡಗೂಡಿದುದು – ಐಕ್ಯವಾಯಿತು.

೨೧೬. ಪುರಿಗಣೆಯಂ–ದಿವ್ಯಾಸ್ತ್ರವನ್ನು(?), ಪಿಡಿವನೆ–ಹಿಡಿದನೆ? ಎರಡುನುಡಿದನೆ–ಎರಡು ಮಾತು ಎಂದರೆ ಸುಳ್ಳನ್ನು ಹೇಳಿದನೆ? ಬಳ್ಕಿದನೆ–ಬಾಗಿದನೆ? ಛಲಮಂ ಪಿಡಿದು–ಹಿಡಿದ ಪಟ್ಟನ್ನೇ ಹಿಡಿದು, ತಾನೆ–ತಾನೇ, ತನ್ನನ್ನೆ–ತನ್ನನ್ನೇ, ಅಱದಂ – ನಾಶಮಾಡಿಕೊಂಡನು, ಎಂದು, ದೇವರ ಪಡೆ – ದೇವತೆಗಳ ಗುಂಪು. ಇನತನೂಜನ – ಕರ್ಣನ, ಗಂಡಂ – ಪೌರುಷವನ್ನು, ಗಡಣದೆ – ಗುಂಪಾಗಿ, ಪೊಗಟ್ಟಿದುದು–ಹೊಗಳಿತು.

೨೧೭. ಅಣ್ಣಾ – ಅಣ್ಣನೇ, ಭಾರತದೊಳ್ – ಮಹಾಭಾರತದಲ್ಲಿ, ಇಂಪೆಱರಾರುಮಂ – ಇನ್ನು ಬೇರೆ ಯಾರನ್ನೂ, ನೆನೆಯದಿರ್ – ನೆನಪಿಗೆ ತಂದುಕೊಳ್ಳದೆ ಇರು ; ಒಂದೆ ಚಿತ್ತದಿಂ–ಒಂದೇ ಮನಸ್ಸಿನಿಂದ, ನೆನೆವೊಡೆ–ನೆನೆಯುವ ಪಕ್ಷದಲ್ಲಿ, ಕರ್ಣನಂ–ಕರ್ಣನನ್ನು, ನೆನೆಯ–ಸ್ಮರಿಸು ; ಕರ್ಣನೊಳ್–ಕರ್ಣನಲ್ಲಿ, ಆರ್ದೊರೆ–ಯಾರು ಸಮಾನ ; ಕರ್ಣನ ಏಱು – ಕರ್ಣನ ಕಾಳಗವು, ಕರ್ಣನ ಕಡು ನನ್ನಿ–ಕರ್ಣನ ತೀವ್ರ ಸತ್ಯ, ಕರ್ಣನಳವು–ಕರ್ಣನ ಶಕ್ತಿ, ಅಂಕದ–ಹೆಸರುವಾಸಿಯಾದ, ಕರ್ಣನ ಚಾಗಂ–ಕರ್ಣನ ದಾನ, ಎಂದು–ಎಂಬುದಾಗಿ, ಕರ್ಣನ ಪಡೆಮಾತಿನೊಳ್–ಕರ್ಣನ ವೃತ್ತಾಂತದಲ್ಲಿ, ಪುದಿದು – ತುಂಬಿ, ಭಾರತಂ – ಮಹಾಭಾರತವು. ಕರ್ಣ ರಸಾಯನಮಲ್ತೆ – ಕಿವಿಗಳಿಗೆ ರಸಾಯನವಲ್ಲವೆ? ಇಲ್ಲಿ ಅರ್ಜುನ (ಅರಿಕೇಸರಿ)ನನ್ನು ಕೂಡ ಮರೆತಿದ್ದಾನೆ ಪಂಪ: ಆತನಿಗೆ ಕರ್ಣನಲ್ಲಿ ಅಷ್ಟು ಅನುಕಂಪೆ.

ವಚನ : ರಿಪುಕುರಂಗ ಕಂಠೀರವನ – ಶತ್ರುಗಳೆಂಬ ಹುಲ್ಲೆಗಳಿಗೆ ಸಿಂಹನಾಗಿರುವವನು, ಅರ್ಜುನನ ; ವೈಕರ್ತನಂ–ಕರ್ಣನು : ಮೇಲುದಂ ಬೀಸಿ–ಉತ್ತರೀಯವನ್ನು ಅತ್ತ ಇತ್ತ ಆಡಿಸಿ, ಆರ್ವ – ಗರ್ಜಿಸುವ , ಪತಾಕಿನಿಯೊಳ್–ಸೈನ್ಯದಲ್ಲಿ.

೨೧೮. ಬದ್ದವಣದ–ಮಂಗಳಸೂಚಕವಾದ, ಪಱೆಗಳ್–ಹರೆಗಳು, ಭೇರಿಗಳು, ಕಿವಿ ಸದ್ದುಂಗಿಡೆ – ಕಿವಿ ಶಬ್ದವನ್ನು ಕಳೆದುಕೊಳ್ಳಲು ಎಂದರೆ ಕಿವುಡಾಗುವಂತೆ, ಮೊಱಗೆ – ಸದ್ದು ಮಾಡಲು, ದುಂದುಭಿ – ಭೇರಿಗಳ (ದೇವತೆಗಳ), ರವದ–ಶಬ್ದದ. ಒಂದು ಉದ್ಧಾನಿ – ಒಂದು ಅತಿಶಯವು, ನೆಗೞೆ – ಉಂಟಾಗಲು, ಮುಗುಳ–ಮೊಗ್ಗುಗಳ, ಅಲರೊದ್ದೆ – ಹೂಗಳ ರಾಶಿಗಳು, ಅಂಬರತಲದೊಳ್ – ಆಕಾಶದಲ್ಲಿ, ಕರಂ–ವಿಶೇಷವಾಗಿ, ಸಿದ್ಧಮಾದುದು–ಅಣಿಯಾಯಿತು.

೨೧೯. ಒದವಿದ – ಸಮೃದ್ಧಿಯಾದ, ಅಲಂಪು–ಸಂತೋಷವು, ಕಣ್ಣೆವೆ–

ಕಣ್ಣಿನ ರೆಪ್ಪೆ, ಕರುಳ್–ಕರುಳು, ತನಗೆ–ತನಗೇ, ಎಂಬುದಂ–ಎಂದು ಹೇಳು ವುದನ್ನು (ಎಂದರೆ ಕಣ್ಣುಗಳು ಮತ್ತು ಕರುಳು (ಅಂತಃಕರಣದ ಪ್ರೀತಿ) ತನಗೆ ಮಾತ್ರ, ಬೇರೆ ಯಾರಿಗೂ ಇಲ್ಲ), ಉಂಟುಮಾಡೆ–ಸೆಗಳಲು, ನೋಡಿದುದಱಿ– ನೋಡಿದ್ದರಲ್ಲಿಯೇ, ಕಣ್ಗಳ್ – ಕಣ್ಣುಗಳು, ಅಱ್ಕಿಸುವಡುತ್ತಿರೆ – ಅಜೀರ್ಣವನ್ನು ಹೊಂದಿರಲು, ಪೋ – ಹೋಗು, ಪಸವು – ಬರ, ಓಡಿತು – ತೊಲಗಿತು, ಎಂದು, ನೀರದ ಪಥದೊಳ್ – ಆಕಾಶದಲ್ಲಿ, ನಾರದಂ – ನಾರದನು, ದಂಡಕಾಷ್ಠದ – ದಂಡ ಗೋಲಿನ; ತುದಿಯೊಳ್–ತುದಿಯಲ್ಲಿ, ಪಳಂಚಿ–ತಾಗಿ, ಅಲೆಯೆ–ಅಲುಗಾಡುವಂತೆ, ಕೋವಣಮುಂ – ಕೌಪೀನವನ್ನು, ಗುಡಿಗಟ್ಟಿ – ಧ್ವಜವಾಗಿ ಕಟ್ಟಿ, ಅರಿಗನಂ– ಅರ್ಜುನನನ್ನು, ತಗುಳ್ದು–ಅನುಸರಿಸಿ, ಅಂದು–ಆ ದಿವಸ, ಪೊಗೞ್ದು–ಹೊಗಳಿ, ಆಡಿದಂ–ಕುಣಿದನು, ಕರ್ಣಾರ್ಜುನರ ಯುದ್ಧವನ್ನು ನೋಡಲು ನಾರದನು ಬಂದುದಕ್ಕೆ ಕಾರಣ ಯಾವ ಯುದ್ಧವನ್ನು ನೋಡಿಯೂ ಅವನ ಕಣ್ಣುಗಳಿಗೆ ತೃಪ್ತಿ ಯಾಗದೆ ಇದ್ದದ್ದು; ಇಂದು ಆ ಕಣ್ಣುಗಳಿಗೆ ತೃಪ್ತಿಯುಂಟಾಗಿ ಕಣ್ಣು ಪಡೆದವ ನೆಂದರೆ ಅವನೇ ಎಂಬಂತಾಯಿತು; ಆ ತೃಪ್ತಿಯನ್ನು ಒದಗಿಸಿದ ಅರ್ಜುನನಲ್ಲಿ ಆದರ ಮಿಗಿಲಾಯಿತು. ಅವನ ಕಣ್ಣು ಸಾರ್ಥಕವಾಯಿತು, ಎಂದು ತಾತ್ಪರ್ಯ, ತನ್ನ ದಂಡಕೋಲಿಗೆ ಕೌಪೀನವನ್ನು ಬಾವುಟವಾಗಿ ಕಟ್ಟಿ ನಾರದ ನರ್ತನ ಮಾಡಿದ್ದು ಆನಂದ ನೃತ್ಯ. ಆದರೆ ಅದನ್ನು ನೋಡುವವರಿಗೆ ನಗುವೂ ಬರ ಬಹುದು.

೨೨೦. ಪೞಯಿಗೆಯುಂ – ಧ್ವಜವನ್ನು, ಉಡುಗಿ – ಕುಗ್ಗಿಸಿಕೊಂಡು, ಪೆೞವನಂ – ಹೆಳವನಾದ ಅರುಣನನ್ನು, ರಥಮುಂ – ರಥವನ್ನು, ಎಸಗಲ್ಕೆ – ನಡೆಸು ವುದಕ್ಕೆ, ಪೇೞ್ದು–ಹೇಳಿ; ಸುತಶೋಕದ–ಪುತ್ರಶೋಕದ, ಪೊಂಪುೞಯೊಳ್– ಆಧಿಕ್ಯದಲ್ಲಿ, ಮೆಯ್ಯಱಿಯದೆ – ಮೈಯನ್ನು ತಿಳಿಯದೆ ಎಂದರೆ ಪ್ರಜ್ಞೆ ಯಿಲ್ಲದೆ, ದಿನಪಂ–ಸೂರ್ಯನು, ನೀರಿೞವಂತೆವೊಲ್–(ಸತ್ತವರಿಗಾಗಿ ೀರಲ್ಲಿಳಿದು ಸ್ನಾನ ಮಾಡುವಂತೆ, ಅಪರಜಳನಿಧಿಗೆ – ಪಶ್ಚಿಮ ಸಮುದ್ರಕ್ಕೆ, ಇೞದಂ– ಇಳಿದನು.

**ವಚನ**: ಬೞವೞಯನೆ – ದಾರಿಯಲ್ಲೇ, ಹಿಂದು ಹಿಂದೆಯೇ; ತನ್ನ ಪೋಪುದಂ – ತಾನು ಹೋಗುವುದನ್ನು; ನಾಡಾಡಿಯಲ್ಲದೆ – ಸಾಧಾರಣವಾಗಿ ಅಲ್ಲದೆ; ನಿಜನಿವಾಸಕ್ಕೆ–ತನ್ನ ಮನೆಗೆ.

೨೨೧. ಅಜರ–ದೇವತೆಗಳು, ಸುರಿವ–ಸುರಿಯುವ, ಪ್ರಸೂನ–ಹೂವುಗಳ, ರಜದಿಂ–ಪರಾಗದಿಂದ, ಕವಿಲಾದ–ಕಪಿಲವರ್ಣವಾದ. ಶಿರೋರುಹಂ–ಕೇಶಗಳು; ರಜಂಬೊರೆದ – ಪರಾಗದಿಂದ ವ್ಯಾಪ್ತವಾದ, ಅಳಿಮಾಲೆ – ದುಂಬಿಗಳ ಸಮೂಹ, ಮಾಲೆಯನೆ–ಹೂವಿನ ಹಾರವನ್ನೇ, ಪೋಲೆ–ಹೋಲಲು; ಪಯೋಜಜ ಪಾರ್ವತೀ

ಶರ–ಬ್ರಹ್ಮನ ಮತ್ತು ಶಿವನ, ಒಳ್ವರಕೆಯನಾಂತು–ಒಳ್ಳೆಯ ಆಶೀರ್ವಾದಗಳನ್ನು ಧರಿಸಿ, ಅಮ್ಮನ ಗಂಧವಾರಣಂ–ಅರ್ಜುನ, ಕರ್ಣಹತಿಯೊಳ್–ಕರ್ಣನ ವಧೆಯಲ್ಲಿ, ತನಗೆ, (ಧರ್ಮರಾಜನಿಗೆ) ಅಲ್ಕಿಜನೀಯೆ–ಪ್ರೀತಿಯನ್ನು ಕೊಡಲು. ಅಚ್ಯುತಂ ಬೆರಸು–ಶ್ರೀ ಕೃಷ್ಣ ಸಹಿತನಾಗಿ, ಅರಮನೆಗೆ, ಅಳುರ್ಕೆಯಿಂ – ಅತಿಶಯತೆಯಿಂದ, ಬಂದಂ–ಬಂದನು.

ದ್ವಾದಶಾಶ್ವಾಸಂ ಸಂಪೂರ್ಣಂ

# ತ್ರಯೋದಶಾಶ್ವಾಸಂ

೧. ಶ್ರೀದಯಿತನ–ಶ್ರೀಗೆ ವಲ್ಲಭನಾದ, ಹರಿಗನ–ಅರ್ಜುನನ, ಸಂಪಾದಿತ ಭುಜವೀರ್ಯಂ – ಗಳಿಸಿದ ಭುಜಪರಾಕ್ರಮ, ತನಗೆ, ಎರ್ದೆಯೊಳ್ – ಎದೆಯಲ್ಲಿ, ಅಲ್ಕಿಜಂ ಚೋದಿಸೆ–ಪ್ರೀತಿಯನ್ನುಂಟುಮಾಡಲು, ಅಂತಕ ತನಯಂ–ಧರ್ಮಪುತ್ರನು, ಆಗಳ್ – ಆಗ, ಆಶೀರ್ವಾದ ಪರಂಪರೆಯಿಂ – ಹರಕೆಗಳ ಸಾಲುಗಳಿಂದ, ಪರಸಿದಂ – ಆಶೀರ್ವಾದ ಮಾಡಿದನು.

೨. ಪರಸಿ – ಹರಸಿ, ಹರಿಗನಿಂದ – ಅರ್ಜುನನಿಂದ, ಇನಸುತಂ – ಕರ್ಣ, ಅಳಿಯೆ – ಸಾಯಲು, ಸಕಳಾವನೀತಳಭರಂ – ಸಮಸ್ತ ಭೂಮಂಡಲದ ಭಾರ, ಎನಗೆ–ನನಗೆ, ಈಗಳ್ – ಈಗ, ದೊರೆಕೊಂಡುದು – ಉಂಟಾಯಿತು, ಎಂದೊಡೆ– ಎಂದರೆ, ರಿಪುಕುರಂಗ ಕಂಠೀರವನಂ–ಅರ್ಜುನನನ್ನು, ಏಂ ಬಿತ್ತರಿಸಿದನೋ–ಏನು ವಿಸ್ತರಿಸಿದನೋ, ಎಂದರೆ ದೊಡ್ಡದು ಮಾಡಿದನೋ, ಹೊಗಳಿದನೋ.

ವಚನ : ಅತಿ ಸಂಭ್ರಮಾಕುಳಿತ–ಅತ್ಯಂತ ಸಡಗರದಿಂದ ವ್ಯಾಕುಲಿತರಾದ ; ಪರೀತ – ಬಳಸಿದ ; ಉಪನೀತ – ತರಲ್ಪಟ್ಟ ; ಪರಿಷೇಕದಿಂದೆ – ತಳಿಯುವುದರಿಂದ ; ಕರೆಗಣ್ಮೆ–ಉಕ್ಕಲು ;

೩. ದುರ್ಯೋಧನನ ವಿಲಾಪ :—ನೀನುಂ – ನೀನುಕೂಡ, ಅಗಲ್ದೆ–ಅಗಲಿ ಹೋದೆ ; ಇಂ–ಇನ್ನು, ಎನಗೆ–ನನಗೆ, ಪೇಳ್–ಹೇಳು ; ಪೆಜರ್ ಆರ್ ಎನಗೆ ಆಸೆ–ಬೇರೆ ಯಾರು ನನಗೆ ಆಸೆಯಾಗಿರುವವರು ? ನಿನ್ನಂ–ನಿನ್ನನ್ನು. ಇಂ–ಇನ್ನು ಆನುಂ–ನಾನು ಕೂಡ, ಅಗಲ್ವೆನೇ – ಅಗಲಿರುವೆನೇ, ಕೆಳೆಯ – ಸ್ನೇಹಿತನೇ ? ಅಂತರಂ – ಎದುರಿಸಿದವರನ್ನು, ಯಮಸ್ಥಾನಮನೆಯ್ದಿಸುತ್ತೆ – ಯಮನ ಎಡೆಗೆ ಸೇರಿಸುತ್ತ, ಪಿನ್ನನೆ – ಹಿಂದುಗಡೆಯೇ, ಬಂದಪೆನ್–ಬರುತ್ತೇನೆ ; ಇದುವೆ–ಇದೇ, ದಂದುಗಂ–ದುಃಖ, ಇಂತು–ಹೀಗೆ, ಎರ್ದೆಮುಟ್ಟೆ–ಎದೆಸೋಕಿ. ಕೂರ್ತು–ಪ್ರೀತಿಸಿ. ಅಂಗವಿಷಯಾಧಿಪ–ಕರ್ಣನೇ, ನೀಂ–ನೀನು, ಪೊರಗಾಗೆ–ಹೊರಗಾಗಲು ಎಂದರೆ ನನ್ನಿಂದ ಅಗಲಿ ಹೋಗಲು, ಮಾನಸವಾಳ್ವಂ–ಮನುಷ್ಯನ ಬದುಕನ್ನು ಬಾಳ್ವೆನೇ –ಬಾಳುತ್ತೇನೆಯೇ, ಪೇಳ್–ಹೇಳು.

೪. ಇವಗೆ–ಈ ಕರ್ಣ ದುರ್ಯೋಧನರಿಗೆ, ಒಡಲ್ ಎರಡು–ದೇಹಗಳು ಎರಡು, ಒಂದೇ ಜೀವಂ–ಒಂದೇ ಪ್ರಾಣ, ಎಂಬುದಂ–ಎಂಬುದನ್ನು, ಲೋಕಂ– ಜನ, ಎಂಬುದು–ಹೇಳುತ್ತದೆ ; ಈಗಳ್–ಈಗ, ಆ ನುಡಿ–ಆ ಮಾತು, ಪುಸಿಯಾಯ್ತು – ಸುಳ್ಳಾಯಿತು ; ನಿನ್ನಸು–ನಿನ್ನ ಪ್ರಾಣ, ಕಿರೀಟಿಯ–ಅರ್ಜುನನ, ಶಾತಶರಂಗಳಿಂದೆ–ಹರಿತವಾದ ಬಾಣಗಳಿಂದ, ಪೋಪೊಡಂ – ಹೋದರೂ, ಈ ನಾಣಿಲಿ ಜೀವಂ–ಈ ನನ್ನ ಲಜ್ಜೆಗೆಟ್ಟ ಜೀವವು, ಇನ್ನುಂ–ಇನ್ನು ಕೂಡ, ಈ ಒಡಲೊಳ್–ಈ ಮೈಯಲ್ಲಿ, ಇರ್ದುದು–ಇದೆ, ಎಂದೊಡೆ–ಎಂದರೆ, ಅಂಗವಲ್ಲಭಾ–

ಕರ್ಣನೇ, ನಿನ್ನೊಳ್-ನಿನ್ನಲ್ಲಿ, ಎನ್ನ-ನನ್ನ, ಕಡುಗೂರ್ಪಿಯುಂ-ಅತಿಶಯವಾದ ಪ್ರೀತಿಯೂ, ಅಕ್ಕಜುಂ-ಸ್ನೇಹವೂ, ಆವೆಡೆಯೊಳೆ-ಯಾವ ಎಡೆಯಲ್ಲಿಯೋ, ಎಲ್ಲಿಯೋ ?

೫. ಧರ್ಮತನಯಂ-ಧರ್ಮಪುತ್ರನು, ಸೋದರನೆಂದು-(ನೀನು) ಸಹೋದರ ನೆಂದು, ಅರಿಯಂ-ತಿಳಿಯನು ; ನಿವ್ಯಾ೯ಜದಿಂ-ಯಾವ ನೆಪವೂ ಇಲ್ಲದೆ ಎಂದರೆ ತಾನಾಗಿಯೇ, ನಿನ್ನಂ-ನಿನ್ನನ್ನು, ಆಂ-ನಾನು, ಅಱಿವೆಂ-ತಿಳಿದಿದ್ದೇನೆ, ಎಂದರೆ ನೀನು ಯಾರೆಂಬುದನ್ನು ನಾನು ಬಲ್ಲೆ ; ಮುನ್ನಱಿದಿರ್ದುಂ-ಮೊದಲೇ ತಿಳಿದಿದ್ದೂ, ಎನ್ನ-ನನ್ನ, ಅರಸಂ-ಪ್ರಭುತ್ವವನ್ನು (ರಾಜತ್ವವನ್ನು), ಆನೇಕೆ ಇತ್ತೆನಿಲ್ಲ-ನಾನು ಏಕೆ ಕೊಟ್ಟವನಾಗಲಿಲ್ಲ ? ಪೇೞ್-ಹೇಳು, ಅಱಿಪಲ್ಕೆ-(ನಿನಗೆ) ತಿಳಿಸುವುದಕ್ಕೂ, ಒಲ್ದೆನುಮಿಲ್ಲ-ಇಷ್ಟಪಡಲೂ ಇಲ್ಲ ? ಕಾರ್ಯವಶದಿಂ-ಸ್ವಕಾರ್ಯ ಸಾಧನೆಗೆ ವಶವಾಗಿ, ಕೂರ್ಪಂತೆವೋಲ್-ಪ್ರೀತಿಸುವಂತೆ, ಅಂಗನೃಪತೀ-ಕರ್ಣನೇ, ಮುಳಿಸಿಂದಂ-ಕೋಪ ದಿಂದ (ಪಾಂಡವರ ಮೇಲಿದ್ದ), ನಿನ್ನಂ-ನಿನ್ನನ್ನು, ಆಂ-ನಾನು, ನೆಱಿಕೊಂದೆಂ-ಪೂರ್ಣವಾಗಿ ಕೊಂದೆನು, ಕೌಂತೇಯರ್-ಪಾಂಡವರು, ಏಂ ಕೊಂದರೇ-ಏನು ಕೊಂದರೇ ?

೬. ಉದಧಿತರಂಗತಾಟಿತ ಧರಾತಳಮಂ-ಕಡಲ ಅಲೆಗಳ ಹೊಡೆತವುಳ್ಳ ಭೂ ಪ್ರದೇಶವನ್ನು, ನಿನಗೆ ಇತ್ತು-ನಿನಗೆ ಒಪ್ಪಿಸಿ, ನಿನ್ನ ಕೊಟ್ಟುದನೆ-ನೀನು ಕೊಟ್ಟಿದ್ದನ್ನೇ, ಪಸಾದಂ-ಪ್ರಸಾದ, ಎಂದು, ಪೊಡೆವಟ್ಟು-ನಮಸ್ಕರಿಸಿ, ಮನೋ ಮುದದಿಂದೆ-ಮನದ ಸಂತೋಷದಿಂದ, ಕೊಂಡು-ಸ್ವೀಕರಿಸಿ, ಬಾೞ್ವ-ಬದುಕುವ, ಬಯಕೆ-ಆಸೆಯು, ಇದುವೆ-ಇದೇ, ಮುಂ-ಮೊದಲು ; ನಿನಗೆ, ಅದಂ ಕಿಡಿಸಂದು -ಅದನ್ನು ಇಲ್ಲವಾಗಿಸುವಾಗ, ಕೆಡಿಸುವಾಗ, ಎಲೆ ಕರ್ಣ-ಎಲೆ ಕರ್ಣನೆ, ಆ ವೃಕೋದರನ-ಆ ಭೀಮಸೇನನ, ಕಾಯ್ಪನೆ-ಕೋಪವನ್ನೇ, ಪೊತ್ತಿಸಿದ-ಉರಿಯು ವಂತೆ ಮಾಡಿದ, ಎನ್ನ ಕಾಳೆಗಂ-ನಾನು ಹೂಡಿದ ಯುದ್ಧ, ನಿನಗೆ, ಕೇತು ವಾದುದು-ಕೇತು ಗ್ರಹವಾಯಿತು, ಅಥವಾ ಧೂಮಕೇತುವಾಯಿತು, ಎಂದರೆ ವಿನಾಶಕಾರಿಯಾಯಿತು.

ವಚನ: ಶೋಕಾನಲನೊಳ್-ದುಃಖಾಗ್ನಿಯಲ್ಲಿ ; ಬಾಯಟಿದು - ಅತ್ತು ಆಯಾಸಪಟ್ಟು ; ಮೆಯ್ಮಱಿದು-ಮೂರ್ಛೆ ಹೋಗಿ ; ಪಳಯಿಸುವ-ಪ್ರಲಾಪ ಮಾಡುವ ; ಬರವಂ-ಬರುವಿಕೆಯನ್ನು ; ಗೆಂಟಱೊಳ್-ದೂರದಲ್ಲಿ ;

೭. ಆನುಂ ದುಶ್ಶಾಸನನುಂ ಕಾನೀನನುಂ-ನಾನೂ ದುಶ್ಶಾಸನನೂ ಕರ್ಣನೂ, ಒಡನೆ ಪೋಗಿ-ಜೊತೆಗೂಡಿ ಹೋಗಿ, ಬೀೞ್ಕೊಂಡು-ಹೋಗಿಬರು ತ್ತೇವೆ ಎಂದು ಹೇಳಿ ಅಪ್ಪಣೆ ಪಡೆದುಕೊಂಡು, ರಣಸ್ಥಾನಕ್ಕೆ-ಕದನದೆಡೆಗೆ, ಪೋದೆವು-ಹೋದೆವು ; ಇಂ-ಇನ್ನು, ಮಗುೞ್ದು - ಹಿಂದಕ್ಕೆ ಬಂದು, ಇವರ ಮೊಗಮಂ-ಈ ತಂದೆ ತಾಯಿಗಳ ಮುಖವನ್ನು, ನಾಣ್ಚದೆ-ನಾಚದೆ, ಸಂಕೋಚ

ವಿಲ್ಲದೆ, ಏನೆಂದು–ಏನೆಂಬುದಾಗಿ, ಆಂ–ನಾನು, ನೋೞ್ಪೆಂ – ನೋಡುತ್ತೇನೆ. ಕದನಕ್ಕೆ ಹೋದವರಲ್ಲಿ ನಾನೊಬ್ಬನೇ ಮರಳಿಬಂದು ಇವರ ಮುಖವನ್ನು ಹೇಗೆ ನೋಡಲಿ ಎಂದು ಭಾವ.

೮. ಪವನಜಂ–ಭೀಮನು, ಅಂತು–ಹಾಗೆ, ಪೂಣ್ದು–ಪ್ರತಿಜ್ಞೆ ಮಾಡಿ, ಯುವರಾಜನ – ದುಶ್ಶಾಸನನ, ನೆತ್ತರಂ – ರಕ್ತವನ್ನು, ಆರ್ದು – ಸಿಂಹನಾದ ಮಾಡುತ್ತಾ, ಪೀರ್ದಂ–ಹೀರಿದನು ; ಇಂತು–ಹೀಗೆ, ಅವಗಡದಿಂ–ಮೋಸದಿಂದ, ದಿನೇಶಜನಂ–ಕರ್ಣನನ್ನು, ಅಂಕದ – ಪ್ರಸಿದ್ಧನಾದ, ಗಾಂಡೀವಿ–ಅರ್ಜುನನು, ಕೊಂದಂ–ಕೊಂದನು ; ಎಂತು–ಹೇಗೆ, ಪಾಂಡವರಂ–ಪಾಂಡವರನ್ನು, ಇದಿರ್ಚಿ–ಎದುರಿಸಿ, ಸಾಧಿಸುವೆ–ಗೆಲ್ಲುವೆ ? ಈಗಳ್–ಈಗ, ಸಂಧಿಯಂ – ಸಂಧಿಯನ್ನು, ಒಲ್ವುದೆ – ಅಪೇಕ್ಷಿಸುವುದೇ, ಕಜ್ಜಂ–ಕಾರ್ಯ, ಎಂಬವರ್ಗಳ – ಎಂದು ಹೇಳುವವರ, ಮಾತುಗೇಳ್ವನಿತಂ – ಮಾತನ್ನು ಕೇಳುವಷ್ಟನ್ನು, ಇಂ ಎನಗಂ – ಇನ್ನು ನನಗೂ, ಬಿದಿ–ದೈವ, ಮಾಡಿತಾಗದೇ–ಮಾಡಿದುದು ಆಗಲಿಲ್ಲವೆ ? ಇಲ್ಲಿ ಅವಗಡದ ಅರ್ಥ ಚಿಂತನೀಯ ; ಅವಗಡ–ಸಾಹಸ (ಪಂಭಾಕೋ) ; (ತ) ವಂಚನೆ ಮೋಸ, "ಕಲುತ್ತಿಲೇ ತಾವಡಂ, ಮನತ್ತಿಲೆ ಅವಗಡಂ" ; (ತೆ) ಚೇಷ್ಟೆ. ಕೆಟ್ಟ ಕೆಲಸ ; (ಮರಾ) ಅವಘಡ–ಅಸಾಧ್ಯವಾದ, ಕಷ್ಟಕರವಾದ ; ಅಂಥ ಕೆಲಸ ; ಕಿಟ್ಟೆಲ್ ಅವರು ಅಡ್ಡಿ, ದುರ್ಗಮ, ಭಯಂಕರತೆ, ಅಸಾಧ್ಯ ಎಂಬ ಅರ್ಥಗಳನ್ನು ಹೇಳಿದ್ದಾರೆ ; ಬಹುಶಃ ಇಲ್ಲಿ ರಭಸದಿಂದ, ಕ್ರೂರವಾಗಿ ಎಂಬ ಭಾವ ಬರಬಹುದು.

**ವಚನ :** ಎಯ್ದೆವಂದ–ಹತ್ತಿರಕ್ಕೆ ಬಂದ ; ತಡವರಿಸಿಯುಂ–(ಮೈಯನ್ನು) ಮುಟ್ಟಿ ಮುಟ್ಟಿ ನೋಡಿಯೂ ; ತೆಬ್ಬರಿಸಿಯುಂ–ಧೈರ್ಯ ಹೇಳಿಯೂ (ಸಮಾಧಾನ ಪಡಿಸಿಯೂ) ?, ಅೞ್ಕಱೊಳ್–ಪ್ರೀತಿಯಲ್ಲಿ ; ಅಮೃತ ವರ್ಷಿಕರ ಪರಿಷೇಕದಿಂದೆ–ಅಮೃತವನ್ನು ಸುರಿಸುವ ಕೈಯ ಸುತ್ತುವಿಕೆಗಿಂತಲೂ ; ಆಪ್ಯಾಯನ ಕೋಟಿಯಾಗೆ–ಸಂತೋಷದ ತುತ್ತ ತುದಿಯಾಗಲು ; ಪರಿಕಲಿತ–ಕೂಡಿದ ; ಕಾರ್ಯವ್ಯಗ್ರ ಪಾಪಿ ಪಾಶಾಶ್ರಿತರೆಲ್ಲರುಂ–ಮುಂದಿನ ಕಾರ್ಯದಲ್ಲಿ ಆಸಕ್ತನಾದ ಪಾಪಿ ದುರ್ಯೋಧನನ ಪಾಶಕ್ಕೆ ಒಳಗಾದವರೆಲ್ಲರೂ ; ತೆಬ್ಬರಿಸು ಎಂಬುದರ ಅರ್ಥ ಅನಿಶ್ಚಿತ ; ಇದೇ ಸಂದರ್ಭದಲ್ಲಿ ರನ್ನನೂ ಇವೇ ಮಾತುಗಳನ್ನು ಬಳಸಿದ್ದಾನೆ ; "ತಡವರಿಸಿಯುಂ ತೆಬ್ಬರಿಸಿಯುಂ ತೆಗೆದಪ್ಪಿಯುಂ" (ಗದಾ. ೩–೮ ೪ ೧), ತಮಿಳಿನಲ್ಲಿ ತೆಮ್ಬು, ತೆನ್ಬು–ಧೈರ್ಯ ಎಂದೂ ತೆಲುಗಿನಲ್ಲಿ ತೆಮ್ಪು, ತೆಮ್ಪಿ, ತೆಮ್ಮರಿ–ಧೈರ್ಯ ಎಂದೂ ಶಬ್ದಗಳಿವೆ, ಇವುಗಳಿಗೆ ತೆಬ್ಬರು + ಇಸು ಎಂಬ ಶಬ್ದ ಸಂಬಂಧಪಟ್ಟಿರಬಹುದು. (ಪಂಭಾಕೋ) ದಲ್ಲಿ ಇದಕ್ಕೆ "ಮೇಲಕ್ಕೆತ್ತು" ಎಂದು ಅರ್ಥ ಕೊಟ್ಟಿದೆ. ದುರ್ಯೋಧನನನ್ನು ಪಾಪಿ ಎಂದು ಅವನ ತಂದೆ ತಾಯಿಗಳೇ ಇಲ್ಲಿ ಹೇಳಿರುವಂತಿದೆ : ಇಲ್ಲೇನಾದರೂ ಪಾಠದೋಷವಿದೆಯೇ ?

೯. ಎನಗಂ ಪಾಂಡುಗಂ–ನನಗೂ ಪಾಂಡು ರಾಜನಿಗೂ, ಭೇದಂ–

ವ್ಯತ್ಯಾಸವು, ಇಲ್ಲ; ಎಳೆಯಂ–ಭೂಮಿಯನ್ನು, ರಾಜ್ಯವನ್ನು, ಪಚ್ಚಿ–ವಿಭಾಗ ಮಾಡಿ, ಆಳ್ವಂ–ಆಳೋಣ; ಆ ಪಾಂಡುನಂದನರುಂ–ಆ ಪಾಂಡುವಿನ ಮಕ್ಕಳೂ, ನಿನ್ನೊಳೆ–ನಿನ್ನಲ್ಲಿ, ಸೈದರೆ–ನೇರಾಗಿ ಇರುವವರೆ ಎಂದರೆ ಸರಿಯಾಗಿ ನಡೆದು ಕೊಳ್ಳುವವರೇ; ಈ ಕಲಹಮುಂ–ಈ ಯುದ್ಧವೂ, ನಿನ್ನಿಂದಂ–ನಿನ್ನಿಂದ, ಆಯ್ತು–ಆಯಿತು, ಎಂದೊಡೆ–ಎಂದು ಹೇಳಿದರೆ, ಇಂ–ಇನ್ನು, ಮುನಿವಯ್–ಕೋಪಗೊಳ್ಳುತ್ತೀಯೆ; ಗಂಗೆಯ ಪೆರ್ಮಗಂಗೆ–ಭೀಷ್ಮನಿಗೆ, ಘಟಸಂಭೂತಂಗೆ–ದ್ರೋಣನಿಗೆ, ಕರ್ಣಂಗೆ–ಕರ್ಣನಿಗೆ, ಅಸಾಧ್ಯನೊಳ್–ಅಸಾಧ್ಯನಾದ, ಆ ಗಾಂಡಿವಿಯೊಳ್–ಆ ಅರ್ಜುನನಲ್ಲಿ, ಕಱುತ್ತು–ಕೋಪಿಸಿ, ಇಱೀವರ್–ಯುದ್ಧ ಮಾಡುವವರು, ಆರ್–ಯಾರು? ಇಂ–ಇನ್ನು, ಸಂಧಿಯುಂ–ಸಂಧಿಯನ್ನು, ಮಾಡುವಂ–ಮಾಡೋಣ.

೧೦. ಪಗೆಗೆ–ದ್ವೇಷಕ್ಕೆ, ಕಣಿಯೊಂದು–ಒಂದು ಗಣಿ, ಉಂಟೇ–ಇದೆಯೇ? ನಣ್ಪಿಂಗಂ–ನಂಟತನಕ್ಕೂ, ಆಗರಂ–ಆಕರವು, ಉಂಟೆ–ಇದೆಯೇ? ನೀಂ–ನೀನು, ಬಗೆಯು–ಆಲೋಚನೆ ಮಾಡು; ಎಂದರೆ ದ್ವೇಷಕ್ಕೆಲ್ಲ ಒಂದು ಸ್ಥಳ, ಬಾಂಧವ್ಯಕ್ಕೆಲ್ಲಾ ಎಂದರೆ ಪ್ರೀತಿಗೆಲ್ಲಾ ಒಂದು ಸ್ಥಳ ಎಂದು ಇದೆಯೇ? ವಿಚಾರಿಸಿ ನೋಡು ಎಂದು ಅಭಿಪ್ರಾಯ. ಪಗೆಯುಂ ನಣ್ಪುಂ–ದ್ವೇಷವೂ ಬಾಂಧವ್ಯವೂ, ಕೆಯ್ಕೊಂಡ–ಸ್ವೀಕರಿಸಿದ ಎಂದರೆ ಮಾಡಿದ, ಕಜ್ಜದಿಂ–ಕಾರ್ಯದಿಂದ, ಅರಸುಗಳ್ಗೆ–ರಾಜರಿಗೆ, ಪುಟ್ಟುಗುಂ–ಹುಟ್ಟುತ್ತವೆ. ಅಲ್ತೆ–ಅಲ್ಲವೆ? ಎಂದರೆ ಮಾಡುವ ಕೆಲಸದಿಂದ ಹಗೆತನ ಪ್ರೀತಿಗಳು ಉಂಟಾಗುತ್ತವೆ. ಎಂದ–ಎಂದು ಹೇಳಿದ, ಸಂದ–ಪ್ರಸಿದ್ಧವಾದ, ಈ ಅರ್ಥಶಾಸ್ತ್ರದೊಳ್–ಈ ದಂಡ ನೀತಿ ಶಾಸ್ತ್ರದಲ್ಲಿ, ಏಕೆ–ಏತಕ್ಕೆ, ಪೇೞ್–ಹೇಳು; ಮಗನೆ–ಮಗನೇ, ಕಾರ್ಯಂ ಮಿತ್ರಾ[ರಿ]ಕಾರಕಂ–ಕಾರ್ಯವು ಮಿತ್ರರನ್ನೂ ಶತ್ರುವನ್ನೂ ಉಂಟುಮಾಡತಕ್ಕದ್ದು, ಎಂದುದಂ–ಎಂಬುದನ್ನು, ಏಕೆ ನೆಗಳ್ವಿಯ್–ಏಕೆ ಮಾಡುತ್ತೀಯೆ? ಈ ಪದ್ಯದ ಕೊನೆಯ ಪಾದದಲ್ಲಿ ಏನೋ ತಪ್ಪಿರಬಹುದು; ಅದನ್ನು ತಿದ್ದಿ ಅರ್ಥಹೇಳಿದೆ. ಅದರೂ ಅಭಿಪ್ರಾಯ ವೈಶದ್ಯವಿಲ್ಲ.

೧೧. ಎಮಗೆ–ನಮಗೆ, ನೀನುಳ್ಳೊಡೆ–ನೀನು ಇದ್ದ ಪಕ್ಷದಲ್ಲಿ, ಎಲ್ಲರ್–ಎಲ್ಲರೂ, ಒಳರ್–ಇದ್ದಾರೆ; ಮನದೊಳ್–ನಮ್ಮ ಮನಸ್ಸಿನಲ್ಲಿ, ಅಱಲ್–ದುಃಖವು, ಏನುಂ–ಏನೂ, ಇಲ್ಲ; ಮಗನೇ, ಅದೆಂತೆನೆ–ಅದು ಹೇಗೆಂದರೆ, ಭಾನುವೆ–ಸೂರ್ಯನೇ, ಸಾಲದೆ–ಸಾಕಾಗದೆ; ಪಗಲ್–ಹಗಲಿನಲ್ಲಿ, ಎನಿತಾನುಂ ದೀವಿಗೆಗಳ್–ಎಷ್ಟು ದೀಪಗಳು ತಾನೆ, ಉರಿದೊಡೇಂ–ಉರಿದರೇನು, ನಂದಿದೊಡೇಂ–ಆರಿಹೋದರೇನು?

ವಚನ; ಬೆಸಕೆಯ್ಯದುದನೆ–ಮಾಡದುದನ್ನೆ; ಎಂದುದನೆನಿಸುವೆಂ–ಹೇಳಿದ್ದನ್ನು ಹೇಳಿಸುತ್ತೇನೆ; ಮಾರ್ಕೊಳ್ಳದೆ–ಪ್ರತಿಭಟಿಸದೆ; ಅನುಬಲವಾಗಿ–ಬೆಂಬಲವಾಗಿ.

೧೨. ಕುರುಕುಳನಂದನಂ–ಕೌರವ ವಂಶವೆಂಬ ತೋಟವು, ಪವನನಂದನನೆಂಬ–ಭೀಮನೆಂಬ, ಮದಾಂಧಗಂಧ ಸಿಂಧುರವೆ–ಮದದಿಂದ ಸೊಕ್ಕೇರಿದ ಆನೆಯೇ, ಕಱುತ್ತು–ಕೋಪಿಸಿ, ಸಾಯೆ–ಹಾಯಲು, ನುಗ್ಗಲು, ಪಡಲಿಟ್ಟಪ್ರೊಲ್–ಧ್ವಂಸವಾದಂತೆ, ಆದುದು–ಆಯಿತು; ಪುಣ್ಯದೆ–ನಮ್ಮ ಪುಣ್ಯದಿಂದ, ಒಂದು, ಪೆರ್ಮರಂ–ದೊಡ್ಡ ಮರವು, ಉೞಿವಂತೆ–ಉಳಿಯುವ ಹಾಗೆ, ನೀಂ–ನೀನು, ಉೞಿದೆ–ಬದುಕಿಕೊಂಡಿರುವೆ; ಇಂ–ಇನ್ನು, ಇಱಿವನ್ನರುಂ–ಯುದ್ಧಮಾಡುವಂಥವರೂ, ಇಲ್ಲ; ಮಗನೇ, ಮುತ್ತರುಂ–ಮುದುಕರೂ, ಕುರುಡರುಂ–ಕುರುಡರೂ, ಎನ್ನದೆ–ಎಂದು ಹೇಳದೆ, ಎಮ್ಮನುಡಿಗೇಳ್–ನಮ್ಮ ಮಾತನ್ನು ಕೇಳು; ಬಗೆ–ಆಲೋಚಿಸು, ತಂದೆಗೆ–ತಂದೆಯ ಮಾತಿಗೆ, ಇಂಬುಕೆಯ್–ಅವಕಾಶವನ್ನು ಕೊಡು ಎಂದರೆ ತಂದೆಯ ಮಾತನ್ನು ನಡೆಸು, ಒಪ್ಪು.

೧೩. ಈ ಕಲಹಂ–ಈ ಯುದ್ಧ, ಇನಿತಱೊಳ್–ಇಷ್ಟರಲ್ಲಿ, ಅಸವಸದಿಂ–ಕ್ಷಿಪ್ರವಾಗಿ, ಪೋಕೆ–ಹೋಗಲಿ, ಎಂದರೆ ಈ ಯುದ್ಧ ಇಷ್ಟಕ್ಕೇ ಬೇಗನೆ ನಿಲ್ಲಲಿ, ಇನ್ನು ವಿನಾಶವಾಗುವುದು ಬೇಡ; ಧರ್ಮಸುತನಂ–ಧರ್ಮಪುತ್ರನನ್ನು, ಆಂ–ನಾನು, ನಿರಾಪೇಕಂ–ಆಕ್ಷೇಪಣೆಯಿಲ್ಲದೆ ಎಂದರೆ ಪ್ರತಿಭಟನೆಯಿಲ್ಲದೆ, ಒಡಂಬಡಿಸುವೆಂ–ಒಪ್ಪಿಸುತ್ತೇನೆ; ಎನಗೆ–ನನಗೆ, ಕೂರ್ಪೊಡೆ–ಪ್ರೀತಿಸುವ ಪಕ್ಷದಲ್ಲಿ, ಇಂತು–ಹೀಗೆ, ಮಗನೇ, ಈ ಕಜ್ಜಂ–ಈ ಕಾರ್ಯವನ್ನು, ಕೈಕೊಳ್–ಸ್ವೀಕರಿಸು, ನಿರಾಕ್ಷೇಪ<ನಿರಾಪೇಕ; ಇಲ್ಲಿ ವರ್ಣವಿಪರ್ಯಯವಾಗಿದೆ (Metathesis); ಕಜ್ಜಂ–ದ್ವಿತೀಯಾರ್ಥದಲ್ಲಿ ಪ್ರಥಮೆ.

**ವಚನ:** ಅನುಬಂಧಿಸಿದ – ಕಟ್ಟಿದ: ಅಭಿಮಾನಧನಂ – ಆತ್ಮಗೌರವವನ್ನೇ ಧನವಾಗಿ ಉಳ್ಳವನು.

೧೪. ನಿಮ್ಮ ಪೇೞ್ದುದು–ನೀವು ಹೇಳಿದ್ದು, ದೋಷಮೆ–ತಪ್ಪೆ? ಅಲ್ಲ; ಎಂತುಂ–ಹೇಗೂ, ಒಡಂಬಡಲ್–ಒಪ್ಪಲು, ಅಪ್ಪುದು–ಆಗುತ್ತದೆ, ಒಂದೆ–ಒಂದೇ ಒಂದು ಅಂಶವಿದೆ; ದುಶ್ಶಾಸನ ರಕ್ತಪಾನದೊಳೆ–ದುಶ್ಶಾಸನನ ರಕ್ತದ ಕುಡಿತದಲ್ಲಿ, ಸೊರ್ಕಿದ – ಮದವೇರಿದ, ಪಾತಕನಂ – ಪಾಪಿಯಾದ ಭೀಮನನ್ನು, ಪೊರಳ್ಚಿ–ನೆಲದ ಮೇಲೆ ಹೊರಳಿಸಿ, ಕೊಂದು, ಈ ಸಮರಾವನೀ ತಲದೊಳ್–ಈ ಯುದ್ಧ ಭೂಮಿಯಲ್ಲಿ, ಬಲಿಗೆಯ್ವಿನಂ – ಬಲಿಮಾಡುವವರೆಗೆ, ಒಲ್ಲೆನಲ್ತೆ – ಒಪ್ಪೆನಲ್ಲವೆ? ನಿರ್ದೋಷಿಗಳೊಳ್ ಪೃಥಾಸುತರೊಳ್–ದೋಷ ರಹಿತರಾದ ಪೃಥೆಯ ಮಕ್ಕಳಲ್ಲಿ ಎಂದರೆ ಪಾಂಡವರಲ್ಲಿ, ಇಂ ಮಗುೞ್ದುಂ–ಇನ್ನು ಮರಳಿಯೂ, ಪುದುವಾೞಿನ್–ಕೂಡಿ ಬದುಕೆನು, ಎಂಬೆನೇ–ಎಂದು ಹೇಳುವೆನೇ?

**ವಚನ:** ಅಂಧಮಹೀಪತಿ–ಧೃತರಾಷ್ಟ್ರ; ಇದಾವುದು ಮಾತಾಗಿ ನುಡಿವೈ–ಇದು ಯಾವ ಮಾತೆಂದು ಹೇಳುವೆ?

೧೫. ಧರ್ಮನಂದನಂ – ಧರ್ಮಪುತ್ರನು, ಅನುಜರ್ ನಾಲ್ವರುಮಂ–

ನಾಲ್ವರು ತಮ್ಮಂದಿರನ್ನೂ, ವೇಳೆಗೊಂಡು—ಸಮಯ ಪ್ರತಿಜ್ಞೆಯನ್ನು ಮಾಡಿ, ಎಂದರೆ ಅವರಲ್ಲಿ ಒಬ್ಬನು ಸತ್ತರೂ ತಾನು ಕೂಡ ಸಾಯುವೆನೆಂದು ; ಪೊಣರ್ದ—ಸೇರಿದ, ಒದಗಿದ, ಆವ ಅನುವರದೊಳಂ—ಯಾವ ಯುದ್ಧದಲ್ಲೂ, ಕಾವಂ-ರಕ್ಷಿಸುವನು ; ಎನೆ—ಎನ್ನಲು, ಪೇೞ್—ಹೇಳು, ಪವನನಂದನಂಗೆ—ಭೀಮನಿಗೆ, ಅೞಿವು ಪೊಣರೆ—ಸಾವು ಸೇರಲು ಎಂದರೆ ಉಂಟಾಗಲು, ತಾಂ—ತಾನು, ಬೞ್ದಪನೇ—ಬದುಕುತ್ತಾನೆಯೇ ?

೧೬. ಎನೆ—ಎನ್ನಲು, ನೃಪಂ—ದುರ್ಯೋಧನನು, ಎಂದಂ—ಎಂದನು ; ಅನುಜರ್ಕಳೊಳ್—ತಮ್ಮಂದಿರಲ್ಲಿ, ಓರ್ವನ್—ಒಬ್ಬನು, ಅೞಿದೊಡೆ—ಸತ್ತರೆ, ಧರ್ಮಜಂ—ಧರ್ಮತನಯನು, ಒಡನೆ—ಕೂಡಲೇ, ಅೞವ—ಸಾಯುವನು ; ಅಲ್ಲಿ-ಯುದ್ಧದಲ್ಲಿ, ನೂರ್ವರುಂ ತನ್ನ ಅನುಜರ್ಕಳ್—ತನ್ನ ನೂರು ಜನ ತಮ್ಮಂದಿರು, ಸಾಯೆ—ಸಾಯಲು, ಸುಯೋಧನನ—ದುರ್ಯೋಧನನು, ಬಾೞ್ವುದಂ – ಬದುಕುವುದನ್ನು, ನಂಬಿದಿರೇ—ನಂಬಿಕೊಂಡಿರಾ ? ಇಲ್ಲಿ ಅೞಿವ ಎಂಬುದು ಅೞಿವಂ ಎಂದಿರಬೇಕು, ಅಂತ್ಯ ಬಿಂದು ಲೋಪವೆಂದು ಭಾವಿಸಬೇಕು.

೧೭. ವೈರಿ—ಶತ್ರುವು, ತಲೆದೋಱಲ್ಕೆ – ತಲೆ ತೋರಿಸುವುದಕ್ಕೆ ಎಂದರೆ ಸಮ್ಮುಖವಾಗಿ ನಿಲ್ಲುವುದಕ್ಕೆ, ಅಣಂ ಅಳ್ಕಿ—ವಿಶೇಷವಾಗಿ ಹೆದರಿ, ಪೋ—ಹೋಗು, ನೆಲನಂ—ನೆಲವನ್ನು, ಪೊಕ್ಕಂ—ಹೊಕ್ಕನು, ಎಂಬನ್ನೆಗಂ—ಎನ್ನುತ್ತಿರಲು, ಚಲದಿಂದೆ—ಒಂದೇ ಸಮನಾಗಿ (ಬಿಡದೆ ಹಠದಿಂದ), ಎಯ್ತರ್ಪ—ಓಡಿ ಬರುತ್ತಿರುವ, ಕರ್ಣನ, ಉಗ್ರರಥಮುಂ—ಭಯಂಕರ ರಥವನ್ನು, ಮುಂ—ಮೊದಲು, ನುಂಗಿದ—ಕಬಳಿಸಿದ, ಈ ದ್ರೋಹಿಯೊಳ್—ಈ ದ್ರೋಹಿಯಾದ, ನೆಲದೊಳ್—ನೆಲದಲ್ಲಿ, ಪಂಬಲೆ—ಹಂಬಲೇ ಎಂದರೆ ಆಸೆಯೆ ? ಮತ್ತಂ—ಮತ್ತು, ಎನ್ನ ಮುಳಿಸಿಂಗೆ—ನನ್ನ ಕೋಪಕ್ಕಾಗಿ, ಆಂ—ನಾನು, ಕಾದುವೆಂ—ಯುದ್ಧ ಮಾಡುವೆನು ; ನೆಲೆಗಂಡು – ಸ್ಥಿರತೆಯನ್ನು ತಿಳಿದು, ನೆಲಕ್ಕೆ—ಈ ರಾಜ್ಯಕ್ಕೆ (ಭೂಮಿಗೆ), ಅಂತೆ—ಹಾಗೆ, ಪೇಸಿದೆಂ—ಹೇಸಿದೆನು, ಎಂದರೆ ಶಾಶ್ವತವಾದುದಾವುದು ಎಂಬುದನ್ನು ತಿಳಿದು ಅಶಾಶ್ವತವಾದ ಭೂಮಿಗೆ ಹೇಸಿದೆನು ; ಗೆಲ್ದೊಡಂ—ಗೆದ್ದರೂ, ಆದಂ—ಆ ನೆಲವನ್ನು, ಮತ್ತಂ—ಪುನಃ, ಆಂ—ನಾನು, ಆಳ್ವೆನೇ—ಆಳುತ್ತೇನೆಯೇ ?

೧೮. ನೀಮುಂ ಆ ನೆಗೞ್ದ ಪಾಂಡುವುಂ—ನೀವೂ ಆ ಪ್ರಸಿದ್ಧನಾದ ಪಾಂಡುರಾಜನೂ, ತೊಡರದೆ—ಒಬ್ಬರಲ್ಲಿ ಒಬ್ಬರು ತೊಡರಿಕೊಳ್ಳದೆ ಎಂದರೆ ಜಗಳವಾಡದೆ, ಒಂದಿಯೆ—ಸೇರಿಕೊಂಡೇ, ಹೊಂದಿಕೊಂಡೇ, ಬೞ್ದಿರ್—ಬಾಳಿದಿರಿ ; ಒಂ[ದೆ]ಡಂಬಡು—ಒಂದು ಅಸಮಾಧಾನವೂ, ನಿಮಗಿಲ್ಲ—ನಿಮಗೆ ಇಲ್ಲ ; ಜೂದೆ—ಜೂಜೆ, ನೆವಮಾಗಿರೆ—ನೆವವಾಗಿರಲು, ಪೂಣ್ದು—ಮೇಲೆಳೆದುಕೊಂಡ, ಧರಿಸಿದ, ಇಡುವಗೆಗೆ – ಇಡುವ ದ್ವೇಷಕ್ಕೆ ಎಂದರೆ ಬದ್ಧವೈರಕ್ಕೆ, ಆನೆ—ನಾನೆ, ಮೊದಲಿಗನಾದೆನ್—ಮೊದಲಿಗನಾದೆನು, ಮೂಲಕಾರಣನಾದೆನು ; ಎನ್ನೊಳಾದ—ನನ್ನಿಂದ ಉಂಟಾದ, ಕಿಸುರ್—

ಕಲಹವು, ಎನ್ನೊಡವೋಪುದು–ನನ್ನ ಸಂಗಡವೇ ಹೋಗುತ್ತದೆ; ಇದು ಒಳ್ಳಿತು–ಇದು ಒಳ್ಳೆಯದು, ಎನ್ನ ಪಿಂಬಡಿಸೊಳೆ–ನನ್ನ ತರುವಾಯದಲ್ಲಿಯೇ, ಸಣ್ಪಿನಯ್ಯ–ಪ್ರೀತಿಯ ತಂದೆಯೇ, ಧರ್ಮನಂದನಂ – ಧರ್ಮಪುತ್ರನು, ನಿಮಗಂ–ನಿಮಗೂ, ಮಗನಲ್ಲನೆ – ಮಗನಲ್ಲವೇ? ಎಂದರೆ ಅವನೊಡನೆ ಸುಖವಾಗಿ ಬಾಳಬಹುದು, ನಾನು ಇಲ್ಲದಾದರೂ ; ಇಡುವುದು + ಪಗೆ = ಇಡುವಗೆ ;

೧೯. ಕರ್ಣನಿಂ ಬೞಿಕೆ–ಕರ್ಣನ ಅನಂತರ ಎಂದರೆ ಕರ್ಣನು ಸತ್ತಮೇಲೆ, ಎನಗೆ–ನನಗೆ, ಸಂಧಿಯ ಮಾತು–ಸಂಧಿ ಮಾಡುವ ಮಾತು, ತಪ್ಪು, ಅದು ; ಆತ ನಿಲ್ಲದೆ–ಅವನಿಲ್ಲದೆ, ರಾಜ್ಯಂ–ರಾಜ್ಯವು, ಎಂತಪ್ಪುದೋ–ಹೇಗೆ ಆಗುತ್ತದೊ. ಎಂದರೆ ಕರ್ಣನಿಲ್ಲದೆ ನನ್ನ ದೊರೆತನ ದೊರೆತನವಲ್ಲ ; ಈ ಗದೆಯುಂ–ಈ ಗದೆಯೂ, ಈ ಭುಜದಂಡಮುಂ–ಈ ಬಾಹುದಂಡಗಳೂ, ಉಳ್ಳಿನಂ–ಇರುತ್ತಿರಲು, ಎನ್ನ ಪಗೆ–ನನ್ನ ಶತ್ರು, ಕೊನರ್ತಪ್ಪುದೆ–ಚಿಗುರಿಕೊಳ್ಳುತ್ತದೆಯೆ ? ಎಂದರೆ ಚಿಗುರಿಕೊಳ್ಳುತ್ತಾನೆಯೇ ? ಪೇೞಿಂ–ಹೇಳಿರಿ ; ನೋವಱಿದು–ದುಃಖವನ್ನು ತಿಳಿದು ಎಂದರೆ ಅನುಭವಿಸಿ, ಅಂಜುವುದೇಕೆ–ಹೆದುರುವುದೇಕೆ ? ನಿಂ[ದೊಡೆ]–ನಿಂತರೆ, ಎಂದರೆ ಯುದ್ಧವನ್ನು ಮುಂದುವರಿಸದೆ ನಿಂತರೆ, ಅಯ್ಯ–ತಂದೆಯೇ, ಪೇೞಿಂ–ಹೇಳಿರಿ, ನೊಸಲೊಳ್–ಹಣೆಯಲ್ಲಿ, ವಿಧಾತ್ರನಾ–ವಿಧಿಯು, ಬರೆದ, ಅಕ್ಕರಂ–ಅಕ್ಷರಗಳು, ಎಂದರೆ ಬ್ರಹ್ಮನು ಹಣೆಯಲ್ಲಿ ಬರೆದ ಬರಹ, ಏಂ ತಪ್ಪುದೋ–ಏನು ನಾಶವಾಗುತ್ತದೋ ?

೨೦. ಕರ್ಣನಂ–ಕರ್ಣನನ್ನು, ಅೞಿದುದುಱಿಂ–ಸಾಯಿಸಿದ್ದರಿಂದ, ನರನಂ–ಅರ್ಜುನನನ್ನು, ಮುಂ–ಮೊದಲು, ಆಂ–ನಾನು, ಕೊಲ್ವೆಂ–ಕೊಲ್ಲುತ್ತೇನೆ ; ಸಂಗರದೊಳ್–ಯದ್ಧದಲ್ಲಿ, ಸೀೞ್ದೊಟ್ಟಿ–ಸೀಳಿಹಾಕಿ, ದುಶ್ಶಾಸನನ – ದುಶ್ಶಾಸನನ ಸಾವಿನ, ಅೞಲನದಂ–ಆ ದುಃಖವನ್ನು, ನೀಗುವೆಂ–ಕಳೆಯುತ್ತೇನೆ ; ಅಂತಿರ್ವರುಮಂ–ಹಾಗೆ ಇಬ್ಬರನ್ನೂ, ಕೊಂದಂದು–ಕೊಂದಾಗ, ಮೇಣ್–ಅಥವಾ, ಅವರ ಇದಿರಿದಿರೊಳ್ – ಎದುರೆದುರಿನಲ್ಲಿ ಎಂದರೆ ಸಮ್ಮುಖದಲ್ಲಿ, ಕಾದಿ – ಯುದ್ಧಮಾಡಿ, ಸತ್ತಂದು ಮೇಣ್–ಸತ್ತಾಗ, ವಿಸ್ಫುರಿತಂ–ದಳ್ಳಿಸುತ್ತಿರುವ, ಮತ್ಕೋಪಮುಂ–ನನ್ನ ಕೋಪವೂ, ಪೋಕುಂ–ಹೋಗುತ್ತದೆ ; ನಿಮ್ಮಡಿಯುಮಂ – ನಿಮ್ಮ ಪಾದಗಳನ್ನು, ಬೀೞ್ಕೊಂಡೆಂ – ಬೀಳುಕೊಂಡೆನು, ಹೋಗಿಬರಲು ಅಪ್ಪಣೆ ಪಡೆದನು ; ಇಂ–ಇನ್ನು, ಪೋಗಿ–ಹೋಗಿರಿ, ಏೞಿಂ–ಏಳಿರಿ. ಬಿಡು > ಬೀಡು + ಕೊಳ್–ಬೀೞ್ಕೊಳ್,

ವಚನ : ಸಂಸಾರಾಸಾರತೆಯನಱಿದನುಂ – ಸಂಸಾರದ ನಿಸ್ಸಾರತೆಯನ್ನು ತಿಳಿದವನೂ (ಜೈನ ವೈರಾಗ್ಯದ ಛಾಯೆ ಇದೆ ಇಲ್ಲಿ.) ಮಹಾಸತ್ವನುಂ–ಮಹಾಶಕ್ತಿಯುಳ್ಳವನೂ, ಅನುಲೇಪನ – ಗಂಧ ; ಮಹಾಹವ ಖೇದಮುಮಂ – ಮಹಾಯುದ್ಧದ ದುಃಖವನ್ನು ಎಂದರೆ ಆಯಾಸವನ್ನು ; ಅಂತಸ್ಥಿತ–ಒಳಗಿರುವ, ಕನಕ

ವಿಷ್ಟರ–ಚಿನ್ನದ ಪೀಠ; ಎಮ್ಮಗೆಯ್ವ – ನಾವು ಮಾಡುವ; ನಿಯೋಗಮೇನ್ – ಉದ್ಯೋಗವೇನು, ಕಾರ್ಯವೇನು ?

೨೧. ಸಂಗತ ನೀತಿಶಾಸ್ತ್ರವಿದರಪ್ಪರ್ – ಚೆನ್ನಾಗಿ ನೀತಿಶಾಸ್ತ್ರವನ್ನು ಬಲ್ಲವರು, ಅವಂದಿರ – ಅವರ, ತಮ್ಮ ತಮ್ಮ – ತಂತಮ್ಮ, ಕಜ್ಜಂಗಳ – ಕಾರ್ಯಗಳ, ಮೆಯ್ಗಳೊಳ್–ಮೈಗಳಲ್ಲಿ ಎಂದರೆ ವಿಷಯದಲ್ಲಿ, ಪುಸಿದು – ಸುಳ್ಳಾಡಿ, ಅದಂ–ಆ ಸುಳ್ಳನ್ನೇ, ಕಡುನನ್ನಿಯೆ ಮಾಡಿ–ಅತ್ಯಂತ ಸತ್ಯವನ್ನಾಗಿ ಮಾಡಿ, ತೋರ್ಪರ್–ತೋರಿಸುತ್ತಾರೆ; ಹೇಗೆಂದರೆ; ಚಿತ್ರಕಂ–ಚಿತ್ರಲೇಖಕನು, ಉತ್ತುಂಗ ಸುಸೂಕ್ಷ್ಮ ಪಾರ್ಶ್ವಕೃಶಕೋಮಲ ನಿಮ್ನ ಘನೋನ್ನತ ಪ್ರದೇಶಂಗಳಂ – ಎತ್ತರವಾದ, ಅತಿ ನವುರಾದ, ಮಗ್ಗುಲ ನಿಲವನ್ನುಳ್ಳ, ತೆಳ್ಳಗಿರುವ, ಲಲಿತವಾದ, ತಗ್ಗಾದ, ದಪ್ಪನಾದ, ನಿಡಿದಾದ ಪ್ರದೇಶಗಳನ್ನು, ಆ ಸಮಾನ ತಳದಲ್ಲಿಯೆ–ಪಟದ ಸಮ ಪ್ರದೇಶದಲ್ಲಿಯೇ, ತೋರ್ಪವೋಲ್ – ತೋರಿಸುವಂತೆ; ಪಂಪನು ಕೊಟ್ಟಿರುವ ಈ ಹೋಲಿಕೆ ಅವನಿಗಿದ್ದ ಚಿತ್ರ ಕಲಾಭಿರುಚಿಯನ್ನು ತೋರಿಸುವುದೇ ಅಲ್ಲದೆ ಅವನ ಚಿತ್ರ ಶಾಸ್ತ್ರ ಪ್ರೌಢಿಮೆಯನ್ನು ಪ್ರತಿಬಿಂಬಿಸುವುದಾಗಿದ್ದು ಜೀವನದ ಪ್ರತಿಯೊಂದು ಕ್ಷೇತ್ರದಿಂದ ಕವಿ ಪ್ರತಿಮೆಗಳನ್ನು ಆರಿಸಿಕೊಳ್ಳಬಹುದೆಂಬುದನ್ನೂ ದ್ಯೋತಿಸುವ ಹಾಗಿದೆ. ತನ್ನ ಕಾಲದ ಶಾಸ್ತ್ರಗಳಿಂದ ಕಾವ್ಯಕ್ಕೆ ಈ ರೀತಿಯ ನೆರವನ್ನು ಅವನು ಪಡೆದಿದ್ದಾನೆ.

**ವಚನ**: ಬುದ್ಧಿಯೊಡೆಯರ ಪೇೞ್ವ – ಬುದ್ಧಿಯುಳ್ಳವರು ಹೇಳುವ; ಸಾಮಾನ್ಯಮುಪ್ಪಾಯಂಗಳುಂ – ಸಾಧಾರಣವಾದ ಸಾಮ ದಾನ ಭೇದ ದಂಡ ಎಂಬ ಚತುರೋಪಾಯಗಳೂ; ಅಪಾಯಬಹುಳಮಾಗಿ – ಅಪಾಯಮಯವಾಗಿ; ಆಱುಂಗುಣಂಗಳನೆ–ಷಾಡ್ಗುಣ್ಯಗಳನ್ನೇ ಅಂದರೆ, ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ, ದ್ವೈಧೀಭಾವ ಎಂಬ ಆರುಗುಣಗಳನ್ನೇ; ಇವು ಅರ್ಥಶಾಸ್ತ್ರದ ಪರಿಭಾಷೆಗಳು; ಮೌಲ ಭೃತ್ಯ ಸುಹೃತ್ ಶ್ರೇಣಿ ಮಿತ್ರಾಟವಿಕ ತಂತ್ರಂಗಳ್: ಇವಕ್ಕೆ ಷಡ್ವಿಧಂ ಬಲಂ ಎಂದರೆ ಆರು ಬಗೆಯಾದ ಸೈನ್ಯಗಳು ಎಂದು ಹೆಸರು; ಮೌಲ – ಪರಂಪರೆಯಿಂದ ಬಂದಿರುವ ರಾಜಸೇವಕರು; ಭೃತ್ಯ–ಸಂಬಳ ತೆಗೆದುಕೊಳ್ಳುವ ಸೇವಕರು; ಸುಹೃತ್ – ಸ್ನೇಹಿತರಾದ, ಅಥವಾ ಸ್ವಪಕ್ಷವರ್ತಿಗಳಾದ ರಾಜರು; ಶ್ರೇಣಿ–ಯುದ್ಧದ ಸಮಯದಲ್ಲಿ ಬಂದು ಸೇರುವ ಹಂಗಾಮಿ ಸೈನಿಕರು, ದ್ವಿಷದ್ - ಶತ್ರುವಿಗೆ ವಿರೋಧವಾಗಿರುವವರು, ಆಟವಿಕ – ಕಾಡುಜನರ ಸೈನ್ಯ; 'ಮೌಲಂಭೃತ್ಯಃ ಸುಹೃಚ್ಛ್ರೇಣೀ ದ್ವಿಷದಾಟವಿಕಂ ಬಲಂ" ಎಂದು ಕೋಶ; 'ಹಸ್ತ್ಯಶ್ವರಥಪದಾತಿ ಸೇನಾಕರ್ಮ ಕರಾತ್ಮಕಂ ಷಡ್ವಿಧಂ ಬಲಂ" ಎಂದು ಕುಲ್ಲೂಕನ ಅಭಿಪ್ರಾಯವೂ ಉಂಟು. ಇಲ್ಲಿರುವ "ಶ್ರೇಣಿ ಮಿತ್ರಾಟವಿಕಬಲಂ" ಎಂಬ ಪಾಠಕ್ಕೆ ಪ್ರತಿಯಾಗಿ "ಶ್ರೇಣ್ಯಮಿತ್ರಾಟವಿಕಬಲಂ" ಎಂಬ ಪಾಠವಿರಬೇಕು. ಪಣ್ಣಿದ ಜಂತ್ರಗಳಂತೆ–ಮಾಡಿದ ಯಂತ್ರಗಳಂತೆ, ಎಂದರೆ ಕೃತಕವಾದ ಯಂತ್ರಗಳ

ಹಾಗೆ; ಕಱಿಕಱಿಮಾಡುವು – ಚೆಲ್ಲಾಪಿಲ್ಲಿಯಾದುವು; ಅಯೋನಿಸಂಭವರೆ – ದ್ರೋಣಾಚಾರ್ಯರೇ; ಹೇೞಾಸಾಧ್ಯರಾದರ್ – ಆಟದಲ್ಲಿ ಗೆಲ್ಲುವಂತೆ ಗೆಲ್ಲಲ್ಪಟ್ಟವ ರಾದರು.

೨೨. ಅಧಿಕರ್–ಅತಿಶಯರಾದ ಎಂದರೆ ಅಸಾಧ್ಯರಾದ, ಭೀಷ್ಮದ್ರೋಣಾಂಗ ನಾಯಕರ್ – ಭೀಷ್ಮ ದ್ರೋಣ ಕರ್ಣರೆಂಬ ಸೇನಾಪತಿಗಳು, ಅೞಿದರ್ – ಸತ್ತು ಹೋದರು; ಈಗಳ್–ಈಗ, ಇನ್ನುೞಿದರ್–ಇನ್ನು ಉಳಿದವರು, ಮಹಾರಥರ್–ಮಹಾರಥಿಕರು, ಅವರಿಂ–ಅವರಿಗಿಂತ, ಮೇಲೆಂಬನ್ನರ್ ಅಲ್ತೆ – ಉತ್ತಮರಾದಂಥ ವರಲ್ಲವೆ? ಮುಂ–ಮೊದಲು, ಕೞಿದುದಱೊಳ್–ಅತೀತವಾಗಿರುವುದರಲ್ಲಿ, ಏಂ–ಏನು ಪ್ರಯೋಜನ? ನಷ್ಟಂ ನಷ್ಟಂ–ನಾಶವಾದದ್ದು ನಾಶವಾದದ್ದೇ, ಮೃತಂ ಮೃತಂ–ಸತ್ತದ್ದು ಸತ್ತದ್ದೇ; ಎಂಬುದು–ಎಂದು ಹೇಳುವುದು; ಇನ್ನೞಲದಿರ್–ಇನ್ನು ದುಃಖಿಸಬೇಡ; ಇಲ್ಲಿಂ – ಇಲ್ಲಿಂದ, ಮೇಲಪ್ಪುದಂ – ಮುಂದಾಗುವುದನ್ನು, ಭೂಪತಿ – ರಾಜನೆ, ಬಗೆ – ಆಲೋಚಿಸು, ಎಂದರೆ ಮುಂದೇನಾಗಬೇಕೆಂಬುದನ್ನು ಆಲೋಚಿಸು.

೨೩. ಇಱಿವೊಡೆ – ಯುದ್ಧಮಾಡುವ ಪಕ್ಷದಲ್ಲಿ, ಇನಿಬರುಂ – ನಾವಿಷ್ಟು ಜನರೂ, ನೆರಂ ಒಳೆವಮ್–ಸಹಾಯಕ್ಕಿದ್ದೇವೆ. ಇಱು–ಯುದ್ಧಮಾಡು; ಕಲಹಂ–ಯುದ್ಧವು, ಅಪಾಯ ಬಹುಳಂ–ಅನೇಕ ಅಪಾಯಗಳನ್ನುಳ್ಳದ್ದು; ಇನ್ನುಂ–ಇನ್ನು ಕೂಡ, ನಯದತ್ತ – ನೀತಿಯತ್ತ, ಎಱಗುವೊಡೆ – ಒಲಿವ ಪಕ್ಷದಲ್ಲಿ, ಸಂಧಿ – ರಾಜಿಯು, ಹರಿಗನೊಳ್ – ಅರ್ಜುನನಲ್ಲಿ, ಉಱುಗುಂ – ಇರುತ್ತದೆ ಎಂದರೆ ಸಂಧಿ ಮಾಡುವ ಪಕ್ಷದಲ್ಲಿ ಅರ್ಜುನನು ಸಮ್ಮತಿಸುವನು; ನೃಪತೀ–ರಾಜನೇ, ನಿನಗೆ, ಇವು–ಇವುಗಳು, ಎರಡೆ ಕಜ್ಜಂ–ಎರಡೇ ಕಾರ್ಯಗಳು.

**ವಚನ:** ಬೞಿಕ್ಕಿನ ನುಡಿಗೆ–ತರುವಾಯದ, ಆ ಮೇಲೆ ಹೇಳಿದ ಮಾತಿಗೆ; ಫಣಿಕೇತನಂ–ದುರ್ಯೋಧನ.

೨೪. ಪೞಿವಾಡಯ್ದನೆ–ಐದು ಹಳೆಯ ಗ್ರಾಮಗಳನ್ನೇ, ಬೇಡೆಯುಂ–ಬೇಡಿ ದರೂ, ಕುಡದ ನಾನ್–ಕೊಡದ ನಾನು, ಏನೆಂದು–ಏನೆಂಬುದಾಗಿ, ಸಂಧಾನಮಂ –ಸಂಧಿಯನ್ನು, ಗಟಿಯಿಪ್ಪೆಂ–ಘಟಿಸುವೆನು, ಉಂಟು ಮಾಡುವೆನು? ಅಂಗ ನೃಪನಂ –ಕರ್ಣನನ್ನು, ನೀಂ–ನೀನು, ಎತ್ತಿತಂದು–ಎತ್ತಿಕೊಂಡು ಬಂದು, ಎನ್ನ ಮುಂದೆ –ನನ್ನ ಎದುರಿಗೆ, ಇೞಿಪಲ್ಕೆ–ಇಳಿಸುವುದಕ್ಕೆ, ಆರ್ಪೊಡಂ–ಸಮರ್ಥನಾಗುವ ಪಕ್ಷ ದಲ್ಲಿ, ಗಟಿಯಿಪ್ಪೆಂ–ಉಂಟಾಗುವ ಹಾಗೆ ಮಾಡುತ್ತೇನೆ; ಕೃಪ–ಕೃಪನೇ, ನೀಂ–ನೀನು, ಆವುದಾಗಿ–ಏನೆಂಬುದಾಗಿ, ಯಾವುದೆಂಬುದಾಗಿ, ಈ ಮಾತಂ–ಈ ಮಾತು ಗಳನ್ನು, ಪೇೞ್ವಪ್ಪೆ–ಹೇಳುತ್ತೀಯೆ? ಇಂ ಉೞಿ–ಇನ್ನು ಬಿಡು; ಕಳದೊಳಂ–ಯುದ್ಧರಂಗದಲ್ಲಿಯೂ, ಕೌಂತೇಯರಂ – ಪಾಂಡವರನ್ನು, ಕಾಣ್ಬಂತು – ನೋಡುವ

ಹಾಗೆ, ಎದುರಿಸುವ ಹಾಗೆ, ದುರ್ಯೋಧನನ್–ದುರ್ಯೋಧನ ಎಂಬ ಸಾರ್ಥಕವಾದ ಹೆಸರಿನವನು, ಅಲ್ಲನೇ–ನಾನಲ್ಲವೆ?

**ವಚನ:** ಜಳಧರ ಧ್ವನಿಯಂ–ಮೋಡದ ಶಬ್ದದಿಂದ ಎಂದರೆ ಗುಡುಗಿನ ಧ್ವನಿಯಿಂದ

೨೫. ಕುಳಬಳ ಶೌರ್ಯಧೈರ್ಯಯುತರೆಲ್ಲರುಮಂ–ಕುಲ ಬಲ ಪರಾಕ್ರಮ ಧೈರ್ಯ ಗಳಿಂದ ಕೂಡಿದವರನ್ನೆಲ್ಲ, ಪೆಜಗಿಕ್ಕಿ – ಹಿಂದಕ್ಕಿಟ್ಟು ಎಂದರೆ ಉಪೇಕ್ಷೆ ಮಾಡಿ, ಕರ್ಣನಂ – ಕರ್ಣನನ್ನು ಕುರಿತು, ಪಳಯಿಸುತಿರ್ಪೆಯೇಸೊ ಗಳ – ಪ್ರಲಾಪ ಮಾಡುತ್ತಿರುವೆಯೇನೋ, ದಿಟವಾಗಿಯೂ? ನಿನ್ನಯ ತಮ್ಮನ ನೆತ್ತರಂ–ನಿನ್ನ ತಮ್ಮನ ರಕ್ತವನ್ನು, ಭಯಂಗೊಳೆ–ಭಯವುಂಟಾಗುತ್ತಿರಲು, ಪವಮಾನಸೂನು– ಭೀಮಸೇನನು, ತವೆ–ನಾಶವಾಗುವಂತೆ, ಪೀರ್ದೆಡೆಯೊಳ್–ಹೀರಿದ ಸಮಯದಲ್ಲಿ, ಕಲಿಕರ್ಣಂ–ಶೂರನಾದ ಕರ್ಣ, ಅವನ–ಭೀಮನ, ಉರ್ಕಂ – ಗರ್ವವನ್ನು, ಏಕೆ ಮಿಳಮಿಳ ನೋಡುತಿರ್ದಂ–ಏಕೆ ಮಿಟಿಮಿಟಿ ನೋಡುತ್ತಿದ್ದನು? ಪೇಳ್–ಹೇಳು; ನಿನ್ನವೊಲ್–ನಿನ್ನ ಹಾಗೆ, ಇಳಾಧಿಪರುಂಟೆ–ರಾಜರು ಇರುವರೆ?

೨೬. ಅಂಬಿಗನೊಳ್–ದೋಣಿ ಹಾಯಿಸುವವನಲ್ಲಿ ಎಂದರೆ ಬೆಸ್ತನಲ್ಲಿ, ಇದು ಋಣ ಸಂಬಂಧಂ–ಈ ಕರ್ಮಾಧೀನ ಭಾಂಧವ್ಯ, ನಿನಗೆ, ಅಮೋಘಂ–ವ್ಯರ್ಥವಲ್ಲದೆ, ಆದುದು–ಆಯಿತು; ಇದಂ – ಈ ಸಂಬಂಧವನ್ನು, ಉಳಿದವರಾರ್ಗಂ–ಮಿಕ್ಕವರಿಗೆ ಯಾರಿಗೂ ಎಂದರೆ ಬೇರಾರಿಗೂ, [ಬಿಡಿಸಲ್ಕೇಂ]–ಬಿಡಿಸುವದಕ್ಕೇನು, ಬರ್ಕುಮೆ– ಬರುತ್ತದೆಯೆ? ನೀಂ–ನೀನು, ಎನ್ನಂ – ನನ್ನನ್ನು, ಬೆಸಸುವುದು – ಅಪ್ಪಣೆಮಾಡು ವುದು, ಆತರಂ–ಎದುರಾದವರನ್ನು, ತವೆ–ನಾಶವಾಗುವಂತೆ, ಕೊಲ್ವೆಂ–ಸಂಹಾರ ಮಾಡುತ್ತೇನೆ.

**ವಚನ:** ಪಳಿದು ನುಡಿದೊಡೆ–ನಿಂದಿಸಿ ಬಯ್ದರೆ; ಕೊಲ್ವನಿತುವರಂ– ಕೊಲ್ಲುವಷ್ಟರಮಟ್ಟಿಗೆ; ಬಗೆದು–ಭಾವಿಸಿ.

೨೭. ನಿನ್ನಿಂದಂ–ನಿನ್ನಿಂದ, ತ್ರಿಭುವನ ರಾಜ್ಯೋನ್ನತಿ–ಮೂರು ಲೋಕದ ಆಧಿಪತ್ಯದ ಆಧಿಕ್ಯವು, ಬಂದು, ಎನಗೆ–ನನಗೆ, ಸಾರ್ಗುಮಪ್ಪೊಡಂ–ಸೇರುವುದಾದ ಪಕ್ಷದಲ್ಲೂ, ಒಲ್ಲೆಂ–ನಾನು ಒಲ್ಲೆನು, ನನಗೆ ಬೇಡ; ನೀಂ–ನೀನು, ನುಡಿವು– ಬಯ್ಯು, ಬರ್ದುಕಿದ್ದೈ – ಜೀವಿಸಿರುತ್ತೀಯೆ, ಪೆಜರ್–ಇತರರು, ಕರ್ಣನಂ – ಕರ್ಣ ನನ್ನು, ನುಡಿದು–ಬಯ್ದು, ಎನ್ನಿದಿರೊಳ್ – ನನ್ನೆದುರು, ಬರ್ದುಕುವರೇ – ಜೀವ ದಿಂದಿರುತ್ತಾರೆಯೇ?

೨೮. ನಿನಗಂ ದಿನೇಶತನಯಂಗಂ–ನಿನಗೂ ಕರ್ಣನಿಗೂ, ನುಡಿ–ಮಾತು, ಎನ್ನಯ ಪಕ್ಕದೆ – ನನ್ನ ಪಕ್ಕದಲ್ಲಿ ಎಂದರೆ ನನ್ನೆದುರಿಗೆ, ಆದೊಡಂ – ಆದರೂ, ಮಿಡುಕದೆ–ಅಲುಗಾಡದೆ ಎಂದರೆ ಸಮಾಧಾನ ಚಿತ್ತನಾಗಿ, ಕೇಳ್ವೆಂ–ಕೇಳುತ್ತೇನೆ; ಅಲ್ಲಿ ಇರ್ವರುಂ ಸಮಂ-ಆ ಸಂದರ್ಭದಲ್ಲಿ ಇಬ್ಬರೂ ಸಮಾನರು; ಆತಂ–ಆ ಕರ್ಣ,

ಅತೀತನಾದ-ಸತ್ತ, ಪಿಂಬಡಿಸೊಳ್ – ತರುವಾಯದಲ್ಲಿ, ಅನಂತರದಲ್ಲಿ, ಅದೆಂತು– ಅದು ಹೇಗೆ, ಪೞಿಯೆ – ನೀನು ನಿಂದಿಸಲು, ಕೇಳ್ವೆಸೋ – ಕೇಳುತ್ತೇನೆಯೋ? ಪೇೞ್–ಹೇಳು; ಕೇಳ್ದೊಡೆ–ಹಾಗೆ ಕೇಳಿದರೆ, ಛೀ–ಛೀ, ಪೆಱಂಪೆಱಂ–ಬೇರೆ ಇತರರು, ನುಡಿದೊಡೆ=ಬಯ್ದರೆ, ಕೇಳ್ದಂ–ಕೇಳಿದನು, ಎಂದು, ಎನಗೆ–ನನಗೆ, ನನ್ನ ವಿಷಯದಲ್ಲಿ, ಸಗ್ಗದೊಳಿರ್ದ–ಸ್ವರ್ಗದಲ್ಲಿರುವ, ಇನಾತ್ಮಜಂ–ಕರ್ಣ, ನೋಯನೆ– ನೊಂದುಕೊಳ್ಳುವುದಿಲ್ಲವೆ?

**ವಚನ**: ಕೂರ್ಮೆಗಂ – ಸ್ನೇಹಕ್ಕೂ, ಪ್ರೀತಿಗೂ, ತಕ್ಕೂರ್ಮೆಗಂ– ಯೊಗ್ಯತಾತಿಶಯಕ್ಕೂ; ದೊರೆಯಪ್ಪುದು – ಸಮಾನವಾಗುತ್ತದೆ; ಆರಾತಿ ಸೈನ್ಯಮಂ–ಶತ್ರು ಸೈನ್ಯವನ್ನು;

೨೯. ಇನತನಯಂಗೆ – ಕರ್ಣನಿಗೆ, ಸಾವುಂ–ಮರಣವೂ, ಎನಗೆ–ನನಗೆ, ಇನಿತೊಂದು–ಇಷ್ಟೊಂದು, ಅೞಲು – ವ್ಯಥೆಯೂ, ದಿನೇಶಪುತ್ರನೆ – ಕರ್ಣನೆ, ನಿಮಗೆ, ಇಂಬುಕೆಯ್ಯದುದಱಿಂ – ಹೇಳಿದ್ದನ್ನು ಮಾಡದೆ ಇದ್ದುದರಿಂದ, ದೊರೆ ಕೊಂಡುದು–ಉಂಟಾಯಿತು; ನಿಮ್ಮನುಬಲರಿಂದಮಲ್ಲದೆ–ನಿಮ್ಮ ಬೆಂಬಲದಿಂದಲ್ಲದೆ, ವೀರಲಕ್ಷ್ಮಿ–ಜಯಲಕ್ಷ್ಮಿಯು, ಎನಗೆ–ನನಗೆ, ಆಗದುದಲ್ – ಆಗುವುದಿಲ್ಲವಲ್ಲ; ಎನಗೆಯೆ – ನನಗೆ, ಎಂದರೆ ನಾನೇಯೇ, ಸಲೆ – ಸಲ್ಲುವಂತೆ, ಪಟ್ಟಮಂ– ಸೇನಾಪತಿಯ ಪಟ್ಟವನ್ನು, ಸಮಂತು – ಚೆನ್ನಾಗಿ, ಮಾಱ್ಪೊಡೆ – ಮಾಡುವ ಪಕ್ಷದಲ್ಲಿ, ಏ ತೊದಳೋ–ಏನು ಮಾತೋ, ನೀಮೆ–ನೀವೆ, ದಲ್–ದಿಟವಾಗಿಯೂ, ವೀರಪಟ್ಟಮಂ–ಸೇನಾಪತಿ ಪಟ್ಟವನ್ನು, ಆಂಪುದು – ಧರಿಸುವುದು, ತಾಳುವುದು.

**ವಚನ**: ಇಂತಿರ್ದ-ಹೀಗಿದ್ದ, ಇನಿಬರೊಳ್–ಇಷ್ಟು ವೀರರಲ್ಲಿ, ಆನ್ ಆವಾಳ ದೊರೆಯೆಂ-ನಾನು ಯಾವ ಶೂರನಿಗೆ ಸಮಾನ; ಬೆಸನಂ–ಕಾರ್ಯವನ್ನು; ಸೈಪುಂ –ಪುಣ್ಯವೂ;

೩೦. ಮುಟ್ಟುಗಿಡೆ – ಉಪಕರಣ ಅಥವಾ ಆಯುಧಗಳು ನಾಶವಾಗಲು, ತಾನೆ–ತಾನೇ, ತನ್ನಂ – ತನ್ನನ್ನು, ಕಟ್ಟಿಸಿಕೊಳ್ವಂತೆ – ಕಟ್ಟಿಸಿಕೊಳ್ಳುವ ಹಾಗೆ ಎಂದರೆ ಬಂಧನಕ್ಕೆ ಒಳಪಡುವಂತೆ, ಶಲ್ಯಂ–ಶಲ್ಯನು, ಬೀರವಟ್ಟಮಂ–ವೀರ ಪಟ್ಟ ವನ್ನು, ಆಗಳ್–ಆಗ, ಕಟ್ಟಿಸಿಕೊಂಡಂ–ಕಟ್ಟಿಸಿಕೊಂಡನು; ಕಟ್ಟಿದುದಂ–ವಿಧಿ ಮೊದಲೇ ಕಟ್ಟಿರುವುದನ್ನು, ಕಳೆಯಲ್–ಬಿಡಿಸಲು, ಆಗಂ–ಯಾರಿಗೂ, ಏಂ– ತೀರ್ದಪುದೇ–ಏನು ಸಾಧ್ಯವಾಗುತ್ತದೆಯೇ? "ಬಿದಿ ಸಮಕಟ್ಟೆ ಕೊಟ್ಟೊಡೆಡೆ ಯೊಳ್ ಕಿಡಿಸಲ್ ಕುಡಿಸಲ್ ಸಮರ್ಥರಾರ್" ಎಂಬ ಉಕ್ತಿಯನ್ನು ಹೋಲಿಸಿ.

**ವಚನ**: ಸಂಚಳಿತ ಚಾರಚಕ್ಷುಗಳಿಂದಂ – ಸಂಚರಿಸುವ ಗೂಢಚಾರರ ಮೂಲಕ; ನರಕಾಂತಕಂಗೆ – ಕೃಷ್ಣನಿಗೆ, ಬೞಿಯನಟ್ಟೆ–ದೂತನನ್ನು ಕಳುಹಿಸಿ; ನಿಶಾಟರಾಜ ಕಿರೀಟ ಕೋಟಿ ತಾಟಿತಭುಜಂ–ರಾಕ್ಷಸ ರಾಜರ ಕಿರೀಟಾಗ್ರದಿಂದ ಹೊಡೆಯಲ್ಪಟ್ಟ ಬಾಹುಗಳುಳ್ಳ: ಚತುರ್ಭುಜಂ–ಕೃಷ್ಣನು.

೩೧. ಅದಟುಂ–ಪರಾಕ್ರಮವೂ, ಕಾರ್ಮುಕ ವಿದ್ಯೆಯುಂ-ಬಿಲ್ವಿದ್ಯೆಯೂ; ಭುಜಬಳಾವಷ್ಟಂಭಮುಂ–ಬಾಹುಬಲದ ಗರ್ವವೂ, ಶಲ್ಯಂಗೆ–ಶಲ್ಯನಿಗೆ, ಸಂದು– ಸೇರಿ, ನಿಂದುದು–ನಿಂತಿತು, ಎಂದರೆ ಸ್ಥಿರವಾಯಿತು; ನಮಗಂ–ನಮಗೂ, ಅವ ನೊರ್ವಂ–ಅವನೊಬ್ಬನು, ಹೃಚ್ಛಲ್ಯಮಲ್ತೆ–ಹೃದಯಕ್ಕೆ ನಾಟುವ ಕಠಾರಿಯಲ್ಲವೆ? ಆತಂಗೆ – ಅವನಿಗೆ, ಕಟ್ಟಿದಿರೊಳ್ – ಎದುರಿನಲ್ಲಿ, ನಿಲ್ವೊಡೆ – ನಿಲ್ಲುವ ಪಕ್ಷದಲ್ಲಿ, ನೀನೆ–ನೀನೇ, ನಿಲ್ವೆ–ನಿಲ್ಲುವೆ; ಅದಱಿಂ–ಆದ್ದರಿಂದ (ಅದರಿಂದ), ನಿಶ್ಶಲ್ಯಮಪ್ಪಂತು– ಶಲ್ಯರಹಿತವಾಗುವ ಹಾಗೆ, ಅಗಾಧ ಸಾಗರ ಪರೀತಾಶೇಷ ಭೂಭಾಗಮುಂ–ಅತಿ ಆಳವಾದ ಕಡಲು ಬಳಸಿರುವ ಈ ಭೂಭಾಗವನ್ನು, ನಿನ್ನೊದವಿಂ–ನಿನ್ನ ಸಿದ್ಧತೆಯಿಂದ, ಮಾಳ್ಪುದು–ಮಾಡುವುದು.

**ವಚನ**: ಸಿದ್ಧಿತ್ರಯಂಗಳ್ – ಮೂರು ಸಿದ್ಧಿಗಳು, ಎಂದರೆ ರಾಜನಿಗಿರುವ ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿ ಎಂಬ ಶಕ್ತಿತ್ರಯಗಳಿಂದ ಸಾಧ್ಯವಾಗುವ ಪುರುಷಾರ್ಥಗಳನ್ನುಳ್ಳ ಪ್ರಭುಸಿದ್ಧಿ, ಮಂತ್ರಸಿದ್ಧಿ, ಉತ್ಸಾಹಸಿದ್ಧಿ ಎಂಬ ಮೂರು ಸಿದ್ಧಿಗಳು; (ಮಾಘ ಕವಿಯ ಶಿಶುಪಾಲ ವಧಂ ೨–೨೬ನೆಯ ಪದ್ಯವನ್ನು ನೋಡಿ), ಆಯತ್ತ–ವಶವಾದ, ಅಧೀನವಾದ;

೩೨. ಆಂ–ನಾನು, ದಿಟಮಾಗಿ–ಸತ್ಯವಾಗಿ, ಶಲ್ಯನ, ಆಳವಂ–ಶೌರ್ಯವನ್ನು; ಮುನ್ನೆ – ಮೊದಲು, ನೆಱೆ – ಪೂರ್ಣವಾಗಿ, ಅಱಿದಿರ್ದುಂ – ತಿಳಿದಿದ್ದೂ, ಎನ್ನ ತಮ್ಮಂದಿರಂ–ನನ್ನ ತಮ್ಮಂದಿರನ್ನು, ಏಕೆ ಕಾದಿಸುವೆನ್–ಏಕೆ ಯುದ್ಧಮಾಡಿಸುವೆನು? ಆನೆ – ನಾನೆ, ಮಹಾಜಿಯೊಳ್ – ಮಹಾಯುದ್ಧದಲ್ಲಿ, ಆಂಪೆಂ – ಎದುರಿಸುತ್ತೇನೆ, ಮುಕುಂದ – ಕೃಷ್ಣನೇ, ಅಂತೆಗೆಯ್ – ಹಾಗೆಯೇ ಮಾಡು; ಎನಗೆ ಪಟ್ಟಮಂ ಕಟ್ಟು–ನನಗೆ ಪಟ್ಟವನ್ನು ಕಟ್ಟು, ಎಂದು – ಎಂದು ಹೇಳಿ, ಮುಕುಂದವೃಂದಂ– ಮುಕುಂದವೆಂಬ ಒಂದು ಬಗೆಯ ಭೇರಿಯ ಸಮೂಹವು, ಒಂದೊಂದಱೊಳೊಂದಿ– ಒಂದೊಂದರಲ್ಲಿ ಸೇರಿ, ಮಿಕ್ಕು – ಮೀರಿ, ಎಸೆಯೆ – ಶಬ್ದಮಾಡಲು, ಆ ವಿಭು– ಆ ರಾಜ ಧರ್ಮಪುತ್ರ, ಬೀರಪಟ್ಟಮಂ–ವೀರಪಟ್ಟವನ್ನು, ತಾಳ್ದಿದಂ–ತಾಳಿದನು.

**ವಚನ**: ನಿಶ್ಚಿತಾಹವವ್ಯಾಪಾರನಾಗಿ – ನಿಶ್ಚಿತವಾದ ಯುದ್ಧೋದ್ಯೋಗ ವುಳ್ಳವನಾಗಿ; ದರ್ಭಶಯನದೊಳ್ – ದರ್ಭೆಯೆಂಬ ಹುಲ್ಲಿನ ಹಾಸಿಗೆಯಲ್ಲಿ; ಒಱಗಿ–ಮಲಗಿ; ಜಾವದೊಳ್–ಯಾಮದಲ್ಲಿ, ಹೊತ್ತಿನಲ್ಲಿ;

೩೩. ಕಡಲುರಿಯಂತೆ–ನೀರ್ಗಿಚ್ಚಿನಂತೆ ಎಂದರೆ ಬಡಬಾಗ್ನಿಯಂತೆ, ಅಕಾಲ ಘನಗರ್ಜನೆಯಂತೆ – ಕಾಲವಲ್ಲದ ಕಾಲದ ಗುಡುಗಿನಂತೆ, ಸಮಸ್ತದಿಕ್ತಟಂ – ಎಲ್ಲ ದಿಕ್ಪ್ರದೇಶಗಳೂ, ಪಿಡುಗುವಿನಂ – ಸಿಡಿಲಿನಂತೆ ಸಿಡಿಯುತ್ತಿರಲು, ರಣಾನಕರವಂ ಗಳ್–ರಣಭೇರಿಗಳ ಸದ್ದುಗಳು, ಅಸುಂಗೊಳೆ–ತೀವ್ರವಾಗಿ, ಜೇಗದಿಂ–ಜೇಗನೆ, ಪರ್ವಿ – ವ್ಯಾಪಿಸಿ, ಸಡಗರದೇೞ್ಗೆಯುಂ – ಸಂಭ್ರಮಾತಿಶಯವೂ, ಕಳಕಳ ಧ್ವನಿ

ಯಱುಂ – ಗದ್ದಲವೂ, ಬೆರಸು – ಕೂಡಿಕೊಂಡು, ಆಡುವಂತೆ – ಸಂಚರಿಸುವ ಹಾಗೆ, ಎರಬ್ಬಡೆಯೊಳಂ – ಉಭಯ ಸೈನ್ಯಗಳಲ್ಲೂ, ಒರ್ಮೊದಲೆ – ಒಟ್ಟಿಗೇ, ಅಲ್ಲಿ ಕಲ್ಲೋಳಂ – ಅಲ್ಲ ಕಲ್ಲೋಲವು, ಪಲ್ಲಣಮಿಕ್ಕಿಪುದು – ಜೀನನ್ನು ಕುದುರೆಗಳಿಗೆ ಹಾಕಿಸುತ್ತಿದೆ.

ವಚನ: ಉಪಾರೂಢ ವಿಶೇಷಕರುಂ – ಜೊತೆಯಲ್ಲಿ ಹತ್ತಿ ಕುಳಿತ ಇತರ ಮುಖ್ಯಸ್ಥರೂ; ಅವತರಿಸೆ – ಇಳಿಯಲು; ಮಾರ್ವಲಕ್ಕೆ – ಪ್ರತಿಯಾದ ಸೈನ್ಯಕ್ಕೆ, ಶತ್ರುಸೈನ್ಯಕ್ಕೆ:

೩೪. ಮೆಯ್ ಮೆಯ್–ದೇಹ ದೇಹಗಳು, ಜಯ್ ಜಯ್ ಎಂಬಾಗಳ್–ಜಯ್ ಜಯ್ ಎಂದು ಘರ್ಷಣೆ ಮಾಡುತ್ತಿರುವಾಗ, ಚಲದಿಂ–ಮಾತ್ಸರ್ಯದಿಂದ, ಮುಟ್ಟೆ–ಸೋಕಿ, ಪೊಣರ್ದು–ಜೋಡಿಗಳಾಗಿ ಸೇರಿ, ತಳ್ತು–ಎದುರಿಸಿ, ಇಱುವ–ಹೊಯ್ದಾಡುವ, ಉರ್ಕಿಂ–ಕೊಬ್ಬಿನಿಂದ, ಕೆಯ್ ಚಚ್ಚರಿಕೆಯು – ಕೈಗಳ ಚಟು ವಟಿಕೆಯು, ತೀವ್ರತ್ವದ, ಚಲದಿಂ–ರಭಸದಿಂದ, ಕೆಯ್–ಕೈಗಳು, ಚಳಿವಿಸಂ–ಸುಸ್ತಾಗುತ್ತಿರಲು, ಎರಡುಂ ಬಲದೊಳ್–ಎರಡು ಸೈನ್ಯಗಳಲ್ಲೂ, ಅದಟರ್–ಶೂರರು, ಇಱಿದರ್–ಕಾಳಗ ಮಾಡಿದರು.

೩೫. ಕರಿ–ನೀರಾನೆಗಳು, ಮಕರಾಹತ ಹತಿಯಿಂ – ಮೊಸಳೆಗಳ ಅಥವಾ ತಿಮಿಂಗಿಲಗಳ ಏಟಿನಿಂದ, ಬಿರಿದು–ಸೀಳಿ, ಅ[ಲ]ಜುವ–ನಾಶವಾಗುವ, ಚೈತ್ರ ದಂತೆ–ದೋಣಿಯಂತೆ, ವಿವಿಧಾಯುಧದಂತುರಿತಂಗಳ್–ಬಗೆಬಗೆಯಾದ ಆಯುಧಗಳು, ವ್ಯಾಪಿಸಿ ನಾಟಿರುವ, ವರೂಥಕರಿ ನಿಕರಂಗಳ್–ರಥಗಳ ಆನೆಗಳ ಸಮೂಹಗಳು, ಸಂಗರಜಳನಿಧಿಯೊಳ್ – ಯುದ್ಧವೆಂಬ ಸಮುದ್ರದಲ್ಲಿ, ಅಱಿದುವು – ನಾಶ ವಾದುವು.

೩೬. ಎರಡುಂ ದೆಸೆಯೊಳಂ–ಎರಡು ಕಡೆಗಳಲ್ಲೂ ಎಂದರೆ ಉಭಯ ಪಕ್ಷ ಗಳಲ್ಲೂ, ಒಂದ ಕ್ಷೋಹಿಣಿ ಬಲಂ–ಒಂದಕ್ಷೋಹಿಣಿ ಸೈನ್ಯವು, ಉೞಿದುವು–ಉಳಿದು ಕೊಂಡವು; ಭಾರತಂ–ಭಾರತ ಯುದ್ಧವು, ಅನಿತೆ–ಅಷ್ಟೇ; ಎಮಗೆ–ನಮಗೆ, ಇಂ–ಇನ್ನು, ಇಂದು–ಈ ದಿನ, ಉಜ್ಜವಣೆ ದಲ್–ಉದ್ಯಾಪನೆಯಲ್ಲವೆ ಎಂದರೆ ಮುಕ್ತಾಯ ವಲ್ಲವೆ, ಎಂದು – ಎಂದು ಹೇಳುತ್ತ, ಅದಟು – ಪರಾಕ್ರಮವು, ಒಂದುತ್ತರ ಮಾಗೆ–ಒಂದು ಹೆಚ್ಚಳವಾಗುತ್ತಿರಲು, ಕಟ್ಟಾಳ್ಗಳ್–ಶೂರರು, ಕಾದಿದರ್–ಯುದ್ಧ ಮಾಡಿದರು.

೩೭. ಸ್ಫುರಿತ ಶರನಿಕರ ಪಾತಿತ–ಹೊಳೆಯುವ ಬಾಣ ಸಮೂಹಗಳಿಂದ ಬೀಳಿಸಲ್ಪಟ್ಟ, ನರೋತ್ತಮಾಂಗಂ – ಮನುಷ್ಯರ ತಲೆಗಳನ್ನುಳ್ಳ, ಕಬಂಧ ನಾಟಕ ರಂಗಂ – ಮುಂಡಗಳು ಕುಣಿದಾಡುವ ರಂಗಸ್ಥಳವಾಗಿರುವ, ಸ್ಫುರಿತನವರುಧಿರ ರಂಗತ್ತರಂಗಂ– ಹೊಳೆಯುವ ಹೊಸರಕ್ತದ ಚಂಚಲವಾದ ಅಲೆಗಳನ್ನುಳ್ಳ, ವೀರಭಟ ರಣರಂಗಂ–ವೀರ ಯೋಧರ ಯುದ್ಧರಂಗವು, ಒಪ್ಪಿದುದು–ಸೊಗಸಾಯಿತು. ಕಬಂಧ

ನಾಟಕ = ಕಬಂಧ ನೃತ್ಯ ; ಯುದ್ಧದಲ್ಲಿ ಒಂದು ಸಾವಿರ ಶೂರರು ಸತ್ತಾಗ ಅಥವಾ ಒಬ್ಬನು ಸಾವಿರ ಶೂರರನ್ನು ಕೊಂದಾಗ, ಆಡುವ ಪೈಶಾಚ ನೃತ್ಯ ಎಂದು 'ಶಿಲಪ್ಪದಿಕಾರ'ದಲ್ಲಿ ಹೇಳಿದೆಯಂತೆ (Introduction 21) ; ಯುದ್ಧದಲ್ಲಿ ಸಾವಿರ ಭಟರು ಸತ್ತಾಗ ಅವುಗಳಲ್ಲಿ ಒಂದು ಮುಂಡ ಮೇಲಕ್ಕೆ ಹಾರುತ್ತದಂತೆ : "ಮನುಷ್ಯಾಣಾಂ ಸಹಸ್ರೇಷು ಹತೇಷು ಹತಮೂರ್ಧಸು । ತದಾವೇಶಾತ್ಕಬಂಧಃ ಸ್ಯಾದೇಕೋ ಮೂರ್ಧಾ ಕ್ರಿಯಾನ್ವಿತಃ ॥

**ವಚನ** ; ಮುಂಬಗಲ್ವರಂ – ಹಗಲಿನ ಮುಂಭಾಗದವರೆಗೂ ; ತುಮುಟಿ ಕಾದುವ – ತುಮುಲ ಯುದ್ಧವನ್ನು ಮಾಡುವ (?), ಸಮರಭರಂ – ಯುದ್ಧದ ವೇಗವು ; ಮುಮ್ಮೞಿಸಿ – ಮುಂದೆ ನುಗ್ಗಿ (?) ; ಕಲಿಕೆಯ – ವಿದ್ಯೆಯುಳ್ಳ ಎಂದರೆ ಪ್ರವೀಣರಾದ ;

**೩೮.** ಕಡುಕೆಯ್ದು – ತೀವ್ರತೆಯನ್ನು ತೋರಿಸಿ, ಒಂದೊರ್ವರೊಳ್–ಒಬ್ಬರೊಬ್ಬರಲ್ಲಿ, ತಳ್ತುಱುವ–ಸಂಘಟ್ಟಿಸಿ ಯುದ್ಧ ಮಾಡುವ, ಬಯಕೆಯಿಂ–ಅಪೇಕ್ಷೆಯಿಂದ, ದಿವ್ಯಬಾಣಾದಿಗಳ್ಗಂ – ಶ್ರೇಷ್ಠವಾದ ಬಾಣವೇ ಮುಂತಾದುವುಗಳಿಗೂ ಪೊಡೆವಟ್ಟುಂ–ನಮಸ್ಕರಿಸಿಯೂ, ಸೂತರಂ–ಸಾರಥಿಗಳನ್ನು, ಚೋದಿಸಿಂ–ರಥವನು ಮುಂದಕ್ಕೆ ಹಾಯಿಸಿರಿ, ಎನುತುಂ – ಎಂದು ಹೇಳುತ್ತ, ಅಗುರ್ವುರ್ವೆ – ಭಯವು ಅಧಿಕವಾಗಲು ಕೆಯ್ಮಿಕ್ಕು – ಕೈಮೀರಿ, ಶಕ್ತಿಮೀರಿ, ಕಾದಲ್ – ಯುದ್ಧಮಾಡುವುದಕ್ಕೆ, ನಡೆತರ್ಪ–ಬರುವ, ಆ ವೇಗದೊಳ್–ಆ ಬಿರುಸಿನಲ್ಲಿ, ಮುಮ್ಮೞಿಸಿದ–ಮುಂದಕ್ಕೆ ಚಾಚಿದ (?), ಪಲವುಂ ರಾಜಚಿಹ್ನಂಗಳಂ–ಹಲವು ರಾಜ ಲಾಂಛನಗಳನ್ನು, ಬೆಳ್ಗೊಡೆಗಳ್–ಶ್ವೇತಚ್ಛತ್ರಿಗಳು, ತಳ್ಪೊಯ್ದು–ತಾಗಿ, ಚಳತ್ ಚಂದ್ರಕ–ಅಲುಗಾಡುತ್ತಿರುವ ನವಿಲು ಗರಿಗಳನ್ನುಳ್ಳ, ಛತ್ರಪಿಂಡಂ – ಛತ್ರಿಗಳ ಸಮೂಹ, ಏಂ ಕಣ್ಗೊಳಿಸಿದುದೋ–ಏನು ಆಕರ್ಷಕವಾಯಿತೋ !

**ವಚನ :** ಪಱವಿಗೆಯ – ಧ್ವಜದ ; ಕುಱುಪುಗಳಿಂ – ಕುರುಹುಗಳಿಂದ ; ಮಂಡಲ, ಭ್ರಾಂತ, ಉದ್ಭ್ರಾಂತ, ಸ್ಥಿತಚಕ್ರ—ಈ ನಾಲ್ಕು ರಥವನ್ನು ನಡೆಸುವ ರೀತಿಗಳು, ಇವು ರಥಶಾಸ್ತ್ರದ ಪರಿಭಾಷೆ ಇರಬಹುದು ; ಆಲೀಢ–ಬಿಲ್ಗಾರನು ಕುಳಿತುಕೊಳ್ಳುವ ಒಂದು ಭಂಗಿ ; ಪೂರ್ವಮಾಕುಂಚಿತಂ ಪಾದಂ ಚಾಪಸ್ಥಾನಾಂಗ ಯೋಜಿತಂ। ತಿರ್ಯಕ್ಪ್ರಸಾರಿತಂ ಕೃತ್ವಾ ಪೃಷ್ಠೇ ಪಾದಂ ತಥಾಪರಂ ॥ ಅಂಗುಷ್ಠಃ ಪೂರ್ವಪಾದಸ್ಯ ಪಶ್ಚಾತ್ ಪಾದ ಕನಿಷ್ಠಿಕಾ, ವಿತಸ್ತಿಪಂಚಕಂ ಮಧ್ಯಂ ತಯೋರಾಲೀಢಕಂ ಭವೇತ್ – ಇತಿ ಸೋಮ ಭೂಭುಜಃ. ಬಲಗಾಲನ್ನು, ಮುಂದಕ್ಕೆ ಮಡಿಸಿಕೊಂಡು ಎಡಗಾಲನ್ನು ಹಿಂದಕ್ಕೆ ಮಡಿಸಿ ಕುಳಿತುಕೊಳ್ಳುವುದು ; ಪ್ರತ್ಯಾಲೀಢವು ಆಲೀಢಕ್ಕೆ ವ್ಯತ್ಯಾಸವಾದ ಆಸನ ಎಂದರೆ ಬಲಗಾಲನ್ನು ಹಿಂದಕ್ಕೆ ಮಡಿಸಿ ಎಡಗಾಲನ್ನು ಮುಂದಕ್ಕೆ ಮಡಿಸಿ ಕುಳ್ಳಿರುವುದು ; ಸಮಪಾದ–ವಿತಸ್ತ್ಯಂತರ ಮಾತ್ರಾತು ಸಮೌಪಾದೌ ಪ್ರಯೋಜಯೇತ್–ಸಮಾನಾಂತರದಲ್ಲಿ

(೨೪ ಅಂಗುಲ) ಪಾದಗಳನ್ನಿಟ್ಟು ನಿಲ್ಲುವುದು, ಪಂಪನು ಈ ಮೂರು ಆಸನಗಳನ್ನು ಮಾತ್ರ ಹೇಳಿದ್ದಾನೆ; ಇವುಗಳ ಜೊತೆಗೆ ವೈಶಾಖ, ಮಣ್ಡಲ, ಎಂಬೆರಡೂ ಸೇರಿ ಒಟ್ಟು ಐದಾಗುತ್ತವೆ: ರನ್ನನು ವೈಶಾಖಕದೆಡೆಯಲ್ಲಿ ವೈಷ್ಣವ ಎಂದು ಹೇಳಿದ್ದಾನೆ (ಗದಾ ೮-೧ ಗ).

೩೯. ಈ ಅಕ್ಕರದಲ್ಲಿ ಬಗೆಬಗೆಯ ಬಾಣಗಳನ್ನು ಹೇಳುವ ಶಬ್ದಗಳಿವೆ: ಅವುಗಳ ಅರ್ಥ, ಕೆಲವೆಡೆ ಅವುಗಳ ರೂಪ—ಇವೆರಡರಲ್ಲೂ ಅನಿರ್ದಿಷ್ಟತೆಯಿದೆ ಎಂದರೆ ಸರಿಯಾಗಿ ಗೊತ್ತಾಗುವುದಿಲ್ಲ. ನೆಱಿದು-ಸಮರ್ಥರಾಗಿ, ನಿರ್ವಾಯಂ-ಬಾಯಿಲ್ಲ ದಿರುವ ಬಾಣ ಎಂದರೆ ಅಲಗಿಲ್ಲದ ಬಾಣ?, ನರುವಾಯಂ?, ಮುಂಮೊನೆ-ಮುಂದುಗಡೆ ಮೊನಚಾಗಿರುವ ಬಾಣ?; ನೆರಕೆ=ನೇರಿಕೆ-ಕತ್ತರಿಸುವ ಬಾಣ? ನಾರಾಚಂ-ತಕ್ಕಡಿಯ ಮುಳ್ಳಿನಂತಿರುವ ಬಾಣ?, ತಗರ್ತಲೆಯಂ-ಒಂದು ಬಾಣ? ನೆಱನನಱಿಪ ಕಣೆ-ಮರ್ಮಸ್ಥಾನ ಹುಡುಕುವ ಬಾಣ ಎಂದರೆ ಮರ್ಮಭೇಧಿ ಬಾಣ? ಗೆಲೆಯಂಬು-?, ಕಕ್ಕಂಬು-?, ಕೆಲ್ಲಂಬು-?, ಮೊನೆಯಂಬು-ಮೊನಚಾದ ಬಾಣ?; ತಿರೆಕಾಣ್ಬಂ-ನೆಲವನ್ನು ಭೇದಿಸಿಕೊಂಡು ಹೋಗುವ ಬಾಣ?, ಪೆಱೆಯಮುಱಿಗಂ-ಅರ್ಧಚಂದ್ರನ ಚೂರಿನಂತಿರುವ ಬಾಣ? ಕಣಕೆನೆ ಪೋಪಂಬು-ಕಣಕ್ ಎಂದು ಹೋಗುವ ಬಾಣ (?), ಕವಲಂಬು-ಕವಲಾಗಿರುವ ಬಾಣ, ಎಂಬ-ಎನ್ನುವ, ಅಂಕದಂಬು - ಹೆಸರುವಾಸಿಯಾದ ಬಾಣಗಳು, ಎತ್ತಲುಂ - ಎಲ್ಲೆಲ್ಲೂ, ತುಱುಗಿ-ಗುಂಪಾಗಿ, ನಡುವಿನಂ-ನಾಟುತ್ತಿರಲು, ಸಾರ್ದುಸಾರ್ದು-ಹತ್ತಿರ ಹತ್ತಿರ ಬಂದು, ಅಥವಾ ಪಾರ್ದು ಪಾರ್ದು-ನೋಡಿ ನೋಡಿ, ಗುರಿಯಿಟ್ಟು, ಎಚ್ಚೆಚ್ಚು-ಪ್ರಯೋಗ ಮಾಡಿಮಾಡಿ, ಅತಿರಥರ್-ಅತಿರಥರೆಂಬ ವೀರರು, ಒಂದು ಜಾವಂ-ಒಂದು ಜಾವದ ಹೊತ್ತು, ಕಾದಿದರ್-ಹೋರಾಡಿದರು.

ವಚನ: ಏವದೊಳ್-ಮುಳಿಸಿನಲ್ಲಿ; ಮಾರ್ಕೊಂಡು-ಪ್ರತಿಭಟಿಸಿ.

೪೦. ತನ್ನದೊಣೆಯಂಬುಗಳ್ - ತನ್ನ ಬತ್ತಳಿಕೆಯ ಬಾಣಗಳು, ತವುವನ್ನೆಗಂ-ಮುಗಿದುಹೋಗುವವರೆಗೂ, ಎಚ್ಚು- ಬಾಣಗಳನ್ನು ಪ್ರಯೋಗಿಸಿ, ಅಂಬು-ಬಾಣಗಳು, ತಪ್ಪೊಡೆ-ನಾಶವಾದರೆ, ತೀರಿಹೋದರೆ, ಇಂ-ಇನ್ನು, ಎನಗೆ-ನನಗೆ, ಅಭಿವಾದಯೆನಲ್ಕೆ-ನಮಸ್ಕಾರ ಎಂದು ಹೇಳಲು, ಇದು ಪದಂ-ಇದು ಸಮಯ, ಎಂದು-ಎಂದು ಹೇಳಿ, ಆಗಳ್-ಆಗ, ಕರಂ ಸುರರ್ ನಗೆ-ದೇವತೆಗಳು ವಿಶೇಷವಾಗಿ ನಗುತ್ತಿರಲು, ಅರಿಗನ-ಅರ್ಜುನನ, ಇದಿರ್ಗೆ-ಎದುರಿನಿಂದ, ತೊಲಗಿದಂ-ಹೊರಟು ಹೋದನು.

೪೧. ದಾವಶಿಖಿಶಿಖೆಯಂ - ದಾವಾಗ್ನಿಯ ಜ್ವಾಲೆಯನ್ನು, ಇಳಿಪುದು - ಕೀಳ್ಮಾಡುತ್ತಿರುವುದು, ಇದು, ಆವಸರಲ್ - ಯಾವಬಾಣ, ಪೇೞಿಂ - ಹೇಳಿರಿ, ಎನಿಪ - ಎನ್ನಿಸುವ, ಸರಲಿಂ - ಬಾಣದಿಂದ, ಸಹದೇವಂ - ಸಹದೇವನು, ಮನದ ಏವದಿಂ - ಮನಸ್ಸಿನ ಕೋಪದಿಂದ, ದೇವರಪಡೆ ರಾಗಿಸೆ - ದೇವತೆಗಳ ಗುಂಪು

ಸಂತೋಷಿಸುತ್ತಿರಲು, ಶಕುನಿಯಂ – ಶಕುನಿಯನ್ನು, ಅವಯುವದಿಂ – ಶ್ರಮವಿಲ್ಲದೆ, ತಱಿದಂ – ಕತ್ತರಿಸಿದನು, ಕೊಂದನು.

ವಚನ : ಅತಿರ ಭುಕ್ತಿ – ಒಂದು ದೇಶ : ಬಿಂದಂಗಳಂತೆ – ರಾಶಿಯಂತೆ, ಬಿಂದ<(ಸಂ) ವೃಂದ ; ಅಥವಾ ಬಿಂದುಗಳಂತೆ – (ಹುಲ್ಲಿನ ಮೇಲೆ) ಹನಿಗಳಂತೆ ; ನೆಲಕ್ಕೆ–ಭೂಮಿಗೆ, ಸೋವತಂ ಮಾಡಿದಂ–ಆಹಾರವನ್ನಾಗಿ ಮಾಡಿದನು, ಬಲಿ ಕೊಟ್ಟನು ; ಅಂತಕಾನನಮಂ–ಯಮನ ಮುಖವನ್ನು ; ಎಯ್ದಿಸಿದಂ–ಸೇರಿಸಿದನು ; ಪುಲ್ಲಸೂಡಂ – ಹುಲ್ಲಿನ ಕಟ್ಟನ್ನು ; ಪೊಣರ್ದು–ಹೋರಾಡಿ ; ಸೋವತ – ಜವನ ಬಾರಿಗೆ ಸೋವತಮಾಗಿರೆಮಾೞ್ಪೆಂ (ಪಂಪರಾ ೯ – ೧೩೩) ; ಅಂತಕನ ಬಾರಿಗೆ ಸೋವತಮಾದೆ ದೇವ (ಪಂಪರಾ. ೧೪–೨೦೧) ; ಪ್ರಾ. ಸೋವತ್ಥಂ – ಉಪ ಭೋಗ್ಯವಸ್ತು ಎಂಬ ಶಬ್ದಕ್ಕೆ ಸಂಬಂಧಿಸಿರಬಹುದು.

೪೨. ಮಹಾರಥರಿರ್ – ಮಹಾರಥಿಕರೇ, ನಿಜಕುಲೋಚಿತ ವೃತ್ತಿಯಂ– ನಿಮ್ಮ ಕುಲಕ್ಕೆ ತಕ್ಕುದಾದ ವರ್ತನೆಯನ್ನು, ಬಗೆಯಿಂ – ಭಾವಿಸಿರಿ ; ಮಹೀ ಭುಜರ–ರಾಜರ, ಕ್ಷತ್ರಿಯರ, ಮಕ್ಕಳಿರ್–ಮಕ್ಕಳಾಗಿದ್ದೀರಿ, ಎಂದು, ನಂಬಿದೆಂ– ನಂಬಿದೆನು ; ಇಂತು–ಹೀಗೆ, ನಣ್ಪನೆ–ಬಾಂಧವ್ಯವನ್ನೇ, ವೈರಿಭೂಭುಜರೊಳ್– ಶತ್ರುರಾಜರಲ್ಲಿ, ಉಂಟೊಡೆತಾಗಿ – ಇಡೆಯಾಗಿ, ಉಳ್ಳುದಾಗಿ, ಮಾೞ್ಪುದಂ – ಮಾಡುವುದನ್ನು, ಈಗಳ್–ಈಗ, ಆನಱಿದೆಂ–ನಾನು ತಿಳಿದೆನು ; ಇಂ–ಇನ್ನು , ನಿಮ್ಮಂ–ನಿಮ್ಮನ್ನು , ಈ ರಣರಂಗದೊಳ್–ಈ ಯುದ್ಧ ಭೂಮಿಯಲ್ಲಿ, ಎನಗೆ ಎಂದೊಡೆ–ನನಗೆ ಸಂಬಂಧಿಸಿದವರು ಎಂದು ಹೇಳಿದರೆ, ಫಣಿಧ್ವಜನೆಂ ಅಪ್ಪೆನೆ– ನಾನು ಸರ್ಪಧ್ವಜನಾಗುತ್ತೇನೆಯೆ ಎಂದರೆ ನಾನು ದುರ್ಯೋಧನನೆ? ಇಲ್ಲಿ ಮಹಾ ರಥರಿರ್ ಎಂಬುದು ಸಂಬೋಧನಾರ್ಥದಲ್ಲಿ ಇರಬಹುದು. ಜಲಧಿ ದ್ವೀಪಾಂತ ರಾಳಂಗಳನಿರದೆಪುಗಿಂ ಪೋಗಿಮುಗ್ರಾರಿಗಳ್ ಎಂಬಲ್ಲಿರುವಂತೆ ; ಇಲ್ಲದಿದ್ದರೆ ಮಹಾರಥರಿರ್ – ಮಹಾರಥಿಕರಾಗಿದ್ದೀರಿ ಎಂದು ಅನ್ವಯಿಸಿಕೊಳ್ಳಬಹುದು : ಆಗ ನಿಜಕುಲೋಚಿತ ವೃತ್ತಿಯಂ ಬಗೆಯಿಂ ಎಂದಷ್ಟಕ್ಕೇ ಒಂದು ವಾಕ್ಯವಾಗುತ್ತದೆ.

೪೩, ಇದು–ಹೀಗೆ ಯುದ್ಧ ಮಾಡುವುದು, ಕಾದುವ ಮಾೞ್ಕೆಯಲ್ಲಂ– ಯುದ್ಧ ಮಾಡುವ ರೀತಿಯಲ್ಲ ; ಕೆಮ್ಮನೆ – ಸುಮ್ಮನೆ, ನಣ್ಪಿನ – ಬಾಂಧವ್ಯದ ಅಥವಾ ಸ್ನೇಹದ, ಮೇಳಗಾಳೆಗಂ – ಕ್ರೀಡಾಯುದ್ಧವನ್ನು. ಕಾದುವ – ಹೋರುವ, ಮಾೞ್ಕೆ–ರೀತಿ ; ಸಿಂಧುಘಟ ಸೂತ ಸುತರ್ಕಳಿಂ–ಭೀಷ್ಮ, ದ್ರೋಣ ಕರ್ಣರಿಂದ, ಆಗದ–ಆಗದಿರುವ, ರಾಜ್ಯೋದಯಂ–ರಾಜ್ಯ ಶ್ರೀ ಅಥವಾ ರಾಜ್ಯಲಾಭವು, ಅಮ್ಮ–ಅಪ್ಪಗಳಿರಾ, ನಿಮ್ಮ ಬಲದಿಂದೆ–ನಿಮ್ಮ ಸಾಮರ್ಥ್ಯದಿಂದ, ಎನಗೆ–ನನಗೆ, ಅಪ್ಪುದೆ–ಆಗುತ್ತದೆಯೆ? ಮದ್ವಿರೋಧಿಯಂ–ನನ್ನ ಶತ್ರುವನ್ನು, ಛೇದಿಸಲ್– ಕತ್ತರಿಸಲು, ಕೊಲ್ಲಲು, ಆನೆ–ನಾನೇ, ಸಾಲ್ವೆಂ–ಸಾಕಾಗುತ್ತೇನೆ, ಸಮರ್ಥನಾಗಿರು

ವೆನು, ಅನ್ನೆಗಂ – ಅಲ್ಲಿಯತನಕ, ರಣರಂಗಭೂಮಿಯೊಳ್ – ಯುದ್ಧಭೂಮಿಯಲ್ಲಿ ಇರಿಂ–ಇರಿರಿ, ಇರಿ.

**ವಚನ :** ವರೂಥದಿಂ – ರಥಾರೂಢನಾಗಿ ; ಏವಯಿಸಿ–ದುಃಖಕೋಪಗಳನ್ನು ಹೊಂದಿ.

**೪೪.** ಇನಿತುವರಂ–ಇಷ್ಟರವರೆಗೆ, ಇಳೇಶನಿಂ–ರಾಜ ದುರ್ಯೋಧನನಿಂದ, ಪರಾಭವಂ–ಅವಮಾನವು, ಇಂ–ಇನ್ನು, ಎನಗೆ–ನನಗೆ, ಆದುದು–ಆಯಿತು ; ಇಂ–ಇನ್ನು, ಸಿಡಿಲ್ವೆನೆ–ಸಿಡಿಯುತ್ತೇನೆಯೆ ಎಂದರೆ ಬಿಟ್ಟು ಹೋಗುತ್ತೇನೆಯೆ ? ರಿಪುಸೇನೆಯಂ–ಶತ್ರುಸೈನ್ಯವನ್ನು ತೊೞ್ತುೞಿಮಾೞ್ಪೆಂ – ತುಳಿದು ಸೊಪ್ಪಾಗಿ ಮಾಡುತ್ತೇನೆ, ಎಂದು–ಎಂಬುದಾಗಿ, ಅಗುರ್ವಿನ – ಭಯದ, ಉರ್ವಿನ – ಅತಿಶಯತೆಯನ್ನುಳ್ಳ, ಶರಸಂಕುಲಂಗಳೊಳ್–ಬಾಣಗಳ ಸಮೂಹಗಳಲ್ಲಿಯೆ, ಪೂೞ್ದೊಡೆ–ಹೂಳಿದರೆ, ಪಾಂಡವ ಸೈನ್ಯಂ–ಪಾಂಡವರ ಪಡೆ, ಆತನಂಬಿನ ಮೊನೆಯೊಳ್–ಅವನ ಬಾಣಗಳ ಬಾಯಲ್ಲಿ, ಸುರುಳ್ದು – ಸುರುಟಿ, ಉರುಳಿಗೊಂಡುದು – ರಾಶಿಯಾಗಿ ಬಿತ್ತು ; ಶಲ್ಯಂ – ಶಲ್ಯರಾಜನು, ಇದೇಂ ಪ್ರತಾಪಿಯೋ – ಇದೇನು ಪ್ರತಾಪವನ್ನುಳ್ಳವನೋ !

**ವಚನ :** ಮಕುಟಬದ್ಧರಂ–ರಾಜರನ್ನು ; ಆಂಪರ್ – ಎದುರಾಗುವವರು ; ಮೇಗಿಲ್ಲಪೆ – ತನಗಿಂತ ಮೇಲಾದವರು, ಉತ್ತಮರಾದವರು ಇಲ್ಲದೆ ; ಆಕಂಪಂಗೊಳೆ – ಪೂರ್ಣವಾಗಿ ನಡುಗಲು, ಹೆದರಲು ; ಮುರಜಕೇತನ – ಮದ್ದಲೆಯ ಗುರುತುಳ್ಳ ಬಾವುಟ.

**೪೫.** ಇರ್ವರುಂ – ನಾವಿಬ್ಬರೂ, ಬೀರವಟ್ಟಮನಾಂತ – ಸೇನಾಪತಿ ಪಟ್ಟವನ್ನು ಧರಿಸಿದ, ಬೀರ [ರೆಂ]–ಶೂರರಾಗಿದ್ದೇವೆ ; ಸುರರಾಜಿ–ದೇವತೆಗಳ ಸಮೂಹ, ಕೈವಾರದಿಂ– ಹೊಗಳಿಕೆಯಿಂದ, ಬಟ್ಟೆವಿಟ್ಟು – ದಾರಿಯನ್ನು ಬಿಟ್ಟು, ಎಡೆಮಾಡಿಕೊಟ್ಟು, ನಮ್ಮನೆ–ನಮ್ಮನ್ನೇ, ನೋಡ–ನೋಡು, ನೋಡುವರ್ – ನೋಡುತ್ತಾರೆ ; ಈಗಳ್–ಈಗ, ಈ ಭಾರತಂ–ಈ ಭಾರತ ಯುದ್ಧವು ; ಸಮೆದಪ್ಪುದು–ಮುಕ್ತಾಯವಾಗುತ್ತದೆ ; ಅಳ್ಕದೆ–ಹೆದರದೆ, ನಿಂದು – ನಿಂತು, ಕಾದು – ಯುದ್ಧಮಾಡು, ಎನುತುಂ–ಎಂದು ಹೇಳುತ್ತ, ಅಂತಕಾತ್ಮಜಂ–ಯಮನ ಪುತ್ರ ಧರ್ಮರಾಜನು, ಶರಾಸಾರಮುಂ–ಬಾಣವರ್ಷವನ್ನು , ಸುರಿದು, ಅಂತು–ಹಾಗೆ, ಅಸುಂಗೊಳೆ–ಪ್ರಾಣಾಪಹರಣ ಮಾಡಲು, ಕಾದಿದಂ–ಯುದ್ಧ ಮಾಡಿದನು.

**೪೬.** ಕಾದೆ–ಯುದ್ಧಮಾಡಲು, ರಥ ತುರಗಕೇತನ ಕೋದಂಡುಗಳುಮಂ–ರಥ ಕುದುರೆ ಧ್ವಜ ಬಿಲ್ಲುಗಳನ್ನು, ಉೞಿದೆ–ಇರದೆ, ಖಂಡಿಸಿ–ಕತ್ತರಿಸಿ, ಪ್ರಳಯಾಂಭೋದನಿನಾದದೆ–ಪ್ರಳಯ ಕಾಲದ ಮೋಡದ ಶಬ್ದದಿಂದ ಎಂದರೆ ಗುಡುಗಿನಿಂದ, ತೊಟ್ಟನೆ – ಬೇಗನೆ, ಮದ್ರಮಹೀದಯಿತಂ – ಮದ್ರರಾಜನು, ಶಲ್ಯನು, ಆರ್ವುದುಂ–ಗರ್ಜಿಸುತ್ತಲು, ಧರ್ಮಸುತಂ–ಧರ್ಮರಾಜನು.

೪೭. ಮುಳಿದು–ಕೆರಳಿ, ತಳಮಳಿಸಿ–ಬೆರಗಾಗಿ ಅಥವಾ ವ್ಯಾಕುಲಿತನಾಗಿ, ತಳಱದೆ–ಚಲಿಸದೆ, ಹೋಗದೆ, ತೊಳಗುವ–ಹೊಳೆಯುವ, ಕರವಾಳಂ–ಕತ್ತಿಯನ್ನು, ಉರ್ಚಿ–ಸೆಳೆದು, ಪ್ರೈಯ್ವೆರ್ಚಿ–ಪ್ರೈಯುಬ್ಬಿ, ಪೊದಳ್ದ–ವ್ಯಾಪಿಸಿದ, (ತನ್ನೊಳಗೆ) ಅಳವು–ಶಕ್ತಿಯು, ಅಮರೆ–ಕೂಡಲು, ಪಿಡಿದು–ಹಿಡಿದುಕೊಂಡು, ರಥದಿಂದೆ–ರಥದಿಂದ, ಇಳೆಗೆ–ನೆಲಕ್ಕೆ, ಇೞಿದು–ಇಳಿದು, ಅವಂ–ಅವನು, (ಧರ್ಮರಾಜನು) ಅವನಿಪತಿಯಂ–ರಾಜ ಶಲ್ಯನನ್ನು, ಅಣುಗಿಱಿವೊಯ್ದಂ–ಸಮೀಪಿಸಿ ಹೊಡೆದನು, ಅಣುಗಿಱಿವೊಯ್ < ಅಣುಗಿಱಿ + ಪೊಯ್; ಅಣುಗಿಱಿ < ಅಣುಗು + ಇಱಿ, ಸಮೀಪಿಸು, ಹತ್ತಿರ ಬರು.

**ವಚನ:** ಪೆರ್ಮರದಂತೆ–ದೊಡ್ಡ ಮರದಂತೆ; ಕೆಡೆದ–ಬಿದ್ದ; ತನ್ನಳಿಯನಂ –ತನ್ನ ಸೋದರಳಿಯನನ್ನು; ಈ ವಚನವನ್ನು ನೋಡಿದರೆ ಹೊಡೆದವನು ಶಲ್ಯನೆಂದೂ, ಬಿದ್ದವನು ಧರ್ಮರಾಜನೆಂದೂ ಸ್ಪಷ್ಟವಾಗುತ್ತದೆ; ಆದರೆ ೪೭ ನೆಯ ಪದ್ಯದ ಕೊನೆಯ ಭಾಗದಿಂದ ಹೊಡೆದವನು ಧರ್ಮರಾಜನೆಂದು ಅರ್ಥವಾಗುತ್ತದೆ. ಇಲ್ಲಿ ಏನೋ ಪಾಠಕ್ಲೇಶವಿರಬಹುದು; ಕೊನೆಯ ಸಾಲನ್ನು "ದಿಳೆಗಿೞಿದನನವನಿಪತಿಯನಣುಗಿಱಿವೊಯ್ದಂ" ಎಂದು ತಿದ್ದಿಕೊಂಡರೆ ಸರಿಯಾಗುತ್ತದೆ.

೪೮. ಮುಳಿಯಿಸದನ್ನಂ – (ಇವನಿಗೆ) ಕೋಪವನ್ನುಂಟುಮಾಡದವರೆಗೂ, ಈ ನೃಪನಿಂ–ಈ ಧರ್ಮರಾಜನಿಂದ, ಸಾವು–ಮರಣವು, ಎನಗೆ–ನನಗೆ, ಆಗದು–ಆಗುವುದಿಲ್ಲ; ಎಂತುಂ–ಹೇಗೂ, ಈತನಂ–ಇವನನ್ನು, ಮುಳಿಯಿಪೆಂ–ಕೆರಳಿಸುತ್ತೇನೆ, ಎಂದು, ಉರಃಸ್ಥಳಮುಂ–ಎದೆಯ ಪ್ರದೇಶವನ್ನು, ಅಂತು–ಹಾಗೆ, ಒದೆದಾಗಡೆ–ಕಾಲಿನಿಂದ ಒದೆದಾಗಲೆ, ನೃಪಂ–ಧರ್ಮರಾಜನು, ಕಂತುಗೆ–ಮನ್ಮಥನಿಗೆ, ಈಶ್ವರಂ – ಶಿವನು, ಮುಳಿದವೊಲ್ – ಕೋಪಿಸಿಕೊಂಡಂತೆ, ಮುಳಿದು – ಕೆರಳಿ, ನೋಡೆ–ನೋಡಲು, ವಿಳೋಚನ ಪಾವಕಂ–ನೇತ್ರಾಗ್ನಿಯು, ತಗುಳ್ದು – ಬೆನ್ನಟ್ಟಿ, ಅಳುರ್ದೊಡೆ– ವ್ಯಾಪಿಸಿದರೆ, ಸುಟ್ಟರೆ; ಮದ್ರಮಹೀಶನಾ – ಶಲ್ಯನ, ಒಡಲ್–ದೇಹವು, ಆಗಳೆ–ಆಗಲೇ, ಬೂದಿಯಾದುದು–ಭಸ್ಮವಾಯಿತು.

**ವಚನ:** ನೇತ್ರೋದ್ಭೂತಾನಳಂ–ಕಣ್ಣಿನಲ್ಲಿ ಹುಟ್ಟಿದ ಕಿಚ್ಚು; ತ್ರಿಣೇತ್ರ ಲಲಾಟಾನಳನಂತೆ–ಶಿವನ ಹಣೆಗಣ್ಣ ಅಗ್ನಿಯಂತೆ; ಅಳವಲ್ಲದೆ–ವಶವಲ್ಲದೆ, ವಿಾರಿ, ಅಳುರೆ–ಸುಡಲು;

ವ್ಯಾಸಭಾರತದಲ್ಲಿ ಶಲ್ಯನ ವಧೆ ಬೇರೆ ರೀತಿಯಲ್ಲಿ ವರ್ಣಿತವಾಗಿದೆ. ಧರ್ಮರಾಜನು ಶಕ್ತ್ಯಾಯುಧವನ್ನು ಪ್ರಯೋಗಿಸಿ ಶಲ್ಯನ ಎದೆಯನ್ನು ಸೀಳಿದಂತೆ ಹೇಳಿದೆ; ಆದರಿಂದ ಶಲ್ಯನು ಸತ್ತನು.

ತಾಂ ಸರ್ವಶಕ್ತ್ಯಾಂ ಪ್ರಹಿತಾಂ ಸುಶಕ್ತೀಂ
ಯುಧಿಷ್ಠಿರೇಣ ಪ್ರತಿವಾರ್ಯ ವೀರ್ಯಾಂ
ಪ್ರತಿಗ್ರಹಾಯಾಭಿ ನನರ್ದ ಶಲ್ಯಃ
ಸಮುಗ್ಧಿತಾಮಗ್ನಿ ಮಿವಾಜ್ಯಧಾರಾಂ ॥
ಸಾ ತಸ್ಯಮರ್ಮಾಣಿ ವಿದಾರ್ಯ ಶುಭ್ರ
ಮುರೋ ವಿಶಾಲಂಚ ತಥೈವ ಭಿತ್ವಾ
ವಿವೇಶ ಗಾಂ ತೋಯಮಿವಾ ಪ್ರಸಕ್ತಾ
ಯಶೋ ವಿಶಾಲಂ ನೃಪತೇರ್ದಹಂತೀ ॥
ನಾ ಸಾಕ್ಷಿ ಕರ್ಣಾಸ್ಯ ವಿನಿಃಸೃತೇನ
ಪ್ರಸ್ಯಂದತಾವ್ರಣ ಸಂಭವೇ ನ
ಸಂಸಿಕ್ತಗಾತ್ರೋ ರುಧಿರೇಣ ಸೋಭೂತ್
ಕ್ರೌಂಚೋ ಯಥಾ ಸ್ಕಂದಹತೋ ಮಹಾದ್ರಿಃ ॥

ಮೇಲೆ ಹೇಳಿರುವಂತೆ ಪಂಪನು ವರ್ಣಿಸಿಲ್ಲ. ಇಲ್ಲಿ ಕುಮಾರವ್ಯಾಸನು ವ್ಯಾಸರನ್ನೇ ಅನುಸರಿಸುತ್ತಾನೆ. ಪಂಪನು ಹೀಗೆ ವ್ಯತ್ಯಾಸ ಮಾಡುವುದಕ್ಕೆ ಕಾರಣವೇನು ? ಆತನಿಗೆ ವ್ಯಾಸಭಾರತದಲ್ಲೇ ಒಂದು ಸೂಚನೆ ಸಿಕ್ಕಿರುವಂತಿದೆ:

ಸಧರ್ಮರಾಜೋ ಮಣಿ ಹೇಮದಂಡಾಂ
ಜಗ್ರಾಹಶಕ್ತಿಂ ಕನಕ ಪ್ರಕಾಶಾಮ್
ನೇತ್ರೇ ಚ ದೀಪ್ತೇ ಸಹಸಾ ವಿವೃತ್ಯ
ಮದ್ರಾಧಿಪಂ ಕ್ರುದ್ಧಮನಾ ನಿರೈಕ್ಷತ್ ॥
ನಿರೀಕ್ಷಿತೋಽಸೌ ನರದೇವ ರಾಜ್ಞಾ
ಪೂತಾತ್ಮನಾ ನಿರ್ಹೃತಕಲ್ಮಷೇಣ।
ಆಸೀನ್ನಯಪ್ ಭಸ್ಮ ಸಾದ್ಮದ್ರರಾಜ
ಸ್ತದದ್ಭುತಂ ಮೇ ಪ್ರತಿಭಾತಿ ರಾಜನ್ ॥

ಪೂತಾತ್ಮನೂ ಕಲ್ಮಷರಹಿತನೂ ಆಗಿದ್ದ ಧರ್ಮರಾಜನ ದೃಷ್ಟಿಪಾತದಿಂದ ಮದ್ರರಾಜನು ಏಕೆ ಭಸ್ಮವಾಗಲಿಲ್ಲ ಎಂಬುದೇ ನನಗೆ ಅದ್ಭುತವಾಗಿ ತೋರುತ್ತದೆ ಎಂದು ಸಂಜಯನ ಮಾತು. ಪಂಪನು ಈ ಸೂಚನೆಯನ್ನು ಪರಿಭಾವಿಸಿ ಹೀಗೆಯೇ ಏಕಾಗಬಾರದು ಎಂದು ಧರ್ಮರಾಜನಿಗೆ ಮತ್ತಷ್ಟು ಕೋಪವುಂಟಾಗುವಂತೆ ಶಲ್ಯನು ಅವನನ್ನು ಒದೆಯುವಂತೆ ಮಾಡಿದ್ದಾನೆ. ಪರಿಣಾಮ ಧರ್ಮರಾಜನ ಕಣ್ಣುಗಳಿಂದ ಕಿಚ್ಚು ಹೊಮ್ಮಿ ಶಲ್ಯ ಬೂದಿಯಾದದ್ದು.

೪೯. ಆ ದೊರೆಯರ್ – ಅಂಥ ಯೋಗ್ಯತೆಯುಳ್ಳ, ನದೀಜಘಟಸಂಭವ ಸೂರ್ಯತನೂಜ ಮದ್ರರಾಜಾದಿ ಮಹೀಭುಜರ್ – ಭೀಷ್ಮ ದ್ರೋಣ ಕರ್ಣ ಶಲ್ಯ ಮುಂತಾದ ರಾಜರು, ಎನ್ನಯ ದೂಸಱಿಂ–ನನ್ನ ಕಾರಣದಿಂದ, ಧುರದೊಳ್–

ಯುದ್ಧದಲ್ಲಿ, [ಅಟ್ಟುಂಬೆಟ್ಟಿ] ದಂತಾದರ್—ನಾಶವಾಗಿ ಸಾರಿಸಿದಂತಾದರು, ಎಂದರೆ ನಿರ್ನಾಮರಾದರು ; ಇದೊಂದೆ—ಇದು ಒಂದೇ, ಮೆಯ್—ದೇಹ, ಉೞಿದುದು—ಉಳಿಯಿತು ; ಇಂ—ಇನ್ನು, ಎನಗೆ—ನನಗೆ, ಮಾೞ್ಪೊಡೆ—ಮಾಡುವ ಪಕ್ಷದಲ್ಲಿ, ಆವುದೊ – ಯಾವುದೋ, ಏನೊ? ಎಯ್ದೆ – ಚೆನ್ನಾಗಿ, ಮುಂಪಾದ – ಎದುರಿಸಿದ, ವಿರೋಧಿಸಾಧನಮಂ—ಶತ್ರು ಸೈನ್ಯವನ್ನು, ಎನ್ನ ಗದಾಶನಿಯಿಂಪೆ—ನನ್ನ ಗದೆಯೆಂಬ ಸಿಡಿಲಿನಿಂದ, ಉರುಳ್ಚುವೆಂ—ಉರುಳಿಸುತ್ತೇನೆ.

**ವಚನ**: ದಕ್ಷಿಣಕರಾಗ್ರಮಂ—ಬಲಗೈಯ ತುದಿಯನ್ನು :

೫೦. ಕೃಪಾಶ್ವತ್ಥಾಮರುಳ್ಳಂತೆ – ಕೃಪ ಅಶ್ವತ್ಥಾಮರಿರುತ್ತಿರಲು, ಜೆವ ಸಾಯಂಗೆಯಲ್—ಕಾರ್ಯವನ್ನು ಮಾಡಲು, ಇನ್ನುಂ—ಇನ್ನೂ, ಎಡೆ—ಅವಕಾಶವು, ಉಂಟು—ಇದೆ ; ಪಾಂಡವರಂ ಗೆಲ್ವುದು – ಪಾಂಡವರನ್ನು ಗೆಲ್ಲುವುದು, ಅಸಾಧ್ಯಮಾಯ್ತೆ—ಅಸಾಧ್ಯವಾಯಿತೆ? ನಿಜದೋರ್ದಂಡಂಬರಂ—ನಿನ್ನ ಬಾಹುದಂಡಗಳವರೆಗೆ, ಗಂಡರ್—ಶೂರರು, ಆಹವ ರಂಗಕ್ಕೆ—ಯುದ್ಧ ರಂಗಕ್ಕೆ, ಒಳರೇ—ಇರುವರೇ? ಸಮಂತು—ಚೆನ್ನಾಗಿ, ಪಗೆಯಂ—ಶತ್ರುವನ್ನು, ಕೊಲ್ವಂತು ಗೆಲ್ವಂತು—ಕೊಲ್ಲುವ ಹಾಗೆ ಗೆಲ್ಲುವ ಹಾಗೆ, ಕಾದುವುದು—ಯುದ್ಧಮಾಡುವುದು ; ದೇವ—ರಾಜನೇ, ಏಕಾಕಿಯೆ ಆಗಿ—ಒಂಟಿಗನೇ ಆಗಿ, ರಿಪುಭೂಪಾಳರ್ಕಳೊಳ್—ಶತ್ರುರಾಜರಲ್ಲಿ, ಕಾದುವಯ್—ಯುದ್ಧ ಮಾಡುವೆಯಾ?

**ವಚನ**: ಎನ್ನುಮಂ – ನನ್ನನ್ನೂ ; ಏಕಾಕಿಯೆಂದು – ಒಂಟಿಗನೆಂದು ; ಏಳಿಸಿ—ತಿರಸ್ಕರಿಸಿ ;

೫೧. ವನಕರಿ........ನನನೆನೆ :—ವನಕರಿ – ಕಾಡಾನೆಗಳ, ಕುಂಭ – ಕುಂಭಸ್ಥಳವನ್ನು, ಪಾಟನ—ಸೀಳುವುದರಲ್ಲಿ, ಪಟಿಷ್ಠ—ಸಮರ್ಥವಾದ, ಕಠೋರ—ಕಠಿನವಾದ, ನಖ – ಉಗುರುಗಳ, ಪ್ರಹಾರ – ಏಟಿನಿಂದಾದ, ಭೇದನ – ಬಿರಿಯುವಿಕೆಯಿಂದ, ಗಳಿತ—ಸೋರಿದ, ಅಸ್ರ – ರಕ್ತದಿಂದ, ರಕ್ತ – ಕೆಂಪಾದ, ನವ – ಹೊಸದಾದ, ಮೌಕ್ತಿಕ—ಮುತ್ತುಗಳ, ಪಂಕ್ತಿ—ಸಾಲುಗಳ, ವಿಳಾಸ—ಶೋಭೆಯಿಂದ, ಭಾಸುರ—ಪ್ರಕಾಶಮಾನವಾದ, ಆನನಂ—ಮುಖವುಳ್ಳದ್ದು, ಎನೆ—ಎನ್ನಲು, ಸಂದ—ಪ್ರಸಿದ್ಧವಾದ, ಉದಗ್ರ—ಶ್ರೇಷ್ಠವಾದ, ಮೃಗರಾಜನುಮಂ—ಸಿಂಹವನ್ನೂ, ಮದವದ್ವಿರೋಧಿ ಭೇದನ ಕರನಪ್ಪ—ಮದಿಸಿದ ಶತ್ರುವನ್ನು ಸೀಳುವವನಾದ, ಶೌರ್ಯಮದದ—ಪ್ರತಾಪದ ಸೊಕ್ಕಿನಿಂದ ಕೂಡಿದ, ಎನ್ನುಮಂ—ನನ್ನನ್ನೂ, ಸಂಜಯಾ—ಸಂಜಯನೇ, ಒಂದೊಡಲ್ —ಒಂದೇ ದೇಹ ಎಂದರೆ ಏಕಾಕಿಯೆಂದು, ಎಂಬೆ—ಹೇಳುವೆಯಾ?

**ವಚನ**: ಆಪತ್ಪ್ರತೀಕಾರಮುಮಂ – ಆಪತ್ತಿಗೆ ಪ್ರತಿಕ್ರಿಯೆಯನ್ನೂ ; ನೆಗೞಲಾಗದು—ಮಾಡಲಾಗದು ; ಮುಳಿಸಾಱಿ—ಕೋಪಶಮನವಾಗಲು ; ನೃಪಶಿರಃ ಕಪಾಲ ಜರ್ಜರಿತಮುಂ—ರಾಜರ ತಲೆಯೋಡುಗಳಿಂದ ಕಿಕ್ಕಿರಿದದ್ದೂ ; ಸಮುತ್ಸಾರಿತಮುಂ – ಹೊರಡಿಸಲ್ಪಟ್ಟದ್ದೂ ; ಮೌಳಿಮಾಳಾ – ತಲೆಗಳ ಸಾಲುಗಳಿಂದ ;

ವಿಗಳಿತ – ಜಾರಿದ ; ಕೋಟಿ – ತುದಿಗಳ ; ಉಚ್ಚಳಿತ – ಮೇಲೆದ್ದ ; ಮಣಿಶಲಾಕಾ ಸಂಕುಳಮುಂ – ರತ್ನಗಳ ಸಲಾಕಿಗಳ ಸಮೂಹವನ್ನುಳ್ಳ ; ನಿಸ್ಸಹ – ಸಹಿಸಲು ಸಾಮರ್ಥ್ಯವಿಲ್ಲದ ; ಖರ್ವಿತ – ತೋಡಿದ ; ಉರ್ವೀತಳಮುಂ – ಭೂಪ್ರದೇಶವುಳ್ಳ ; ತೀವ್ರಜ್ವಳನ–ತೀವ್ರಾಗ್ನಿಯಂತೆ ; ಆಸ್ಫಾರ–ಹೊಳೆಯುವ, ಕರಾಳ–ಭಯಂಕರವಾದ, ಕರವಾಳ–ಕತ್ತಿಗಳ, ಭಾಮಂಡಲ–ಕಾಂತಿಯ ಬಳಸಿನಿಂದ ಎಂದರೆ ಪರಿವೇಷದಿಂದ ; ಪರೀತ – ಸುತ್ತುವರಿಯಲ್ಪಟ್ಟ ; ಉದ್ಯತ – ಎತ್ತರವಾದ, ಖರ – ಹೇಸರಗತ್ತೆಗಳ, ಖುರ – ಗೊರಸುಗಳ ; ಟಂಕ – ಲಾಳಗಳ, ಪರಿಸ್ಖಲನ – ಜಾರಿ ಬೀಳುವಿಕೆಯಿಂದ, ಕಳಿತ–ಕೂಡಿದ ; ನಿಸ್ವನಮುಂ–ಶಬ್ದವುಳ್ಳ ; ಶಲ್ಯ–ಶಲ್ಯವೆಂಬ ಆಯುಧ, ಕಠಾರಿ ; ಕಳಕಳ–ಸದ್ದುಗಳಿಂದ, ಆಕಳಿತಮುಂ–ತುಂಬಿದ ; ಸೂತ–ಸಾರಥಿಗಳ, ಹೂಂಕಾರ–ಗರ್ಜನೆಗಳಿಂದ : ಕಾತರಿತ–ಸಂಭ್ರಮಗೊಂಡ ; ತರಳತರ–ಅತಿ ಚಂಚಲವಾದ ; ದ್ರುತವೇಗ–ಓಟದ ವೇಗದಿಂದ ; ನೇಮಿಧಾರಾ–ಗಾಲಿಯ ಸುತ್ತಲಿರುವ ಕಬ್ಬಿಣದ ಪಟ್ಟಿಗಳ ; ಪರಿವೃತ – ಹೊರಳಿದ, ಸಂಘಟ್ಟನ – ಹೊಡೆತದಿಂದ ; ಸಮುಚ್ಚಳಿತ–ಮೇಲೆದ್ದ ; ಪಾಂಸುಪಟಳ–ಧೂಳುಗಳ ಪದರಗಳ ; ದುರ್ಲಕ್ಷ್ಯ–ನೋಡಲಾಗದ ; ನಿಹತ–ಹೊಡೆಯಲ್ಪಟ್ಟ ; ನಿಕುರುಂಬ–ಸಮೂಹ ; ಕೀಲಾಲ–ರಕ್ತದ ; ಕಲ್ಲೋಲ–ಅಲೆಗಳ, ಪ್ರವರ್ತನ – ಹೊರಳುವಿಕೆಯನ್ನುಳ್ಳ ; ದುಸ್ತರ – ದಾಟಲಸಾಧ್ಯವಾದ, ಅವತರಣ ಮಾರ್ಗಮುಂ–ದಾಟುವ ದಾರಿಯನ್ನುಳ್ಳ ; ಅಸಿಪತ್ರ–ಕತ್ತಿಗಳ ; ಚಟಾಚ್ಛಾಟನ–ಜುಟ್ಟುಗಳ ಮಿಡಿತದಿಂದ ; ದುರ್ನಿರೀಕ್ಷ್ಯ–ನೋಡಲಾಗದ ; ಬಂಧುರ ಮಪ್ಪ–ಸೊಗಸಾದ, ವಿಷಮ ಪ್ರದೇಶಂಗಳೊಳ್–ಸಮವಲ್ಲದ ಎಂದರೆ ಹಳ್ಳ ತಿಟ್ಟಾದ ಎಡೆಗಳಲ್ಲಿ ;

೫೨. ಎಱಗುವ – ನಮಸ್ಕರಿಸುವ, ಅನೇಕವಂಶ – ಅನೇಕ ಮನೆತನಗಳ, ನರಪಾಲಕರ–ರಾಜರ, ಕಿರೀಟ ಕೋಟಿಯೊಳ್–ಕಿರೀಟಗಳ ತುದಿಯಲ್ಲಿ, ಮಿಱುಗುವ–ಪ್ರಕಾಶಿಸುವ, ಪದ್ಮರಾಗದ – ರತ್ನಗಳ, ಬಿಸಿಲ್ಗೆ – ಪ್ರಕಾಶಕ್ಕೆ, ಅಗಿವ – ಅಂಜುವ, ಈ ನಿಜ ಪಾದಪದ್ಮಂ – ಈ ನಿನ್ನ ಪಾದಕಮಲಗಳು, ಈ ಯಿಱಿದು – ಇನೋ ಹೊಡೆದು, ಪಿಡಿಲ್ದ–ಹಿಡಿದಿರುವ, ಬಾಳ–ಕತ್ತಿಗಳ, ಮೊನೆಯಂಬಿನ–ಮೊನಚಾದ ಬಾಣಗಳ, ತಿಂತಿಣಿಯೊಳ್–ರಾಶಿಯಲ್ಲಿ, ತಗುಳ್ದು–ಸೇರಿ, ಕಿಕ್ಕಿಱಿಗಿಱಿದಿರ್ದ–ಒತ್ತಾಗಿ ತುಂಬಿರುವ, ಕೊಳ್ಗುಳದೊಳಂ–ಯುದ್ಧಭೂಮಿಯಲ್ಲಿ, ನಡೆವ–ನಡೆಯುವ, ಈ ನಡೆಗೆ–ಈ ನಡೆಯುವಿಕೆಗೆ, ಎಂತು ನೋಂತೆಯೋ–ಹೇಗೆ ವ್ರತ ಮಾಡಿದೆಯೋ ?

೫೩. ಇವು–ಇವುಗಳು, ಪವನಾತ್ಮಜಂ–ಭೀಮನು, ಗದೆಯಿನ್–ಗದೆಯಿಂದ, ಎಲ್ವುಡಗಾಗಿರೆ–ಮೂಳೆ ಮಾಂಸಗಳಾಗಿರಲು, ಮೋದೆ–ಹೊಡೆಯಲು, ಪೊಱ್ಗ–ಬಗ್ಗಿ, ಬಿಟ್ಟುದವು–ಬಿದ್ದಂಥ. ಮದವಾರಣಂಗಳ್ – ಸೊಕ್ಕಿದಾನೆಗಳು ; ಇವು –ಇವುಗಳು, ನೋಡ–ನೋಡು, ಗುಣಾರ್ಣವನ–ಅರ್ಜುನನ, ಅಂಬಿನಿಂದೆ–ಬಾಣಗಳಿಂದ, ಉರುಳ್ದುವು–ಉರುಳಿದಂಥ, ಮನುಜೇಂದ್ರ ರುಂದ್ರಮಕುಟಾಳಿಗಳ್–

ರಾಜರ ವಿಶಾಲವಾದ ಕಿರೀಟಗಳ ಸಮೂಹಗಳ, ಓಳಿಗಳ್–ಸಾಲುಗಳು; ಇವಲ್ತೆ–ಇವುಗಳಲ್ಲವೆ; ಗಾಂಡಿವಿಯ–ಅರ್ಜುನನ, ವರೂಥಘಾತದೊಳ್–ರಥದ ಹೊಡೆತದಲ್ಲೇ, ನುರ್ಗಿದ – ಜಜ್ಜಿಹೋದ, ತುಂಗ ತುರಂಗ ಕೋಟಿಗಳ್ – ಎತ್ತರವಾದ ಕೋಟ್ಯಂತರ ಕುದುರೆಗಳು!

ವಚನ: ಬಂಚಿಸಿಯುಂ–ವಂಚಿಸಿಯುಂ ಎಂದರೆ ತಪ್ಪಿಸಿಯೂ; ಅಡಗಿನ–ಮಾಂಸದ, ಇಡುವುಗಳಂ – ರಾಶಿಗಳನ್ನು(?); ತಿಂತಿಣಿಯಂ – ಸಮೂಹಗಳನ್ನು; ಘಟ್ಟಣೆಗಳಂ–(ರಥದ ಗಾಲಿಗಳ ಹೊಡೆತದಿಂದ) ತಗ್ಗುಗಿಟ್ಟಾದ ಪ್ರದೇಶಗಳನ್ನು; ತೇರ ಪಲಗೆಯುಂ--ರಥದ ಹಲಗೆಗಳನ್ನು; ಇಲ್ಲಿ ಇಡುವು ಎಂಬ ಶಬ್ದಕ್ಕೆ ಅರ್ಥ ನಿರ್ದಿಷ್ಟತೆ ಇಲ್ಲ; ಇಡುವು ಎಂದರೆ ಅನೇಕ ವಸ್ತುಗಳ ನಡುನಡುವೆ ಇರುವ ಇಕ್ಕಟ್ಟಾದ ಸ್ಥಳಗಳು ಎಂದಿರುವಂತೆ ತೋರುತ್ತದೆ; ನರವಿನಡಗಿನಿಡುವಿನೆಡೆಯ (ಪಂಪಭಾ. ೧೨-೧೫೮ ಗ); ಇಡಿವಿರೆ ಪೂತಮರದ್ರುಮದಿಡುವುಗಳೊಳ್ . . . . ಕುಸುಮರಜಂ (ಆದಿಪು ೭–೭೨); ಅರಿಮುಜುಗಿರ್ದ ಬಯಲ್ಚಾವರಿಯಿಲಿಗೊಡೆಯಿಡುವಿನಲ್ಲಿ (ಕಾದಂ ೨೮೨) ಎಂಬ ಪ್ರಯೋಗಗಳನ್ನು ನೋಡಿ;

೫೪. ಜೇಡ ವಿರೋಧಂ–ಹಗೆತನ ಜೇಡ: ಎಂತುಂ–ಹೇಗೂ, ಅರಿಕೇಸರಿಯೊಳ್–ಅರ್ಜುನನಲ್ಲಿ, ಸಮಸಂದು–ಸಮನಾಗಿ ಸೇರಿ, ಸಂಧಿಯಂ–ಸಂಧಿಯನ್ನು, ಮಾಡು, ಎನೆ–ಎನ್ನಲು, ಮಾಡಲೊಲ್ಲದೆ–ಮಾಡಲು ಒಪ್ಪದೆ, ಸುಹೃದ್ಬಲಮೆಲ್ಲಮಂ – ಮಿತ್ರಸೈನ್ಯವನ್ನೆಲ್ಲ, ಇಕ್ಕಿ – ಒಡ್ಡಿ, ಯುದ್ಧಮಂ ಮಾಡಿದ – ಯುದ್ಧವನ್ನು ಮಾಡಿದ, ಜಾತಿಬೆಳ್ – ಜಾತಿದಡ್ಡನಾದ ಎಂದರೆ ಅಪ್ಪಟ ದಡ್ಡನಾದ, ನಿನಗೆ, ಈ ಎಡಜು–ಈ ಸಂಕಷ್ಟ, ಅದೇವಿರಿದು–ಅದೇನು ಹಿರಿದು? ಎಂದು, ಮುಂದೆ ಬಂದು–ಎದುರಿಗೆ ಬಂದು, ಏಡಿಸುವಂತಿರೆ–ಹೀಯಾಳಿಸುವಂತೆ, ಫಣಿರಾಜಕೇತುವಂ – ದುರ್ಯೋಧನನನ್ನು, ಒಂದು ಮರುಳ್ – ಒಂದು ಪಿಶಾಚಿ, ಆಡಿದುದು – ನುಡಿಯಿತು.

೫೫. ಮರುಳೆನೆ – ಪಿಶಾಚಿಯೆಂದು, ಲೋಕದೊಳ್ ನೆಗಟ್ದು–ಲೋಕದಲ್ಲಿ ಪ್ರಸಿದ್ಧವಾಗಿ, ಕೊಳ್ಗುಳದೊಳ್ – ಯುದ್ಧರಂಗದಲ್ಲಿ, ಮರುಳಾಟವಾಡುವ – ಪಿಶಾಚಿಗಳ ಆಟವನ್ನು ಆಡುವ, ಆಂ ಮರುಳನೋ–ನಾನು ಬುದ್ಧಿಯಿಲ್ಲದವನೋ, ವಿಕ್ರಮಾರ್ಜುನನೊಳ್–ಅರ್ಜುನನಲ್ಲಿ, ಸಂಧಿಯಂ–ಸಂಧಿಯನ್ನು, ಒಲ್ಲದೆ–ಒಪ್ಪದೆ, ಉರ್ಕಿ–ಗರ್ವಿಸಿ, ಕೆಟ್ಟ–ಹಾಳಾದ, ನೀಂ–ನೀನು, ಮರುಳಯೋ–ದಡ್ಡನಾಗಿದ್ದೀಯೋ, ಪೇಟ–ಹೇಳು; ಪೇಟದೊಡೆ–ಹೇಳದಿದ್ದರೆ, ಪೋಗದಿರ್ – ಹೋಗಬೇಡ, ಈಶ್ವರ ನಾಣೆ–ಶಿವನಾಣೆ, ಎಂದು, ಪುಲ್ಮರುಳ್–ಒಂದು ಸಣ್ಣ ಪಿಶಾಚಿ, ಇನಿಸಾನುಮಂ ತಗೆದು–ಒಂದು ಸ್ವಲ್ಪ ಅಡ್ಡಗಟ್ಟಿ ನಿಲ್ಲಿಸಿ, ಅಲ್ಲಿ, ಫಣೀಂದ್ರಕೇತುವಂ–ದುರ್ಯೋಧನನನ್ನು, ಕಾಡಿದುದು–ಕಾಡಿತು, "ತಗೆ–ಸ್ತಂಭನೇ".

ವಚನ: ಕೆಯ್ತಕ್ಕೆ–ಮಾಡಿದುದಕ್ಕೆ, ಮಾಟಕ್ಕೆ, ವಿಧಾತ್ರಂ – ಬ್ರಹ್ಮನು; ಮರುಳ್ಮಾಡಿದ–ಭ್ರಾಂತನನ್ನಾಗಿ ಮಾಡಿದ, ಮೋಸಗೊಳಿಸಿದ; ತಳರ್ದು–ನಡೆದು; ಕಳೇವರ ಸಂಕೀರ್ಣಂ–ದೇಹಗಳಿಂದ ತುಂಬಿದ್ದು; ಮೇಚಕಿತಮುಂ – ಕರ್ನೀಲಿಯ ಬಣ್ಣವುಳ್ಳದ್ದೂ; ಕಚಗ್ರಹ–ಜುಟ್ಟನ್ನು ಹಿಡಿಯುವುದರಿಂದ, ವಿಲುಳಿತ–ತಿರುಗಿದ; ಕೌಕ್ಷೇಯಕ–ಕತ್ತಿ; ವಿದಾರಿತ–ಸೀಳಿದ; ಶರಾಚಾರ್ಯರಂ–ದ್ರೋಣರನ್ನು;

೫೬. ಬಿಲ್ಲ ಬಿನ್ನಣಂ – ಧನುರ್ವಿದ್ಯಾ ಪರಿಣತಿಯು, ಇಳಾವಳಯಕ್ಕೆ–ಭೂಮಂಡಲಕ್ಕೆ, ನೆಗಟ್ಟುದು–ಪ್ರಸಿದ್ಧವಾಯಿತು; ನಿಮ್ಮದೊಂದೆ ಪೆಸರ್ಗೇಳ್ದೊಡೆ –ನಿಮ್ಮ ಒಂದು ಹೆಸರನ್ನು ಕೇಳಿದರೆ ಸಾಕು, ಸಮಸ್ತಧಾತ್ರಿ–ಸಮಸ್ತಲೋಕವು, ಕೆಯ್ಮುಗಿವುದು – ಕೈಗಳನ್ನು ಜೋಡಿಸಿ ನಮಸ್ಕರಿಸುತ್ತದೆ; ನಿಮ್ಮ ಸರಲ್ಗೆ–ನಿಮ್ಮ ಬಾಣಗಳಿಗೆ, ದೇವರುಂ–ದೇವತೆಗಳೂ, ಸುಗಿವರ್–ಹೆದರುವರು; ಅಯೋನಿ ಸಂಭವರಿರ್ – ನೀವು ಯೋನಿಯಲ್ಲಿ ಜನಿಸಿದವರಲ್ಲ; ಎನ್ನಯದೂಸಱಿಂ – ನನ್ನ ಕಾರಣದಿಂದ, ಎನ್ನ ಕರ್ಮದಿಂ – ನನ್ನ ಪಾಪಕರ್ಮದಿಂದ, ಅಕ್ಕಟಾ – ಅಯ್ಯೋ, ಪಗೆವರಿಂ – ಹಗೆಗಳಿಂದ, ನಿಮಗಂ – ನಿಮಗೂ ಎಂದರೆ ನಿಮ್ಮಂಥವರಿಗೂ, ಕುಂಭ ಸಂಭವಾ–ದ್ರೋಣನೇ, ಈ ಇರವಾದುದೆ–ಈ ಸ್ಥಿತಿಯುಂಟಾಯಿತೇ?

ವಚನ: ಸುತ್ತಿಱಿದ–ಬಳಸಿದ; ಮುದುವರ್ದುಗಳುಮಂ–ಮುದಿ ರಣಹದ್ದುಗಳನ್ನೂ; ಆಗಲೆವೆಟ್ಟ – ದೂರ ಹೋಗುವಂತೆ ಕಾಲ್ತುಳಿತದ ಶಬ್ದವನ್ನು ಮಾಡಿ; ಪೋಟ್ಟು–ಸೀಳಿ; ಊಳ್ವ – ಕೂಗುವ; ಬಳ್ಳುಗಳುಮಂ – ಗುಳ್ಳೆನರಿಗಳನ್ನೂ; ನರವುಮಂ – ನರಗಳನ್ನೂ, ಬರಿಯುಮಂ – ಪಕ್ಕೆಗಳನ್ನೂ; ತೆಗೆದು – ಎಳೆದು; ಪೆಡಸಾರ್ವ–ಹಿಂದಕ್ಕೆ ಹೋಗುವ; ಸೋದು–ಹೆದರಿಸಿ ಓಡಿಸಿ;

೫೭. ನಿನ್ನಂ ಕೊಂದನ–ನಿನ್ನನ್ನು ಕೊಂದ ಭೀಮನ, ಬಸಿಱಿಂ–ಹೊಟ್ಟೆಯಿಂದ, ನಿನ್ನಂ ತೆಗೆಯದೆಯುಂ – ನಿನ್ನನ್ನು ಹೊರಕ್ಕೆ ತೆಗೆಯದೆಯೂ, ಅವನ ಕರುಳಂ – ಅವನ ಕರುಳುಗಳನ್ನು; ಮುಂ – ಮೊದಲು, ಪರ್ದಿಂ–ಹದ್ದುಗಳಿಂದ, ನುಂಗಿಸಿ – ನುಂಗುವಂತೆ ಮಾಡಿ, ನೋಡದೆಯುಂ – ಕಣ್ಣಾರ ನೋಡದೆಯೂ, ಮುನ್ನಮೆ–ಮುಂಚಿತವಾಗಿಯೇ, ಯುವರಾಜ – ಯುವರಾಜನಾದ ದುಶ್ಶಾಸನನೇ, ನಿನ್ನಂ–ನಿನ್ನನ್ನು, ಆಂ–ನಾನು, ನೋಡಿದೆನೇ–ನೋಡಿದೆನೇ?

ವಚನ: ವಿಪ್ರಳಾಪಂಗಳ್ – ಅಳುಗಳು, ರೋದನಗಳು; ಎಟ್ಟಿವರ್ಪುದು – ಬರುವುದು; ಕರಪರಿಚ್ಯುತವಿಕರ್ಣ–ಕೈಗಳಿಂದ ಬಿಡಲ್ಪಟ್ಟ ಬಾಣಗಳು; ವಿಶೀರ್ಣನಾಗಿರ್ದ–ಜರ್ಜರಿತನಾಗಿದ್ದ; ಎರ್ದೆದೆಱೆದು–ಎದೆ ಬಿರಿದು; ನಿಮ್ಮ ಅಮ್ಮಂ–ನಿಮ್ಮ ಅಪ್ಪ; ತೆಕ್ಕನೆ ತೀವಿದ – ನಾಲಗೆಯಲ್ಲಿ ಸೆಕ್ಕಿಕೊಳ್ಳುವಂತೆ ಎಂದರೆ ಪೂರ್ಣವಾಗಿ ತುಂಬಿದ; ತೆಕ್ಕನೆ < ತೆಕ್ಕು–ಲೇಹನೇ + ಅನೆ.

೫೮. ನರಶರಘಾತದಿಂ–ಅರ್ಜುನನ ಬಾಣಗಳ ಏಟಿನಿಂದ, ಪಱಿದು [ಪಚ್ಚಿ] ಸಿದಂತೆವೊಲ್–ಹರಿ ಹಂಚಾದಂತೆ, ಇರ್ದ–ಇದ್ದ, ಮೆಯ್–ದೇಹ, ಭಯಂ

ಕರ ತರವಾಗೆ–ಅತಿ ಭೀಕರವಾಗಿರಲು, ಮುಯ್ವುವರೆಗಂ–ಹೆಗಲ ತುದಿಯುವರೆಗೂ, ತೆಗೆದ–ಸೆಳೆದ, ಅಂಬಿನಮುಷ್ಟಿ–ಬಾಣವನ್ನು ಹಿಡಿದ ಕೈಹಿಡಿ, ಬಿನ್ನಣಂ ಬೆರಸಿರೆ– ಪ್ರೌಢಿಮೆಯಿಂದ ಕೂಡಿರಲು; ಪೋದ ಪಂದಲೆಯೊಳ್–ಕಡಿದುಹೋದ ಹಸಿ ತಲೆ ಯಲ್ಲಿ, ಆದ–ಉಂಟಾಗಿದ್ದ, ಮುಗುಳ್ನಗೆ–ಮಂದಹಾಸವು; ಭೀತರಾದರೆಲ್ಲರುಮಂ –ಭಯಪಟ್ಟವರನ್ನೆಲ್ಲ, ಆಳುರ್ಕೆಯಿಂ–ತನ್ನ ಪರಾಕ್ರಮದಿಂದ ಅಥವಾ ಅತಿಶಯತೆ ಯಿಂದ, ನಗುವವೊಲ್ – ಪರಿಹಾಸ ಮಾಡುವಂತೆ, ರವಿನಂದನಂ – ಕರ್ಣನು, ಇತ್ತಲ್–ಇತ್ತಕಡೆ, ಇರ್ದಪಂ–ಇರುತ್ತಾನೆ.

**ವಚನ:** ತೆಪ್ಪತ್ತುಂ – ಚೇತರಿಸಿಕೊಂಡೂ; ತೞ್ಕೈಸಿಕೊಂಡಾಗಳ್ – ಆಲಿಂಗಿಸಿಕೊಂಡಾಗ; ಕೂರ್ಮೆ–ಸ್ನೇಹವು;

**೫೯.** ಬೆಸನೆಡೆಗಳ್ಗೆ – ಕಾರ್ಯದ ಸಮಯದಲ್ಲಿ, ತೊೞ್ತು–ಸೇವಕ, ಬೆಸನಂ ಗಳ್–ಸಪ್ತ ವ್ಯಸನಗಳು, ಅವುಂಕಿದೊಡೆ–ಒತ್ತರಿಸಿಕೊಂಡು ಬಂದರೆ, ಆಗದು–ಆಗು ವುದಿಲ್ಲ, ಬೇಡ, ಎಂದು, ಬಗ್ಗಿಸುವೆಡೆಗೆ–ಗದರಿಸಿಕೊಳ್ಳುವ ಸಮಯದಲ್ಲಿ, ಆಳ್ದಂ –ಸ್ವಾಮಿ; ಇಂತು–ಹೀಗೆ, ನೆಗೞ್–ಮಾಡು, ಎಂಬೆಡೆಯೊಳ್–ಎನ್ನುವ ಸಮಯ ದಲ್ಲಿ, ಗುರು–ಗುರುವಾದವನು; ಪೆರ್ಚಿದ–ಅಧಿಕವಾದ, ಒಂದು, ಜೇವಸದ–ವ್ಯಥೆಯ, ಎಡೆಗೆ – ಸಮಯಕ್ಕೆ, ಆಶ್ರಯಂ – ಅವಲಂಬನವಾದವನು; ಮನಮಂ–ಮನವನ್ನು, ಒಪ್ಪಿಸುವ–ಒಪ್ಪುವಂತೆ ಮಾಡುವ, ಈ ಎಡೆಯೊಳ್ – ಈ ಸಮಯದಲ್ಲಿ, ಮನಂ– ಮನವಾಗಿರುವವನು; ವಿಚಾರಿಸುವೊಡೆ – ವಿಚಾರ ಮಾಡಿದರೆ, ಎನಗೆ – ನನಗೆ, ಕರ್ಣನಲ್ಲದೆ – ಕರ್ಣನು ಅಲ್ಲದೆ, ಪೆಱನೊರ್ವಂ – ಬೇರೊಬ್ಬನು, ಆವನೋ – ಯಾವನೋ, ಯಾರೋ!

**೬೦.** ಇನಾತ್ಮಜಾತಂ–ಸೂರ್ಯಸುತನಾದ ಕರ್ಣನು, ಎನಗೆ–ನನಗೆ, ನೆಲನಂ –ರಾಜ್ಯವನ್ನು, ಕೊಟ್ಟಂ – ಕೊಟ್ಟನು; ಎಂದರೆ ಕರ್ಣನು ಅನೇಕ ದೇಶಗಳನ್ನು ಜಯಿಸಿ ದುರ್ಯೋಧನನ ವಶಕ್ಕೆ ತಂದನೆಂಬ ಅರ್ಥಮಾತ್ರವಲ್ಲ, ದುರ್ಯೋಧನನಿಗೆ ತಿಳಿದಿದೆ, ಕರ್ಣನು ತನ್ನ ಕುಲಕ್ಕೆ ಜೇಷ್ಠನೆಂದು, ನ್ಯಾಯವಾಗಿ ತನಗೆ ಸಲ್ಲಬೇಕಾ ಗಿದ್ದ ರಾಜ್ಯವನ್ನು ದುರ್ಯೋಧನನಿಗೆ ಅವನು ಕೊಟ್ಟನು ಎಂದು ಅರ್ಥವಾಗ ಬಹುದು; ಆಂ–ನಾನು, ತಕ್ಕೂರ್ಮೆಯಿಂದಂ – ಯೋಗ್ಯತಾತಿಶಯದಿಂದ, ಜಳಾಂ ಜಳಿಯಂ – ತರ್ಪಣವನ್ನು, ಕೊಟ್ಟೆನುಮಿಲ್ಲಂ – ಕೊಟ್ಟವನು ಆಗಲಿಲ್ಲ; ಸೂರ್ಯ ತನಯಂ – ಕರ್ಣನು, ತೇಜೋಗ್ನಿಯಿಂದಂ – ತನ್ನ ತೇಜಸ್ಸೆಂಬ ಅಗ್ನಿಯಿಂದ, ದ್ವಿಷದ್ಬಲಮಂ – ವೈರಿ ಸೇನೆಯನ್ನು, ಸುಟ್ಟಂ – ಸುಟ್ಟನು; ಉಪಾತ್ತಪುಣ್ಯಂ – ಅತ್ಯತಿಶಯ ಪುಣ್ಯವನ್ನುಳ್ಳ, ಅವನಂ–ಅವನನ್ನು, ಚೈತಾಗ್ನಿಯಿಂ–ಚಿತೆಯ ಉರಿ ಯಲ್ಲಿ, ಸುಟ್ಟೆನಿಲ್ಲ–ನಾನು ಸುಡಲಿಲ್ಲ; ಒಲವಿಂದೆ–ಪ್ರೀತಿಯಿಂದ, ಇಂತು–ಹೀಗೆ, ಎರ್ದೆಮುಟ್ಟೆ – ಎದೆಸೋಂಕಿ, ಕರ್ಣಂಗೆ – ಕರ್ಣನಿಗೆ, ಕೂರ್ತಂ – ಸ್ನೇಹವನ್ನುಳ್ಳ, ದುರ್ಯೋಧನಂ–ದುರ್ಯೋಧನನು, ಒಳನೇ–(ಇನ್ನೂ) ಇರುವನೇ!

೬೧. ಉದಗ್ರಶೋಕಶಿಖಿಯಿಂ – ಶ್ರೇಷ್ಠ ದುಃಖಾಗ್ನಿಯಿಂದ, ಕಿರ್ಚಂ – ಕಿಚ್ಚನ್ನು ಎಂದರೆ ಚಿತೆಗೆ ಉರಿಯನ್ನು, ಕೊಟ್ಟೈ–ಕೊಟ್ಟಿರುವೆ ; ಕಣ್ಣೀರ್ಗಳಿಂದೆ–ಕಣ್ಣ ನೀರಿನಿಂದ, ಎಯ್ದೆ–ಚೆನ್ನಾಗಿ, ಸೂರ್ಯಸುತಂಗೆ–ಕರ್ಣನಿಗೆ, ನೀರ್ಗೊಟ್ಟೈ–ತರ್ಪಣವನ್ನು ಕೊಟ್ಟಿರುವೆ ; ಲೌಕಿಕಮಂ – ಲೋಕ ವ್ಯವಹಾರವನ್ನು, ಇಂ – ಇನ್ನು, ಏಂ ಪಾಂಟಿಪಯ್–ಏನನ್ನು ಉಲ್ಲಂಘಿಸಿರುವೆ? ವೈರಿಯಂ–ಹಗೆಗಳನ್ನು, ಇಂ–ಇನ್ನು, ಪೋಬ್ಬು–ಹೋಳುಮಾಡಿ, ಸೀಳ್ಬು–ಸೀಳಿ, ಒಡ್ಡಿ–ಚಾಚಿ, ಮುಂದಿಟ್ಟು, ತತ್ಪಿಶಿತದಿಂದೆ – ಅವರ ಮಾಂಸದಿಂದ, ನೀಂ – ನೀನು, ಆತಂಗೆ – ಆ ಕರ್ಣನಿಗೆ, ಕೂರ್ಪೊಡೆ–ಪ್ರೀತಿಸುವ ಪಕ್ಷದಲ್ಲಿ, ಭೂಪತೀ–ದುರ್ಯೋಧನನೇ, ತದ್ದ್ವಿಜಗಣಕ್ಕೆ –ಆ ಪಕ್ಷಿಗಳ ಸಮೂಹಕ್ಕೆ, ಆಹಾರಮಂ–ಆಹಾರವನ್ನಾಗಿ, ಮಾಡು ; ಏಗೆಟ್ಟತ್ತು –ಏನು ನಷ್ಟವಾಯಿತು, ಇಂ–ಇನ್ನು, ನಡೆ–ಹೆಜ್ಜೆಯಿಡು ಮುಂದಕ್ಕೆ.

ವಚನ : ಶರಶಯನತಳ – ಬಾಣಗಳ ಹಾಸಿಗೆಯ ಮೇಲೆ ; ಅಲ್ಲಿವರಂ–ಅಲ್ಲಿಯತನಕ ;

೬೨. ರೋಮಕೂಪದೊಳಗೆ–ಮೈಯ ಕೂದಲುಗಳ ಕುಳಿಗಳಲ್ಲಿ, ಉರ್ಚಿದ – ನಾಟಿದ, ಸಾಲಸರಲ್ಗಳುಂ – ಸಾಲ ವೃಕ್ಷದ ಮರದಿಂದ ಮಾಡಿದ 'ಬಾಣಗಳು, ಇಡಿದಿರೆ – ಒತ್ತಾಗಿ ತುಂಬಿರಲು, ತೆಱಂ ಬಿಡಿದಿರೆ – ನಾನಾ ತೆರನಾಗಿ, ಬೆಟ್ಟು–ಬೆಟ್ಟವು, ಒಗರ್ಡಿಸಿದಂತೆ–ಕುಪ್ಪೆ ಹಾಕಿದ ಹಾಗೆ, ನೆಱಲ್ದಿರೆ–ನಿಶ್ಚೇಷ್ಟನಾಗಿರಲು, ಸುಯ್ವಪುಣ್ಗಳಿಂ – ದುಡಿಯುತ್ತಿರುವ ಹುಣ್ಣುಗಳಿಂದ, ಶರಾಳಿಭಯದಿಂ – ಬಾಣಗಳ ಭಯದಿಂದ, ಬಡನಡುವಂ–ಕೃಶವಾದ ಸೊಂಟವನ್ನು, ನಡುಪಂತಿರೆ–ನಡುಗಿಸುವಹಾಗಿರಲು, ಚಿತ್ತದೊಳ್ – ಮನಸ್ಸಿನಲ್ಲಿ, ಮೃಡಂ – ಶಿವನು, ತೊಡರ್ದಿರೆ – ಸೇರಿರಲು, ಅಂದು–ಆ ದಿನ, ಸಿಂಧುಜಂ–ಭೀಷ್ಮನು, ಶರಶಯ್ಯೆಯೊಳ್–ಬಾಣಗಳ ಹಾಸಿಗೆಯಲ್ಲಿ, ಬಿಬ್ಬು–ಬಿದ್ದು, ಆದೇನೆಸೆದನೋ–ಆದೇನು ಶೋಭಿಸಿದನೋ ?

೬೩. ಹರನೊಳೆ – ಶಿವನಲ್ಲಿಯೇ, ಪತ್ತಿ – ಸೇರಿ, ತೆತ್ತಿಸಿದ – ಅಂಟಿಸಿದ, ಚಿತ್ತಮಂ–ಮನಸ್ಸನ್ನು, ಇಬಗಿಯಾಗೆ–ಎರಡು ಭಾಗವಾಗಲು, ಮೋಹಂ–ಮಮತೆಯು, ಒತ್ತರಿಸೆ–ಬೇರ್ಪಡಿಸಲು, ಸುಯೋಧನಂಗೆ–ದುರ್ಯೋಧನನಿಗೆ, ರಣಭೂಮಿಯೊಳ್ – ಯುದ್ಧರಂಗದಲ್ಲಿ, ಎಂತುಟು ಅವಸ್ಥೆಯೋ – ಯಾವ ರೀತಿಯ ಪರಿಸ್ಥಿತಿಯೋ, ಎನ್ನ–ನನ್ನ, ಮೆಯ್–ಮೈ, ಕನಲ್ಬು–ಕೆಂಡದಂತೆ ಹೊಳೆದು, ಉರಿದಪುದು–ಉರಿಯುತ್ತಿದೆ ; ಎನುತುಂ – ಎಂದು ಹೇಳುತ್ತ, ಅತ್ತಣ – ಅತ್ತಕಡೆಯ, ಪಂಬಲ–ಕಳವಳದ, ಬಂಬಲೊಳ್ – ಪರಂಪರೆಯಲ್ಲಿ, ಚಿತ್ತಂ – ಮನಸ್ಸು, ತೆಱಂದಿರಿದುದು–ನಾನಾ ವಿಧವಾಗಿ ಅಲೆದಾಡಿತು ; ಆ ದೊರೆಯ–ಅಂಥ ಯೋಗ್ಯತೆಯುಳ್ಳ, ಯೋಗಿಗಂ–ಯೋಗಶಕ್ತಿಯುಳ್ಳವನಿಗೂ, ಇಂತುಟೆ–ಹೀಗೆಯೇ, ಮೋಹಂ–ಮಮತೆಯು, ಆಗದೇ–ಉಂಟಾಗದೇ?

**ವಚನ:** ಸೊಪ್ಪುಳಂ–ಸದ್ದನ್ನು ; ಆಲಿಸಿ–ಕೇಳಿ ; ವ್ರಣವೇದನಾ–ಗಾಯಗಳ ನೋವಿನಿಂದ ; ಕರ್ಣೋಪಾಂತಮಂ – ಕಿವಿಯ ಸಮೀಪವನ್ನು ; ಮೃಗಧರಂ–ಚಂದ್ರನು ; ಅರೆಮುಗುಳ್ದ – ಅರ್ಧ ಮುಚ್ಚಿದ ; ರಕ್ತಾಂಭೋಜ – ಕೆಂದಾವರೆಯ ; ಉಪಹಾಸಿಗಳಪ್ಪ–ನಗುವಂತಿರುವ ; ಒತ್ತಂಬದಿಂ–ಬಲಾತ್ಕಾರದಿಂದ ;

**೬೪.** ಎಱಗಿದ ಕೌರವೇಶ್ವರನೊಳ್–ನಮಸ್ಕರಿಸಿದ ದುರ್ಯೋಧನನಲ್ಲಿ, ಆದಂ –ವಿಶೇಷವಾಗಿ, ಇದಿರ್ಚಿದ–ಎದುರಿನಲ್ಲಿ ಕಂಡ, ಅಲಂಪು–ಸಂತೋಷವು, ಎಲರ್ಚಿದ –ಸಚೇತನವಾದ, ಅಚ್ಕಱಿಂ–ಪ್ರೀತಿಯನ್ನು, ಒಳಕೊಳ್ವಿನಂ – ಒಳಗೊಳ್ಳುತ್ತಿರಲು, ಪರಸಿ–ಆಶೀರ್ವಾದಮಾಡಿ, ಮೆಯ್ಯೊಳೆ ಬಂದ ತೆಱಕ್ಕೆ–ಏಕಾಂಗಿಯಾಗಿ ಬಂದ ರೀತಿಗೆ, ಮೆಯಲ್–ನನ್ನ ಮೈ, ಕರಂ–ವಿಶೇಷವಾಗಿ, ಇಂತು–ಹೀಗೆ, ಮಱು[ಗುವು]ದು –ದುಃಖಪಡುತ್ತಿದೆ ; ಮಗನೆ – ಕಂದಾ, ಬೆಳ್ಗೊಡೆ – ಶ್ವೇತಚ್ಛತ್ರಿ, ಎಲ್ಲಿದುದು– ಎಲ್ಲಿತ್ತು? ಸುತ್ತಿಱಿದ–ಬಳಸಿಕೊಂಡಿದ್ದ, ಚತುರ್ಬಲಂ–ಚತುರಂಗ ಸೈನ್ಯ, ಎತ್ತ ಪೋಯ್ತು–ಎಲ್ಲಿ ಹೋಯಿತು, ಪೇೞ್–ಹೇಳು ; ವೈರಿ ಭೂಪರಿಂ–ಶತ್ರುರಾಜರಿಂದ, ನಿನಗಂ–ನಿನಗೂ, ಈ ಇರವಾದುದೆ–ಈ ಸ್ಥಿತಿ ಉಂಟಾಯಿತೆ?

**ವಚನ:** ಕಣ್ಣನೀರಂ ನೆಗಪಿ–ಕಣ್ಣೀರನ್ನು ಉಕ್ಕಿಸಿ ಹರಿಯಿಸಿ ; ನಿನ್ನಗೆಯ್ವ –ನೀನು ಮಾಡುವ ; ನಿಯೋಗಂ–ಕಾರ್ಯವು ; ಬಗೆದಪೆ–ಆಲೋಚಿಸುತ್ತೀಯ :

**೬೫.** ಎಂತುಂ–ಹೇಗೂ, ವೈರಿನೃಪರಂ – ಶತ್ರುರಾಜರನ್ನು, ತಱಿದೊಟ್ಟು ವುದಲ್ಲದೆ–ಕತ್ತರಿಸಿ ಹಾಕುವುದಲ್ಲದೆ, ಬಗೆ ಪೆಱತುಂಟೆ–ಆಲೋಚನೆ ಬೇರೆ ಇದೆಯೆ? ಭವತ್ಪದ ಸರೋಜಮನ್ – ತಮ್ಮ ಪಾದಕಮಲಗಳನ್ನು, ಬಲಗೊಂಡು–ಪ್ರದಕ್ಷಿಣೆ ಮಾಡಿ, ಮತ್ತಂ–ಪುನಃ, ಆಜಿಗೆ–ಯುದ್ಧಕ್ಕೆ, ನಡೆಯಲ್ಕೆ–ಹೋಗುವುದಕ್ಕೆ ಆಂ– ನಾನು, ಇಲ್ಲಿಗೆ, ಬರವಂ ಬಂದೆನ್ – ಬರವನ್ನು ಬಂದಿದ್ದೇನೆ ಎಂದರೆ ಆಗಮಿಸಿ ದ್ದೇನೆ, ಎನೆ–ಎನ್ನಲು, ದೇವನದೀಸುತಂ–ಭೀಷ್ಮನು, ರಾಜರಾಜನಾ – ದುರ್ಯೋ ಧನನ, ಶೌರ್ಯಗುಣೋನ್ನತಿ–ಶೌರ್ಯಗುಣದ ಅತಿಶಯವು, ಇದೇನ್ ಅಖಂಡಿತಮೋ –ಇದೇನು ಅಖಂಡವಾದುದೋ! ಎಂದು, ಚಿತ್ತದೊಳ್ – ಮನಸ್ಸಿನಲ್ಲಿ, ಬಗೆದಂ ಭಾವಿಸಿದನು.

**ವಚನ:** ಅವಸಾನದೊಳ್–ಕೊನೆಯಲ್ಲಿ ; ಎಱಲದ–ಜೋತುಬೀಳದ ಎಂದರೆ ಸಡಿಲವಾಗದ, ಕುಗ್ಗದ ; ಮನಂಗೊಂಡು – ಮನದಲ್ಲಿ ಮೆಚ್ಚಿ ; ಕೂರ್ಪು–ಹರಿತ ವಾಗಿರುವುದು, ಮೊನೆ ; ಅನಿವಾರಿತಂ–ನಿವಾರಿಸಲಾಗದ್ದು ; ಬೞಿಯಂ–ಅನಂತರ.

**೬೬.** ಒಂದಱಿಂದೆ–ಒಂದರಿಂದ ಎಂದರೆ ಬುದ್ಧಿಯಿಂದ, ಎರಡಂ–ಎರಡನ್ನು ಎಂದರೆ ಕಾರ್ಯಾಕಾರ್ಯಗಳನ್ನು ಅಥವಾ ಪುಣ್ಯಪಾಪಗಳನ್ನು, ಪರಿಕಿಪುದು–ಪರೀ ಕ್ಷಿಸುವುದು ; ಮೂಱಱಿಂದೆ–ಶತ್ರು ಮಿತ್ರ ಭಾಂಧವ ಎಂಬ ಮೂರರಿಂದ, ಓತು– ಪ್ರೀತಿಸಿ, ಒಳಕೊಳ್ವುದು–ಒಳಪಡಿಸಿಕೊಳ್ಳುವುದು ; ನಾಲ್ಕು–ಸಾಮ ದಾನ ಭೇದ ದಂಡ ಎಂಬ ಉಪಾಯಗಳು, ಅರಿದು–ಕಷ್ಟವಾದುವು ; ಅವುಗಳನ್ನು, ಅಱಿದು–

ತಿಳಿದುಕೊಂಡು, ಆಯ್ದುಱಿಂದೆ-ಐದು ಜ್ಞಾನೇಂದ್ರಿಯಗಳಿಂದ, ನೆಱೆ-ಪೂರ್ಣವಾಗಿ, ಕಲ್ಪುದು-ಕಲಿಯುವುದು; ನಿರ್ಣಯಮಾಗಿರೆ – ನಿಶ್ಚಯವಾಗಿರಲು, ಆಱಱೊಳ್-ಆರರಲ್ಲಿ ಎಂದರೆ ಸಂಧಿ ವಿಗ್ರಹ ಯಾನ ಆಸನ ಸಂಶ್ರಯ ದ್ವೈಧೀಭಾವ ಎಂಬ ಷಾಡ್ಗುಣ್ಯಗಳಲ್ಲಿ, ಪರಿಣತನಪ್ಪುದು-ಚೆನ್ನಾಗಿ ತಿಳಿದವನಾಗುವುದು; ಏೞರೊಳಂ-ಏಳರಲ್ಲಿ ಎಂದರೆ ಸಪ್ತ ವ್ಯಸನಗಳಲ್ಲಿ, ಒಂದದೆ-ಸೇರದೆ, ನಿಲ್ಪುದು-ನಿಲ್ಲುವುದು; ದುರ್ಮಂತ್ರಮುಂ-ದುಷ್ಟಮಂತ್ರಾಲೋಚನೆಯನ್ನು, ಪರಿಪ-ವಿಸ್ತರಿಸುವ, ಟಮಾಳಮುಂ-ವಂಚನೆಯ ಮಾತುಗಳನ್ನು, ಪಿರಿದನೋದಿದೊಡೆ-ಹಿರಿದಾಗಿ ಹೇಳಿದರೆ, ಅಪ್ಪ – ಆಗುವ, ಪದಾರ್ಥಮಾವುದೋ – ಲಾಭವೇನೋ, ಪ್ರಯೋಜನವೇನೋ!

ಈ ಪದ್ಯಕ್ಕೆ ಮೂಲವಾದದ್ದು ವ್ಯಾಸಭಾರತದ ಉದ್ಯೋಗಪರ್ವದ, ೩೩ನೆಯ ಅಧ್ಯಾಯದ ೪೮ ನೆಯದಾದ ಕೆಳಗಿನ ಶ್ಲೋಕ :—

ಏಕಯಾ ದ್ವೇವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು
ಪಂಚ ಜಿತ್ವಾ ವಿದಿತ್ವಾಷಟ್ ಸಪ್ತಹಿತ್ವಾಸುಖೀಭವ॥

ಇದಕ್ಕೆ ವ್ಯಾಖ್ಯಾನ: "ಏಕಯಾ-ಬುದ್ಧ್ಯಾ, ದ್ವೇ-ಪುಣ್ಯಪಾಪೇ, ತ್ರೀನ್ ಶತ್ರು ಮಿತ್ರ ಬಾಂಧವಾನ್; ಚತುರ್ಭಿಃ – ಸಾಮಾದ್ಯುಪಾಯೈಃ; ಪಂಚ – ಜ್ಞಾನೇಂದ್ರಿಯಾಣಿ; ಷಟ್ – ಸಂಧ್ಯಾದಿಗುಣಾನ್; ಸಪ್ತ–ದ್ಯೂತ ಸ್ತ್ರೀಪಾನಾದೀನಿ ಸಪ್ತವ್ಯಸನಾನಿ"

ಒಂದಱಿಂದೆರಡಹುದನಱಿ ಮೂ
ಱಿಂದವನು ತಿಳಿ ನಾಲ್ಕಱೊಳು ಮನ
ಗುಂದದಿರ್ಕೈದಱೊಳು ವರ್ತಿಪುದಾಱನೇಳಱೊಳು।
ಒಂದಿಸದಿರೆಂಟನು ವಿಚಾರಿಸಿ
ಮುಂದುವರಿಯೊಂಬತ್ತಱೊಳು ನೆಱೆ
ಸಂದಿಸದರೀರೈದಱೊಳು ಭೂಪಾಲ ಕೇಳೆಂದ॥ (೫-೩-೩)

ಇದೇ ಶ್ಲೋಕದ ಅಭಿಪ್ರಾಯವನ್ನು ಕುಮಾರವ್ಯಾಸ ಹೇಳುತ್ತಾ ಇನ್ನೂ ಮೂರನ್ನು ಸೇರಿಸಿ ಹತ್ತನ್ನು ಹೇಳಿದ್ದಾನೆ:

೬೭. ಭರತಕುಲಂ – ಭರತನ ವಂಶ, ಪೆರ್ಚುಗೆ – ಹೆಚ್ಚಲಿ, ವರ್ಧಿಸಲಿ; ನಿಮ್ಮೆರಡು ತಂಡಂ–ನಿಮ್ಮ ಉಭಯ ಪಕ್ಷಗಳು, ನೆಲೆವೆರ್ಚುಗೆ–ಇರುವ ಸ್ಥಿತಿಗಿಂತ ಉತ್ಕೃಷ್ಟವಾಗಲಿ; ಒದವಿದ – ಉಂಟಾದ, ನಣ್ಪಿಂ–ಬಾಂಧವ್ಯದಿಂದ, ಕಲುಷಂ–

ದ್ವೇಷವು, ಕರ್ಚುಗೆ-ತೊಳೆದು ಹೋಗಲಿ; ಕುರುಕುಳತಿಳಕಾ-ದುರ್‍ಯೋಧನನೇ, ಎನ್ನೊಂದ ನುಡಿಗೆ-ನಾನು ಹೇಳಿದ ಮಾತುಗಳಿಗೆ, ನೀಂ-ನೀನು, ತಲೆಯುರ್ಚದಿರ್-ತಲೆಯನ್ನು ಎಳೆದುಕೊಳ್ಳಬೇಡ ಎಂದರೆ ವಿಮುಖನಾಗಬೇಡ.

೬೮. ದೋಷಮುಂ-ಅಪರಾಧವೂ, ಏವಮುಂ-ಕೋಪವೂ, ಶಕುನಿಯಿಂ-ಶಕುನಿಯಿಂದ, ಯುವರಾಜನಿಂ-ದುಶ್ಶಾಸನನಿಂದ, ಆಯ್ತು ಪೋಯ್ತು-ಆಯಿತು ಹೋಯಿತು; ಎಂದರೆ ಇನ್ನು ಅದರ ವಿಚಾರವೇಕೆ? ನಿರ್ದೋಷಿಗಳಪ್ಪ-ದೋಷವಿಲ್ಲದಿರುವ, ತಪ್ಪಿಲ್ಲದಿರುವ, ನಿಮ್ಮೆರಡು ತಂಡಮುಂ-ನಿಮ್ಮ ಎರಡು ಪಂಗಡಗಳೂ, ಇಂ-ಇನ್ನು, ಪುದುವಾೞ್ವುದು-ಹೊಂದಿಕೊಂಡು ಬದುಕುವುದು; ಅಂತು-ಹಾಗೆ, ಅದು. ಏಂ ದೋಷಮೋ-ಏನು ತಪ್ಪೋ, ಮೇಣ್-ಅಥವಾ, ವೃಕೋದರನಿಂ-ಭೀಮಸೇನನಿಂದ, ಆ ರಣರಂಗದೊಳ್-ಆ ಯುದ್ಧಭೂಮಿಯಲ್ಲಿ, ಆದ-ಉಂಟಾದ, ದುಷ್ಟ ದುಶ್ಶಾಸನ ರಕ್ತಮೋಕ್ಷದೊಳೆ-ದುರುಳ ದುಶ್ಶಾಸನನ ರಕ್ತದ ಬಿಡುತೆಯಲ್ಲೇ, ದೋಷವಿಮೋಕ್ಷಂ - ದೋಷದ ಬಿಡುಗಡೆ, ವಿಮೋಚನೆ; ಅದೇಕೆ - ಅದೇತಕ್ಕೆ, ಕೊಂಡಪ್ಪೈ-ಬಲವಾಗಿ ಹಿಡಿದುಕೊಳ್ಳುವೆ?

೬೯. ನೀಂ-ನೀವು, ಇಂತು - ಹೀಗೆ, ಶರಶಯ್ಯಾಗ್ರದೊಳ್ - ಬಾಣಗಳ ಹಾಸಿಗೆಯ ಮೇಲೆ, ಇರೆ-ಇರಲು; ಘಟಪ್ರೋದ್ಭೂತಂ-ದ್ರೋಣನು, ಅಂತಾಗೆ-ಹಾಗಾಗಲು, ವಾಸರನಾಥಾತ್ಮಜಂ-ಕರ್ಣನು, ರಣದೊಳ್-ಯುದ್ಧದಲ್ಲಿ, ಅಂತು-ಹಾಗೆ, ಸಾಯೆ-ಸಾಯಲು, ತದ್ವೃಕೋದರನಿಂ-ಆ ಭೀಮನಿಂದ, ದುಶ್ಶಾಸನಂ-ದುಶ್ಶಾಸನನು, ಇಂತು-ಹೀಗೆ, ಅೞಿದು-ಸತ್ತು, ಅೞ್ಗೆ-ನಾಶವಾಗಲು, ಸೈರಿಸಿಯುಂ-ಸಹಿಸಿಯೂ, ಆಂ - ನಾನು, ವೈರಿಭೂಪರೊಳ್ - ಶತ್ರುರಾಜರಲ್ಲಿ, ಸಂಧಾನಮಂ - ಸಂಧಿಯನ್ನು, ಇಂ-ಇನ್ನು, ಸಂಧಿಸಿ-ಉಂಟುಮಾಡಿ, ಸಂಪತ್ತುಮಂ ಶ್ರೀಯುಮಂ-ಐಶ್ವರ್ಯವನ್ನೂ ತೇಜಸ್ಸನ್ನೂ, ಆರ್ಗೆ - ಯಾರಿಗೆ, ಮೆಱೆವೆಂ - ಪ್ರದರ್ಶಿಸುವೆನು? ಪೇೞಿಂ-ಹೇಳಿರಿ.

೭೦. ಬಿಡಿಂ ಎನ್ನ ನುಡಿಗೆ-ನನ್ನ ಮಾತಿಗೆ ನನ್ನನ್ನು ಬಿಡಿರಿ, ಎಂದರೆ ನನ್ನ ಮಾತು ನನಗೆ, ನಿಮ್ಮ ಮಾತು ನಿಮಗೆ; ಅಜ್ಜ-ತಾತನೇ, ಬೀೞ್ಕೊಳೆ-ಬೀಳ್ಕೊಳಲು, ಪೆಱತಂ-ಬೇರೆಮಾತನ್ನು, ನುಡಿಯದಿರಿಂ-ಹೇಳಬೇಡಿರಿ, ಮುಂ ನುಡಿದು-ಮೊದಲು ಒಂದು ಹೇಳಿ, ಎರಡಂ ನುಡಿವೆನೆ-ಎರಡನೆಯ ಮಾತನ್ನು ಹೇಳುತ್ತೇನೆಯೆ? ಚಲಮಂ-ಹಿಡಿದ ಪಟ್ಟನ್ನೇ ಹಿಡಿಯುವ ಹಠವನ್ನು, ಬಲ್ಪಿಡಿವಿಡಿದೆಂ-ಬಲವಾದ ಮುಷ್ಟಿಯಿಂದ ಹಿಡಿದಿದ್ದೇನೆ; ಸಂಗರಧರೆಯೊಳ್-ಯುದ್ಧಭೂಮಿಯಲ್ಲಿ, ತನ್ನಪ್ಪುದು ಆಕ್ಕೆ-ತಾನಾಗುವುದಾಗಲಿ.

**ವಚನ:** ನಿನ್ನವಸರಕ್ಕೆ - ನಿನ್ನ ಸಮಯಕ್ಕೆ; ಪಗೆವರಂ - ಶತ್ರುಗಳನ್ನು; ಪರ್ಚಿಪೇೞ್ದು - ಪಿಸುಮಾತಾಡಿ ಹೇಳಿ; ಸಂಧಾನವಾರ್ತೆಯಂ-ಸಂಧಿಯ ಸುದ್ದಿಯನ್ನು; ಸಮಕೊಳಿಸುವಂತೆ - ಏರ್ಪಡಿಸುವಂತೆ; ಅನಾಗತ ಬಾಧಾ ಪ್ರತಿ

ಷೇಧಂ – ಮುಂದಾಗಲಿರುವ ಹಾನಿಗೆ ಪ್ರತೀಕಾರವನ್ನು; ಬಟ್ಟೆಯುಂ – ಮಾರ್ಗ ವನ್ನು;

೭೧. ಕ್ರಂದತ್ . . . . . . ಸ್ರಂಗಳ್ : ಕ್ರಂದತ್–ಶಬ್ದ ಮಾಡುತ್ತಿರುವ, ಸ್ಯಂದನ–ರಥಗಳಿಂದ, ಜಾತ–ಹುಟ್ಟಿದ, ನಿರ್ಗತ – ಹೊರ ಹೊರಟ, ಶಿಖಿಜ್ವಾಲಾ ಸಹಸ್ರಂಗಳ್ – ಸಾವಿರಾರು ಉರಿಗಳು, ಅಟಂದು – ಮೇಲೆ ಹಾಯ್ದು, ಎತ್ತಂ ಕವಿದು – ಎಲ್ಲೆಲ್ಲಿಯೂ ಆವರಿಸಿಕೊಂಡು, ಅೞ್ವೆ – ಸುಡಲು, ಎತ್ತಂ – ಎಲ್ಲೆಲ್ಲೂ, ಬೇವ – ಬೇಯುತ್ತಿರುವ, ಶವ ಸಂಘಾತಂಗಳಂ – ಹೆಣದ ರಾಶಿಗಳನ್ನು, ಚಕ್ಕು ಮೊಕ್ಕೆಂದು–ಚಕ್ ಮೊಕ್ ಎಂದು, ಆಗಳ್–ಆಗ, ಕಡಿದು–ಕತ್ತರಿಸಿ, ಉಗ್ರಭೂತ ನಿಕರಂ – ಭಯಂಕರ ಪಿಶಾಚಿ ಸಮೂಹ, ಕೆಯ್ ಬೇಯೆ – ಕೈ ಸುಡುತ್ತಿರಲು, ಬಾಯ್ ಬೇಯೆ – ಬಾಯಿ ಸುಡುತ್ತಿರಲು, ತಿಂಬ ಅಂದಂ–ತಿನ್ನುವ ರೀತಿಯು, ತನ್ನ ಮನಕ್ಕೆ – ತನ್ನ ಮನಸ್ಸಿಗೆ, ಆಗುರ್ವಿಸುವಿನಂ – ಬೆದರಿಕೆಯನ್ನುಂಟುಮಾಡುತ್ತಿರಲು, ದುರ್ಯೋಧನಂ–ದುರ್ಯೋಧನನು, ನೋಡಿದಂ–ನೋಡಿದನು.

ವಚನ : ಕನಲ್ಪ–ನಿಗಿನಿಗಿ ಎಂದು ಹೊಳೆಯುವ; ಪೞಿಯು–ಹಳೆಯದಾದ; ಬಳ್ಳುವಿನ – ಗುಳ್ಳೆನರಿಯ; ಅೞುರ್ವ – ಸುಡುವ; ಕಂಪುನಾಱುವುದರ್ಕೆ–ದುರ್ನಾತದ ಹೊಡೆತಕ್ಕೆ; ಕೋಳ್ವಾಂಟಿಸೊಳ್ – ವ್ಯಾಪಿಸುವಷ್ಟು ದೂರದಲ್ಲಿ; ಎಂದರೆ ನಾತ ಎಲ್ಲಿಯವರೆಗೆ ವ್ಯಾಪಿಸಬಲ್ಲುದೋ ಅಲ್ಲಿಂದ ಆಚೆಗೆ; ಕೊಳುಗುಳಮಂ–ಯುದ್ಧ ಭೂಮಿಯನ್ನು; ಕಱಿದು–ದೂರ ತೊಲಗಿ; ಪ್ರಳಯ . . . . . ತಳವೆ : ಪ್ರಳಯಕಾಲ – ಪ್ರಳಯಕಾಲದಿಂದ, ವಿಘಟ್ಟಿತ–ಅಪ್ಪಳಿಸಲ್ಪಟ್ಟ, ಅಷ್ಟದಿಗ್ಭಾಗ – ಎಂಟು ದಿಕ್ಪ್ರದೇಶಗಳ, ಸಂಧಿ ಬಂಧನ – ಕೀಲುಗಳ ಕಟ್ಟುಳ್ಳ, ಗಗನತಳವೆ – ಆಕಾಶ ಪ್ರದೇಶವೇ, ಪಱಿದು ಬಿಟ್ಟಂತೆ–ಹರಿದು ಬಿದ್ದ ಹಾಗೆ;

೭೨. ಇದು ಪಾತಾಳ ಬಿಲಕ್ಕೆ ಬಾಗಿಲ್–ಇದು ಪಾತಾಳವೆಂಬ ಬಿಲದ ಬಾಗಿಲು; ದಲ್ – ನಿಜವಾಗಿಯೂ, ಘೋರಾಂಧಕಾರಕ್ಕೆ–ಭಯಂಕರ ಕತ್ತಲೆಗೆ, ಮಾಡಿದ, ಕೂಪಂ–ಬಾವಿ; ಇದು ಪೆಱತಲ್ತು–ಇದು ಬೇರೆ ಏನೂ ಅಲ್ಲ; ಉಗ್ರ ಕಾಳಾಂಭೋಧರಚ್ಛಾಯೆ – ಭೀಕರ ಪ್ರಳಯ ಕಾಲದ ಮೋಡಗಳ ನೆರಳು, ತಾನೆ ದಲ್–ತಾನೇ ನಿಜವಾಗಿಯೂ, ಎಂಬಂತಿರೆ–ಎನ್ನುವ ಹಾಗಿರಲು, ಕಾಚ ಮೇಚಕಚಯಚ್ಛಾಯಾಂಬುವಿಂ – ಕಾಚದಂತೆ ಕಪ್ಪುನೀಲಿ ಮಿಶ್ರಿತವಾದ ಬಣ್ಣ ವನ್ನುಳ್ಳ ನೀರಿನಿಂದ, ಗುಣ್ಪಿನಿಂ–ಆಳದಿಂದ, ಪುದಿದು–ತುಂಬಿ, ಬಕಬಳಾಕಾನೀಕ ರಾವಾಕುಳಂ – ಬಕ ಬಲಾಕಪಕ್ಷಿಗಳ ಸಮೂಹದ ಶಬ್ದದಿಂದ ಮೊರೆಯುತ್ತಿರುವ, ಸರೋವರಂ – ವೈಶಂಪಾಯನ ಸರೋವರ, ಇರ್ದತ್ತು – ಇತ್ತು. ಈ ವರ್ಣನೆಯಲ್ಲಿ ಭವ್ಯತೆಯ (Sublimity) ಸಂಸ್ಪರ್ಶವಿದೆ.

೭೩. ಆದಟಿನ – ಪರಾಕ್ರಮದ, ವಿಕ್ರಮಾರ್ಜುನನ–ಅರ್ಜುನನ, ಸಾಹಸ ಭೀಮನ – ಸಾಹಸಿಯಾದ ಭೀಮಸೇನನ, ಕೋಪ ಪಾವಕಂ – ಕೋಪವೆಂಬ

ಅಗ್ನಿಯು, ಪುದಿವು – ತುಂಬಿ, ಆಳುರ್ದು – ವ್ಯಾಪಿಸಿ, ಇಲ್ಲಿಯುಂ – ಇಲ್ಲಿಕೂಡ, ಎಮ್ಮಂ – ನಮ್ಮನ್ನು, ಅಟ್ಟಿಕೊಳ್ಳದೆ – ಸುಡದೆ, ಇರದು – ಇರುವುದಿಲ್ಲ ; ಇಲ್ಲಿ– ಇಲ್ಲಿ, ಬಾಳ್ವರಂ–ಬಾಳುವವರನ್ನು, ಕದಡದಿರ್–ಕಲಕದೆ ಇರು ; ಇತ್ತಬಾರದಿರು– ಇತ್ತಕಡೆ ಬರಬೇಡ, ಸಾರದಿರ್–ಹತ್ತಿರ ಬರಬೇಡ ; ರುಂದ್ರ ಫಣೀಂದ್ರಕೇತನಂ– ವಿಸ್ತಾರವಾದ ಹಾವಿನ ಹಳವಿಗೆಯ ದುರ್ಯೋಧನನನ್ನು, ಎಂಬವೊಲ್ – ಎನ್ನುವ ಹಾಗೆ, ಉನ್ಮದಕಳಹಂಸ ಕೋಕನಿಕರಧ್ವನಿ–ಮದಿಸಿದ ಹಂಸ ಚಕ್ರವಾಕ ಪಕ್ಷಿ ಗಳ ಸಮೂಹದ ನಾದವು, ಎತ್ತಂ–ಎಲ್ಲೆಲ್ಲೂ, ಆದುದು–ಉಂಟಾಯಿತು.

**ವಚನ :** ಪುಂಡರೀಕ ಷಂಡ–ಸರೋವರದ ; ಉಪಾಂತಮಂ – ಸಾಮೀಪ್ಯ ವನ್ನು ; ಕರ್ಚಿ–ತೊಳೆದು ;

**೭೪.** ನಿಜತೇಜದಿಂ – ತನ್ನ ತೇಜಸ್ಸಿನಿಂದ, ಸಮಸ್ತ ಭೂವಳಯಮಂ– ಸಕಲ ಭೂಮಂಡಲವನ್ನು, ಬೆಳಗಿ–ಪ್ರಕಾಶಮಾಡಿ, ಅಂತ–ಎದುರಿಸಿದ, ದೈತ್ಯರಂ– ರಾಕ್ಷಸರನ್ನು, ತಳವೆಳಗಾಗೆ – ತಬ್ಬಿಬ್ಬಾಗುವಂತೆ, ಕಾದಿ – ಯುದ್ಧಮಾಡಿ, ಚಳಿತು– ವಿಗತ ಪ್ರಭಾವನಾಗಿ, ಎಯ್ದೆ – ಚೆನ್ನಾಗಿ, ಬಱಲ್ದು – ಆಯಾಸ ಹೊಂದಿ, ಅಪ ರಾಂಬುರಾಶಿಯೊಳ್ – ಪಶ್ಚಿಮ ಸಮುದ್ರದಲ್ಲಿ, ಮುೞುಗುವ – ಮುಳುಗುವ, ತೀವ್ರದೀಧಿತಿವೊಲ್–ಸೂರ್ಯನಂತೆ, ಫಣಿರಾಜಕೇತನಂ–ದುರ್ಯೋಧನನು, ಆ ಕೊಳ ದೊಳ್–ಆ ಸರೋವರದಲ್ಲಿ, ಮುೞುಗಿದಂ–ಮುಳುಗಿದನು ; ಬಿದಿಯ ಕಟ್ಟಿದುದಂ –ವಿಧಿಯು ಹಣೆಗೆ ಕಟ್ಟಿರುವುದನ್ನು, ಕಳೆಯಲ್ಕೆ–ನೀಗುವುದಕ್ಕೆ, ಆರ್ಗಂ– ಯಾರಿಗೂ, ಏಂ ತೀರ್ಗುಮೇ–ಏನು ಸಾಧ್ಯವಾಗುವುದೇ ? ಪದ್ಯದ ಭವ್ಯತೆ ಭಾವ ಗಮ್ಯ. ಇಲ್ಲಿ ಳಕಾರಱಕಾರಗಳ ಮಿಶ್ರಪ್ರಾಸವನ್ನು ನೋಡಬಹುದು.

**ವಚನ :** ವಜ್ರಿಯ–ಇಂದ್ರನ, ವಜ್ರಹತಿಗೆ–ವಜ್ರಾಯುಧದ ಏಟಿಗೆ, ಅಳ್ಕಿ– ಹೆದರಿ ; ಕೊಳಗುಳದೊಳ್ – ಯುದ್ಧ ಭೂಮಿಯಲ್ಲಿ ; ಮಧುವನಿತಾವದನಕಮಳ ಹಿಮಕರಂ–ಮಧುಸೂದನನು, ಕೃಷ್ಣನು.

**೭೫.** ಇಂದಿನ ನೇಸಱ್ಪಿಂದೊಳಗೆ–ಇವತ್ತಿನ ಸೂರ್ಯ ಮುಳುಗುವುದರೊಳ ಗಾಗಿ, ಅರಾತಿಯಂ – ಶತ್ರುವನ್ನು ; ಇಕ್ಕದೆ – ಕೊಲ್ಲದೆ, ಮಾಣ್ದೆಮಪ್ಪೊಡೆ – ಬಿಟ್ಟ ವಾದ ಪಕ್ಷದಲ್ಲಿ, ಇನ್ನೆಂದುಂ–ಇನ್ನು ಯಾವತ್ತೂ, ಅಸಾಧ್ಯ – ಗೆಲ್ಲಲಾಗದವನು ; ಇಂದೇ–ಈ ದಿನವೇ, ಹಳಿಯುಂ–ಬಲರಾಮನೂ, ಆತನಂ–ಅವನನ್ನು, ದುರ್ಯೋಧನ ನನ್ನು, ಕೂಡುವಂ ಗಡ–ಸೇರುತ್ತಾನಲ್ಲವೇ ? ಬೞಿಕ್ಕೆ–ಅನಂತರ, ಗೆಲಲ್–ಗೆಲ್ಲಲು, ಬಂದಪುದೇ–ಆಗುವುದೇ ? ಆದುಪೆ ಕಾರಣಮಾಗಿ–ಅದೇ ಕಾರಣವಾಗಿ, ಅಂಧ ರಾಣ್ನಂದನಂ–ಧೃತರಾಷ್ಟ್ರನ ಮಗ, ದುರ್ಯೋಧನ, ಉಳಿದಿರ್ದಂ – ಅಡಗಿ ಕೊಂಡಿ ದ್ದಾನೆ ; ಅಲ್ಲದೆ–ಹೀಗಲ್ಲದೆ, ಉಂತೆ–ಸುಮ್ಮನೆ, ರಣರಂಗ ಭೂಮಿಯೊಳ್ – ಯುದ್ಧ ಭೂಮಿಯಲ್ಲಿ, ತಲೆಯುರ್ಚುಗುಮೇ – ತಲೆಯನ್ನು ಎಳೆದುಕೊಳ್ಳುತ್ತಾನೆಯೇ ಎಂದರೆ ತಲೆ ತಪ್ಪಿಸಿಕೊಳ್ಳುತ್ತಾನೆಯೆ, ಮರೆಯಾಗಿರುತ್ತಾನೆಯೇ ?

**ವಚನ :** ಜಳಧರ ಸಮಯ–ವರ್ಷಕಾಲದ, ನಿಶಾ–ರಾತ್ರಿಯಲ್ಲಿ, ಸಂಚಲಿತ–

ಕಂಪಿಸುತ್ತಿರುವ, ವಿದ್ಯುತ್–ಮಿಂಚಿನಂತೆ, ಪಿಂಗಳ–ಹೊಂಬಣ್ಣದ, ಅಕ್ಷ–ಕಣ್ಣು ಗಳನ್ನುಳ್ಳ; ಪಾತಂಗಳಿಂ–ನೋಟಗಳಿಂದ; ಜರಾಸಂಧ ಸಂಧಿ ಬಂಧನ ವಿಘಟನಂ– ಜರಾಸಂಧನ ಕೀಲ್ಕಟ್ಟುಗಳನ್ನು ಸೀಳಿದವನಾದ ಭೀಮಸೇನನು.

೭೬. ಕಡಲಂಪೊಕ್ಕೊಡೆ – ಸಮುದ್ರವನ್ನು ಹೊಕ್ಕರೆ, ಕಡಲಂ – ಸಾಗರ ವನ್ನು, ಪೀರ್ದಪೆಂ–ಹೀರುತ್ತೇನೆ; ಪಾತಾಳಮಂ ಪೊಕ್ಕನಪ್ಪೊಡೆ – ಪಾತಾಳವನ್ನು ಹೊಕ್ಕವನಾದರೆ, ಶೇಷಾಹಿಯ – ಆದಿಶೇಷನ, ಪಲ್ಗಳಂ – ಹಲ್ಲುಗಳನ್ನು, ಮುಱಿ ದಪೆಂ–ಮುರಿಯುತ್ತೇನೆ; ಬ್ರಹ್ಮಾಂಡಮಂ ಪೊಕ್ಕನಪ್ಪೊಡಂ – ಬ್ರಹ್ಮಾಂಡವನ್ನು ಹೊಕ್ಕವನಾದರೂ, ಆ ಬ್ರಹ್ಮನ, ಗಂಟಲಂ – ಕೊರಳನ್ನು, ಮುಱಿದಪೆಂ–ಮುರಿ ಯುತ್ತೇನೆ; ದುರ್ಯೋಧನಂಗೆ – ದುರ್ಯೋಧನನಿಗೆ, ಇಂ – ಇನ್ನು, ಪುಗಲ್ಕೆ–ಪ್ರವೇಶಿ ಸುವುದಕ್ಕೆ, ತ್ರೈಭುಭುವನಂಗಳಿಂ – ಮೂರು ಲೋಕಗಳಿಂದ, ಪೊಱಗೆ – ಹೊರಗೆ, ಆಚೆ, ಎಡೆ – ಸ್ಥಳವು, ಬಾಣಾಂತಕಾ–ಶ್ರೀಕೃಷ್ಣನೇ, ಮತ್ತೆ–ಬೇರೆ, ಎಲ್ಲಿತ್ತೋ–ಎಲ್ಲಿದೆಯೋ ?

ವಚನ: ಕಿರಾತಂ – ಬೇಡನು; ಹಳಕುಳಿಶ ಶಂಕಚಕ್ರ ಲಾಂಛಿತಮಪ್ಪಡಿ ವಜ್ಜೆಯಂ – ನೇಗಿಲು, ವಜ್ರ, ಶಂಖ, ಚಕ್ರ ಇವುಗಳ ಗುರುತನ್ನುಳ್ಳ ಪಾದಗಳ ಹೆಜ್ಜೆಯನ್ನು; ಮುಟ್ಟೆವಂದು – ಸಮೀಪಿಸಿ; ಕಳಕಳ ನಿನಾದಂಗಳಿಂದೆ – ಕೋಲಾ ಹಲದ ಶಬ್ದಗಳಿಂದ, ಆರ್ದು–ಗರ್ಜಿಸಿ; ತಾಡಿಸಿಯುಂ–ಹೊಡೆಯಿಸಿಯೂ; ಸರಂ ಗೇಳ್ದಲ್ಲದೆ–ಧ್ವನಿಯನ್ನು ಕೇಳಿದಲ್ಲದೆ; ಈ ಬೂತು – ಈ ದೆವ್ವ, ಪ್ರಾಣಿ; ಪೌವನೆ ಪಾಱುವನ್ನೆಗಂ–ಹವ್ವನೆ ಹಾರುವವರೆಗೂ,

೭೭. ಕಿಱಿಯಂದಿಂದಿತ್ತ–ಚಿಕ್ಕಂದಿನಿಂದೀಚೆಗೆ, ದುರ್ಯೋಧನಂ–ಯುದ್ಧಕ್ಕೆ ಅಸಾಧ್ಯನು, ಅಜೇಯನು, ಎನಿಸಿದ – ಎನ್ನಿಸಿಕೊಂಡ, ವಿಕ್ರಾಂತಂ–ಪರಾಕ್ರಮವು, ಏನಾದುದು – ಏನಾಯಿತು ? ಎೞ್ತಂದು–ದಂಡೆತ್ತಿ ಬಂದು, ಇಱಿವ – ಯುದ್ಧ ಮಾಡುವ, ಉರ್ಕು – ಕೊಬ್ಬು, ಗರ್ವ, ಎಲ್ಲಿತ್ತೊ – ಎಲ್ಲಿ ಇದ್ದಿತೊ ? ಪಾಂಚಾಳಿಯಂ – ದ್ರೌಪದಿಯನ್ನು, ಎೞೆವ – ಎಳೆಯುವ, ಅದಟು – ಪ್ರತಾಪ, ಏನಾದುದೋ–ಏನಾಯಿತೋ ? ಗಂಡ–ಶೂರನೇ, ಪೇೞ್ – ಹೇಳು; ಪೊಚ್ಚಱಿಸ– ಪ್ರತಾಪದ, ಅಂತಾಮಾತುಂ–ಹಾಗಿರುವ ಮಾತೂ, ಇಂತೂ–ಹೀಗೆ, ಈ ಇರವು– ಈ ಪರಿಸ್ಥಿತಿಯು, ಎನೆ–ಎನ್ನಲು, ನಗೆಯಂ – ಪರಿಹಾಸವನ್ನು, ಮಾಡಿದಯ್– ಉಂಟುಮಾಡಿದೆ; ಬಂದನೀತಂ–ಬಂದವನಿವನು, ಪೆಱನಲ್ಲಂ–ಬೇರೆ ಯಾರೂ ಅಲ್ಲ, ಕೌರವಕುಳನಳಿನೀಕುಂಜರಂ– ಕೌರವ ವಂಶವೆಂಬ ತಾವರೆಗೆ ಆನೆಯಾಗಿರುವ, ಭೀಮಸೇನಂ – ಭೀಮಸೇನನು. "ಕ್ರುದ್ಧೇ ಯುಷ್ಮತ್ಕುಲಕಮಲಿನೀಕುಂಜರೇ ಭೀಮಸೇನೇ" (ವೇಣೀ ೫–೩೩)

೭೮. ದುಶ್ಶಾಸನೋರಸ್ಥಳ ವಿಗಳದಸೃಗ್ವಾರಿಯಂ – ದುಶ್ಶಾಸನ ಎದೆಯ ಪ್ರದೇಶದಿಂದ ಸುರಿಯುವ ರಕ್ತವೆಂಬ ನೀರನ್ನು, ಕುಡಿದೆಂ–ಕುಡಿದೆನು; ಅದಂ

ಕಂಡು–ಅದನ್ನು ನೋಡಿ, ಮುಂ–ಮೊದಲು, ನಡೆ ನೋಡುತ್ತ – ನಾಟುವಂತೆ ನೋಡುತ್ತ, ಅಳ್ಕಿ–ಹೆದರಿ, ಮಾಣ್ದಯ್–ನಿಂತೆ ಎಂದರೆ ಏನೂ ಪ್ರತಿಕ್ರಿಯೆಯನ್ನು ಮಾಡಲಿಲ್ಲ; ಇಂದು – ಈ ದಿನ, ಇಱಿವದಟಂ–ಯುದ್ಧ ಮಾಡುವ ಶಕ್ತಿಯನ್ನು, ಆರ್ಕೊಟ್ಟರ್–ಯಾರುಕೊಟ್ಟರು? ಮಾಣಲ್ಕೆ–ತಡೆಯುವುದಕ್ಕೆ, ಎಡೆಯುಂಟೇ–ಅವಕಾಶವಿದೆಯೆ? ಸಿಲ್ಕಿದೈ–ಸಿಕ್ಕಿಬಿದ್ದೆ; ಪೋ–ಹೋಗು, ಕೊಳದಿಂ – ಸರೋವರದಿಂದ, ಪೊಱಮಡು—ಹೊರಕ್ಕೆ ಬಾ; ನೀಂ–ನೀನು, ಸತ್ತ್ರೊಡಂ–ಸತ್ತರೂ, ಪುಟ್ಟ–ಹುಟ್ಟಿಯಾ? ಈಗಡೆ ದಲ್–ಈಗಲೇ ದಿಟ, ಕೊಂದಪ್ಪೆಂ–ಕೊಲ್ಲುತ್ತೇನೆ; ದ್ರೋಹ–ದ್ರೋಹ ಮಾಡಿದವನೇ, ಎನ್ನಂ–ನನ್ನನ್ನು, ಮುಳಿಯಿಸಿ–ಕೆರಳಿಸಿ, ನಿನಗೆ, ಇಂ–ಇನ್ನು, ಬಾೞ್ವಾಸೆ–ಬದುಕುವ ಆಸೆಯು, ಉಂಟೇ–ಇದೆಯೇ? "ಮಾಣ್–ನಿವಾರಣೇ" ಎಂದಿದ್ದರೂ ಆ ಧಾತುಗೆ ಛಾಯಾರ್ಥಗಳು ಅನೇಕವಿವೆ. ಪೊಱಗೆ+ಮಡು=ಸೇರು < ಪೊಱಮಡು. ಪುಟ್ಟ ಎಂಬುದು ಪ್ರಶ್ನಾರ್ಥಕ, ಅದೇಕೆನ್ನ (ಪಂಭಾ–೧೦–೧೨೦), ಕಟಕೋಪಾಧ್ಯಾಯನಾರೆಂಬ (ಅಸಂಪು.)–ನೋಡಿ.

**೭೯.** ಮಾನಸಿಕೆಯೆ–ಮನುಷ್ಯತ್ವವೆ, ಜೊರೆಗಿಡೆ–ಯೋಗ್ಯತೆಯನ್ನು ಕಳೆದುಕೊಳ್ಳಲು, ನೀರ್ಮಾನಸನೆನೆ–ನೀರಿನಲ್ಲಿರುವ ಮನುಷ್ಯ ಎನ್ನಲು (ಒಂದು ಜಲಚರ ಪ್ರಾಣಿ), ನೀನುಂ–ನೀನೂ, ಎಲವೋ–ಎಲೋ, ನೀರೊಳ್ – ನೀರಿನಲ್ಲಿ, ಮೀನೆಂಬೀ ನೆವದೆ–ಮೀನು ಎಂಬ ಈ ನೆಪದಿಂದ, ಇರ್ದೆ–ಇದ್ದೆ; ಅಭಿಮಾನದ–ಆತ್ಮಗೌರವದ, ಕಲಿತನದ–ಶೌರ್ಯದ, ಪರಮಪದಂ–ಉತ್ಕೃಷ್ಟ ಸ್ಥಿತಿಯನ್ನು, ಇದೇಂ–ಇದೇನು, ಎಯ್ದಿದೆಯೋ–ಸೇರಿದೆಯೋ?

**೮೦.** ಅದಟಿನ–ಶೌರ್ಯದ, ಅಳುರ್ಕೆಯುಂ – ಅತಿಶಯತೆಯನ್ನು, ನಿಱಿಸಿ–ಸ್ಥಾಪಿಸಿ, ನಿನ್ನ ನಿಸೇಕದ ಪೊೞ್ತು–ನಿನಗೆ ಶಾಸ್ತಿ ಆಗುವ ಹೊತ್ತು, ತಪ್ಪಲೀಯದೆ –ತಪ್ಪಿಹೋಗುವುದಕ್ಕೆ ಬಿಡದೆ, ತಡೆಯದೆ – ತಡಮಾಡದೆ, ಈಗಳೆ – ಈಗಲೇ, ಪೊಱಮಟ್ಟು ಬಾ–ಹೊರಕ್ಕೆ ಹೊರಟು ಬಾ; ನೀಂ–ನೀನು, ಇನಿಸು–ಸ್ವಲ್ಪ ಕಾಲ, ಇರ್ದೆಯಪ್ಪೊಡೆ–ಇದ್ದೆಯಾದರೆ, ಏತೊದಳೋ–ಏನು ಸುಳ್ಳೋ, ಸರೋವರಾಂಬುವನಿತಂ – ಸರೋವರದ ನೀರಷ್ಟನ್ನು, ತವೆ – ನಾಶವಾಗುವಂತೆ, ತುಳ್ಕಿ – ತುಳುಕಿ, ರಸಾತಳಂಬರಂ – ಪಾತಾಳದವರೆಗೂ, ಜಿಡಕಿಯುಂ – ಹುಡುಕಿಯೂ, ಎಂತುಂ–ಹೇಗೂ, ಅಪ್ಪಳಿಸಿ–ಗುದ್ದಿ, ಕೊಂದಪೆಂ–ಕೊಲ್ಲುತ್ತೇನೆ; ಸುಯೋಧನನೇ, ಏೞ್ವುದು–ಕೊಳದಿಂದ ಮೇಲಕ್ಕೆ ಏಳು; ಇದೇಂ–ಇದೇನು?

**ವಚನ:** ಜಟಾಸುರಾರಾತಿಯ – ಭೀಮಸೇನನ; ಚಿತ್ತಸ್ಖಲನೆಯಾಗೆ – ಮನಸ್ಸು ಸ್ಥಿರತೆಯನ್ನು ನೀಗಿಕೊಳ್ಳಲು, ಸಡಿಲವಾಗಲು;

**೮೧.** ಪಗೆವಂ ಬಂದು–ಶತ್ರುವು ಬಂದು, ಉಱಿದೆ–ಇರದೆ, ಇಂತು–ಹೀಗೆ, ಮೂದಲಿಸೆಯುಂ–ಹೀಯಾಳಿಸಿಯೂ, ಮಾತಂ– ಅವನ ಮಾತುಗಳನ್ನು, ಕಿವುಡಿಗೇಳ್ದು – ಕಿವುಡನಂತೆ ಕೇಳಿ ಎಂದರೆ ಕಿವಿಗೆ ಹಾಕಿಕೊಳ್ಳದೆ, ಕೆಮ್ಮಗೆ–

ಸುಮ್ಮನೆ, ನೀರೊಳ್–ನೀರಿನಲ್ಲಿ, ಮುಳುಗಿರ್ದೊಡೆ – ಮುಳುಗಿದ್ದರೆ, ಮಚ್ಚೌರ್ಯಂ–ನನ್ನ ಪ್ರತಾಪವು, ಆಟ್ಟಿ–ಮುಳುಗಿ, ಕಿಡುಗುಂ–ಹಾಳಾಗುತ್ತದೆ, ಎಂದು, ಉದ್ಧತಂ–ಗರ್ವಿಷ್ಠನಾದ ದುರ್ಯೋಧನ, ನೆಗೆದಾಗಳ್–ನೀರಿನ ಮೇಲಕ್ಕೆ ನೆಗೆದಾಗ, ಪಿಶಸ ತ್ಕಿರೀಟರತ್ನಾಂಶು ಪ್ರಭಾರಾಜಿ–ಪ್ರಕಾಶಮಾನವಾದ ಕಿರೀಟರತ್ನಗಳ ರಶ್ಮಿಗಳ ಕಾಂತಿ ಸಮೂಹ, ತೊಟ್ಟಗೆ–ಬೇಗನೆ, ಕೆಯ್ಗಣ್ಮೆ–ಅಧಿಕವಾಗಲು, ಆಪ್ರೊಗೊಳಂ–ಆ ಸರೋವರ, ಸುರೇಂದ್ರ ಚಾಪರುಚಿಯಂ–ಇಂದ್ರಚಾಪದ ಎಂದರೆ ಮಳೆಬಿಲ್ಲಿನ ಕಾಂತಿಯನ್ನು, ಕೆಯ್ಕೊಂಡುದು–ಸ್ವೀಕರಿಸಿತು.

೮೨. ಪೊದಳ್ದ–ವ್ಯಾಪಿಸಿದ, ಬೊಬ್ಬುಳಿಕೆಗಳ್–ನೀರ್ಗುಳ್ಳೆಗಳು, ನೆಗೆಯೆ–ಮೇಲಕ್ಕೆ ಬರಲು, ನೆಗೆದಂತೆ–ಅವು ಬಂದ ಹಾಗೆ, ಎರಡುಂ ಕೆಲಕ್ಕೆ–ಎರಡು ಪಕ್ಕಗಳಿಗೂ, ನೀರ್–ನೀರು, ಉಗಿಯೆ–ವಿಭಾಗವಾಗಲು, ಗದಾಭಿಘಾತ ಪರಿಪೂರಿತ ತೋಯಜಷಂಡಂ – ಗದೆಯ ಹೊಡೆತದಿಂದ ತುಳುಕಿದ ಸರೋವರ, ಅಲ್ಲಿಗಲ್ಲಿಗೆ–ಅಲ್ಲಲ್ಲಿ, ಕದಡೇಳೆ–ಬಗ್ಗಡವಾಗಲು, ಭೀಮಭುಜ ಮಂದರ ಘಟ್ಟನೆಯಿಂದಂ–ಭೀಮನ ಮಂದರ ಪರ್ವತದಂತಿರುವ ಬಾಹುಗಳ ಹೊಡೆತದಿಂದ, ತೊಟ್ಟಗೆ ಕೊಳೆ–ಬೇಗನೆ ಆಕ್ರಮಿಸಲು, ಕಾಳಕೂಟವೊಗೆವಂತೆ–ಕಾಲಕೂಟವಿಷವು ಉತ್ಪನ್ನವಾಗುವಂತೆ, ಫಣಿರಾಜಕೇತನಂ–ದುರ್ಯೋಧನನು, ಒಗೆದಂ–ಹುಟ್ಟಿದನು, ಆವಿರ್ಭವಿಸಿದನು. ನೀರಿನಲ್ಲಿ ಮುಳುಗಿದವನು ಮೇಲೇಳುವ ಇಲ್ಲಿನ ವಾಸ್ತವಿಕ ದೃಶ್ಯ ಮನೋಜ್ಞವಾಗಿದೆ; ಪದ್ಯದ ಕೊನೆಯಲ್ಲಿ ಕಾಣುವ ಕಾಲಕೂಟದ ಉಪಮಾನ, ಸರ್ಪಧ್ವಜನಿಗೆ ಅನುಗುಣವಾಗಿದೆ, ಭಾವಿಸಿದಂತೆ ಮನದಲ್ಲಿ ಮಡಲಿರಿದು ಬೆಳೆಯುತ್ತದೆ. ಈ ಪದ್ಯದ ವೈಭವ. ಈ ಸಂದರ್ಭದಲ್ಲಿ ವೇಣೀಸಂಹಾರ ನಾಟಕದ ಪದ್ಯದ (VI–೯) ಉತ್ತರಾರ್ಧವನ್ನು ಹೋಲಿಸಿ ನೋಡಬಹುದು: "ಆಯಸ್ತ ಭೀಮ ಭುಜಮಂದರ ವೇಲ್ಲನಾಭಿಃ ಕ್ಷೀರೋದಧೇಃ ಸುಮಥನಾದಿವ ಕಾಲ ಕೂಟಃ"

**ವಚನ**: ದಿಕ್ಕರಿಕರಾನುಕಾರಿ–ದಿಕ್ಕಾನೆಯ ಸೊಂಡಿಲನ್ನು ಹೋಲುವ; ಕರಪರಿಘೋತ್ತಂಪಿತ – ಪರಿಘದಂತಿರುವ ಕೈಗಳಿಗೆ ಆಭರಣಪ್ರಾಯವಾಗಿ: ತೋರಣೀಕೃತ – ತೋರಣವಾಗಿ ಮಾಡಲ್ಪಟ್ಟ; ಸೆರಗಿಲ್ಲದೆ – ಭಯವಿಲ್ಲದೆ; "ಉತ್ಥಾಯ ಚ ತಸ್ಮಾತ್ಸಲಿಲಾಶಯಾತ್ಕರಯುಗಲೋತ್ತಂಭಿತ ತೋರಣೀಕೃತ ಭೀಮಗದಃ" ಎಂಬ ವೇಣೀಸಂಹಾರದ ಗದ್ಯಭಾಗವನ್ನೂ ಹೋಲಿಸಿ (VI–೯ರ ಅನಂತರ).

೮೩. ನಡಪಿದ–ಸಾಕಿಸಲಹಿದ, ನಂಟರ್–ಬಂಧುಗಳೂ, ಎಯ್ದೆ–ಚೆನ್ನಾಗಿ, ಪೊರೆದ – ಕಾಪಾಡಿದ, ಆಳ್ – ಶೂರರು, ಉಳ್ಳರೆಲ್ಲರುಂ – ನಿನಗೆ ಇರುವವರೆಲ್ಲರೂ, ರಣರಂಗದೊಳ್ – ಯುದ್ಧರಂಗದಲ್ಲಿ, ಮಡಿದೊಡಂ – ಸತ್ತುಹೋದರೂ, ಉರ್ಕುಗುಂದದೆ – ಗರ್ವ ಕುಗ್ಗದೆ, ಉಗುರಂತೆ–ಉಗುರಿನಹಾಗೆ, ಎರಡುಂ ಕಡೆ–ಎರಡು ಪಕ್ಕಗಳಲ್ಲೂ, ತಪ್ಪ – ನಾಶಮಾಡುವ, ಕೂರ್ಪಂ – ತೀಕ್ಷ್ಣತೆಯನ್ನು,

ಓಗಡಿಸದೆ – ಅಸಹ್ಯಪಡದೆ (?), ಮೆಯ್ಯೊಳ್ – ಮೈಯಲ್ಲೇ, ತಾಳ್ದಿ – ಧರಿಸಿ, ವೃಕೋದರನ–ಭೀಮನ, ಒಂದೆಸರಕ್ಕೆ–ಒಂದೇ ಗರ್ಜನೆಗೆ, ಕಾಯ್ಪೊಡಂಬಡೆ–ಕೋಪವೊಪ್ಪಲು, ಸಿಡಿಲೇಱಿಗ್ಗಿಯಿಂ–ಸಿಡಿಲೇಳುವಂತೆ, ಮಸಗಿ–ಉಕ್ಕಿ, ಬಂದಂ–ಬಂದನು; ಏಂ ಕಲಿಯೋ ಸುಯೋಧನಂ–ಏನು ಶೂರನೋ ದುರ್ಯೋಧನನು!

೮೪. ಮುಂ–ಪೂರ್ವಕಾಲದಲ್ಲಿ, ಎಳೆ–ಭೂಮಿಯು, ದೈತ್ಯನ–ರಾಕ್ಷಸನಾದ ಹಿರಣ್ಯಾಕ್ಷನ, ಕೆಯ್ಗೆವೋಗೆ–ಕೈಗೆ ಹೋಗಲು, ವಶವಾಗಲು, ತರಲ್ ಎಂದು–ಮರಳಿ ತರಬೇಕೆಂದು, ಈ ಚಕ್ರಿ–ಈ ಕೃಷ್ಣ, ವಿಷ್ಣು, ಮುನ್ನಂ–ಮೊದಲು, ರಸಾತಳಮಂ–ಪಾತಾಳವನ್ನು, ಪೊಕ್ಕುದುಂ–ಹೊಕ್ಕದ್ದೂ, ಈ ಮಹೋಗ್ರರಣದೊಳ್–ಈ ಮಹಾ ಭೀಕರ ಯುದ್ಧದಲ್ಲಿ, ನಿಮ್ಮೊಂದು ಕೆಯ್ಸಿಟ್ಟಿ–ನಿಮ್ಮ ಕೈಗೆ ಬಿದ್ದ, ವಶವಾದ, ಭೂತಳಮಂ – ಭೂಮಿಯನ್ನು, ಮತ್ತೆ ತರಲ್–ತಿರುಗಿ ತರುವುದಕ್ಕಾಗಿ, ಆನುಂ – ನಾನೂ, ವಿಶುದ್ಧನಿಯಮ ಪ್ರಾರಂಭದಿಂ-ಪರಿಶುದ್ಧವಾದ ವ್ರತಾಚರಣೆಯಿಂದ, ಈ ಕೊಳನಂ–ಈ ಸರೋವರವನ್ನು, ಪೊಕ್ಕುದುಂ–ಪ್ರವೇಶ ಮಾಡಿದ್ದೂ, ಆವ ದೋಷಂ – ಏನು ತಪ್ಪು? ಇಂ–ಇನ್ನು, ಎನಗೆ, ಮೂಱಾಂಪರಾರ್–ಎದುರಾಗುವವರು ಯಾರು? ತೋಱಿರೇ–ತೋರಿಸಿರೇ!

೮೫. ಇನ್ನಪ್ಪೊಡಂ–ಇನ್ನಾದರೂ, ಏವಮಂ–ಕ್ರೋಧವನ್ನು, ಬಿಸುಡು – ಬಿಟ್ಟುಬಿಡು, ಧರಣಿಯುಂ – ನೆಲವನ್ನು, ಪಚ್ಚಿ – ವಿಭಾಗಿಸಿಕೊಂಡು, ಆಳ್ವಂ – ಆಳೋಣ; ಈ ಕಿಸುರೊಳ್–ಈ ಕಲಹದಲ್ಲಿ, ಏನಪ್ಪುದು–ಏನಾಗುತ್ತದೆ, ಏನು ಪ್ರಯೋಜನ? ಕೆಮ್ಮನೆ – ಸುಮ್ಮನೆ, ಪಾಪಕರ್ಮ-ಪಾಪಕರ್ಮವು; ಚಲಮಂ ಕೊಂಡಾಡದೆ – ಹಗೆತನವನ್ನು ಹಿಡಿದು ನಡೆಯದೆ, ಎಮ್ಮಯ್ವರುಂ – ನಾವು ಐದು ಜನರೂ, ಬೆಸಕೆಯ್ಯುತ್ತಿರೆ–ಸೇವೆ ಮಾಡುತ್ತಿರಲು, ನೀನೆ–ನೀನೇ, ಪೇಣ್–ಅಥವಾ, ಅರಸುಗೆಯ್–ದೊರೆತನವನ್ನು ಮಾಡು; ಸೌದರ್ಯದಿಂದೆ–ಸಹೋದರತ್ವಕ್ಕಿಂತ, ವಸುಧಾಮಂಡಳಂ–ಈ ಭೂಮಂಡಲ, ಒಳ್ಳಿತೇ – ಒಳ್ಳೆಯದೇ? ಇದಂ–ಈ ಮಾತನ್ನು, ಇಂಬುಕೆಯ್ವುದು – ಅಂಗೀಕರಿಸುವುದು; ಆಂ–ನಾನು, ಕೆಯ್ಯೊಡ್ಡಿದೆಂ – ಕೈ ಚಾಚಿದ್ದೇನೆ, ಬೇಡಿದೆಂ – ಬೇಡಿದ್ದೇನೆ, ಪಾಪಕರ್ಮ ಎಂಬುದು ಪ್ರಕೃತಿ ಪ್ರಯೋಗ; ಅದು ಪಾಪ ಕರ್ಮಂ ಎಂದು ಪ್ರಥಮಾಂತವಾಗಿರಬೇಕು. ಸೋದರ್ಯ ಎಂಬುದಕ್ಕೆ ಎಲ್ಲ ಪ್ರತಿಗಳಲ್ಲೂ ಸೌಂದರ್ಯ ಎಂದು ಪಾಠವಿದೆ; ಆದಿಪುರಾಣದಲ್ಲೂ (೧೪-೮೫) ಹೀಗೆಯೇ ಉಂಟು, ಇಲ್ಲಿ ಸೌಂದರ್ಯ ಎಂಬ ಸರಿಯಾದ ರೂಪವನ್ನು ಅಂಗೀಕರಿಸಿದೆ.

೮೬. ಅಯ್ದುಱಿವಾಡದೊಳ್ – ಐದು ಕುಗ್ರಾಮಗಳಲ್ಲಿ, ಅಯ್ವರುಮಂ–ಪಾಂಡವರೈವರನ್ನೂ, ನೀಂ–ನೀನು, ಕೂರ್ತು–ಒಲಿದು, ಇರಿಸು – ಇಡು, ಎಂದೊಡಂ –ಎಂದು ಹೇಳಿದರೂ, ಎಂತುಂ–ಹೇಗೂ, ಏಗೆಯ್ದುಂ–ಏನು ಮಾಡಿಯೂ, ಅದು, ಒಲ್ಲದ–ಒಪ್ಪದ, ಕಾರಣದಿಂದಂ–ಕಾರಣದಿಂದ, ನೋಡ–ನೋಡು, ಇನಿತಾದುದು–

ಇಷ್ಟಾಯಿತು? ನಿನ್ನೊಳ್ – ನಿನ್ನಲ್ಲಿ, ಧರ್ಮತನೂಜಂ – ಧರ್ಮಪುತ್ರನು, ಏಂ ಸಯ್ಪವನಲ್ಲನೆ – ಏನು ನೇರಾಗಿ ನಡೆಯುವವನಲ್ಲವೆ? ಪೇೞ್ದುದಂ–ಹೇಳಿದ್ದನ್ನು, ಎಮಗೆ–ನಮಗೆ, ಇಂಬುಕೆಯ್ – ಅಂಗೀಕರಿಸು; ಸಯ್ಪನೆ ಆಗು–ನೇರಾದವನೇ, ಋಜುವಾದವನೇ, ಆಗು; ಉೞಿದಾರೊಳಂ – ಬೇರೆ ಯಾರಲ್ಲಿಯೂ, ಫಣಿಕೇತನಾ – ದುರ್ಯೋಧನನೇ, ಇನ್ನು, ಏವಂಗೊಳ್ಳದಿರ್ – ಕೋಪ ಮಾಡಬೇಡ, ಮಾಡದಿರು.

ವಚನ: ಕೆಬಿಗಿವಿಗೆಯ್ದು – ಕಿವಿಯ ಕೆಳಕ್ಕೆ ಹಾಕಿಕೊಂಡು ಎಂದರೆ ಕಿವಿಯಿಂದ ಕೇಳದೆ; ಅಳವಡಿಸಿ–ಸೇರಿಸಿ.

೮೭. ಮುಂ–ಮೊದಲು, ನಿಮ್ಮ–ನೀವು, ಪೇೞ್ದು–ಹೇಳಿ, ಗೆಯ್ಯದಂ–ಹೇಳಿದ್ದನ್ನು ಮಾಡದವನು, ಇಂ – ಇನ್ನು, ಈ ಪದದಲ್ಲಿ–ಈಸಂದರ್ಭದಲ್ಲಿ, ಪೇೞ್ದುಗೆಯ್ವಂತೆ–ಹೇಳಿದ್ದನ್ನು ಮಾಡುವಂತೆ, ಉಂತೆ – ಸುಮ್ಮನೆ, ಪನ್ನಗಪತಾಕನಲ್ಲನೆ–ನಾನು ಸರ್ಪಧ್ವಜನಲ್ಲವೆ? ಬಿನ್ನಣವಡೆಮಾತಂ – ಬಿನ್ನಾಣದ ಸಾಧಾರಣವಾದ ಮಾತನ್ನು, ಎನ್ನೊಳ್–ನನ್ನಲ್ಲಿ, ಇಂ – ಇನ್ನು, ನುಡಿಯದಿರಿಂ – ಹೇಳದೆ ಇರಿ, ಪೇೞ್ದುದಂಗೆಯ್ > ಪೇೞ್ದುಗೆಯ್ : ಎಂಬುಕೆಯ್ = ಎಂಬುದಂ + ಕೆಯ್ ಹಾಗೆ,

೮೮. ರಣದೊಳ್ – ಯುದ್ಧದಲ್ಲಿ, ಆ ದುಶ್ಶಾಸನನಂ–ಆ ದುಶ್ಶಾಸನನನ್ನು, ಪೊರಳ್ಚಿ–ಹೊರಳಿಸಿ, ಕೊಂದ, ಈ ಮರುತ್ಪುತ್ರಂ–ಈ ಭೀಮನು, ಇಂತು–ಹೀಗೆ, ಆದಂ–ವಿಶೇಷವಾಗಿ, ದಳ್ಳಿಸೆ–ಜ್ವಲಿಸುತ್ತಿರಲು, ನೋಡಿ ನೋಡಿ–ಅದನ್ನು ನೋಡಿ ನೋಡಿ, ಪುದುವಾೞ್ – ಹುದುವಾದ ಬದುಕು, ಎಂತಕ್ಕುಂ – ಹೇಗೆ ಆಗುತ್ತದೆ; ಇಂತು–ಹೀಗೆ, ಈಗಳ್–ಈಗ, ಆನಾದೆಂ–ನಾನಾದೆನು, ಮೇಣ್–ಅಥವಾ, ಇವನಾದಂ–ಇವನಾದನು, ಎಂದರೆ ನಾನಿರಬೇಕು ಇಲ್ಲ ಇವನಿರಬೇಕು; ಏಕೆ ತಡೆವಿರ್–ಏತಕ್ಕೆ ತಡೆ ಮಾಡುತ್ತಿದ್ದೀರಿ; ಕಯ್ವೊಯ್ದೆವು–ಕೈಗಳನ್ನು ತಟ್ಟಿದೆವು (ಯುದ್ಧಾರಂಭ ಸೂಚನೆ); ಇಂ–ಇನ್ನು, ನೀಂ – ನೀವು, ಸೌದರ್ಯಕ್ಕೆ – ಸಹೋದರಿಕೆಗೆ, ಕನಲ್ವೊಡೆ–ಕೆರಳುವುದಾದರೆ, ಇಂತು, ಇನಿಬರುಂ – ಹೀಗೆ ನೀವಿಷ್ಟು ಜನರೂ, ಕಾದಿಂ-ಯುದ್ಧಮಾಡಿರಿ, ಭರಂಗೆಯ್ವಪೆಂ–ನಿರ್ವಹಿಸುತ್ತೇನೆ. ೮೫ನೆಯ ಪದ್ಯದಲ್ಲಿ ಸೌಂದರ್ಯ ಎಂದು ಇರುವ ಪ್ರತಿಗಳ ಪಾಠ ಇಲ್ಲಿ ಹೊಂದುವುದಿಲ್ಲ. ಪ್ರಾಸಾಕ್ಷರ 'ದ' ಇರುವುದರಿಂದ; ಆದ್ದರಿಂದ ಸೌದರ್ಯ ಸರಿಯಾದ ಪಾಠ ಎಲ್ಲೆಡೆಯೂ, ಕುಸ್ತಿ ಕಾಳಗವಾಡುವವರು ತೋಳ್ತಟ್ಟುವುದು ವಾಡಿಕೆ; ಕೆಯ್ವೊಯ್ ಎಂಬುದಕ್ಕೆ ಅದೇ ಅರ್ಥ, ಕುಸ್ತಿಗೆ ಅದು ನಾಂದಿ.

ವಚನ: ತೊಡರ್ದು–ಸಿಕ್ಕಿ, ತಡೆದ–ತಡಮಾಡಿದ, ಮನ್ಯುಗದ್ಗದ ಕಂಠನಾಗಿ–ದುಃಖದಿಂದ ಮಾತು ಹೊರಡದವನಾಗಿ, ಗದಗದಿಕೆಯನ್ನು ಹೊಂದಿ; ಇದೇನಂ ಮಾಡಿದಿರ್ – ಇದೇನು ಮಾಡಿದಿರಿ, ಏನು ಅನಾಹುತವನ್ನು ಮಾಡಿದಿರಿ ಎಂಬ ಕೋಪದ ನುಡಿ.

೪೯. ಮುಳಿವೊಡಂ–ಕೋಪಿಸುವುದಾದರೂ, ಎಯ್ದೆ–ಚೆನ್ನಾಗಿ, ಕೇಳ್ದು–ಕೇಳಿ, ಮುಳಿ–ಕೋಪಿಸಿಕೊಳ್ಳು; ಪಾಂಡತನೂಜರ–ಪಾಂಡವರು. ಮುನ್ನಿನ–ಮೊದಲಿನ, ಆಳ್ದ–ಆಳಿದ, ಭೂತಳಮುಂ–ರಾಜ್ಯವನ್ನು, ಎಂತುಂ–ಹೇಗೂ, ಈಯದೆ–ಕೊಡದೆ, ಸುಯೋಧನಂ – ದುರ್ಯೋಧನನು, ಉದ್ಧತವೃತ್ತಿಯಿಂ – ಗರ್ವದಿಂದ, ಸುಹೃದ್ಬಳಂ–ಮಿತ್ರ ಸೈನ್ಯಗಳು, ಅಱಿದು–ಸತ್ತು, ಅೞಿಗ್–ನಾಶವಾಗಲು, ಕಾದಿ–ಯುದ್ಧಮಾಡಿ, ಪುದುವಾೞ್ಕೆಗೆ – ಕೂಡಿ ಬದುಕುವುದಕ್ಕೆ, ಒಲ್ಲದೆ – ಒಪ್ಪದೆ, ಇನ್ನುಂ–ಇನ್ನೂ ಕೂಡ, ಅಮ್ಮಳಿಸುವಂ – ಮೇಲೆ ಹಾಯುವವನು; ಈಗಳ್–ಈಗ, ಆತನನೆ–ಅವನನ್ನೇ, ಬೆಸಗೊಳ್–ಕೇಳು; ಸುಯೋಧನಂ – ದುರ್ಯೋಧನನು, ಪುಸಿಯಂ–ಸುಳ್ಳಾಡನು. ಅಪ್ಪೊಡಂ ಆದೊಡಂ ಎಂಬೆಡೆಗಳಲ್ಲಿ ಅಂತ್ಯದ ಅಂ ಸಮುಚ್ಚಯದಂತೆ ಮುಳಿವೊಡಂ ಎಂಬಲ್ಲಿಯೂ ಅಂ ಸಮುಚ್ಚಯವುಂಟು; "ಮಾಡಿದುದುಣ್ಮ್ಯಾತನಾತ್ಮನಘಜಲಧಿಯೊಳೋಲಾಡುವೊಡಂ ಗುಣಗಣದೊಳ್ ಕೂಡುವೊಡಂ ಜನ್ಮಜಲಧಿಯುಂ ದಾಂಟುವೊಡಂ" ಇತ್ಯಾದಿ ಪ್ರಯೋಗಗಳಿವೆ (ಯಶೋಚ. ೪–೨೮).

**ವಚನ**: ಮರುಳ್ತನಮುಂ–ಡಡ್ಡತನವನ್ನು, ತಿಳಿಗೇಡಿತನವನ್ನು;

೫೦. ಹರಿ ಎಂದ ಅಂದಂ–ಕೃಷ್ಣನು ಹೇಳಿದ ರೀತಿ, ಅದು ಹಾಗೆಯೇ–ಅದು ಅಂತೆ ಎಂದರೆ ಕೃಷ್ಣನು ಹೇಳಿದ ಹಾಗೆಯೆ ಇದೆ; ಪಾಂಡುತನಯರ್ – ಪಾಂಡವರು, ನಿರ್ದೋಷಿಗಳ್ – ದೋಷವಿಲ್ಲದವರು, ತಪ್ಪಿಲ್ಲದವರು; ತಥ್ಯಂ–ನಿಜ; ಇಂತು–ಹೀಗೆ, ರಣಸ್ಥಾನದೊಳ್ – ಯುದ್ಧರಂಗದಲ್ಲಿ, ಎರೆಬ್ನುಡಿವೆನೇ – ಸುಳ್ಳಾಡುತ್ತೇನೆಯೆ? ಮದ್ಬಂಧು ಶೋಕಾಗ್ನಿಯಿಂ – ನನ್ನ ಬಾಂಧವರ ಮರಣದ ದುಃಖಾಗ್ನಿಯಿಂದ, ಉರಿದಪ್ಪೆಂ – ಉರಿಯುತ್ತಿದ್ದೇನೆ: ತೊಡರ್ದ–ಸಿಕ್ಕಿಕೊಂಡ, ಎನ್ನಂ–ನನ್ನನ್ನು, ಇಂ–ಇನ್ನು, ಬಿಡು–ಯುದ್ಧಕ್ಕೆ ಬಿಡು; ವಿರೋಧಿಕ್ಷ್ಮಾಪರ್–ಶತ್ರು ರಾಜರು, ಎನ್ನ – ನನ್ನ, ಈ ಗದಾಪರಿಘಾತದಿಂ – ಈ ಪರಿಘದಂತಿರುವ ಗದೆಯ ಏಟಿನಿಂದ, ಅೞ್ಗ್–ನಾಶವಾಗಿ, ತಱ್ಗ್ - ತಗ್ಗಿ, ಮಡಿದು – ಸತ್ತು, ಇಂ ಇನ್ನು. ಅಱ್ಗಾಪದೆ – ನಿರವಶೇಷವಾಗದೆ, ಏಂ ಪೋಪರೇ – ಏನು ಹೋಗುತ್ತಾರೆಯೇ?

**ವಚನ**: ಸಂಕರ್ಷಣಂ–ಬಲರಾಮನು; ಉತ್ಕರ್ಷತೆಯುಂ–ಶ್ರೇಷ್ಠತೆಯನ್ನು; ಪೆಱತುಂ–ಬೇರೆ ಮಾತನ್ನು, ಎಡೆಯಿಲ್ಲ–ಅವಕಾಶವಿಲ್ಲ;

೫೧. ಸುಯೋಧನನಂ ಎನ್ನುಮಂ – ದುರ್ಯೋಧನನನ್ನೂ ನನ್ನನ್ನೂ, ತೊಡರ್ದುರ್ಪ–ತೊಡರಿಸಿ, ಬಿಡಿಂ–ಬಿಡಿರಿ ಎಂದರೆ ಇಬ್ಬರೂ ಕೈ ಮೈ ಕಲಿತು ಯುದ್ಧ ಮಾಡುವಂತೆ ಬಿಡಿರಿ; ಕೌರವಾಧಿಪಂಗೆ – ದುರ್ಯೋಧನನಿಗೆ, ಇಡುವಗೆ ಬದ್ಧ ದ್ವೇಷಿಯಾದ, ಆನಿರೆ–ನಾನಿರಲು, ಇಂ ಪೆಱರೊಳಂ–ಇನ್ನು ಇತರರಲ್ಲಿ, ಮುಳಿಸುಂಟೆ–ಕ್ರೋಧವಿದೆಯೆ, ಪೇಟಿಂ–ಹೇಳಿರಿ: ಮಹಾ ಪ್ರತಿಜ್ಞೆಯೊಳ್–ಮಹತ್ತಾದ

ಪ್ರತಿಜ್ಞೆಯಲ್ಲಿ, ತೊಡರ್ದನುಂ–ಸಿಲುಕಿದವನೂ, ಆಸೆ – ನಾಸೆ ; ಭೂತಳಮದಿರ್ಕೆ –ಭೂಮಿ, ರಾಜ್ಯ ಅದು ಹಾಗಿರಲಿ ; ಎಡೆಗೆಯ್–ಸ್ಥಳವನ್ನು ಸಿದ್ಧಪಡಿಸು, ಮಲ್ಲ ಯುದ್ಧಕ್ಕೆ ಅಖಾಡವನ್ನು ಅಣಿಗೊಳಿಸು ; ಗೆಲಲಾರ್ತರ್ – ಗೆಲ್ಲಲು ಸಮರ್ಥರಾದ ವರು, ಆರ್ಗೆ–ಯಾರು ? ಅಥವಾ ಯಾರಿಗೆ ಸಂಬಂಧಿಸಿದವರು ? ಎರಡುನುಡಿಯದಿರ್ –ಎರಡು ಮಾತಾಡಬೇಡ, ಸುಳ್ಳಾಡಬೇಡ : ಎಂದು, ವೃಕೋದರಂ–ಭೀಮನು, ಹಳಿಯಂ – ಬಲರಾಮನನ್ನು, ನಯದಿಂ – ನಯವಾಗಿ, ಒಡಂಬಡಿಸಿದಂ – ಒಪ್ಪಿಸಿದನು.

ವಚನ: ಸಂಗ್ರಾಮರಂಗಕ್ಕೆ – ಯುದ್ಧರಂಗಕ್ಕೆ, ಅನಿಬರುಮಂ – ಅಷ್ಟು ಜನರನ್ನೂ

೯೨. ಕರಿ ತುರಗ ನರಕಳೇವರ ಪರಿಚಿತಂ – ಆನೆ ಕುದುರೆ ಮನುಷ್ಯರ ಹೆಣ ಗಳಿಂದ ಕಿಕ್ಕಿರಿದ, ರಣಂ–ಯುದ್ಧಭೂಮಿ, ಅಲ್ಲಿ ಮಹಿತಳಂ – ಅಲ್ಲಿ ನೆಲವು, ಕಾದಲ್ಕೆ –ಯುದ್ಧ ಮಾಡುವುದಕ್ಕೆ, ಅರಿದಪ್ಪುದು – ಕಷ್ಟವಾಗುತ್ತದೆ, ಎಂದೆಂದು – ಎಂದೆ ನುತ್ತ, ಅಣಂ – ಸ್ವಲ್ಪವೂ, ಇರದೆ, ಮರುತ್ಸೂನು – ಭೀಮಸೇನನು, ಕೊಳು ಗುಳಮಂ – ಯುದ್ಧಭೂಮಿಯನ್ನು, ಸಮಜಿಸಿದಂ – ಹಸನಾಗಿ ಮಾಡಿದನು. ಇದು ಭೀಮನ ಉತ್ಸಾಹವನ್ನು ತೋರಿಸುತ್ತಿದೆ.

ವಚನ : ವಿಕ್ಷೇಪ – ಅತ್ತ ಇತ್ತ ತೂಗುತ್ತಿರುವುದರಿಂದ, ಹರ್ಷಿತ ಹರ್ಷ ಗೊಳಿಸಲ್ಪಟ್ಟ ; ಪ್ರಹಸ್ತ – ದೊಡ್ಡ ಕೈಗಳಿಂದ ; ಪ್ರಸಾಧಿತ – ವಿಶೇಷವಾಗಿ ಸಾಧಿಸ ಲ್ಪಟ್ಟ ; ಭಾಸುರ – ಪ್ರಕಾಶಮಾನವಾದ ; ಸವ್ಯ–ಬಲದಿಂದ ಎಡಕ್ಕೆ, ಅಪಸವ್ಯ– ಎಡದಿಂದ ಬಲಕ್ಕೆ ತಿರುಗಿಸುವುದು ; ಭ್ರಾಂತ–ಭ್ರಮಣಮಾಡುವುದು : ಉದ್ಭ್ರಾಂತ –ಮೇಲೆತ್ತಿ ತಿರುಗಿಸುವುದು ; ಕರ್ಷಣ–ಎಳೆಯುವುದು : ಮಂಡಳಾವರ್ತನ – ಗುಂಡಾಗಿ ಚಕ್ರದಂತೆ ತಿರುಗುವುದು ; ಇವೆಲ್ಲ ಗದೆಯನ್ನು ತಿರುಗಿಸುವ ವಿಧಾನಗಳು ; ಇವು ಮೂವತ್ತೆರಡು ತೆರನಾಗಿ ಇರುವುವು ; ಈ ವಚನದ ಪಾಠ ಕೆಲವೆಡೆ ಸಂದೇ ಹಾಸ್ಪದವಾಗಿರಬಹುದು ; "ಪರಸ್ಪರ ಕ್ರೋಧಾಧಿಕ್ಷೇಪ ಪರುಷ ವಾಕ್ಕಲಹ ಪ್ರಸ್ತಾವಿತ ಘೋರಸಂಗ್ರಾಮೌ ವಿಚಿತ್ರ ವಿಭ್ರಮಭ್ರಮಿತ ಗದಾ ಪರಿಭಾಸುರ ಭುಜದಂಡೌ" ಎಂದಿರುವ 'ವೇಣೀಸಂಹಾರ'ದ ಪಂಕ್ತಿಗಳನ್ನು ಹೋಲಿಸಿ (VI–೧೧ವ).

೯೩. ಕುಲಾಚಲಪ್ರತತಿಗಳ್–ಕುಲಪರ್ವತಗಳ ಗುಂಪುಗಳು, ಪೊದಲಿಂ ಕಿಟ್ಟಿ – ಬುಡಸಹಿತ ಕಿತ್ತು, ಪ್ರೋದ್ಯತ್ – ಮೇಲೆತ್ತಿದ. ಗದಾಘಾತವಾತದಿಂ– ಗದೆಯ ಬೀಸಿನಿಂದ ಉಂಟಾದ ಗಾಳಿಯಿಂದ, ಆಕಾಶಮಂ – ಆಕಾಶವನ್ನು, ಎಯ್ದೆ–ಚೆನ್ನಾಗಿ, ತೂಳ್ದಿ–ತಳ್ಳಿ, ಕವಿತಂದು–ಮುಚ್ಚುವಂತೆ ಬಂದು, ಅಂಭೋಧಿ ಯೊಳ್ – ಸಮುದ್ರದಲ್ಲಿ, ಸೂಱ್ಸೂಱಿಂದೆ – ಕ್ರಮ ಕ್ರಮವಾಗಿ, ಬಾರಿಬಾರಿಗೆ, ಬೀೞ್ತಂದುವು – ಬೀಳಲು ಆರಂಭಿಸಿದುವು, ಆ ವಾರಾಶಿಗಳ್ – ಆ ಕಡಲುಗಳು.

ಬತ್ತಲ್ -- ಇಂಗಿಹೋಗಲು, ಆಟಿಸಿದುವು – ಬಯಸಿದುವು ; ಸುರ್ಕಿ – ಸಂಕೋಚ ವಾಗಿ, ಬಿಕ್ಕಿದ–ಗೊಳೋ ಎಂದು ಅತ್ತ, ಬಾಯಂತೆ-ಬಾಯಿಯ ಹಾಗೆ, ಅಂಬರಂ-ಆಕಾಶವು, ಸುರುಳ್ದುದು – ಸುರುಳಿಯಾಯಿತು ; ಗದಾಯುದ್ಧದ, ಪೆಂಪು – ಮಹಿಮೆ, ಇದೇಂ–ಇದೇನು ! ಇಲ್ಲಿ 'ಬಿಕ್ಕಿದ ಬಾಯಂತೆ' ಎಂಬ ಶಬ್ದಗಳ ಅರ್ಥ ಸಂದೇಹಾಸ್ಪದ : "ಬಿಕ್ಕು – ಉಚ್ಛ್ವಾಸೇ, ಮಾಂಸ ಛೇದೇಚ" ಎಂದು ಕೇಶಿರಾಜ ; ಬಿಕ್ಕಿದ ಎಂದು ಪಾಠಾಂತರ ಬೇರೆ ಇದೆ. ಇದಕ್ಕೇನರ್ಥ ? (ಸಂ) ವಿಕ್ವ >ಬಿಕ್ಕ ಎಂದರೆ ಆಸೆಯುಮರಿ; ಆಸೆಯ ಮರಿಯ ಬಾಯಿ ಸುರುಟಿಕೊಂಡಿರುವುದೆ? ಬಾಯಂತೆ ಎಂಬುದು ಬಾಡಂತೆ ಎಂದಿರಬಹುದೆ? ಇಲ್ಲಿ ಏನೋ ಕ್ಲೇಶವಿದೆ.

೯೪. ಗದೆಯೊಳ್–ಗದೆಗಳಲ್ಲಿ, ಘಟ್ಟಿಸೆ–ತಾಡಿಸಲು, ಪುಟ್ಟಿದ -- ಹುಟ್ಟಿದ, ಉಲ್ಕತತಿ–ಉಲ್ಕೆಗಳ ಸಮೂಹ, ನೀಳ್ದು–ವಿಸ್ತರಿಸಿ, ಆಕಾಶಮಂ – ಆಕಾಶವನ್ನು, ತಾಪಿಸಂ – ತಾಗುತ್ತಿರಲು, ಆ ದೇವರ ಕಣ್ಗಳೊಳ್–ಆ ದೇವತೆಗಳ ಕಣ್ಣುಗಳಲ್ಲಿ, ಪುದಿದು–ತುಂಬಿ, ಉಳ್ಕೆ–ತೊಳಗಲು, ವಿಳಯೋಳ್ಕಾಶಂಕೆಯಂ ಮಾಡೆ-ಪ್ರಳಯ ಕಾಲದ ಉಲ್ಕಾಪಾತಗಳೋ ಎಂಬ ಸಂದೇಹವನ್ನುಂಟುಮಾಡಲು, ಮೆಟ್ಟಿದ – ತುಳಿದ, ಸೂಚಿಸ್ಮಿಟ್ಟುಗಳಿಂದ – ಒಬ್ಬರದಾಗುತ್ತಲು ಇನ್ನೊಬ್ಬರ ತುಳಿತಗಳಿಂದ, ಬೆಟ್ಟು – ಬೆಟ್ಟಗಳು, ಕಟಿಲಲ್–ಕಳಚಲು, ಭೂಭಾಗಂ–ಭೂತಳವು, ಅಳ್ಳಾಡೆ–ಅಲುಗಾಡಲು, ದುರ್ಯೋಧನ ಭೀಮಸೇನರ ಗದಾಯುದ್ಧಂ – ದುರ್ಯೋಧನ ಭೀಮರ ಗದಾಯುದ್ಧವು, ಮಹಾಭೈರವ – ಮಹಾ ಭಯಂಕರವು, ಆದುದು – ಆಯಿತು.

**ವಚನ** : ವಿದ್ಯಾಧರ ರಣದೊಳ್–ವಿದ್ಯಾಧರರೆಂಬ ದೇವತೆಗಳ ಯುದ್ಧದಲ್ಲಿ : ಇಲ್ಲಿ ಬಹುಶಃ 'ವಿದ್ಯಾಧರಕರಣದೊಳ್' ಎಂದು ಪಾಠವಿರಬೇಕು : "ಕುರುರಾಜಂ ವಿದ್ಯಾಧರಕರಣದೆ ನೆಗೆದಂಬರಕ್ಕೆ ನಡೆಯಂ ಕ್ರಮದಿಂ ತಿರಿಪೆ" (ಗದಾ ೮–೨೫) ಎಂಬುದನ್ನು ನೋಡಿ : 'ವಿದ್ಯಾಧರಕರಣ'ವು ಮೇಲಕ್ಕೆ ನೆಗೆಯುವುದರಲ್ಲಿ ಒಂದು ವರಸೆ ಇರಬೇಕು.

೯೫. ಘೋರೆಂದು–ಘೋರ್ ಎಂದು, ಸಿಡಿಲೆಱಗುವಂತೆ-ಸಿಡಿಲು ಮೇಲೆ ಬೀಳುವಂತೆ, ಒಡನೆ – ಕೂಡಲೆ, ಎಱಗಿ -- ಮೇಲ್ಬಿದ್ದು ; ಆರ್ದು – ಗರ್ಜಿಸಿ, ಮಹೋಗ್ರಘನಗದಾಪರಿಘದಿಂ – ಮಹಾಭಯಂಕರವಾದ, ದೊಡ್ಡದಾದ ಪರಿಘದಂತಿರುವ ಗದೆಯಿಂದ, ಎಡೆಗಿಡೆ-ಇದ್ದ ಸ್ಥಳದಿಂದ ಕದಲುವಂತೆ, ಪೊಯ್ಯೆ– ಹೊಡೆದರೆ, ಭೀಮಂ–ಭೀಮನು, ಧರೆನಡುಗೆ–ಭೂಮಿ ನಡುಗುವಂತೆ, ನೀಳಕುತ್ಕೀಳಂಬೊಲ್–ನೀಲಗಿರಿಯಂತೆ, ಕೆಡೆದಂ–ಬಿದ್ದನು.

**ವಚನ** : ಪ್ರಹರಣದಿಂದೆ-ಹೊಡೆತದಿಂದ; ಅಚೇತನನಾಗಿ–ಶಕ್ತಿಯಿಲ್ಲದವನಾಗಿ ; ಪವಮಾನ ಮಾರ್ಗದೊಳ್–ಆಕಾಶದಲ್ಲಿ; ಬಿಜ್ಜಳಿಸುವ – ವಿಸ್ತರಿಸುವ ಎಂದರೆ ಹೊಗಳುವ ; ಎಮ್ಮಮ್ಮಂಗೆ ನಮ್ಮ ಅಪ್ಪನಿಗೆ : ಸೆಜಸ್–ಮರ್ಮಸ್ಥಾನ.

೯೬. ಈತಂಗೆ-ಇವನಿಗೆ, ಊರುಯುಗ್ಮಂ-ಎರಡು ತೊಡೆಗಳು, ಸೆಜಿನ್-ಮರ್ಮಸ್ಥಾನವು; ಸೆಜಿನಂ ಅಱಿಯದೆ – ಈ ಮರ್ಮಸ್ಥಾನವನ್ನು ತಿಳಿಯದೆ, ಆನ್-ನಾನು, ಇನ್ನೆಗಂ-ಇದುವರೆಗೆ, ಮಾಣ್ದೆಂ-ತಪ್ಪಿದೆನು; ಇಂ-ಇನ್ನು, ಪೋ-ಹೋಗು, ತೆಱಪಂ – ಅವಕಾಶವನ್ನು, ಪಾರ್ದಿರ್ಪೆಂ – ನಿರೀಕ್ಷಿಸುತ್ತಾ ಇರುತ್ತೇನೆ, ಎಂದು ಒಯ್ಯನೆ – ಮೆಲ್ಲಗೆ, ಗದೆಯುಂ – ಗದೆಯನ್ನು, ಅಣಂ – ವಿಶೇಷವಾಗಿ, ಪಾಡುಗೆಯ್ದಿರ್ದು – ಒಳ್ಳೆಯ ಸ್ಥಿತಿಯಲ್ಲಿಟ್ಟುಕೊಂಡು ಎಂದರೆ ಗುರಿಯಿಟ್ಟು, ಭೋರೆಂದು – ಭೋರ್ ಎಂದು ಶಬ್ದ ಮಾಡುತ್ತ, ಎಱಪ:– ಹೊಡೆಯುವ, ಉಗ್ರಾರಾತಿಯ – ಭಯಂಕರನಾದ ಶತ್ರುವಿನ, ಊರುದ್ವಯಮನಿಡೆ – ಎರಡು ತೊಡೆಗಳನ್ನು ಅಪ್ಪಳಿಸಲು, ಗದಾಘಾತದಿಂದೆ–ಗದೆಯ ಹೊಡೆತದಿಂದ, ಊರುಯುಗ್ಮಂ–ಎರಡು ತೊಡೆಗಳು, ಮುಱಿದು–ಭಗ್ನವಾಗಿ, ನುಚ್ಚುನೂಱಾಗಿರೆ–ಚೂರುಚೂರಾಗಿರಲು, ಇಳಾಭಾಗದೊಳ್ – ನೆಲದ ಮೇಲೆ, ಧಾರ್ತರಾಷ್ಟ್ರಂ – ದುರ್ಯೋಧನನು, ಕೆಡೆದಂ–ಬಿದ್ದನು.

೯೭. ದುರ್ಯೋಧನನಿಗೆ ಚರಮ ಶ್ಲೋಕ: ನುಡಿದುದಂ – ಹೇಳಿದ್ದನ್ನು, ಎಯ್ದೆ–ಚೆನ್ನಾಗಿ, ತುತ್ತತುದಿಯೆಯ್ದುವಿನಂ – ತುತ್ತ ತುದಿಯನ್ನು ಮುಟ್ಟುವವರೆಗೂ, ನುಡಿದಂ–ಹೇಳಿದನು; ವಲಂ–ಅಲ್ಲವೆ? ಚಲಂ ಬಿಡಿ[ಪ]ದನ್–ಹಠ ಹಿಡಿದ ಅದನ್ನು, ಎಯ್ದೆ – ಪೂರ್ಣವಾಗುವಂತೆ, ಮುಂ ಪಿಡಿದುದಂ – ಮೊದಲು ಪಟ್ಟು ಹಿಡಿದದ್ದನ್ನು, ಪಿಡಿದಂ–ಹಿಡಿದನು; ಪೂಣ್ದು ಪೂಣ್ಕೆ–ಪ್ರತಿಜ್ಞೆಮಾಡಿದ ಪ್ರತಿಜ್ಞೆ, ಸಲೆ – ಚೆನ್ನಾಗಿ, ನೇರ್ಪಡೆ – ನೇರವಾಗುವಂತೆ, ನಡೆವನ್ನೆಗಂ – ನಡೆಯುವವರೆಗೂ, ನಡೆದಂ–ನಡೆದನು; ಅಳ್ಕದೆ ಬಳ್ಕದೆ–ಹೆದರದೆ ಬಾಗದೆ, ತನ್ನೊಡಲ್–ತನ್ನ ದೇಹ, ಪಡಲ್ವಡುವಿನಂ–ಧ್ವಂಸವಾಗುತ್ತಿರಲು, ಅಣ್ಮುಗುಂದದ ದಲ್ – ಪೌರುಷವು ಕುಗ್ಗದವನಲ್ಲವೆ! ಸುಯೋಧನಂ–ದುರ್ಯೋಧನನು, ಏನಭಿಮಾನಧನಂ–ಏನು ಆತ್ಮಗೌರವದ ಸಂಪತ್ತುಳ್ಳವನೋ!

ವಚನ: ಪತ್ತುವಿಡೆಂ–ಅಂಟಿಕೊಂಡಿರುವುದನ್ನು ಬಿಡೆನು, ಸೇರುವೆ ಅಪ್ಪುವಂತೆ ಬಿಡೆನು; ಎಂದರೆ ಸಂಬಂಧವನ್ನು ಬಿಡೆನು; ನೆಲನಂ ಪತ್ತಿ–ನೆಲವನ್ನು ಅಂಟಿಕೊಂಡು; ಕಿವಿಮ್ಮರವೈರಿ–ಭೀಮನು; ಮುಟ್ಟೆವಂದಾಗಳ್–ಸಮೀಪಿಸಿದಾಗ; ಪರಾಭವಂ ಬಡಿಸದಿರ್ – ಅವಮಾನ ಮಾಡಬೇಡ; ಬಾರಿಸೆ–ವಾರಿಸಿ–ಬೇಡವೆಂದು ನಿವಾರಿಸುತ್ತಿರಲು.

೯೮. ಇದಱೊಳ್–ಈ ಕಿರೀಟದಲ್ಲಿ, ಮೂರ್ಧಾಭಿಷೇಕಂ–ತಲೆಯ ಮೇಲೆ ನೀರು ಹನಿಸುವುದು ಎಂದರೆ ಪಟ್ಟಾಭಿಷೇಕವು, ತನಗೆ – ತನಗೆ, ಸಮಂತು – ಚೆನ್ನಾಗಿ, ಆಯ್ತುಗಡ – ಆಯಿತಲ್ಲವೆ? ಪಿಂಛಾತ ಪತ್ರಂ – ನವಿಲುಗರಿಗಳಿಂದ ಮಾಡಿದ ಕೊಡೆ, ಎತ್ತಂ ಪುದಿದು–ಎಲ್ಲ ಕಡೆಯೂ ವ್ಯಾಪಿಸಿ, ತಣ್ಣೆಳಲ್ ಮಾಡುವುದು ಗಡಂ – ತಂಪಾದ ನೆರಳನ್ನು ಉಂಟುಮಾಡುವುದಲ್ಲವೆ? ಇದು – ಈ

ಕಿರೀಟ, ಏತುಂ–ಹೇಗೂ, ಎಂದುಂ–ಯಾವತ್ತೂ, ಆರ್ಗಪ್ಪೊಡಂ–ಯಾರಿಗಾದರೂ, ಪರ್ವಿದ–ಹಬ್ಬಿದ, ಗರ್ವೋದ್ರೇಕದಿಂ – ಅಹಂಕಾರಾತಿಶಯದಿಂದ, ಬಾಗದು ಗಡಂ–ತಗ್ಗುವುದಿಲ್ಲವಲ್ಲವೆ ? ಎನುತುಂ – ಎಂದು ಹೇಳುತ್ತಾ, ಸಾರ್ತಂದು – ಹತ್ತಿರಬಂದು, ಮಾಣಿಕಂ ಸೂಸೆ – ರತ್ನಗಳು ಚೆಲ್ಲಾಡುತ್ತಿರಲು, ದುರ್ಯೋಧನನ ಮಕುಟಮುಂ–ದುರ್ಯೋಧನನ ಕಿರೀಟವನ್ನು, ಭೀಮಸೇನಂ–ಭೀಮನು, ಕೋಪದಿಂ–ಕೋಪದಿಂದ, ಬಳ್ಪಿಂದೆ – ರಭಸದಿಂದ, ಒದೆದಂ – ಒದೆದನು (ಕಾಲಿನಿಂದ), ಪಿಂಛಾತ ಪತ್ರ ; "ಸಸೌವರ್ಣಕಲಾಪಸ್ಥ ಚಂದ್ರಕೈಃ ಪರಿಕಲ್ಪಿತಂ, ಸುವರ್ಣದಂಡೇನ ರತ್ನೇನ ಪರಿಮಂಡಿತಮ್, ಕಲಶೇನ ತಮುತ್ಥೇನ ಶುಭ್ರೇಣ ಪರಿಶೋಭಿತಂ । ಪಿಂಛಚ್ಛತ್ರಮಿದಂ ಪ್ರಾಹುಃ ಸೀಗುರೀತಿ ವಿಚಕ್ಷಣಾಃ ॥"

**ವಚನ :** ನೆಱಪಿದ–ಪೂರೈಸಿದ ; ಅನಾಗತ ಬಾಧಾವಿಘಾತಮಂ – ಮುಂದೆ ಬರಲಿರುವ ವಿಪತ್ತಿಗೆ ಪರಿಹಾರವನ್ನು ;

೯೯. ಪಿಡಿದ–ಹಿಡಿದುಕೊಂಡ, ಎಡಗೆಯ್ಯ–ಎಡಗೈಯಿನ, ಚಾಮರದ–ಚಾಮರವನ್ನುಳ್ಳ, ದಕ್ಷಿಣಹಸ್ತದ–ಬಲಗೈಯಿನ, ಪದ್ಮದ–ಕಮಲವನ್ನುಳ್ಳ, ಒಳ್ಪು–ಸೊಗಸು, ಒಡಂಬಡೆ–ಒಪ್ಪಲು, ನಸುಮಾಸಿ–ಸ್ವಲ್ಪ ಮಾಸಿ, ಪಾಡೞಿದ–ಸ್ಥಿತಿಕೆಟ್ಟ, ರೂಪಿನೊಳ್ – ಆಕಾರದಲ್ಲಿ, ಉಣ್ಮುವ – ಹೊಮ್ಮುವ, ಗಾಡಿ – ಸೌಂದರ್ಯವು, ನಾಡೆ–ನೋಡಲು, ಕಣ್ಗೆಡಱಿ–ಕಣ್ಣಿಗೆ ಸಿಲುಕಲು ; ತೊಡಂಕಿ–ಸಿಕ್ಕು ಸಿಕ್ಕಾಗಿ, ಪೀಱಿದ – ಕೆದರಿದ, ಕುರುಳ್ಗಳ್ – ತಲೆಕೂದಲುಗಳ್, ಚಿತ್ತದೊಳಾದ – ಮನಸ್ಸಿನಲ್ಲುಂಟಾದ, ಬೇಸಱಂ–ಆಲಸ್ಯವನ್ನು, ನುಡಿವವೊಲಾಗೆ–ಹೇಳುವಂತಾಗಿರಲು, ಬರ್ಪ–ಬರುವ, ಕಮಳಾಯತ ನೇತ್ರೆಯಂ – ತಾವರೆಯಂತೆ ಅಗಲವಾದ ಕಣ್ಣುಗಳುಳ್ಳ, ಇಂದುವಕ್ತ್ರೆಯಂ–ಚಂದ್ರಮುಖಿಯನ್ನು ; "ಪೀಱು–ವಿಕೀರ್ಣೇ"

**ವಚನ :** ಕಂಡು–ನೋಡಿ : ನೀನಾರ್ಗೆ–ನೀನು ಯಾರು, ಯಾರಿಗೆ ಸಂಬಂಧಿಸಿದವಳು ; ಏನೆಂಬೆ–ಏನೆಂದು ಕರೆದುಕೊಳ್ಳುವೆ ಎಂದರೆ ಹೆಸರೇನು ?

೧೦೦. ಪೆಸರೊಳ್–ಹೆಸರಿನಲ್ಲಿ, ಲಕ್ಷ್ಮಿಯೆಂ–ಲಕ್ಷ್ಮಿಯಾಗಿದ್ದೇನೆ, ದ್ರೋಣ ನದೀಜ ಕರ್ಣಭುಜಪಿಂರಾವೇಷ್ಟಿತಂ – ದ್ರೋಣ ಭೀಷ್ಮ ಕರ್ಣರ ಬಾಹುಬಲದಿಂದ ರಕ್ಷಿತವಾದ, ದುರ್ಯೋಧನೋರಸ್ಥಳಾವಸಥಂ ಮಾಡೆ – ದುರ್ಯೋಧನನ ಎದೆಯ ಪ್ರದೇಶವನ್ನು ಮನೆಯನ್ನಾಗಿ ಮಾಡಲು, ತಾಂ–ತಾನು, ಇನ್ನೆಗಂ – ಇದುವರೆಗೆ. ನೆಲಸಿ, ಸಂತಸದೆ – ಸಂತೋಷದಿಂದ, ಇರ್ದೆಂ–ಇದ್ದೆನು ; ನಾರಾಯಣಾದೇಶಂ–ಆ ವಿಷ್ಣುವಿನ ಅಪ್ಪಣೆಯು, ಒಡ್ಡಿಸೆ–ಒದಗಲು, ಆ ಧರಾಧಿಪತಿಯಿಂ–ಆ ರಾಜನಾದ ದುರ್ಯೋಧನನನ್ನು, ಬಿಸುಟು – ಬಿಟ್ಟು, ತೊರೆದು, ಪಾಂಡು ಪ್ರಿಯಪುತ್ರರೊಳ್–ಪಾಂಡವರಲ್ಲಿ, ನೆರೆಯಲೆಂದು – ಸೇರಬೇಕೆಂದು, ಈಗಳ್ – ಈಗ, ಅಂ – ನಾನು. ಪೋದಪೆಂ–ಹೋಗುತ್ತಿದ್ದೇನೆ.

೧೦೧. ಪೊಸತಲರ್ದ – ಹೊಸದಾಗಿ ಅರಳಿದ, ಅಂಬುಜಂಗಳ–ತಾವರೆಗಳ,

ಎಸಳ್ಗಳೊಳ್-ಎಸಳುಗಳಲ್ಲಿ, ನಡೆಪಾಡುವಳೇಂ-ಓಡಾಡುವವಳೇನು? ಪಯೋಧಿಯಂ-ಸಮುದ್ರವನ್ನು, ಪೊಸೆದೊಡೆ-ಕಡೆದರೆ, ಪುಟ್ಟಿದಯ್-ಹುಟ್ಟಿದೆಯಾ? ಮುರವಿರೋಧಿಯ-ಮುರಾರಿಯ ಎಂದರೆ ವಿಷ್ಣುವಿನ (ಕೃಷ್ಣನ), ಪತ್ನಿಯೆ-ಹೆಂಡತಿಯೆ? ಮಿಂಚುತಿರ್ಪ ಕೂರಸಿಗಳ ಮೇಲೆ - ಮಿಂಚುತ್ತಿರುವ ಹರಿತವಾದ ಕತ್ತಿಗಳ ಮೇಲೆ, ಸಂಚರಿಪೆ-ಓಡಾಡುತ್ತೀಯೆ; ವೈರಿ ನರಾಧಿಪ ಸೈನ್ಯವಾರ್ಧಿಯಂ-ಶತ್ರುರಾಜರ ಸೈನ್ಯ ಸಾಗರವನ್ನು, ಪೊಸೆದೊಡೆ-ಕಡೆದರೆ, ಪುಟ್ಟಿದೀ ನಿನಗೆ-ಹುಟ್ಟಿದ ಈ ನಿನಗೆ, ಎನ್ನಂ - ನನ್ನನ್ನು, ವಕ್ರಿಸಲ್ - ಪ್ರತಿಭಟಿಸಲು, ತೀರ್ಗುಮೇ - ಸಾಧ್ಯವಾಗುತ್ತದೆಯೆ?



೧೦೨. ಕುರುವಂಶಾಂಬರ ಭಾನುವಂ - ಕುರುಕುಲಾಕಾಶಕ್ಕೆ ಸೂರ್ಯನಾದ ದುರ್ಯೋಧನನನ್ನು, ಆನುಳ್ಳಿನಂ-ನಾನು ಇರುತ್ತಿರಲು, ಬಿಸುಡಿಸಲ್ಕೆ-ಬಿಡುವಂತೆ ಮಾಡುವುದಕ್ಕೆ, ತೀರದು-ಸಾಧ್ಯವಾಗದು; ಆನಿರೆ-ನಾನು ಇರಲು, ನಾರಾಯಣನೆಂಬನುಂ-ನಾರಾಯಣನೆನ್ನುವವನೂ, ಪ್ರಭುವೆ ಸ್ವಾಮಿಯೆ? ಅಂಬುರುಹಾಕ್ಷೀ-ತಾವರೆಗಣ್ಣ ಲಕ್ಷ್ಮಿಯೇ, ನೀನ್-ನೀನು, ಈ ಮರುಳ್ಮಾತಂ-ಈ ಹುಚ್ಚು ನುಡಿಯನ್ನು, ಬಿಸುಡು-ಬಿಸಾಡು, ತೊರೆ; ಅಂಜದಿರ್-ಹೆದರದಿರು, ಕುರುಕ್ಷ್ಮಾಪಾಳನಿರ್ದಲ್ಲಿಗೆ - ದುರ್ಯೋಧನನು ಇದ್ದ ಸ್ಥಳಕ್ಕೆ, ನಡೆ - ಹೊರಡು ಎಂದು, ಅರವಿಂದಾಲಯೆಯಂ - ಲಕ್ಷ್ಮಿಯನ್ನು, ಮಗುಳ್ಚಿದಂ - ಹಿಂದಿರುಗುವಂತೆ ಮಾಡಿದನು; ಆ ದ್ರೌಣಿ - ಆ ಅಶ್ವತ್ಥಾಮ, ಅದೇನ್ ಶೌರ್ಯಾರ್ಥಿಯೋ-ಅದೇನು ಪ್ರತಾಪಾಭಿಲಾಷಿಯೋ?

**ವಚನ**: ಘಟಚೇಟಿಕೆಯಂ-ಮಡಕೆ ಹೊರುವ ತೊತ್ತನ್ನು, ಕುಂಭದಾಸಿಯನ್ನು; ಶೋಣಿತ-ರಕ್ತದಿಂದ, ಆರ್ದ್ರ-ತೊಯ್ದು; ಕೋಟಲೆಗೊಳ್ವ-ವ್ಯಥೆಪಡುವ; ಮಂಡಲಾಗ್ರನುಂ-ಕತ್ತಿಯನ್ನುಳ್ಳವನೂ;

೧೦೩. ನೆಗಳ್ದ ನೆಗಟ್ತೆಗೆ-ಮಾಡಿದ ಕಾರ್ಯಕ್ಕೆ, ಪ್ರಸಿದ್ಧವಾದ ಕೀರ್ತಿಗೆ, ಆವೆಡೆಯೊಳಂ-ಯಾವಸ್ಥಳದಲ್ಲೂ, ಪಟಿಯಿಲ್ಲದೆ-ನಿಂದೆಯಿಲ್ಲದೆ, ಪೂಣ್ದು-ನಿರ್ವಹಿಸಿ, ಸಂದವೈರಿಗಳನೆ - ಪ್ರಸಿದ್ಧರಾದ ಶತ್ರುಗಳನ್ನೇ ಕೊಂದು, ವಾರಿಧಿಪರೀತ ಮಹೀತಲಮಂ - ಕಡಲು ಬಳಸಿರುವ ಭೂಪ್ರದೇಶವನ್ನು, ನಿಮಿರ್ಚಿ - ವಿಸ್ತರಿಸಿ; ಜಟ್ಟಿಗರಂ - ಶೂರರನ್ನು, ಅಯೋನಿಸಂಭವರಂ - ದ್ರೋಣನನ್ನು, ಆಳ್ದು - ಆಳಿ ಎಂದರೆ ಅವರಿಗೆ ಸ್ವಾಮಿಯಾಗಿ, ಅರಿವರ್ಗದೊಳ್ - ಶತ್ರುಗಳ ಸಮೂಹದಲ್ಲಿ, ಆಂತು - ಎದುರಿಸಿ, ಕಾದಿಯುಂ - ಯುದ್ಧಮಾಡಿಯೂ, ಬಗೆ - ಮನೋರಥವು, ದೊರೆಕೊಂಡುದಿಲ್ಲ-ಲಭಿಸಲಿಲ್ಲ; ಇದು, ವಿಧಾತ್ರನ-ವಿಧಿಯ, ದೋಷಮೊ-ತಪ್ಪೋ, ನಿನ್ನ ದೋಷಮೋ-ನಿನ್ನ ತಪ್ಪೋ?

೧೦೪. ಆದೊಡಂ-ಆದರೂ, ಎನ್ನಂ-ನನ್ನನ್ನು, ಬಂಚಿಸಿ - ಮೋಸಮಾಡಿ, ಎಂದರೆ ನನಗೆ ತಿಳಿಯದಂತೆ, ಪೋದುದಱಿಂ-ಹೋದದ್ದರಿಂದ, ನಿನಗೆ, ಹಗೆವರಿಂ

–ಹಗೆಗಳಿಂದ. ಇನಿತು – ಇಷ್ಟು, ಎಡಱೊಯ್ತು – ಕೇಡಾಯಿತು : ಆದಿತ್ಯತೇಜ - ಸೂರ್ಯತೇಜವನ್ನುಳ್ಳವನೇ, ದುರ್ಯೋಧನನೇ, ಬೆಸಸು – ಅಪ್ಪಣೆ ಮಾಡು, ಇದಿರಾದ –ಪ್ರತಿಭಟಿಸಿದ, ಪೃಥಾಸುತರಂ–ಪಾಂಡವರನ್ನು, ಉಱಿಯಲೀಯದೆ–ನಿಶ್ಶೇಷವಾಗಿ, ಕೊಲ್ವೆಂ–ಕೊಲ್ಲುತ್ತೇನೆ.

ವಚನ: ಒತ್ತಂಬದಿಂ–ಬಲಾತ್ಕಾರದಿಂದ ;

೧೦೫. ಎನಗೆ–ನನಗೆ, ಇನಿತೊಂದು – ಇಷ್ಟೊಂದು, ಅವಸ್ಥೆ – ಕಷ್ಟಸ್ಥಿತಿ, ವಿಧಿಯೋಗದಿಂ – ದೈವಯೋಗದಿಂದ, ಆದುದು – ಆಯಿತು ; ಇದಕೆ – ಇದಕ್ಕೆ, ನೀಂ–ನೀನು, ಅೞಲ್ದು – ದುಃಖಿಸಿ, ಇನಿತು–ಹೀಗೆ, ಮನಃಕ್ಷತಂಬಡದಿರು–ಮನಸ್ಸಿನಲ್ಲಿ ನೋಯಬೇಡ ; ಪುರಾತನ ಪುರುಷಂ ಮುರಾರಿ–ಆದಿ ಪುರುಷನಾದ ಶ್ರೀಕೃಷ್ಣ, ಕೆಲದೊಳ್ ನಿಲೆ – ಮಗ್ಗುಲಲ್ಲಿ ನಿಲ್ಲಲು ಎಂದರೆ ಸಹಾಯವಾಗಿರಲು, ಪಾಂಡವರಂ–ಪಾಂಡವರನ್ನು, ಗೆಲಲ್ – ಗೆಲ್ಲಲು, ಆಗದು : ನೀಂ–ನೀನು, ಕೊಲಲಾರ್ಪೊಡೆ–ಕೊಲ್ಲಲು ಸಮರ್ಥನಾಗಿದ್ದರೆ, ಆಗದು – ಆಗುವುದಿಲ್ಲ, ಬೇಡ, ಎಂಬೆನೆ – ಎಂದು ಹೇಳುವೆನೆ? ವೈರಿಗಳಂ – ಶತ್ರುಗಳನ್ನು, ತಱಿದೊಟ್ಟಿ – ಕತ್ತರಿಸಿ ಹಾಕಿ, ಎನ್ನಸುವುಳ್ಳಿನಂ–ನನ್ನ ಪ್ರಾಣವಿರುತ್ತಿಲು, ಎಯ್ದೆವಾ – ಹತ್ತಿರಕ್ಕೆ ಬಾ. ಗಡಾ –ಅಲ್ಲವೇ

ವಚನ: ಇಕ್ಕಿದ–ಕೊಂದ ; ಒಸಗೆವಾತಂ–ಸಂತೋಷದ ಮಾತನ್ನು ;

೧೦೬. ಮಗನೞಲೊಳ್ – ಮಗನ ದುಃಖದಲ್ಲಿ, ಎಂದರೆ ನನ್ನ ಮಗ ಕರ್ಣನ ಸಾವಿನಲ್ಲಿ, ಕರಂ – ವಿಶೇಷವಾಗಿ, ಮಱುಗುತಿರ್ಪಿನಂ – ಕುದಿಯುತ್ತಿರಲು, ಎನ್ನ ತನೂಜನ–ನನ್ನ ಮಗನ, ಆಳ್ವಸಾಮಿಗಂ– ಆಳುವ ಪ್ರಭುವಿಗೂ, ಅೞಿವಾಗೆ–ಸಾವಾಗಲು, ಶೋಕರಸಂ–ದುಃಖದ ಭಾವವು, ಇರ್ಮಡಿಸಿತ್ತು – ಎರಡರಷ್ಟಾಯಿತು : ಇಲ್ಲಿಗೆ – ಈ ಸಮಯಕ್ಕೆ, ಜಳಪ್ರವೇಶಂ – ನೀರಿನಲ್ಲಿ ಹೋಗುವುದು, ಪದಂ–ಹದನು ; ಎಂದು, ವಾರಿಜನಾಥಂ–ಸೂರ್ಯನು, ನಿಶ್ಚಯಿಸಿ–ನಿರ್ಣಯಮಾಡಿಕೊಂಡು, ಅನಾಥನಾಗಿ – ದಿಕ್ಕಿಲ್ಲದವನಾಗಿ, ತೊಟ್ಟಗೆ – ಬೇಗನೆ, ಮುೞುಪಂತೆ ವೊಲ್–ಮುಳುಗುವ ಹಾಗೆ, ಅಪರಾಂಬುರಾಶಿಯೊಳ್–ಪಶ್ಚಿಮ ಸಮುದ್ರದಲ್ಲಿ, ಕಡುಕೆಯ್ದು ಶೀಘ್ರವಾಗಿ. ಮುೞುಗಿದಂ–ಮುಳುಗಿದನು.

ವಚನ: ಆ ಪ್ರಸ್ತಾವದೊಳ್–ಆ ಸಮಯದಲ್ಲಿ ; ಇರ್ದರೆಗೆತ್ತು–ಇದ್ದರೆಂದೇ ಭಾವಿಸಿ; ನಿಟ್ಟಾಲಿಯಾಗಿ–ಚಾಚಿದ ಕಣ್ಣುಳ್ಳವನಾಗಿ ಎಂದರೆ ಎಡೆಬಿಡದೆ ನೋಡುತ್ತ ; ನಾೞಿಯನಿಟ್ಟು – ಮುತ್ತಿಗೆ ಹಾಕಿ ; ಬಾಯ್ಮಾಡಿ–ಕೂಗಿ, ಗದರಿ, ಬೆದರಿಸಿ : ಪಾಂಡವರೆ ಗೆತ್ತು–ಪಾಂಡವರೆಂದೇ ಭ್ರಮಿಸಿ ; ಉತ್ತಮಾಂಗಂಗಳಂ–ತಲೆಗಳನ್ನು ; ಕೊಳ್–ತೆಗೆದುಕೋ ! ಇಲ್ಲಿ 'ನಿಟ್ಟಾಲಿ' ಎಂಬುದರ ಪಾಠದಲ್ಲಿ ಸಂದೇಹಕ್ಕೆ ಎಡೆ ಇದೆ : ನಿಟ್ಟುರಿ ಎಂದು ಪಠಾಂತರವಿದೆ ; ಬೀಡಿಂಗೆ ನಿಟ್ಟುರಿಗೊಂಡು ಎಂಬ ಪ್ರಯೋಗವಿದೆ (ಗದಾ ೯–೨೭ಗ);

೧೦೭. ಬಾಲಕಮಳಂಗಳಂ–ಎಳೆಯ ಕಮಲಗಳನ್ನು, ಕಮಳಾಲಯದಿಂ–ಸರೋವರದಿಂದ, ಕಿೞ್ದು – ಬಿಡಿಸಿ, ತರ್ಪವೊಲ್ – ತರುವಂತೆ, ನೀಂ – ನೀನು, ತಂದಯ್ – ತಂದಿದ್ದೀಯೆ ; ಬಾಲಕರ– ಪಾಂಡುಕುಮಾರರ, ತಲೆಗಳ್ ತಲೆಗಳು ! ಅಕ್ಕಟ – ಅಯ್ಯೋ, ಬಾಲಕ ವಧ ದೋಷಂ – ಬಾಲಕರನ್ನು ಕೊಂದ ಪಾಪ ! ಎಂತು–ಹೇಗೆ, ನೀಂ–ನೀನು, ನೀಗಿದಪಯ್–ಕಳೆದುಕೊಳ್ಳುತ್ತೀಯೆ ?

ವಚನ : ಅಂತೆಂಬುದೇನ್ – ಹಾಗೆನ್ನುವುದು ಏನು ? ಸೂನುಗಳಪ್ಪ–ಮಕ್ಕಳಾದ ; ಸಿಗ್ಗಾಗಿ–ಅವಮಾನಹೊಂದಿ, ನಾಚಿ ;

೧೦೮. ಬಿಳಿಯ ತಾವರೆಯೆಸಳೊಳ್ – ಬಿಳಿದಾದ ತಾವರೆಯ ರೇಕಿನಲ್ಲಿ, ಮಾಡಿದ, ಬೆಳ್ಗೊಡೆ–ಬಿಳಿಕೊಡೆ, ರಯ್ಯಮಾಗೆ–ರಮ್ಯವಾಗಲು ; ಎಡದ ಕೆಯ್ಯೊಳ್–ಎಡಗೈಯಲ್ಲಿ, ಪಿಡಿದ–ಹಿಡಿದ, ಬೆಂಬೊನ್ನ–ಕೆಂಪು ಚಿನ್ನದ, ಕಾವಿನ–ಹಿಡಿಯನ್ನುಳ್ಳ, ಚಾಮರಂ–ಚಾಮರವು, ಅಮರ್ದಿರೆ– ಸೇರಿರಲು, ಭೇರಿ ಸಿಂಹಾಸನಮುಂ–ಭೇರಿಗಳೂ ಸಿಂಹಾಸನವೂ, [ಅಮರ್ದಿರೆ–ಕೂಡಿರಲು], ಬಟೆಯೊಳ್–ಸಮೀಪದಲ್ಲಿ, ಜವಂಪಿಳಿರೆ–ವೇಗದಿಂದ ಅಲುಗಾಡಲು, ರಾಜ್ಯ ಚಿಹ್ನಂಗಳ್ವೆರಸು – ರಾಜ್ಯ ಲಾಂಛನಗಳ ಸಹಿತವಾಗಿ, ಇಂತು–ಹೀಗೆ, ನಡೆತಂದು–ಬಂದು, ರಾಜ್ಯಲಕ್ಷ್ಮಿ–ರಾಜ್ಯವೆಂಬ ಲಕ್ಷ್ಮಿಯು, ಬಳೆದ–ಬೆಳೆದ, ಸಂತೋಷದ, ಅಂತಮಂ–ಪಾರವನ್ನು, ಎಯ್ದೆ–ಮುಟ್ಟಲು, ಸಹಜ ಮನೋಜನಂ – ಸಹಜಮನೋಜನಾದ ಅರಿಕೇಸರಿಯನ್ನು, ಅರ್ಜುನನನ್ನು, ನಾಡೋಜನಂ–ನಾಡಿನ ಗುರುವನ್ನು ಎಂದರೆ ಇಲ್ಲಿ ಅರ್ಜುನನನ್ನು, ಪತ್ತಿದಳ್–ಸೇರಿಕೊಂಡಳು, ಈ ಪದ್ಯದಲ್ಲಿ ಹಲವು ಕ್ಲೇಶಗಳಿವೆ (೧) ಭೇರಿ ಸಿಂಹಾಸನ [ಮುಂ] ಎಂಬುದಕ್ಕೆ ಒಂದು ನ್ಯೂನ ಕ್ರಿಯಾಪದವಿಲ್ಲ, (೨) ಬಟೆಯೊಳ್ ಎಂಬಲ್ಲಿನ ೞ. ಳಕಾರ ಪ್ರಾಸಕ್ಕೆ ಹೊಂದುವುದಿಲ್ಲ. ಳಟಗಳ ಮಿಶ್ರ ಪ್ರಾಸವೆಂದು ಇದನ್ನು ಭಾವಿಸಿದರೆ ಪಂಪನು ಕ್ವಚಿತ್ತಾಗಿ ಹೀಗೆ ಮಿಶ್ರಣ ಮಾಡುವನೆಂಬುದಕ್ಕೆ ಉದಾಹರಣೆಗಳಿವೆ ; ಈ ಕ್ಲೇಶ ತಪ್ಪುತ್ತದೆ.

ತ್ರಯೋದಶಾಶ್ವಾಸಂ ಸಂಪೂರ್ಣಂ

## ಚತುರ್ದಶಾಶ್ವಾಸಂ

೧. ಹರಿಗಂ–ಅರ್ಜುನನು, ಶ್ರೀ ರಾಮಾಲಿಂಗಿತ ವಿಪುಲೋರಸ್ಥಂ – ಲಕ್ಷ್ಮಿ ಎಂಬ ವನಿತೆಯಿಂದ ತಬ್ಬಲ್ಪಟ್ಟ ವಿಶಾಲವಾದ ಎದೆಯುಳ್ಳವನು. ಭಾಸ್ವರ ಪ್ರತಾಪಂ – ಸೂರ್ಯನ ಪ್ರತಾಪವುಳ್ಳವನು, ನಿಜದೋರ್ಮೇರು ಮಥಿತಾರಿಕೂಪಾರಂ –ತನ್ನ ಬಾಹುಗಳೆಂಬ ಮೇರುಪರ್ವತದಿಂದ ಕಡೆಯಲ್ಪಟ್ಟ ಶತ್ರುಸಾಗರವುಳ್ಳವನು, ಸಂಹಾರಿತಾರಿಶೌರ್ಯಂ–ಧ್ವಂಸಮಾಡಿದ ಶತ್ರು ಪರಾಕ್ರಮವುಳ್ಳವನು.

೨. ತನ್ನಿಱಿದು – ತಾನು ಯುದ್ಧಮಾಡಿ, ಗೆಲ್ದ–ಗೆದ್ದ, ಕೊಳುಗುಳಮಂ– ಯುದ್ಧರಂಗವನ್ನು, ನೋಡಲ್–ನೋಡುವುದಕ್ಕಾಗಿ, ಚಕ್ರಪಾಣಿಯುಂ – ಕೃಷ್ಣನೂ, ತನ್ನ ಸಹೋತ್ಪನ್ನರುಂ–ತನ್ನ ಸಹೋದರರೂ, ಒಡವರೆ–ಸೇರಿ ಬರಲು, ಬಂದು, ವಿಪನ್ನೋಗ್ರಾರಾತಿ ವರ್ಗಂ–ಸತ್ತ ಭೀಕರ ಶತ್ರುಸಮೂಹಗಳನ್ನುಳ್ಳವನು. ಆಹವ ಧರೆಯಂ–ಯುದ್ಧಭೂಮಿಯನ್ನು:

ವಚನ: ಎಯ್ದು – ಮುಟ್ಟಿ, ತಲುಪಿ; ಅಂತಕ ಆನನಮಂ – ಯಮನ ಬಾಯನ್ನು; ಸಂಹತಿಯುಮಂ – ಸಮೂಹವನ್ನೂ; ಎಣಿಕೆಗಱಿದ – ಲೆಕ್ಕಕ್ಕೆ ಮೀರಿದ, ಅಸಂಖ್ಯಾತವಾದ; ಅಧೋಕ್ಷಜಂ–ಶ್ರೀ ಕೃಷ್ಣನು, ಅಜಾತ ಶತ್ರುವಂ– ಧರ್ಮರಾಜನನ್ನು ;

೩. ಶಾತ–ಹರಿತವಾದ, ಶರಾಗ್ನಿ–ಬಾಣಗಳ ಉರಿಯಿಂದ. ಭಗ್ನ–ಹಾಳಾದ, ಭಟಕೋಟಿ – ಕೋಟ್ಯಂತರ ಯೋಧರಿಂದ, ವಿಭೀಷಣಂ – ಭಯಂಕರವಾದದ್ದು ; ಉಗ್ರ . . . . ಬುಕಂ: ಉಗ್ರ – ಭಯಂಕರವಾದ, ವೈರಿ–ಶತ್ರುಗಳ, ಸಂಘಾತ– ಸಮೂಹಗಳ, ಕರೀಂದ್ರ–ಆನೆಗಳ, ರುಂದ್ರ–ವಿಸ್ತಾರವಾದ, ಕಟಕೂಟ–ಕಪೋಲದ ತುದಿಯಿಂದ, ಪರಿಚ್ಯುತ – ಸೋರುತ್ತಿರುವ, ಭೃಂಗಮಾಲಿಕಾ ಪೀತಂ–ದುಂಬಿಗಳ ಮಾಲೆಯಿಂದ ಕುಡಿಯಲ್ಪಟ್ಟ, ಮದಾಂಬುಕಂ – ಮದೋದಕವನ್ನುಳ್ಳದ್ದು ; ಪ್ರಕೃತಿ – ಸಹಜವಾದ, ರಕ್ತಜಲಾಸವ–ರಕ್ತ ಜಲವೆಂಬ ಮದ್ಯದಿಂದ, ಮತ್ತ – ಸೊಕ್ಕಿದ, ಯೋಗಿನೀವ್ರಾತ–ಜೋಗಿಣಿಗಳ ಗುಂಪುಗಳಿಂದ. ಪರೀತ–ಬಳಸಲ್ಪಟ್ಟ, ಭೂತ–ಪಿಶಾಚಿಗಳ, ಸದನಂ–ಮನೆಯಾದದ್ದು ; ಕದನ ತ್ರಿಣೇತ್ರನಾ–ಅರ್ಜುನನ, ಕದನಂ – ಯುದ್ಧವು, ಇಲ್ಲಿ ಪ್ರಕೃತಿ ಎಂಬುದಕ್ಕೆ ಪ್ರಸೃತಿ ಎಂದು ಪಾಠವಿದ್ದಿರ ಬಹುದು.

೪. ಸ್ಫುರಿತ ವರೂಥ ಚಕ್ರಹತಿಯಿಂ–ಪ್ರಕಾಶಮಾನವಾದ ರಥಗಳ ಗಾಲಿಗಳ ಹೊಡೆತದಿಂದ, ಧರಣೀತಳಂ – ಭೂ ಪ್ರದೇಶವು, ಅತ್ತಂ ಇತ್ತಂ–ಅಲ್ಲೂ ಇಲ್ಲೂ, ಅ[ಬ್ಬಿ]ರಿಯೆ – ಮುಳುಗಿ ಎಂದರೆ ತಗ್ಗಾಗಿ ಭಿನ್ನವಾಗಲು (?); ಬಗೆದು ನೋಡುತ್ತಿಪ್ಪಡೆ – ಭಾವಿಸಿ ನೋಡಿದರೆ, ವಿಯತ್ತಳಂ – ಆಕಾಶಪ್ರದೇಶವು, ನಾಡೆ – ವಿಶೇಷವಾಗಿ, ಪತತ್ಪತತ್ರಿ – ಬೀಳುವ ಬಾಣಗಳ, ಜರ್ಜರಿತಮೆ – ಚೂರುಗಳಿಂದ

ಕೂಡಿದ್ದೆ ; ದಿಕ್ತಟಂ – ದಿಕ್ಪ್ರದೇಶಗಳು, ರಿಪುನರಾಧಿಪರಕ್ತಧುನೀ ಪ್ರವಾಹ–ಶತ್ರು ರಾಜರ ರಕ್ತದ ನದಿಯ ಪ್ರವಾಹದಿಂದ, ಪಿಂಜರಿತಮೆ–ಕೆಂಪು ಹಳದಿಮಿಶ್ರ ಬಣ್ಣ ವುಳ್ಳದ್ದೇ, ಕದನ ತ್ರಿಣೇತ್ರನಾ–ಅರ್ಜುನನ, ಬೀರಮಂ–ಪ್ರತಾಪವನ್ನು, ಪೊಗಳ್ವಂ–ಹೊಗಳುವವನು, ಏವೊಗಳ್ವಂ–ಏನು ಹೊಗಳುವನು ?

**ವಚನ**: ಬಾಯಬಿಡು ಪಳಯಿಸುತ್ತುಂ – ಬಾಯಿ ಬಳಲುವಂತೆ ಪ್ರಲಾಪ ಮಾಡುತ್ತ ; ಯೂಥಪತಿ–ಹಿಂಡಿನ ಒಡೆಯ ಸಲಗ ; ಕರೇಣುಗಳುಮಂ–ಹೆಣ್ಣಾನೆಯ ಮರಿಗಳನ್ನು ; ಅಡಪ್ಪಿಲ್ಲದೆ–ಆಶ್ರಯವಿಲ್ಲದೆ, ಅವಲಂಬವಿಲ್ಲದೆ ; **ಬಂಬಲ ಬಾಡಿದ–ಅಧಿಕವಾಗಿ ಬಾಡಿದ (?)**

೩. ಇಱಿವ–ಸಡಿಲವಾಗುತ್ತಿರುವ (?), ಪಿಣಿಲ್–ಜಡೆ ; ತೆರಳ್ದು–ಒಟ್ಟಾಗಿ, ಒಱಿವ–ಸುರಿಯುವ, ಕಣ್ಬನಿ–ಕಣ್ಣೀರು ; ಮಾಣದೆ–ಬಿಡದೆ, ಪೊಯ್ದೆ–ಹೊಡೆದುಕೊಳ್ಳಲು, ಶೋಕದ–ದುಃಖದ, ಅಚ್ಚಿಱಿದವೊಲ್–ಅಚ್ಚೊತ್ತಿದ ಹಾಗೆ, ಇರ್ದ–ಇದ್ದ, ಬಾಸುಂಡಿನೊಳ್–ಬಾಸುಂಡೆಗಳಲ್ಲಿ, ಅಱ್ದು–ತಗ್ಗಾಗಿ, ಕನಲ್ದು–ಕೆರಳಿ, ಬೞಲ್ದು–ಆಯಾಸಗೊಂಡು, ಜೋಲ್ದ–ಜೋಲಿದ, ಮೆಯ್–ಮೈಗಳು ; ಮಱುಗುವ–ವ್ಯಥೆಪಡುವ, ಬೇಗದೊಳ್–ಹೊತ್ತಿನಲ್ಲಿ, ಅಣಂ–ಸ್ವಲ್ಪವೂ, ದೆಸೆಗಾಣದ–ದಿಕ್ಕನ್ನು ಕಾಣದ-ಎಂದರೆ ಕಣ್ಣಲ್ಲಿ ನೀರು ತುಂಬಿ ಕಾಣಲು ಕಷ್ಟವಾದ, ನೋಟಂ – ನೋಟವು, ಆರುಮಂ – ಯಾರನ್ನೂ, ಮಱುಗಿಸೆ – ದುಃಖಿಸುವಂತೆ ಮಾಡಲು, ವೈರಿನೃಪಾಂಗನಾಜನಂ–ಶತ್ರುರಾಜರ ಸ್ತ್ರೀ ಜನರು, ಕರುಣಂಬರೆ–ಕರುಣೆಯೇ ಬಂದಂತೆ, ಅಂದು–ಆಗ, ಬಂದುದು–ಬಂತು.

೬. ಏಗೆಯ್ದುಂ–ಏನು ಮಾಡಿಯೂ, ಎನ್ನಧರೆಯ–ನನ್ನ ರಾಜ್ಯದ, ಒರ್ಪಾಗಮುಮಂ–ಒಂದು ಭಾಗವನ್ನೂ, ನೀಮೆ–ನೀವೆ, ಬೆಸಸೆಯುಂ–ಹೇಳಿದರೂ, ಕುಡದೆ–ಕೊಡದೆ, ಇನಿತಂ–ಇಷ್ಟನ್ನು, ಮೇಗಿಲ್ಲದೆ–ಲೇಸಿಲ್ಲದೆ (?), ನಾಗಧ್ವಜಂ–ದುರ್ಯೋಧನನು, ನೆಗಱ್ದು–ಮಾಡಿ, ಆಱಿದಂ–ಸತ್ತನು ; ಅಯ್ಯ–ತಂದೆಯೇ, ನೀಂ–ನೀವು, ಅದರ್ಕೆ–ಅದಕ್ಕಾಗಿ, ಅಱಲದಿರಿಂ–ವ್ಯಥೆ ಪಡದಿರಿ.

೭. ಪಗೆ – ದ್ವೇಷವು, ಆತನ – ಅವನ, ಒಡವೋಯ್ತು – ಜೊತೆಯಲ್ಲಿ ಹೋಯಿತು ; ಆಂ–ನಾನು, ಆತನಿಂ–ಅವನಿಗಿಂತ, ಅಗ್ಗಳದ–ಶ್ರೇಷ್ಠನಾದ, ಮಗನೆನ್–ಮಗನಾಗಿದ್ದೇನೆ ; ನಖಮಾಂಸ ಪ್ರೀತಿಯೊಳೆ–ಉಗುರು ಮಾಂಸದ ಎಂದರೆ ಅತಿ ಅನ್ಯೋನ್ಯವಾದ ಪ್ರೀತಿಯಲ್ಲೇ, ನೆಗೞ್ವೆಂ–ನಡೆದು ಕೊಳ್ಳುವೆನು ; ಪೆಱಮಾತೇಂ–ಬೇರೆ ಮಾತೇನು ? ಪಂಬಲಿಸದೆ–ಹಂಬಲಿಸದೆ, ಎನ್ನ–ನಾನು, ಪೇೞ್ದುದುಗೆಯ್ಯಿಂ–ಹೇಳಿದುದನ್ನು ಮಾಡಿರಿ.

೮. ಎನಗೆ – ನನಗೆ, ತನಯಶತಮಾದುದಲ್ತು – ನೂರು ಮಕ್ಕಳಾದುದಲ್ಲ, ಅನಿವಾರಿತ – ತಡೆಯಲಾಗದ, ದುಃಖಶತಮೆ–ನೂರು ದುಃಖಗಳೆ, ತಾಂ–ತಾನು, ಆದುದು-ಆಯಿತು, ಅವಂ-ಅವುಗಳನ್ನು, ನೆನೆಯೆಂ-ನೆನೆದುಕೊಳ್ಳೆನು, ಈ ವನಿತೆಯರ್ಗೆ-.

ಈ ಸ್ತ್ರೀಯರಿಗೆ, ಅವರವರ ಪುರುಷರಂ-ಅವರವರ ಗಂಡರನ್ನು, ಸಂಸ್ಕಾರಿಸಲ್-ಶವಸಂಸ್ಕಾರ ಮಾಡಲು, ಕುಡವೇೞ್ಕುಂ-ಕೊಡಬೇಕು. "ಹಾ, ವೀರಶತಪ್ರಸವಿನಿ! ಹತಗಾಂಧಾರೀ ದುಃಖಶತಂ ಪ್ರಸೂತಾಸಿ, ನ ಪುನಃ ಸುತಶತಮ್" (ವೇಣೀ ಸಂಹಾರ, V-೭೧); (ಗದಾಯುದ್ಧ ೪-೫)-ಇವೆರಡರೊಡನೆ ಹೋಲಿಸಿ.

ವಚನ: ಅದಾವುದು ದೋಷಂ - ಅದೇನು ತಪ್ಪು? ಕಳೇವರಮಂ-ದೇಹವನ್ನು; ತಟಿಕ್ಕೈಸಿಕೊಂಡು-ಅಪ್ಪಿಕೊಂಡು;

೯. ಕರ್ಣಂ-ಕರ್ಣನು, ನಿಮ್ಮಣ್ಣಂ-ನಿಮ್ಮ ಅಣ್ಣನು, ಎನ್ನ ಪಿರಿಯಮಗಂ-ನನ್ನ ಹಿರಿಯಮಗ, ಮಾತೇಂ - ಮಾತೇನು, ಆಂ ಮಹಾಪಾತಕಿಯೆಂ - ನಾನು ಮಹಾ ಪಾಪಿಯಾಗಿದ್ದೇನೆ: ನಿಮ್ಮಯ ಮೋಹದಿಂ-ನಿಮ್ಮ ಮೇಲಣ ಪ್ರೇಮದಿಂದ, ಈತಂಗೆ-ಇವನಿಗೆ, ಇನಿತಂ-ಇಷ್ಟನ್ನು, ಆಂ-ನಾನು, ಮಾಡಿದೆಂ ಮಾಡಿದೆನು, ಎಂದು, ಶೋಕಂಗೆಯ್ದಳ್-ದುಃಖಿಸಿದಳು.

೧೦. ಅಂಗವಲ್ಲಭಾ-ಅಂಗರಾಜನಾದ ಕರ್ಣನೇ, ನೀಂ-ನೀನು. ಎಮಗೆ-ನಮಗೆ, ಅಣ್ಣನಯ್-ಅಣ್ಣನಾಗಿರುವೆ, ಎಂದು-ಎಂಬುದಾಗಿ, ಎಮಗೆ-ನಮಗೆ, ಅಱಿಪಿದರ್-ತಿಳಿಸಿದವರು, ಆರುಂ ಇಲ್ಲ-ಯಾರೂ ಇಲ್ಲ: ಆಂ-ನಾವು, ಮುನ್ನಂ-ಮೊದಲು, ಅಱಿದೊಡೆ-ತಿಳಿದಿದ್ದರೆ, ಪಟ್ಟಮಂ-ರಾಜಪಟ್ಟವನ್ನೂ, ನೆಲನುಮಂ-ರಾಜ್ಯವನ್ನೂ, ನಿನಗಿತ್ತು-ನಿನಗೆ ಒಪ್ಪಿಸಿ, ಕುರುಪ್ರಧಾನನೊಳ್-ಕೌರವ ಮುಖ್ಯನಲ್ಲಿ ಎಂದರೆ ದುರ್ಯೋಧನನಲ್ಲಿ, ಕಱುಪನೆ - ಕೋಪವನ್ನೇ, ನಿಚ್ಚಟಂ - ಸ್ಥಿರವಾಗಿ, ಶಾಶ್ವತವಾಗಿ, ಬಿಸುಟು-ತೊರೆದು, ನಿನ್ನಯ ಪೇೞ್ದುದು ಗೆಯ್ದು-ನೀನು ಹೇಳಿದ್ದನ್ನು ಮಾಡಿ, ಬಾಯತಂಬುಲದೊಳಂ-ಬಾಯಿನ ತಂಬುಲದಲ್ಲಿಯೂ, ಮಡಗೂೞೊಳಂ-ಎಂಜಲನ್ನದಲ್ಲೂ, ಪಾೞಿಯುಂ - ಧರ್ಮವನ್ನು, [ನೆಱಪೆವೆ]-ಪೂರ್ಣಗೊಳಿಸವೆ? ಅಗ್ರಜನಿಗೆ ಸೇವೆಮಾಡಿ ನಮ್ಮ ಧರ್ಮವನ್ನು ನಾವು ಪರಿಪೂರ್ಣಗೊಳಿಸುತ್ತಿದ್ದೆವು ಎಂದು ಭಾವ. "ಮಡಗೂೞ್ ಬೀೞಡೆ ಬಾಯ ತಂಬುಲಮಿವಸ್ಪೃಶ್ಯಂಗಳೇ ನಲ್ಲವೇ" ಎಂದು ನಾಗಚಂದ್ರ ಹೇಳುತ್ತಾನೆ (ಪಂಪರಾ. ೧೯-೬೧) ಅಸ್ಪೃಶ್ಯಗಳಾದ ಬಾಯತಂಬುಲ ಮಡಗೂಳುಗಳನ್ನು ಭ್ರಾತೃಭಕ್ತಿಯಿಂದ ನಾವು ಸ್ವೀಕರಿಸಿ ನಿನಗೆ ಸೇವೆ ಸಲ್ಲಿಸಿ ಧರ್ಮವನ್ನು ಪಾಲಿಸಲಾರೆವಾಗಿದ್ದೆವೆ? ಕರ್ಣನು ತನಗೆ ಅಣ್ಣನೆಂದು ತಿಳಿದ ಧರ್ಮರಾಜನು ವ್ಯಾಸಭಾರತದಲ್ಲಿ ಕೆಳಗೆ ಕಾಣಿಸುವಂತೆ ಕುಂತಿಗೆ ಹೇಳುತ್ತಾನೆ:

ಕಥಂ ಪುತ್ರೋ ಭವತ್ಯಾಃ ಸ ದೇವಗರ್ಭಃ ಪರಾಭವತ್
ಯಸ್ಯ ಬಾಹು ಪ್ರತಾಪೇನ ತಾಪಿತಾಃ ಸರ್ವತೋ ವಯಂ ॥ ಸ್ತ್ರೀಪರ್ವ ೨೭-೧೭
ತಮಗ್ನಿಮಿವ ವಸ್ತ್ರೇಣ ಕಥಂ ಛಾದಿತವತ್ಯಸಿ ।
ಯಸ್ಯ ಬಾಹುಬಲಂ ನಿತ್ಯಂ ಧಾರ್ತರಾಷ್ಟ್ರೈರುಪಾಸಿತಂ ೧೮

ಆಸೂತ ತ್ವಂ ಭವತ್ಯಗ್ರೇ ಕಥಮುದ್ಭುತ ವಿಕ್ರಮುಮ್
ಅಹೋ ಭವತ್ಯಾ ಮಂತ್ರಸ್ಯ ಗೂಹನೇನ ವಯಂ ಹತಾಃ ॥ ೨೧
ನಿಧನೇನ ಹಿ ಕರ್ಣಸ್ಯ ಪೀಡಿತಾಸ್ತು ಸಬಾಂಧವಾಃ
ಅಭಿಮನ್ಯೋರ್ವಿನಾಶೇನ ದ್ರೌಪದೇಯ ವಧೇನ ಚ ೨೨
ಪಂಚಾಲಾನಾಂ ವಿನಾಶೇನ ಕುರೂಣಾಂ ಪತನೇನ ಚ ।
ತತಃ ಶತಗುಣಂ ದುಃಖಮಿದಂ ಮಾಮಸ್ಪೃಶದ್ಭೃಶಂ ॥ ೨೩

**ವಚನ**: ಕೊಂದರ್ ಕೊಲೆಸಾವರ್ – ಕೊಂದವರು ಕೊಲೆಗೆ ಈಡಾಗಿ ಸಾಯುತ್ತಾಗೆ; ಸಮಾಹಿತಚಿತ್ತರಾಗಿ – ಸಮಾಧಾನಗೊಂಡ ಮನಸ್ಸುಳ್ಳವರಾಗಿ; ಕೊಳುಗುಳನಂ–ಯುದ್ಧ ಭೂಮಿಯನ್ನು; ಬೆಟ್ಟಾಗೊಟ್ಟಿ–ಬೆಟ್ಟದಂತೆ ರಾಶಿಹಾಕಿ; ಜಳದಾನಾದಿ ಕ್ರಿಯೆಗಳಂ–ಎಳ್ಳು ನೀರು ಬಿಡುವುದೇ ಮುಂತಾದ ಕರ್ಮಗಳನ್ನು; ನಿರ್ವರ್ತಿಸೆ-ಮಾಡಿ ಮುಗಿಸಲು;

೧೧. ಇನಿತೊಂದುಗ್ರ ರಣ ಪ್ರಘಟ್ಟಕದೊಳ್ – ಇಷ್ಟು ಭಯಂಕರವಾದ ಯುದ್ಧದ ಸಮಾರಂಭದಲ್ಲಿ, ಈಯಿರ್ವರಿಂ–ಈ ಇಬ್ಬರಿಂದ ಎಂದರೆ ಭೀಮಾರ್ಜುನರಿಂದ, ಈ ಭಾರಾವತಾರಂ–ಈ ಭಾರದ ಇಳಿತ, ಧರಾಂಗನೆಗೆ – ಭೂದೇವಿಗೆ ಆದುದು–ಆಯಿತು; ಎನಗೆ – ನನಗೆ, ನಿರ್ದಾಯಾದ್ಯಂ – ದಾಯಾದಿಗಳಿಲ್ಲದಿರುವುದು, ಆಯ್ತು–ಆಯಿತು; ಈ ಪೆಂಪೆ–ಈ ಹಿರಿಮೆಯೇ, ಸಾಲ್ಗೆ–ಸಾಕಾಗಲಿ; ಎನಗೆ–ನನಗೆ, ಇಂ–ಇನ್ನು, ರಾಜ್ಯಮೇ–ರಾಜ್ಯವೇ, ಬಾಬಿತ್ತಿಯಲ್ತು–ಪ್ರಯೋಜನವಿಲ್ಲ; ಹರಿಗಂಗೆ – ಅರ್ಜುನನಿಗೆ, ಉತ್ಸಾಹದಿಂ – ಒಸಗೆಯಿಂದ, ಪಟ್ಟಬಂಧನಮಂ – ಪಟ್ಟ ಕಟ್ಟುವುದನ್ನು, ಮಾಡುವಂ – ಮಾಡೋಣ, ಇಂದೇ – ಈ ದಿನವೇ, ಹಸ್ತಿನಪುರ ಪ್ರಸ್ಥಾನಮಂ – ಹಸ್ತಿನ ನಗರಿಗೆ ಪ್ರಯಾಣವನ್ನು, ಮಾಡುವಂ–ಮಾಡೋಣ.

**ವಚನ**: ಪೆಱಂಗೆ ತಾಳ್ದಲರಿದು–ಬೇರೆಯವನಿಗೆ ತಾಳಲು ಅಸಾಧ್ಯ, ಕಷ್ಟ; ಮುಕುಂದ ಬೃಂದಂಗಳ್–ಮುಕುಂದವೆಂಬ ಹರಿಯ ಸಮೂಹಗಳು;

೧೨. ಮೃದುಮಧುರ ಸ್ವನಂ ನೆಗಬೆ – ಮೃದು ಮಧುರವಾದ ನಾದ ಹುಟ್ಟಾಗಲು, ಬಂದ–ಚಿಗುರಿದ, (ಹೂಬಿಟ್ಟ, ಫಲಿತವಾದ), ಎಳಮಾವಿನೊಳ್–ಎಳೆಯ ಮಾವಿನ ಮರದಲ್ಲಿ, ಇರ್ದು–ಇದ್ದು, ಕೂಡೆ–ಕೂಡಲೇ, ಮದಾಳಿಮಾಲೆ–ಸೊಕ್ಕಿದ ದುಂಬಿಗಳ ಸಾಲು, ಪಾಡಿದುದು – ಹಾಡಿತು; ತಳಿರ್ತ – ಚಿಗುರಿದ, ಅಸುಗೆಯೊಳ್–ಅಶೋಕದ ಮರದಲ್ಲಿ, ನೆಲಸಿರ್ದ ಪಿಕಾಳಿ–ನೆಲಸಿದ್ದ ಕೋಗಿಲೆಗಳ ಸಮೂಹ, ಪುಗಲ್ ಎನ್ನದೆ–ಪ್ರವೇಶ ಮಾಡಬೇಡಿ ಎಂದು ಹೇಳದೆ, ಪುಗಿಂ ಎಂದು–ಪ್ರವೇಶಿಸಿರಿ ಎಂದು, ಮೆಲ್ಲುಗುಂದದ – ನಯವು ಕಡಮೆಯಾಗದ, ದನಿಯಿಂ–ಧ್ವನಿಯಿಂದ, ಮೆಲ್ಲನೆ–ಮೃದುವಾಗಿ, ಊಳ್ದುದು–ಕೂಗಿದವು; ತೆಂಕಣ–ದಕ್ಷಿಣದ,

ತೆಂಬೆಲರ್—ತಂಗಾಳಿ (?) ಅಪ್ಪಿಕೊಳ್ವವೋಲ್—ತಬ್ಬಿ ಕೊಳ್ಳುವಂತೆ: ಮನಮಾಱಿ—ಮನಸ್ಸಿಗೆ ಸಮಾಧಾನವಾಗುವಂತೆ, ತೀಡಿದುದು—ಬೀಸಿತು.

೧೩. ಪಸರಿಸಿ—ಹಬ್ಬಿ, ಬಂದ—ಹೂವಾದ, ಮಾಮರಸ—ಮಾವಿನ ಮರಗಳೇ, ಬೆಳ್ಗೊಡೆ—ಶ್ವೇತ ಛತ್ರಿ; ರಾಗದ—ಕೆಂಬಣ್ಣದ, ಪುಂಜದನ್ನವಪ್ಪ—ಒಟ್ಟಿಲಾದ, ಅಸುಗೆಯ—ಅಶೋಕದ, ನೀಳ್ದ—ಉದ್ದವಾದ, ಕೆಂದಳಿರೇ—ಕೆಂಪಾದ ಚಿಗುರೇ ಪಾಳಿ ಮಹಾಧ್ವಜಂ—ಪಾಳಿಕೇತನಗಳು; ಇಂಪನಾಳ್ದು—ಇಂಪನ್ನು ಹೊಂದಿ, ಎಸೆವ—ಶಬ್ದ ಮಾಡುವ, ಅಳಿಗೀತಿ—ದುಂಬಿಗಳ ಹಾಡು, ತಾನೆ—ತಾನೇ, ಜಯಗೀತಿಗಳಾಗಿರೆ—ವಿಜಯದ ಸಂಗೀತಗಳಾಗಿರಲು, ಬಸಂತ ರಾಜನಾ—ವಸಂತ ಕಾಲವೆಂಬ ರಾಜನ, ಬನಂ – ಉದ್ಯಾನವನ, ವಿಕ್ರಮಾರ್ಜುನಂಗೆ – ಅರ್ಜುನನಿಗೆ, ಒಸೆದು – ಪ್ರೀತಿಸಿ, ಇದಿರ್ವರ್ಪವೋಲ್—ಎದುರುಗೊಳ್ಳುವಂತೆ, ಒಪ್ಪಿದುದು—ಸೊಗಸಾಯಿತು, "ಬಂದ ಮಾವೆಂದು ಫಲಿತರಸಾಲಂ".

**ವಚನ**: ನಿಜಾನ್ವಯ ರಾಜಪ್ರಾಜಧಾನಿಯುಂ—ತಮ್ಮ ಕುಲಕ್ರಮಾಗತವಾದ ಪ್ರಕಾಶಮಾನವಾದ ರಾಜಧಾನಿಯನ್ನು ಎಂದರೆ ಹಸ್ತಿನಾಪುರವನ್ನು

೧೪. ನವಕಾಳಾಗರು ಧೂಪಧೂಮತತಿ—ಹೊಸದಾದ ಕರಿ ಅಗರುವಿನ ಧೂಪದ್ರವ್ಯದ ಹೊಗೆಗಳ ಸಮೂಹ, ಸೌಗಂಧಂಗಳಿಂ—ಪರಿಮಳಗಳಿಂದ, ವಿಯಚ್ಚಕ್ರದೊಳ್—ಆಕಾಶ ಮಂಡಲದಲ್ಲಿ, ಸಮ್ತು—ನೇರಾಗಿ, ನೀಳ್ದು—ಉದ್ದವಾಗಿ, ವ್ಯಾಪಿಸಿ, ಮಂದಮರುತ ವ್ಯಾಘಾತದಿಂದೆ—ಮಂದಾನಿಲನ ಹೊಡೆತದಿಂದ, ಎಯ್ದೆ—ಚೆನ್ನಾಗಿ, ತೋರ್ಪವೊಲ್—ತೋರುವಂತೆ, ಆಗಿರ್ದುದು—ಆಗಿತ್ತು; ಪುರಸ್ತ್ರೀ—ನಗರವೆಂಬ ನಾರಿ, ಪಾಂಡುಪುತ್ರಂಗಂ – ಪಾಂಡು ಕುಮಾರನಾದ ಅರ್ಜುನನಿಗಾಗಿ, ಮುನ್ನರಿದಿರ್ದ – ಮೊದಲು ಕತ್ತರಿಸಿದ್ದ, ತನ್ನ ಪಿಣಿಲಂ—ತನ್ನ ಜಡೆಯನ್ನು, ಕೂರ್ತು—ಪ್ರೀತಿಸಿ, ಅಂದು—ಆ ದಿನ, ಉತ್ಸವದಿಂ—ಸಂತೋಷದಿಂದ, ಬಿಟ್ಟಂತೆವೊಲ್—ಇಳಿಯ ಬಿಟ್ಟಹಾಗೆ, ಕಣ್ಗೆವಂದುದು—ಕಣ್ಣುಗಳಿಗೆ ಸೊಗಸಾಯಿತು. "ಮುನ್ನರಿದಿರ್ದ" ಎಂಬೆಡೆ ಏನೋ ಪಾಠ ಕ್ಲೇಶವಿದೆ; ಪುರಸ್ತ್ರೀ ಮೊದಲು ಏಕೆ ತನ್ನ ಜಡೆಯನ್ನು ಕತ್ತರಿಸಿಕೊಂಡಳು?

೧೫. ಹಾರದ—ಹಾರಗಳ, ಪಚ್ಚೆಸಾರದ—ಸಾರವಾದ ಪಚ್ಚೆಗಳಿಂದ ಮಾಡಿದ, ಮಾಲೆ—ಸಾಲುಗಳೆ, ಓಳಿದೋರಣಮಾಯ್ತು—ಸಾಲುಸಾಲಾದ ತೋರಣಗಳಾದವು; ಚೀನದ—ರೇಷ್ಮೆಯ, [ಸೂಯಿಯಾಣದ]—ಕಸೂತಿ ಕೆಲಸ ಮಾಡಿದ, ಪಟ್ಟೆ—ವಸ್ತ್ರದ ಪಟ್ಟೆಗಳು, ಸೌಧಾಳಿಯ—ಉಪ್ಪರಿಗೆಯ ಸಾಲುಗಳ, ಒಳ್ಗುಡಿಯಾಯ್ತು—ಒಳ್ಳೆಯ ಬಾವುಟಗಳಾದವು; ಹರ್ಮ್ಯಾಳಿದಪ್ಪದೆ—ಯಾವ ಅರಮನೆಯೂ ತಪ್ಪದೆ, ಎಂದರೆ ಎಲ್ಲ ಸೌಧಗಳಲ್ಲೂ, ಎಸೆವ—ಶೋಭಿಸುವ, ಆಟ ಪಾಟದ—ನೃತ್ಯಸಂಗೀತಗಳ, ಗೀತಿ—ಹಾಡುಗಳು, ರಮ್ಯಮಾಯ್ತು—ರಮ್ಯವಾಯಿತು; ತತ್ಪುರ ಮಧ್ಯದೊಳ್—ಆ ನಗರದ ನಡುವೆ, ಅದೊಂದು ಚೆಲ್ವು—ಅದೊಂದು ಸೊಗಸು, ಕಣ್ಗೊಳಿಪಟ್ಟುದು—ಕಣ್ಣುಗಳಿಗೆ

ಸಾಲಾಗಿ ಕಂಡಪ್ಪು, ಆಯ್ತುದಲ್–ಆಯಿತಲ್ಲವೆ? ಸೂಚೀಯಾನ > ಸೂಯಿಯಾಣ; ವಾತ್ಸ್ಯಾಯನನ "ಕಾಮಸೂತ್ರ"ದಲ್ಲಿ ಚತುಃಷಷ್ಟಿ ಕಲೆಗಳನ್ನು ಹೆಸರಿಸುವಾಗ (ಅಧಿಕರಣ ೧, ಅಧ್ಯಾಯ ೩, ಸೂ. ೧೬) ೩೫ನೆಯದಾಗಿ "ಸೂಚೀವಾನ ಕರ್ಮಾಣಿ" ಎಂದು ಹೇಳಿದೆ; ಇದಕ್ಕೆ ವ್ಯಾಖ್ಯಾನ: "ಸೂಚೀವಾನ ಕರ್ಮಾಣೀತಿ, ಸೂಚ್ಯಾ ಯತ್ಸಂಧಾನ ಕರಣಂ ತತ್ಸೂಚೀವಾನಂ; ತ್ರಿವಿಧಂ – ಸೀವನವ್, ಊತವಮ್, ವಿರಚನವ್": ತತ್ರಾದ್ಯಂ ಕಂಚುಕಾದೀನಾಮ್, ದ್ವಿತೀಯಂ ತ್ರುಟಿತ ವಸ್ತ್ರಾಣಾಮ್ ತೃತೀಯಂ ಕುಥಾಸ್ತರಣಾದೀನಾಮ್, ಇಯಂ ಪ್ರತೀತಾರ್ಥೈವ" ಎಂದಿದೆ. ಇದರಂತೆ "ಸೂಚಿವಾನ" ಎಂಬುದು ಶಬ್ದವಾಗುತ್ತದೆ. "ಸಾಯಿಯಾಣ" ಎಂದು "ಆದಿಪುರಾಣ"ದ ಮುದ್ರಿತ ಪ್ರತಿಗಳಲ್ಲಿ ಇವೆ (೪–೩೪೧), ಇದೇ ರೂಪ "ಸುಕುಮಾರ ಚರಿತ"ದಲ್ಲೂ ಉಂಟು (೧೦–೯೧೧); "ಆದಿಪುರಾಣ"ದ ಒಂದು ಹಸ್ತಪ್ರತಿಯಲ್ಲಿ "ಸುಯಿಯಾಣ" ಎಂಬ ಪಾಠಾಂತರವಿದೆ. ಸೂಚೀಯಾನದ ತದ್ಭವ ಸೂಯಾಣಂ ಎಂದು ಕೇಶಿರಾಜ (ಸೂ ೩೦೯); ಭಟ್ಟಾಕಳಂಕನು ಕೀಲಾರಾದಿ ಆಕೃತಿಗಣದಲ್ಲಿ (ಸೂ ೩೭೪) ಸೂಯಾಣ ಶಬ್ದವನ್ನು ಕಾಣಿಸಿ, ವ್ಯಾಖ್ಯಾನದಲ್ಲಿ "ಸೂಯಾಣಂ ಸೂಪಸ್ಥಾನಂ, ಮಹಾನಸಮಿತಿಯಾವತ್" ಎಂದು ಬರೆದಿದ್ದಾನೆ; ಇದರಂತೆ ಸೂಯಾಣವೆಂದರೆ ಅಡಿಗೆ ಮಾಡುವ ಎಡೆ, ಪಾಕಶಾಲೆ, ಬಾಣಸಿನಮನೆ ಎಂದರ್ಥವಾಗುತ್ತದೆ. ಆದರೆ ಸೂಪಸ್ಥಾನ ಶಬ್ದವು 'ಸೂಯಟ್ಠಾಣ, ಸೂಯಠಾಣ ಎಂಬ ರೂಪಗಳನ್ನು ಪ್ರಾಕೃತದಲ್ಲಿ ಪಡೆಯಬಹುದೇ ಹೊರತು, ಸೂಯಾಣ ಎಂದು ಪ್ರಾಕೃತದಲ್ಲಾಗಲಿ ಕನ್ನಡದಲ್ಲಾಗಲಿ ಆಗದು, ಕೇಶಿರಾಜನು ಸೂಚೀಯಾನದ ತದ್ಭವ ಸೂಯಾಣ ಎಂದು ಹೇಳಿದ್ದರೂ ಭಟ್ಟಾಕಳಂಕನು ಹೀಗೆ ಹೇಳಿರುವುದು ಸೋಜಿಗವಾಗಿದೆ. ಅವನ ಸೂಪಸ್ಥಾನ > ಸೂಯಾಣ ಎಂಬ ಅಭಿಪ್ರಾಯವನ್ನು ಬಿಡಬಹುದು. ಸುಯಿಯಾಣ, ಸೂಯಿಯಾಣ, ಸುಯ್ಯಾಣ, ಸೂಯಾಣ ಎಂಬೀ ರೂಪಗಳು ಸಾಧುವೆಂದು ಪರಿಗ್ರಹಿಸಬಹುದು; ಇವುಗಳಿಗೆ ಸಂಸ್ಕೃತದ ಮೂಲ ಸೂಚೀಯಾನವೆಂಬುದು ಸ್ಪಷ್ಟವಾಗಿದೆ. ವಾತ್ಸ್ಯಾಯನನು ಕೊಟ್ಟಿರುವ ಸೂಚೀವಾನವೆಂಬುದು ಇನ್ನೊಂದು ರೂಪವಿರಬೇಕು; ಇದಕ್ಕೆ ಹರಿದ ವಸ್ತ್ರಗಳನ್ನು ಸೇರಿಸಿ ಹೊಲಿಯುವುದು, ಹಾಗೆ ಹೊಲಿದ ಬಟ್ಟೆ ಎಂಬರ್ಥವಿದೆ. ಇಲ್ಲಿ ಕಸೂತಿ ಕೆಲಸ ಎಂದು ಆಧುನಿಕ ದೃಷ್ಟಿಯಿಂದ ಹೇಳಿದೆ. ಪಚ್ಚೆಸಾರ ಎಂಬುದರ ಅರ್ಥವೂ ಚಿಂತನೀಯ, "ಪೊಸ ಮಾವಿನ ಮಿಡಿಯೊಳ್ ಪಚ್ಚೆಸಾರಮಂ ಮಾಡುವಟ್ಟಿತಿಯಿಂ" ಎಂದು ಆದಿಪುರಾಣದ ಪ್ರಯೋಗವಿದೆ (೧೧–೧೦೧); ಇದಕ್ಕೆ ಪದ್ಯಸಾರ IIರಲ್ಲಿ "ಪಚ್ಚೆಯ ಸರ" ಎಂದು ಅರ್ಥ ಹೇಳಿದೆ; ಇದನ್ನು ಒಂದು ಆಭರಣ ವಿಶೇಷವೆಂದು ಭಾವಿಸಬಹುದು; ಪ್ರಕೃತ ಪದ್ಯದಲ್ಲಿ ಈ ಅರ್ಥ ಎಷ್ಟರ ಮಟ್ಟಿಗೆ ಸಾಧು?

೧೩. ಪ್ರವರತರ ಪುರಂಧ್ರೀನೂಪುರಾರಾವಂ–ಅತಿ ಶ್ರೇಷ್ಠರಾದ (ಅಂತಃ

ಪುರ) ಸ್ತ್ರೀಯರ ಕಾಲಂದಿಗೆಗಳ ಧ್ವನಿಯು, ಎತ್ತಂ–ಎಲ್ಲೆಲ್ಲೂ, ಕಿವಿಗೆ ವರೆ – ಕಿವಿಗೆ ಬರಲು ಎಂದರೆ ಕೇಳಿಸುತ್ತಿರಲು, ಕಣ್ಗೆ – ಕಣ್ಣುಗಳಿಗೆ, ವಿಲಾಸಂ - ಸೊಗಸು, [ವರೆ – ಬರಲು], ಶೇಷಾಕ್ಷತೌಘದ್ರವಮೆ – ಆಶೀರ್ವಾದದ ಅಕ್ಷತೆಗಳ ಸಮೂಹದ ಒದ್ದೆಯೆ, ತಮಗಂ–ತಮಗೂ, ಇಂಬಂ–ಸಂತೋಷವನ್ನು, ಇತ್ತತ್ತು–ಕೊಟ್ಟಿತು, ಎಂಬನ್ನೆಗಂ – ಎನ್ನುತ್ತಿರಲು, ಪೊೞಲ್ಗೆ – ನಗರಕ್ಕೆ, ಪಾಂಡವರೆ – ಪಾಂಡವರೇ, ಪುಗೆ–ಪ್ರವೇಶಿಸಲು, ಅಂದು–ಆಗ, ರಾಗಂ–ಸಂತೋಷವು, ಒಟ್ಟೆ–ರಾಶಿಯಾಗಿ, ಬೆಟ್ಟಾಯ್ತು–ಬೆಟ್ಟವಾಯಿತು ಎಂದರೆ ಸಂತೋಷವು ಅತ್ಯತಿಶಯವಾಯಿತು.

**ವಚನ**; ಆನುತ್ತಂ–ತಾಳುತ್ತ, ಧರಿಸಿಕೊಳ್ಳುತ್ತ ; ಸಮಕೊಳಿಸಿ–ಏರ್ಪಡಿಸಿ ;

೧೭. ಪ್ರಾಯದ ಪೆಂಪೆ ಪೆಂಪು – ತಾರುಣ್ಯದ ಹಿರಿಮೆಯೇ ಹಿರಿಮೆ ; ಎಮಗೆ–ನಮಗೆ, ಮೀಱಿದರಂ – ಅತಿಕ್ರಮಿಸಿದವರನ್ನು, ತವೆ – ನಾಶವಾಗುವಂತೆ, ಕೊಂದ, ಪೆಂಪು–ಹಿರಿಮೆ, ಕಟ್ಟಾಯದ ಪೆಂಪು – ತೀವ್ರವಾದ ಪರಾಕ್ರಮದ ಹಿರಿಮೆ ; ಶಕ್ರನೊಡನೆ – ಇಂದ್ರನೊಡನೆ, ಏಱಿದ – ಅರ್ಧಾಸನವನ್ನು ಹತ್ತಿದ, ಪೆಂಪು - ಹಿರಿಮೆ, ಇವು – ಇವುಗಳು, ಪೆಂಪುವೆತ್ತು – ಅತಿಶಯತೆಯನ್ನು ಹೊಂದಿ, ನಿಟ್ಟಾಯುಗಳಾಗಿ – ದೀರ್ಘಾಯುಸ್ಸುಳ್ಳವಾಗಿ, ನಿನ್ನೊಳ್ – ನಿನ್ನಲ್ಲಿ, ಅಮರ್ದು–ಸೇರಿ, ಇರ್ದುವು – ಇದ್ದುವು ; ನೀಂ – ನೀನು, ತಲೆವೀಸದೆ – ತಲೆಯನ್ನು ಬೀಸದೆ ಎಂದರೆ ಬೇಡವೆಂದು ಹೇಳದೆ, ಇದು ಆಗದು ಎನ್ನದೆ–ಇದು ಆಗುವುದಿಲ್ಲವೆಂದು ಹೇಳದೆ, ಗುಣಾರ್ಣವಾ–ಅರ್ಜುನನೇ, ಪರಮೋತ್ಸವದಿಂ–ಅತ್ಯಂತ ವೈಭವದಿಂದ, ಉರ್ವರಾಶ್ರೀಯುಂ – ಭೂಮಿಯೆಂಬ ಲಕ್ಷ್ಮಿಯನ್ನು, ಒಳಕೊಳ್ – ಹೊಂದಿರುವವನಾಗು ಎಂದರೆ ರಾಜನಾಗು ಎಂದು ಭಾವ.

**ವಚನ**: ಕೋಡ ಮಣ್ಣುಮಂ – ಕೊಂಬುಗಳ ಮಣ್ಣನ್ನು ; ಇಕ್ಷು–ಕಬ್ಬಿನ (ರಸ) ; ದಧಿ–ಮೊಸರು ; ಸ್ವಾದೂದಕ–ರುಚಿಯಾದ ನೀರು, ಸಿಹಿನೀರು, ಈಂಟುನೀರು ; ಕಳಧೌತ–ಚಿನ್ನ, ಬೆಳ್ಳಿ ; ತೆಕ್ಕನೆ ತೀವಿ–ಭರ್ತಿಯಾಗಿ ತುಂಬಿ ; ಉಡಲಿಕ್ಕಿ – ಉಡುಗೊರೆಯನ್ನು ಕೊಟ್ಟು ; ಪಟ್ಟವರ್ಧನ – ಪೂಜಾಗಜ ಎಂದರೆ ಪಟ್ಟದಾನೆ ; ಅಧಿವಾಸಿಸಿ – ಪ್ರತಿಷ್ಠೆಮಾಡಿ, ಕೌಶೇಯ ಪರಿಧಾನನುಮಾಗಿರ್ದ –ರೇಷ್ಮೆವಸ್ತ್ರದ ಹೊದಿಕೆಯುಳ್ಳವನಾಗಿದ್ದ ; ಕಳಕಳಾವರ್ತಮಾಗೆ – ಕಲಕಲ ಶಬ್ದದ ಸುಳಿದಾಟವಾಗಲು, ಜಾಗರಮಿರ್ದು – ಜಾಗರಣೆಯಲ್ಲಿದ್ದು ; ಅಷ್ಟೋತ್ತರ ಶತ–ನೂರೆಂಟು ; ಮೀಯಿಸಿ – ಜಳಕಮಾಡಿಸಿ, ಅಭಿಷೇಕಮಾಡಿ.

೧೮. ವನಧಿ ಪ್ರಧ್ವಾನದಿಂ – ಸಮುದ್ರಘೋಷಕ್ಕಿಂತಲೂ, ಮಂಗಳಪಟಹ ರವಂ–ಮಂಗಳ ಸೂಚಕವಾದ ತಮಟೆಗಳ ಸದ್ದು, ಪೆರ್ಚೆ – ಹೆಚ್ಚಾಗಲು ; ಮಾಂಗಲ್ಯ ಗೇಯಧ್ವನಿಯಿಂದೆ – ಮಂಗಳ ಗೀತೆಗಳ ನಾದದಿಂದ, ಆಶಾಂತರಂ–ದಿಕ್ಪ್ರದೇಶಗಳು, ಘೂರ್ಣಿಸೆ – ಶಬ್ದ ಮಾಡುತ್ತಿರಲು, ಸೊಗಯಿಸೆ – ಸೊಗಸಾಗು

ವಂತೆ, ಕೆಯ್ಗೆಯ್ದು – ಸಿಂಗರಿಸಿಕೊಂಡು, ಸಾಮಂತ ಸೀಮಂತಿನಿಯರ್–ಸಾಮಂತ ರಾಜರ ಸ್ತ್ರೀಯರು, ಮುಂಪೆ ಆಡೆ–ಎದುರಿಗೆ ನರ್ತಿಸುತ್ತಿರಲು ; ಜಯ ಜಯ ಧ್ವಾನಂ – ಜಯಜಯವೆಂಬ ಉಲಿ, ಭೋರೆಂದೆಸೆಯೆ–ಭೋರೆಂದು ಶಬ್ದವಾಗಲು ; ವಾರಾಂಗನೆಯರ್ – ವಾರಸ್ತ್ರೀಯರು, ಓರಂತೆ–ಕ್ರಮವಾಗಿ, ವಂದು ಆಡೆ–ಬಂದು ನಾಟ್ಯವಾಡಲು ; ಸಂದ–ಉಂಟಾದ, ಈ ವಿಭವದೊಳ್–ಈ ವೈಭವದಲ್ಲಿ, ಅರಿಗಂಗೆ –ಅರ್ಜುನನಿಗೆ, ರಾಜ್ಯಾಭಿಷೇಕಂ ಆಯ್ತು–ಪಟ್ಟಾಭಿಷೇಕವಾಯಿತು.

ವಚನ: ಕೇಸರಿ ವಿಷ್ಟರದೊಳ್ – ಸಿಂಹಾಸನದಲ್ಲಿ ; ಪಂಚರತ್ನ ಶಿಲಾಪಿ ರಾಜಮಾನಮಪ್ಪ–ಐದು ರತ್ನಗಳಿಂದ ಖಚಿತವಾದ ಶಿಲಾಪೀಠದಿಂದ ಪ್ರಕಾಶಮಾನ ವಾದ ; ಪಟ್ಟಮಂ – ಪಟ್ಟವಸ್ತ್ರವನ್ನು ;

೧೯. ದೇವದುಂದುಭಿ ರವಂ–ದೇವತೆಗಳ ಭೇರಿಗಳ ಶಬ್ದ. ನೆಗೞ್ದುದು– ಉಂಟಾಯಿತು. ಪೊದಳ್ದ – ವ್ಯಾಪಿಸಿದ, ಬಲ್ಮುಗುಳ್ಗಳ – ದೊಡ್ಡ ಮೊಗ್ಗುಗಳ, ತಂದಲ್ – ಮಳೆಯು, ಅಂದು–ಆ ದಿನ, ಸುರನಂದನದಿಂ–ದೇವತೆಗಳ ಉದ್ಯಾನವನ ದಿಂದ, ಕವಿತಂದುದು–ಮುಚ್ಚುವ ಹಾಗೆ ಸುರಿಯಿತು, ಅದಂ–ಆ ಪುಷ್ಪವೃಷ್ಟಿಯನ್ನು, ತನಿಸೋಂಕು ಸೋಂಕಿ–ಹೊಸದಾಗಿ ಸ್ಪರ್ಶವನ್ನು ಸ್ಪರ್ಶಿಸಿ ಎಂದರೆ ಹೊಸ ಹೊಸದಾಗಿ, ಮುಟ್ಟಿ; ಮೆಲ್ಲಗೆ–ಮೃದುವಾಗಿ, ಮಲಯಾನಿಳಂ–ಮಲಯ ಮಾರುತವು, ಸುೞಿದೊಡೆ– ಸುಳಿದಾಡಿದರೆ, ಜಗಂ–ಲೋಕವು, ಪೊಸತಾದುದು–ಹೊಸದಾಯಿತು, ಎಂದೊಡೆ– ಎಂದು ಹೇಳಿದರೆ, ಜಗದೇಕಮಲ್ಲನಾ–ಅರ್ಜುನನ, ಪಟ್ಟಬಂಧನ ಮಹೋತ್ಸವಮಂ– ಪಟ್ಟ ಕಟ್ಟುವ ಮಹಾ ಸಮಾರಂಭವನ್ನು, ಏ ವೊಗೞ್ವುದೊ – ಏನೆಂದು ಹೊಗಳು ವುದೋ !।

೨೦. ಮುತ್ತಿನ–ಮುತ್ತುಗಳ, ಪಜ್ಜೆ–ಪಚ್ಚೆಗಳ, ಮಾಣಿಕದ–ರತ್ನಗಳ, ವಜ್ರದ–ವಜ್ರಗಳ, ಕೇಱಿಯೊಳ್ – ಸಾಲುಗಳಲ್ಲಿ, ಒಂದಿ–ಸೇರಿ ; ಸಾಂದಿನೊಳ್– ಸಾದಿನಲ್ಲಿ (ಗಂಧದಲ್ಲಿ) ; ಕತ್ತುರಿಯು–ಕಸ್ತೂರಿಯು, ಒಂದು; ಕೋೞಿಗೆಸಱಿನೊಳ್– ಗಟ್ಟಿಕೆಸರಿನಲ್ಲಿ, ಓಕುಳಿ–ಓಕುಳಿಯಾಡುವ, ಚಂದನ ಗಂಧವಾರಿಯೊಳ್–ಶ್ರೀ ಗಂಧದ ಪರಿಮಳವನ್ನುಳ್ಳ ನೀರಿನಲ್ಲಿ ; ಸುತ್ತಲುಂ – ಸುತ್ತಲೂ, ಅೞ್ಕಜಂ ಪಡೆವ–ಪ್ರೀತಿ ಯನ್ನುಂಟುಮಾಡುವ, ಗೇಯದ–ಸಂಗೀತದ, ಪೆಂಪಿಂ–ಆಧಿಕ್ಯದಿಂದ, ಪಡೆಮೆಚ್ಚೆ ಗಂಡನಾ–ಅರ್ಜುನನ, ಪಟ್ಟಬಂಧನ ಮಹೋತ್ಸವಂ–ಪಟ್ಟಾಭಿಷೇಕ ಮಹೋತ್ಸವವು, ಆರ್ಗಂ–ಯಾರಿಗೂ, ಆರ್ತು–ಸಮರ್ಥವಾಗಿ, ಅಲಂಪಂ–ಸಂತೋಷವನ್ನು, ಇತ್ತುದು– ಇತ್ತಿತು, ಕೊಟ್ಟಿತು.

ವಚನ : ಐರಾವಣಾನ್ವಯಂ – ಐರಾವತವೆಂಬ ಆನೆಯ ವಂಶಕ್ಕೆ ಸೇರಿ ದವನೂ : ಸುರಭಿನಿಶ್ವಾಸನುಂ – ಸುಗಂಧ ಯುಕ್ತವಾದ ಉಸಿರನ್ನುಳ್ಳವನೂ ; ಸೂಕ್ಷ್ಮಬಿಂದು ರುಚಿರನುಂ–ಸೂಕ್ಷ್ಮವಾದ ಸಣ್ಣ ಸಣ್ಣ ಬಿಳಿ ಮಚ್ಚೆಗಳಿಂದ ರಮ್ಯ

ವಾಪವನೂ ; ಕಾಳಿಂಗವನ ಸಂಭೂತನುಂ—ಕಳಿಂಗದೇಶದ ಅರಣ್ಯಗಳಲ್ಲಿ ಹುಟ್ಟಿದವನೂ ; ತ್ರಿಭುವನಾಭರಣವೆಂಬ – ತ್ರಿಭುವನಾಭರಣ ಎಂಬ ಹೆಸರಿನ ಅರಿಕೇಸರಿಯ ಪಟ್ಟದಾನೆ ; ತ್ರಿಭುವನ ತಿಲಕವೆಂಬ—ಅರಿಕೇಸರಿಯ ಪಟ್ಟದ ಕುದುರೆ ; ತುಳಾ ಪುರುಷಮನಿರ್ದು—ತುಳಾಪುರುಷವೆಂಬ ದಾನವನ್ನು ಮಾಡಿ ; ತನ್ನ ತೂಕವನ್ನು ಚಿನ್ನವನ್ನು ದಾನಮಾಡುವುದು ; ಬಿಯಮುಂ—ವ್ಯಯವನ್ನು ಎಂದರೆ ವೆಚ್ಚವನ್ನು ;

೨೧. ಕಾಮಧೇನು—ಕಾಮಧೇನು ಎಂಬ ದೇವಲೋಕದ ಹಸು, ತೊರೆದುದು—ಹಾಲನ್ನು ಸುರಿಸಿತು ; ಕಲ್ಪವೃಕ್ಷಂ—ಸ್ವರ್ಗದ ಕಲ್ಪವೃಕ್ಷವು, ತುಱುಗಲ್ ಗೊನೆವಣ್ತುದು—ಕಿಕ್ಕಿರಿದ ಗೊನೆಯಿಂದ ಫಲಿತವಾಯಿತು ; ಈಶ್ವರನ—ಶಿವನ, ವರಪ್ರಸಾದಂ—ವರದ ಕರುಣೆಯು, ಇದಿರ್ಗೊಂಡುದು – ಎದುರುಗೊಂಡಿತು ; ಸುತ್ತಿಱಿದ—ಬಳಸಿದ, ಆದೊಂದು, ಮುತ್ತಿನಾಗರಮೆ—ಮುತ್ತಿನ ಮನೆಯೇ, ತೆರಳ್ದುದು—ಚಲಿಸಿತು ; ಎಯ್ದೆ—ಚೆನ್ನಾಗಿ, ರಸಸಿದ್ಧಿಯುಂ—ಸಿದ್ಧರಸದ ಪ್ರಾಪ್ತಿಯೂ, ಆಯ್ತು—ಆಯಿತು, ಎನೆ—ಎನ್ನಲು, ತನ್ನಂ—ತನ್ನನ್ನು, ಆಸೆವಟ್ಟು—ಆಸೆಯನ್ನು ಹೊಂದಿ, ಎರೆದವರ್ಗೆ—ಬೇಡಿದವರಿಗೆ, ಇತ್ತು—ದಾನಮಾಡಿ, ಗುಣಾರ್ಣವಂ—ಅರ್ಜುನನು, ಈ ನೆಲನಂ—ಈ ಭೂಮಿಯನ್ನು, ಪೊನ್ಮಯದೆ—ಚಿನ್ನದ ಮಯವಾಗಿಯೇ, ಮಾಡಿದಂ—ಮಾಡಿದನು, ಕಾಮಧೇನು ಕಲ್ಪವೃಕ್ಷಾದಿಗಳನ್ನು ಅರಿಕೇಸರಿ ಕೀಳ್ಮಾಡಿದನು, ಬೇಡಿದವರಿಗೆ ಬೇಡಿದ್ದನ್ನೆಲ್ಲ ಕೊಟ್ಟು ಎಂದು ಭಾವ.

ವಚನ : ಚಾಗಂ ಗೆಯ್ದು—ದಾನಮಾಡಿ : ಸಂಭಾದಿತನುಂ – ಮುಂದುಕಲ್ಪಿಟ್ಟವನೂ ; ಒಡ್ಡೋಲಗಂಗೊಟ್ಟಿರೆ – ಆಸ್ಥಾನದ ರಾಜಸಭೆಯಲ್ಲಿರಲು : ಒಡ್ಡೋಲಗ ಎಂಬ ಪದ ಸ್ವಾರಸ್ಯಕರವಾದುದು ; ತಮಿಳಿನಲ್ಲಿ ಒಟ್ಟೋಲಕ್ಕಂ=ಪೆರುಂಕೊಟ್ಟಂ—ದೊಡ್ಡ ಸಭೆ ಎಂದರ್ಥ ; ತೆಲುಗಿನಲ್ಲಿ ಒಡ್ಡೋಲಗಮು ಎಂದರೆ, ಸಂಸ್ಕೃತದ ವೃಧ್ ಧಾತುವಿನಿಂದ ಜನ್ಯವಾದ ವೃದ್ಧ, ವರ್ಧನ ಮುಂತಾದ ಶಬ್ದಗಳು ಪ್ರಾಕೃತವಾದಾಗ ವಡ್ಢ, ವುಡ್ಢ ಇತ್ಯಾದಿ ರೂಪಗಳನ್ನು ಧರಿಸುತ್ತವೆ, ವಡ್ಡ ಎಂಬುದಕ್ಕೆ ಪ್ರಾಕೃತದಲ್ಲಿ ಮಹಾನ್—ದೊಡ್ಡ ಎಂಬರ್ಥವಿದೆ, ಇದರ ಇನ್ನೊಂದು ರೂಪ ವೃದ್ಧ ; ಇದು ಕನ್ನಡದಲ್ಲಿ ವೊಡ್ಡ<ಒಡ್ಡ ಆಗಿರಬಹುದು : ಓಲಗ<(ಸಂ) ಅವಲೋಕನ—ದರ್ಶನ, ನೋಡುವುದು, ಒಡ್ಡೋಲಗ ಎಂದರೆ ದೊಡ್ಡ ದರ್ಶನ, ರಾಜನು ತನ್ನ ಪ್ರಜೆಗಳಿಗೆ ದರ್ಶನ ಕೊಡುವುದು, ಹಾಗೆ ಕೊಡುವ ಸ್ಥಳ ಎಂಬರ್ಥವಿರಬಹುದು ಮೂಲತಃ. ಇದು ದರ್ಬಾರ್, ರಾಜಸಭೆ ಎಂಬರ್ಥಗಳನ್ನು ಅನಂತರ ತಾಳಿರಬಹುದು. ಸೇವೆ, ಚಾಕರಿ ಎಂಬರ್ಥವುಳ್ಳ ಇನ್ನೊಂದು ಪ್ರಾಕೃತ ಶಬ್ದ ಓಲಗ್ಗ ಎಂದು ; ಇದನ್ನು ಓಲಗಿಸು, ಓಲೈಸು ಎಂದು ಕನ್ನಡದಲ್ಲಿ ಕಾಣಬಹುದು ; ಓಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ ಎಂಬ ಪ್ರಯೋಗವನ್ನು ನೋಡಬಹುದು.

೨೨. ಎಡೆಗೊಂಡಿರಿಂ—ನಿಮ್ಮ ನಿಮ್ಮ ಸ್ಥಳಗಳಲ್ಲಿರಿ : ಉತ್ಸಂಚಂ – ಗಟ್ಟಿ

ಯಾಗಿ, ನುಡಿಯದಿರಿಂ–ಮಾತಾಡಬೇಡಿರಿ, ನೃಪತಿ–ರಾಜನು, ನುಡಿಯೆ–ಮಾತಾಡಲು, ನುಡಿಯಿಂ – ನೀವು ಮಾತಾಡಿ, ನೀಮಿರ್ಪ – ನೀವಿರುವ, ಎಡೆಯೊಳ್ – ಸ್ಥಳದಲ್ಲಿ, ಇರಿ–ಇರಿರಿ ; ನೀಂ–ನೀವು, ಮಿಡುಕಿದೊಡನೆ–ಅಲುಗಾಡಿದ ಕೂಡಲೇ, ಚಿತ್ರ ಚಿತ್ರ ದಂಡಧರರ್ಕಳ್–ಬಗೆಬಗೆಯಾದ ಚಿತ್ತ್ರದ ದಂಡಧಾರಿಗಳನ್ನು ಎಂದರೆ ಕಟ್ಟಿಗೆಕಾರರನ್ನು, ನೀಮಱಿವಿರ್–ನೀವು ತಿಳಿಯುವಿರಿ, ಎಂದರೆ ಸಭೆಯಲ್ಲಿ ಏನಾದರೂ ಗದ್ದಲ ಮಾಡಿದರೆ, ತಪ್ಪಿದರೆ, ಕಟ್ಟಿಗೆಕಾರರ ದಂಡದ ಏಟುಗಳ ರುಚಿ ನಿಮಗೆ ತಿಳಿಯುತ್ತದೆ ಎಂಬಭಿಪ್ರಾಯ. ಇದೇ ಪದ್ಯ ಆದಿಪುರಾಣದಲ್ಲೂ ಉಂಟು (೯–೬) ; "ಇಲ್ಲಿ ಎಡೆಗೋದಿರದಿರಿಮುದ್ದಂ ನುಡಿಯದಿರಿಂ" ಎಂಬ ಪಾಠವಿದೆ. ಅರ್ಥವೇನೋ ಸಮಾನ : ಎಡೆಗೊಂಡಿರಿಂ ನೀಮಿರ್ಪೆಡೆಯೊಳಿರಿಂ – ಇವೆರಡಕ್ಕೂ ಅರ್ಥವ್ಯತ್ಯಾಸವಿಲ್ಲ, ಪುನರುಕ್ತಿಯಂತಿದೆ ; ಆದ್ದರಿಂದ ಎಡಗೋದು–ನಡುವೆ ಪ್ರೋಣಿಸಿಕೊಂಡು ಎಂದರೆ ಒಬ್ಬನ ಸಂದಿಯಲ್ಲಿ ಇನ್ನೊಬ್ಬನು ಸೇರಿಕೊಂಡು, ಇರದಿರಿಂ–ಇರಬೇಡಿರಿ ಎಂಬ ಪಾಠ ಗ್ರಾಹ್ಯವೆಂದು ತೋರುತ್ತದೆ. ಆಗ "ಉದ್ದಂ ನುಡಿಯದಿರಿಂ" ಎಂದೇ ಗ್ರಹಿಸಬೇಕು ; ಉದ್ದಂ< ಊರ್ಧ್ವಂ – ಎತ್ತರವಾಗಿ, ಗಟ್ಟಿಯಾಗಿ ; ಉತ್ಸಂಚ ಶಬ್ದಕ್ಕೆ 'ಗಟ್ಟಿಯಾಗಿ ಮಾತನಾಡು' ಎಂಬರ್ಥವನ್ನು ಹೇಳಿದೆ (ಪಂಭಾಕೋ) ; ಆದರೆ ಇದಕ್ಕೆ ಆಧಾರ? ಉಚ್ಚಂ ಎಂದು ತಿದ್ದಿಕೊಳ್ಳಬಹುದು. ದಂಡಧರರ್ಕಳ್ ಎಂಬಲ್ಲಿ ದ್ವಿತೀಯಾರ್ಥದಲ್ಲಿ ಪ್ರಥಮೆ ಬಂದಿದೆ, ವಿಭಕ್ತಿ ಪಲ್ಲಟ.

೨೩. ಈ ಪದ್ಯದ ಪಾಠ ತುಂಬ ಕೆಟ್ಟುಹೋಗಿದೆ ; ಸರಿಪಡಿಸುವುದಕ್ಕೆ ಸಾಧ್ಯವಿಲ್ಲ ; ಪೊಳೆವ ಕಣ್ಗಳ್–ಹೊಳೆಯುವ ಕಣ್ಣುಗಳು, ಓಳಿಕೊಳೆ–ಸಾಲಾಗಲು ; ನೀಳಿಮಪನಜಂಗಳ್–ಕನ್ನೈದಿಲೆಗಳು, ಓಳಿಕೊಳ್ಳದುವುಂ–ಸಾಲಾಗಿ ಇಲ್ಲದಿರುವುವೂ, ತಾಂ–ತಾವು, ಓಳಿಕೊಳಲ್–ಸಾಲಾಗಿ ಇರಲು, ಗಣಿಕೆಯರ–ಸೂಳೆಯರ, ಓಳಿ–ಪಂಕ್ತಿಯು, ಓಳಿಯೊಳೆ – ಸಾಲಿನಲ್ಲಿಯೇ, ಪಡಲ್ತ – ಹಬ್ಬಿದ, ಲತೆಗಳಿರ್ಪಂತೆ – ಬಳ್ಳಿಗಳು ಇರುವ ಹಾಗೆ, ಇರ್ದರ್–ಇದ್ದರು (?)

೨೪. ಸಾರ್ಚಿದ–ಹತ್ತಿರ ಇಟ್ಟ, ಲೋಹಾಸನದೊಳ್ – ಲೋಹಾಸನವೆಂಬ ಪೀಠಗಳಲ್ಲಿ, ಅಮರ್ಚಿದ–ಸೇರಿಸಿದ, ಹಾಕಿದ, ಬೊಂದರಿಗೆ–ಮೆತ್ತೆಗಳು, ಪ[illegible]ಯ–ವಸ್ತ್ರದ, ಬಿತ್ತರಿಗೆ–ಸಣ್ಣ ಪೀಠಗಳು, ಬಹುಶಃ ಪಾದ ಪೀಠಗಳು, ಕರಂ–ವಿಶೇಷವಾಗಿ, ಪೆರ್ಚುವ– ಹೆಚ್ಚುವ, ಮಹಿಮೆಯುಂ – ಪೆಂಪನ್ನು, ಎಯ್ದೆ – ಚೆನ್ನಾಗಿ, ನಿಮಿರ್ಚೆ – ಪಸರಿಸಲು, ಮಹಾಮುಕುಟಬದ್ಧರ್ – ಮಹಾರಾಜರುಗಳು, ಓಳಿಯೊಳ್–ಪಂಕ್ತಿಯಲ್ಲಿ, ಸಾಲಾಗಿ, ಇರ್ದರ್–ಇದ್ದರು. ಲೋಹಾಸನ (೯–೨೮ವ) ನೋಡಿ.

೨೫. ಮಗಮಗಮಗಿಸುವ – ಗಮಗಮಾಯಿಸುತ್ತಿರುವ, ಮೃಗಮದದ–ಕಸ್ತೂರಿಯ, ಅಗರುವ–ಅಗರುವಿನ, ಕಪ್ಪುರದ–ಕರ್ಪೂರದ, ಕಂಪುಮಂ–ಸುಗಂಧವನ್ನೂ, ಸೂಡಿದ–ಮುಡಿದುಕೊಂಡ, ಬಾಸಿಗದ–ಹೂವಿನ ಹಾರದ, ಪೊಸಗಂಪುಮಂ–

ಘೋಷವಾದ ಕಂಪನ್ನೂ, ಚಮರರುಹ ಗಂಧವಹಂ–ಚಾಮರದ ಬೀಸುವಿಕೆಯಿಂದ ಬಂದ ಗಾಳಿಯು, ಒಗೆದಿರೆ–ಎಬ್ಬಿಸುತ್ತಿರಲು, ಇಂಬಾಗಿ–ಸಂತೋಷದಾಯಕವಾಗಿ. ಮಾಡಿದುದು–ಮಾಡಿತು. ಈ ಪದ್ಯವು ಆದಿಪುರಾಣದ ಪದ್ಯಕ್ಕೆ (೯–೬) ಸಮಾನವಾಗಿದೆ, ಸ್ವಲ್ಪ ಪಾಠಭೇದಗಳೊಡನೆ.

೨೬. ಪಸರಿಸಿದ – ವ್ಯಾಪಿಸಿದ, ತಾರಹಾರದ – ಮುತ್ತಿನಹಾರಗಳ, ಪೊಸ ಬೆಳ್ದಿಂಗಳುಮಂ – ಹೊಸದಾದ ಬೆಳ್ದಿಂಗಳನ್ನೂ, ಅಮರ್ದ–ಸೇರಿಕೊಂಡ, ಧರಿಸಿದ, ಪೆರ್ದುಡುಗಗಳೊಳ್–ದೊಡ್ಡ ಎಂದರೆ ಬೆಲೆಯುಳ್ಳ ಆಭರಣಗಳಲ್ಲಿ, ಮಿಸುಗುವ – ಪ್ರಕಾಶಿಸುವ, ಪೊಸ ಮಾಣಿಕದ–ಹೊಸದಾದ ರತ್ನಗಳ, ಎಳವಿಸಿಲುಮಂ–ಎಳೆಯ ಬಿಸಿಲನ್ನೂ, ಅರಿಗನ ಸಭೆಯೊಳ್–ಅರಿಕೇಸರಿಯ ಆಸ್ಥಾನದಲ್ಲಿ, ಒಡಗೂಡಲ್ – ಜೊತೆ ಜೊತೆಯಾಗಿಯೇ ನೋಡಲು, ಆದುದು–ಆಯಿತು, ಎಂದರೆ ಬೆಳುದಿಂಗಳೂ ಕೆಂಬಿಸಿಲೂ ಒಟ್ಟಿಗೆ ಇದ್ದಂತೆ ತೋರುತ್ತಿತ್ತು.

ವಚನ: ಸಂಸಾರ ಸಾರೋದಯನ ಎಂದರೆ ಆ ಬಿರುದುಳ್ಳ ಅರಿಕೇಸರಿಯ ಅಥವಾ ಅರ್ಜುನನ; ವೈತಾಳಿಕ–ವಿವಿಧ ತಾಳಗಳನ್ನು ಉಪಯೋಗಿಸಿ ಹಾಡುವ ಗಾಯಕ.

೨೭. ರಾಮ....ಖಂಡಾತ್: ರಾಮಚಾಪ–ಶ್ರೀರಾಮನ ಬಿಲ್ಲಿನ, ಅಟನಿ–ಕೊಪ್ಪುಗಳ, ತುದಿಗಳ, ತಟಯುಗ – ಎರಡು ಕಡೆಗಳೆಂಬ, ಟಂಕ–ಉಳಿಗಳಿಂದ, ಅಂಕಿತ–ಗುರುತು ಮಾಡಲ್ಪಟ್ಟ, ಅಖಂಡ–ಸಮಗ್ರವಾದ, ಖಂಡಾತ್–ಭರತಖಂಡ ದಿಂದ, ಆಸೇತೋ – ರಾಮಸೇತುವೆಯ ಪರ್ಯಂತ; ಆಪೀಯೂಷಾಬ್ಧಿ – ಹಾಲ್ಗಡಲಿನಿಂದ, ಕ್ಷೀರಸಾಗರದಿಂದ, ದುಗ್ಧಪ್ಲವಧವಳ – ಹಾಲಿನ ಪ್ರವಾಹದಂತೆ ಬೆಳ್ಳಗೆ. ಕಸತ್–ಪ್ರಕಾಶಿಸುತ್ತಿರುವ: ಮಂದರಾದ್ರೇಃ–ಮಂದರ ಪರ್ವತದ, ಕಂದರಾತ್ – ಕಣಿವೆಗಳವರೆಗೆ; ಸ್ವೋದಯಸ್ಯ – ತನ್ನ ಉಛ್ರಾಯಕ್ಕೆ, ಏಕಹೇತೋಃ–ಒಂದೇ ಕಾರಣವಾಗಿರುವ, ಆ ಚಂದ್ರಾರ್ಕ ಪ್ರತೀತ–ಚಂದ್ರ ಸೂರ್ಯರವರೆಗೆ ಪ್ರಸಿದ್ಧವಾದ, ಉಭಯಗಿರಿ ಶಿಖರಾತ್–ಪೂರ್ವ ಪಶ್ಚಿಮ ಪರ್ವತಗಳ ಶಿಖರಗಳವರೆಗೆ, ತ್ರೈಲೋಕ್ಯ ಕಲ್ಪಕಾಳಂ – ಪರ್ವತ ಭೂಮಿಗಳು ಇರುವಷ್ಟು ವರ್ಷಗಳವರೆಗೂ, ವಿಕ್ರಾಂತ ತುಂಗಃ–ಅರ್ಜುನನು, ಕ್ಷಿತಿವಲಯಮಿದಂ–ಈ ಭೂಮಂಡಲವನ್ನು, ಪಾತು–ರಕ್ಷಿಸಲಿ. ಈ ಪದ್ಯದ ಪಾಠದ ವಿಷಯದಲ್ಲಿ ಸಂದೇಹವಿದೆ.

೨೮. ಯಸ್ಯಗುಣಾರ್ಣವಕ್ಷಿತಿಪತೇಃ – ಯಾವ ಅರಿಕೇಸರಿ ರಾಜನ (ಅರ್ಜುನನ), ಶೌರ್ಯಂ–ಪ್ರತಾಪವು, ಸವ್ಯಾಪಸವ್ಯಕ್ರಮಾತ್–ಬಲ ಎಡಗೈಗಳಿಂದ ಬಾಣ ಪ್ರಯೋಗ ಮಾಡುವ ಕ್ರಮದಿಂದ, ಗರ್ವಾಕೃಷ್ಟ–ಗರ್ವದಿಂದ ಕಿವಿವರೆಗೂ ಸೆಳೆದಿರುವ, ವಿಕರ್ಣ–ಬಾಣಗಳೆಂಬ, ಟಂಕನಿಕರ–ಉಳಿಗಳ ಸಮೂಹದಿಂದ, ಉತ್ಕೀರ್ಣ –ಕೊರೆಯಲ್ಪಟ್ಟ, ಪ್ರಭಾವ – ಶಕ್ತಿದ್ಯೋತಕವಾದ ಅಕ್ಷರೈಃ – ಅಕ್ಷರಗಳಿಂದ, ಮತ್ತಾರಿ....ಪಟ್ಟಂ:–ಮತ್ತ–ಸೊಕ್ಕಿದ, ಅರಿದ್ವಿಪ–ಶತ್ರುಜನರ ಆನೆಗಳ, ಮಸ್ತಕ

ಸ್ಥಿತ-ತಲೆಯಲ್ಲಿ ನೆಲಸಿರುವ, ಶಿಲಾಪಟ್ಟಂ-ಶಾಸನದ ಕಲ್ಲು, ಹಲಗೆಯು. ಸದಾ-ಯಾವಾಗಲೂ, ಆಖ್ಯಾಯತೇ-ಹೇಳುತ್ತದೆಯೋ, ತಸ್ಯ-ಅವನ, ಆ ಅರಿಕೇಸರಿಯ, ಅಯಂ-ಈ, ಸಮರ ಶ್ಲಾಘ್ಯ ಪ್ರಶಸ್ತಿ ಕ್ರಮಃ-ಯುದ್ಧವನ್ನು ಹೊಗಳುವ ಈ ಪ್ರಶಸ್ತಿಯ ವಿಧಾನ, ಪುನರುಕ್ತ ಏವ-ಪುನಃ ಹೇಳಿದಂತೆಯೇ, ಪುನರುಕ್ತವಾದದ್ದೇ.

೨೯. ಈ ಪದ್ಯದ ಪಾಠ ಹಲವೆಡೆ ಕೆಟ್ಟಿರುವುದರಿಂದ ಪೂರ್ಣವಾಗಿ ಅರ್ಥೈಸಲು ಆಗುವುದಿಲ್ಲ:

೩೦. ಪರಸ್ಪರ ವಿರುದ್ಧಯೋಃ-ಪರಸ್ಪರ ವಿರೋಧಿಗಳಾಗಿರುವ, ವಿನಯ ಯೌವನಾರಂಭಯೋಃ-ವಿನಯ ಮತ್ತು ಪ್ರಾಯಪ್ರಾರಂಭಗಳು; ಪ್ರಭೂತ ಸಹ ಜೇರ್ಷ್ಯಯೋಃ ಅಪಿ-ಉತ್ಪನ್ನವಾದ ಸಹಜವಾದ ಅಸೂಯೆಯನ್ನುಳ್ಳವರಾಗಿದ್ದರೂ, ಸರಸ್ವತೀ ಶ್ರೀಸ್ತ್ರಿಯೋಃ-ಸರಸ್ವತಿ ಮತ್ತು ಲಕ್ಷ್ಮಿ ಎಂಬ ಸ್ತ್ರೀಯರ; ತಥಾಚ-ಹಾಗೆಯೇ, ಮತ್ತು; ಪರಿಹಾರಿಣೋಪಿ-ಪರಸ್ಪರ ಪರಿಹಾರವನ್ನುಳ್ಳವಾದರೂ, ಮಹಾಕ್ಷಮಾಶೌರ್ಯಯೋಃ-ಮಹಾಕ್ಷಮಾಗುಣದ ಮತ್ತು ಪ್ರತಾಪದ; ಪ್ರಥಮ ಸಂಗಮಃ-ಮೊದಲ ಸಮಾಗಮವು, ಚಿ[ರಾತ್]-ಬಹಳ ಕಾಲದ ಅನಂತರ, ಹರಿಗಭೂಪತೌ-ಅರಿಕೇಸರಿ ರಾಜನಲ್ಲಿ, ದೃಶ್ಯತೇ-ಕಾಣಲ್ಪಡುತ್ತದೆ, ಕಾಣುತ್ತದೆ, ಎಂದರೆ ಅರಿಕೇಸರಿಯಲ್ಲಿ, ವಿನಯ ಯೌವನಗಳೂ, ಸರಸ್ವತಿಲಕ್ಷ್ಮಿಯರೂ ಕ್ಷಮಾ ಶೌರ್ಯಗಳೂ-ಇವು ಪರಸ್ಪರ ವಿರುದ್ಧವಾದ ಗುಣಗಳು ಮೊದಲ ಬಾರಿಗೆ, ಬಹು ಕಾಲದ ಅನಂತರ, ಒಟ್ಟಿಗೆ ಸೇರಿದ್ದವು. ಬಾಣಭಟ್ಟನು ತನ್ನ ಹರ್ಷಚರಿತ್ರೆಯಲ್ಲಿ ಮಾಧವಗುಪ್ತನನ್ನು ವರ್ಣಿಸುವಾಗ (ಚತುರ್ಥಕಃ ಉಚ್ಛ್ವಾಸಃ) "ಯಃಸಾ ಪರಸ್ಪರ ವಿರುದ್ಧಯೋಃ ವಿನಯ ಯೌವನಯೋಃ ಚಿರಾತ್ ಪ್ರಥಮ ಸಂಗಮ ಚಿಹ್ನಮಿವ ಭ್ರೂಸಂಗತಕೇನ ಕಥಯಂತಮ್" ಎಂದು ಹೇಳಿರುವುದನ್ನು ಇದರೊಡನೆ ಹೋಲಿಸಿ.

**ವಚನ:** ಪೊಗೞ್ದು-ಹೊಗಳಿ; ಮಾಣ್ದು-ನಿಲ್ಲಿಸಿದ; ಪಲ್ಲಟಿಸದೆಯುಂ-ವ್ಯತ್ಯಾಸ ಮಾಡದೆಯೂ; ಪರಿಚ್ಛೇದಂಗಳನಱಿದು-ಎಲ್ಲಿ ನಿಲ್ಲಿಸಬೇಕೋ ಅಲ್ಲಿ ನಿಲ್ಲಿಸುವುದನ್ನು ತಿಳಿದುಕೊಂಡು (ಈ ಶಬ್ದ ಸಂಗೀತದ ಪರಿಭಾಷೆ ಇರಬಹುದು); ಒಟ್ಟಜೆಯ ರಾಜಿಯಂ-[?]; ಕಣ್ಗೞಿಂಚರದೊಳಂ-ಕಣ್ಣುಗಳು ಇನಿದಾದ ಸ್ವರದಲ್ಲಿಯೂ [?], ಪೊಂಪುಟಿವೋಗೆ-ಅತಿಶಯವಾಗಲು;

೩೧. ರಂಗ...ಜಳಂ; ರಂಗತ್-ನರ್ತಿಸುತ್ತಿರುವ, ತುಂಗ-ಎತ್ತರವಾದ, ತರಂಗ-ಅಲೆಗಳ, ಭಂಗುರ-ಒಡೆತದಿಂದ, ಲಸತ್-ಪ್ರಕಾಶಮಾನವಾದ, ಗಂಗಾಜಳಂ-ಗಂಗಾ ನದಿಯ ನೀರು; ನರ್ಮದಾಸಂಗಸ್ವಚ್ಛವನಂ-ನರ್ಮದಾ ನದಿಯ ಕೂಡಲಿನ ಶುಭ್ರವಾದ ನೀರು; ಪ್ರಸಿದ್ಧವರದಾ ಪುಣ್ಯಾಂಬು-ಪ್ರಸಿದ್ಧವಾದ ವರದಾನದಿಯ ಪವಿತ್ರವಾದ ನೀರು; ಗೋದಾವರೀ ಸಂಗತ್ಯೂರ್ಜಿತವಾರಿ-

ಗೋದಾವರೀ ನದಿಯಲ್ಲಿ ಸೇರಿರುವ ವರ್ಧಿಸುತ್ತಿರುವ ನೀರು ; ಸಾರಯಮುನಾ ನೀಳೋರ್ಮಿ ನೀರಂ–ಸಾರವತ್ತಾದ ಯಮುನಾ ನದಿಯ ನೀಲಿಬಣ್ಣದ ಅಲೆಗಳನ್ನುಳ್ಳ ನೀರು ; ಇವೆಲ್ಲ, ಭುಜೋತ್ತುಂಗಂಗೆ–ಎತ್ತರವಾದ ಭುಜಗಳುಳ್ಳ, ಅರಿಗಂಗೆ –ಅರಿಕೇಸರಿಗೆ, ಮಂಗಳ ಮಹಾಶ್ರೀಯುಂ-ಮಂಗಳವೆಂಬ ಮಹಾ ಸಂಪತ್ತನ್ನೂ, ಜಯಶ್ರೀಯುಮಂ – ಜಯಲಕ್ಷ್ಮಿಯನ್ನೂ, ಈಗೆ – ಕೊಡಲಿ, ಇಲ್ಲಿ ಪಂಪ ಬನವಾಸಿಯ ಸಮೀಪದಲ್ಲಿ ಹರಿಯುವ ವರದಾ ನದಿಯನ್ನು ಹೇಳಿರುವುದು ಗಮನಾರ್ಹವಾಗಿದೆ.

೩೨. ಧೃತದೇವೀವಚನಾಮೃತಂ–ಸರಸ್ವತಿಯ ವಚನವೆಂಬ ಅಮೃತವು, ಶ್ರುತಕಥಾಳಾಪಂ–ಕೇಳಿದ, ಪ್ರಸಿದ್ಧವಾದ ಕಥಾಲಾಪಗಳು ; ಶ್ರುತಸ್ಕಂದ ಸಂತತಿ–ನಾಲ್ಕು ಅನುಯೋಗಗಳನ್ನು ಒಳಕೊಂಡ ಜೈನಾಗಮಗಳ ಸಮೂಹ ; ಶಶ್ವಚ್ಛ್ರುತಪಾರಗ ಶ್ರುತಿ–ಶಾಶ್ವತವಾದ ವೇದಗಳಲ್ಲಿ ಪಾರಂಗತರಾದವರ ಜ್ಞಾನ, ಮಹೋ . . . ಗೀತಿ ; ಮಹಾ–ದೊಡ್ಡದಾದ, ಊರ್ಮಿ–ಅಲೆಗಳಿಂದ, ಉಲ್ಲಾಸಿ–ಉಲ್ಲಾಸವನ್ನುಳ್ಳ, ವಾರಾಶಿ–ಸಮುದ್ರದಿಂದ, ವಾರಿತ–ತಡೆಯಲ್ಪಟ್ಟ, ಧಾತ್ರೀತಳ–ಭೂತಳದ, ಗೀತಿ–ಸ್ತೋತ್ರಗಳು ; ಇವೆಲ್ಲ; ನಿರ್ಮಳ ಯಶಂಗೆ–ನಿರ್ಮಲವಾದ ಕೀರ್ತಿಯುಳ್ಳ, ಆರೂಢ ಸರ್ವಜ್ಞ ಭೂಪತಿಗೆ–ಆರೂಢ ಸರ್ವಜ್ಞ ಎಂಬ ಬಿರುದುಳ್ಳ ರಾಜನಾದ ಅರಿಕೇಸರಿಗೆ, ಒಲ್ದು–ಪ್ರೀತಿ, ಮಂಗಳ ಮಹಾಶ್ರೀಯುಂ ಜಯಶ್ರೀಯುಮಂ, ಆಗಳುಂ–ಯಾವಾಗಲೂ, ಈಗೆ–ಕೊಡಲಿ.

೩೩. ಕೈಲಾಸಂ – ಕೈಲಾಸವೆಂಬ ಪರ್ವತ ; ನಿಷಧಾಧಿಪಾಂಗ ನಿಕಟಕ್ಷೋಣೀಧರಂ–ನಿಷಧ ಪರ್ವತ ಮತ್ತು ಅಂಗದೇಶಕ್ಕೆ ಸಮೀಪವಾದ ಪರ್ವತ ; ನೀಳಕುತ್ಕೀಲಂ–ನೀಲಾಚಲವೆಂಬ ಬೆಟ್ಟ ; ಕಂದಮಹೀಧರಂ–ಕಂದವೆಂಬ ಪರ್ವತ, ಶಿಖರನಾಮಂ – ಶಿಖರ ಎಂಬ ಹೆಸರುಳ್ಳ, ಉದ್ಯನ್ನಗಂ–ಎತ್ತರವಾದ ಪರ್ವತ ; ಪ್ರಸ್ಫುರತ್–ಅತಿ ಪ್ರಕಾಶಮಾನವಾಗಿರುವ, ಪ್ರಾಲೇಯಾಚಲಂ–ಹಿಮವತ್ಪರ್ವತ, ಇವೆಲ್ಲ, ಈತಂ–ಈ ಅರಿಕೇಸರಿ, ಎಮ್ಮಂತೆವೋಲ್–ನಮ್ಮಂತೆ, ಇಳಾಭೃನ್ನಾಥಂ–ಪರ್ವತಗಳಿಗೆ ರಾಜ, ಅಥವಾ ರಾಜರಿಗೆ ರಾಜ ಎಂದು, ಇಂತು–ಹೀಗೆ, ಇಳಾಪಾಳಂಗೆ–ಭೂಪಾಲನಾದ, ಅರಿಗಂಗೆ–ಅರಿಕೇಸರಿಗೆ, ಮಂಗಳ ಮಹಾಶ್ರೀಯುಂ ಜಯಶ್ರೀಯುಮಂ, ಈಗೆ.

೩೪. ಜಳಧಿ ದ್ವೀಪ ರಸಾತಳಾಂಬರ ಕುಲಾದ್ರೀಂದ್ರಂಗಳ್ – ಸಮುದ್ರ ದ್ವೀಪ ಪಾತಾಳ ಆಕಾಶ ಕುಲಪರ್ವತಗಳು, ಓರಂತೆ–ಕ್ರಮವಾಗಿ, ತನ್ನೊಳಂ–ತನ್ನಲ್ಲಿಯೂ (ಇರುವ), ಉದ್ಯತ್ಪ್ರಾಟಕಂಗಳ್–ಅತಿಶಯವಾದ ರತ್ನಗಳೂ, ಅಹವ ಮಹಾದ್ರವ್ಯಂಗಳ್ – ಯುದ್ಧದ ಮಹಾ ವಸ್ತುಗಳೂ, ಓರಂತೆ–ಕ್ರಮವಾಗಿ, ಮಂಗಳ ಕಾರ್ಯಂಗಳನಿತ್ತು – ಮಂಗಳಕರವಾದ ಕಾರ್ಯಗಳನ್ನು ಕೊಟ್ಟು, ಮತ್ತೆ–ಪುನಃ, ಮಣಿಭೂಷಾ ತುಂಗ ರತ್ನಾಂಶು ಪಾಟಳಿತಂಗೆ–ರತ್ನಖಚಿತವಾದ ಆಭರಣ

ಗಳ ಅತಿಶಯವಾದ ಕಿರಣಗಳಿಂದ ಕೆಂಪೇರಿದವನಾದ, ಅರಿಗಂಗೆ – ಅರಿಕೇಸರಿಗೆ, ಮಂಗಳ ಮಹಾಶ್ರೀಯುಂ ಜಯಶ್ರೀಯುಮುಂ ಈಗೆ.

೩೫. ನಯನಾನಂದ ಮೃಗಾಂಕ ಬಿಂಬಂ–ಕಣ್ಣುಗಳಿಗೆ ಆನಂದಕರವಾದ ಚಂದ್ರಮಂಡಲ : ಉದಯಂಗೆಯ್ವ – ಮೂಡುತ್ತಿರುವ, ಅರ್ಕಬಿಂಬಂ – ಸೂರ್ಯ ಮಂಡಲ; ಮನಃ ಪ್ರಿಯ ಲಕ್ಷ್ಮೀವದನೇಂದು ಬಿಂಬಂ–ಮನಸ್ಸಿಗೆ ಪ್ರಿಯಳಾದ ಲಕ್ಷ್ಮಿಯ ಮುಖಚಂದ್ರವೆಂಬ ಬಿಂಬವು ; ಅಖಿಳ–ಸಮಸ್ತವಾದ, ಕ್ಷ್ಮಾ –ಭೂಮಿಗೆ, ದ್ವೀಪ–ದ್ವೀಪಗಳಿಗೆ, ವಾರ್ಧಿ – ಸಮುದ್ರಗಳಿಗೆ, ಪ್ರಮೋದ – ಸಂತೋಷದ (ಸಂತೋಷವನ್ನು ಕೊಡುವ). ಯಶೋಬಿಂಬಂ–ಕೀರ್ತಿಯ ಮಂಡಲವು, ಉದ . . . ಹುಗೆ; ಉದಗ್ರ–ಉನ್ನತವಾದ, ದಿಕ್ಕರಿ–ದಿಕ್ಕಿನಾನೆಗಳ, ಕರ–ಸೊಂಡಲಿನ, ಆಕಾರ–ಆಕಾರವನ್ನುಳ್ಳ, ಲಸತ್–ಪ್ರಕಾಶಮಾನವಾದ, ಬಾಹುಗೆ–ಬಾಹುಗಳನ್ನುಳ್ಳ, ಪ್ರಿಯಗಳ್ಳಂಗೆ–ಪ್ರಿಯಗಳ್ಳನೆಂಬ ಬಿರುದಿದ್ದ, ಅರಿಕೇಸರಿಗೆ, ಒಸೆದು–ಸಂತೋಷಿಸಿ, ಮಂಗಳ ಮಹಾಶ್ರೀಯುಂ ಜಯಶ್ರೀಯುಮುಂ, ಈಗೆ.

ವಚನ : ಪೊಗಳ್ದು ಮಾಣ್ದನಂತರದೊಳ್–ಹೊಗಳಿ ನಿಲ್ಲಿಸಿದ ತರುವಾಯ ; ಧವಳಾಕ್ಷತಂಗಳಂ ತಳಿದು–ಬಿಳಿ ಅಕ್ಷತೆಗಳನ್ನು ಚಿಮುಕಿಸಿ (ಹಾಕಿ).

೩೬. ಹರಿಗ – ಅರ್ಜುನನೇ, ಅರಿಭೂಪಾಲದವಾನಳಂ – ಶತ್ರುರಾಜರೆಂಬ ಕಾಳ್ಗಿಚ್ಚು, ನಿನ್ನ–ನಿನ್ನ, ಉಗ್ರಾಸಿಧಾರಾ – ಭಯಂಕರವಾದ ಕತ್ತಿಯ ಅಲಗೆಂಬ, ಅಂಬುಶೀಕರದಿಂ – ನೀರಿನ ಹನಿಗಳಿಂದ, ಮಱ್ಗೆ – ನಾಶವಾಗಲಿ, ನಂದಲಿ ; ಅರ್ಥಿ ಸಸ್ಯಕ್ಕೆ–ಯಾಚಕರೆಂಬ ಸಸಿಗಳಿಗೆ, ದಾನವರ್ಷಸಲಿಲಂ–ದಾನವೆಂಬ ಮಳೆಯ ನೀರು, ಕೊಳ್ಗೆ–ಸುರಿಯಲಿ ; ನಿನ್ನ, ಅದೊಂದು, ಪಲವುಂ–ಹಲವೂ, ಬಣ್ಣಂಗಳಂ–ವರ್ಣಗಳನ್ನು ಎಂದರೆ ಹಾಡುಗಳನ್ನು, ಕಿನ್ನರಿಯರ್–ಕಿನ್ನರ ಸ್ತ್ರೀಯರು, ಮೇರು, ಮಂದರ, ಕೈಲಾಸ, ಮಹೇಂದ್ರ, ನೀಳ, ನಿಷಧ–ಎಂಬ, ಅದ್ರೀಂದ್ರ–ಶ್ರೇಷ್ಠ ಪರ್ವತಗಳ, ಉಪಕಂಠಂಗಳೊಳ್–ಸಮೀಪ ಪ್ರದೇಶಗಳಲ್ಲಿ, ಪಾಡುಗೆ–ಹಾಡಲಿ :

ವಚನ : ಮುಮುಕ್ಷು ವೃತ್ತಿಯೊಳ್–ಮೋಕ್ಷಾಪೇಕ್ಷೆಯ ನಡವಳಿಕೆಯಲ್ಲಿ ; ಬಾಟ್ಟೆಯಲ್ಲಂ–ಪ್ರಯೋಜನವಲ್ಲ ;

೩೭. ನಿನ್ನ ದಯೆಯಿಂದಂ – ನಿನ್ನ ಕರುಣೆಯಿಂದ, ಅರಿನೃಪರಂ – ಶತ್ರು ರಾಜರನ್ನು, ನೆಱೆ–ಪೂರ್ಣವಾಗಿ, ಕೊಂದ, ಎಮಗೆ–ನಮಗೆ, ಸಕಳ ರಾಜ್ಯಶ್ರೀಯುಂ–ಸಮಸ್ತ ರಾಜ್ಯಸಂಪತ್ತೂ, ನಿನ್ನ–ಬಲದಿಂದೆ–ನಿನ್ನ ಶಕ್ತಿಯಿಂದ, ಸಾರ್ದುದು –ಸೇರಿತು. ನಿನ್ನುಪಕಾರಮುಂ – ನಿನ್ನ ಸಹಾಯವನ್ನು, ಅದೇತಱೊಳ್ – ಅದು ಯಾವುದರಲ್ಲಿ, ನೀಗುವೆನೋ–ತೀರಿಸುವೆನೋ !

ವಚನ : ಅನುನಯವಚನ–ಪ್ರೀತಿಯ, ಸ್ನೇಹದ ಮಾತು : ಅವಯವದಿಂ–ಸುಲಭವಾಗಿ, ಶ್ರಮವಿಲ್ಲದೆ ; ಮಸುಳೆವಂದ – ಮಾಸಿಸಿದ ; ನೆಗೞ್ತೆಯೊಳ್–

ಕಾರ್ಯದಲ್ಲಿ ; ಅಸುಂಗೊಳಿಸಿದ–ಆಶ್ಚರ್ಯಪಡಿಸಿದ, ಬೆರಗಾಗಿಸಿದ ; ಏಳಿಸಿದ–ತಿರಸ್ಕರಿಸಿದ ; ಮಾರ್ಮಲೆವರಿಲ್ಲ–ಪ್ರತಿಭಟಿಸುವವರು ಇಲ್ಲ ; ಬಾಳ ಬಾಯೊಳ್–ಕತ್ತಿಯ ಬಾಯಲ್ಲಿ, ಧಾರೆಯಲ್ಲಿ ; ಅಱಿಸಿಡಿದುದಱಿಂ–ನಾಶಮಾಡಿದ್ದರಿಂದ ; ಅಮುಂದಪ್ಪಸಿಗೆ–ಉಚ್ಚವಾದ ಕೂಗಿಗೆ, ಗರ್ಜನೆಗೆ ; ಒಡ್ಡೊಡೆದು–ಸೈನ್ಯವ್ಯೂಹ ಭಿನ್ನವಾಗಿ ; ವಿದ್ವಿಷ್ಟಬಲಂ–ಶತ್ರು ಸೈನ್ಯ ; ಆಳುರ್ದುಕೊಳ್ವುದಱಿಂದೆ–ವ್ಯಾಪಿಸಿ ಸುಡುವುದರಿಂದ ; ಕುರಂಗಂಗಳನ್–ಜಿಂಕೆಗಳನ್ನು ; ಪಿರಿಯನಪ್ಪುದಱಿಂ–ದೊಡ್ಡವನಾಗಿರುವುದರಿಂದ ; ವಿಕ್ರಮಕ್ರಮಂ–ಪರಾಕ್ರಮವೇ ಕ್ರಮವು ; ಗೊಜ್ಜಿಗನೆಂಬ ಸಕಳ ಚಕ್ರವರ್ತಿ–ರಾಷ್ಟ್ರಕೂಟ ನಾಲ್ಕನೆಯ ಗೋವಿಂದನೆಂಬ ಚಕ್ರವರ್ತಿ ; ಎನಿತಾನುಂ ಗಜಗಮನಂಗಳಂ ತಾನೆಸಮೆದನಪ್ಪು ದಱಿಂ–ಎಷ್ಟೋ ಗಜಾಗಮಗಳನ್ನು, ಗಜಶಾಸ್ತ್ರಗಳನ್ನು ತಾನೇ ರಚಿಸಿದವನಾದ್ದರಿಂದ; ಗಜಗಮನ ರಾಜಪುತ್ರನಂ–ಗಜಾಗಮನವನ್ನು ರಚಿಸಿದ ರಾಜಪುತ್ರನ (೩-೩೯, ವ. ನೋಡಿ) ; ಗರ್ವವ್ಯಾಳಿಯುಮಂ–ಮದದಿಂದ ಕೂಡಿದ ತೊಂಡಾನೆಗಳನ್ನು ; ಅತಿಪತಿತ ಗಳುಮಂ–ವಶಕ್ಕೆ ಬರದೆ, ಅಧೀನವಾಗದೆ ಇರುವ ಆನೆಗಳನ್ನೂ ; ಕೆಯ್ಗೆಯ್ಯದೆ–ಸಿಂಗರಿಸಿಕೊಳ್ಳದೆ ; ಬರ್ದೆಯರುಮಂ – ಪ್ರೌಢಸ್ತ್ರೀಯರನ್ನೂ ; ತಕ್ಕಿನೊಳ್ – ಯೋಗ್ಯತೆಯಲ್ಲಿ ; ಕೂರ್ಪ ಕೂರದರ–ಪ್ರೀತಿಸುವ ಮತ್ತು ಪ್ರೀತಿಸದವರ ; ಅರಿಕೇಸರಿ–ಶತ್ರುಗಳಿಗೆ ಸಿಂಹವಾಗಿರುವವನು ;

೩೮. ಆವಋತುವಿಂಗೆ–ಯಾವ ಋತುವಿಗೆ, ಆವ ಪಸದನಂ–ಯಾವ ಉಡಿಗೆ ತೊಡಿಗೆಗಳು, ಅಮರ್ದು – ಹೊಂದಿಕೊಂಡು, ಒಪ್ಪುಗುಂ – ಒಪ್ಪುತ್ತವೆಯೋ ; ವಿನಯುಂ–ವಿನಯವು, ನಮ್ರತೆಯು, ಆವ ಪ್ರೊಬ್ತು–ಯಾವ ಹೊತ್ತು, ಅದು ಆವ ಎಸಕದೊಳ್–ಅದು ಯಾವ ಕಾರ್ಯದಲ್ಲಿ, ಒಪ್ಪುಗುಂ–ಹೊಂದುತ್ತದೆಯೋ ; ಆವೆಡೆಗೆ–ಯಾವ ಸಮಯಕ್ಕೆ, ಆವುದು–ಯಾವುದು, ಜೆಲ್ವುವೆತ್ತು–ಸೊಗಸನ್ನು ಹೊಂದಿ, ರಂಜಿಸುಗುಂ – ಸಂತೋಷಪಡಿಸುತ್ತದೋ, ಅದರ್ಕೆ – ಅದಕ್ಕೆ, ಅದಂ – ಅದನ್ನು, ಸಮಱಿ–ಸುಂದರವಾಗಿ ಸೇರಿಸಿ, ನಿಚ್ಚಲುಂ–ಪ್ರತಿದಿನವೂ, ಆ ಬೆಡಂಗು–ಆ ವೈಭವ, ಆ ವಿನೋದಂ–ಆ ಸಂತೋಷ, ಆ ಪಸದನಂ–ಆ ಅಲಂಕಾರ, ಆ ವಿಲಾಸದೊಳ್–ಆ ಲೀಲೆಯಲ್ಲಿ, ಒಡಂಬಡೆ–ಸೇರಿ ಒಪ್ಪಲು, ಗುಣಾರ್ಣವಂ–ಅರಿಕೇಸರಿ, ಭೋಗಿಸಿದಂ–ಸುಖಪಟ್ಟನು, ರಾಜನು ಆಯಾ ಋತುವಿನಲ್ಲಿ ಧರಿಸಬೇಕಾದ ವಸ್ತ್ರಗಳನ್ನು ಕೆಳಗೆ ಕೊಟ್ಟಿದೆ:—

(1) ವಸಂತಕಾಲ : ವಸಂತೇ ಬಿಭೃಯಾದ್ರಾಜಾ ಕೌಸುಕಾರ್ಪಾಸಿಕಾನಿ ಚ
ಸುಶ್ಲಕ್ಷ್ಣಾಣಿ ಮನೋಜ್ಞಾನಿ ಸೂಕ್ಷ್ಮಾಣಿ ವಿರಲಾನಿ ಚ ॥

(2) ನಿದಾಘ (ಬೇಸಿಗೆ) : ನಿದಾಘೇ ಧಾರಯೇತ್ ರಾಜಾ ಸಿತಾನಿ ವಿವಿಧಾನಿ ಚ ।
ರೋಮಜಾನಿ ಸುಸೂಕ್ಷ್ಮಾಣಿ ಶ್ಲಕ್ಷ್ಣಾನಿ ವಿವಿಧಾನಿ ಚ ॥

(3) ವರ್ಷಾಋತು : ಮಾಂಜಿಷ್ಠಾನಿ ಚ ರಕ್ತಾನಿ ಪ್ರಾವೃಟ್ಕಾಲೇ ವಿಧಾರಯೇತ್ ।
ಪಾಟಲಾನ್ಯಭಿರಾಮಾಣಿ ಧೂಮ್ರಾಣಿ ಮಧುರಾಣಿ ಚ ॥

(4) ಶರತ್ಕಾಲ : ಶರತ್ಕಾಲೇಽತಿಸೂಕ್ಷ್ಮಾಣಿ ವಸನಾನಿ ವಿಧಾರಯೇತ್ ।
ಕೌಸುಂಭಾನಿ ಸುಭವ್ಯಾನಿ ಲಾಕ್ಷಿಕಾನಿ ಘನಾನಿ ಚ ॥

(5) ಶೀತಕಾಲ : ಆಂಕಿಕಾಶ್ಚ ಪಟೀಜಾತಾಃ ಶೀತಕಾಲೇ ಭಜೇನ್ನೃಪಃ ।
ಋತೂನಾಮನುಸಾರೇಣ ಶೃಂಗಾರಸ್ಯಾನುಸಾರತಃ ॥

ಯಾವ ಸಂದರ್ಭದಲ್ಲಿ ಯಾವ ವಸ್ತ್ರಧಾರಣೆ ಇರಬೇಕೆಂಬುದನ್ನು

ಶೀತವಾತೇ ಪ್ರಯಾಣೇ ಚ ಪಾರಧ್ಯೌ ವಾರಿಖೇಲನೇ ।
ಸೂಕ್ಷ್ಮಾಣಿ ಬಹುಮೂಲ್ಯಾನಿ ವರ್ಣಾಢ್ಯಾನಿ ವರಾಣಿ ಚ ॥
ನಾನಾ ದ್ವೀಪಸಮುತ್ಥಾನಿ ಶೃಂಗಾರೇ ಧಾರಯೇನ್ನೃಪಃ ॥

ಮಾಗಿಯ ಕಾಲದಲ್ಲಿ ಜನ ಹೇಗೆ ಬದುಕುತ್ತಿದ್ದರೆಂಬುದನ್ನು ದೇವಕವಿ ಹೀಗೆ ಹೇಳಿದ್ದಾನೆ :—

ನಸುಬಿಸಿಯುಪ್ಪ ನಲ್ಲುಣಿಸಿನಿಂ ಘುಸೃಣಾರ್ದ್ರ ವಿಲೇಪದಿಂ ಪಿರಾ
ಜಿಸುವ ಕದಂಬದಂಬುಲದಿನಂಚಿತಕಾಂಚನ ಭೂಷಣಂಗಳಿಂ ।
ಪೊಸಕದ ಶೋಣವರ್ಣವಸನಾವೃತದಿಂ ಜನಮಾಗಳಿಂತು ಜೀ
ವಿಸಿತನಿತಲ್ಲಪಂದುಟಿವುದೇ ಹಿಮದಾಗರಮಾದ ಮಾಗೆಯೊಳ್ ॥

ಮೇಲಿನ ಪಂಪನ ಪದ್ಯ ಅವನ ಭೋಗಕಾಂಕ್ಷೆಯನ್ನೂ ದೃಷ್ಟಿಯನ್ನೂ ತೋರಿಸುತ್ತಿರುವುದಲ್ಲದೆ ಅವನು ಸಂಸಾರದಲ್ಲಿ ಪಟ್ಟ ಸುಖವನ್ನೂ ಪ್ರತಿಬಿಂಬಿಸುತ್ತದೆ. ಧರ್ಮಮೂಲವಾದ ಅರ್ಥಕಾಮಗಳು ಗ್ರಾಹ್ಯವೆಂಬಂಶ ಅವನ 'ಆದಿಪುರಾಣ'ದಲ್ಲಿ ಸ್ಪಷ್ಟವಾಗಿದೆ; ಮಾವು, ಮಲ್ಲಿಗೆ—ಇವೆರಡಿದ್ದರೆ ಸಾಕು; "ಇಂಪೆಱತಾವುದು ಸಂಸಾರ ಸಾರ ಸರ್ವಸ್ವ ಫಲಂ"

೩೯. ಪಸರಿಸಿ–ಹರಡಿ, ನೀಳ್ದ–ದೀರ್ಘವಾದ, ತನ್ನ, ಜಸದೊಳ್–ಕೀರ್ತಿಯಲ್ಲಿ, ಪೆಱನೊರ್ವನ – ಇನ್ನೊಬ್ಬನ, ಕೀರ್ತಿ – ಕೀರ್ತಿಯು, ತಳ್ತು – ಸೇರಿ, ರಂಜಿಸೆ – ಶೋಭಿಸಲು, ನೆಗೞ್ದಾತಂ – ಪ್ರಸಿದ್ಧನಾದವನು, ಏಂ ನೆಗೞ್ದಂ – ಏನು ಪ್ರಸಿದ್ಧನಾದನು? ಎಂದರೆ ತನ್ನ ಕೀರ್ತಿಯೊಡನೆ ಇನ್ನೊಬ್ಬನ ಕೀರ್ತಿ ಸಮಾನವಾಗಿದ್ದರೆ ತಾನು ಏನು ಪ್ರಸಿದ್ಧಿ ಪಡೆದಂತಾಯಿತು? ತನಗೆ ಸಮಾನನು ಇನ್ನೊಬ್ಬನಿಲ್ಲವೆಂದಾಗ ತಾನೆ ತನ್ನ ಕೀರ್ತಿ ಬೆಳಗುವುದು, ಎಂಬ–ಎನ್ನುವ, ಚಲಂ–ಛಲವು, ಮಿಗೆ–ಹೆಚ್ಚಾಗಲು. ತನ್ನ ಪೆಂ[ಪೆ]–ತನ್ನ ಹಿರಿಮೆಯೇ, ತನ್ನೆಸಕಮೆ–ತನ್ನ ಕಾರ್ಯವೇ, ತನ್ನ ವಿಕ್ರಮಮೆ–ತನ್ನ ಶೌರ್ಯವೇ, ತನ್ನ ನೆಗೞ್ತೆಯೆ–ತನ್ನ

ಖ್ಯಾತಿಯೇ, ತನ್ನ ವಾತೆ–ತನ್ನ ಸುದ್ದಿಯೇ, ಎಸೆವ–ಶೋಭಿಸುವ, ಜಗತ್ರಯಕ್ಕೆ– ಮೂರು ಲೋಕಕ್ಕೆ, ತಾನೆನಿಸಿ–ತಾನೇ ಎನ್ನಿಸಿ, ನೆಲನಂ–ರಾಜ್ಯವನ್ನು, ಗುಣಾರ್ಣವಂ–ಅರಿಕೇಸರಿ, ಪಾಲಿಸಿದಂ–ಪಾಲನೆ ಮಾಡಿದನು.

೪೦. ಆ ಮಳಯಾಚಳ ಹಿಮಗಿರಿ ಸೀಮಾವನಿತಳಕೆ–ಮಲಯ ಪರ್ವತದಿಂದ ಹಿಡಿದು ಹಿಮವತ್ಪರ್ವತವನ್ನು ಮೇರೆಯಾಗುಳ್ಳ ಭೂಭಾಗಕ್ಕೆ, ವೆಂಗಿಮಂಡಳಮೆ– ವೆಂಗಿ ದೇಶವೇ, ಚೆಲ್ವು–ಸೊಗಸು ; ಅವಗಮೆ–ಪೂರ್ಣವಾಗಿ, ತನಗೆ–ತನಗೆಯೇ, ಎಂದು ಎಂಬುದಾಗಿ, ಒಂದೂರ್–ಒಂದು ಊರು, ನಾಮದೊಳಂ–ಹೆಸರಿನಲ್ಲಿ, ವೆಂಗಿಪಟು–ವೆಂಗಿಪಳು ಎಂಬುದು, ಕರಂ–ವಿಶೇಷವಾಗಿ, ಸೊಗಯಿಪ್ಪುದು– ಶೋಭಿಸುತ್ತದೆ.

೪೧. ಅದುವೇ–ಅದೇ ಎಂದರೆ ವೆಂಗಿಪಳುವೇ, ವಸಂತಂ, ಕೊಟ್ಟೂರ್– ಕೊಟ್ಟೂರು, ಒದವಿದ–ಉಂಟಾದ, ನಿಡುಗುಂದಿ, ಮಿಕ್ಕ–ಅತಿಶಯವಾದ, ವಿಕ್ರಮಪುರಂ–ವಿಕ್ರಮಪುರವು, ಎಂಬುದುಂ–ಎನ್ನಿಸಿಕೊಳ್ಳುವುದೂ, ಅಗ್ರಹಾರ–ಅಗ್ರಹಾರಗಳ, ಸಂಪತ್ಪದವಿಗಳೊಳ್–ಐಶ್ವರ್ಯದ ಪದವಿಗಳಲ್ಲೂ, ಅಗ್ರಗಣ್ಯಂ–ಶ್ರೇಷ್ಠನಾದ, ಊರ್ಜಿತ ಪುಣ್ಯಂ–ವರ್ಧಿಸುತ್ತಿರುವ ಪುಣ್ಯವುಳ್ಳ,

೪೨. ನಯಶಾಲಿ–ನಯವುಳ್ಳ, ವತ್ಸಗೋತ್ರ ಶ್ರಯಣೀಯಂ–ಆ ವತ್ಸಗೋತ್ರವನ್ನು ಅವಲಂಬನವಾಗುಳ್ಳ, ಸಕಳಶಾಸ್ತ್ರಾರ್ಥ ವಿನಿಶ್ಚಯಮತಿಕೃತಿ–ಎಲ್ಲ ಶಾಸ್ತ್ರಗಳ ಅರ್ಥ ನಿರ್ಣಯದಲ್ಲಿ ಬುದ್ಧಿ ವ್ಯಾಪಾರವುಳ್ಳ, ಮಾಧವಸೋಮಯಾಜಿ–ಮಾಧವ ಸೋಮಯಾಜಿಯೆಂಬುವನು, ಆ ಸಮುದ್ರಂ ಬರೆಗಂ–ಆ ಕಡಲ ಕಡೆವರೆಗೂ, ಸಲೆ– ಚೆನ್ನಾಗಿ, ನೆಗಲ್ದಂ–ಪ್ರಸಿದ್ಧನಾದನು.

೪೩ ಶಕ್ರಶಶಾಂಕ ಸೂರ್ಯ ಪವಮಾನರುಂ–ಇಂದ್ರ ಚಂದ್ರ ಸೂರ್ಯ ವಾಯುಗಳೂ, ಆತನ, ಹೋಮ ಮಂತ್ರ ಚಕ್ರ ಕ್ರಮಕ್ಕೆ–ಹೋಮದ ಮಂತ್ರವೆಂಬ ಚಕ್ರದ ಸಂಚಾರಕ್ಕೆ, ಅಣಂ–ಸ್ವಲ್ಪವೂ, ಮಿಡುಕಲ್–(ಅಡ್ಡಿಮಾಡಿ) ಬಲವನ್ನು ತೋರಿಸಲು, ಆಗಡೆ–ಆಗಲೇ, ಶಾಪಮಂ ಈಗುಂ–ಶಾಪವನ್ನು ಕೊಡುತ್ತಾನೆ, ಎಂದೆ–ಎಂಬುದಾಗಿಯೇ, ದಿಕ್ಚಕ್ರಮುಂ–ದಿಕ್ಪಾಲಯುಗಳೂ, ಅಂಜಿ–ಹೆದರಿ, ಬೆರ್ಚಿ–ಬೆದರಿ, ಬೆಸಕೆಯ್ವುವು–ಸೇವೆ ಮಾಡುತ್ತವೆ ; ಅದಲ್ಲದೆ–ಅದೂ ಅಲ್ಲದೆ, ಸರ್ವಕ್ರತು ಯಾಜಿಯಾದಂ–ಸರ್ವ ಕ್ರತುವೆಂಬ ಯಜ್ಞವನ್ನು ಮಾಡಿದವನಾದನು ; ಮಾಧವ ಸೋಮಯಾಜಿಯ, ಅಳವು–ಶಕ್ತಿ, ಪ್ರಭಾವ, ಇಂತುಟು–ಹೀಗೆ !

೪೪. ವರದಿಗ್ವನಿತೆಗೆ–ಶ್ರೇಷ್ಠಳಾದ ದಿಕ್ಕೆಂಬ ಸ್ತ್ರೀಗೆ, ಮಾಟದ–ಕೃತಕವಾದ, ಕುರುಳ್–ಕೇಶಗಳು ; ಆ ತ್ರಿಭುವನ ಕಾಂತೆಗಂ–ಆ ಮೂರು ಲೋಕಗಳೆಂಬ ಸ್ತ್ರೀಗೂ, ಕಂಠಾಭರಣಂ–ಕೊರಳಿನ ತೊಡವು ; ಎನೆ–ಎನ್ನಲು, ಪರೆದ–ವ್ಯಾಪಿಸಿದ, ತನ್ನಧ್ವರಧೂಮದೆ–ತನ್ನ ಯಾಗದ ಹೊಗೆಯಿಂದ, ನಿಜಯಶಮಂ–ತನ್ನ ಕೀರ್ತಿಯನ್ನು, ಕರಿದು ಮಾಡಿದಂ–ಕರಿದಾಗಿ ಮಾಡಿದನು.

ಪಂಪನು (೪೧-೪೩)ನೆಯ ಪದ್ಯಗಳಲ್ಲಿ ಮಾಧವ ಸೋಮಯಾಜಿಯನ್ನು ಬಹುವಾಗಿ ಹೊಗಳಿ ಮೆಚ್ಚಿ, ಈ ಪದ್ಯದಲ್ಲಿ ಅವನನ್ನು "ನಿಜಯಶಮಂ ಕರಿದು ಮಾಡಿದಂ" ಎಂದು ಹೇಳುವುದರಲ್ಲಿ ಔಚಿತ್ಯವೇನಿದೆ? ದಿಗಂತ ವ್ಯಾಪಿಯೂ ಮೂರು ಲೋಕಗಳಲ್ಲಿ ಪ್ರಸಾರವುಳ್ಳದ್ದೂ ಆಗಿದ್ದ ಅವನ ಕೀರ್ತಿ—ಇಂದು ಬೆಳ್ಳಗೆ ಇರುವುದೆಂದು ಕವಿಸಮಯ—ಅವನು ಮಾಡಿದ ಯಾಗಗಳ ಧೂಮದಿಂದ ಕರಿದಾಯಿತು ಎಂದರೆ ಪ್ರಶಸ್ತಿಯು ಮಾತಲ್ಲ. ಈ ಪದ್ಯದಲ್ಲಿ ಏನೋ ಪಾಠದೋಷವಿರಬೇಕೆಂದು ತೋರುತ್ತದೆ. ಈ ಪದ್ಯವನ್ನು ಬರೆಯುವಾಗ ಪಂಪ ಬಾಣಭಟ್ಟನ ಈ ಕೆಳಗಿನ ಪದ್ಯವನ್ನು ಸ್ಮರಣೆಗೆ ತಂದುಕೊಂಡಿರುವನೆಂದು ತೋರುತ್ತದೆ;

ದಿಶಾಮಲೀಕಾಲಕ ಭಂಗತಾಂ ಗತಃ
ತ್ರಯೀವಧೂ ಕರ್ಣತಮಾಲ ಪಲ್ಲವಃ ।
ಚಕಾರ ಯಸ್ಯಾಧ್ವರ ಧೂಮಸಂಚಯೋ
ಮಲೀಮಸಃ ಶುಕ್ಲತರಂ ನಿಜಂ ಯಶಃ ॥

ಇದು ಬಾಣನ 'ಕಾದಂಬರಿಯ' ಪ್ರಾಸ್ತಾವಿಕ ಶ್ಲೋಕಗಳಲ್ಲಿ ೧೩ನೆಯದು. ಇದರಲ್ಲಿ ಬಾಣ ತನ್ನ ತಂದೆಯಾದ ಚಿತ್ರಭಾನುವಿನ ಪ್ರಶಂಸೆಯನ್ನು ಮಾಡಿದ್ದಾನೆ. ಯಾರ ಯಾಗಧೂಮ ಸಮೂಹ ದಿಗ್ವನಿತೆಗಳ ಲಲಾಟದಲ್ಲಿ ಕುರುಳು ಗಳಾದುವೋ, ವೇದತ್ರಯಗಳೆಂಬ ಕಾಂತೆಯ ಕಿವಿಯಲ್ಲಿರುವ ತಮಾಲ ಪಲ್ಲವ ಗಳಾದುವೋ ಆ ಧೂಮವು ಮಲೀಮಸವಾಗಿದ್ದರೂ ಅವನ ಕೀರ್ತಿಯನ್ನು ಶುಕ್ಲತರ ವಾಗಿ ಮಾಡಿದವು—ಇದು ಪದ್ಯದ ಅಭಿಪ್ರಾಯ. ಅವನ ಕೀರ್ತಿ ಮೊದಲೇ ಬೆಳ್ಳಗೆ ಇತ್ತು: ಅದನ್ನು ಯಾಗಧೂಮದ ಹೊಗೆ ತಾನೇ ಕರಿದಾಗಿದ್ದರೂ ಹೆಚ್ಚು ಬೆಳ್ಳಗಾಗಿಸಿತು. ಎಂದರೆ ಅವನ ಕೀರ್ತಿ ದಿಗಂತದವರೆಗೂ ವ್ಯಾಪಿಸಿತು; ಮೂರು ವೇದಗಳಿಗೆ ಕರ್ಣಾಭರಣವಾಯಿತು; ಅತಿಶಯವಾಯಿತು ಎಂದು ಭಾವ. ಈ ಪದ್ಯದಲ್ಲಿರುವ ಅಲೀಕ ಶಬ್ದಕ್ಕೆ ಕೃತಕ, ಲಲಾಟ ಎಂಬೆರಡರ್ಥಗಳಿವೆ. ಪ್ರಕೃತ ಪಂಪನು 'ಅಲೀಕ' ವನ್ನು ಕೃತಕಾರ್ಥದಲ್ಲಿ ಸ್ವೀಕರಿಸಿ 'ಮಾಟದ' ಎಂದು ಭಾಷಾಂತರಿಸಿದ್ದಾನೆ; 'ತ್ರಯೀವಧೂ'ವನ್ನು 'ತ್ರೈಭುವನ ಕಾಂತೆ'ಯನ್ನಾಗಿ ಮಾಡಿದ್ದಾನೆ; 'ಕರ್ಣತಮಾಲ ಪಲ್ಲವ'ವನ್ನು 'ಕಂಠಾಭರಣ' ವಾಗಿಸಿದ್ದಾನೆ: "ಮಾಟದ ಕುರುಳ್" ಚೆನ್ನಾಗಿದೆ; "ತ್ರೈಭುವನಕಾಂತೆ" ಆದುದಕ್ಕೆ ಕಾರಣ? ಪಂಪನಿಗೆ ಶ್ರೌತಸ್ಕಂಧದಲ್ಲಿ ಇದ್ದಷ್ಟು ನಂಬಿಕೆ ವೇದತ್ರಯದಲ್ಲಿ ಬಹುಶಃ ಇದ್ದಿರ ಲಾರದೇನೊ? ಆದ್ದರಿಂದ ಅವನು ಬಾಣನ ರೂಪಕವನ್ನು ಮಾರ್ಪಡಿಸಿರಬಹುದು. ಕಂಠ [ತೆಗಂ]ದಲ್ ಎಂಬುದಕ್ಕೆ, ಕಂಠಮಾಲಾ, ಕಂಠಮಾ, ಕಠಮಾ, ಕಾಂತ ಮಾದಲ್-ಎಂಬ ಪಾಠಾಂತರಗಳಿವೆ; ಇವನ್ನು ನೋಡಿದ ಈ ಎಡೆಯಲ್ಲಿ ಪಂಪನ ಪದ್ಯ ಕೆಟ್ಟಿದೆಯೆಂದು ತೋರಿಬರುತ್ತದೆ. ''ಶುಕ್ಲತರಂ ಚಕಾರ'' ಎಂಬ ಬಾಣನ

ಮಾತುಗಳಿಗೆ ಪ್ರತಿಯಾಗಿ "ಕರಿದು ಮಾಡಿದಂ" ಎಂದು ಏಕೆ ಬರೆದ ಪಂಪ? ಇದು ಬಹುಶಃ 'ಕರಮೆ ಮಾಡಿದಂ' ಎಂದಿರಬಹುದೇನೊ? ಎಂದರೆ ಅತಿಶಯ ವಾಗುವಂತೆಯೇ ಮಾಡಿದನು ಎಂಬರ್ಥ ಬರುತ್ತದೆ. ಅಂತು ಈ ಪದ್ಯ ಒಂದು ಸಮಸ್ಯೆಯಾಗಿದೆ.

೪೫. ತತ್ತನಯಂ–ಅವನ ಮಗನು, ಅತಿ ಪ್ರುರುಷೋತ್ತಮಂ ಪುರುಷರಲ್ಲಿ ಶ್ರೇಷ್ಠನಾದ, ಪೆಸರಿಂ – ಹೆಸರಿನಿಂದ, ಅಭಿಮಾನ ಚಂದ್ರಂ ಎನಿಪಂ – ಅಭಿಮಾನ ಚಂದ್ರ ಎನ್ನುವವನು, ಎರೆದರ್ಗೆ–ಬೇಡಿದವರಿಗೆ, ಅಖಿಳ–ಎಲ್ಲ, ಕರಿತುರಗೋತ್ತಮ ಮಣಿಕನಕ ಸಾರ ವಸ್ತುವಂ–ಆನೆ ಕುದುರೆ ಶ್ರೇಷ್ಠಗಳು ಹೊನ್ನು ಮುಂತಾದ ಬೆಲೆ ಬಾಳುವ ವಸ್ತುಗಳನ್ನು, ಇತ್ತು–ದಾನ ಮಾಡಿ, ಸಲೆ–ಚೆನ್ನಾಗಿ, ನೆಗಳ್ದಂ– ಪ್ರಸಿದ್ಧನಾದನು.

೪೬. ಭುವನ ಭವನ ಖ್ಯಾತಂಗೆ – ಭೂಲೋಕದಲ್ಲಿ ಪ್ರಸಿದ್ಧನಾದ, ಅತಂಗೆ –ಅವನಿಗೆ, ಸಮಸ್ತವೇದವೇದಾಂಗ ಸಮುದ್ಯೋತಿತಮತಿಯುತಂ – ಸಕಲ ವೇದ ಗಳಿಂದಲೂ ವೇದಾಂಗಗಳಿಂದಲೂ ಬೆಳಗಲ್ಪಟ್ಟ ಬುದ್ಧಿಯುವನಾದ, ಉಚಿತ ಪುರಾತನ ಚರಿತಂ – ಉಚಿತವಾದ ಹಳಬರ ನಡವಳಿಕೆಯುಳ್ಳ, ತನೂಭವಂ – ಮಗನು, ಕೊಮರಯ್ಯಂ–ಕುಮಾರಯ್ಯನೆಂಬುವನು.

೪೭. ಆ ಕೊಮರಯ್ಯಂಗೆ – ಆ ಕೊಮರಯ್ಯನಿಗೆ, ಅವನಿತಳಾಕಾಶ ವ್ಯಾಪ್ತ ಕೀರ್ತಿ – ಭೂತಳದಲ್ಲೂ ಆಕಾಶದಲ್ಲೂ ವ್ಯಾಪಿಸಿದ ಕೀರ್ತಿಯುಳ್ಳ; ನಿಜಗುಣಮಣಿ ರತ್ನಾಕರಂ–ತನ್ನ ಗುಣಗಳೆಂಬ ಮಣಿಗೆ ಸಮುದ್ರವಾಗಿರುವ, ಅಜ್ಞಾನ ತಮೋ ನಿಕರಂ – ಅಜ್ಞಾನವೆಂಬ ಕತ್ತಲನ್ನು ತೊಲಗಿಸುವ. ಅಭಿರಾಮದೇವರಾಯಂ – ಅಭಿರಾಮದೇವರಾಯನು, ತನಯಂ – ಮಗನು, ಈ ಪದ್ಯದ ಕೊನೆಯ ಪಂಕ್ತಿಯಲ್ಲಿ 'ನಿಕರಂ ಭೀಮನಾಮದೆಯಂ. ನೀಕಪರಂ ಭೀಮ ನಾಮಧೆಯಂ' ಎಂದು ಎರಡು ಪಾಠಾಂತರಗಳಿವೆ. ಇವು ಪರಿಗ್ರಾಹ್ಯವೇ ಎಂಬುದನ್ನು ನೋಡಬೇಕು. ಈಗ ಹೊಸದಾಗಿ ಸಿಕ್ಕಿರುವ ಗಂಗಾಧರದ ಜಿನವಲ್ಲಭನ ಶಾಸನ ಪಾಠ ನಿರ್ಣಯಕ್ಕೆ ಸಹಾಯಕವಾಗಿದೆ. ಜಿನವಲ್ಲಭನು, ಪಂಪನ ತಮ್ಮ; ಇವನು ತ್ರಿಭುವನ ತಿಲಕವೆಂಬ ಬಸದಿಯನ್ನೂ ಕವಿತಾಗುಣಾರ್ಣವವೆಂಬ ಕೆರೆಯನ್ನೂ ಮದನವಿಳಾಸವೆಂಬ ಉದ್ಯಾನವನವನ್ನೂ ನಿರ್ಮಾಪಿಸಿದನೆಂದು ಶಾಸನ ಹೇಳುತ್ತದೆ. ಇದರ ಮೊದಲಿನ ಎರಡು ಸಾಲುಗಳಲ್ಲಿ ಜಿನವಲ್ಲಭ ತನ್ನ ವಂಶ ವೃತ್ತಾಂತವನ್ನು ತಿಳಿಸುತ್ತಾನೆ. ಇವನು ಸಿದುಂ ಗೊಂಡೆಯ ಅಭಿಮಾನ ಚಂದ್ರನ ಮೊಮ್ಮಗನಾದ ಭೀಮಪ್ಪಯ್ಯನ, ಬೆಳ್ವೊಲದ ಅಣ್ಣಿಗೆಱೆಯ ಜೋಯಿಸ ಸಿಂಘನ ಮಮ್ಮಳ್ (ಮೊಮ್ಮಗಳು) ಅಬ್ಬಣಬ್ಬೆಯ, ಮಗನೆಂದು, ತಿಳಿದು ಬರುತ್ತದೆ. ಎಂದರೆ ಇವನ ತಂದೆ ಭೀಮಪ್ಪಯ್ಯ ತಾಯಿ ಅಬ್ಬಣಬ್ಬೆ. ಮಾತೃ ಪಿತಾಮಹ ಜೋಯಿಸ ಸಿಂಘ.

ಜೋಯಿಸ ಸಿಂಘ
(ಮೊಮ್ಮಗಳು)
|
ಭೀಮಪ್ಪಯ್ಯ (ಹೆಂಡತಿ ಅಬ್ಬಣಬ್ಬೆ)
|
ಪಂಪ ಜಿನವಲ್ಲಭ

ಅಬ್ಬಣಬ್ಬೆಯ ತಾತ ಅಣ್ಣಿಗೆಜ಼ರಿಯ ಜೋಯಿಸ ಸಿಂಘ, ಅವನ ಮೊಮ್ಮಗಳ ಮಗ ಜಿನವಲ್ಲಭ, ಪಂಪ ಇವನ ಅಣ್ಣನಾದುದರಿಂದ ಪಂಪನ ತಾಯಿ ಅಬ್ಬಣಬ್ಬೆಯೇ ಆಗಿರಬಹುದು, ಇವರು ಏಕೋದರರಾಗಿದ್ದ ಪಕ್ಷದಲ್ಲಿ. ಈ ಶಾಸನದಿಂದ ಪಂಪನ ತಂದೆಯ ಹೆಸರು ಭೀಮಪ್ಪಯ್ಯನೆಂದು ಖಚಿತವಾಗಿ ತಿಳಿಯುತ್ತದೆ[1]. ಮೇಲಿರುವ ಎರಡು ಪಾಠಾಂತರಗಳಲ್ಲೂ "ಭೀಮನಾಮಧೇಯುಂ" ಎಂದಿದೆ; ಇದು ಭೀಮ ನಾಮಧೇಯಂ ಎಂದಿರಬೇಕು 'ನಿಕರಂ ಭೀಮ ನಾಮಧೇಯಂ'—ಎಂಬುದು ಛಂದಸ್ಸಿನ ದೃಷ್ಟಿಯಿಂದ ಸರಿಯಾಗಿಲ್ಲ. 'ನೀಕಪನಂ ಭೀಮ ನಾಮಧೇಯಂ' ಎಂಬುದೂ ಹಾಗೆಯೇ, ಆದ್ದರಿಂದ ಈಗ ಇರುವಂತೆ ಈ ಪಾಠಾಂತರಗಳು ಗ್ರಾಹ್ಯವಾಗಿಲ್ಲ. ಇದನ್ನು ತಿದ್ದಿ "ತಮೋ ನೀ[ಕಾ]ರಂ ಭೀಮನಾಮಧೇಯಂ ತನಯಂ" ಎಂದು ಸರಿಯಾದ ಪಾಠವನ್ನು ರಚಿಸಬಹುದು. ಆಗ 'ಅಜ್ಞಾನ ತಮೋ ನೀ[ಕಾ]ರಂ' ಎಂಬುದಕ್ಕೆ ಅಜ್ಞಾನವೆಂಬ ಕತ್ತಲೆಯನ್ನು ಧಿಕ್ಕರಿಸುವವನು ಎಂದರ್ಥವಾಗುತ್ತದೆ.

೪೮. ಜಾತಿಯೊಳೆಲ್ಲಂ-ಎಲ್ಲ ಜಾತಿಗಳಲ್ಲೂ, ಉತ್ತಮದ-ಶ್ರೇಷ್ಠವಾದ, ಜಾತಿಯ, ವಿಪ್ರಕುಲಂಗೆ – ಬ್ರಾಹ್ಮಣ ಕುಲದವನಿಗೆ, ನಂಬಲ್ ಏ ಮಾತೋ-ನಂಬುವುದಕ್ಕೆ ಯಾವ ಮಾತೋ! ಜಿನೇಂದ್ರ ಧರ್ಮಮೆ-ಜೈನಧರ್ಮವೆ, ವಲಂ-ಅಲ್ಲವೆ, ಧರ್ಮದೊಳ್ – ಧರ್ಮಗಳಲ್ಲಿ, ದೊರೆ – ಅರ್ಹತೆಯನ್ನುಳ್ಳದ್ದು, ಎಂದು, ನಂಬಿ, ತಜ್ಜಾತಿಯುಂ-ಆ ಜೈನಧರ್ಮವನ್ನು, ಉತ್ತರೋತ್ತರಮೆ ಮಾಡಿ-ಅತಿಶಯ

[1] ಈ ಶಾಸನದ ಪಾಠದ ವಿಷಯದಲ್ಲಿ ಸ್ವಲ್ಪ ಚರ್ಚೆ ನಡೆದಿದೆ. ಜೋಯಿಸಸಿಂಘನ 'ಮಮ್ಮಗಂ' ಜಿನವಲ್ಲಭನೆಂದು ಒಂದು ಅಭಿಪ್ರಾಯ. ಜೋಯಿಸಸಿಂಘನ 'ಮಮ್ಮಗಳ್' ಅಬ್ಬಣಬ್ಬೆಯೆಂದೂ ಅವಳ ಮಗ ಜಿನವಲ್ಲಭನೆಂದೂ ಇನ್ನೊಂದು ಅಭಿಪ್ರಾಯ. ಇಲ್ಲಿ 'ಮಮ್ಮಗಳ್' ಎಂಬ ಪಾಠವೇ ಸರಿಯೆಂದು ಡಾ|| ಗೋವಿಂದರಾವ್ ಗಾಯಿ ಅವರು ಸ್ಥಾಪಿಸಿದ್ದಾರೆ. 'ಮಮ್ಮಗಳ್' ಶಬ್ದಕ್ಕೆ ಎರಡು ಪ್ರಯೋಗಗಳಿವೆ: (1) ಶಕ ೯೩೩ ರ ವಿಕ್ರಮಾದಿತ್ಯನ VI ಅಲೂರು ಶಾಸನ, ಪಂಕ್ತಿ ೧ (Epigraphia Indica XVI), (2) ಸಿಂಗವೆಗ್ಗಡೆಯ ಮುಂಮಳ್ ನಾಗವೆ ನಾಯ್ಕಿತಿಯ ಮಗ ಕಲಿಯಮ್ಮ (Epigraphia Carnatica VIII, ಸಾಗರ, ೮೩; ೧೧೬೩ AD.)

ನಾಡುವಾಗಿ ಮಾಡಿ, ಆತ್ಮ ವಿಖ್ಯಾತಿಯುಂ-ತನ್ನ ಕೀರ್ತಿಯನ್ನು, ಇಂತಿರೆ-ಹೀಗಿರಲು, ಆತಂ-ಆತನು, ನೆಗೞ್ಚಿದಂ-ಉಂಟುಮಾಡಿದನು ; ಆತನ ಮಗಂ-ಅವನ ಮಗನು, ಕವಿತಾಗುಣಾರ್ಣವನೆಂಬ ಬಿರುದಿದ್ದ ಪಂಪನು, ನೆಗೞ್ದಂ-ಪ್ರಸಿದ್ಧನಾದನು.

೪೯. ಪಂಪಂ-ಪಂಪನು, ಧಾತ್ರೀವಳಯನಿಳಿಂಪಂ-ಭೂಮಂಡಲದ ದೇವತೆ ; ಚತುರಂಗಬಲ ಭಯಂಕರಣಂ – ಚತುರಂಗ ಸೈನ್ಯಗಳಿಗೆ ಭಯೋತ್ಪಾದಕನು ; ನಿಷ್ಕಂಪಂ – ನಡುಗದವನು, ಧೈರ್ಯಶಾಲಿ, ಲಲಿತಾಲಂಕರಣಂ – ಸುಂದರವಾದ ಅಲಂಕಾರಗಳುಳ್ಳವನು ; ಪಂಚಶರೈಕರೂಪಂ-ಮನ್ಮಥನಂತೆಯೇ ರೂಪವುಳ್ಳವನು, ಅಪಗತ ಪಾಪಂ-ಪಾಪ ತೊಲಗಿದವನು, ಪುಣ್ಯಶಾಲಿ.

೫೦. ಕವಿತೆ-ಕಾವ್ಯವು, ನೆಗೞ್ತೆಯುಂ-ಖ್ಯಾತಿಯುನ್ನು, ನಿಱಿಸೆ-ಸ್ಥಾಪಿಸಲು, ಜೋಳದ ಪಾೞಿ – ಅನ್ನದ ಧರ್ಮ ಎಂದರೆ ಅನ್ನದಾತನಾದ ಸ್ವಾಮಿಗೆ ಕೃತಜ್ಞನಾಗಿರುವುದು ; ನಿಜಾಧಿನಾಥನ-ತನ್ನ ರಾಜನ, ಆಹವದೊಳ್-ಯುದ್ಧಗಳಲ್ಲಿ, ಅರಾತಿನಾಯಕರ – ಶತ್ರು ಸೇನಾನಿಗಳ, ಪಟ್ಟನೆ – ವೀರಪಟ್ಟಗಳನ್ನು, ಪಾಱಿಸೆ-ಹಾರಿಸಲು ; ಸಂದ-ಉಂಟಾದ, ಪೆಂಪು-ಹಿರಿಮೆ, ಭೂಭುವನದೊಳ್-ಭೂಲೋಕದಲ್ಲಿ ಅವಗಂ-ಯಾವಾಗಲೂ, ಬೆಳಗೆ-ಪ್ರಕಾಶಿಸಲು; ಮಿಕ್ಕ-ಉಳಿದ, ಅಭಿಮಾನದ ಮಾತುಗಳು, ಕೀರ್ತಿಯುಂ-ತನ್ನ ಯಶಸ್ಸನ್ನು, ವಿವರಿಸೆ-ವಿಸ್ತರಿಸಲು. ಕವಿತಾ ಗುಣಾರ್ಣವಂ – ಪಂಪನು, ಸಂದಂ – ಪ್ರಸಿದ್ಧನಾದನು ; ಏಂ ಕಲಿಯೋ ಸತ್ಕವಿಯೋ-ಏನು ಶೂರನೋ ಏನು ಉತ್ತಮ ಕವಿಯೋ! ಪಟ್ಟನೆ ಪಾಱಿಸು-ಪಟ್ಟಂಬಾಱಿಸು ; "ಮಿಾಱಿದ ಪಗೆವರ ಪಟ್ಟಂ ಬಾಱಿಸುವೆನೋ? (ಗದಾ. ೯-೧೭) ಎಂಬ ರನ್ನನ ಪ್ರಯೋಗವನ್ನು ನೋಡಿ! ಪಟ್ಟಮನೆ ಎಂದಿರಬೇಕು ; ಆದರೆ ಪಂಪ ಅಕಾರಾಂತ ಪಟ್ಟ ಶಬ್ದವನ್ನು ಉಕಾರಾಂತವಾಗಿ ಮಾಡಿದ್ದಾನೆ.

೫೧. ಆತಂಗೆ-ಆತನಿಗೆ (ಪಂಪನಿಗೆ), ಅರಿಕೇಸರಿ-ಅರಿಕೇಸರಿ ರಾಜ, ಸಂಪ್ರೀತಿಯೆ-ಕಟ್ಟೊಲವಿನಿಂದ, ಬೞಿಯಟ್ಟಿ-ದೂತನೊಡನೆ ಹೇಳಿ ಕಳುಹಿಸಿ, ಪಿರಿದನಿತ್ತು-ತುಂಬ ಧನಕನಕಾದಿಗಳನ್ನು ಕೊಟ್ಟು, ನಿಜಾಭಿಖ್ಯಾತಿಯಂ-ತನ್ನ ಕೀರ್ತಿಯನ್ನು, ಇಳೆಯೊಳ್ – ಭೂಮಿಯಲ್ಲಿ, ನಿಱಿಸಲ್ಕೆ – ಸ್ಥಾಪಿಸುವುದಕ್ಕಾಗಿ, ಈ ತೆಱದ – ಈ ರೀತಿಯಾದ, ಇತಿಹಾಸ ಕಥೆಯಂ – ಭಾರತದ ಕಥೆಯನ್ನು (ಇತಿಹಾಸದ ಕಥೆಯನ್ನು) ಒಪ್ಪಿಸೆ-(ರಚಿಸಿ) ಒಪ್ಪಿಸುವಂತೆ, ಕುಱಿತಂ-ನಿಶ್ಚಯಿಸಿದನು.

೫೨. ಶ್ರೌತಮಿದು–ಕೇಳಲ್ಪಡತಕ್ಕ ಎಂದರೆ ಶ್ರವ್ಯವಾದ, ಕಾವ್ಯವಿದು, ತನಗೆ, ಗಂಗಾಸ್ರೋತದವೋಲ್–ಗಂಗಾ ಪ್ರವಾಹದಂತೆ, ಅಳುಂಬಮಾಗೆ–ಅತಿಶಯತೆಯುಳ್ಳದಾಗಲು, ಗೆಡೆಗೊಳ್ಳದೆ–ಜೊತೆಯನ್ನಪೇಕ್ಷಿಸದೆ ಎಂದರೆ ಅಸಹಾಯನಾಗಿ, ತಾನೊಬ್ಬನೇ, ವಿಖ್ಯಾತ ಕವಿ ವೃಷಭವಂಶೋದ್ಭೂತ ನೆನಲ್ – ಪ್ರಸಿದ್ಧರಾದ

ಕವಿಪುಂಗವರ ಪರಂಪರೆಯಲ್ಲಿ ಹುಟ್ಟಿದ್ದು ಎನ್ನುವಂತೆ, ಬರಿಸದೊಳಗೆ-ಒಂದು ವರ್ಷದೊಳಗೆ, ಇದಂ-ಈ ಕಾವ್ಯವನ್ನು, ಸಮೆವಿನೆಗಂ-ಮಾಡುವಲ್ಲಿ.

ವಚನ : ಪಾರಾಶರ ವೀಕ್ಷಣಂ-ವೇದವ್ಯಾಸನ ದರ್ಶನ ; ವೇಣೀಸಂಹಾರಂ-ವೇಣೀ ಸಂಹಾರ ಎಂದರೆ ಮುಡಿಯನ್ನು ಕಟ್ಟುವುದು ;

ಈ ವಚನ ಹಲವು ದೃಷ್ಟಿಗಳಿಂದ ಗಮನಾರ್ಹವಾಗಿದೆ. ವಿಸ್ತಾರವಾದ ವ್ಯಾಸ ಭಾರತವನ್ನು ಸಂಕ್ಷೇಪಗೊಳಿಸಿ ಹೇಳುವಾಗ, ಯಾವುದನ್ನು ವಿಸ್ತರಿಸದೇ ಹೇಳಬೇಕು. ಯಾವುದನ್ನು ಸವಿಸ್ತಾರವಾಗಿ ಪ್ರತಿಪಾದಿಸಬೇಕು ಎಂದು ಪಂಪನು ತನ್ನಲ್ಲಿಯೇ ಯೋಚನೆಮಾಡಿರುವುದನ್ನು ಇದು ತೋರಿಸುತ್ತದೆ. ಕತೆಯ ಮೆಯ್ಗಿಡಲೀಯದೆ ಸಮಸ್ತ ಭಾರತವನ್ನು ಹೇಳಬೇಕೆಂಬ ಅವನ ಸಂಕಲ್ಪದ ಫಲ ಈ ವಚನ. ಮಹಾಭಾರತದ ಮುಖ್ಯ ಕಥೆಯ ದೃಷ್ಟಿಯಿಂದ ಆದರೆ ವಿನ್ಯಾಸವು ಕೆಡದಂತೆ ಆರಿಸಿಕೊಳ್ಳಬೇಕಾದ ಕಥಾಂಶಗಳನ್ನು ಇಲ್ಲಿ ಹೇಳಿದೆ. ಪ್ರಸಿದ್ಧ ಪಾತ್ರಗಳ ಗುಣಸ್ವಭಾವ ನಿರೂಪಣೆಗೆ ಅವಕಾಶವಿರಬೇಕೆಂಬುದನ್ನು ಅವನು ಮರೆತಿಲ್ಲ. ಕಥೆಯಲ್ಲಿ ರಸಸ್ಥಾನಗಳಾವು ವೆಂಬುದನ್ನು ಅವನು ಬಲ್ಲವನಾಗಿದ್ದಾನೆ. ''ಪೆಜವುಂ ಉಪಾಖ್ಯಾನ ಕಥೆಗಳೊಳೊಂದುಮಂ ಕುಂದಲೀಯದೆ ಪೇೞ್ದಿಂ'' ಎಂಬ ಅವನ ಮಾತಿನ ಸತ್ಯತೆಯನ್ನು ಈ ಗದ್ಯದಿಂದ ತಿಳಿಯಬಹುದು. ಈ ಸಮಗ್ರ ಕಥಾಂಶಗಳನ್ನು ಕಥಾನಾಯಕನಾದ ಅರ್ಜುನನ ಸುತ್ತ ಅವನ ಪರಿವೇಷದಂತೆ ರಚಿಸಿದ್ದಾನೆ. ಅವನ ಕೌಶಲ್ಯ, ವಿಮರ್ಶ ಶಕ್ತಿ, ರಸಿಕತೆಗಳು ಇಲ್ಲಿ ಗೋಚರವಾಗುತ್ತವೆ.

೫೩. ಆವ ನರೇಂದ್ರರುಂ – ಯಾವ ರಾಜರೂ, ಆರ್ತು–ಸಮರ್ಥರಾಗಿ, ಕೂರ್ತು – ಪ್ರೀತಿಸಿ, ಒಲಿದು, ಎಸೆವ – ಪ್ರಕಾಶಿಸುವ, ಸಮಸ್ತ ಭಾರತಮಂ – ಸಮಗ್ರವಾದ ಭಾರತವನ್ನು, ಪೇೞಿಸರೆ–ಹೇಳಿಸರೆ ; ಕವೀಂದ್ರರುಂ–ಕವಿಶ್ರೇಷ್ಠರೂ, ನೆಱೆಯೆ – ಪೂರ್ಣವಾಗಿ, ಪೇೞರೆ – ಹೇಳರೆ ; ಪೇೞಿಪೊಡೆ – ಹೇಳಿಸುವ ಪಕ್ಷದಲ್ಲಿ; ನೀನೆ–ನೀನೇ, ಎಸ್ಪೆ–ಚೆನ್ನಾಗಿ, ಪೇೞಿಸುವೆ–ಹೇಳಿಸುತ್ತೀಯೆ, ಉದಾತ್ತಕೀರ್ತಿ–ಉನ್ನತವಾದ ಕೀರ್ತಿಯು: ನಿಲೆ–ನಿಲ್ಲುವಂತೆ, ಪೇೞ್ವೊಡೆ–ಹೇಳುವ ಪಕ್ಷದಲ್ಲಿ, ಪಂಪನೆ–ಪಂಪನೇ, ಪೇೞ್ಗುಂ–ಹೇಳುತ್ತಾನೆ, ಇಂತು ಪೇೞಿಸಿದ–ಹೀಗೆ ಕಾವ್ಯವನ್ನು ಹೇಳಿಸಿದ, ನರೇಂದ್ರರುಂ-ರಾಜರೂ, ನೆಱೆಯೆ – ಪೂರ್ಣವಾಗಿ, ಪೇೞ್ದ – ಹೇಳಿದ ಕವೀಂದ್ರರುಂ–ಕವಿ ಶ್ರೇಷ್ಠರೂ, ಧರಿತ್ರಿಯೊಳ್–ಲೋಕದಲ್ಲಿ, ಆರ್–ಯಾರು?

೫೪. ಸಕಳಾವನೀತಳ ಜನಂ ಎನೆ–ಎಂದು ಸಕಲ ಭೂಮಂಡಲದ ಜನ ಹೇಳಲು : ಗುಣಾರ್ಣವಂ – ಅರಿಕೇಸರಿಯು, ಪಿರಿದುಂದಯೆಗೆಯ್ದು – ಹಿರಿದಾದ ದಯೆಯನ್ನು ತೋರಿಸಿ, ಪಿರಿದಪ್ಪ–ದೊಡ್ಡದಾದ, ಗೌರವದ, ಮೆಯ್ಮೆಯುಂ–ಮಹಿಮೆಯು, ಮನ್ನಣೆಯು–ಸತ್ಕಾರದ, ಓಲಿಗಳ್–ಪರಂಪರೆಗಳನ್ನು, ಮೆಲ್ಲನೆ–ಸದ್ದಿಲ್ಲದೆ, ಮೃದುವಾಗಿ, ಸಾರ್ಚಿ–ಸೇರಿಸಿ ಎಂದರೆ ಕೊಟ್ಟು, ಕರಂ–ವಿಶೇಷವಾಗಿ, ಮನಮಂ

ಮನಸ್ಸನ್ನು, ಅಲರ್ಚೆ–ಅರಳಿಸಲು, ಕೀರ್ತಿ–ಯಶಸ್ಸು, ಜಗದೊಳ್–ಲೋಕದಲ್ಲಿ, ನಿಲೆ–ನಿಲ್ಲುವಂತೆ, ಜಗಕ್ಕೆ – ಲೋಕಕ್ಕಾಗಿ, ನೆಚ್ಚಿನ – ವಿಶ್ವಾಸದ, ಕವಿತಾಗುಣಾರ್ಣವನಿಂ–ಪಂಪನಿಂದ, ಈ ಕೃತಿ ಬಂಧನಮುಂ–ಈ ಕಾವ್ಯ ಪ್ರಬಂಧವನ್ನು, ಪೇಳಿಸಿದಂ–ಹೇಳಿಸಿದನು, ಇಲ್ಲಿ ಓಳಿಗಳ್ ಎಂಬುದು ಪ್ರಥಮಾಂತ: ಅದು ದ್ವಿತೀಯಾರ್ಥದಲ್ಲಿ ಪ್ರಯುಕ್ತವಾಗಿದೆ.

೫೫. ನಿಚ್ಚಲುಂ–ಪ್ರತಿದಿನವೂ, ತುಡುಗೆ–ಆಭರಣಗಳೂ, ಪಂಚರತ್ನಂಗಳುಂ–ಐದು ಬಗೆಯಾದ ರತ್ನಗಳೂ, ಪೊಱಮಡೆ–ಹೊರಕ್ಕೆ ಹೋಗಲು, ತನ್ನುಡುವ–ತಾನು ಉಟ್ಟುಕೊಳ್ಳುವ, ಉಪ್ಪಟಂಗಳ್–ಶ್ರೇಷ್ಠವಾದ ವಸ್ತ್ರಗಳೂ, ಮಡಿಯೊಳಾಗೆಯುಂ–ಮಡಿ ಮಾಡುವುದರಲ್ಲಾಗಲು, ಕಂಡಾಗಳ್–ನೋಡಿದಾಗ, ದರ್ಶನ ಮಾಡಿದಾಗ, ಅಕ್ಕರಿಂ – ಪ್ರೀತಿಯಿಂದ, ಪಿರಿಯ ಬಿತ್ತರಿಗೆಯುಂ – ಶ್ರೇಷ್ಠವಾದ ಸೀರೆವನ್ನು, ಕೆಲದೊಳಿಕ್ಕೆ–ಮಗ್ಗುಲಲ್ಲಿ ಹಾಕಿ, ಕೊಡುವ–ಬಹುಮಾನವಾಗಿ ಕೊಡುವ, ಬಾಡಕ್ಕಂ–ಗ್ರಾಮಗಳಿಗೂ, ಜೀವಧನಂಗಳ್ಗಂ–ಹಸುವೇ ಮುಂತಾದ ಪ್ರಾಣಿಗಳಿಗೂ, ಬಿಡುವೆಣ್ಗಂ–ದಾಸಿಯರಿಗೂ, ಲೆಕ್ಕಮಿಲ್ಲೆನಿಸಿ–ಲೆಕ್ಕವಿಲ್ಲವೆನ್ನಿಸಿ, ರಾಗಂಗಿಡದೆ–ಪ್ರೀತಿಯು ಕುಗ್ಗದೆ, ಗುಣಾರ್ಣವಂ–ಅರಿಕೇಸರಿಯು, ಕವಿತಾಗುಣಾರ್ಣವನಂ–ಪಂಪನನ್ನು, ಬಲ್ಲಹನಱಿಯೆ – ರಾಷ್ಟ್ರಕೂಟ ಚಕ್ರವರ್ತಿಯಾದ ವಲ್ಲಭರಾಜನು, ಮೂಱನೆಯ ಕೃಷ್ಣನು (೯೩೯–೯೬೮) ತಿಳಿಯುವಂತೆ, ಕೊಂಡಾಡಿದಂ–ಸತ್ಕರಿಸಿದನು, (ಸಂ) ವಿಸ್ತರಿಕಾ > ಬಿತ್ತರಿಗೆ ; ಪಂಪನ ಸನ್ಮಾನ ಸಮಾರಂಭಕ್ಕೆ ಅರಿಕೇಸರಿ ತನ್ನ ಚಕ್ರವರ್ತಿಯಾಗಿದ್ದ ಮೂಱನೆಯ ಕೃಷ್ಣನಿಗೆ ಆಹ್ವಾನ ಪತ್ರಿಕೆಯನ್ನು ಕಳುಹಿಸಿದ್ದಂತೆ ತೋರುತ್ತದೆ.

೫೬. ಬೀರದ – ಶೌರ್ಯದ, ಆಳಪಿಯ – ಶಕ್ತಿಯ, ನನ್ನಿಯ – ಸತ್ಯದ, ಚಾಗದ – ದಾನದ, ಶಾಸನಂ – ಶಾಸನವು, ಆಚಂದ್ರಾರ್ಕತಾರಂಬರಂ – ಚಂದ್ರ ಸೂರ್ಯ ನಕ್ಷತ್ರಗಳಿರುವವರೆಗೆ, ಮೇರು ನಿಲ್ವಿನಂ–ಮೇರು ಪರ್ವತ ನಿಲ್ಲುವಂತೆ, ಕಾವ್ಯಕ್ಕೆ – ಕಾವ್ಯಕ್ಕೆ ಪಾರಿತೋಷಿಕವಾಗಿ, ತಾನಿತ್ತ – ತಾನು ಕೊಟ್ಟ, ಶಾಸನದ ಗ್ರಹಾರಂ – ಶಾಸನ ಪೂರ್ವಕವಾದ ಅಗ್ರಹಾರವು, ನಿಲವೇಳ್ಕುಂ – ನಿಲ್ಲಬೇಕು, ಶಾಶ್ವತವಾಗಿರಬೇಕು ; ಸಾರಮೆಂಬಿನಂ–ಸಾರವತ್ತಾದುದು ಎನ್ನುತ್ತಿರಲು, ಪೆಸರಿಟ್ಟು–ಹೆಸರು ಹೇಳಿ, ತಾನೀಯೆ–ತಾನು ಕೊಡಲು, ಆ ಬಚ್ಚೆಸಾಸಿರದೊಳಂ–ಆ ಬಚ್ಚೆ ಸಾವಿರ ಎಂಬ ನಾಡಿನಲ್ಲಿಯೂ, ಬಿಟ್ಟ–ದಾನವಾಗಿ ಕೊಟ್ಟ, ಆ ಧರ್ಮಪುರಂ–ಆ ಧರ್ಮಪುರವು, ಹರಿಗನ–ಅರಿಕೇಸರಿಯ, ಧರ್ಮಭಂಡಾರದಂತೆ–ಧರ್ಮದ ಖಜಾನೆಯಂತೆ, ಸಾರಮಾದುದು–ಸಾರವುಳ್ಳದ್ದಾಯಿತು. ಬಚ್ಚೆ ಸಾಸಿರ : ಇದೊಂದು ನಾಡ ಹೆಸರು. ಜಿನವಲ್ಲಭನ ಗಂಗಾಧರನ ಶಾಸನದಲ್ಲಿ "ಸಬ್ಬಿನಾಡ ನಟ್ಟನಡುವಣ ಧರ್ಮಪುರದುತ್ತರ ದಿಗ್ಭಾಗದ ವೃಷಭಗಿರಿ" ಎಂಬಲ್ಲಿ ನಾಡಿನ ಹೆಸರು ಸಬ್ಬಿ ಎಂದು ಕಾಣುತ್ತದೆ; ಇದು ಸಬ್ಬಿಸಹಸ್ರ ನಾಡಾಗಿರಬೇಕು. ಬಚ್ಚೆಸಾಸಿರ ಸರಿಯಾದ

ಹೆಸರಲ್ಲವೆಂದೂ "ಸಬ್ಬಿ ಸಾಸಿರ" ಎಂಬುದು ಸರಿಯಾದುದೆಂದೂ ಹೇಳಬಹುದಾಗಿದೆ.

೫೭. ದೆಸೆ– ದಿಕ್ಕುಗಳು, ಮಖಧೂಮದಿಂ – ಯಾಗದ ಹೊಗೆಗಳಿಂದಲೂ, ದ್ವಿಜರ ಹೋಮದಿಂ– ಬ್ರಾಹ್ಮಣರ ಹೋಮಗಳಿಂದಲೂ, ಒಳ್ಗೆಱೆ – ಒಳ್ಳೆಯ ಕೆರೆಯು, ಹಂಸಕೋಕ ಸಾರಸಕಳನಾದದಿಂದೆ – ಹಂಸಚಕ್ರವಾಕ ಸಾರಸ ಪಕ್ಷಿಗಳ ಮಧುರವಾದ ಧ್ವನಿಗಳಿಂದ, ಒಳಗೆ–ಒಳಗಡೆ (ಊರಿನೊಳಗೆ), ವೇದಸಿನಾದದಿಂ– ವೇದಘೋಷದಿಂದ, ಎತ್ತಂ – ಎಲ್ಲೆಲ್ಲೂ. ಎಯ್ದೆ – ಚೆನ್ನಾಗಿ; ಶೋಭಿಸೆ – ಸುಂದರವಾಗಿರಲು, ಸುರಮಥ್ಯ ಮಾನ ವನಧಿಕ್ಷುಭಿತಾರ್ಣದ – ದೇವತೆಗಳಿಂದ ಕಡೆಯಲ್ಪಟ್ಟ ಸಮುದ್ರದ ಕದಡಲ್ಪಟ್ಟ ನೀರಿನ, ಘೋಷದಂತೆ-ಅಬ್ಬರದ ಹಾಗೆ, ಗುಣಾರ್ಣವನ– ಈ ಅರಿಕೇಸರಿಯ, ಧರ್ಮದ–ಧರ್ಮವಾಗಿ ಕೊಟ್ಟ, ಮನೋಹರಂ–ರಮಣೀಯವಾದ, ಧರ್ಮಪುರಂ – ಧರ್ಮಪುರವು, ಘೂರ್ಣಿಸುತಿರಲಿ – ಶಬ್ದಾಯಮಾನವಾಗಿರಲಿ, ಘೋಷಿಸುತ್ತಿರಲಿ.

೫೮. ರಾಜಪ್ರಾಜಕ ಮೆನಿಸಿದ : ರಾಜತ್–ಪ್ರಕಾಶಮಾನವಾದ. ರಾಜಕಂ– ರಾಜನುಳ್ಳದ್ದು ಎಂದೆನಿಸಿದ, ಪುಲಿಗೆಱೆಯ–ಪುಲಿಗೆರೆಯ, ಸಾಜದ–ಸಹಜವಾದ. ತಿರುಳ ಕನ್ನಡದೊಳ್–ತಿರುಳಾದ ಕನ್ನಡದಲ್ಲಿ, ನಿರ್ವ್ಯಾಜದ–ವ್ಯಾಜವಿಲ್ಲದ ಎಂದರೆ ಪ್ರಾಮಾಣಿಕತೆಯಿಂದ ಕೂಡಿದ, ಸಾಚಾ ಆದ, ಎಸಕದೊಳೆ–(ಕಾವ್ಯ) ಕರ್ಮದಲ್ಲೇ, ಪುದಿದ–ಸೇರಿದ, ಒಂದು, ಓಜೆಯ–ಕ್ರಮದ, ಬಲದ–ಶಕ್ತಿಯುಳ್ಳ, ಕವಿತೆ– ಕವಿತೆಯು, ಪಂಪನ ಕವಿತೇ–ಪಂಪನ ಕಾವ್ಯವಾಗಿದೆ.

೫೯. ಈ ಪದ್ಯದ ಪೂರ್ವಾರ್ಧದ ಅರ್ಥವಿಶದವಾಗಿಲ್ಲ : ಪುದಿದ ಜಸಂ–ಸೇರಿಕೊಂಡು ಇರುವ ಕೀರ್ತಿ, ಪೊದಳ್ದ–ವ್ಯಾಪಿಸಿರುವ, ಚಳಂ–ಕಾಂತಿಯು (?) ; ಒಂದಿದ ಕೂಡಿದ, ಅಲಂಕೃತಿ–ಅಲಂಕಾರಗಳು, ಕೃತ = ಕೆಂಪು–ಮಾಟ, ರಚನೆ, ದೇಸಿ–ದೇಸಿಶೈಲಿ, ಜೆಲ್ಪು ; ಎಂಬುದನ್–ಎಂಬುದನ್ನು, ಎಸೆ–ಹೇಳಲು, ವಸ್ತು ವಿದ್ಯೆಯೆನೆ – ಶಿಲ್ಪವಿದ್ಯೆಯೆನಲು (?), ಕಬ್ಬಮೆ – ಕಾವ್ಯವೇ ; ಮುನ್ನಂ–ಮೊದಲು, ಹಿಂದೆ ; ಅವು ಅಂತು ಇವು ಅಲ್ಲದ–ಎಂದರೆ ಆ ಕಾವ್ಯ ಈ ಕಾವ್ಯ ಎಂದಲ್ಲದೆ, ಕಬ್ಬಂ–ಕಾವ್ಯಗಳು, ಅಲ್ಲದೆ, ಪೆಱವಿಲ್ಲ–ಬೇರೆ ಇಲ್ಲ. ಇತರ ಕಾವ್ಯಗಳಲ್ಲಿ : ಎನೆ– ಎನ್ನಲು, ಸಮಸ್ತ ಭಾರತಮುಂ – ಸಮಗ್ರ ಭಾರತವೂ, ಆದಿಪುರಾಣ ಮಹಾ ಪ್ರಬಂಧಮುಂ–ಆದಿಪುರಾಣವೆಂಬ ಮಹಾ ಕಾವ್ಯವೂ ! ಮುನ್ನಿನ ಕಬ್ಬಮನೆಲ್ಲಂ– ಪೂರ್ವಕಾವ್ಯಗಳನ್ನೆಲ್ಲಾ, ಇಕ್ಕಿ ಮೆಟ್ಟಿದುವು–ಬೀಳಿಸಿ ತುಳಿದವು. ಈ ಪದ್ಯಕ್ಕೆ ಮುಳಿಯ ತಿಮ್ಮಪ್ಪಯ್ಯನವರು ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ (ನಾಡೋಜ ಪಂಪ : ೧೪೮–೧೫೧)

೬೦. ಇಲ್ಲಿ–ಈ ಕಾವ್ಯದಲ್ಲಿ (ವಿಕ್ರಮಾರ್ಜುನ ವಿಜಯದಲ್ಲಿ), ಲೌಕಿಕಮಂ–ಲೋಕ ವ್ಯವಹಾರವನ್ನು, ಸಮಸ್ತ ಭೂತಳಂ–ಸಕಲ ಲೋಕಕ್ಕೆ, ಬೆಳಗುವೆಂ–ಪ್ರಕಾಶಪಡಿಸುತ್ತೇನೆ; ಅಲ್ಲಿ–ಆ ಕಾವ್ಯದಲ್ಲಿ (ಆದಿಪುರಾಣದಲ್ಲಿ), ಜಿನಾಗಮುಮಂ–ಜೈನಶಾಸ್ತ್ರಗಳನ್ನು, ಬೆಳಗುವೆಂ; ಸಮಸ್ತ ಭಾರತಮುಂ, ಆದಿಪುರಾಣಮುಮೆಂದು –ಸಮಸ್ತ ಭಾರತವೂ ಆದಿಪುರಾಣವೂ ಎಂಬುದಾಗಿ, ಮೆಯ್–ದೇಹವು, ಅಥವಾ ಕಥಾವಸ್ತುಗಳು, ಅಸುಂಗೊಳುತಿರೆ – ಸಚೇತನವಾಗುತ್ತಿರಲು, ಪೂಣ್ದು–ಪ್ರತಿಜ್ಞೆ ಮಾಡಿ, ಪೂಣ್ದ ತೆಱದೆ–ಪ್ರತಿಜ್ಞೆ ಮಾಡಿದ ರೀತಿಯಿಂದ, ಒಂದು ಕಾವ್ಯ, ಆಱುದಿಂಗಳೊಳ್–ಆರು ತಿಂಗಳುಗಳಲ್ಲಿಯೂ, ಒಂದು–ಒಂದು ಕಾವ್ಯ, ಮೂಱು ತಿಂಗಳೊಳೆ – ಮೂರು ತಿಂಗಳುಗಳಲ್ಲಿಯೇ, ಸಮಾಪ್ತಿಯಾದುದು – ಮುಕ್ತಾಯವಾಯಿತು, ಎನೆ–ಎನ್ನಲು, ಕವಿತಾಗುಣಾರ್ಣವಂ–ಪಂಪನು, ಬಣ್ಣಿಸಿದಂ–ವರ್ಣಿಸಿದನು. ಈ ಪದ್ಯವನ್ನು ಯಥಾಕ್ರಮದ ದೃಷ್ಟಿಯಿಂದ ನೋಡಿದರೆ ಸಮಸ್ತ ಭಾರತವನ್ನು ಆರು ತಿಂಗಳುಗಳಲ್ಲೂ, ಆದಿಪುರಾಣವನ್ನು ಮೂರು ತಿಂಗಳಲ್ಲೂ ಪಂಪನು ರಚಿಸಿ ಮುಗಿಸಿರಬೇಕೆಂದು ತೋರುತ್ತದೆ.

೬೧. ಕ್ಷಿತಿಗೆ–ಲೋಕಕ್ಕೆ, ಸಮಸ್ತ ಭಾರತಮುಂ–ಸಮಗ್ರ ಭಾರತವೂ, ಆದಿಪುರಾಣಮುಂ–ಆದಿಪುರಾಣವೂ, ಈಗಳ್–ಈಗ, ಒಂದು ಅಳಂಕೃತಿಯವೊಲ್–ಒಂದು ಅಲಂಕಾರದಂತೆ, ಇರ್ದುವು–ಇವೆ; ಏಕೆ–ಏಕೆಂದು, ಅಱಿಯ–ತಿಳಿದುಕೋ, ಕವಿತಾಗುಣಕ್ಕೆ – ಕಾವ್ಯದ ಗುಣಕ್ಕೆ, ಮೇಲ್ಮೆಗೆ, ಪೋದವರೊಳ್ ಆದವರೊಳ್–ಹಿಂದೆ ಹುಟ್ಟಿದವರಲ್ಲಿ ಇಂದು ಆಗಿರುವ ಕವಿಗಳಲ್ಲಿ, ಸರಸ್ವತೀಮತಿ–ಸರಸ್ವತಿಯ ಮತಿಯುಳ್ಳವನು, ಬುದ್ಧಿಯುಳ್ಳವನು, ಪಂಪನು; ಸರಸ್ವತಿಗೆ – ಸರಸ್ವತಿಗೂ, ಪೊಸತು–ಹೊಸದಾದ, ವಾಗ್ವಿಳಾಸಮಂ–ವಾಕ್ಕಿನ ಸೌಂದರ್ಯವನ್ನು, ಮಾಡುವ – ಉಂಟುಮಾಡುವ, ಪಂಪನ ವಾಗ್ವಿಳಾಸಮಂ – ಪಂಪನ ಮಾತಿನ ಚೆಲುವನ್ನು, ಎಯ್ದೆವರಲ್ಕೆ – ಮುಟ್ಟುವಂತೆ ಬರುವುದಕ್ಕೆ, ಸಮೀಪಿಸುವುದಕ್ಕೆ, ಕವೀಂದ್ರರ್ ಆರ್–ಕವಿಶ್ರೇಷ್ಠರು ಯಾರಿದ್ದಾರೆ? ಅರ್ಥ ಅಸ್ಪಷ್ಟ.

೬೨. ವ್ಯಾಸಮುನಿ ಪ್ರಣೂತಕೃತಿಯಂ – ವ್ಯಾಸಮುನಿಗಳ ಪ್ರಸಿದ್ಧವಾದ (ಹೊಗಳಲ್ಪಟ್ಟ) ಕಾವ್ಯವನ್ನು (ಮಹಾಭಾರತವನ್ನು), ಸಲೆ–ಚೆನ್ನಾಗಿ, ಪೇೞ್ದು–ಹೇಳಿ, ಪೊದಳ್ದ–ವ್ಯಾಪಿಸಿದ, ಸತ್ಕವಿ – ಸತ್ಕವಿಗಳ. ವ್ಯಾಸ – ವಿವರಣೆಯಿಂದಲೂ, ಸಮಾಗಮ – ಸಹವಾಸದಿಂದಲೂ, ಅನ್ವಿತಮಂ–ಕೂಡಿದ, ಆದಿಪುರಾಣಮುಂ–ಆದಿ ಪುರಾಣವನ್ನು, ಎಯ್ದೆ–ಚೆನ್ನಾಗಿ, ಪೇೞ್ದು–ಹೇಳಿ, ವಾಕ್ಶ್ರೀಸುಭಗಂ–ವಾಕ್ಸಂಪತ್ತಿನ ಸೌಂದರ್ಯವುಳ್ಳವನೂ, ಪುರಾಣ ಕವಿಯುಂ – ಪುರಾಣವನ್ನು ಹೇಳಿದ ಕವಿಯೂ, ಧರೆಗೆ–ಲೋಕಕ್ಕೆ, ಉಣ್ಮೆ–ತಲೆದೋರಿ, ಪೊಣ್ಮುವ–ಹೊಮ್ಮುವ, ಈ

ದೇಸಿಗಳ್ – ಈ ಚೆಲ್ವುಗಳು, ಆಗಿರೆ – ಉಂಟಾಗಿರಲು, ಕಪಿತಾಗುಣಾರ್ಣವಂ – ಪಂಪನು, ಉಂತೆ – ಸುಮ್ಮನೇ, ನಾಡೊವಜಂ–ನಾಡಿನ ಉಪಾಧ್ಯಾಯನು, ಆದನೆ– ಆದನೇ? ಇಲ್ಲಿ 'ಧರೆಗಾಗಿರೆ' ಎಂಬುದಕ್ಕೆ ಬದಲಾಗಿ 'ತನಗಾಗಿರೆ' ಎಂದು ಮುಳಿಯ ತಿಮ್ಮಪ್ಪಯ್ಯನವರು ಪಾಠವನ್ನಿಟ್ಟುಕೊಂಡಿದ್ದಾರೆ (ನಾ. ಪಂ. ೧೪೪); ಇದಕ್ಕೆ ಆಧಾರ?

೬೩. ಎಲ್ಲಂ ಓದಿದರ್ಗೆ–ಕಾವ್ಯವನ್ನೆಲ್ಲ ಓದಿದವರಿಗೆ, ರಾಗಂ–ಸಂತೋಷವು, ಪುದಿದಿರೆ–ತುಂಬಿರಲು, ಇದಱ–ಈ ಕಾವ್ಯದ, ಅನುಯಾಯಿಗಳ್ಗೆ–ಅನುಸರಿಸುವವರಿಗೆ, ಎಂದರೆ ಈ ಕಾವ್ಯದಲ್ಲಿ ಹೇಳಿರುವುದನ್ನು ಅನುಷ್ಠಾನ ಮಾಡುವವರಿಗೆ, ಪೊಸವೇಟದ– ಹೊಸ ಪ್ರಣಯದ, ಅಲಂಪುಗಳ್–ಸಂತೋಷಗಳು, ಉರ್ಕೆ–ಉಕ್ಕಲು, ಔದಾರ್ಯವು, ಸಕಳಾವನೀಶ್ವರರ್ಗೆ–ಎಲ್ಲಾ ರಾಜರಿಗೂ, ಎಸೆವ – ಪ್ರಕಾಶಿಸುವ, ಉದಾರಗುಣಂ, ಭೃತ್ಯನಿವಹಕ್ಕೆ–ಸೇವಕರ ಗುಂಪಿಗೆ; ಅದಟಿನ–ಪ್ರತಾಪದ, ಅಳುರ್ಕೆ–ಆಧಿಕ್ಯವು; ಗಣಿಕಾಜನಕ್ಕೆ–ವೇಶ್ಯೆಯರಿಗೆ, ಚದುರ್–ಕೌಶಲವು, ಮದೀಯ ಕೃತಿ ಪ್ರಬಂಧದಿಂ– ನನ್ನ ಕಾವ್ಯ ರಚನೆಯಿಂದ, ಮಹೀತಳಕ್ಕೆ–ಲೋಕದಲ್ಲಿ, ಕುಂದದೆ–ಕಡಿಮೆಯಾಗದೆ, ನೆಲಸಿರ್ಕೆ–ಶಾಶ್ವತವಾಗಿ ಇರಲಿ.

೬೪. ಚಲದೊಳ್–ಹಠದಲ್ಲಿ, ದುರ್ಯೋಧನಂ-ದುರ್ಯೋಧನನು; ನನ್ನಿಯೊಳ್- ಸತ್ಯದಲ್ಲಿ, ಇನತನಯಂ – ಕರ್ಣನು; ಗಂಡಿನೊಳ್–ಪೌರುಷದಲ್ಲಿ, ಭೀಮಸೇನಂ– ಭೀಮನು, ಬಲದೊಳ್–ಶಕ್ತಿಯಲ್ಲಿ, ಮದ್ರೇಶಂ–ಶಲ್ಯರಾಜನು; ಅತ್ಯುನ್ನತಿಯೊಳ್– ಅತ್ಯುನ್ನತತನದಲ್ಲಿ, ಸಿಂಧೂದ್ಭವಂ-ಭೀಷ್ಮನು, ಚಾಪವಿದ್ಯಾಬಲದೊಳ್-ಧನುರ್ವಿದ್ಯೆಯ ಶಕ್ತಿಯಲ್ಲಿ, ಕುಂಭೋದ್ಭವಂ-ದ್ರೋಣನು; ಸಾಹಸದ ಮಹಿಮೆಯೊಳ್–ಪರಾಕ್ರಮದ ಹಿರಿಮೆಯಲ್ಲಿ, ಫಲ್ಗುಣಂ-ಅರ್ಜುನನು; ಧರ್ಮದೊಳ್-ಧರ್ಮದಲ್ಲಿ, ನಿರ್ಮಳಚಿತ್ತಂ- ಶುಭ್ರಮನಸ್ಕನಾದ, ಧರ್ಮಪುತ್ರಂ–ಧರ್ಮರಾಜನು, ಮಿಗಿಲ್–ಅಧಿಕರಾದವರು; ಇವರ್ಗಳಿಂ–ಇವರುಗಳಿಂದ, ಈ ಭಾರತಂ–ಈ ಮಹಾಭಾರತವು, ಲೋಕಪೂಜ್ಯಂ– ಲೋಕದಿಂದ ಪೂಜ್ಯವಾದುದು.

೬೫. ಸಮಸ್ತ ಭಾರತ ಕಥಾಸಂಬಂಧಮಂ – ಸಮಗ್ರ ಭಾರತದ ಕಥಾ ಪ್ರಬಂಧವನ್ನು, ಕರಂ-ವಿಶೇಷವಾಗಿ, ಅಱ್ಕಿತುರ್-ಪ್ರೀತಿಸಿ, ಬಾಜಿಸಲ್-ವಾಚಿಸುವುದಕ್ಕೆ ಎಂದರೆ ಪಠಿಸುವುದಕ್ಕೆ, ಬರೆಯಲ್–ಬರೆಯುವುದಕ್ಕೆ, ಕೇಳಲ್–ಕೇಳುವುದಕ್ಕೆ, ಒಡರ್ಚುವಂಗೆ – ತೊಡಗಿದವನಿಗೆ, ತನ್ನಿಷ್ಟಂ – ತನ್ನ ಇಷ್ಟಾರ್ಥವು, ಅಪ್ಪನ್ನಂ – ಆಗುತ್ತಿರಲು, ಧೃತಿ – ಧೈರ್ಯವು, ತುಷ್ಟಿ – ತೃಪ್ತಿ, ಪುಷ್ಟಿ – ಬಲ, ವಿಭವಂ – ವೈಭವ, ಸೌಭಾಗ್ಯಂ – ಐಶ್ವರ್ಯ, ಇಷ್ಟಾಂಗನಾಸುರತಂ – ಮೆಚ್ಚಿಗೆಯ ಸ್ತ್ರೀಯ

ಸಂಭೋಗ, ಶಾಂತಿ–ಶಾಂತಿಯು, ಅಗುಂತಿ–ಏಳಿಗೆ, ವೃದ್ಧಿ, ವಿಭವಂ–ವಿಭುತ್ವ, ಭದ್ರಂ, ಶುಭಂ–ಶುಭವು, ಮಂಗಳಂ, ಉತ್ತರಂ–ಅತಿಶಯವಾಗಿ, ಆಕ್ಕುಂ–ಆಗುತ್ತವೆ.

ಚತುರ್ದಶಾಶ್ವಾಸಂ ಸಂಪೂರ್ಣಂ

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ ವರಪ್ರಸಾದೋತ್ಪನ್ನ<br>ಪ್ರಸನ್ನ ಗಂಭೀರ ವಚನರಚನ ಚತುರ ಕವಿತಾ ಗುಣಾರ್ಣವ<br>ವಿರಚಿತಮಪ್ಪ ವಿಕ್ರಮಾರ್ಜುನ ವಿಜಯದೊಳ್<br>ಚತುರ್ದಶಾಶ್ವಾಸಂ

ಶ್ರೀಮತ್ಕರಿಗಿರಿವಾಸ ಪ್ರಹ್ಲಾದ ಪರಿಪಾಲಕ ಶ್ರೀಲಕ್ಷ್ಮೀನೃಸಿಂಹ ಸ್ವಾಮಿಚರಣದಾಸನಪ್ಪ<br>ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ಯನಿಂ ರಚಿತವಾದ<br>ಪಂಪಭಾರತ ದೀಪಿಕೆಯೆಂಬ ಟೀಕೆಯೊಳ್ ಚತುರ್ದಶಾಶ್ವಾಸಂ ಸಂಪೂರ್ಣಂ

ಶಾಲಿವಾಹನಶಕ ೧೮೩೦ನೆಯ ಕೀಲಕಸಂವತ್ಸರ ಆಷಾಢಕೃಷ್ಣ ಭಾನುವಾರದಂದು (೧೪–೭–೧೯೦೮) ಆರಂಭವಾಗಿ ಅದೇ ಸಂವತ್ಸರದ ಮಾಘಶುಕ್ಲ ಶುಕ್ರವಾರದಂದು (೩೧–೧–೧೯೦೯) ಈ ವ್ಯಾಖ್ಯಾನಂ ಸಂಪೂರ್ಣವಾಯ್ತು.

———

# ವಿಶಿಷ್ಟ ಪದಸೂಚಿ

ಆ

## ಊ



## ಋ

ದ

೨೭೫–೨೦ವ, ೩೯೫-೪೨ವ.

## ಭ

## ಮ

## ಯ



## ರ



## ಲ

# ಗ್ರಂಥಸೂಚಿ

# ವ್ಯಕ್ತಿ ನಾಮ ಪದಸೂಚಿ

# ಸಂಕೇತಗಳ ವಿವರ

| | |
|---|---|
| ಅಜಿತ<br>ಅಜಿಪು | ಅಜಿತಪುರಾಣ (ರನ್ನ) |
| ಅನಂಪು | ಅನಂತನಾಥಪುರಾಣ (ಜನ್ನ) |
| ಅರ್ಧನೇ | ಅರ್ಧನೇಮಿ (ನೇಮಿಚಂದ್ರ) |
| ಆ | ಆದಿಪರ್ವ (ಕುಮಾರವ್ಯಾಸ) |
| ಆದಿಪು | ಆದಿಪುರಾಣ (ಪಂಪ) |
| ಕಕೈ | ಕಬ್ಬಿಗರ ಕೈಪಿಡಿ (ಲಿಂಗಮಂತ್ರಿ) |
| ಕಮಲಾ | ಕಮಲಾಚಲಮಾಹಾತ್ಮ್ಯ (ಚಿಕುಪಾಧ್ಯಾಯ) |
| ಕರಾಮಾ<br>ಕವಿರಾ | ಕವಿರಾಜಮಾರ್ಗ (ನೃಪತುಂಗ) |
| ಕವಿಕಂ | ಕವಿಕಂಠಹಾರ (ಸೂರ್ಯಕವಿ) |
| ಕಶಸಾ | ಕರ್ಣಾಟಕ ಶಬ್ದಸಾರ |
| ಕಾದಂ | ಕಾದಂಬರಿ (ನಾಗವರ್ಮ) |

| | |
|---|---|
| ಕಾವ್ಯಸಾ | ಕಾವ್ಯಸಾರ (ಅಭಿನವವಾದಿ ವಿದ್ಯಾನಂದ) |
| ಕಾವ್ಯಾಲೋ<br>ಕಾವ್ಯಾವ | ಕಾವ್ಯಾವಲೋಕನ (ನಾಗವರ್ಮ) |
| ಕುವ್ಯಾದ್ರೋ | ಕುಮಾರವ್ಯಾಸ ಭಾರತ ದ್ರೋಣಪರ್ವ (ಕುಮಾರವ್ಯಾಸ) |
| ಕುವ್ಯಾಭಾ | ಕುಮಾರವ್ಯಾಸ ಭಾರತ (ಕುಮಾರವ್ಯಾಸ) |
| ಕುಸುಮಾ | ಕುಸುಮಾವಳಿ (ದೇವಕವಿ) |
| ಖಗೇಂದ್ರ | ಖಗೇಂದ್ರಮಣಿದರ್ಪಣ |
| ಗ | ಗದ್ಯ |
| ಗದಾ | ಗದಾಯುದ್ಧ (ರನ್ನ) |
| ಚಂದ್ರಪ್ರ | ಚಂದ್ರಪ್ರಭ ಪುರಾಣ (ಅಗ್ಗಳ) |
| ಚಾವುಂಪು | ಚಾವುಂಡರಾಯ ಪುರಾಣ (ಚಾವುಂಡರಾಯ) |
| ಜಗವಿ | ಜಗನ್ನಾಥವಿಜಯ (ರುದ್ರಭಟ್ಟ) |
| ತ | ತಮಿಳು |
| ತು | ತುಳು |
| ತೆ | ತೆಲುಗು |
| ತ್ರಿಪುವಿ | ತ್ರಿಷಷ್ಟಿ ಪುರಾತನ ವಿಳಾಸ (ಸುರಂಗ) |
| ನಾಪಂ | ನಾಡೋಜ ಪಂಪ (ಮುಳಿಯ ತಿಮ್ಮಪ್ಪಯ್ಯ) |
| ಪಂಪಭಾ | ಪಂಪಭಾರತ (ಪಂಪ) |
| ಪಂಪಭಾನಿ | ಪಂಪಭಾರತ ನಿಘಂಟು (ಬಿ. ವೆಂಕಟನಾರಾಯಣಪ್ಪ) |
| ಪಂಪರಾ | ಪಂಪರಾಮಾಯಣ (ನಾಗಚಂದ್ರ) |
| ಪಂಪರಾ. ಕೋ | ಪಂಪರಾಮಾಯಣಕೋಶ |
| ಪಂಭಾಕೋ | ಪಂಪಭಾರತಕೋಶ (ಬಿ. ವೆಂಕಟನಾರಾಯಣಪ್ಪ) |
| ಪದ್ಯಸಾ | ಪದ್ಯಸಾರ ೧,೨ |
| ಪಾರಶಿ | ಪಾರಶಿಭಾಷೆ |
| ಪಾರ್ಶ್ವಪು | ಪಾರ್ಶ್ವನಾಥಪುರಾಣ (ಪಾರ್ಶ್ವಪಂಡಿತ) |
| ಪ್ರಕ | ಪ್ರಬುದ್ಧಕರ್ಣಾಟಕ (ತ್ರೈಮಾಸಿಕ) |
| ಪ್ರಾ | ಪ್ರಾಕೃತ ಭಾಷೆ |
| ಮ | ಮಲಯಾಳ ಭಾಷೆ |
| ಮರಾ | ಮರಾಠಿ ಭಾಷೆ |
| ಮಹಾಭಾ | ಮಹಾಭಾರತ (ವ್ಯಾಸ) |
| ಯಶೋಚ | ಯಶೋಧರಚರಿತೆ (ಜನ್ನ) |
| ಲೀಲಾ<br>ಲೀಲಾವ | ಲೀಲಾವತಿ (ನೇಮಿಚಂದ್ರ) |
| ಲೋಕೋಪ | ಲೋಕೋಪಕಾರ (ಚಾವುಂಡರಾಯ) |
| ವ | ವಚನ |
| ವಡ್ಡಾ<br>ವಡ್ಡಾರಾ | ವಡ್ಡಾರಾಧನೆ (ಶಿವಕೋಟ್ಯಾಚಾರ್ಯ) |
| ವೇಣೀ | ವೇಣೀಸಂಹಾರನಾಟಕ (ಭಟ್ಟನಾರಾಯಣ) |
| ಶಬ್ದಮಂ | ಶಬ್ದಮಂಜರಿ (ತೋಂಟದಾರ್ಯ) |
| ಶಬ್ದಾನು | ಶಬ್ದಾನುಶಾಸನ (ಭಟ್ಟಾಕಳಂಕ) |

| | |
|---|---|
| ಶಬ್ದಾನು. ಸೂ | ಶಬ್ದಾನುಶಾಸನಸೂತ್ರ (ಭಟ್ಟಾಕಳಂಕ) |
| ಶಮದ. ಸೂ | ಶಬ್ದಮಣಿದರ್ಪಣಸೂತ್ರ (ಕೇಶಿರಾಜ) |
| ಶಮದ | ಶಬ್ದಮಣಿದರ್ಪಣ (ಕೇಶಿರಾಜ) |
| ಶಾಂತಿಪು | ಶಾಂತಿಪುರಾಣ (ಪೊನ್ನ) |
| ಶಾಪಮಂ | ಶಾಸನ ಪದ್ಯಮಂಜರಿ (ರಾ. ನರಸಿಂಹಾಚಾರ್ಯ) |
| ಸಿದ್ಧರಾ | ಸಿದ್ಧರಾಮಚಾರಿತ್ರ (ರಾಘವಾಂಕ) |
| ಸುಕುಮಾ | ಸುಕುಮಾರಚರಿತೆ (ಶಾಂತಿನಾಥ) |
| ಸೂಕ್ತಿಸು | ಸೂಕ್ತಿಸುಧಾರ್ಣವ (ಮಲ್ಲಿಕಾರ್ಜುನ) |
| ಸೂ.ಪು. | ಸೂತ್ರಪುಟ |
| E.I. | Epigraphia Indica (Journal) |
| I A. | Indian Antiquary (Journal) |
| Q.J. M.S. | Quarterly Journal of the Mythic Society |

ಮೈಸೂರು ವಿಶ್ವವಿದ್ಯಾನಿಲಯ

## ಕನ್ನಡ ಅಧ್ಯಯನ ಸಂಸ್ಥೆ

### ಕೆಲವು ಪ್ರಕಟಣೆಗಳು

೧. ಸುವರ್ಣ ಸಂಚಯ
ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವ ಸಮಾರಂಭಗಳ ಅಂಗವಾಗಿ ನಡೆದ ಕನ್ನಡ ಲೇಖಕರ ಸಮ್ಮೇಳನದ ಕಾರ್ಯಕಲಾಪಗಳು

೨. ಬಸವ ಪರುಷ
ಬಸವಣ್ಣನವರ ಎಂಟನೇ ಶತಮಾನೋತ್ಸವ ಸಂದರ್ಭದಲ್ಲಿ ನಡೆದ ವಿಚಾರ ಗೋಷ್ಠಿಗಳ ಕಾರ್ಯಕಲಾಪಗಳು

೩. ಚಿನ್ನದ ಗರಿ
'ಪ್ರಬುದ್ಧ ಕರ್ಣಾಟಕ'ದ ಚಿನ್ನದ ಹಬ್ಬದ ಸಮಾರಂಭದ ಲೇಖಕರ ಸಮ್ಮೇಳನದ ಕಾರ್ಯಕಲಾಪಗಳು

೪. ಬಿಡುಗಡೆ ಬೆಳ್ಳಿ
ರಾಷ್ಟ್ರಸ್ವಾತಂತ್ರ್ಯದ ಬೆಳ್ಳಿಹಬ್ಬದ ನೆನಪಿನಲ್ಲಿ ನಡೆದ ಕನ್ನಡ ಲೇಖಕರ ಸಮ್ಮೇಳನದ ಕಾರ್ಯಕಲಾಪಗಳು

೫. ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ
ಮಹಾತ್ಮಾಗಾಂಧಿಯವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ನಡೆದ ರಾಷ್ಟ್ರೀಯ ವಿಚಾರಗೋಷ್ಠಿಯ ಕಾರ್ಯಕಲಾಪಗಳು (ಇಂಗ್ಲಿಷ್: Gandhiji in Indian Literature)

೬. ಮುಮ್ಮಡಿ ಕೃಷ್ಣರಾಜ ಒಡೆಯರು
ಮುಮ್ಮಡಿಯವರ ನೂರನೆಯ ಪುಣ್ಯದಿನದ ನೆನಪಿನಲ್ಲಿ ನಡೆದ ವಿಚಾರ ಗೋಷ್ಠಿಯ ಪ್ರಬಂಧಗಳು

೭. ಗಳಗನಾಥ
ಗಳಗನಾಥರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ನಡೆದ ವಿಚಾರ ಗೋಷ್ಠಿಯ ಪ್ರಬಂಧಗಳು

೮. ಮುದ್ದಣ
ಮುದ್ದಣ ಕವಿಯ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ನಡೆದ ವಿಚಾರ ಗೋಷ್ಠಿಯ ಪ್ರಬಂಧಗಳು

೯. ಸಿದ್ಧಲಿಂಗ ಶಿವಯೋಗಿ
ತೋಂಟದ ಸಿದ್ಧಲಿಂಗ ಶಿವಯೋಗಿಯವರ ಐದನೆಯ ಶತಮಾನೋತ್ಸವ ಸಂದರ್ಭದಲ್ಲಿ ನಡೆದ ವಿಚಾರಗೋಷ್ಠಿಯ ಪ್ರಬಂಧಗಳು

೧೦. Impact of Marxism on Indian Life and Literature
ಲೆನಿನ್ ಶತಮಾನೋತ್ಸವ ಸಂದರ್ಭದಲ್ಲಿ ನಡೆದ ರಾಷ್ಟ್ರೀಯ ವಿಚಾರ ಗೋಷ್ಠಿಯ ಪ್ರಬಂಧಗಳು (ಇಂಗ್ಲಿಷ್ ಭಾಷೆಯಲ್ಲಿ)